

# ಮಧ್ವ ಭಾರತ

ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀ ವ್ಯಾಸಮಧ್ವಸಂಶೋಧನ ಪ್ರತಿಷ್ಠಾನ ಬೆಂಗಳೂರು

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ (ರಿ.)

'Pajaka', 89/24, III Cross, Mount Joy Road, Hanumanthanagar, Bangalore - 560 019.
Website: www.vyasamadhwa.org Ph:26602802 Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

೧. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ ೨೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

೨. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ ೪೦೦೦೦ ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

೩. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

೪. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ ೨೬ ವಿದ್ವಾಂಸರಿಗೆ ರೂ. ೧೫೦೦/-ಗಳನ್ನು ಸಲ್ಲಿಸುತ್ತಿದೆ.

೫. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

೬. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯ ವಿದ್ವಾಂಸರಿಗೆ ರೂ. ೧೨,೦೦೦/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.

೭. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.೨೫,೦೦೦/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

೮. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

೯. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.೧೫,೦೦೦/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

### ವಿಶೇಷ ಸೂಚನೆ :

೧. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)", ಬೆಂಗಳೂರು - ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.

೨. 80G ಅನ್ವಯ ಆದಾಯ ತೆರಿಗೆ ವಿನಾಯಿತಿಯನ್ನು ಬಯಸುವವರು ನಮ್ಮ ಪ್ರತಿಷ್ಠಾನಕ್ಕೆ "Sri Vyasa Madhwa Research Foundation (R)" ಎಂಬ ಹೆಸರಿಗೆ ದೇಣಿಗೆ ನೀಡಬಹುದು.




# ಮಧ್ವಭಾರತ

## (ಶ್ರೀಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯದಲ್ಲಿನ ಮಹಾಭಾರತಕಥಾಸಂಗ್ರಹ)

ಲೇಖಕರು :

**ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**

ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೪೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯.

**MadhvaBhārata** : by Vidyāvācaspati, Darśanaratnaṁ, Pravacanācārya, Sacchāstravicakṣaṇaratnaṁ, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍitaratnaṁ, Vidyāvāridhi, Sacchāstrapravacanapravīṇa, Gītāratnākara, Tattvavācaspati, Jñānaratnākara (and Recipient of Karnataka State Sanskrit Award-1999 & **Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005) Dr. Vyāsanakere Prabhañjanacārya,** M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyāsanakere,** Publication wing of **Śrī Vyāsamadhva Samśodhana Pratiṣṭhāna** Pājaka, No.89/24, Third Cross, Mount Joy Extension, Hanumanthanagar, Bangalore - 560019; Pages: 424(56 + 368)

Phone : 26602802; 26611011.

Internet : www.vyasamadhwa.org

E-mail : info@vyasamadhwa.org

MADHVA BHĀRATA

**ISBN No. 978-93-81826-25-6**



First Edition : 2014 (January)
Second Edition : 2014 (February)

Price : Rs.150/-

Cover photo Courtesy: http://www.exoticindia.com

Cover design: Smt. Shruti Vyasanakere

Typeset by :
**Śrī Vyāsa Madhva Samśodhana Pratiṣṭhāna**

Printed at :
**Vāgartha,** N.R. Colony, Bangalore, Ph: 22427677

H.H. SRI VISHVESHA TIRTHA SWAMIJI
SRI PEJAVARA ADHOKSHAJA MATHA
JAGADGURU SRI MADHWACHARYA MAHA SAMSTHANA
UDUPI - 576 101, Karnataka
✆ : 0820-2524198, 2526598



श्री श्री विश्वेशतीर्थश्रीपादाः
श्री पेजावराधोक्षज मठः
जगद्गुरु श्रीमध्वाचार्यमहासंस्थानम्
उडुपि - ५७६ १०१, कर्नाटक.

ಜಗದ್ಗುರು ಮಧ್ವಾಚಾರ್ಯರು ರಚಿಸಿದ ಮಹಾಭಾರತ ತಾತ್ಪರ್ಯ ನಿರ್ಣಯವು ಅಪೂರ್ವವಾದ ಒಂದು ಸಂಶೋಧನಾ ಗ್ರಂಥವಾಗಿದೆ. ಅವರು ಭಾರತದ ಬೇರೆ ಬೇರೆ ಗ್ರಂಥಾಲಯಗಳಲ್ಲಿರುವ ಮಹಾಭಾರತದ ಹಸ್ತಪ್ರತಿಗಳನ್ನು ಪರಿಶೀಲಿಸಿ ವೇದವ್ಯಾಸರು ರಚಿಸಿದ ಅಧಿಕೃತ ಮಹಾಭಾರತವನ್ನು ಕಂಡುಹಿಡಿದು ಶ್ರೀಕೃಷ್ಣ ಮತ್ತು ಪಾಂಡವರ ವಾಸ್ತವ ಇತಿಹಾಸವನ್ನು ಜನತೆಗೆ ತಿಳಿಸಿದರು. ಮಹಾಭಾರತದಲ್ಲಿ ನಿರೂಪಿಸಿದ ಎಲ್ಲಾ ಘಟನೆಗಳ ವಿಷಯದಲ್ಲಿ ನಮಗೆ ಉದ್ಭವಿಸುವ ತಾತ್ವಿಕ ಪ್ರಶ್ನೆಗಳಿಗೆ ಸಮರ್ಪಕ ಸಮಾಧಾನವನ್ನು ನೀಡಿದ್ದಾರೆ. ಮಹಾಭಾರತ, ಹರಿವಂಶ, ಭಾಗವತ ಮುಂತಾದ ಗ್ರಂಥಗಳಲ್ಲಿರುವ ಶ್ರೀಕೃಷ್ಣ ಪಾಂಡವರ ಕಥೆಗಳನ್ನು ಕ್ರಮಬದ್ಧವಾಗಿ ಕ್ರೋಡಿಕರಿಸಿ ಕೃಷ್ಣ ಮತ್ತು ಪಾಂಡವರ ಕಥೆಗಳನ್ನು ಜೋಡಿಸಿದ ಅಪೂರ್ವವಾದ ನಿರೂಪಣೆಯನ್ನು ಮಹಾಭಾರತತಾತ್ಪರ್ಯನಿರ್ಣಯದ ಹೊರತು ಬೇರೆಲ್ಲಿಯೂ ಕಾಣಲಾರೆವು. ಶ್ರೀಕೃಷ್ಣನ ಅವತಾರದ ಕಥೆಯ ಯಾವ ಯಾವ ಘಟ್ಟದಲ್ಲಿ ಪಾಂಡವರ ಜೀವನದ ಘಟನೆಗಳು ನಡೆದಿದೆಯೆಂಬುದನ್ನು ತೋರಿಸಿಕೊಟ್ಟರು ಕೃಷ್ಣ ಮತ್ತು ಪಾಂಡವರ ಕಥೆಯ ಏಕೀಕರಣದೊಂದಿಗೆ ಶ್ರೀಕೃಷ್ಣನನ್ನೇ ಕೇಂದ್ರವಾಗಿಟ್ಟುಕೊಂಡ ಪರಿಪೂರ್ಣ ಮಹಾಭಾರತವನ್ನು ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯದಲ್ಲಿ ಕಾಣಬಹುದು. ಶ್ರೀಕೃಷ್ಣ ಮತ್ತು ಶ್ರೀಕೃಷ್ಣನ ಪತ್ನಿಯರು, ಭೀಮ ಹಾಗೂ ದ್ರೌಪದಿಯ ವಿಷಯದಲ್ಲಿ ಯಾವ ಸಂಶಯ ಆಕ್ಷೇಪಗಳಿಗೆ ಅವಕಾಶವಾಗದಂತೆ ಅವರ ಪರಿಶುದ್ಧ ವ್ಯಕ್ತಿತ್ವವನ್ನು ಸ್ಪುಟೀಕರಿಸುವುದರ ಜೊತೆಗೆ ಮಹಾಭಾರತ ಎಲ್ಲಾ ಪಾತ್ರಗಳ ವಾಸ್ತವ ಚಿತ್ರಣವನ್ನು ಮುಂದಿಟ್ಟಿದ್ದಾರೆ. ಮಹಾಭಾರತದ ಕಥೆಯ ನಿರೂಪಣೆಯ ಜೊತೆಗೆ ಆಧ್ಯಾತ್ಮಿಕ ಸಿದ್ಧಾಂತಗಳ ವಾಸ್ತವ ನಿರೂಪಣೆಯನ್ನೂ ಈ ಗ್ರಂಥದಲ್ಲಿ ಮಾಡಲಾಗಿದೆ.ಇಂತಹ ಆಧ್ಯಾತ್ಮಿಕ ಮತ್ತು ಐತಿಹಾಸಿಕ ಗ್ರಂಥವಾಗಿರುವ ಮಹಾಭಾರತತಾತ್ಪರ್ಯನಿರ್ಣಯದ ಮಹಾಭಾರತನಿರ್ಣಯಭಾಗದ ಕಥಾನುವಾದವನ್ನು ಅತ್ಯುತ್ತಮ ರೀತಿಯಲ್ಲಿ ಜಿಜ್ಞಾಸುಗಳಿಗೆ ಸಂಗ್ರಾಹ್ಯವಾಗುವಂತೆ ಮಾಡಿದ ನಮ್ಮ ಅತ್ಯಂತ ಅಭಿಮಾನ ಪಾತ್ರರಾದ ಪಂಡಿತ ಪ್ರಭಂಜನಾಚಾರ್ಯರ ಜ್ಞಾನ ಸೇವೆಯನ್ನು ನಾವು ತುಂಬಿದ ಹೃದಯದಿಂದ ಅತ್ಯಂತ ಸಂತೋಷದಿಂದ ಸ್ವಾಗತಿಸುತ್ತೇವೆ.ಅವರ ಹೃದಯ ಬಳ್ಳಿಯಿಂದ ಇಂತಹ ಜ್ಞಾನದ ಸುಗಂಧವನ್ನು ಬೀರುವ ನೂರಾರು ಕೃತಿ ಕುಸುಮಗಳು ಹೊರ ಹೊಮ್ಮುತ್ತಿರಲೆಂದು ಆಶಿಸುತ್ತೇವೆ.

ಇಂತಿ ಸಪ್ರೇಮ ನಾರಾಯಣ ಸ್ಮರಣೆಗಳು

(ಶ್ರೀ ವಿಶ್ವೇಶತೀರ್ಥ ಶ್ರೀಪಾದರು)
ಶ್ರೀ ಪೇಜಾವರ ಅಧೋಕ್ಷಜ ಮಠ
ಉಡುಪಿ

Shri Pejawara Adhokshaja Mutt, Car Street, Udupi
Email: info@vishweshavani.com, Web: www.vishweshavani.com




ದಿನಾಂಕ:23–01–2014
ಮೊಕ್ಕಾಂ–ಮಾನವಿ

ಸಪ್ರೇಮ ನಾರಾಯಣ ಸ್ಮರಣೆಗಳು.

ಅನಂತನಾದ ಭಗವಂತನನ್ನು ಬ್ರಹ್ಮ ಎನ್ನುತ್ತಾರೆ. ಈ ಪರಬ್ರಹ್ಮನ ಅರಿವನ್ನಿತ್ತ ಅನಂತ ಶ್ರುತಿಗಳನ್ನೂ ಬ್ರಹ್ಮ ಎಂದೇ ಕರೆಯುತ್ತಾರೆ. ಈ ವೇದಬ್ರಹ್ಮನ ಉಪಬೃಂಹಣೆಗಾಗಿಯೇ ಇತಿಹಾಸ ಪುರಾಣಗಳ ನಿರ್ಮಾಣ. ಮೂಲರಾಮಾಯಣ, ಮಹಾಭಾರತಗಳು ನಿಜವಾದ ಇತಿಹಾಸ. ಭಾರತಾದಿ ಗ್ರಂಥಗಳ ಮೂಲಕ ವೇದಗಳ ವ್ಯಾಸ (ವಿವರಣೆ) ಮಾಡಿದ ಶ್ರೀವೇದವ್ಯಾಸರ ಸ್ವರೂಪವೂ ದುರ್ಜ್ಞೇಯ. ವ್ಯಾಸರು ರಚಿಸಿದ ಮಹಾಭಾರತವೂ ದುರ್ಗಮ. ಪರಬ್ರಹ್ಮರೂಪರಾದ ಶ್ರೀವ್ಯಾಸರನ್ನೂ ಯಥಾವತ್ತಾಗಿ ಅರಿತು ವಿಶ್ವಕ್ಕೆ ಪರಿಚಯಿಸಿದವರು ಆಚಾರ್ಯ ಮಧ್ವರು. ಅರ್ಥವಾಗದ, ಅನರ್ಥಗೊಳಿಸಿದ ಶ್ರೀಭಾರತವನ್ನೂ ಶ್ರೀ ಮಹಾಭಾರತತಾತ್ಪರ್ಯನಿರ್ಣಯದ ಮೂಲಕ ಜಗತ್ತಿಗೆ ಪರಿಚಯಿಸಿದ ಜಗದ್ಗುರುಗಳು ಶ್ರೀಮದಾನಂದತೀರ್ಥರು.

ಕಥೆಯ ನಿರಂತರತೆ, ಪೂರ್ವಾಪರ ಅವಿರೋಧತೆ, ಪಾತ್ರಗಳ ಸಾರಾಸಾರತೆ, ಮೂಲರೂಪ ಅಂಶ, ಅವತಾರ, ಆವೇಶಗಳ ವಿಶಿಷ್ಟತೆ ಎಲ್ಲಕ್ಕಿಂತಲೂ ಮಿಗಿಲಾದ ಅಧ್ಯಾತ್ಮಪ್ರವಣತೆ, ಇವುಗಳ ಸಂಗಮ ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ. ಒಂದೊಂದೂ ಅತ್ಯಪೂರ್ವ. ಶ್ರೀಮದಾಚಾರ್ಯರೇ ಅರುಹಿದಂತೆ "ಧರ್ಮಾದಿ ಮೋಕ್ಷಾಂತ ಪುಮರ್ಥಹೇತುಃ" ಈ ಅಪೂರ್ವ ಕೃತಿ. ಮಹಾಭಾರತದಂತೆ ಆಚಾರ್ಯರ ನಿರ್ಣಯಗ್ರಂಥದಲ್ಲಿಯೂ "ಏನಿಲ್ಲ" ಎಂದು ಹೇಳಲು ಸಾಧ್ಯವಿಲ್ಲ. ನಮ್ಮ ಆಚಾರ್ಯರು ರಚಿಸಿದ ಕೃತಿಯ ಸರ್ವೋತ್ತಮತ್ವವನ್ನು ಮಾಧ್ವರಾದ ನಾವು ಬಾಯ್ತುಂಬಾ ಬಣ್ಣಿಸಿ ಬಾಯಿ ಚಪ್ಪರಿಸುವುದು ಸಹಜ. ಆದರೆ ಅಮಾಧ್ವ ಸಂಶೋಧಕರೂ ಮಾಡಿದ ಈ ಮಹಾಭಾರತತಾತ್ಪರ್ಯನಿರ್ಣಯ ಕೃತಿಯ ಮುಕ್ತಕಂಠದ ಶ್ಲಾಘನೆ ನಮ್ಮ ನಿಮ್ಮ ಮೈನವಿರೇಳಿಸದೇ ಇದ್ದೀತೇ!

ಮಹಾಭಾರತ ಐತಿಹಾಸಿಕ . ಅಷ್ಟೇ ಅಲ್ಲ. ಸಾರ್ವಕಾಲಿಕವೂ ಹೌದು ಎಂದು ಸಾರಿದ ದೃಷ್ಟಾಂತಸಹಿತವಾಗಿ ತೋರಿಸಿದ, ಯುಕ್ತಿಯುಕ್ತವಾಗಿ ಸಮರ್ಥಿಸಿದ ಪ್ರಪ್ರಥಮ ಅದ್ವಿತೀಯ ಕೃತಿ ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯ ಅನ್ನುವುದೇ ಅವರ ಸೋಜಿಗದ ಜೀವಾತು.

ಇಂತಹ ಮೇರು ಕೃತಿಯನ್ನು ಮೂಲಭಾರತದ ಮೂಲಕ ಜೊತೆ–ಜೊತೆಯಾಗಿ ಅಧ್ಯಯನಗೈದು ನಾಡಿನಾದ್ಯಂತ ಪ್ರವಚನಗಳಿಂದ ಪ್ರಖ್ಯಾತರಾದವರು ಶ್ರೀಪ್ರಭಂಜನಾಚಾರ್ಯರು. ಇತರ ನತ್ತು ಹಲವಾರು ಭಾರತಗಳ ಜೊತೆಗೆ ಮಾಡಿದ ಇವರ ತುಲನಾತ್ಮಕ ಚಿಂತನೆ–ಮಂಥನೆಗಳು ಅತುಲ್ಯ. ಆಚಾರ್ಯರ ರೋಚಕ ಪ್ರವಚನದ ರಸಾಸ್ವಾದನೆಯು ಕೇಳಿದ ಕಿವಿಗೆ ಮಾತ್ರ ಸೀಮಿತವಾಗಿತ್ತು. ಉಳಿದ ಸಹೃದಯರಿಗೆ ಎಟಕದ ಈ ಅಪೂರ್ವ ಅಧ್ಯಾತ್ಮದ

ಮನನಾತ್ಮಕವಾದ ಪ್ರವಚನ ಇದೀಗ ಮತ್ತೆ ಚಾಕ್ಷುಷ ರಸಾಯನ. ಅದೇ ಈ ಮಧ್ವಭಾರತ. ಶ್ರೀಮದಾಚಾರ್ಯರೇ ಮತ್ತೊಮ್ಮೆ ಶ್ರೀ ಪ್ರಭಂಜನಾಚಾರ್ಯರಲ್ಲಿ ನಿಂತು ಬರೆಸಿದ ಬರವಣಿಗೆ ಮಧ್ವಭಾರತ. ಶ್ರೀಪ್ರಭಂಜನಾಚಾರ್ಯರು ಬರೆದ ಭಾರತಕಥೆಯು ಅಂದು ಪಾಂಡವ–ಕೌರವರ ಕಥೆ. ಆದರೆ ಇಂದು ನಮ್ಮ ನಿಮ್ಮ ಜೀವನದ ಕಥೆ. ಶ್ರೀಪ್ರಭಂಜನಾಚಾರ್ಯರ ಈ ವ್ಯಾಸಭಾರತದ ಕೊಡುಗೆ ಆಸ್ತಿಕ ಸಮಾಜದ ದೊಡ್ಡ ಆಸ್ತಿ. ಅಭ್ಯಾಸ ಮಾಡುವವನಿಂದ ಆರಂಭಿಸಿ ಪ್ರವಚನಕಾರನ ತನಕ ಈ ಕೃತಿ ಅದ್ಭುತ ಮಾರ್ಗದರ್ಶಕ. ಇಂತಹ ಶ್ರೀಪ್ರಭಂಜನಾಚಾರ್ಯರ ಅನುಪಮ ಸೇವೆಯನ್ನು ಹೃದಯತುಂಬಿ ಅಭಿನಂದಿಸುತ್ತೇವೆ. ಜೀವನವನ್ನೇ ಪಾಠ–ಪ್ರವಚನ, ಲೇಖನ–ಮುದ್ರಣೆಗಾಗಿಯೇ ಮುಡುಪಾಗಿಟ್ಟ ಪ್ರಭಂಜನಾಚಾರ್ಯರ ಮೂಲಕ ಇಂತಹ ಸಾಧನೆಗಳು ನಮ್ಮ ಸಮಾಜಕ್ಕೆ ನಿರಂತರವಾಗಿ ದೊರಕಲಿ ಎಂದು ಹಾರೈಸುತ್ತೇವೆ.

ಸಹಸ್ರಚಂದ್ರದರ್ಶನಶಾಂತಿಯನ್ನು ಆಚರಿಸುತ್ತಿರುವ ತಾಯಿಯ ಪ್ರೀತಿಗಾಗಿ ತಾಯಿಯ ಹೆಸರಲ್ಲಿ ಈ ಕೃತಿಯನ್ನು ಮುದ್ರಣೆಗೊಳಿಸಿ ಸಾಧಕರಿಗೆ ವಿತರಿಸಿದ ನಮ್ಮೆಲ್ಲರ ಆತ್ಮೀಯರೂ ಪರೋಪಕಾರ ನಿರತರೂ, ಮಾತೃಭಕ್ತರೂ ಆದ ಶ್ರೀ ಸಿ.ಆರ್ ಮುರಳಿ ಅವರ ಸಾಧನೆಯನ್ನು ಹರಿ–ಗುರುಗಳು ಹರಸಲಿ.

ಇತ್ಯನೇಕ ನಾರಾಯಣ ಸ್ಮರಣೆಗಳು

ಶ್ರೀಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು

*****

# ಅನುಗ್ರಹವಚನ

## ಶ್ರೀಶ್ರೀವಿದ್ಯೇಶತೀರ್ಥ ಶ್ರೀಪಾದರು

### ಶ್ರೀಭಂಡಾರಕೇರಿಮಠ

ಪ್ರಭಂಜನಸಮೋ ನಾಸ್ತಿ ವ್ಯಾಸವಾಣೀಸುಭಾಷಣೇ ।
ಧರ್ಮವರ್ಧನಚಾತುರ್ಯಂ ತಸ್ಯ ವಿಶ್ವಮನೋರಮಮ್ ॥

ಶ್ರೀಮಧ್ವಭಾರತವು ಹರಿತತ್ತ್ವದ ದರ್ಶನ ಹಾಗೂ ಇತರ ಪಾತ್ರಗಳ ದರ್ಶನವನ್ನು ಸಮಂಜಸವಾಗಿ ಮಾಡಿಸುತ್ತದೆ.

ಶ್ರೀಮಧ್ವಭಾರತ ಪ್ರವಚನದಿಂದ ನಮ್ಮ ಗುರುಗಳಾದ ಪ್ರಾತಃಸ್ಮರಣೀಯರಾದ ಶ್ರೀವಿದ್ಯಾಮಾನ್ಯತೀರ್ಥರನ್ನು ಮೆಚ್ಚಿಸಿ ಜನಮನವನ್ನು ಆಕರ್ಷಿಸಿ ದೊಡ್ಡ ಸಾಧನೆಯನ್ನು ಶ್ರೀಡಾ।ವಿದ್ವಾನ್ ಪ್ರಭಂಜನಾಚಾರ್ಯರು ಮಾಡಿದ್ದಾರೆ. ಮಧ್ವಭಾರತ ಪ್ರವಚನದಲ್ಲಿ ಅನನ್ಯ ಪ್ರಾವೀಣ್ಯವನ್ನು ಪಡೆದ ಆಚಾರ್ಯರಲ್ಲಿ 'ಭಾರತ'ವು "ರತ್ನ"ವಾಗಿ ಶೋಭಿಸುತ್ತಿದೆ. ಅರ್ಥಾತ್ ರತಿಂ ನಯತೀತಿ ರತ್ನಂ = ರತಿ ಆನಂದಪ್ರದವಾಗಿದೆ. ಈ ಅರ್ಥದಲ್ಲಿ ಅವರು 'ಭಾರತರತ್ನ' ಪ್ರಶಸ್ತಿಗೆ ಅರ್ಹರು. ಸಾಮಾನ್ಯ ೩೭ ವರ್ಷಗಳ ಹಿಂದೆ ಪ್ರಸ್ತುತ ಮಧ್ವಭಾರತ ಗ್ರಂಥವು ಆಚಾರ್ಯರಿಂದ ರಚಿತವಾಗಿದ್ದು ಇದೀಗ ಪ್ರಕಾಶನಗೊಂಡಿದೆ. ಇದರ ದ್ವಿತೀಯಾವೃತ್ತಿಯೂ ಸದ್ಯದಲ್ಲೇ ಪ್ರಕಾಶನಗೊಳ್ಳಲಿದೆ. ಇದರಿಂದ ಈ ಕೃತಿಯ ಜನಪ್ರಿಯತೆ ಎಷ್ಟೆಂದು

ಊಹಿಸಬಹುದು. ಮುನ್ನುಡಿ ಹಾಗೂ ಅಡಿಟಿಪ್ಪಣಿಗಳಲ್ಲಿ ಉಪಯುಕ್ತ ಅಂಶಗಳನ್ನು ಕಾಣಬಹುದು. ಪಂಪಭಾರತ, ಕುಮಾರವ್ಯಾಸ ಭಾರತ ಮುಂತಾದ ಕೃತಿಗಳಲ್ಲಿ ಬರುವ ವಿಕೃತ ಚಿತ್ರಣವು ಮೂಲ ಮಹಾಭಾರತದ ಆಶಯಕ್ಕೆ ವಿರುದ್ಧವಾಗಿದೆ ಎಂಬುದನ್ನು ಈ ಕೃತಿಯಲ್ಲಿ ಸಮಂಜಸವಾಗಿ ಸಮರ್ಥಿಸಲಾಗಿದೆ.

ಒಟ್ಟಿನಲ್ಲಿ ಜನಸಾಮಾನ್ಯರನ್ನೂ ಓದಿಸಿಕೊಂಡು ಮುನ್ನಡೆಸುವ ರಚನೆ ಇದಾಗಿದೆ ಎನ್ನಬಹುದು. ಹೃದಯಸ್ಪರ್ಶಿಯಾದ ಈ ಕೃತಿ ರಚನೆಮಾಡಿದ ಆಚಾರ್ಯರನ್ನು ಅಭಿನಂದಿಸಿ ಆಚಾರ್ಯರಿಂದ ದ್ವಿಗುಣಿತವಾಗಿ ಮಾಧ್ವವಾಙ್ಮಯ ಸೇವೆಯನ್ನು ಭಗವಾನ ಮಧ್ವಾಂತರ್ಗತ ಶ್ರೀವೇದವ್ಯಾಸರು ಮಾಡಿಸಿ ಸ್ವೀಕರಿಸಲೆಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಸೀತಾಪತಿ ರಾಮಚಂದ್ರದೇವರನ್ನು ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

ಶ್ರೀವಿದ್ಯೇಶತೀರ್ಥಶ್ರೀಪಾದರು

*****

जगद्गुरु श्री मध्वाचार्य संस्थानम्
श्री श्री विश्वप्रसन्नतीर्थ स्वामीजी
श्रीपेजावर अधोक्षज मठ
उडुपि - ५७६१०१, कर्नाटक राज्य
☎ २५२४१९८, २५२६५९८

Jagadguru Sri Madhwacharya Samsthanam
**Sri Sri Vishvaprasanna Theertha Swamiji**
Sri Pejavara Adhokshaja Mutt,
UDUPI - 576 101, Karnataka
☎ 2524198, 2526598

24-1-14

'ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ'

ಯಜ್ಞ ಎಂದರೆ ದೇವಪೂಜೆ. ಅಂತಹ ಹಲವು ಬಗೆಯ ಯಜ್ಞಗಳಿಗಿಂತಲೂ ಜ್ಞಾನಯಜ್ಞವು ಶ್ರೇಷ್ಠವಾದುದು ಎಂದು ಶ್ರೀಕೃಷ್ಣನೇ ಆದೇಶಿಸಿದ್ದಾನೆ.

ಬದುಕಿನಲ್ಲಿ ಭಗವದನುಗ್ರಹವನ್ನು ಸಂಪಾದಿಸಲು ಇಂತಹ ನಿತ್ಯಯಜ್ಞ ಅಗತ್ಯ; ಜೀವನದ ಹಲವು ವಿಶಿಷ್ಟ ಮಜಲುಗಳಲ್ಲಿ ಇಂತಹ ಯಜ್ಞ ವಿಶೇಷವಾಗಿ ನಡೆಯಬೇಕು.

ಆರ್. ಸರೋಜಮ್ಮನವರ ಎಂಭತ್ತನೆಯ ಜನ್ಮನಕ್ಷತ್ರ ಸಮಾರಂಭದ ಸಮಯದಲ್ಲಿ "ಮಧ್ವಭಾರತ" ಎಂಬ ಕೃತಿಯನ್ನು ಹೊರತರುವ ಮೂಲಕ ಹರಿಗುರುಗಳ ಸೇವೆಯು ವಿಶೇಷವಾಗಿ ನಡೆದಂತಾಗಿದೆ.

ಜ್ಞಾನೋಪದೇಶಕ್ಕಾಗೇ ಅವತರಿಸಿದ ವಾಯುದೇವರ ತೃತೀಯರೂಪದಿಂದ ರಚಿತವಾದ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಕನ್ನಡಾನುವಾದವನ್ನು ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ಸುಂದರವಾಗಿ ನೀಡಿದ್ದಾರೆ.

ನಿರಂತರ ಅಧ್ಯಯನ-ಅನುಸಂಧಾನಗಳಿಂದ ಈ ಕೃತಿರಚನೆಯು-ಪ್ರಕಾಶನವು ಸಾರ್ಥಕವಾಗಲಿ.

ಇಂತು ಸಪ್ರೇಮ ನಾರಾಯಣಸ್ಮರಣೆಗಳು

ಶ್ರೀವಿಶ್ವಪ್ರಸನ್ನತೀರ್ಥ ಶ್ರೀಪಾದರು

# ವಿಷಯಾನುಕ್ರಮಣಿಕೆ

## ಪ್ರಸ್ತಾವನೆ (12-56)



# ಮಧ್ವ ಭಾರತ ೧-೩೬೮



## ಆದಿಪರ್ವ (೩-೧೪೯)

## ಸಭಾಪರ್ವ (೧೫೦-೧೮೨)

## ವನಪರ್ವ (೧೮೩-೨೨೪)

## ವಿರಾಟಪರ್ವ (೨೨೫-೨೩೦)



## ಉದ್ಯೋಗಪರ್ವ (೨೩೧-೨೩೮)



## ಭೀಷ್ಮಪರ್ವ (೨೩೯-೨೫೦)

## ದ್ರೋಣಪರ್ವ (೨೫೧-೨೭೯)



## ಕರ್ಣಪರ್ವ (೨೮೦-೨೯೮)

## ಶಲ್ಯಪರ್ವ (೨೯೯-೩೦೭)



## ಸೌಪ್ತಿಕಪರ್ವ (೩೦೮-೩೧೪)



## ಸ್ತ್ರೀಪರ್ವ (೩೧೫-೩೧೭)



## ಶಾಂತಿ ಪರ್ವ - ಅನುಶಾಸನ ಪರ್ವ (೩೧೮-೩೨೩)



## ಆಶ್ವಮೇಧಿಕಪರ್ವ (೩೨೪-೩೩೭)

## ಆಶ್ರಮವಾಸಿಕಪರ್ವ (೩೩೮-೩೪೪)



## ಮೌಸಲಪರ್ವ (೩೪೫-೩೪೯)



## ಮಹಾಪ್ರಸ್ಥಾನಪರ್ವ (೩೫೦)



## ಸ್ವರ್ಗಾರೋಹಣಪರ್ವ (೩೫೧-೩೫೯)



*****

# ಪ್ರಸ್ತಾವನೆ

ಪ್ರಸ್ತುತ ಕೃತಿ ಮಧ್ವಭಾರತವು ಆಚಾರ್ಯಶ್ರೀಮಧ್ವರ ಮಹಾಭಾರತತಾತ್ಪರ್ಯನಿರ್ಣಯದ ಕೃತಿಯಲ್ಲಿನ ವಿವರಗಳ ಸಂಗ್ರಹನಿರೂಪಣೆ ; ಮಹಾಭಾರತತಾತ್ಪರ್ಯನಿರ್ಣಯದ ೧೧ನೆಯ ಅಧ್ಯಾಯದಿಂದ ೩೨ನೇ ಅಧ್ಯಾಯದವರೆಗಿನ ಶ್ಲೋಕಗಳ ಸಾರ. ಸುಮಧ್ವವಿಜಯ, ಸಂಪ್ರದಾಯ ಪದ್ಧತಿ ಮೊದಲಾದ ಆಕರ ಗ್ರಂಥಗಳಲ್ಲಿ ಅವರ ಜೀವನಸಾಧನೆಗಳು ದಾಖಲಾಗಿವೆ.

## ಶ್ರೀಮಧ್ವಾಚಾರ್ಯರು

[೧]ಶ್ರೀಮಧ್ವಾಚಾರ್ಯರು ಸಕಲಮಾಧ್ವಮಠಗಳ ಮೂಲಪುರುಷರು ([೨]ಕ್ರಿ.ಶ. ೧೨೦೦-೧೨೮೦) ಜಗತ್ತು ಕಂಡ ಅಪ್ರತಿಮ ತತ್ತ್ವಜ್ಞಾನಿಗಳು ; ಇವರು ಅಪಾರಪ್ರತಿಭೆ, ಅನುಪಮಪಾಂಡಿತ್ಯ, ಸಲ್ಲಕ್ಷಣಭರಿತದೇಹ, ಅಪಾರ ಭಗವದ್ಭಕ್ತಿ ಮತ್ತು ಅರ್ಹ ಜನರ ಸಂಕಷ್ಟವನ್ನು ಪರಿಹರಿಸಿ ಸಂತುಷ್ಟರನ್ನಾಗಿಸುವ ಕಾರುಣ್ಯ ಮೊದಲಾದ ಸದ್ಗುಣಗಳಿಂದಾಗಿ ಅವರು ವಿಶ್ವದ ಅದ್ವಿತೀಯ ತತ್ತ್ವ-ಪ್ರಸಾರಕಗುರುಗಳಾಗಿ ಮಾನ್ಯರಾಗಿರುವರು. ಇವರು ಅವತರಿಸಿದ್ದು ಉಡುಪಿಯ ಬಳಿಯ ಚಿಕ್ಕಹಳ್ಳಿ ಪಾಜಕದಲ್ಲಿ ; ವಾಸುದೇವ ಎಂಬುದು ಇವರ ಪೂರ್ವಾಶ್ರಮದ ಹೆಸರು; ಹತ್ತನೆಯ ವರ್ಷದಲ್ಲಿ ಸರ್ವೋನ್ನತವಾದ ಪರಮಹಂಸಾಶ್ರಮವನ್ನು ಸ್ವೀಕರಿಸಿದರು; ಹಂಸನಾಮಕ ಪರಮಾತ್ಮನ ಪರಂಪರೆಯ ವೇದಾಂತಪೀಠವನ್ನು ಪಾಲಿಸಿದರು; ಆಸೇತುಹಿಮಾಚಲಪರ್ಯಂತ (ಮತ್ತು ಅದಕ್ಕೂ ಆಚೆಯ ಉತ್ತರಬದರಿಯವರೆಗೆ) ಸಂಚರಿಸಿದರು; ಸಕಲಶಾಸ್ತ್ರಗಳ ಸಾರರೂಪವಾದ ಸರ್ವಮೂಲ-ಗ್ರಂಥಗಳನ್ನು ಬರೆದರು; ಸಕಲಶಾಸ್ತ್ರಗಳ ಮರ್ಮವನ್ನು ಉಪದೇಶಿಸಿದರು; ಪರಗತಿಯ ರಾಜ-ಮಾರ್ಗವನ್ನು ತೋರಿಸಿದರು; ಸಕಲಜಿಜ್ಞಾಸುಗಳ ಮನೋಮಂದಿರದಲ್ಲಿ ನೆಲೆಸಿದರು; ಅನಾದಿ-ವೈಷ್ಣವವೇದಾಂತವಾದ ತತ್ತ್ವವಾದವನ್ನು ಪ್ರವರ್ತಿಸಿದರು; ಸತ್ಪರಂಪರೆಯನ್ನು ಬೆಳೆಸಿದರು; ತತ್ತ್ವಪ್ರಸಾರಕ್ಕಾಗಿ ಒಂಭತ್ತು ಪೀಠಗಳನ್ನು ಸ್ಥಾಪಿಸಿದರು; ಪದ್ಮನಾಭತೀರ್ಥರು, ನರಹರಿತೀರ್ಥರು, ಹೃಷೀಕೇಶತೀರ್ಥರು, ಸತ್ಯತೀರ್ಥರು, ತ್ರಿವಿಕ್ರಮಪಂಡಿತಾಚಾರ್ಯರು ಮೊದಲಾದ ಶ್ರೇಷ್ಠ ಶಿಷ್ಯವರ್ಗವನ್ನು ಸಂಪಾದಿಸಿದರು; ದ್ವಾರಕೆಯಿಂದ ತಮಗಾಗಿ ಒಲಿದು ಬಂದ ಶ್ರೀರುಕ್ಮಿಣೀಕರಾರ್ಚಿತ ಶ್ರೀಕೃಷ್ಣಪ್ರತಿಮೆಯನ್ನು ಉಡುಪಿಯಲ್ಲಿ ಪ್ರತಿಷ್ಠಾಪಿಸಿದರು; ಉತ್ತರಬದರಿಯ ಶ್ರೀವೇದವ್ಯಾಸದೇವರ ಸನ್ನಿಧಾನದಲ್ಲಿ ಇಂದೂ ಪ್ರತ್ಯಕ್ಷವಾಗಿ ನೆಲೆಸಿರುವರು – ಇದಿಷ್ಟು ಸಂಕ್ಷಿಪ್ತವಾಗಿ ಅವರ ಜೀವನಗಾಥೆ.

ಶ್ರೀಪದ್ಮನಾಭತೀರ್ಥರಂತಹ ಪರಮಹಂಸರು, ತ್ರಿವಿಕ್ರಮಪಂಡಿತಾಚಾರ್ಯರಂತಹ ಗೃಹಸ್ಥ-ಶೇಖರರು, ಜಯಸಿಂಹರಾಜನಂತಹ ಅರಸ, ಕಲ್ಯಾಣೀದೇವಿಯಂತಹ ಮಹಿಳಾಮಣಿಗಳು ಮೊದಲಾದ ಅಸಂಖ್ಯಶಿಷ್ಯವರ್ಗ ಅವರ ಉಪದೇಶಧಾರೆಯಲ್ಲಿ ಮಿಂದು ಪುನೀತವಾಯಿತು. ಜಿಜ್ಞಾಸುಗಳಾಗಿ, ಆರ್ತರಾಗಿ ಬಂದ ಯಾರನ್ನೂ ದೂರ ಮಾಡದೆ ಕರುಣೆಯಿಂದ ಕರೆದು ಉದ್ಧಾರದ ಹಾದಿ ತೋರಿದ ವಿಶ್ವಗುರು ಅವರು. ವೇದವೇದಾಂತಗಳಿರಲಿ, ಶಿಕ್ಷಾವ್ಯಾಕರಣಾದಿ-

---

೧. ಶ್ರೀಮಧ್ವಾಚಾರ್ಯರ ಜೀವನ, ಸಾಧನೆಗಳ ವಿವರಗಳನ್ನು ನಮ್ಮ ಪ್ರಕಾಶನದ 'ಶ್ರೀಪೂರ್ಣಪ್ರಜ್ಞದರ್ಶನ' ಎಂಬ ಕೃತಿಯಲ್ಲಿ ಕಾಣಬಹುದು.

೨. ಶ್ರೀಮಧ್ವಾಚಾರ್ಯರ ಕಾಲನಿರ್ಣಯದ ಬಗ್ಗೆ ವಿವರಗಳನ್ನು ನಮ್ಮ ಪ್ರಕಾಶನದ ಶ್ರೀಮಧ್ವಾಚಾರ್ಯರ ಕಾಲನಿರ್ಣಯ ಕೃತಿ(ದ್ವಿತೀಯಾವೃತ್ತಿ)ಯಲ್ಲಿ ಕೊಡಲಾಗಿದೆ.

ವೇದಾಂಗಗಳಿರಲಿ, ತರ್ಕಮೀಮಾಂಸೆಗಳಿರಲಿ, ಸಂಗೀತಶಾಸ್ತ್ರವಿರಲಿ, ವಿವಿಧಭಾಷಾಪ್ರಪಂಚವಿರಲಿ, ಕವಿತಾಪ್ರತಿಭೆಯಿರಲಿ ಎಲ್ಲದರಲ್ಲೂ ಅವರು ಪರಿಪೂರ್ಣಪ್ರಮತಿ. ಗಂಗಾನದಿಯ ಮೇಲೆ ನಡೆಯಬಲ್ಲ, ಹಿಮಾಲಯ ಪರ್ವತಶ್ರೇಣಿಯಲ್ಲಿ ಹಾರುತ್ತಾ ಸಾಗಬಲ್ಲ, ಭಾರದ ಬಂಡೆಗಳನ್ನು ಒಂದೇ ಕೈಯಲ್ಲಿ ಎತ್ತಿ ಬೇಕಾದ ಸ್ಥಳದಲ್ಲಿ ಇರಿಸಬಲ್ಲ, ಎಂತಹ ಜಗಜ್ಜಟ್ಟಿಗಳನ್ನು ಸುಮ್ಮನೆ ಕುಳಿತಿದ್ದೇ ಪರಾಭವಗೊಳಿಸಬಲ್ಲ, ವಿಧರ್ಮೀಯರನ್ನೂ ತತ್ತ್ವಾರ್ಥಗರ್ಭಿತ ಅಪೂರ್ವ ಮಾತುಗಾರಿಕೆಯಿಂದ ಕ್ಷಣಕಾಲದಲ್ಲೇ ಪ್ರಭಾವಿತರನ್ನಾಗಿಸಬಲ್ಲ, ಅನನ್ಯ ಯೋಗಶಕ್ತಿ ಅವರದ್ದು. ಶ್ರೀರಾಘವೇಂದ್ರ-ಸ್ವಾಮಿಗಳು ತಮ್ಮ ಪ್ರಾತಃಸಂಕಲ್ಪಗದ್ಯದಲ್ಲಿ ಇವರನ್ನು [೧]ಸಂಸಿದ್ಧಸಪ್ತಕೋಟಿಮಹಾಮಂತ್ರರಾದ ಯೋಗಿರಾಜರು ಎಂಬುದಾಗಿ ವರ್ಣಿಸಿರುವರು.

ಅವರ ಕೃತಿಗಳು ಹಾಗೂ ಅವರ ಮೇಲೆ ರಚಿತವಾಗಿರುವ ಕೃತಿಗಳಿಂದ ತಿಳಿದುಬರುವಂತೆ ಅವರು ಅನುಪಮ ವಿದ್ವಾಂಸರು, ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡ ದಾರ್ಶನಿಕರು, ಸರಸಕವಿಗಳು, ವೇದದ್ರಷ್ಟಾರಮಹರ್ಷಿಗಳು, ತತ್ತ್ವೋಪದೇಶಕ ಮಹಾಚಾರ್ಯರು, ಅದ್ವಿತೀಯವಾಗ್ಮಿಗಳು, ವೈವಿಧ್ಯಮಯಗ್ರಂಥಕಾರರು, ಅಪೂರ್ವಸಂಶೋಧಕರು, ಅಪ್ರತಿಮ ವಾದಕೋವಿದರು, ಅಪೂರ್ವ ಅನುಭಾವಿಗಳು, ತತ್ತ್ವಜ್ಞಾನದ ರಸಋಷಿಗಳು, ಸಕಲಭಾಷಾಕೋವಿದರಾದ ಭಾಷಿಗರು, ಅಪೂರ್ವ-ಭಾಷಾಶಾಸ್ತ್ರಜ್ಞರು, ಮಹಾತಪಸ್ವಿಗಳು, ಅನುಪಮಗಾನಕೋವಿದರು, ಪುರಾತತ್ತ್ವ ಶಾಸ್ತ್ರಜ್ಞರು, ಮೀಮಾಂಸಾದಿ ಸಕಲಶಾಸ್ತ್ರವಿಶಾರದರು, ಸಮರ್ಥ ಆಡಳಿತಗಾರರು, ಅಸಾಮಾನ್ಯ ಸಂಘಟನ-ಕಾರರು ಮತ್ತು ವಿಶಾಲಹೃದಯದ ಸಮಾಜಸುಧಾರಕರು. ಅವರು ನಿಜವಾದ ಅರ್ಥದಲ್ಲಿ ಸರ್ವಜ್ಞರೂ, ಸಕಲಕಲಾಕೋವಿದರೂ ಆಗಿದ್ದ ಮಹಾನುಭಾವರು. ದ್ವಾತ್ರಿಂಶಲ್ಲಕ್ಷಣಭರಿತವಾದ ಅವರ ಆಕೃತಿ ಕಲಿಯುಗದ ಅಪೂರ್ವ ದಾಖಲೆ. ಐವತ್ತು ಟನ್ನುಗಳಷ್ಟು ಭಾರದ ಬೃಹತ್ತಾದ ಶಿಲೆಯನ್ನು ಒಂದೇ ಕೈಯಿಂದ ಭದ್ರಾನದಿಯ ಪ್ರವಾಹಮಧ್ಯದಲ್ಲಿ ಇರಿಸಿದ ಅವರ ದೈಹಿಕಸಾಮರ್ಥ್ಯ[೨] ಊಹಾತೀತವಾದದ್ದು.

## [೩]ಶ್ರೀಮಧ್ವಾಚಾರ್ಯರ ಕೃತಿಗಳು

| | | |
|---|---|---|
| ಗೀತಾಪ್ರಸ್ಥಾನ | : | ಗೀತಾಭಾಷ್ಯ , ಗೀತಾತಾತ್ಪರ್ಯನಿರ್ಣಯ |
| ಸೂತ್ರಪ್ರಸ್ಥಾನ | : | ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ, ನ್ಯಾಯವಿವರಣ |
| ಉಪನಿಷತ್ಪ್ರಸ್ಥಾನ | : | ಐತರೇಯೋಪನಿಷದ್ಭಾಷ್ಯ, ಛಾಂದೋಗ್ಯೋಪನಿಷದ್ಭಾಷ್ಯ, ಬೃಹದಾ-ರಣ್ಯಕೋಪನಿಷದ್ಭಾಷ್ಯ , ಈಶಾವಾಸ್ಯೋಪನಿಷದ್ಭಾಷ್ಯ , ತಲವಕಾ-ರೋಪನಿಷದ್ಭಾಷ್ಯ, ಷಟ್ಪ್ರಶ್ನೋಪನಿಷದ್ಭಾಷ್ಯ, ಕಾಠಕೋಪನಿಷದ್ಭಾಷ್ಯ, ಆಥರ್ವಣೋಪನಿಷದ್ಭಾಷ್ಯ , ಮಾಂಡೂಕೋಪನಿಷದ್ಭಾಷ್ಯ, ತೈತ್ತಿ-ರೀಯೋಪನಿಷದ್ಭಾಷ್ಯ |

೧. ಸಂಸಿದ್ಧಸಪ್ತಕೋಟಿಮಹಾಮಂತ್ರಾಣಾಮ್ — ಪ್ರಾತಃಸಂಕಲ್ಪಗದ್ಯ

೨. Mysore Gazeeter vol.5(1930); Epigraphica Carnatica(1901).

೩. ಶ್ರೀಮಧ್ವಾಚಾರ್ಯರ ಕೃತಿಗಳ ಸ್ಥೂಲಪರಿಚಯವನ್ನು ನಮ್ಮ ಪ್ರಕಾಶನದ 'ಸರ್ವಮೂಲಸೌರಭ'(೨೦೧೦) ಕೃತಿಯಲ್ಲಿ ಕೊಡಲಾಗಿದೆ.

ಶ್ರುತಿಪ್ರಸ್ಥಾನ : ಋಗ್ಭಾಷ್ಯ
ಇತಿಹಾಸಪ್ರಸ್ಥಾನ : ಮಹಾಭಾರತತಾತ್ಪರ್ಯನಿರ್ಣಯ, ಯಮಕಭಾರತ
ಪುರಾಣಪ್ರಸ್ಥಾನ : ಶ್ರೀಮದ್ಭಾಗವತತಾತ್ಪರ್ಯನಿರ್ಣಯ
ಪ್ರಕರಣಗ್ರಂಥಗಳು : ತತ್ತ್ವಸಂಖ್ಯಾನ, ತತ್ತ್ವವಿವೇಕ, ತತ್ತ್ವೋದ್ಯೋತ, ವಿಷ್ಣುತತ್ತ್ವವಿನಿರ್ಣಯ, ಪ್ರಮಾಣಲಕ್ಷಣ, ಕಥಾಲಕ್ಷಣ, ಉಪಾಧಿಖಂಡನ, ಮಾಯಾವಾದ-ಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ, ಕರ್ಮನಿರ್ಣಯ
ಆಚಾರಗ್ರಂಥಗಳು : ತಂತ್ರಸಾರಸಂಗ್ರಹ, ಸದಾಚಾರಸ್ಮೃತಿ, ಜಯಂತೀನಿರ್ಣಯ, ಕೃಷ್ಣಾಮೃತಮಹಾರ್ಣವ, ಯತಿಪ್ರಣವಕಲ್ಪ
ಸ್ತೋತ್ರಕೃತಿಗಳು[೧] : ನಖಸ್ತುತಿ, ದ್ವಾದಶಸ್ತೋತ್ರ, [೨]ಕಂದುಕಸ್ತುತಿ

ಸರಳತೆ, ಸ್ಪಷ್ಟತೆ, ಗಾಂಭೀರ್ಯ, ಅಡಕವಾದ ನಿರೂಪಣೆ, ಪ್ರಮಾಣೋದಾಹರಣ ಹಾಗೂ ಯುಕ್ತಿವೈಭವಗಳು ಅವರ ಕೃತಿಗಳ ವಿಶಿಷ್ಟಲಕ್ಷಣಗಳು. ಜಗತ್ತಿನ ಬೇರಾವ ಗ್ರಂಥಕಾರರ ಕೃತಿಗಳಲ್ಲೂ ಕಾಣಸಿಗದ ನಿರಂತರ ಪ್ರಮಾಣೋದಾಹರಣೆ ಅವರ ಗ್ರಂಥಗಳ ಅಸಾಮಾನ್ಯ ಹಿರಿಮೆ. ಶಬ್ದ-ವಿನ್ಯಾಸದಲ್ಲಿ ವಾಮನನಾಗಿದ್ದು ಅರ್ಥವೈಭವದಲ್ಲಿ ತ್ರಿವಿಕ್ರಮನಾಗಿರುವುದು ಅವರ ಬರವಣಿಗೆಯ ಅಸಾಧಾರಣ ಲಕ್ಷಣ.

## ಗ್ರಂಥಗಳ ವೈಶಿಷ್ಟ್ಯ

ಶ್ರೀಮಧ್ವಾಚಾರ್ಯರ ಗ್ರಂಥಗಳ ವ್ಯಾಪ್ತಿಯಂತೆ ಅವುಗಳ ವೈಶಿಷ್ಟ್ಯವು ಸಹ ಅನ್ಯಾದೃಶ-ವಾದುದು. ಅತಿ ಹೆಚ್ಚಿನ ಸಂಖ್ಯೆಯ ಗ್ರಂಥಗಳನ್ನು ಬರೆದ ಮತಾಚಾರ್ಯರು ಎಂಬುದು ಇವರ ಹಿರಿಮೆ; ವಿಷಯವೈವಿಧ್ಯ ಅವುಗಳ ಅಪೂರ್ವ ಗರಿಮೆ.

ಸರ್ವಮೂಲವೆಂಬುದಾಗಿ ಪ್ರಸಿದ್ಧವಾಗಿರುವ ಅವರ ಮೂವತ್ತೇಳು ಗ್ರಂಥಗಳಲ್ಲಿ ಬ್ರಹ್ಮಸೂತ್ರದ ಮೇಲೆ ನಾಲ್ಕು, ಗೀತೆಯ ಮೇಲೆ ಎರಡು, ದಶೋಪನಿಷತ್ತುಗಳ ಮೇಲೆ ಒಂದೊಂದು, ಋಗ್ವೇದದ ಮೇಲೆ ಒಂದು, ಮಹಾಭಾರತದ ಮೇಲೆ ಎರಡು, ಭಾಗವತದ ಮೇಲೆ ಒಂದು ಸೇರಿವೆ.

ಶಂಕರಾಚಾರ್ಯರು ಪ್ರಸ್ಥಾನತ್ರಯಕ್ಕೆ ಭಾಷ್ಯ ಬರೆದಿದ್ದರೂ ವೇದಗಳ ಮೇಲೆ ಭಾಷ್ಯ ಬರೆದಿಲ್ಲ. ರಾಮಾನುಜಾಚಾರ್ಯರು ಗೀತೆ ಮತ್ತು ಬ್ರಹ್ಮಸೂತ್ರಗಳ ಮೇಲೆ ಭಾಷ್ಯ ಬರೆದಿದ್ದರೂ, ಉಪನಿಷತ್ತು ಮತ್ತು ವೇದಗಳ ಮೇಲೆ ಭಾಷ್ಯ ರಚಿಸಿಲ್ಲ. ಅವರ ವೇದಾರ್ಥಸಂಗ್ರಹದಲ್ಲಿ ಉಪನಿಷದ್ವಾಕ್ಯಗಳ ಚರ್ಚೆ ಇದ್ದರೂ ಅದು ಅವುಗಳ ಭಾಷ್ಯವಲ್ಲ. ಆದರೆ ಶ್ರೀಮದಾಚಾರ್ಯರು ಪ್ರಸ್ಥಾನತ್ರಯಗಳೊಂದಿಗೆ ಋಗ್ವೇದಕ್ಕೂ ಭಾಷ್ಯ ರಚಿಸಿರುವರು. ಮಹಾಭಾರತಕ್ಕೆ ತಾತ್ಪರ್ಯ-

---

೧. ಸಂನ್ಯಾಸಪದ್ಧತಿ ಹಾಗೂ ಭಾಧಾತುವ್ಯಾಖ್ಯಾನ ಮೊದಲಾದ ಮತ್ತೆ ಕೆಲವು ಗ್ರಂಥಗಳು ಸಹ ಶ್ರೀಮಧ್ವಾಚಾರ್ಯಪ್ರಣೀತವೆಂಬುದಾಗಿ ತಿಳಿದುಬರುವುದು ; ಇವುಗಳಲ್ಲದೆ ಅವರ ರಚನೆ ಎನ್ನಲಾಗಿರುವ ಕೆಲವು ಬಿಡಿಶ್ಲೋಕಗಳು ಸಹ ಪ್ರಸಿದ್ಧವಾಗಿವೆ.(ವಿವರಗಳನ್ನು ನಮ್ಮ ಪ್ರಕಾಶನದ ಸರ್ವಮೂಲಸೌರಭ-(೨೦೧೦)-ದಲ್ಲಿ ಕೊಡಲಾಗಿದೆ).

೨. ಇದು ಸರ್ವಮೂಲಗ್ರಂಥಗಳಲ್ಲಿ ಸೇರಿಲ್ಲ; ಅವರ ಬಾಲ್ಯದ ರಚನೆ ಎಂಬುದಾಗಿ ಪ್ರತೀತಿ.

ನಿರ್ಣಯ, ಭಾಗವತಕ್ಕೆ ತಾತ್ಪರ್ಯನಿರ್ಣಯಗಳನ್ನೂ ಬರೆದಿರುವರು; ಹೀಗೆ ಅತ್ಯಂತ ವ್ಯಾಪಕವಾಗಿ ಗ್ರಂಥಗಳನ್ನು ರಚಿಸಿದ ಏಕಮಾತ್ರ ಮತಾಚಾರ್ಯರೂ ಇವರು.

ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ ಮತ್ತು ಜಯಂತೀನಿರ್ಣಯ ಆಚಾರಗ್ರಂಥಗಳಾಗಿದ್ದರೆ, ಯತಿಪ್ರಣವಕಲ್ಪವು ಸಂನ್ಯಾಸದೀಕ್ಷೆಯ ವಿಧಿವಿಧಾನಗಳನ್ನು ನಿರೂಪಿಸುವ ಕೃತಿ. ತಂತ್ರಸಾರಸಂಗ್ರಹದಲ್ಲಿ ಮಂತ್ರ, ಪೂಜೆ, ಪ್ರತಿಷ್ಠೆ ದೇಗುಲನಿರ್ಮಾಣ, ಯಂತ್ರ ಮೊದಲಾಗಿ ಸಕಲ ಉಪಾಸನೆಯ ರಹಸ್ಯಗಳು ತುಂಬಿವೆ. ದ್ವಾದಶಸ್ತೋತ್ರ, ನಖಸ್ತುತಿ ಮತ್ತು ಕಂದುಕಸ್ತುತಿಗಳು ಅಪೂರ್ವಸ್ತೋತ್ರಗಳಾಗಿ ದಾಖಲೆಯಾಗಿವೆ. ಅಧ್ಯಾತ್ಮದ ಸೀಮಾಪುರುಷರೊಬ್ಬರಿಂದ ರಚಿತವಾಗಿರುವ ಅಪೂರ್ವಚಿತ್ರಕಾವ್ಯವೆಂಬುದು ಅವರ ಯಮಕಭಾರತದ ವೈಶಿಷ್ಟ್ಯ. ಅವರ ಅನುವ್ಯಾಖ್ಯಾನ ಇಡೀ ಸೂತ್ರಸಾಹಿತ್ಯದ ಮೇಲೆ ಇರುವ ಏಕಮಾತ್ರ ಶ್ಲೋಕರೂಪ ಭಾಷ್ಯ(ಕುಮಾರಿಲಭಟ್ಟರ ಶ್ಲೋಕವಾರ್ತಿಕವು ಶ್ಲೋಕರೂಪದ ಕೃತಿಯಾದರೂ ಅದು ಭಾಷ್ಯವಾಗಿರದೆ ಶಾಬರಭಾಷ್ಯಕ್ಕೆ ಬರೆಯಲ್ಪಟ್ಟ ಟೀಕೆಯಾಗಿದೆ). ಗಾನಶಾಸ್ತ್ರವನ್ನು ಕುರಿತು ಸಹ ಅವರು ಗ್ರಂಥವೊಂದನ್ನು ರಚಿಸಿದ ವಿವರ ಸುಮಧ್ವವಿಜಯಭಾವಪ್ರಕಾಶಿಕೆಯಲ್ಲಿದೆ.

ಅಪೂರ್ವವಾದ ಗ್ರಂಥಭಂಡಾರವನ್ನು ಹೊಂದಿದ್ದ ಮತ್ತೊಂದು ದಾಖಲೆಯೂ ಶ್ರೀಮಧ್ವಾಚಾರ್ಯರದೇ ಆಗಿದೆ; ಅದು ಪ್ರತಿವಾದಿಗಳೆಲ್ಲರ ಹೃದಯದಲ್ಲಿ ಅಪಾರಭೀತಿ ಹುಟ್ಟಿಸುವಷ್ಟು ಸಮಗ್ರವಾಗಿತ್ತು. ಅದನ್ನು ಕುವಾದಿಗಳು ಕುತಂತ್ರದಿಂದ ಅಪಹರಿಸಿದಾಗ, ಅದನ್ನು ಮರಳಿ ಪಡೆದ ರೀತಿಯಂತೆ ಅವರು ಆಗ ವರ್ತಿಸಿದ ಪ್ರಶಾಂತವಾದ ರೀತಿಯೂ ಆದರ್ಶಪ್ರಾಯವಾದುದು. ಆ ಗ್ರಂಥಗಳನ್ನೆಲ್ಲ ತಾಮ್ರದ ತಗಡಿನಲ್ಲಿ ಬರೆಸಿ ಅದನ್ನು ಕಟ್ಟಿಲ[೧] ಎಂಬಲ್ಲಿ ಭೂಗತ ಮಾಡಿ ಸುರಕ್ಷಿತವಾಗಿರಿಸಿರುವ ಅವರ ಮತ್ತೊಂದು ಯೋಜನೆಯು ಅದ್ಭುತಸಾಧನೆಗಳಿಗೆ ಹೆಸರಾಗಿರುವ ಇಂದಿನ ಕಾಲದಲ್ಲೂ ಸಹ ಸುಲಭಸಾಧ್ಯವಲ್ಲದ ಅಪೂರ್ವಯೋಜನೆ.

## ಶ್ರೀಮಧ್ವಾಚಾರ್ಯರ ಪರಂಪರೆ

'ಕರ್ನಾಟಕಪೂರ್ವಸಜ್ಜನಗುರು' ಎಂಬ ಖ್ಯಾತಿಯ ಶ್ರೀಪದ್ಮನಾಭತೀರ್ಥರು, ಕಳಿಂಗದೇಶವನ್ನು ಹನ್ನೆರಡು ವರ್ಷಗಳ ಕಾಲ ಪಾಲಿಸಿದ ಶ್ರೀನರಹರಿತೀರ್ಥರು, ವಾಯುಸ್ತುತಿ ತತ್ತ್ವಪ್ರದೀಪಗಳ ಶ್ರೀತ್ರಿವಿಕ್ರಮಪಂಡಿತಾಚಾರ್ಯರು, ಅನುವ್ಯಾಖ್ಯಾನ ಸಂಬಂಧದೀಪಿಕೆಯ ಶ್ರೀಶಂಕರಪಂಡಿತಾಚಾರ್ಯರು, ಸುಮಧ್ವವಿಜಯದ ಶ್ರೀನಾರಾಯಣಪಂಡಿತಾಚಾರ್ಯರು, ಆನಂದಮಾಲೆಯ ಶ್ರೀವಾಮನಪಂಡಿತಾಚಾರ್ಯರು ಮೊದಲಾದ ಮಹಾನುಭಾವರು ಶ್ರೀಮದಾಚಾರ್ಯರ ಗ್ರಂಥಗಳ ಪ್ರಾಚೀನ ಟೀಕಾಕಾರರಾಗಿದ್ದರೆ, ನ್ಯಾಯಸುಧೆಯಂತಹ ಮೇರುಕೃತಿಯನ್ನಿತ್ತ ಸರ್ವಜ್ಞಕಲ್ಪ ಶ್ರೀಜಯತೀರ್ಥರು ಅವರ ಗ್ರಂಥಗಳ ಸರ್ವಮಾನ್ಯ ಟೀಕಾಕಾರರಾಗಿರುವರು. ವಾಗ್ವಜ್ರ ಕೃತಿಯ ಶ್ರೀಶ್ರೀಪಾದ–

---

೧. ಯಸ್ಮಾತ್ ಸರ್ವಹೃದಿಸ್ಥಸಂಶಯಚಯಂ ಜ್ಞಾತ್ವಾ ಯತೀಶೋ ಮರುತ್
ಸದ್ಧರ್ಮಾಂಶ್ಚ ತಿಲಾಂಶತೋಽಪ್ಯಪದಿಶೇತ್ಯಾಜ್ಞಾನಿಬಂಧಂ ವ್ಯಧಾತ್ ।
ತಸ್ಮಾತ್ ಸೇತುತಿಲೇತಿ ಲೋಕಗದಿತಂ ಕ್ಷೇತ್ರಂ ಸುತೀರ್ಥಾತ್ಮಕಂ
ಸ್ಕಂದಾದ್ರೇರ್ಬಿಲತೋಽವತೀರ್ಣಯತಿನಾ ಸಂಶೋಧ್ಯತೇ ಕಾಲತಃ ॥
–ಶ್ರೀಹೃಷೀಕೇಶತೀರ್ಥರು (ಸಂಪ್ರದಾಯಪದ್ಧತಿ, ಶ್ಲೋ.೨೨)

ರಾಜರು, ವ್ಯಾಸತ್ರಯಗಳ ಶ್ರೀವ್ಯಾಸರಾಜರು, ಅಭಿನವ ಆನಂದತೀರ್ಥರೆನ್ನಿಸಿದ ಶ್ರೀವಾದಿರಾಜರು, ಶ್ರೀಮದಾಚಾರ್ಯರ ಪರಂಪರೆಯಲ್ಲಿ ಬಂದ 'ವಾದಗ್ರಂಥ'ಕಾರರಾಗಿರುವರು. ಭಾವಬೋಧಗಳ ಶ್ರೀರಘೂತ್ತಮತೀರ್ಥರು, ಚತುರಧಿಕಶತ ಗ್ರಂಥರತ್ನಪ್ರಣೇತೃಗಳಾದ ಶ್ರೀವಿಜಯೀಂದ್ರತೀರ್ಥರು, ಕಲ್ಪವೃಕ್ಷ ಕಾಮಧೇನುವೆನ್ನಿಸಿದ ಅರ್ಥಿಗಳ ಪಾಲಿನ ಶ್ರೀರಾಘವೇಂದ್ರತೀರ್ಥರು, ಸುಧಾ-ಭಾಗವತ ಟಿಪ್ಪಣಿಗಳ ಶ್ರೀಯದುಪತ್ಯಾಚಾರ್ಯರು, ಮೊದಲಾದ ವಿದ್ವದ್ವಿಭೂತಿಗಳು ಇವರ ಗ್ರಂಥಗಳ ಪ್ರಮುಖ ಟಿಪ್ಪಣೀಕಾರರೆನ್ನಿಸಿರುವರು.

## ಮಹಾಭಾರತದ ಹಿರಿಮೆ

ಮಹಾಭಾರತ ಮತ್ತು ರಾಮಾಯಣಗಳು ವೈದಿಕ ಸಂಸ್ಕೃತಿಯ ವಿಶ್ವರೂಪವನ್ನು ದರ್ಶನ ಮಾಡಿಸುವ ಮಹೋನ್ನತ ಕೃತಿಗಳು. ರೋಚಕ ಕಥೆಯಿಂದಾಗಿ ಪಾಮರರಿಗೂ, ಉದ್ಬೋಧಕ ತತ್ತ್ವಗಳಿಂದಾಗಿ ಪಂಡಿತರಿಗೂ ಸಮನಾಗಿಯೇ ಮೆಚ್ಚುಗೆಯಾಗುವ ವಿಶಿಷ್ಟ ರಚನಾಸಂವಿಧಾನವನ್ನು ಇವು ಒಳಗೊಂಡಿವೆ. ಮಹಾಭಾರತದ ವ್ಯಾಪ್ತಿಯಂತು ಅನುಪಮ. ವಿಶ್ವಸಾಹಿತ್ಯದಲ್ಲೇ ಅದ್ಭುತ-ವೆನ್ನಿಸುವ ಗಾತ್ರ ಮತ್ತು ಸತ್ವಗಳಿಂದಾಗಿ ಮಹಾಭಾರತ ತಾತ್ತ್ವಿಕವಿಶ್ವಕೋಶವಾಗಿ ಮಾನ್ಯವಾಗಿದೆ. ತನ್ನ ಅರ್ಥವಿಸ್ತಾರದಿಂದಾಗಿ ಎಂದಿಗೂ ಒಗಟಾಗಿಯೇ ಉಳಿಯುವ ವೈಶಿಷ್ಟ್ಯ ಮಹಾಭಾರತದ್ದು. ವಿಶ್ವದ ಸಾರ್ವಭೌಮಕೃತಿ ಎಂಬುದು ಇದರ ಅನನ್ಯ ಮಹತಿ.

ಶ್ರೀಮನ್ಮಹಾಭಾರತವು ಗ್ರಂಥರಾಜ. ವಾಙ್ಮಯಪ್ರಪಂಚ ಕಂಡ ಮೇರುಕೃತಿ. ವಿಶ್ವಸಾಹಿತ್ಯ ಕಂಡ ಪ್ರಪ್ರಥಮ ಮಹಾಪ್ರಮೇಯ ಕೋಶ. ಸಕಲಪುರುಷಾರ್ಥಕೋಶ. ಇದರಲ್ಲಿ ಏನಿದೆ ಎನ್ನುವಂತಿಲ್ಲ, ಇದರಲ್ಲಿ ಇಲ್ಲದ್ದೇ ಇಲ್ಲ, ಬೇರೆಡೆ ಇರುವುದೆಲ್ಲಾ ಇಲ್ಲಿ ಬಂದಿರುವುದೇ. ಇದರಲ್ಲಿ ಇಲ್ಲದ್ದು ಮಾತ್ರ ಬೇರೆಲ್ಲೂ ಇಲ್ಲವೇ ಇಲ್ಲ ಎಂಬುದು ಇದರ ಅನುಪಮ ಹಿರಿಮೆ. ಇದು ಅತ್ಯಂತ ರೋಚಕವಾದ ಜಗತ್ತಿನ ದಾಖಲೆಯ ನೀಳ್ಗತೆ ಒಂದೆಡೆಯಾದರೆ, ಮತ್ತೊಂದೆಡೆ ಪ್ರತಿ ಘಟ್ಟದಲ್ಲೂ ರೋಮಾಂಚನ ಹುಟ್ಟಿಸುವ ಬಗೆ ಬಗೆಯ ಪ್ರಸಂಗಗಳು. ಪಾತ್ರವೈವಿಧ್ಯಕ್ಕಂತೂ ಇದಕ್ಕೆ ಇದೇ ಸಾಟಿ. ಮನುಷ್ಯರ ಸಕಲ ಬಗೆಯ ಸ್ವಭಾವವೈಚಿತ್ರ್ಯವನ್ನು ತೆರೆದಿಡುವ ವಿಶ್ವಕೋಶ. ವರ್ಣನೆಗಳಿಗಂತೂ ತವನಿಧಿ. ಶಾಸ್ತ್ರತತ್ತ್ವಗಳ ಪ್ರಯೋಗಾಲಯ. ಅದರಲ್ಲೇ ಉಲ್ಲೇಖಿಸಲ್ಪಟ್ಟಿರುವಂತೆ ಇದು 'ಜ್ಞಾನಮಯ-ಪ್ರದೀಪ'. ಮಹಾಭಾರತದ ಪಾಠಪ್ರವಚನ ಸಮಾಜವನ್ನು ಭಗವನ್ಮುಖವನ್ನಾಗಿಸುವ ಮಂತ್ರದಂಡ ಎಂಬ ಮಾತು ಶ್ರೀಮದ್ಭಾಗವತದಲ್ಲಿದೆ. ಇದರ ಕಥೆ ಹಾಗೂ ಪಾತ್ರಗಳ ಸ್ವಭಾವಗಳು ಜನರ ಮನೆಮಾತಾಗಿ ನುಡಿಗಟ್ಟುಗಳಂತೆ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿ ಬಳಕೆಯಲ್ಲಿವೆ. ಮಹಾ-ಭಾರತವನ್ನು ಕೇಳದ ಜನರಿಲ್ಲ, ಅದನ್ನು ಪೂರ್ಣವಾಗಿ ತಿಳಿದ ಜನರೂ ಇಲ್ಲ. ಶ್ರೀವೇದವ್ಯಾಸರು ಮಹಾಭಾರತವನ್ನು ರಚಿಸಿದವರು ಮಾತ್ರವಲ್ಲದೆ, ಅದರ ಪ್ರಧಾನ ಪಾತ್ರಧಾರಿಗಳೂ ಆಗಿರುವರು. ಕುರು-ಪಾಂಡವರ ಜನಕರಾದ ಧೃತರಾಷ್ಟ್ರ ಪಾಂಡು ವಿದುರರಿಗೆ ಜನ್ಮವಿತ್ತವರೇ ಇವರು. ಅಂದರೆ ಕೌರವ-ಪಾಂಡವರು ಇವರ ಮೊಮ್ಮಕ್ಕಳು. ಆದ್ದರಿಂದ ಮಹಾಭಾರತ ತಾತ ಬರೆದ ಮಕ್ಕಳ, ಮೊಮ್ಮಕ್ಕಳ ಕಥೆ. ಮಹಾಭಾರತದ ಉದ್ದಕ್ಕೂ ಎಲ್ಲೆಡೆಯೂ ಕೃಷ್ಣನಂತೆ ಕಾಣಿಸಿಕೊಳ್ಳುವ ಮತ್ತೊಂದು ಪ್ರಮುಖ ಪಾತ್ರ ಇವರದು.

ಶ್ರೀವ್ಯಾಸರ ಆದೇಶದಂತೆ ಒಮ್ಮೆ ದೇವತೆಗಳು ಒಂದೆಡೆ ಮಹಾಭಾರತವನ್ನು, ಮತ್ತೊಂದೆಡೆ ವೇದಾದಿಶಾಸ್ತ್ರಗಳನ್ನು ಮಣೆಗಳಲ್ಲಿ ಆವಾಹಿಸಿ, ತೂಗಿ ಪರೀಕ್ಷಿಸಿದರು[೧]. ಮಹಾಭಾರತದ ಭಾರ ಇತರ ಎಲ್ಲ ಶಾಸ್ತ್ರಗಳ ಭಾರವನ್ನೂ ಮೀರಿಸಿತ್ತು. ಅದೇ ಆ ತುಲಾಭಾರದ ಸಂದೇಶವೂ ಆಗಿತ್ತು. ಮಹಾಭಾರದಿಂದ ಕೂಡಿದ ಅದು 'ಮಹಾಭಾರತ'ವಾಯಿತು. ಆ ಭಾರ ನಿಜವಾದ ಅರ್ಥದಲ್ಲಿ ಸಾರವೇ ಆಗಿದ್ದಿತು. ಮಹಾಭಾರತ ಅತುಲಕೃತಿ ಎಂಬದೇ ಆ ತುಲಾಭಾರದ ಫಲಶ್ರುತಿ-ಯಾಯಿತು.

ಗೌರೀಶಂಕರ ವಿಶ್ವದ ಅತ್ಯುನ್ನತ ಪರ್ವತಶಿಖರ; ಮಹಾಭಾರತ ಜಗತ್ತು ಕಂಡ ಮಹೋನ್ನತ ಕೃತಿ. ಇದು ಹದಿನೆಂಟು ಪರ್ವಗಳ ಅಪೂರ್ವಪರ್ವತ. ಇವೆರಡೂ ಭರತಖಂಡದ ಹಿರಿಮೆ. ಒಂದು ಭೌತಿಕವಾದರೆ, ಮತ್ತೊಂದು ಆಧ್ಯಾತ್ಮಿಕ ಎಂಬುದು ವಿಶೇಷ. ಗೌರೀಶಂಕರವನ್ನು ಏರಲು ದೇಹದಾರ್ಢ್ಯ, ಇಚ್ಛಾಶಕ್ತಿಗಳು ಪ್ರಧಾನ ಅಗತ್ಯ; ಆದರೆ ಮಹಾಭಾರತವನ್ನು ಅರಿಯಲು ಅಪ್ರತಿಮವಾದ ವಿದ್ವತ್ತು, ಅಗಾಧವಾದ ತಾತ್ತ್ವಿಕ ಪರಿಕಲ್ಪನೆ ಅತ್ಯಗತ್ಯ.

ಮಹಾಭಾರತವು ಅದ್ವಿತೀಯವಾದ ಅದ್ಭುತ ಕಥಾನಕ. ಜಗತ್ತು ಕಂಡ ಅನುಪಮ ಇತಿಹಾಸ – **'ಜಯೋ ನಾಮೇತಿಹಾಸೋಽಯಮ್'**. ಇಂತಹ ಸುದೀರ್ಘಕಥಾನಕದ ಮತ್ತೊಂದು ಕೃತಿ ಜಗತ್ತಿನಲ್ಲಿಲ್ಲ. ಸಂಕೀರ್ಣತೆಗಂತೂ ಅದಕ್ಕೆ ಅದೇ ಸಾಟಿ. ಕಥೆಯಂತೆಯೇ ಕಥನದ ರೀತಿಯೂ ಅನ್ಯಾದೃಶ. ಜಗತ್ತಿನ ಎಲ್ಲ ಕಾವ್ಯಗಳನ್ನೂ ಮೆಟ್ಟಿ ನಿಂತ ಕೃತಿ. ಕಾವ್ಯಸರಸ್ವತಿಗೆ ಜನ್ಮ ನೀಡುವ ಮಹಾಶಿಖರ. ಕವಿಪಕ್ಷಿಗಳಿಗೆ ಆಶ್ರಯ ನೀಡುವ ಕಾವ್ಯಕಲ್ಪವೃಕ್ಷ. ತನ್ನ ವೈವಿಧ್ಯದಿಂದಾಗಿಯೇ ಸಕಲರಿಗೂ ಮೆಚ್ಚುಗೆಯಾಗುವ ಅನುಪಮಕೃತಿ. ಅಧ್ಯಾತ್ಮ ಅದರ ಹೃದಯ. ಇತರ ಶಾಸ್ತ್ರಗಳು ಅದರ ಅಂಗಗಳಷ್ಟೆ ಅದಕ್ಕೆಂದೇ ಅದು ವಿಶ್ವದ ಅದ್ವಿತೀಯಕೃತಿ[೨].

ಮಹಾಭಾರತವು ಹದಿನೆಂಟು 'ಪರ್ವ'ಗಳ 'ಪರ್ವತ'ವಾದರೆ, ಗೀತೆಯು ಅದರ ಗೌರೀಶಂಕರ; ವಿಷ್ಣುಸಹಸ್ರನಾಮ ಅದರ ಅವಳಿಶಿಖರ; ಗೀತೆಯು ಯುದ್ಧಕ್ಕಿಂತ ಮುನ್ನ ಭೀಷ್ಮಪರ್ವದಲ್ಲಿ ಬಂದರೆ, ವಿಷ್ಣುಸಹಸ್ರನಾಮವು ಯುದ್ಧ ಮುಗಿದ ಮೇಲೆ ಭೀಷ್ಮರ ಬಾಯಿಂದ ಬಂದಿದೆ. ಅವುಗಳ ಅರಿವು ಎಂದರೆ ಅಜ್ಞಾನದ ಅಳಿವು; ಬಾಳಿನ ಉಳಿವು. ಶಾಸ್ತ್ರಗಳು ಸಾರಿವೆ – 'ವೇದಾಧಿಕಾರಿಗಳಿಗೆ ಮಹಾಭಾರತ 'ವೇದಾರ್ಥ'ವಾದರೆ, ಉಳಿದವರಿಗೆ ಅದೇ 'ವೇದ'; ಎಲ್ಲರಿಗೂ ಅದರಿಂದಲೇ ತತ್ತ್ವಜ್ಞಾನದ ಬೋಧ. ಭಗವದ್ಗೀತೆಯು ಜಗನ್ಮಾನ್ಯವಾದ ಅಮರಕೃತಿ ; ಭಗವಂತನನ್ನು ಒಪ್ಪುವ ಎಲ್ಲರಿಗೂ ಅತ್ಯಂತಪ್ರಿಯವಾದ ಗ್ರಂಥ; ಗಾತ್ರದಲ್ಲಿ ಅದರಂತಹ ಪುಟ್ಟ ತಾತ್ತ್ವಿಕಕೃತಿ ಜಗತ್ತಿನಲ್ಲೇ ಮತ್ತೊಂದಿಲ್ಲ ; ಅದರಂತೆ ಹಿರಿಮೆಯಲ್ಲಿ ಅದನ್ನು ಮೀರುವ ಗ್ರಂಥ ಕೂಡ. ಮಹಾಭಾರತವು ಮೂಲತಃ ಕೃಷ್ಣನ ಕಥೆಯಾದರೆ, ಗೀತೆ ಆ ಕೃಷ್ಣನ ಉಪದೇಶದ ಸಾರವಾಗಿದೆ; ಗೀತೆಯು ಮಹಾಭಾರತದ 'ದರ್ಶನ'ವಾದರೆ, ಮಹಾಭಾರತವು ಗೀತಾತತ್ತ್ವದ 'ನಿದರ್ಶನ'ವಾಗಿದೆ.

---

೧. ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ ।
ದೇವೈರ್ಬ್ರಹ್ಮಾದಿಭಿಃ ಸರ್ವೈಃ ಋಷಿಭಿಶ್ಚ ಸಮನ್ವಿತೈಃ ॥ –ಮ.ಭಾ.ತಾ.ನಿ (೨/೧೦)

೨. ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥ –ಮಹಾಭಾರತ(೧೮/೫/೫೦)

ಗೀತೆಯು ವಾಮನನಾದರೆ ಮಹಾಭಾರತವು ಅದರ ತ್ರಿವಿಕ್ರಮರೂಪವಾಗಿದೆ; ವಾಮನ-ತ್ರಿವಿಕ್ರಮ ಎರಡೂ ಮಹಾವಿಷ್ಣುವಿನ ಎರಡು ರೂಪಗಳೇ ಆಗಿವೆ.

ಜಗತ್ತಿನ ಬೇರಾವ ಕೃತಿಯೂ ಅದರಲ್ಲಿನ ಪಾತ್ರಗಳ ಮೂಲರೂಪದಿಂದ ಪ್ರಾರಂಭಿಸಿ ಮರು-ಜನ್ಮಗಳವರೆಗಿನ ಹಾಗೂ ಅವತಾರ ಸಮಾಪ್ತಿಯವರೆಗಿನ ಮಾಹಿತಿಯನ್ನು ನೀಡುವ ವಿಶೇಷತೆ-ಯನ್ನು ಹೊಂದಿಲ್ಲ. ಆದರೆ, ಮಹಾಭಾರತ ಹಾಗಲ್ಲ; ಆದಿಪರ್ವದಿಂದ ಸ್ವರ್ಗಾರೋಹಣದವರೆಗೆ ಸಕಲಪಾತ್ರಗಳ ಪೂರ್ವಾಪರಗಳನ್ನು ಸಮಗ್ರವಾಗಿ ನೀಡುವ ಅತ್ಯಪೂರ್ವವಾದ ಕೃತಿ. ಇದು ಈ ಮೂಲಕ ಹುಟ್ಟಿನ ಮುನ್ನ ಮತ್ತು ಹುಟ್ಟಿನ ಆಚೆಯ ಪ್ರಪಂಚವನ್ನು ತೆರೆದಿಡುವ ಆಧ್ಯಾತ್ಮಿಕ ಶಾಸ್ತ್ರವಾಗಿ ಮಾನ್ಯವಾಗುತ್ತದೆ. ಅದರಂತೆ ದೇವತಾತಾರತಮ್ಯ, ದೇವ-ದೈತ್ಯರ ವಿಭಾಗ, ಪುಣ್ಯ-ಪಾಪಗಳ ನಿಯತ ಫಲ ಮೊದಲಾದ ಸಕಲಪ್ರಮೇಯಗಳನ್ನೂ ಸಹ ಮಾರ್ಮಿಕವಾಗಿ ಚಿತ್ರಿಸುತ್ತದೆ. ಅದರಿಂದಾಗಿ '**ನ ಭಾರತಸಮಂ ಶಾಸ್ತ್ರಮ್**' ಎಂಬ ಶಾಸ್ತ್ರವಾಣಿ ಅದಕ್ಕೆ ಸೂಕ್ತ ಗೌರವವಾಗಿದೆ. ಮಹಾಭಾರತದ ಸರ್ವಶಾಸ್ತ್ರೋತ್ತಮತ್ತ್ವವನ್ನು ಶ್ರೀಮದಾಚಾರ್ಯರು ತಮ್ಮ ಗೀತಾಭಾಷ್ಯಾದಿ ಇತರ ಕೃತಿಗಳಲ್ಲೂ ನಿರೂಪಿಸಿರುವರು.

ಮಹಾಭಾರತದ ಮತ್ತೊಂದು ಹೆಸರು ಜಯ ; ಅದು ಜಯಪ್ರದವಾದ ಗ್ರಂಥ ಎಂದು ಅದರ ಭಾವ. ಜಯ ಎಂಬುದಕ್ಕೆ ಹದಿನೆಂಟು ಎಂದರ್ಥ. (ಜ=೮, ಯ=೧) ಹದಿನೆಂಟು ಪರ್ವಗಳ ಕೃತಿಯಾಗಿ ಹದಿನೆಂಟು ಮಹಾತತ್ತ್ವಗಳ ವೈಭವವನ್ನು ಸಾರುವ ಕೃತಿ ಎಂದು ಅದರ ಭಾವ. ಕೃಷ್ಣದ್ವೈಪಾಯನರೂಪದ ಭಗವಂತನಿಂದ ರಚಿತವಾದ ಕಾರ್ಷ್ಣವೇದ ಎಂದು ಅದಕ್ಕೆ ವಿಶಿಷ್ಟ ಮನ್ನಣೆ; ಪಂಚಮವೇದ ಎಂಬ ಅಸಾಧಾರಣವಾದ ಹಿರಿಮೆ. ಅದರ ಶ್ರವಣ ಪಠನಗಳು ಪರಮಮಂಗಳ ಎಂಬುದು ಅದರ ಮುಖ್ಯ ಫಲಶ್ರುತಿ.

## [೧]ಮಹಾಭಾರತತಾತ್ಪರ್ಯನಿರ್ಣಯ

ಮಹಾಭಾರತತಾತ್ಪರ್ಯನಿರ್ಣಯವು ಶ್ರೀಮದಾಚಾರ್ಯರ ಕೃತಿಗಳಲ್ಲೆಲ್ಲಾ ಗಾತ್ರದಲ್ಲಿ ಅತ್ಯಂತ ಹಿರಿದಾದ ಕೃತಿ. ಐದುಸಾವಿರ ಶ್ಲೋಕಗಳಿಗಿಂತಲೂ ಹೆಚ್ಚಿನ ವ್ಯಾಪ್ತಿಯ ಅಂತಹ ಶ್ಲೋಕ-ರೂಪದ ಕೃತಿ ಸಮಗ್ರ ಸಂಸ್ಕೃತಸಾಹಿತ್ಯದಲ್ಲೇ ವಿರಳ. ಮಹಾಭಾರತ, ರಾಮಾಯಣಗಳ ಸಮಗ್ರ ವಿಶ್ಲೇಷಣೆಯನ್ನು ಒಟ್ಟು ಮೂವತ್ತೆರಡು ಅಧ್ಯಾಯಗಳಲ್ಲಿ ಈ ಕೃತಿ ಒದಗಿಸುವುದು.

ಮೊದಲ ಅಧ್ಯಾಯ ಸಕಲಶಾಸ್ತ್ರಪ್ರಮೇಯಗಳ ಸಂಕಲನವಾದ 'ಸರ್ವಶಾಸ್ತ್ರಾರ್ಥನಿರ್ಣಯ'. ಎರಡನೆಯದು ಅದಕ್ಕೆ ಸಂವಾದಿಯಾಗಿ ಮಹಾಭಾರತದ ವಾಕ್ಯಗಳನ್ನು ಉದ್ಧರಿಸಿ ಕೊಡುವ 'ಸುವಾಕ್ಯೋದ್ಧಾರ'. ಮೂರನೆಯದು ಭಗವಂತನ ವರಾಹಾದಿ ಅವತಾರಗಳ ವೈಭವವನ್ನೂ, ಶ್ರೀರಾಮಪ್ರಾದುರ್ಭಾವವನ್ನೂ ನಿರೂಪಿಸುವ 'ಸರ್ಗಾನುಸರ್ಗಲಯಪ್ರಾದುರ್ಭಾವನಿರ್ಣಯ'. ಮೂರನೆಯ ಅಧ್ಯಾಯದಲ್ಲಿ ಪ್ರಾರಂಭವಾಗುವ ರಾಮಕಥಾನಿರ್ಣಯ ನಾಲ್ಕನೆಯದರಿಂದ ಮುಂದುವರೆದು ಒಂಭತ್ತನೆಯ ಅಧ್ಯಾಯದಲ್ಲಿ ಮುಕ್ತಾಯವಾಗುತ್ತದೆ. ಹತ್ತನೆಯದು ಮಹಾ-

---

೧. ಮಹಾಭಾರತತಾತ್ಪರ್ಯನಿರ್ಣಯವು ಸಮಗ್ರವಾಗಿ ಅನುವಾದ ವಿವರಣೆಗಳ ಸಮೇತ (೫ ಸಂಪುಟಗಳಲ್ಲಿ) ನಮ್ಮ ಪ್ರತಿಷ್ಠಾನದಿಂದ ಪ್ರಕಾಶಿತವಾಗಿದೆ(೨೦೦೪); ಅದರ ದ್ವಿತೀಯಾವೃತ್ತಿಯು ಎಂಟು ಸಂಪುಟಗಳಲ್ಲಿ ಇಷ್ಟರಲ್ಲಿಯೇ ಪ್ರಕಾಶನಗೊಳ್ಳಲಿದೆ.

ಭಾರತದ ಕರ್ತೃವಾದ ವೇದವ್ಯಾಸರ ಅವತಾರದ ಬಗ್ಗೆ ಸಮಗ್ರ ಮಾಹಿತಿಗಳನ್ನು ಒದಗಿಸುವ ಮಹತ್ತ್ವದ ಅಧ್ಯಾಯ. ಹನ್ನೊಂದರಿಂದ ಮೂವತ್ತೆರಡರವರೆಗಿನ ಇತರ ಅಧ್ಯಾಯಗಳೆಲ್ಲ ಮಹಾಭಾರತನಿರ್ಣಯಕ್ಕೆ ಮೀಸಲು - ಇವಿಷ್ಟು ಈ ಕೃತಿಯ ಸ್ಥೂಲ ಸ್ವರೂಪ.

ಲಕ್ಷಶ್ಲೋಕಗಳ ವ್ಯಾಪ್ತಿಯ ಮಹಾಭಾರತದ ಮೂಲಕಥೆಯನ್ನು ಚೊಕ್ಕವಾಗಿ ಸಮಗ್ರವಾಗಿ ನಿರೂಪಿಸುವುದು ಇದರ ಮೊದಲ ಸಾಧನೆ. ಈ ಒಂದನ್ನು ಸಾಧಿಸುವುದರಲ್ಲಿ ಸಹ ಜಗತ್ತಿನ ಬೇರಾವ ಗ್ರಂಥವೂ ಇದರಷ್ಟು ಯಶಸ್ವಿಯಾಗಿಲ್ಲ. ಇನ್ನು ಅನಂತಭಟ್ಟ(ಸು. ೧೭೦೦)ನ ಚಂಪೂಭಾರತ, ವಿದರ್ಭರಾಜ ಭೋಜನ ಚಂಪೂರಾಮಾಯಣ ಮೊದಲಾದ ಮಹಾಭಾರತ, ರಾಮಾಯಣ ಕಥಾಸಂಗ್ರಹರೂಪವಾದ ಇನ್ನು ಕೆಲವು ಕೃತಿಗಳು ಅಸಮಗ್ರವಾಗಿ ಕೇವಲ ಕಥಾಸಂಗ್ರಹಕ್ಕೆ ಮಾತ್ರ ಸೀಮಿತಗೊಂಡ ಕಾವ್ಯಕೃತಿಗಳು. ಆಚಾರ್ಯ ಶ್ರೀಮಧ್ವರ ಮಹಾಭಾರತ-ತಾತ್ಪರ್ಯನಿರ್ಣಯ ಈ ದೃಷ್ಟಿಯಲ್ಲಿ ಅದ್ವಿತೀಯ ಕೃತಿ. ಎಂದರೆ ರಾಮಾಯಣ, ಮಹಾಭಾರತಗಳ ಮೇಲೆ ವಿಮರ್ಶಾತ್ಮಕವಾದಂತಹ ಸಮಗ್ರಕೃತಿ. ಇದನ್ನು ಅವರು ರಚಿಸಿದ್ದು ಸ್ವತಃ ಮೂಲಕೃತಿಕರ್ತೃಗಳಾದ ಶ್ರೀವೇದವ್ಯಾಸರ ಆದೇಶದಂತೆ; ಪ್ರಥಮಬಾರಿಗೆ ಉತ್ತರಬದರಿಯಲ್ಲಿ ಅವರು ಶ್ರೀವೇದವ್ಯಾಸ-ನಾರಾಯಣರನ್ನು ಸಂದರ್ಶಿಸಿದಾಗ ಅವರು ಇವರಿಗೆ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಲು ಆದೇಶಿಸಿದರೆ, ದ್ವಿತೀಯಬಾರಿಯ ಬದರೀಯಾತ್ರೆಯಲ್ಲಿ ಅವರು ಬ್ರಹ್ಮಸೂತ್ರಭಾಷ್ಯವನ್ನು ಸಮರ್ಪಿಸಿದಾಗ, ಅವರು ಮಹಾಭಾರತಕ್ಕೆ ತಾತ್ಪರ್ಯನಿರ್ಣಯವೊಂದನ್ನು ರಚಿಸಲು ಆದೇಶ ನೀಡಿದರು. ಅದರ ಫಲವಾಗಿ ರಚಿತವಾದ ಕೃತಿ ಮಹಾಭಾರತತಾತ್ಪರ್ಯ-ನಿರ್ಣಯ. ಈ ವಿವರಗಳನ್ನೆಲ್ಲ ಸುಮಧ್ವವಿಜಯ ನೀಡಿದೆ. [೧]ಸ್ವತಃ ಶ್ರೀಮದಾಚಾರ್ಯರೇ ಈ

---

೧. ಇತ್ಯೃಗ್ಯಜುಸ್ಸಾಮಾಥರ್ವಪಂಚರಾತ್ರೇತಿಹಾಸತಃ।
ಪುರಾಣೇಭ್ಯಸ್ತಥಾಽನ್ಯೇಭ್ಯಃ ಶಾಸ್ತ್ರೇಭ್ಯೋ ನಿರ್ಣಯಃ ಕೃತಃ॥
ವಿಷ್ಣ್ವಾಜ್ಞಯೈವ ವಿದುಷಾ ತತ್ಪ್ರಸಾದಬಲೋನ್ನತೇಃ।
ಆನಂದತೀರ್ಥಮುನಿನಾ ಪೂರ್ಣಪ್ರಜ್ಞಾಭಿಧಾಯುಜಾ॥
ತಾತ್ಪರ್ಯಂ ಶಾಸ್ತ್ರಾಣಾಂ ಸರ್ವೇಷಾಮುತ್ತಮಂ ಮಯಾ ಪ್ರೋಕ್ತಮ್।
ಪ್ರಾಪ್ಯಾನುಜ್ಞಾಂ ವಿಷ್ಣೋರೇತಜ್ಜ್ಞಾತ್ವೈವ ವಿಷ್ಣುರಾಪ್ಯೋಽಸೌ॥ -ಮ.ಭಾ.ತಾ.ನಿ (೧/೧೩೫-೧೩೭)
ಆನಂದತೀರ್ಥಾಖ್ಯಮುನಿಃ ಸುಪೂರ್ಣಪ್ರಜ್ಞಾಭಿಧೋ ಗ್ರಂಥಮಿಮಂ ಚಕಾರ।
ನಾರಾಯಣೇನಾಭಿಹಿತೋ ಬದರ್ಯಾಂ ತಸ್ಯೈವ ಶಿಷ್ಯೋ ಜಗದೇಕಭರ್ತುಃ॥
ಯಸ್ತತ್ಪ್ರಸಾದಾದಖಿಲಾಂಶ್ಚ ವೇದಾನ್ ಸಪಂಚರಾತ್ರಾನ್ ಸರಹಸ್ಯಸಂಗ್ರಹಾನ್।
ವೇದೇತಿಹಾಸಾಂಶ್ಚ ಪುರಾಣಯುಕ್ತಾನ್ ಯಥಾವದನ್ಯಾ ಅಪಿ ಸರ್ವವಿದ್ಯಾಃ॥
ಸಮಸ್ತಶಾಸ್ತ್ರಾರ್ಥವಿನಿರ್ಣಯೋಽಯಂ ವಿಶೇಷತೋ ಭಾರತವರ್ತ್ಮಚಾರೀ।
ಗ್ರಂಥಃ ಕೃತೋಽಯಂ ಜಗತಾಂ ಜನಿತ್ರಂ ಹರಿಂ ಗುರುಂ ಪ್ರೀಣಯತಾಽಮುನೈವ॥
ವಿನಿರ್ಣಯೋ ನಾಸ್ಯಮುನಾ ವಿನಾ ಯದ್ವಿಪ್ರಸ್ಥಿತಾನಾಮಿಹ ಸರ್ವವಾಚಾಮ್।
ತದ್ಬ್ರಹ್ಮಸೂತ್ರಾಣಿ ಚಕಾರ ಕೃಷ್ಣೋ ವ್ಯಾಖ್ಯಾಽಥ ತೇಷಾಮಯಥಾಕೃತಾಽನ್ಯೈಃ॥
-ಮ.ಭಾ.ತಾ.ನಿ.(೩೨/೧೬೭-೧೭೦)
ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ
ಕೃತ್ವಾ ಭಾಷ್ಯಾಣಿ ಸಮ್ಯಗ್ವ್ಯತನುತ ಚ ಭವಾನ್ ಭಾರತಾರ್ಥಪ್ರಕಾಶಮ್॥-ವಾಯುಸ್ತುತಿ (ಶ್ಲೋ. ೩೯)

ಬಗ್ಗೆ ಸಾಕಷ್ಟು ಬೆಳಕು ಚೆಲ್ಲಿರುವರು. ಇದು ರಚಿತವಾದ ಸ್ಥಳ ಪ್ರಾಯಃ ಉಡುಪಿ ಎಂದು ಅಣು-ಮಧ್ವಚರಿತದಿಂದ ತಿಳಿಯುವಂತಿದೆ[1].

ಮಹಾಭಾರತ ರಚಿಸಿದ ಶ್ರೀವೇದವ್ಯಾಸರ ಆದೇಶದಿಂದಲೇ ರಚಿತವಾದ ಅನನ್ಯಕೃತಿ ಮಹಾ-ಭಾರತತಾತ್ಪರ್ಯನಿರ್ಣಯ. ಗಾತ್ರ ಹಾಗೂ ಸತ್ತ್ವ ಎರಡರಲ್ಲೂ ಮಹಾಭಾರತಕ್ಕೆ ಅತ್ಯಂತ ಅನು-ರೂಪವೆನ್ನಿಸುವ ರಚನೆ ಅದು. ಸಂಪೂರ್ಣವಾಗಿ ಮೂಲಕ್ಕೆ ನಿಷ್ಠವೆನ್ನುವುದು ಅದರ ಅನನ್ಯಮಹತ್ತ್ವ. ಅದು ಮಹಾಭಾರತದ ಪ್ರತಿಬಿಂಬವೇ ಸರಿ. ಮೂಲಕಾರರು ವೇದವ್ಯಾಸರಾದರೆ, ತಾತ್ಪರ್ಯ-ನಿರ್ಣಯ ರಚಿಸಿದ ಶ್ರೀಮಧ್ವಾಚಾರ್ಯರು ನಿಜವಾದ ಅರ್ಥದಲ್ಲಿ ಅಭಿನವವೇದವ್ಯಾಸರು.

## ಯಮಕಭಾರತ

ಯಮಕಭಾರತವು ಮಹಾಭಾರತವನ್ನು ಕುರಿತು ಶ್ರೀಮದಾಚಾರ್ಯರು ನೀಡಿರುವ ಮತ್ತೊಂದು ಕೃತಿ. ಇದೂ ಶ್ಲೋಕರೂಪದ ರಚನೆಯೇ; ಆದರೆ ಗಾತ್ರದಲ್ಲಿ ಮಹಾಭಾರತತಾತ್ಪರ್ಯ-ನಿರ್ಣಯ ಎಷ್ಟು ದೊಡ್ಡದೋ, ಇದು ಅಷ್ಟೇ ಚಿಕ್ಕದು; ಅದರ ವ್ಯಾಪ್ತಿ ಐದುಸಾವಿರ ಶ್ಲೋಕಗಳನ್ನು ಮೀರಿದ್ದರೆ, ಇದರಲ್ಲಿಯ ಶ್ಲೋಕ ಸಂಖ್ಯೆ ೮೧ ಮಾತ್ರ. ಅಷ್ಟು ವಿಸ್ತೃತಕೃತಿಯನ್ನು ನೀಡಿದ ವ್ಯಕ್ತಿಯೇ ಇಂತಹ ಸಂಕ್ಷಿಪ್ತರೂಪವನ್ನೂ ನೀಡಿರುವರು. ಇದು ಅಂತಹವರಿಗಷ್ಟೇ ಸಾಧ್ಯವಾಗುವ ಕಾರ್ಯವೂ ಹೌದು. ಒಂದರ್ಥದಲ್ಲಿ ಇದು ಅವರ ಮಹಾಭಾರತತಾತ್ಪರ್ಯನಿರ್ಣಯದ ಸಾರವಾದ ಅಣುಮಹಾಭಾರತತಾತ್ಪರ್ಯನಿರ್ಣಯ (ಭಾಷ್ಯಕ್ಕೆ ಅಣುಭಾಷ್ಯದಂತೆ); ಇನ್ನೊಂದು ಅರ್ಥದಲ್ಲಿ ಇಡೀ ಮಹಾಭಾರತದ ಸಾರವೂ ಆಗಿದೆ. ಇದರ ಮತ್ತೊಂದು ಹೆಸರು ಭಾರತತಾತ್ಪರ್ಯ ಎಂದೇ. ಹದಿನೆಂಟು ಪರ್ವಗಳ ಭಾರತವನ್ನು ಎಂಭತ್ತೊಂದು ಶ್ಲೋಕಗಳಲ್ಲಿ ಸಂಗ್ರಹಿಸಿರುವುದರಲ್ಲಿ ಸಂಖ್ಯೆಯ ಔಚಿತ್ಯವೂ ಸೇರಿದೆ. ಎಂದರೆ ೧೮ ಪರ್ವಗಳ ಅದೂ 'ಜಯ', ೮೧ ಶ್ಲೋಕಗಳ ಇದೂ 'ಜಯ'ವೇ.

ಒಮ್ಮೆ ತುಂಬಿದ ವಿದ್ವತ್ಸಭೆಯಲ್ಲಿ ಇವರಿಂದ ಎಲ್ಲ ಬಗೆಯಲ್ಲೂ ಸೋತ ವಿದ್ವಾಂಸರುಗಳು ಇವರ ಕಾವ್ಯಪ್ರತಿಭೆಯನ್ನು ತಿಳಿಯುವ ಅಭಿಲಾಷೆ ವ್ಯಕ್ತಪಡಿಸಿದಾಗ, ತತ್ಕ್ಷಣವೇ ರಚಿತವಾದ ಕೃತಿ ಇದು ಎಂಬುದಾಗಿ ಸುಮಧ್ವವಿಜಯ ಉಲ್ಲೇಖಿಸಿದೆ; ಎಂದರೆ ಆಶುಕವಿತೆಯಾಗಿ ರೂಪುಗೊಂಡ ಕೃತಿ. ಅತ್ಯಂತ ಜಟಿಲವಾದ ಯಮಕಾಲಂಕಾರದಲ್ಲಿ ಸ್ಫುರಿಸಿ ಬಂದ ಕಾರಣದಿಂದ ಇದು ಯಮಕಭಾರತ. ಯಮಕದ ಅನೇಕ ಪ್ರಾಕಾರಗಳನ್ನು ತೆರೆದಿಡುತ್ತಲೇ, ಕೃಷ್ಣಕಥೆಯ ಮರ್ಮವನ್ನು ಬಿಚ್ಚಿಡುವ ಈ ಕೃತಿ ಅಪೂರ್ವ ಚಿತ್ರಕಾವ್ಯವೂ ಹೌದು, ಶ್ರೇಷ್ಠ ಶಾಸ್ತ್ರಕೃತಿಯೂ ಹೌದು. ಕೃಷ್ಣ ಭೀಮ, ದ್ರೌಪದಿ ಮೊದಲಾದವರ ವ್ಯಕ್ತಿತ್ವವನ್ನು ತುಂಬಾ ಸರಸವಾಗಿ ಇದು ನಿರೂಪಿಸುತ್ತದೆ.

## ಮಧ್ವಭಾರತ - ಭೀಮಭಾರತ

ಮೂಲಮಹಾಭಾರತ ಶ್ರೀವೇದವ್ಯಾಸಕೃತವಾದ ಕಾರಣ 'ವ್ಯಾಸಭಾರತ'ವೆಂದೇ ವಿಖ್ಯಾತ. ಶ್ರೀವೇದವ್ಯಾಸರು ಮಹಾಭಾರತದ ಕುರುಪಾಂಡವರ ಜನಕರಾದ ಧೃತರಾಷ್ಟ್ರ ಪಾಂಡುರಾಜನಿಗೆ

---

ಪಾರಾಶರ್ಯಃ ಪರತತ್ತ್ವಪ್ರಸಿದ್ಧ್ಯೈ ತಾತ್ಪರ್ಯಾರ್ಥಂ ಪರಮಂ ಭಾರತಸ್ಯ ।
ವ್ಯಕ್ತಂ ವಕ್ತುಂ ನಿಯುನಕ್ತಿ ಸ್ಮ ಸಾಕ್ಷಾದೇನಂ ಧನ್ಯಂ ಭುವನೇ ಮನ್ಯಮಾನಃ ॥ -ಸು.ವಿ. (೧೦/೨೫)

1. ಪುನರ್ಗತ್ವಾ ಚ ಬದರೀಂ ವ್ಯಾಸಮಾನಮ್ಯ ಪೂರ್ಣಧೀಃ । ಭಾಷ್ಯಾದಿಸೇವಾಂ ವಿಜ್ಞಾಪ್ಯ ರೂಪ್ಯಪೀಠಮಿದಂ ಪುನಃ ॥
ಆಗತ್ಯ ಭಾರತಸ್ಯಾಥ ತಾತ್ಪರ್ಯಂ ಕರ್ಮನಿರ್ಣಯಮ್ । ಕೃತ್ವಾ ಚ .....................॥ (ಶ್ಲೋ. ೮,೯)

ಜನ್ಮ ನೀಡಿದವರು. ಅಲ್ಲದೆ ಮಹಾಭಾರತದ ಆದ್ಯಂತದ ಪ್ರಮುಖಘಟ್ಟಗಳಲ್ಲಿ ಗೋಚರಿಸಿ ಆಯಾ ಪ್ರಸಂಗಗಳಿಗೆ ಹೊಸ ತಿರುವು ನೀಡುವ ಸೂತ್ರಧಾರರೂ ಆಗಿರುವರು. ಅವರು ರಚಿಸಿರುವ ಮಹಾಭಾರತ ಈ ಕಾರಣದಿಂದಾಗಿ ಅತ್ಯಂತ ಅಧಿಕೃತವಾದ ಕೃತಿ ಎನ್ನಿಸುತ್ತದೆ. ಅದರಂತೆ ಮಹಾಭಾರತ-ತಾತ್ಪರ್ಯನಿರ್ಣಯದ ಕೃತಿಕಾರರಾದ ಶ್ರೀಮಧ್ವಾಚಾರ್ಯರು ಮಹಾಭಾರತದಲ್ಲಿ ಶ್ರೀವ್ಯಾಸಕೃಷ್ಣರ ಅನಂತರದ ಪ್ರಧಾನಪಾತ್ರವೆನ್ನಿಸಿದ ಶ್ರೀಭೀಮಸೇನನ ಅವತಾರರಾಗಿರುವರು. ಆದ್ದರಿಂದ ಇದು 'ಭೀಮಭಾರತ'; ಮಧ್ವರೂಪದಿಂದ ರಚಿತವಾದ್ದರಿಂದ 'ಮಧ್ವಭಾರತ'. ಈ ಕಾರಣದಿಂದಲೇ ವ್ಯಾಸಭಾರತದಂತೆ ಅತ್ಯಂತ ಅಧಿಕೃತವಿವರಗಳ ಮುಖ್ಯ ಆಕರವೆನ್ನಿಸಿ ಮಾನ್ಯವಾಗುತ್ತದೆ[೧].

ಇದು ಗ್ರಂಥರಾಜ; ಧರ್ಮವನ್ನು ಮೊದಲುಮಾಡಿಕೊಂಡು ಮೋಕ್ಷದವರೆಗೆ ಸಕಲ ಪುರುಷಾರ್ಥಗಳನ್ನು ನೀಡುವ ಮಹತ್ತರವಾದ ಕೃತಿ; ಇನ್ನು ಇದರ ಇತರಗುಣಗಳ ಬಗ್ಗೆ ಹೆಚ್ಚು ಹೇಳಬೇಕಿಲ್ಲ; ಸ್ವತಃ ಶ್ರೀಮನ್ನಾರಾಯಣನೇ ಇದರಿಂದ ಬಹಳವಾಗಿ ಸುಪ್ರೀತನಾಗುವನು. ಎಂದು ಇದರ ಭಾವ. ನಾರಾಯಣನು ಸುಪ್ರೀತನಾಗುವನು ಎಂದರೆ ಮೋಕ್ಷವನ್ನೇ ನೀಡುವನು ಎಂದೇ ಅರ್ಥ. ಸರ್ವೋತ್ತಮನಾದ ಅವನು ಪ್ರಸನ್ನನಾದಾಗ ಯಾವುದು ತಾನೇ ದುರ್ಲಭ – **ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ;** ಎಂಬುದು ಇದರ ಫಲಶ್ರುತಿ.[೨]

## ಸಮಗ್ರಭಾರತ - ಅಧಿಕೃತಭಾರತ

ಮಹಾಭಾರತವನ್ನು ಕುರಿತು ಕಾಲಕಾಲಕ್ಕೆ ಬೇರೆ ಬೇರೆ ಭಾಷೆಗಳಲ್ಲಿ ಕೃತಿಗಳು ರಚಿತವಾಗಿವೆ. ಅಂತಹವುಗಳಲ್ಲಿ ಭಾಸನ ನಾಟಕಗಳಿಗೆ ಅಗ್ರಸ್ಥಾನ. ಅವನದೆಂದು ಪ್ರಸಿದ್ಧವಿರುವ ಭಾಸನಾಟಕಚಕ್ರದಲ್ಲಿ ಒಟ್ಟು ಆರು ನಾಟಕಗಳು ಮಹಾಭಾರತವನ್ನು ಕುರಿತು ರಚಿತವಾಗಿವೆ. ಅವುಗಳಲ್ಲಿ ಮೂಲಕ್ಕೆ ಅನುಗುಣವಲ್ಲದ ವಿಷಯಗಳು ಅನೇಕ. ಭಟ್ಟನಾರಾಯಣರ ವೇಣೀಸಂಹಾರ(ನಾಟಕ) ಹಾಗೂ ಭಾರವಿಯ ಕಿರಾತಾರ್ಜುನೀಯ (ಮಹಾಕಾವ್ಯ) ಸಹ ಮಹಾಭಾರತವನ್ನು ಆಧರಿಸಿದ ಕೃತಿಗಳೇ ಆಗಿವೆ. ವೇಣೀಸಂಹಾರವು ಭಾಸನ ಪರಂಪರೆಯನ್ನು ಮುಂದುವರೆಸುವಂತಿರುವ ಕೃತಿಯಾಗಿದ್ದು ಅದರಲ್ಲೂ ಮೂಲಕೃತಿಯಲ್ಲಿ ಕಾಣಲಾಗದ ಅನೇಕ ಕಲ್ಪನೆಗಳು ಸೇರಿಕೊಂಡಿವೆ. ಕಿರಾತಾರ್ಜುನೀಯವು ವನಪರ್ವದ ಒಂದು ಉಪಪರ್ವಕ್ಕಷ್ಟೇ ಸೀಮಿತವಾದ ಕೃತಿ. ಮುಂದೆಯೂ ಕೆಲವು ಮಹಾಕಾವ್ಯಗಳು ನಾಟಕಗಳು ಮೊದಲಾಗಿ ಅನೇಕ ಕೃತಿಗಳು ಮಹಾಭಾರತವನ್ನಾಧರಿಸಿ ರಚಿತವಾಗಿವೆ. ಕ್ಷೇಮೇಂದ್ರನ 'ಭಾರತಮಂಜರಿಯು', ಈ ನಿಟ್ಟಿನಲ್ಲಿ ಗಮನಾರ್ಹವಾದ ಕೃತಿ; ಇದು ಶ್ಲೋಕರೂಪದಲ್ಲಿ ಮಹಾಭಾರತದ ಕಥಾಸಂಗ್ರಹವನ್ನು ಪರ್ವಾನುಕ್ರಮದಲ್ಲೇ ಮಾಡುವ ಕಾವ್ಯ[೩].

---

೧. ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪು-
ರ್ಮಧ್ವೋ ಯತ್ ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ –ಮ.ಭಾ.ತಾ.ನಿ.(೩೨/೧೭೪)

೨. ತಸ್ಮಾದಯಂ ಗ್ರಂಥವರೋಽಖಿಲೋರುಧರ್ಮಾದಿಮೋಕ್ಷಾಂತಪುಮರ್ಥಹೇತುಃ ।
ಕಿಂ ವ್ರೋದಿತೈರಸ್ಯ ಗುಣೈಸ್ತತೋನ್ಯೈರ್ನಾರಾಯಣಃ ಪ್ರೀತಿಮುಪೈತ್ಯತೋಽಲಮ್॥ಮ.ಭಾ.ತಾ.ನಿ(೩೨/೧೭೩)

೩. ಆದಿಪರ್ವ ೧೩೯೭ ಶ್ಲೋ.; ಸಭಾಪರ್ವ ೪೭೪ ಶ್ಲೋ.; ಅರಣ್ಯಪರ್ವ ೧೯೬೪ ಶ್ಲೋ. ; ವಿರಾಟಪರ್ವ ೪೦೩ ಶ್ಲೋ.; ಉದ್ಯೋಗಪರ್ವ ೬೭೨ ಶ್ಲೋ.; ಭೀಷ್ಮಪರ್ವ ೪೯೭ ಶ್ಲೋ. ; ದ್ರೋಣಪರ್ವ ೮೦೪ ಶ್ಲೋ. ;

ಪಂಪಭಾರತ, [೧]ಗದುಗಿನ ಭಾರತ ಮೊದಲಾದವುಗಳು ಕನ್ನಡದಲ್ಲಿನ ರಚನೆಗಳು. ತೆಲುಗಿನಲ್ಲಿ ನನ್ನಯ ಭಟ್ಟು (ಕ್ರಿ.ಶ.೧೦೨೦-೧೦೬೩), ತಿಕ್ಕನ ಸೋಮಯಾಜಿ(ಕ್ರಿ.ಶ. ೧೨೧೦-೧೨೯೦), ಎರ್ರನ್ನ ಪ್ರೆಗ್ಗಡ(ಕ್ರಿ.ಶ.೧೩೦೦-೧೩೫೦) ಮೊದಲಾದ ಕವಿತ್ರಯರ 'ಆಂಧ್ರಭಾರತಮು'[೨].

ಕನ್ನಡದ ಪಂಪಭಾರತ, ತಮಿಳಿನ ಮೂಲವನ್ನೇ ಹೆಚ್ಚು ಅನುಸರಿಸಿದಂತಿದೆ ಎಂಬ ಸಂಶೋಧನೆ ಅವನ ಮೂಲಭಾರತದ ಬಗೆಗಿನ ನಿಷ್ಠೆಯನ್ನು ಸಂದೇಹಕ್ಕೆ ಗುರಿಮಾಡುತ್ತದೆ[೩]. ರನ್ನನ 'ಸಾಹಸಭೀಮ-

---

ಕರ್ಣಪರ್ವ ೨೧೮ ಶ್ಲೋ. ; ಶಲ್ಯಪರ್ವ ೭೧ ಶ್ಲೋ. ; ಗದಾಪರ್ವ ೧೧೧ ಶ್ಲೋ. ; ಸೌಪ್ತಿಕಪರ್ವ ೧೦೧ ಶ್ಲೋ. ; ಸ್ತ್ರೀಪರ್ವ ೯೧ಶ್ಲೋ. ; ಶಾಂತಿಪರ್ವ ೧೮೦೦ ಶ್ಲೋ. ; ಆಶ್ವಮೇಧಿಕಪರ್ವ ೨೧೫ ಶ್ಲೋ. ; ಆಶ್ರಮವಾಸಿಕಪರ್ವ ೬೯ ಶ್ಲೋ. ; ಮೌಸಲಪರ್ವ ೭೧ ಶ್ಲೋ. ; ಮಹಾಪ್ರಾಸ್ಥಾನಿಕಪರ್ವ ೩೩ ಶ್ಲೋ. ; ಸ್ವರ್ಗಪರ್ವ ೩೪ ಶ್ಲೋ. ; ಹರಿವಂಶ ೧೬೪೧ ಶ್ಲೋಕಗಳು = ೧೦೬೬೬ ಶ್ಲೋಕಗಳು

ಏಷ ವಿಷ್ಣುಕಥಾತೀರ್ಥಪುಣ್ಯವತ್ಸಲಿಲೋಕ್ಷಿತಃ।
ಪ್ರಾಪ್ತಃ ಸಾಮಾನ್ಯಜಲ್ಪೋಽಪಿ ಕ್ಷೇಮೇಂದ್ರೋಽಥ ಕವೀಂದ್ರತಾಮ್ ॥ (೧-೫)

೧. ಮೂಲಭಾರತದಲ್ಲಿ ಗದಾಪರ್ವವು ಶಲ್ಯಪರ್ವದ ಉಪಪರ್ವವಾಗಿರುವುದರಿಂದ ಗದುಗಿನ ಭಾರತದಲ್ಲಿ-ರುವುದು ಒಟ್ಟು ಒಂಭತ್ತು ಪರ್ವಗಳ ಕಥೆಮಾತ್ರ; ಗದಾಪರ್ವ ಎಂಬ ವಿಭಾಗದಲ್ಲೇ ಸೌಪ್ತಿಕಪರ್ವ, ಸ್ತ್ರೀಪರ್ವಗಳ ಕಥೆಯೂ ಸಂಗ್ರಹೀತವಾಗಿದೆ. ಮುಂದಿನ ಪರ್ವಗಳ ಪ್ರಸ್ತಾಪವೇ ಇಲ್ಲ. ಅನಂತರ ಕಾಲದ ತಿಮ್ಮಣ್ಣಕವಿಯಿಂದ ಅವುಗಳು ಇದಕ್ಕೆ ಪೂರಕವೆಂಬಂತೆ ರಚಿತವಾಗಿವೆ. ಇದರಲ್ಲಿ ಕ್ರಮವಾಗಿ ಆದಿಪರ್ವ ೨೦, ಸಭಾಪರ್ವ ೧೬, ಅರಣ್ಯಪರ್ವ ೨೩, ವಿರಾಟಪರ್ವ ೧೦, ಉದ್ಯೋಗಪರ್ವ ೧೧ , ಭೀಷ್ಮಪರ್ವ ೧೦, ದ್ರೋಣಪರ್ವ ೧೯, ಕರ್ಣಪರ್ವ ೨೭, ಶಲ್ಯಪರ್ವ ೩, ಗದಾಪರ್ವ ೧೩ - ಹೀಗೆ ಒಟ್ಟು ೧೫೨ ಸಂಧಿಗಳು.

೨. ಪೆರುಂದೇವನಾರ್(ಕ್ರಿ.ಶ.೮೯.೫-೮೭೦) ಕವಿಯ 'ಭಾರತವೆಣ್ಬಾ'(ಅದರಲ್ಲಿ ಇಂದು ದೊರೆಯುವುದು ೮೩೦ ವೆಣ್ಬಾಗಳ ಗದ್ಯಭಾಗಗಳು ಮಾತ್ರ); 'ವಿಲ್ಲಿಪುತ್ತೂರಾರ್‌ಭಾರತಮ್'(ಮೊದಲ ಹತ್ತುಕಥೆಗಳನ್ನು ಒಳಗೊಂಡ ಒಟ್ಟು ೪೩೦೦ ಪದ್ಯಗಳು) ಹಾಗೂ ವಿಲ್ಲಿ ಕವಿಯ 'ನಲ್ಲಪಿಳ್ಳೈಭಾರತಮ್'(೧೧೦೦೦ಕ್ಕೂ ಹೆಚ್ಚು ಪದ್ಯಗಳ ಕೃತಿ). - ಇವೆಲ್ಲ ತಮಿಳುಭಾಷೆಯಲ್ಲಿ ರಚಿತವಾಗಿರುವ ಮಹಾಭಾರತವನ್ನು ಕುರಿತಾದ ಕೃತಿಗಳು. ಪಂಪ(ಕ್ರಿ.ಶ.೯೪೦)ನ ವಿಕ್ರಮಾರ್ಜುನವಿಜಯವು ಮುಖ್ಯವಾಗಿ ಪೆರುಂದೇವನಾರ್ ಕವಿಯ ಭಾರತವೆಣ್ಬಾ ಕೃತಿಯನ್ನು ಅನೇಕ ಪ್ರಧಾನವಿಷಯಗಳಲ್ಲಿ ಆಧರಿಸಿದೆ ಎಂಬುದು ಕರ್ನೂಲ್ ವ್ಯಾಸರಾಜ ಪ್ರಕಾಶನದ(೧೯೮೧) 'Mahabharata and Variations' ಎಂಬ ಡಾ.ಕಂಬಾಲೂರು ವೇಂಕಟೇಶಾ-ಚಾರ್ಯರ (ಇಂದು ಶ್ರೀವಿದ್ಯಾಸಾಗರ ಮಾಧವತೀರ್ಥರು ಎಂಬುದಾಗಿ ಶ್ರೀಮಾಧವತೀರ್ಥ ಸಂಸ್ಥಾನದ ಪೀಠಾಧೀಶರಾಗಿರುವ ಮಹನೀಯರು) ಸಂಶೋಧನ ಮಹಾಪ್ರಬಂಧದಿಂದ ತಿಳಿದುಬರುತ್ತದೆ. ನನ್ನಯನ ಆದಿಪರ್ವ, ಸಭಾಪರ್ವ, ಅರಣ್ಯಪರ್ವದಲ್ಲಿನ ಮೂರು ಆಶ್ವಾಸ ಹಾಗೂ ನಾಲ್ಕನೆಯ ಆಶ್ವಾಸದಲ್ಲಿ ೧೪೪ ಪದ್ಯಗಳು ಎಂಬುದು ಸುಪ್ರಸಿದ್ಧ. ಚಂಪೂಕಾವ್ಯ ಒಟ್ಟು ೩೯೫ ಗದ್ಯಪದ್ಯಗಳು. ವಿರಾಟಪರ್ವದಿಂದ ಸ್ವರ್ಗಾರೋಹದ ಪರ್ವದವರೆಗೆ ಒಟ್ಟು ೧೫ ಪರ್ವಗಳನ್ನು ತಿಕ್ಕನ ಸೋಮಯಾಜಿ - ೧೬೪೫೭ ಗದ್ಯ-ಪದ್ಯಗಳು, ಅರಣ್ಯಪರ್ವದ ಅವಶಿಷ್ಟಭಾಗ ಎರ್ರನ್ನಪ್ರೆಗ್ಗಡ ೧೫೯೫ ಗದ್ಯಪದ್ಯಗಳು, ಒಟ್ಟು ೨೨೦೪೭ (೬೫೦೫ ಗದ್ಯ, ೧೫೫೪೨ ಪದ್ಯ); ರಾಜರಾಜನರೇಂದ್ರ , ನನ್ನಯನು ನೂರು ಉಪಪರ್ವಗಳ ಹೆಸರುಗಳನ್ನೂ ೧೮ ಪರ್ವಗಳ ಹೆಸರುಗಳನ್ನೂ ಅವುಗಳ ಶ್ಲೋಕಸಂಖ್ಯೆಯನ್ನೂ ಕೊಟ್ಟಿದ್ದಾನೆ.(೩೩- ೬೫ ಪದ್ಯಗಳು).

೩. ಕನ್ನಡದ ಪ್ರಾಚೀನಭಾರತಗಳಲ್ಲಿ ಹೆಚ್ಚಿನವು ಈ ಮೊದಲೇ ತಿಳಿಸಿದಂತೆ ಜೈನಕವಿಗಳದು. ಪಂಪ(ಕ್ರಿ.ಶ. ೯೪೧)ಭಾರತದಲ್ಲಿ ಒಟ್ಟು ೧೪ಆಶ್ವಾಸಗಳಿದ್ದು ಅದರ ೧-೫ರವರೆಗಿನ ಆಶ್ವಾಸಗಳಲ್ಲಿ ಆದಿಪರ್ವದ ಕಥೆಯು, ೬-೭(ಪದ್ಯ೧-೨೧)ರಲ್ಲಿ ಸಭಾಪರ್ವ, ೭(ಉಳಿದ ಭಾಗ)-೮(೧-೪೮ಪದ್ಯಗಳು)ರಲ್ಲಿ

ವಿಜಯ' ಪಂಪನ ಕೃತಿಯ ಧಾಟಿಯನ್ನೇ ಹಿಡಿದಿದೆ. ವೇಣೀಸಂಹಾರದ ದಟ್ಟಪ್ರಭಾವವನ್ನು ಪಂಪ ಹಾಗೂ ರನ್ನರ ಕೃತಿಗಳಲ್ಲಿ ಗುರುತಿಸಬಹುದು. ಅದರೊಂದಿಗೆ ಅದು ಮೊದಲ ಹತ್ತುಪರ್ವಗಳಿಗೆ ಮಾತ್ರ ಸೀಮಿತವೆನ್ನಿಸುವಂತಹ ಕೃತಿ. ಅವನನ್ನು ಮೆಚ್ಚುವವರೂ ಸಹ ಅದು ಮೂಲಕ್ಕೆ ನಿಷ್ಠವಾಗಿಲ್ಲ ಎಂಬುದನ್ನು ಗಮನಿಸಿರುವಂತಹ ಕೃತಿ. ಅನಂತಭಟ್ಟನ [೧]ಚಂಪೂಭಾರತವು ಸಹ ಅಸಮಗ್ರವಾದ ಕೃತಿಯೇ ಆಗಿದೆ. ಕುಮಾರವ್ಯಾಸಭಾರತವು ಪಂಪ ಮೊದಲಾದವರ ಭಾರತದ ವಿವರಗಳನ್ನು ಒಳಗೊಂಡು ಪ್ರಾಮಾಣಿಕವಾದ ಭಾರತದ ಕಥಾನಕವನ್ನು ಕೊಡುವಲ್ಲಿ ಸಫಲವಾಗಿಲ್ಲ. ಮಹಾ-ಕಾವ್ಯಗಳಾಗಿ ಈ ಕೃತಿಗಳು ಗಳಿಸಿರುವ ಯಶಸ್ಸು ಅಪಾರವಾದರೂ, ಮೂಲದ ಕಥೆಯನ್ನು ಯಥಾವತ್ತಾಗಿ ತಲುಪಿಸುವಲ್ಲಿ ಯಶಸ್ವಿಯಾಗಿಲ್ಲ ಎಂಬುದು ಖಚಿತ. ಇವುಗಳಲ್ಲಿ ಕ್ಷೇಮೇಂದ್ರನ ಭಾರತಮಂಜರಿಯ ಹೊರತು ಉಳಿದವುಗಳಲ್ಲಿ ಹೆಚ್ಚಿನವು ಮೊದಲ ಹತ್ತು-ಹನ್ನೊಂದು ಪರ್ವಗಳ ಕಥಾಸಂಗ್ರಹಕ್ಕೆಷ್ಟೇ ಸೀಮಿತಗೊಂಡಿರುವುದು ಎದ್ದುಕಾಣುವಂತಹ ಮತ್ತೊಂದು ಲೋಪ. ಇದರಿಂದಾಗಿ ಉಳಿದ ಪರ್ವಗಳ ಕಥೆಯು ಮೂಲವನ್ನು ಓದದವರ ಪಾಲಿಗೆ ಅಜ್ಞಾತವಾಗಿಯೇ ಉಳಿಯು-ವಂತಾಗಿದೆ. ಜೈಮಿನೀಭಾರತದ ಕಥೆ ಮೂಲಮಹಾಭಾರತದ ಆಶ್ವಮೇಧಿಕಪರ್ವಕ್ಕೆ ಸಂವಾದಿ-ಯಾಗಿಲ್ಲ ಎಂಬ ಕಾರಣದಿಂದ ಅದರಲ್ಲಿನ ನಿರೂಪಣೆಗಳು ಅಧಿಕೃತವೆಂದು ನಂಬಲು ಸಾಧ್ಯ-ವಾಗುವುದಿಲ್ಲ. ತಿಮ್ಮಣ್ಣಕವಿಯ ಅವಶಿಷ್ಟಪರ್ವಗಳ ನಿರೂಪಣೆಗಳು ಮೇಲಿನ ಕೃತಿಗಳಿಗಿಂತ ಅರ್ವಾಚೀನವಾಗಿದ್ದು ಅದು ಅಷ್ಟಾಗಿ ಪ್ರಚಾರದಲ್ಲಿ ಉಳಿದುಕೊಂಡು ಬಂದಿಲ್ಲ[೨]. ಈ ದೃಷ್ಟಿಯಲ್ಲಿ ವಿಚಾರಮಾಡಿದಾಗ ಸಮಗ್ರಮಹಾಭಾರತದ ಚಿತ್ರವನ್ನು ಹದಿನೆಂಟು ಪರ್ವಗಳಿಗೂ ಅನ್ವಯಿಸುವಂತೆ ನಿರೂಪಿಸಿದ ಏಕೈಕಕೃತಿ ಎಂಬುದು ಮಹಾಭಾರತತಾತ್ಪರ್ಯನಿರ್ಣಯದ ಹಿರಿಮೆ ಎಂದಾಗುವುದು.

ಮಹಾಭಾರತವನ್ನು ಇತರ ಭಾಷೆಗಳಲ್ಲಿ ರಚಿಸಿದ ಹೆಚ್ಚಿನವರು ರಾಜಾಶ್ರಯವನ್ನು ಪಡೆದಿದ್ದರು. ರಾಜನ ಮೆಚ್ಚುಗೆಗೆ ಪಾತ್ರರಾಗಲು ಅವರು ಅದರಲ್ಲಿನ ಮುಖ್ಯಪಾತ್ರಗಳನ್ನು ತಮ್ಮ ಆಶ್ರಯ-

---

ಅರಣ್ಯಪರ್ವ, ೮(ಉಳಿದ ಭಾಗ)-೯(ಪದ್ಯ ೧-೧೦)ರಲ್ಲಿ ವಿರಾಟಪರ್ವ ಹಾಗೂ ೯ರಲ್ಲಿ(ಉಳಿದ ಭಾಗ) ಉದ್ಯೋಗಪರ್ವಗಳು, ೧೦-೧೧(ಪದ್ಯ ೧-೫೧)ರಲ್ಲಿ ಭೀಷ್ಮಪರ್ವ, ೧೧(ಉಳಿದ ಭಾಗ)-೧೨(ಪದ್ಯ ೧-೩೩)ರಲ್ಲಿ ದ್ರೋಣಪರ್ವ, ೧೨(ಉಳಿದ ಭಾಗ)-೧೩(ಪದ್ಯ ೧-೨೮)ರಲ್ಲಿ ಕರ್ಣಪರ್ವ, ೧೩ (೨೯-೪೮) ರಲ್ಲಿ ಶಲ್ಯಪರ್ವ; ಹಾಗೂ ಗದಾಪರ್ವ೧೩(೪೯-೯೪); ಸೌಪ್ತಿಕಪರ್ವ೧೩ರಲ್ಲಿ ಉಳಿದಭಾಗ, ೧೪(೧-೧೦)ರಲ್ಲಿ ಸ್ತ್ರೀಪರ್ವ, ೧೪(ಪದ್ಯ ೧೧-೩೯)ರಲ್ಲಿ (ಸುಮಾರು ೧೬೦೦ ಪದ್ಯಗಳು ಹಾಗೂ ಉಳಿದಂತೆ ಗದ್ಯಭಾಗಗಳು) ಶಾಂತಿಪರ್ವಗಳು ಸಂಗ್ರಹಿಸಲ್ಪಟ್ಟಿವೆ. ಮುಂದಿನ ಪರ್ವಗಳಿಗೆ ಇದರಲ್ಲಿ ಅವಕಾಶವೇ ಇಲ್ಲ. ಚಂಪೂಕಾವ್ಯವಾದ ಇದರಲ್ಲಿ ಮೂಲದೊಂದಿಗೆ ಇರುವ ವ್ಯತ್ಯಾಸಗಳು ಅಸಂಖ್ಯ.

೧. 'ಚಂಪೂಭಾರತ' - ಒಟ್ಟು ೧೨ ಸ್ತಬಕಗಳು : ೧-೩ ಆದಿಪರ್ವ, ೪ ಸಭಾಪರ್ವ ಹಾಗೂ ವನಪರ್ವದಲ್ಲಿನ ಕಿರಾತಾರ್ಜುನೀಯಪ್ರಸಂಗ, ೫ ಉಳಿದ ವನಪರ್ವ, ೬ ವಿರಾಟಪರ್ವ ದಕ್ಷಿಣಗೋಗ್ರಹಣದವರೆಗೆ, ೭ ವಿರಾಟಪರ್ವದ ಉಳಿದಭಾಗ, ೮ ಉದ್ಯೋಗಪರ್ವ, ೯ ಭೀಷ್ಮಪರ್ವ, ೧೦ ದ್ರೋಣಪರ್ವ, ೧೧ ಕರ್ಣಪರ್ವ, ೧೨ ಶಲ್ಯಪರ್ವದಿಂದ ಸ್ತ್ರೀಪರ್ವದವರೆಗೆ ಹಾಗೂ ಧರ್ಮರಾಜನ ರಾಜ್ಯಾಭಿಷೇಕದವರೆಗೆ.

೨. ಸಾಳ್ವಭಾರತ, ಸೂತಭಾರತ ಮೊದಲಾದ ಇನ್ನೂ ಅನೇಕ ಕೃತಿಗಳು ಉಪಲಬ್ಧವಿದ್ದು ಅವುಗಳು ಸಮಗ್ರತೆ, ಕಾವ್ಯಗುಣ ಮೊದಲಾದ ಎಲ್ಲ ವಿಭಾಗಗಳಲ್ಲೂ ಈ ಕೃತಿಗಳ ಮಟ್ಟವನ್ನು ತಲುಪುವಂತಿಲ್ಲ. ಅಸಮಗ್ರತೆ ಇವುಗಳಲ್ಲೆಲ್ಲಾ ಸಮಾನವಾಗಿರುವಂತಹ ದೋಷ. ಇತ್ತೀಚಿನ ದಿನಗಳಲ್ಲಿ ಆಂಗ್ಲಭಾಷೆಯಲ್ಲಿ, ಕನ್ನಡ ಭಾಷೆಯಲ್ಲಿ ಇದರ ಗದ್ಯಾನುವಾದರೂಪದ ಅನೇಕ ಕೃತಿಗಳು ಬಂದಿರುವುದುಂಟು.

ದಾತರಾದ ರಾಜರೊಂದಿಗೆ ಸಮೀಕರಿಸಿ, ವರ್ಣಿಸುವುದು ಅವರ ಚಟವಾಯಿತು. ಅರಿಕೇಸರಿಯನ್ನು ಅರ್ಜುನನೊಂದಿಗೆ ಸಮೀಕರಿಸಿ ರಚಿತವಾದ ಪಂಪನ ವಿಕ್ರಮಾರ್ಜುನವಿಜಯ, ಚಾಲುಕ್ಯ ನಾರಾಯಣ(ಸತ್ಯಾಶ್ರಯ)ನೊಂದಿಗೆ ಭೀಮನನ್ನು ಸಮೀಕರಿಸಿ ರಚಿತವಾದ ರನ್ನನ ಸಾಹಸಭೀಮವಿಜಯ ಇದಕ್ಕೆ ಉತ್ತಮ ನಿದರ್ಶನ. ಆಂಧ್ರಭಾರತದ ನನ್ನಯಭಟ್ಟು ಮೊದಲಾದವರು ಸಹ ತಮ್ಮ ಚಾಣುಕ್ಯರಾಜರೊಂದಿಗೆ ಪೂರ್ಣವಾಗಿ ಅಲ್ಲವಾದರೂ ಒಂದು ಹಂತದಲ್ಲಿ ಸಮೀಕರಿಸುವ ಪ್ರಯತ್ನವನ್ನು ಮಾಡಿರುವರು. ಇದರಿಂದಾಗಿ ಮೂಲಭಾರತವನ್ನು ಅವರು ಯಥಾವತ್ತಾಗಿ ನಿರೂಪಿಸುವಲ್ಲಿ ಎಡವಿರುವುದು ಸ್ಪಷ್ಟ. ಪಂಪರನ್ನರು ಮೂಲತಃ ಜೈನಪಂಥದ ಕವಿಗಳಾದ್ದರಿಂದ ಅವರಿಗೆ ಮಹಾಭಾರತವು ತಾತ್ತ್ವಿಕ, ಧಾರ್ಮಿಕಗ್ರಂಥವಾಗಿ ಕಾಣದೆ ಕೇವಲ ಲೌಕಿಕಗ್ರಂಥವೆಂಬಂತೆ ಕಂಡದ್ದು ಇನ್ನೊಂದು ಮಿತಿ. ಚಂಪೂಭಾರತ ಮೊದಲಾದವುಗಳು ಸೀಮಿತವ್ಯಾಪ್ತಿಯಿಂದಾಗಿ ವ್ಯಾಸಭಾರತದ ಹೃದಯವನ್ನು ಅರಿಯಲು ನೆರವಾಗುವುದಿಲ್ಲ. ಕ್ಷೇಮೇಂದ್ರನ ಭಾರತಮಂಜರಿಯು ಕೇವಲ ಸಂಗ್ರಹಕಾರ್ಯಕ್ಕಷ್ಟೆ ಸೀಮಿತವಾಗಿರುವ ಕೃತಿ. ಪಾಶ್ಚಾತ್ಯರು ಮಹಾಭಾರತದ ಅಧ್ಯಯನವನ್ನು ಮಾಡುವಲ್ಲೂ ಸಹ ಮೇಲೆ ಸೂಚಿಸಿದಂತಹ ಪರಿಮಿತಿಗಳು ಇದ್ದೇ ಇದ್ದವು. ಅನಂತರದ ಹೆಚ್ಚು ಕೃತಿಗಳು ವ್ಯಾಸಭಾರತವನ್ನು ಆಧರಿಸದೆ ಕೇವಲ ಇತರ ಮೂಲಗಳಿಂದ ಭಾರತಕಥೆಯನ್ನು ತಮಗೆ ತೋಚಿದಂತೆ ನಿರೂಪಿಸಿದ್ದೇ ಹೆಚ್ಚು. ಶಾಲಾಕಾಲೇಜುಗಳಲ್ಲಿ ಕನ್ನಡ ಭಾರತಗಳ ಅಧ್ಯಯನಕ್ಕೆ ಲಭಿಸಿದ ಅವಕಾಶವು ಸಂಸ್ಕೃತವಿಭಾಗದಲ್ಲಿ ಅಷ್ಟಾಗಿ ಕಾಣದೆ ಹೋದದ್ದು ಇನ್ನೊಂದು ರೀತಿಯಲ್ಲಿ ಮೂಲಮಹಾಭಾರತ ವಿಚಾರಗಳು ಜನತೆಗೆ ತಲುಪದಿರಲು ಮತ್ತೊಂದು ಕಾರಣವಾಯಿತು ಎನ್ನಬಹುದು. ಸಂಸ್ಕೃತ ಪಾಠಶಾಲೆ, ವಿದ್ಯಾಪೀಠಗಳಲ್ಲೂ ಸಹ ಮಹಾಭಾರತತಾತ್ಪರ್ಯನಿರ್ಣಯದ ಅಧ್ಯಯನವೇ ಲುಪ್ತಪ್ರಾಯವಾಗಿರುವಾಗ ಮೂಲಮಹಾಭಾರತದ ಅಧ್ಯಯನವು ದೂರತೋಽಪಾಸ್ತ ಎನ್ನಿಸಿತು. ಸಿನಿಮಾ, ನಾಟಕ, ಟಿವಿ ಮಾಧ್ಯಮಗಳಂತೂ ಜನಪ್ರಿಯತೆಯ ಮುಖ್ಯಧ್ಯೇಯದೊಂದಿಗೆ ವಿಕೃತವಾದ ಚಿಂತನೆಯನ್ನೇ ಮಹಾಭಾರತ, ರಾಮಾಯಣಗಳ ಬಗ್ಗೆ ನೀಡಿ ಕೈತೊಳೆದುಕೊಂಡಿವೆ. ಇದೆಲ್ಲವುಗಳ ಹಿನ್ನೆಲೆಯಲ್ಲಿ ಆಚಾರ್ಯ ಶ್ರೀಮಧ್ವರ ಮಹಾಭಾರತತಾತ್ಪರ್ಯನಿರ್ಣಯವು ಮಹದಾಶ್ಚರ್ಯವನ್ನುಂಟುಮಾಡುವುದು ನಿಶ್ಚಿತ. ಸಮಸ್ತಶಾಸ್ತ್ರಗಳಲ್ಲಿನ ತಲಸ್ಪರ್ಶಿ ಪಾಂಡಿತ್ಯವಿಲ್ಲದವರಿಗೆ ಮಹಾಭಾರತದ ಚಿಂತನೆ ಕನಸಿನಲ್ಲೂ ಎಟಕದ್ದು ಎಂಬುದರಲ್ಲಿ ಎರಡು ಮಾತಿಲ್ಲ. ಅದಕ್ಕೆ ಅದು ಧರ್ಮಾರ್ಥಾದಿ ಪುರುಷಾರ್ಥಗಳ ವಿಶ್ವಕೋಶವಾಗಿರುವಂತೆ ದೇವಭಾಷೆಯಾದ ಸಂಸ್ಕೃತದ ಅತ್ಯಂತ ಪ್ರೌಢಕೃತಿಯಾಗಿರುವುದು ಇನ್ನೊಂದು ಕಾರಣ.

## ಅಪೂರ್ವ ಸಂಶೋಧನದೃಷ್ಟಿ

ಮೇಲೆ ಉಲ್ಲೇಖಿಸಿರುವ ಎಲ್ಲ ಕೃತಿಗಳೂ ಕಾವ್ಯಮಯವಾದ ನಿರೂಪಣೆಗಷ್ಟೇ ಸೀಮಿತವಾಗಿರುವುದು ಅದರ ಅಧ್ಯಯನದಿಂದ ಸ್ಪಷ್ಟಪಡುವ ವಿಚಾರ. [೧]ಸಂಶೋಧನೆಯ ದೃಷ್ಟಿಯಿಂದ ಈ

೧. ಮಹಾಭಾರತದ ಶ್ಲೋಕಸಂಖ್ಯೆಗಳ ಬಗ್ಗೆ ಆಧುನಿಕರಲ್ಲಿ ವಿವಾದವಿದೆ. ಅದು ಕ್ರಿ.ಶ.ದ ಅನಂತರದ ಒಂದು ಹಂತದಲ್ಲಿ ಲಕ್ಷಶ್ಲೋಕದ ವ್ಯಾಪ್ತಿಯನ್ನು ಪಡೆದಿರಬೇಕು ಎಂಬುದು ಹೆಚ್ಚಿನವರ ವಾದ. ಆದರೆ, ಗುಪ್ತರ ಕಾಲದ ಗುಪ್ತ ೩.೧ನೇ ನಂಬರಿನ ಶಾಸನ(ಮಹಾರಾಜ ಶರ್ವನಾಥನ ಕೋಹ್-ಕ್ರಿ.ಶ. ೫೩.೩ರ ತಾಮ್ರಶಾಸನ)ದಲ್ಲಿ ಬಂದಿರುವ ಉಲ್ಲೇಖದಂತೆ ಅದು ಆ ಸಮಯದಲ್ಲಿಯೇ ಲಕ್ಷಶ್ಲೋಕದ ಕೃತಿಯಾಗಿತ್ತು ಎಂದು ತಿಳಿಯುವುದು :

ಕೃತಿಗಳ ಕಾಣಿಕೆ ಸರ್ವಥಾ ನಗಣ್ಯವೆನ್ನಿಸುವಂತಹುದು. ಇಡೀ ವಾಙ್ಮಯಪ್ರಪಂಚದಲ್ಲಿಯೇ ಪ್ರಪ್ರಥಮಬಾರಿಗೆ ಸಂಶೋಧನೆಯ ಪರಿಕಲ್ಪನೆಯನ್ನು ನೀಡಿದ ಶ್ರೇಯಸ್ಸು ಆಚಾರ್ಯ ಶ್ರೀಮಧ್ವರದು. ಅವರು ತಮ್ಮ ಮಹಾಭಾರತತಾತ್ಪರ್ಯನಿರ್ಣಯದ ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ಸಂಶೋಧನೆಯ ಮಹತ್ತ್ವದ ಬಗ್ಗೆ ನುಡಿದಿರುವ ಮಾತುಗಳು ಸಾರ್ವಕಾಲಿಕ ಮನ್ನಣೆಯನ್ನು ಗಳಿಸುವಂತಹ ಅಪೂರ್ವತೆಯನ್ನು ಹೊಂದಿವೆ. ಅವುಗಳನ್ನು ಇತ್ತೀಚಿನ ಗ್ರಂಥ-[೧]ಸಂಪಾದನಾಶಾಸ್ತ್ರದ ತಜ್ಞರು ಆದರದಿಂದ ಉಲ್ಲೇಖಿಸಿ ಪ್ರಶಂಸಿರುವುದು ಗಮನಿಸಬೇಕಾದ ಸಂಗತಿ. ಶ್ರೀಮದಾಚಾರ್ಯರ ಅನಂತರದ ಕಾಲದಿಂದ ೨೦ನೆಯ ಶತಮಾನದ ಪ್ರಾರಂಭ-ದವರೆಗೂ ಸಹ ಮಹಾಭಾರತ ಮೊದಲಾದ ಪ್ರಾಚೀನಗ್ರಂಥಗಳ ಬಗ್ಗೆ ಸಂಶೋಧನೆಯ ಪರಿಕಲ್ಪನೆ ಅಷ್ಟಾಗಿ ಕಂಡುಬಂದಿರಲಿಲ್ಲ. ಪುಣೆಯ ಭಂಡಾರ್‌ಕರ್ ಸಂಸ್ಥೆಯ ಪ್ರಯತ್ನ ಈ ದೃಷ್ಟಿಯಲ್ಲಿ ಈ ಕಾಲದ ಅದ್ಭುತವೆಂಬಂತೆ ರೂಪುಗೊಂಡಿತು. ಆದರೆ, ಆದರ [೨]ಇತಿಮಿತಿಗಳನ್ನು ಅದರ ಸಂಪಾದಕ-ವರ್ಗವೇ ಒಪ್ಪಿಕೊಂಡಿರುವುದು ಗಮನಿಸಬೇಕಾದ ಸಂಗತಿ. ಈ ಬಗೆಯ ಸಂಶೋಧನೆ ರಾಮಾಯಣ, ಭಾಗವತ ಮೊದಲಾದ ಇತರ ಕೃತಿಗಳ ಬಗ್ಗೆಯೂ ಬರೋಡ ಮೊದಲಾದ ಬೇರೆ ಬೇರೆ ಸ್ಥಳಗಳಲ್ಲಿ ಸಂಶೋಧನ ಸಂಸ್ಥೆಗಳಿಂದ ನಡೆಯತೊಡಗಿತು. ಮಹಾಭಾರತದ ಸಂಶೋಧನೆಗೆ ಸಂಬಂಧಿಸಿದಂತೆ ಕಂಡುಬಂದ ಇತಿಮಿತಿಗಳೇ ಅವಕ್ಕೂ ಸಹ ಅನ್ವಯಿಸುವವು. ಇವುಗಳನ್ನು ಗಮನಿಸಿದಾಗ ಸಂಶೋಧನೆಯಲ್ಲಿಯೂ ಸಹ ಸಮಗ್ರತೆಯನ್ನು ಸಾಧಿಸಿದ ವಿಶಿಷ್ಟವಾದ ಕೃತಿ

---

'ಉಕ್ತಂ ಚ ಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ ಪರಮರ್ಷಿಣಾ ಪರಾಶರಸುತೇನ ವೇದವ್ಯಾಸೇನ ವ್ಯಾಸೇನ'. ಬಾಣನ ಕಾಲದಲ್ಲಿಯೇ ವಿಷ್ಣುಸಹಸ್ರನಾಮವನ್ನು ಸತತ ಪಠಿಸುವಂತಹ ಸಂಪ್ರದಾಯವಿದ್ದುದು ಅವನ 'ಕಾದಂಬರೀ' ಕೃತಿಯಿಂದ ತಿಳಿಯುತ್ತದೆ : 'ಅವಿಚ್ಛಿನ್ನಪಠ್ಯಮಾನನಾರಾಯಣನಾಮಸಹಸ್ರಮ್'. ಬಾಣನ 'ಕಾದಂಬರಿ' ಯಲ್ಲಿ ಮಹಾಭಾರತದ ಉಲ್ಲೇಖವೂ ಕಂಡುಬರುವುದು: 'ಮಹಾಭಾರತೇ ವಾಚ್ಯಮಾನೇ ಶ್ರುತಂ ಪುನಾಮ್ನೋ ನರಕಾತ್ ತ್ರಾಯತ ಇತಿ ಪುತ್ರಃ'. ಅದರಂತೆ ಅದರಲ್ಲಿಯೇ ಗೀತೆಯ ಉಲ್ಲೇಖವೂ ಬಂದಿದೆ : 'ಮಹಾಭಾರತಮಿವ ಅನಂತಗೀತಾಕರ್ಣನಾನಂದಿತನರಮ್'.

೧. ನೀಲಕಂಠೀಯವ್ಯಾಖ್ಯಾನದಲ್ಲಿನ ಈ ಕೆಳಗಿನ ಮಾತುಗಳು ಈ ಬಗ್ಗೆ ಗಮನಾರ್ಹವೆನ್ನಿಸುವಂತಿದೆ :
ಬಹೂನ್ ಸಮಾಹೃತ್ಯ ವಿಭಿನ್ನದೇಶ್ಯಾನ್ ಕೋಶಾನ್ ವಿನಿಶ್ಚಿತ್ಯ ಚ ಪಾಠಮಗ್ರ್ಯಮ್ ।
ಪ್ರಾಚಾಂ ಗುರೂಣಾಮನುಸೃತ್ಯ ವಾಚಮಾರಭ್ಯತೇ ಭಾರತಭಾವದೀಪಃ ॥
ಅಪಪಾಠಃ, ಕೇಚಿನ್ನ ಪಠಂತಿ, ಪ್ರಾಮಾದಿಕಃ ಪಾಠಃ, ಕ್ವಚಿತುಸ್ತಕೇ, ಗೌಡಪಾಠ ಏವ ದೃಶ್ಯತೇ, ಅತ್ರ ಕೋಶಶುದ್ಧಿಂ ನ ಪ್ರತೀಮಃ – ಇವುಗಳಿಂದ ತಿಳಿಯುವಂತೆ ಕೆಲವು ಅಪಪಾಠಗಳು, ಕೆಲವು ಅಧಿಕಪಾಠಗಳು, ಕೆಲವು ಪ್ರಾಮಾದಿಕಪಾಠಗಳು, ಕೆಲವು ಪಾಠಾಂತರಗಳು – ಇವುಗಳಿಂದಾಗಿ ಕೋಶಶುದ್ಧಿಯನ್ನು ನಿರ್ಣಯಿ-ಸುವುದು ಅಸಾಧ್ಯ ಎಂಬುದು ಭಾವ. ಇಲ್ಲಿಯ ಮಾತುಗಳನ್ನು ಗಮನಿಸಿದಾಗ ಶ್ರೀಮನ್ಮಧ್ವಾಚಾರ್ಯರು ನೀಡಿದ ಕಾರಣಗಳ ಮಹತ್ತ್ವ ಮನವರಿಕೆಯಾಗುವುದು. ಅವರ ಅನಂತರ ಅನೇಕ ಶತಮಾನಗಳ ಬಳಿಕ ಬಂದ ಈ ನೀಲಕಂಠೀಯ ವ್ಯಾಖ್ಯಾನದಿಂದ ಶ್ರೀಮದಾಚಾರ್ಯರ ಪರಿಶುದ್ಧ ವಿವೇಚನೆ ಇನ್ನಷ್ಟು ಸ್ಫುಟ-ಪಡುವುದು. ಆದರೆ, ಅವರ ತಾತ್ಪರ್ಯನಿರ್ಣಯದ ಸಮಗ್ರತೆಯನ್ನು ನೀಲಕಂಠೀಯ ಕೃತಿಯು ಹೊಂದದಿರಲು ಅದರ ಸಂಶೋಧನೆಯ ಪರಿಮಿತಿಯೇ ಕಾರಣ ಎಂದು ತಿಳಿಯುವುದು.

೨. ದಕ್ಷಿಣಕನ್ನಡ ಅದರಲ್ಲೂ ಮುಖ್ಯವಾಗಿ ಉಡುಪಿಯ ಮಠಗಳು ಹಾಗೂ ಆ ಸುತ್ತಮುತ್ತಲಿನ ಸ್ಥಳಗಳಲ್ಲಿ ಇಂದೂ ಸಹ ಮಹಾಭಾರತದ ಪ್ರಾಚೀನ ಓಲೆಗರಿ ಪ್ರತಿಗಳು ಉಪಲಬ್ಧವಿದ್ದು ಪುಣೆಯ ಸಂಶೋಧನ ಕಾರ್ಯಕ್ಕೆ ಅವುಗಳ ಬಳಕೆಯಾದಂತೆ ಕಂಡುಬರುವುದಿಲ್ಲ ಎಂಬುದು ಸಹ ಗಮನಿಸಬೇಕಾದ ಸಂಗತಿ.

ಎಂಬುದಾಗಿ ಮಹಾಭಾರತತಾತ್ಪರ್ಯನಿರ್ಣಯ ಅಪಾರವಾದ ಮಹತ್ತ್ವವನ್ನು ಪಡೆಯುವುದು. ರಾಮಾಯಣ, ಮಹಾಭಾರತಗಳ ಅರ್ಥನಿರ್ಣಯದಂತೆ ಅವುಗಳ ಪಾಠನಿರ್ಣಯವೂ ಅತ್ಯಂತ ಜಟಿಲ. ಆ ಜಟಿಲತೆಯನ್ನು ಸಕಾರಣವಾಗಿ ವಿಶ್ಲೇಷಿಸುವ ಅವರ ವಾಕ್ಯಗಳು[೧] ಗ್ರಂಥಸಂಪಾದನಾ-ಶಾಸ್ತ್ರಕ್ಕೆ ಸಂದಿರುವ ಅತ್ಯಂತ ಅಪೂರ್ವವಾದ ಕೊಡುಗೆ. ಯಾವುದೇ ಗ್ರಂಥ ಜನಪ್ರಿಯವಾಗಿ[೨] ಕಾಲ ಕಳೆಯುತ್ತಾ ಹೋದಂತೆ ಪ್ರಕ್ಷೇಪ, ಅಂತರಿತ, ವ್ಯತ್ಯಾಸ ಹಾಗೂ ಪ್ರಮಾದ[೩] ಮೊದಲಾದ ಕಾರಣಗಳಿಂದ ಅವುಗಳ ಪಾಠಶುದ್ಧಿ ಮಲಿನವಾಗುತ್ತಾ ಹೋಗುತ್ತದೆ. ಮಹಾಭಾರತದ 'ನಾರಾಯಣಂ ಸುರಗುರುಮ್[೪]' ಎಂಬ ಮಂಗಲಶ್ಲೋಕವೇ ಹೆಚ್ಚಿನ ಕೃತಿಗಳಲ್ಲಿ ಕಾಣದಂತಾಗಿರುವುದು ಇದಕ್ಕೆ ಅತ್ಯುತ್ತಮವಾದ ನಿದರ್ಶನ. ಇಂತಹ ಪ್ರಸಂಗ ಸಂಸ್ಕೃತಗ್ರಂಥಗಳಲ್ಲಂತೂ ತುಂಬಾ ಹೆಚ್ಚು. ಪುರಾಣ-ಪ್ರಪಂಚವಂತೂ ಅಪಪಾಠದ ಹಾವಳಿಗೆ ವಿಶೇಷವಾಗಿ ಗುರಿಯಾಗಿದೆ. ವಾಲ್ಮೀಕಿರಾಮಾಯಣವೂ

---

೧. ಕ್ವಚಿದ್ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।
ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥
ಅನುತ್ಸನ್ನಾ ಅಪಿ ಗ್ರಂಥಾ ವ್ಯಾಕುಲಾ ಇತಿ ಸರ್ವಶಃ ।
ಉತ್ಸನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋಽಪಿ ನ ವರ್ತತೇ ॥
ಗ್ರಂಥೋಽಪ್ಯೇವಂ ವಿಲುಲಿತಃ ಕಿಮ್ವರ್ಥೋ ದೇವದುರ್ಗಮಃ ।
ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ॥
ಹರಿಣಾ ನಿರ್ಣಯಾನ್ ವಚ್ಮಿ ವಿಜಾನಂಸ್ತತ್ಪ್ರಸಾದತಃ ।
ಶಾಸ್ತ್ರಾಂತರಾಣಿ ಸಂಜಾನನ್ ವೇದಾಂಶ್ಚಾಸ್ಯ ಪ್ರಸಾದತಃ ॥
ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।
ಯಥಾ ಸ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ॥
ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ ।
ಸಂಕ್ಷೇಪಾತ್ ಸರ್ವಶಾಸ್ತ್ರಾರ್ಥಂ ಭಾರತಾರ್ಥಾನುಸಾರತಃ ॥ -ಮ.ಭಾ.ತಾ.ನಿ.(೨/೩-೮)

೨. ಮೂಲಗ್ರಂಥಗಳು ಅನುಪಲಬ್ಧವಾಗಲು ವಿಕೃತಗೊಳ್ಳಲು ಕಾರಣವಾಗುವ ಅಂಶಗಳ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಶ್ರೀಮಧ್ವಾಚಾರ್ಯರ ಅಪೂರ್ವಶ್ರುತ್ಯುದಾಹರಣ' ಎಂಬ ಕೃತಿಯಲ್ಲಿ ಕೊಡಲಾಗಿದೆ.

೩. ಪ್ರಮಾದ ಎಂದರೆ ಲೇಖಕರಿಂದಾಗುವ ಕಣ್ತಪ್ಪು ಕೈತಪ್ಪು ಬಾಯ್ತಪ್ಪು ಎಂದು ತಿಳಿಯಬೇಕು. ಇದು ಸಾಮಾನ್ಯವಾಗಿ ಇಂದಿನ ಬೆರಳಚ್ಚುಗಾರರಂತೆ ಅರ್ಥಜ್ಞಾನವಿಲ್ಲದೆ ಕೇವಲ ವೃತ್ತಿಯನ್ನಾಗಿ ಹಸ್ತಪ್ರತಿಗಳನ್ನು ಲೇಖನ ಮಾಡುವ ಪ್ರತಿಕಾರರಿಂದಾಗುವ ತಪ್ಪು ಎಂದರ್ಥ.

೪. ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥
- (ಮ.ಭಾ.ತಾ.ನಿ. ೨/೫೮)

ಇದಕ್ಕೆ ವೈಷ್ಣವಪಂಥದ ವಿರೋಧಿಗಳ ಕೈವಾಡವೇ ಕಾರಣವೆಂದು ತಿಳಿಸಿ, ಶ್ರೀವಾದಿರಾಜರು 'ಕೇರಳದೇಶದಲ್ಲಿನ ಪ್ರಾಚೀನಪುಸ್ತಕಗಳಲ್ಲಿ ಇಂದೂ ಈ ಪದ್ಯ ಕಾಣಸಿಗುತ್ತದೆ' ಎಂದು ಬರೆದಿರುವರು: 'ಕ್ವಚಿದಂತರಿತಾನಪಿ' ಇತಿ ವಚನಾತ್ ಇದಮಾದ್ಯಪದ್ಯಮಸಹಮಾನಾಃ ಕೇಚಿದಾದೌ ನ ಲಿಖಂತಿ । ಕೇರಳದೇಶಸ್ಥಪುರಾತನಪುಸ್ತಕೇಷು ಅದ್ಯಾಪಿ ದೃಶ್ಯತೇ(ಭಾವಪ್ರಕಾಶಿಕಾ). ಪುಣೆಯ ಸಂಶೋಧಿತಪ್ರತಿಯಲ್ಲಿ ಇದು ಮಲಬಾರ್ ಹಸ್ತಪ್ರತಿಗಳಲ್ಲಿ ಕಂಡುಬರುವ ಶ್ಲೋಕ ಎಂಬುದಾಗಿ ಅಡಿಟಿಪ್ಪಣಿಯಲ್ಲಿ ಉಲ್ಲೇಖಿಸಲ್ಪಟ್ಟಿರುವುದು ಶ್ರೀವಾದಿರಾಜರ ಮಾತನ್ನು ದೃಢೀಕರಿಸುವ ಉತ್ತಮ ಪುರಾವೆಯಾಗಿದೆ; ಕೆಲವು ಪ್ರಾಚೀನ ಪಾಠಗಳಲ್ಲಿ 'ನಾರಾಯಣಂ ನಮಸ್ಕೃತ್ಯ' ಎಂಬ ಶ್ಲೋಕವು ಕಂಡುಬರುವುದಿಲ್ಲ ಎಂಬುದು ಇನ್ನೊಂದು ಸೋಜಿಗ.

ಇದಕ್ಕೆ ಹೊರತಲ್ಲ, ಮೂಲರಾಮಾಯಣವಂತೂ ಇಂದು ಸಂಪೂರ್ಣ ಲುಪ್ತವಾಗಿದೆ. ಮಹಾಭಾರತದ ಪಾಠಾಂತರಗಳಂತೂ ಊಹೆಗೆ ನಿಲುಕದಷ್ಟು ಅಸಂಖ್ಯ. ದಾಕ್ಷಿಣಾತ್ಯ ಹಾಗೂ ಔತ್ತರೇಯ ಎಂಬ ಎರಡು ಸ್ಪಷ್ಟ ಪಾಠಾಂತರಗಳನ್ನು ಸಂಶೋಧಕರು ಗಮನಿಸಿದ್ದಾರೆ. ಅವುಗಳಲ್ಲಿ ಕಂಡುಬರುವ ವ್ಯತ್ಯಾಸವೂ ಸಾಮಾನ್ಯವಾದುದೇನಲ್ಲ. ಈ ಎಲ್ಲ ಹಿನ್ನೆಲೆಯಲ್ಲಿ ಪಾಠಶುದ್ಧಿಯ ಬಗ್ಗೆ ಶ್ರೀಮಧ್ವಾಚಾರ್ಯರು ನುಡಿದಿರುವ ಮೇಲಿನ [೧]ಮಾತುಗಳು ಹೆಚ್ಚಿನ ಮಹತ್ತ್ವವನ್ನು ಪಡೆದುಕೊಳ್ಳುತ್ತವೆ.

ಇಂತಹ ಪ್ರಸಂಗದಲ್ಲಿ ಪಾಠನಿರ್ಣಯಕ್ಕೆ ಅನುಸರಿಸಬೇಕಾದ ಮಾರ್ಗವನ್ನು ಅವರು ಸೂಚಿಸಿ, ಆ ರೀತಿಯಲ್ಲೇ ತಾವು ಶುದ್ಧಪಾಠವನ್ನು ನಿರ್ಣಯಿಸಿ, ಅರ್ಥವನ್ನು ವಿಶ್ಲೇಷಿಸಿರುವುದಾಗಿ ಅವರು ನೀಡಿರುವ ವಿವರಣೆ ತುಂಬಾ ಗಮನಾರ್ಹವಾದುದು.

ಶ್ರೀಮದಾಚಾರ್ಯರ ಈ ನಿರ್ಣಯಕ್ರಮ ಅದೆಷ್ಟು ಪರಿಣಾಮಕಾರಿ ಎಂಬುದನ್ನು ಪೂನಾ ಭಂಡಾರ್‌ಕರ್ ಸಂಸ್ಥೆಯ ಮಹಾಭಾರತದ [೨]ಪರಿಷ್ಕೃತಪಾಠದ ಪ್ರಕಾಶನವನ್ನು ಗಮನಿಸಿದವರಿಗೆ ಮನವರಿಕೆಯಾಗುವುದು. ಈ ತಾತ್ಪರ್ಯನಿರ್ಣಯದ ಬೆಳಕಿನಲ್ಲಿ ಮಹಾಭಾರತದ ಪಾಠನಿರ್ಣಯಕ್ಕೆ ತೊಡಗಿದಾಗ ಇದರ ಉಪಕಾರ ಅದೆಷ್ಟು ಮಹತ್ತರ ಎಂಬುದು ಅರಿವಾಗುವುದು.

---

೧. ಶಾರದಾಲಿಪಿ, ದೇವನಾಗರೀ, ನೇಪಾಳಿ, ಬಂಗಾಳಿ, ಮೈಥಿಲೀ – ಇವು ಔತ್ತರೇಯ ಪಾಠಗಳ ಲಿಪಿಗಳು. ಮಲಯಾಳೀ ಗ್ರಂಥಾಕ್ಷರ, ತೆಲಗು ಮೊದಲಾದವು ದಾಕ್ಷಿಣಾತ್ಯಪಾಠದ ಲಿಪಿಗಳು. ಕೆಲವು ದಾಕ್ಷಿಣಾತ್ಯ ಪಾಠಗಳಲ್ಲಿ ೨೪ ಪರ್ವಗಳ ಉಲ್ಲೇಖ; ಕೆಲವು ಪಾಠಗಳಲ್ಲಿ ಅಷ್ಟಾದಶ ಪರ್ವಗಳ ವಿಭಾಗವೇ ಕಂಡುಬರುವುದಿಲ್ಲ. ಆದಿಪರ್ವವು ಆದಿ ಮತ್ತು ಸಂಭವ ಎಂಬ ಎರಡು ಉಪವಿಭಾಗಗಳಲ್ಲಿ, ಕೆಲವು ಆದಿ, ಆಸ್ತೀಕ, ಸಂಭವ ಎಂಬ ಮೂರು ಉಪವಿಭಾಗಗಳಲ್ಲೂ, ಉಪಪರ್ವಗಳ ಹೆಸರುಗಳಲ್ಲೂ ವ್ಯತ್ಯಾಸ; ಉಪಪರ್ವಗಳ ಹೆಸರುಗಳು ಕಂಡುಬರುವುದಿಲ್ಲ.

ಔತ್ತರೇಯ ದಾಕ್ಷಿಣಾತ್ಯ ಪಾಠಗಳಲ್ಲಿ ಕೆಲವು ಪದಗಳ ಬಳಕೆಯಲ್ಲಿ ವ್ಯತ್ಯಾಸ ಕಂಡುಬರುವುದು ಗಮನಿಸಬೇಕಾದ ಮತ್ತೊಂದು ಅಂಶ :

ನೈಮಿಷ(ಔ) – ನೈಮಿಶ(ದಾ) ; ಲೋಮಹರ್ಷಣ(ಔ) – ರೋಮಹರ್ಷಣ(ದಾ) ; ಹಾಸ್ತಿನಪುರ(ಔ) – ಹಸ್ತಿನಪುರ (ದಾ) ; ಆಸ್ತೀಕ(ಔ) – ಅಸ್ತೀಕ (ದಾ) ; ವ್ರೀಡಾ(ಔ) – ವ್ರೀಳಾ (ದಾ) – ವ್ರೀಲಾ (ದಾ) ; ಶಂತನು(ಔ) – ಶಾಂತನು (ದಾ) ; ದುಃಷಂತ(ಔ) – ದುಷ್ಷಂತ (ದಾ) – ದುಷ್ಮಂತ (ದಾ) – ದುಷ್ಯಂತ (ದಾ).

೨. ಹೀಗೆ ಎರಡು ಪ್ರಧಾನಪಾಠಗಳು ಹಾಗೂ ಅವುಗಳಲ್ಲಿ ಕಂಡುಬರುವ ಬಗೆಬಗೆಯ ವ್ಯತ್ಯಾಸಗಳು, ಅವು ಉಪಲಬ್ಧವಿರುವ ವಿಭಿನ್ನಲಿಪಿಗಳು – ಮೊದಲಾದ ಕಾರಣಗಳಿಂದಾಗಿ ಮಹಾಭಾರತದ ಮೂಲಸ್ವರೂಪವನ್ನು ಗುರುತಿಸುವುದು ಭಾರೀ ಸವಾಲಿನ ಕೆಲಸ. ಪುಣೆಯ ಭಂಡಾರ್‌ಕರ್ ಸಂಶೋಧನಾ ಸಂಸ್ಥೆಯು ಅದಕ್ಕಾಗಿ ಪಟ್ಟಿರುವ ಶ್ರಮ ಸಂಶೋಧನೆ, ಸಂಪಾದನೆ ಹಾಗೂ ಪ್ರಕಾಶನಗಳಲ್ಲಿ ದಾಖಲೆ ಎನ್ನಿಸುವಂತಹ ಕಾರ್ಯ. ಅದು ಜಗತ್ತಿನಾದ್ಯಂತ ವಾಙ್ಮಯಪ್ರಪಂಚದಲ್ಲಿ ನಡೆದ ಅಭೂತಪೂರ್ವಕಾರ್ಯ ಎಂಬ ಪ್ರಶಂಸೆಗೆ ಒಳಗಾಯಿತು. ಆದರೆ, ಅದು ಮೂಲಪಾಠವನ್ನು ಗುರುತಿಸಲು ಮಾಡಿಕೊಂಡ ಕೆಲವು ನಿಯಮಾವಳಿಗಳಲ್ಲೇ ಲೋಪಗಳನ್ನು ಹೊಂದಿರುವುದು ಎದ್ದುಕಾಣುವಂತಹ ಅಂಶ. ಒಟ್ಟು ೧೨೫೯ ಹಸ್ತಪ್ರತಿಗಳನ್ನು ಬಳಸಿಕೊಂಡು ೪೫ ವರ್ಷಗಳ ಕಾಲ ನಡೆದ ಆ ಕಾರ್ಯ ಪ್ರಶಂಸನೀಯವಾದರೂ, ಪರಿಪೂರ್ಣ ಎನ್ನಲು ಸಾಧ್ಯವಿಲ್ಲ ಎಂಬುದು ಅದರ ಪ್ರಾರಂಭದ ಸಂಪುಟಗಳ ಪ್ರಧಾನಸಂಪಾದಕರಾದ ಡಾ.ವಿ.ಎಸ್.ಸುಕ್ಥಂಕರ್‌ರವರ ಸಂಪಾದಕೀಯ ಹೇಳಿಕೆಗಳಿಂದ ತಿಳಿಯುವುದು. ಮೂಲಪಾಠದ ನಿರ್ಣಯದ ಪರಿಸ್ಥಿತಿಯೇ ಹೀಗಾದಾಗ ಇನ್ನು ಅರ್ಥನಿರ್ಣಯದ ಬಗ್ಗೆ ಹೇಳುವುದೇನಿದೆ? 'ಕಿಮ್ವುರ್ಥೋ ದೇವದುರ್ಗಮಃ'. ಆದರೂ ಅನಂತರದ ಅನೇಕ ಸಂಶೋಧಕರು ಅದನ್ನು ಅಧಿಕೃತಪಾಠವೆಂಬಂತೆ ಉಪಯೋಗಿಸುತ್ತಿರುವುದು ವಿಷಾದಕರ.

## ಶ್ರೀವೇದವ್ಯಾಸರು ಸಾಕ್ಷಾತ್ ಶ್ರೀಹರಿ

ಮಹಾಭಾರತವನ್ನು ಬರೆದವರು ಯಾರು? ಮೂಲಗ್ರಂಥದಲ್ಲಿಯೇ ಬಂದಿರುವ ವಿವರದಂತೆ ಇದು ವೇದವ್ಯಾಸರ ರಚನೆ. [೧]ಮಹಾಭಾರತವನ್ನು ಬರೆದ ವ್ಯಾಸರು ಒಬ್ಬ ಋಷಿ ಎಂಬ ವಾದ ಕೆಲವರದು. ಆದರೆ ಮಹಾಭಾರತದಲ್ಲಿ ಹಾಗೂ ಭಾಗವತ ಮೊದಲಾದ ಪುರಾಣಗಳಲ್ಲಿ ಬಂದಿರುವಂತೆ ಶ್ರೀವೇದವ್ಯಾಸರು ಮಹಾವಿಷ್ಣುವಿನ ಸಾಕ್ಷಾದವತಾರ; ಕೃಷ್ಣರಾಮಾದಿರೂಪಗಳು ಹೇಗೋ ಹಾಗೆ. ಲಕ್ಷಶ್ಲೋಕದ ಮಹಾಭಾರತದ ರಚನೆಯೇ ಅವರು ಮಹಾವಿಷ್ಣು ಎಂಬುದಕ್ಕೆ ಮತ್ತೊಂದು ರೀತಿಯ ಪುರಾವೆ ಎಂಬುದು [೨]ಮಹಾಭಾರತದಲ್ಲಿಯೇ ಬಂದಿದೆ. 'ಲಕ್ಷಶ್ಲೋಕಗಳ ಭಾರತವನ್ನು ಬರೆದ ಮಾತ್ರಕ್ಕೇ ಶ್ರೀವ್ಯಾಸರು ಸಾಕ್ಷಾತ್ ನಾರಾಯಣನೆಂಬುದು ಹೇಗೆ ಸಿದ್ಧವಾಗುತ್ತದೆ'? ಎಂದು ಶಂಕಿಸ-ಬೇಕಿಲ್ಲ; ಕುರು-ಪಾಂಡವರ ವಂಶದ ಉತ್ಪತ್ತಿಗೆ ಮುನ್ನವೇ ಆ ಎರಡೂ ವಂಶಗಳ ಉತ್ಪತ್ತಿ ಪ್ರಕಾರವನ್ನೂ, ರಾಜಸೂಯಅಶ್ವಮೇಧಾದಿಗಳ ಮಹಿಮೆಯನ್ನೂ, ಅದಕ್ಕೋಸ್ಕರ ಮಾಡಿದ ದಿಗ್ವಿಜಯ ಪ್ರಕಾರ-ವನ್ನೂ, ಅರಗಿನ ಮನೆಯಿಂದ ಪಾಂಡವರು ಪಾರಾಗುವ ಕೌಶಲವನ್ನೂ, ಬಕ ಮತ್ತು ಹಿಡಿಂಬರ ವಧೆಯನ್ನೂ, ದ್ರೌಪದೀವಿವಾಹವನ್ನು ನಿರ್ವಹಿಸಿದ ಸಾಮರ್ಥ್ಯವನ್ನೂ, ಕಪಟದ್ಯೂತದ ಸಂಚನ್ನೂ, ವನವಾಸ, ಅಜ್ಞಾತವಾಸ, ಗೋಗ್ರಹಣ ಮೊದಲಾದ ಅನೇಕತೆರನಾದ ಕಥೆಯನ್ನೂ, ಹದಿನೆಂಟು ಅಕ್ಷೋಹಿಣೀ ಸೇನೆಯಲ್ಲಿ ಅಲ್ಲಿ ಯೋಧರು ಪರಸ್ಪರ ಆಡಿದ ಯುಕ್ತಿ ಪ್ರತ್ಯುಕ್ತಿಗಳ ರೀತಿಯನ್ನೂ, ವ್ಯೂಹಪ್ರತಿವ್ಯೂಹಗಳ ರಚನೆಯನ್ನೂ, ಅಸ್ತ್ರಪ್ರತ್ಯಸ್ತ್ರಗಳ ಪ್ರಯೋಗಪ್ರಕಾರವನ್ನೂ, ಭೀಮ, ಅರ್ಜುನ, ಭೀಷ್ಮ, ದ್ರೋಣ ಮೊದಲಾದವರಿಂದ ಪ್ರತಿದಿನದಲ್ಲೂ ಕೊಲ್ಲಲ್ಪಡುತ್ತಿದ್ದ ಆನೆ, ಕುದುರೆ ಮೊದಲಾದ ಅನೇಕತೆರನಾದ ಸಂಖ್ಯೆ ಮೊದಲಾದವುಗಳನ್ನೂ ಅಂಗೈಯಲ್ಲಿನ ನೆಲ್ಲಿಕಾಯಂತೆ ಸ್ಫುಟವಾಗಿ ಕಂಡು ಮಹಾಭಾರತವೆಂಬ ತಮ್ಮ ಗ್ರಂಥದಲ್ಲಿ ತಿಳಿಸಿದ ವೇದವ್ಯಾಸರಿಗೆ ಅನೇಕ ಜಗತ್ತನ್ನು ನಿರ್ಮಿಸುವ ನಾರಾಯಣನಂತೆ ಅಶೇಷ ಸರ್ವಜ್ಞತ್ವವು ಸಿದ್ಧಿಸುವುದರಿಂದ ಅವರು ಅವನ ಅವತಾರವೆಂಬದನ್ನು ವಿವೇಕಿಗಳು ಸುಲಭವಾಗಿ ಗ್ರಹಿಸಲು ಶಕ್ಯವಾಗಿದೆ ಎಂಬ ಅಪೂರ್ವವಿವರವನ್ನು ಶ್ರೀವಾದಿರಾಜರು ತಿಳಿಸಿರುವರು. ಇದರಿಂದ ತಿಳಿಯುವಂತೆ ಹಾಗೂ ಮಹಾಭಾರತದಲ್ಲೇ ಬಂದಿರುವಂತೆ ಅದರಲ್ಲಿನ ಘಟನೆಗಳು ನಡೆಯುವ ನೂರಾರು ವರ್ಷಗಳಿಗಿಂತ ಮುಂಚಿತವಾಗಿಯೇ ರಚಿತವಾದ ಅಪೂರ್ವಕೃತಿ; ಅದರಲ್ಲಿ ಬರೆದದ್ದಂತೆಯೇ ಅದರ ಪ್ರತಿಯೊಂದು ಘಟನೆಯೂ ನಡೆಯಿತು ಎಂಬುದು ಶ್ರೀವೇದ-ವ್ಯಾಸರು ನಾರಾಯಣ ಎಂಬುದಕ್ಕೆ ದ್ಯೋತಕ ಎಂದು ಭಾವ. ರಾಮಾಯಣವನ್ನು ಬರೆದ ವಾಲ್ಮೀಕಿ ಮುನಿಯು ಸಹ ರಾಮಾಯಣದ ಆ ಕಾಲದವರೇ ಆದರೂ ಅವರು ಅದನ್ನು ರಚಿಸಿದ್ದು ಅದು ನಡೆದ ಬಳಿಕ; ಆದರೆ ಮಹಾಭಾರತ ಅದು ನಡೆಯುವ ಮುನ್ನವೇ ಬರೆದ ಕೃತಿ ಎಂಬುದು ವಿಶೇಷ.

---

೧. ಎಂದಿನಂತೆ ಈ ಬಗ್ಗೆಯೂ ಸಹ ಆಧುನಿಕ ವಿಮರ್ಶಕರು ಗೊಂದಲವನ್ನೆಬ್ಬಿಸಿರುವರು. ಗ್ರಂಥದ ವ್ಯಾಪ್ತಿ ಮೊದಲಾದ ಅನೇಕ ಕಾರಣಗಳನ್ನು ಮುಂದಿಟ್ಟು ಇದು ಒಬ್ಬ ವ್ಯಕ್ತಿಯ ರಚನೆಯಾಗಿರದೆ ಕಾಲಕಾಲಕ್ಕೆ ಅನೇಕರ ರಚನೆಯೂ ಸೇರಿ ಇಂದಿನ ಸ್ವರೂಪವನ್ನು ಪಡೆದುಕೊಂಡಿದೆ ಎಂಬುದು ಅವರ ವಾದ. ಮೂಲಗ್ರಂಥದ ಸ್ವರೂಪ ಅನೇಕ ಕಾರಣಗಳಿಂದ ಪೂರ್ಣಶುದ್ಧರೂಪದಲ್ಲಿ ಉಳಿದುಬಂದಿಲ್ಲ ಎಂಬುದು ಸತ್ಯ. ಆದರೆ ಅದರ ಸ್ವರೂಪವೇ ಬದಲಾಗುವಷ್ಟು ಅದು ವಿರೂಪಗೊಂಡಿದೆ ಎಂದು ವಾದಿಸಲು, ಸಾಕಷ್ಟು ಪುರಾವೆಗಳು ಲಭಿಸಿಲ್ಲ ಎಂಬುದನ್ನು ಗಮನಿಸಬೇಕು.

೨. ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥ —ಮ.ಭಾ.ತಾ.ನಿ.(೨/೫೫)

ಮಹಾಭಾರತವು ಲಕ್ಷಶ್ಲೋಕಗಳ ಗ್ರಂಥಮಾತ್ರವಾಗಿರದೆ, ಅದರಲ್ಲಿನ ಪ್ರತಿಯೊಂದು ಪದಕ್ಕೂ ಅತಿ ಕಡಿಮೆ ಎಂದರೂ ಹತ್ತು ಅರ್ಥಗಳುಂಟು; ಪ್ರತಿಹಂತದಲ್ಲೂ ಆಧ್ಯಾತ್ಮಿಕ ಅರ್ಥ ತುಂಬಿದೆ; ವೇದಾರ್ಥನಿರ್ಣಯಕ್ಕೂ ನೆರವಾಗುವ ಈ ಕೃತಿ ವೇದಾನಧಿಕಾರಿಗಳ ಪಾಲಿಗಂತೂ ವೇದವೇ ಆಗಿದೆ; ವೇದಾಧಿಕಾರಿಗಳಿಗೆ ವೇದಾಧ್ಯಯನಕ್ಕೂ ಇದು ನೀಡುವ ನೆರವು ಅಪಾರ. ಇದರಲ್ಲಿ ಪ್ರಾಸಂಗಿಕವಾಗಿ ಬರುವ ವಿಷಯಗಳಂತೂ ಅಸಂಖ್ಯ.

ಇದು ಧರ್ಮಾದಿ ಸಕಲಪುರುಷಾರ್ಥಗಳ [೧]ವಿಶ್ವಕೋಶವೆಂಬ ಮಾತೂ ಇದರಲ್ಲಿ ಬಂದಿದೆ; ಸಮಾಧಿ, ದರ್ಶನ ಮತ್ತು ಗುಹ್ಯ ಎಂಬ ಭಾಷಾತ್ರಯಗಳಿಂದಲೂ, ವ್ಯತ್ಯಾಸ, ಪ್ರಾತಿಲೋಮ್ಯ, ಗೋಮೂತ್ರೀ, ಪ್ರಘಸ, ಉಕ್ಷಣ, ಸುಧುರ, ಸಾಧು ಎಂಬ ಸಪ್ತನಿರೂಪಣ ವೈಖರಿಗಳಿಂದಲೂ ಇದು ತುಂಬಿದೆ; ಇಂತಹ ಮಹಾಭಾರತವನ್ನು ರಚಿಸುವುದು ಸ್ವತಃ ಭಗವಂತನಿಗಲ್ಲದೆ ಬೇರಾರಿಗೂ ಸಾಧ್ಯವಿಲ್ಲ ಎಂದು ಭಾವ.

ಮಹಾಭಾರತವನ್ನು ಸಮಗ್ರವಾಗಿ ಅರ್ಥ ಮಾಡಿಕೊಳ್ಳಲು ವ್ಯಾಸರಿಗೆ ಮತ್ತು ಅವರ ಅನುಗ್ರಹದಿಂದ ಬ್ರಹ್ಮದೇವರಿಗೆ ಮಾತ್ರ ಸಾಧ್ಯ ಎಂಬ ಮಾತನ್ನು ಇಲ್ಲಿ ಗಮನಿಸಬೇಕು; ಅದರ ಪರಿಜ್ಞಾನವೇ ಅಷ್ಟು ದುಸ್ತರವೆಂದ ಮೇಲೆ ರಚನೆ ಸುತರಾಂ ಇತರರಿಗೆ ಅಸಾಧ್ಯವೆಂಬುದು ಕೈಮುತ್ಯಸಿದ್ಧ. ಮಹಾಭಾರತವನ್ನು ಇತರ ಮತಾಚಾರ್ಯರು ಉನ್ನತಸ್ಥಾನದಲ್ಲಿ ಕಂಡಿಲ್ಲ ಎಂಬುದು ಅವರ ಕೃತಿಗಳಲ್ಲಿ ವೇದ್ಯವಾಗುವುದು. ಆದರೆ ಮಹಾಭಾರತವು ವೇದಾದಿಗಳಿಗಿಂತಲೂ ಮಿಗಿಲಾದ ಸರ್ವೋತ್ಕೃಷ್ಟವಾದ ಶಾಸ್ತ್ರ; ಮಹಾಭಾರತವೆಂಬ ಅದರ ಹೆಸರೇ ಅದರ ಹಿರಿಮೆಯನ್ನು ಸಾರುತ್ತದೆ. ಬ್ರಹ್ಮಾಂಡ, ಮಾರ್ಕಂಡೇಯ ಮೊದಲಾದ ಇತರ ಅನೇಕ ಪುರಾಣಗಳಲ್ಲೂ ಮಹಾಭಾರತದ ಹಿರಿಮೆ ಸ್ಪಷ್ಟವಾಗಿ ನಿರೂಪಿತವಾಗಿದೆ. ಈ ಎಲ್ಲ ವಿವರಗಳನ್ನು ಸಹ ಸಾಧಾರವಾಗಿ [೨]ನಿರೂಪಿಸಿ ಮಹಾಭಾರತದ

---

೧. ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥ —ಮಹಾಭಾರತ(೧೮/೫/೫೦)

೨. ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಚಕ್ಷತೇ।
ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ ॥
ದೇವೈರ್ಬ್ರಹ್ಮಾದಿಭಿಃ ಸರ್ವೈಃ ಋಷಿಭಿಶ್ಚ ಸಮನ್ವಿತೈಃ।
ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಮ್ ॥
ಮಹತ್ವಾದ್ಭಾರವತ್ವಾಚ್ಚ ಮಹಾಭಾರತಮುಚ್ಯತೇ।
ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ॥
ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ।
ಕೃತೋ ವಿಷ್ಣುವಶತ್ವಂ ಹಿ ಬ್ರಹ್ಮಾದೀನಾಂ ಪ್ರಕಾಶಿತಮ್ ॥ —ಮ.ಭಾ.ತಾ.ನಿ.(೨/೯-೧೨)
ಉಕ್ತಾ ರಾಮಕಥಾಽಪ್ಯಸ್ಮಿನ್ ಮಾರ್ಕಂಡೇಯಸಮಾಸ್ಯಯಾ।
ತಸ್ಮಾದ್ಯದ್ಭಾರತೇ ನೋಕ್ತಂ ತದ್ಧಿ ನೈವಾಸ್ತಿ ಕುತ್ರಚಿತ್ ॥
ಅತ್ರೋಕ್ತಂ ಸರ್ವಶಾಸ್ತ್ರೇಷು ನಹಿ ಸಮ್ಯಗುದಾಹೃತಮ್।
ಇತ್ಯಾದಿ ಕಥಿತಂ ಸರ್ವಂ ಬ್ರಹ್ಮಾಂಡೇ ಹರಿಣಾ ಸ್ವಯಮ್ ॥
ಮಾರ್ಕಂಡೇಯೇಽಪಿ ಕಥಿತಂ ಭಾರತಸ್ಯ ಪ್ರಶಂಸನಮ್।
ದೇವತಾನಾಂ ಯಥಾ ವ್ಯಾಸೋ ದ್ವಿಪದಾಂ ಬ್ರಾಹ್ಮಣೋ ವರಃ ॥

ಅಪೂರ್ವಸ್ಥಾನಮಾನವನ್ನು ನಿರೂಪಿಸಿದ ಹಿರಿಮೆಯು ಮಹಾಭಾರತತಾತ್ಪರ್ಯನಿರ್ಣಯಕ್ಕೆ ಸಲ್ಲುವುದು. ಮಹಾಭಾರತ ಬರೆದ ಕಾರಣಕ್ಕೆ ವ್ಯಾಸರು ಸರ್ವೋತ್ತಮನಾದ ಶ್ರೀಹರಿ ಎಂಬುದು ಹೇಗೋ ಹಾಗೆ, ಅದರ ತಾತ್ಪರ್ಯನಿರ್ಣಯ ಬರೆದ ಕಾರಣಕ್ಕೆ ಶ್ರೀಮಧ್ವರು ಜೀವೋತ್ತಮನಾದ ವಾಯು ಎಂದು ಸ್ಫುಟಪಡುವುದು.

## ಶ್ರೀಹರಿಯ ಪಾರಮ್ಯದ ಪ್ರತಿಪಾದನೆ

ಮಹಾಭಾರತದ ಕಥಾಸರಣಿಯೊಂದಿಗೆ ಅದರ ಮಹಾತಾತ್ಪರ್ಯ ಮಹಾವಿಷ್ಣುವಿನ ಪಾರಮ್ಯದ ಸಮರ್ಥನೆ ಎಂಬುದನ್ನು ಸ್ಫುಟವಾಗಿ ಪ್ರತಿಹಂತದಲ್ಲೂ ಸಹ ಸಮರ್ಥಿಸಿದ ವೈಶಿಷ್ಟ್ಯವೂ ಸಹ ಮಧ್ವಭಾರತಕ್ಕೆ ಸಲ್ಲುವುದು. ವೇದಾದಿಸಮಸ್ತಶಾಸ್ತ್ರಗಳ ಒಟ್ಟು ಹೃದಯ ವಿಷ್ಣುಸರ್ವೋ-ತ್ತಮತ್ವದ ಪ್ರತಿಪಾದನೆ. ರಾಮಾಯಣ, ಮಹಾಭಾರತಗಳಂತೂ ಮೇಲ್ನೋಟಕ್ಕೇ ವಿಷ್ಣುಪರ ಕೃತಿಗಳು. ರಾಮಾಯಣದ ರಾಮ, ಮಹಾಭಾರತದ ಕೃಷ್ಣ - ಇಬ್ಬರೂ ವಿಷ್ಣುವಿನ ಅವತಾರ. ಅವರ ಮಹಿಮೆ ಹೇಳುವ ಅವೆರಡೂ ವೈಷ್ಣವಕೃತಿಗಳೇ. ಭಾಗವತಾದಿಪುರಾಣಗಳು ವಿಷ್ಣುವಿನ ಅವತಾರಗಳನ್ನೇ ವರ್ಣಿಸುವ ವೈಷ್ಣವಪುರಾಣಗಳು. ಇತರ ಯಾವುದೇ ಮೂಲಕೃತಿಯಲ್ಲೂ ಸಹ ಮೂಲತಃ ವಿಷ್ಣುಸರ್ವೋತ್ತಮತ್ವವೇ ಪ್ರತಿಪಾದಿತವಾಗಿದೆ. ಭಾರತೀಯ ತತ್ತ್ವಶಾಸ್ತ್ರದ ಶಿಖರ-ವೆನ್ನಿಸಿರುವ ಭಗವದ್ಗೀತೆಯು ಶ್ರೀಕೃಷ್ಣನ ಉಪದೇಶ. ಅವನು ಭಗವಂತನಾದ್ದರಿಂದಲೇ ಅದು ಭಗವದ್ಗೀತೆ. ಸರ್ವಶ್ರೇಷ್ಠಸ್ತೋತ್ರವಾದ ವಿಷ್ಣುಸಹಸ್ರನಾಮ ಹೆಸರಿಂದಲೇ ಸೂಚಿತವಾಗುವಂತೆ ವಿಷ್ಣುಪರಕೃತಿ. ಆಪಾತತಃ ಕೆಲವೆಡೆ ಅನ್ಯದೇವತಾಪಾರಮ್ಯ ಕಂಡುಬಂದರೂ, ಪೂರ್ವಾಪರ ಸಮನ್ವಯ ಮಾಡಿಕೊಂಡಾಗ ಮೂಲತಃ ವಿಷ್ಣುಪಾರಮ್ಯವೇ ಸಕಲಶಾಸ್ತ್ರಗಳ ಮಹಾತಾತ್ಪರ್ಯ ಎಂಬುದು ಅವರ ಸ್ಪಷ್ಟ ನಿರೂಪಣೆ.

ರಾಮಾಯಣದಲ್ಲಿ ರಾಮಭಕ್ತರಲ್ಲಿ ಹಿರಿಯ ಹನುಮಂತ, ಸುಗ್ರೀವ ಮೊದಲಾದ ಎಲ್ಲರೂ ಸಹ ಹನುಮಂತನಿಂದ ಉಪಕೃತರು. ಅವನ ಮೂಲಕವೇ ಶ್ರೀರಾಮನ ಕೃಪೆಗೆ ಪಾತ್ರರಾದವರು. ಮಹಾಭಾರತದಲ್ಲಿ ಕೃಷ್ಣಸೇವಕರಲ್ಲಿ ಭೀಮಸೇನನದು ಅಗ್ರಸ್ಥಾನ. ಅರ್ಜುನ ಮೊದಲಾದ ಎಲ್ಲ ಸಾತ್ತ್ವಿಕರು ಆತನನ್ನು ಅವಲಂಬಿಸಿ, ಯಶಸ್ಸನ್ನು ಕಂಡವರು. ದುರ್ಯೋಧನ, ಜರಾಸಂಧ ಮೊದಲಾದಂತಹ ಮಹಾಖಳರು ಭೀಮನಿಂದಲೇ ಹತರಾದವರು. ಎಂದರೆ ಈ ಹನುಮಂತ, ಭೀಮಸೇನರಿಬ್ಬರೂ ಜೀವೋತ್ತಮನಾದ ಶ್ರೀವಾಯುದೇವರ ಅವತಾರ. ಇವರಿಬ್ಬರಿಂದಲೂ ಆರಾಧ್ಯನಾದ ಶ್ರೀರಾಮ, ಶ್ರೀಕೃಷ್ಣ ಇಬ್ಬರೂ ಮಹಾವಿಷ್ಣುವಿನ ಅವತಾರ. ಹೀಗೆ ಜೀವೋತ್ತಮರಾದ

---

ಆಯುಧಾನಾಂ ಯಥಾ ವಜ್ರಮೋಷಧೀನಾಂ ಯಥಾ ಯವಾಃ।
ತಥೈವ ಸರ್ವಶಾಸ್ತ್ರಾಣಾಂ ಮಹಾಭಾರತಮುತ್ತಮಮ್ ॥
ವಾಯುಪ್ರೋಕ್ತೇಽಪಿ ತತ್ ಪ್ರೋಕ್ತಂ ಭಾರತಸ್ಯ ಪ್ರಶಂಸನಮ್ ।
ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ॥
ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ।
ಏವಂ ಹಿ ಸರ್ವಶಾಸ್ತ್ರೇಷು ಪೃಥಕ್ ಪೃಥಗುದೀರಿತಮ್ ।
ಉಕ್ತೋಽರ್ಥಃ ಸರ್ವ ಏವಾಯಂ ಮಾಹಾತ್ಮ್ಯಕ್ರಮಪೂರ್ವಕಃ॥ -ಮ.ಭಾ.ತಾ.ನಿ.(೨/೫೦-೫೫)

ಶ್ರೀವಾಯುದೇವರಿಂದ ವಂದ್ಯನೆಂಬ ಕಾರಣಕ್ಕೂ ಸಹ ಶ್ರೀವಿಷ್ಣುವಿನ ಸರ್ವೋತ್ತಮತ್ವ ಸಿದ್ಧ-ವಾಗುತ್ತದೆ ಎಂಬುದನ್ನು ಮನೋಜ್ಞವಾಗಿ ಪ್ರತಿಪಾದಿಸಿರುವರು[೧].

## ರಾಮಾಯಣ ಮಹಾಭಾರತಗಳ ಪರಸ್ಪರ ಸಂಬಂಧದ ವಿವೇಚನೆ

ರಾಮಾಯಣ ಮಹಾಭಾರತಗಳು ವೈದಿಕಸಂಸ್ಕೃತಿಯ ಭಾರತೀಯಸಂಸ್ಕೃತಿಯ ದರ್ಶನಕ್ಕೆ ಅತ್ಯಗತ್ಯವೆನ್ನಿಸುವ ಎರಡು ದಿವ್ಯನೇತ್ರಗಳು ಎಂಬುದು ಸುಪ್ರಸಿದ್ಧ. ಆದರೆ, ಅವುಗಳ ಪರಸ್ಪರ ಸಂಬಂಧದ ವಿವೇಚನೆಯನ್ನು ಮಾಡಿದ ಸಾಧನೆ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಸಲ್ಲುವುದು. ಪ್ರತ್ಯೇಕವಾಗಿ ರಾಮಾಯಣದ ಕಥೆಯನ್ನು, ಮಹಾಭಾರತದ ಕಥೆಯನ್ನು ಕುರಿತು ಇತ್ತೀಚಿನ ದಿನಗಳಲ್ಲಿ ಅನೇಕ ಕೃತಿಗಳು ಹೊರಬರುತ್ತಿರುವುದು ನಿಜ ; ಆದರೆ, ಆ ಎರಡು ಕೃತಿಗಳಲ್ಲಿನ ಮುಖ್ಯಾಂಶಗಳಲ್ಲಿನ ಸಾಮ್ಯವನ್ನು ಗುರುತಿಸಿ ಅವುಗಳ ವಿಮರ್ಶೆಗೆ ಹೊಸ ತಿರುವನ್ನು ಕೊಟ್ಟ ಹಿರಿಮೆ ಆಚಾರ್ಯ ಶ್ರೀಮಧ್ವರದು. ರಾಮಾಯಣ ಮಹಾಭಾರತಗಳ ಪರಸ್ಪರ ಸಂಬಂಧ ತೀರ ವಿಶಿಷ್ಟವಾದುದು. ರಾಮಾಯಣದ ರಾಮನೇ ಮಹಾಭಾರತದ ಕೃಷ್ಣ, ಅಲ್ಲಿಯ ಹನುಮಂತ ಇಲ್ಲಿಯ ಭೀಮ; ಲಕ್ಷ್ಮಣನು ಬಲರಾಮ; ವಾಲಿಯು ಅರ್ಜುನ; ಸುಗ್ರೀವನು ಕರ್ಣ - ಇತ್ಯಾದಿ. ಅಲ್ಲಿ ನಾಯಕನಾದ ರಾಮನ ವನವಾಸ, ಇಲ್ಲಿ ನಾಯಕರಾದ ಪಾಂಡವರ ವನವಾಸ ; ಅಲ್ಲಿ ಮಂಥರೆಯ ಕುತಂತ್ರ, ಇಲ್ಲಿ ಶಕುನಿಯ ಕುತಂತ್ರ; ಅಲ್ಲಿ ರಾವಣನಿಂದ ಸೀತಾಪಹರಣಪ್ರಯತ್ನ ಇಲ್ಲಿ ಜಯದ್ರಥನಿಂದ ದ್ರೌಪದ್ಯಪಹರಣಪ್ರಯತ್ನ ; ಅಲ್ಲಿ ರಾಮ-ರಾವಣರ ಯುದ್ಧ ಇಲ್ಲಿ ಕುರು-ಪಾಂಡವರ ಯುದ್ಧ; ಹೀಗೆ ಕಥಾಸರಣಿಯಲ್ಲೂ ತುಂಬಾ ಸಾಮ್ಯವಿದೆ. ಇದನ್ನು ಮೊದಲ ಬಾರಿಗೆ ಗುರುತಿಸಿ ವಿವೇಚಿಸಿದ ಶ್ರೇಯಸ್ಸು ಸಹ ಮಹಾಭಾರತತಾತ್ಪರ್ಯನಿರ್ಣಯದ್ದೇ ಆಗಿದೆ. ಮೊದಲು ರಾಮಾವತಾರ, ಅನಂತರ ಕೃಷ್ಣಾವತಾರ; ಎರಡರಲ್ಲೂ ದೇವತೆಗಳದು ಭಗವಂತನ ಸೇವೆ. ಕೃಷ್ಣಾವತಾರ ಅನಂತರದ ಅವತಾರವಾದ್ದರಿಂದ ರಾಮಾವತಾರಕ್ಕಿಂತಲೂ ಕೃಷ್ಣಾವತಾರದಲ್ಲಿ ಅವರ ಸಾಧನೆ ಹೆಚ್ಚು ನಿರ್ಣಾಯಕ. ರಾಮಾವತಾರದಲ್ಲಿ ಅಪೂರ್ಣವಾದ ತಮ್ಮ ಸೇವೆಯನ್ನು ದೇವತೆಗಳು ಕೃಷ್ಣಾವತಾರದಲ್ಲಿ ಪೂರೈಸಿಕೊಂಡರು. ರಾಮಾವತಾರದಲ್ಲಿ ಹೆಚ್ಚಿನ ಪುಣ್ಯವನ್ನು ಗಳಿಸಿದ್ದ ಲಕ್ಷ್ಮಣ ಮೊದಲಾದವರು ಕೃಷ್ಣಾವತಾರದಲ್ಲಿ ಕಳೆದುಕೊಂಡು ತಮ್ಮ ಯೋಗ್ಯತೆಗೆ ಉಳಿಯುವಷ್ಟೇ ಪುಣ್ಯವನ್ನು ಹೊಂದಿದರು. ಆದ್ದರಿಂದಲೇ ರಾಮಾಯಣಕ್ಕಿಂತಲೂ ಮಹಾ-ಭಾರತದ ಮಹತ್ತ್ವ ಹೆಚ್ಚಿನದು; ಇಂತಹ ಅನೇಕ ವಿವರಗಳನ್ನು ನೀಡಿರುವ ಅನನ್ಯಕೃತಿ ಇದು.

ಇದರಂತೆ ರಾಮಾಯಣದ ಖಳನಾಯಕನಾದ ರಾವಣನ ಅನುಯಾಯಿಗಳಾಗಿದ್ದ ಇಂದ್ರಜಿತ್, ಅಕ್ಷ ಮೊದಲಾದ ಅಸುರರು ಮಹಾಭಾರತದ ಖಳನಾಯಕನಾದ ದುರ್ಯೋಧನನ ಅನುಯಾಯಿ-ಗಳಾಗಿ ದುಃಶಾಸನ, ಲಕ್ಷಣ ಮೊದಲಾದವರಾಗಿ ಜನಿಸಿದರು ಎಂಬ ಮಾಹಿತಿಯನ್ನೂ ನೀಡಿರುವರು.

---

೧. ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ ।
ಕೃತೋ ವಿಷ್ಣುವಶತ್ವಂ ಹಿ ಬ್ರಹ್ಮಾದೀನಾಂ ಪ್ರಕಾಶಿತಮ್ ॥
ಯತಃ ಕೃಷ್ಣವಶೇ ಸರ್ವೇ ಭೀಮಾದ್ಯಾಃ ಸಮ್ಯಗೀರಿತಾಃ ।
ಸರ್ವೇಷಾಂ ಜ್ಞಾನದೋ ವಿಷ್ಣುಃ ಯಶೋದಾತೇತಿ ಚೋದಿತಃ ॥
ಯಸ್ಮಾದ್ವ್ಯಾಸಾತ್ಮನಾ ತೇಷಾಂ ಭಾರತೇ ಯಶ ಊಚಿವಾನ್ ।
ಜ್ಞಾನದಶ್ಚ ಶುಕಾದೀನಾಂ ಬ್ರಹ್ಮರುದ್ರಾದಿರೂಪಿಣಾಮ್ ॥ -ಮ.ಭಾ.ತಾ.ನಿ.(೨/೧೨-೧೪)

## [೧]ಪ್ರಾಣತತ್ತ್ವದ ಹಿರಿಮೆ

ವೇದಾಂತದಲ್ಲಿ ಬ್ರಹ್ಮತತ್ತ್ವದ ಅನಂತರದ ಸ್ಥಾನ ಪ್ರಾಣತತ್ತ್ವದ್ದು. ವೇದೋಪನಿಷತ್ತುಗಳಲ್ಲಿ ಪ್ರಾಣತತ್ತ್ವದ ಮಹಿಮೆಯನ್ನು ನಿರೂಪಿಸುವ ಭಾಗ ಗಣನೀಯವಾಗಿಯೇ ಕಂಡುಬರುವುದು. ಮುಖ್ಯವಾಗಿ ಋಗ್ವೇದದ ಪವಮಾನಮಂಡಲ, ದಶೋಪನಿಷತ್ತುಗಳಲ್ಲಿನ ಪ್ರಾಣತತ್ತ್ವದ ಬಗೆಗಿನ ವಿವರಗಳು ಈ ಅಂಶವನ್ನು ದೃಢಪಡಿಸುವುವು. ಪ್ರಾಣತತ್ತ್ವದ ಹಿರಿಮೆಯು ಇತಿಹಾಸಪುರಾಣ-ಗಳಲ್ಲೂ ಸಹ ಸ್ಫುಟವಾಗೇ ನಿರೂಪಿತವಾಗಿರುವುದನ್ನು ರಾಮಾಯಣದ ಹನುಮಂತ ಹಾಗೂ ಮಹಾಭಾರತದ ಭೀಮಸೇನನ ಹಿರಿಮೆಯನ್ನು ವಿವೇಚಿಸುವ ಮೂಲಕ ಮಹಾಭಾರತ-ತಾತ್ಪರ್ಯನಿರ್ಣಯವು ಅದನ್ನು ಅನಾವರಣಗೊಳಿಸಿರುವ ರೀತಿ ಅನನ್ಯವೆನ್ನಿಸುವಂತಹುದು.

ಜರಾಸಂಧ ಮೊದಲಾದವರ ಸಂಹಾರ ಮತ್ತು ದುರ್ಯೋಧನನ ಸಂಹಾರ ಇವುಗಳಿಂದ ಭೀಮಸೇನನು ವಿಷ್ಣುವಿನ ಭೂಭಾರಹರಣಕಾರ್ಯದಲ್ಲಿ ಪ್ರಧಾನಾಂಗ ಎಂದು ತಿಳಿಯುವುದು. ಜರಾಸಂಧವಧೆ ಮತ್ತು ದುರ್ಯೋಧನವಧೆ ಇವೆರಡೂ ಮಹಾಭಾರತದ ಅತ್ಯಂತ ಪ್ರಮುಖ-ವಾದ ಎರಡು ಸಂಹಾರಕಾರ್ಯಗಳು. ಬ್ರಹ್ಮ ಹಾಗೂ ಶಿವನ ವರಗಳಿಂದ ಜರಾಸಂಧ ಅವಧ್ಯ-ನಾಗಿದ್ದರೆ, ಶಿವಪಾರ್ವತಿಯರ ನಿರ್ಮಾಣದ ವಜ್ರಕಾಯದ ಕಾರಣದಿಂದಾಗಿ ದುರ್ಯೋಧನನು ಅವಧ್ಯನಾಗಿದ್ದ; ಅವರಿಬ್ಬರನ್ನೂ ಸಂಹರಿಸಿ ಶ್ರೀಕೃಷ್ಣನನ್ನು ಪೂಜಿಸಿದ್ದು ಶ್ರೀಭೀಮಸೇನನ ಹಿರಿಮೆ. ಆದ್ದರಿಂದ ಭೂಭಾರಹರಣಕಾರ್ಯದಲ್ಲಿ ಅವನೇ ಶ್ರೀಕೃಷ್ಣನ ಪ್ರಧಾನಸೇವಕ ಎಂದು ಭಾವ.

ರಾಮಾಯಣದಲ್ಲಿ ಶ್ರೀರಾಮಭಕ್ತರಲ್ಲೆಲ್ಲ ಹನುಮಂತನಿಗೇ ಅಗ್ರಸ್ಥಾನ. ಮಹಾಭಾರತದಲ್ಲಿ ಶ್ರೀಕೃಷ್ಣ-ಭಕ್ತರಲ್ಲೆಲ್ಲ ಶ್ರೀಭೀಮಸೇನನಿಗೇ ಅಗ್ರಸ್ಥಾನ. ರಾಮನಿಗೆ ಎಂದೂ ಅಪಚಾರವೆಸಗದ್ದು ಶ್ರೀಹನುಮಂತನ ಹಿರಿಮೆಯಾದರೆ, ಶ್ರೀಕೃಷ್ಣನಿಗೆ ಎಂದೂ ಅಪಚಾರವೆಸಗದ್ದು ಶ್ರೀಭೀಮಸೇನನ ಹಿರಿಮೆ. ಆದ್ದರಿಂದಲೇ ಅವರಿಬ್ಬರೂ ಶ್ರೀಹರಿಯ ಅಚ್ಛಿನ್ನಭಕ್ತರು. ಇಂದ್ರ ಮೊದಲಾದವರು ವಾಲಿ ಮೊದಲಾದ ರೂಪದಿಂದ ರಾಮನಿಗೆ ಅಪ್ರಿಯರಾಗಿ ವರ್ತಿಸಿದರೆ, ಅವರೇ ಕೃಷ್ಣಾವತಾರದಲ್ಲಿ ಅರ್ಜುನ ಮೊದಲಾದ ರೂಪದಿಂದ ಪ್ರಿಯರೆನ್ನಿಸಿ ಸೇವೆ ಸಲ್ಲಿಸಿದರು. ಸೂರ್ಯ ಮೊದಲಾದ ದೇವತೆಗಳು ಸುಗ್ರೀವ ಮೊದಲಾದ ರೂಪದಿಂದ ಶ್ರೀರಾಮಪ್ರಿಯರಾಗಿ ಸೇವೆ ಸಲ್ಲಿಸಿದರೆ, ಕೃಷ್ಣಾವತಾರದಲ್ಲಿ ಕರ್ಣ ಮೊದಲಾದ ರೂಪದಿಂದ ಅವತರಿಸಿ ದುರ್ಯೋಧನನ ಪಕ್ಷವಹಿಸಿ, ಶ್ರೀಕೃಷ್ಣನಿಗೆ ಅಪ್ರಿಯರೆನ್ನಿಸಿದರು. ಆದರೆ ಶ್ರೀವಾಯುದೇವರು ಮಾತ್ರ ಹನುಮಂತನಾಗಿ ಶ್ರೀರಾಮಭಕ್ತಾಗ್ರೇಸರರೆನ್ನಿಸಿದರೆ, ಭೀಮ-ಸೇನನಾಗಿ ಶ್ರೀಕೃಷ್ಣಭಕ್ತಾಗ್ರೇಸರ ಎನ್ನಿಸಿದರು. ಎಂದರೆ ಎರಡು ಅವತಾರಗಳಲ್ಲೂ ಅವರದ್ದೇ ಪ್ರಧಾನ ಭಗವತ್ಕಾರ್ಯಸಾಧಕತ್ವ. ಮಹಾಭಾರತತಾತ್ಪರ್ಯನಿರ್ಣಯದ ಈ ವಿವೇಚನೆ ಎಷ್ಟು ಮಾರ್ಮಿಕ ಎಂಬುದನ್ನು ಗಮನಿಸಬೇಕು. ಒಂದರ್ಥದಲ್ಲಿ ಇದು ಉಪನಿಷತ್ತುಗಳು ಪ್ರತಿಪಾದಿಸುವ 'ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ' ಎಂಬ ಪ್ರಾಣತತ್ತ್ವದ ಹಿರಿಮೆಯ ವಿಶ್ಲೇಷಣೆಯಂತಿದೆ.

---

೧. ಭೂಭಾರಹಾರಿಣೋ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ।
ಮಾಗಧಾದಿವಧಾದೇವ ದುರ್ಯೋಧನವಧಾದಪಿ ॥ -ಮ.ಭಾ.ತಾ.ನಿ.(೨/೧೬)

೨. ತಸ್ಮಾದ್ಬಲಪ್ರವೃತ್ತಸ್ಯ ರಾಮಕೃಷ್ಣಾತ್ಮನೋ ಹರೇಃ।
ಅಂತರಂಗಂ ಹನೂಮಾಂಶ್ಚ ಭೀಮಸ್ತತ್ಕಾರ್ಯಸಾಧಕೌ ॥ -ಮ.ಭಾ.ತಾ.ನಿ.(೨/೩೪)

ಶೇಷಾದಿದೇವತೆಗಳು ರಾಮಭಕ್ತರಾಗಿದ್ದಾಗಲೂ, ಕೃಷ್ಣಭಕ್ತರಾಗಿದ್ದಾಗಲೂ ಸಹ ಯಾವಾಗಲೂ ಒಂದೇ ರೀತಿಯಾಗಿ ವರ್ತಿಸದೆ, ಕೆಲವೊಮ್ಮೆ ಭಗವಂತನಿಗೆ ವಿರೋಧವಾಗಿಯೇ ವರ್ತಿಸಿರುವರು. ಆದ್ದರಿಂದ ಅವರು ಮೂಲರೂಪದಲ್ಲೂ, ಅವತಾರರೂಪದಲ್ಲೂ ಅಚ್ಛಿನ್ನಧರ್ಮರು ಎನ್ನಿಸದೇ ಹೋದರು. ಅವರು ಮೂಲತಃ ಭಾಗವತರೇ ಆದರೂ, ಭಗವತ್ಸೇವೆಯನ್ನು ಮಾಡುವಲ್ಲಿ ಒಮ್ಮೊಮ್ಮೆ ತಪ್ಪಿರುವುದುಂಟು. ಆದರೆ ವಾಯುದೇವರು ಮಾತ್ರ ಮೂಲರೂಪದಲ್ಲೂ, ಅವತಾರ-ರೂಪಗಳಲ್ಲೂ ಸದಾ ಶುದ್ಧಭಾಗವತಧರ್ಮರತರಾಗಿದ್ದ 'ಪರಮಭಾಗವತಶಿರೋಮಣಿಗಳು'. ಆದ್ದರಿಂದಲೇ ಅವರು ಪರಶುಕ್ಲತ್ರಯರಲ್ಲಿ ಒಬ್ಬರು ಎಂಬ ವಿವೇಚನೆ ತೀರ ವಿನೂತನ[೧].

## ಮಹಾಭಾರತದಲ್ಲಿ ರಾಮಾಯಣ[೨]

ಮಹಾಭಾರತ ರಾಮಾಯಣಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಂಡುಬರುವ ಒಂದು ಪ್ರಮುಖವಾದ ಅಂಶ ಮಹಾಭಾರತವು ರಾಮಾಯಣವನ್ನು ಒಳಗೊಂಡಿದೆ ಎಂಬುದು.

---

೧. ಅನ್ಯೇ ಭಾಗವತತ್ವೇಽಪಿ ಛಿನ್ನಧರ್ಮಾಃ ಕ್ವಚಿತ್ ಕ್ವಚಿತ್ ।
ಸ್ಯಮಂತಕಾರ್ಥೇ ರಾಮೋಽಪಿ ಕೃಷ್ಣಸ್ಯ ವಿಮನಾಽಭವತ್ ॥
ಅವಮೇನೇಽರ್ಜುನಃ ಕೃಷ್ಣಂ ವಿಪ್ರಸ್ಯ ಶಿಶುರಕ್ಷಣೇ ।
ಪ್ರದ್ಯುಮ್ನ ಉದ್ಧವಃ ಸಾಂಬೋಽನಿರುದ್ಧಾದ್ಯಾಶ್ಚ ಸರ್ವಶಃ ॥
ಹರೇರಿಷ್ಟಂ ಸುಭದ್ರಾಯಾಃ ಫಲ್ಗುನೇ ದಾನಮಂಜಸಾ ।
ಜ್ಞಾತ್ವಾಽಪಿ ರುರುಧುಃ ಸಮ್ಯಕ್ ಸಾತ್ಯಕಿಃ ಕೃಷ್ಣಸಂಮಿತಮ್ ॥
ಕದಾಚಿನ್ಮನ್ಯತೇ ಪಾರ್ಥಂ ಧರ್ಮಜೋಽಪಿ ನರಂ ಹರಿಮ್ ।
ಮತ್ವಾಽಬಿಭೇಜ್ಜರಾಸಂಧವಧೇ ಕೃಷ್ಣಮುದೀರಿತುಮ್ ॥
ಬಂಧನಂ ಶಂಕಮಾನೋಽಪಿ ಕೃಷ್ಣಸ್ಯ ವಿದುರೋಽಪಿ ತು ।
ಕೌರವೇಯಸಭಾಮಧ್ಯೇ ನಾವತಾರಮರೋಚಯತ್ ॥
ನಕುಲಃ ಕರದಾನಾಯ ಪ್ರೇಷಯಾಮಾಸ ಕೇಶವೇ ।
ಅವಮೇನೇ ಹರೇರ್ಬುದ್ಧಿಂ ಸಹದೇವಃ ಕುಲಕ್ಷಯಾತ್ ॥
ದೇವಕೀವಸುದೇವಾದ್ಯಾ ಮೇನಿರೇ ಮಾನುಷಂ ಹರಿಮ್ ।
ಭೀಷ್ಮಸ್ತು ಭಾರ್ಗವಂ ರಾಮಮವಮೇನೇ ಯುಯೋಧ ಚ ॥
ದ್ರೋಣಕರ್ಣದ್ರೌಣಿಕೃಪಾಃ ಕೃಷ್ಣಾಭಾವೇ ಮನೋ ದಧುಃ ।
ದೇವಾಃ ಶಿವಾದ್ಯಾ ಅಪಿ ತು ವಿರೋಧಂ ಚಕ್ರಿರೇ ಕ್ವಚಿತ್ ॥
ಋಷಿಮಾನುಷಗಂಧರ್ವಾ ವಕ್ತವ್ಯಾಃ ಕಿಮುತಃ ಪರೇ ।
ಜನ್ಮಜನ್ಮಾಂತರಾಜ್ಞಾನಾದವಜಾನಂತಿ ಯತ್ ಸದಾ ॥
ತಸ್ಮಾದೇಕೋ ವಾಯುರೇವ ಧರ್ಮೇ ಭಾಗವತೇ ಸ್ಥಿತಃ ।
ಲಕ್ಷ್ಮೀಃ ಸರಸ್ವತೀ ಚೇತಿ ಪರಶುಕ್ಲತ್ರಯಂ ಸ್ಮೃತಮ್ ॥
ಸರ್ವಮೇತಚ್ಚ ಕಥಿತಂ ತತ್ರ ತತ್ರಾಮಿತಾತ್ಮನಾ ।
ವ್ಯಾಸೇನೈವ ಪುರಾಣೇಷು ಭಾರತೇ ಚ ಸ್ವಸಂವಿದಾ ॥ -ಮ.ಭಾ.ತಾ.ನಿ.(೧೮/೧೯-೨೯)

೨. ರಾಮಕಥೆಯು ಮಹಾಭಾರತದ ವನಪರ್ವದ ಮಾರ್ಕಂಡೇಯಸಮಾಸ್ಯಾಪ್ರಸಂಗದಲ್ಲಿ 'ರಾಮೋಪಾ-ಖ್ಯಾನಪರ್ವ'ವೆಂಬ ಉಪಪರ್ವದಲ್ಲಿ ನಿರೂಪಿತವಾಗಿದೆ, ಆದರಲ್ಲಿ ಒಟ್ಟು ೧೯ ಅಧ್ಯಾಯಗಳೂ ಸುಮಾರು ೮೦೦ ಶ್ಲೋಕಗಳೂ ಇವೆ.

ರಾಮಾಯಣದಲ್ಲಿ ಮಹಾಭಾರತದ ಪ್ರಸ್ತಾಪವಿಲ್ಲ; ಆದರೆ, ಮಹಾಭಾರತದಲ್ಲಿ ರಾಮಾಯಣದ ಪ್ರಸ್ತಾಪ ಅನೇಕರೀತಿಯಲ್ಲಿ ಬಂದಿದೆ ಎಂಬುದನ್ನು ಸ್ಫುಟಪಡಿಸಿ, ಆ ಬಗ್ಗೆ ಹೆಚ್ಚು ವಿಮರ್ಶೆಯನ್ನು ಮಾಡಿದ ಮತಾಚಾರ್ಯರು ಎಂಬುದು ಶ್ರೀಮದಾಚಾರ್ಯರ ಹಿರಿಮೆ[೧].

ಮಹಾಭಾರತದ ಸಭಾಪರ್ವ ಮೊದಲಾದ ಪ್ರಸಂಗಗಳಲ್ಲಿ ಮತ್ಸ್ಯಕೂರ್ಮಾದಿ ಇತರ ಭಗವದವತಾರಗಳ ವಿವರವೂ ಬಂದಿದೆ; ರಾಮಾಯಣದ ಕಥೆ ಮಾತ್ರವಲ್ಲದೆ, ಮಹಾಭಾರತದಲ್ಲಿ ಸಕಲ ಶಾಸ್ತ್ರವಿಚಾರವೂ ಬಂದಿದೆ ಎಂದು ಭಾವ. ಇದರ ಖಿಲಭಾಗವಾದ ಹರಿವಂಶದಲ್ಲಿ ಸಮಗ್ರ ಕೃಷ್ಣಾವತಾರದ ಕಥೆ, ರಾಜವಂಶಗಳ ವಿವರ, ಪಿತೃಕಲ್ಪ ಮೊದಲಾದವುಗಳು ಬಂದಿವೆ.

ರಾಮಾಯಣದ ರಾಮ, ಮಹಾಭಾರತದ ಕೃಷ್ಣ – ಇಬ್ಬರೂ ಮಹಾವಿಷ್ಣುವಿನ ಅವತಾರ. ಅದರಂತೆ ರಾಮಾಯಣದ ಹನುಮಂತ, ಮಹಾಭಾರತದ ಭೀಮ – ಇಬ್ಬರೂ ವಾಯುವಿನ ಅವತಾರ. ಅಲ್ಲಿಯ ಸೀತೆ – ಇಲ್ಲಿಯ ರುಗ್ಮಿಣೀ ಮತ್ತು ಸತ್ಯಭಾಮೆ. ಅಲ್ಲಿಯ ವಾಲಿ – ಇಲ್ಲಿಯ ಅರ್ಜುನ; ಸುಗ್ರೀವ – ಕರ್ಣ; ನೀಲ – ಧೃಷ್ಟದ್ಯುಮ್ನ; ಅಂಗದ – ಅಭಿಮನ್ಯು; ತಾರ – ದ್ರೋಣ ಹಾಗೂ ಉದ್ಧವ; ಮೈಂದವಿವಿದರು – ನಕುಲಸಹದೇವರು; ಜಾಂಬವಂತ – ಯುಧಿಷ್ಠಿರ ಹಾಗೂ ವಿದುರ. ದೈತ್ಯರಲ್ಲೂ ಹೀಗೆಯೇ. ಅಲ್ಲಿಯ ರಾವಣ ಕುಂಭಕರ್ಣರು – ಇಲ್ಲಿಯ ಶಿಶುಪಾಲ ದಂತವಕ್ರರು; ಮಂಥರೆ – ದುರ್ಯೋಧನನ ಪತ್ನಿ; ಇಂದ್ರಜಿತ್ – ದುಃಶಾಸನ; ಪ್ರಹಸ್ತ – ಪುರೋಚನ; ಅಕ್ಷ – ಲಕ್ಷಣ; ಖರ – ಚಿತ್ರಸೇನ.

ಅದರಂತೆ ಪ್ರಸಂಗಗಳಲ್ಲೂ ತುಂಬಾ ಸಾಮ್ಯವಿದೆ. ಅಲ್ಲಿ ತಂದೆಯಾದ ದಶರಥನ ವರಗಳಿಂದಾಗಿ ರಾಮನ ವನವಾಸ; ಇಲ್ಲಿ ದೊಡ್ಡಪ್ಪನಾದ ಧೃತರಾಷ್ಟ್ರನಿಂದಾಗಿ ಭೀಮಾದಿ ಪಾಂಡವರ ವನವಾಸ. ಅಲ್ಲಿಯದು ಮಂಥರೆಯ ದುರ್ಬೋಧನೆಯಾದರೆ, ಇಲ್ಲಿ ದುರ್ಯೋಧನನ ದುರ್ಬೋಧನೆ. ಅಲ್ಲಿ ದಶರಥನ ಪುತ್ರಶೋಕದ ಮರಣಕ್ಕೆ ಶ್ರವಣಕುಮಾರನ ತಂದೆತಾಯಿಗಳ ಶಾಪ ಕಾರಣ; ಇಲ್ಲಿ ಪಾಂಡುರಾಜನ ನಿರ್ಯಾಣಕ್ಕೆ ಕಿಂದಮಮುನಿಯ ಶಾಪದ ನಿಮಿತ್ತ. ಇಬ್ಬರಿಗೂ ಶಾಪ ಒದಗಲು ಬಾಣಪ್ರಯೋಗವೇ ಕಾರಣ. ಅಲ್ಲಿಯ ಸೀತಾಸ್ವಯಂವರದಂತೆ ಇಲ್ಲಿಯ ದ್ರೌಪದೀಸ್ವಯಂವರ; ಅಲ್ಲಿಯದು ಶಿವಧನುಸ್ಸೇ ಆಗಿದ್ದರೆ, ಇಲ್ಲಿಯದು ಶಿವನ ವರದಿಂದಾಗಿ ಅಧಾರ್ಯವಾಗಿದ್ದ ಧನುಸ್ಸು; ಅಲ್ಲಿ ಧನುರ್ಭಂಗವಾದರೆ, ಇಲ್ಲಿ ಮತ್ಸ್ಯಯಂತ್ರದ ಭಂಗ; ಅಲ್ಲಿ ವನವಾಸದ ಅನಂತರ ಯುದ್ಧ ನಡೆದಂತೆ, ಇಲ್ಲಿಯೂ ವನವಾಸ ಅಜ್ಞಾತವಾಸಗಳ ಅನಂತರವೇ ಯುದ್ಧ; ಅಲ್ಲಿ ರಾವಣನಿಂದ ಸೀತಾಲಕ್ಷ್ಮಿಯ ಅಪಹರಣ, ಇಲ್ಲಿ ದುರ್ಯೋಧನನಿಂದ ಪಾಂಡವರ ರಾಜ್ಯಲಕ್ಷ್ಮಿಯ ಅಪಹರಣ; ಅಲ್ಲಿ ಹನುಮಂತನ ರಾಯಭಾರವಿದ್ದರೆ, ಇಲ್ಲಿ ಶ್ರೀಕೃಷ್ಣನ ರಾಯಭಾರ. ರಾವಣನದು ಹನುಮಂತನನ್ನು ಬಂಧಿಸುವ ಪ್ರಯತ್ನವಿದ್ದಂತೆ, ಇಲ್ಲಿ ದುರ್ಯೋಧನನದು ಶ್ರೀಕೃಷ್ಣನನ್ನು ಬಂಧಿಸುವ ಪ್ರಯತ್ನ. ಎಂದಿನಂತೆ ಇಬ್ಬರದೂ ವೈಫಲ್ಯವೇ. ಅಲ್ಲಿ 'ರಾಮನಿಂದ ನಿನ್ನ ಸರ್ವನಾಶ' ಎಂದು ಹನುಮಂತ ನೀಡಿದ ಎಚ್ಚರಿಕೆಯಾದರೆ, ವಿಶೇಷವಾಗಿ 'ಭೀಮನಿಂದ ನಿನ್ನ ಸರ್ವನಾಶ' ಎಂದು

---

೧. ಉಕ್ತಾ ರಾಮಕಥಾಽಪ್ಯಸ್ಮಿನ್ ಮಾರ್ಕಂಡೇಯಸಮಾಸ್ಯಯಾ।
ತಸ್ಮಾದ್ಯದ್ಭಾರತೇ ನೋಕ್ತಂ ತದ್ಧಿ ನೈವಾಸ್ತಿ ಕುತ್ರಚಿತ್ ॥
ಅತ್ರೋಕ್ತಂ ಸರ್ವಶಾಸ್ತ್ರೇಷು ನಹಿ ಸಮ್ಯಗುದಾಹೃತಮ್ । ಇತ್ಯಾದಿ –(ಮ.ಭಾ.ತಾ.ನಿ. ೨/೫೦,೫೧)

ಕೃಷ್ಣ ನೀಡಿದ ಎಚ್ಚರಿಕೆ. ಹನುಮಂತ ತನ್ನ ಬಾಲದ ಬೆಂಕಿಯಿಂದ ಲಂಕೆಯನ್ನು ದಹಿಸಿದ್ದಂತೆ, ಇಲ್ಲಿ ಕೃಷ್ಣನು ಭೀಷ್ಮಾದಿಗಳನ್ನು ನಾಶಪಡಿಸಿದ.

ರಾಮಾಯಣದಲ್ಲಿ ವನವಾಸಕಾಲದಲ್ಲಿ ಸೀತೆಗಾಗಿ ಚಿನ್ನದ ಜಿಂಕೆಯನ್ನು ತರುವ ರಾಮನ ಪ್ರಸಂಗ ಬಂದಿದ್ದರೆ, ಇಲ್ಲಿ ವನವಾಸಕಾಲದಲ್ಲಿ ದ್ರೌಪದಿಗಾಗಿ ಚಿನ್ನದ ಪುಷ್ಪಗಳನ್ನು ತರುವ ಭೀಮನ ಪ್ರಸಂಗ. ಅಲ್ಲಿ ರಾಮನಿಂದ ಮಾರೀಚನ ಹನನದಂತೆ, ಇಲ್ಲಿ ಭೀಮನಿಂದ ಮಣಿಮಂತನ ಹನನ. ಅಲ್ಲಿ ರಾವಣನ ಸಾವಿನೊಂದಿಗೆ ಯುದ್ಧ ಮುಕ್ತಾಯವಾದರೆ, ದುರ್ಯೋಧನನ ಪತನ-ದೊಂದಿಗೆ ಇಲ್ಲಿ ಯುದ್ಧ ಮುಕ್ತಾಯ. ಅಲ್ಲಿ ರಾವಣನ ತಮ್ಮನಾದ ರಾಮಭಕ್ತ ವಿಭೀಷಣ ರಾಮನ ಪಕ್ಷವನ್ನು ಸೇರಿದಂತೆ, ಇಲ್ಲಿ ದುರ್ಯೋಧನನ ತಮ್ಮನಾದ ಯುಯುತ್ಸು ಧರ್ಮರಾಜನ ಪಕ್ಷವನ್ನು ಸೇರಿದ. ಅವೆರಡೂ ಯುದ್ಧದ ಮುನ್ನ ನಡೆದ ಘಟನೆಗಳೇ. ಅಲ್ಲಿ ವಿಭೀಷಣನಿಗೆ ಪಟ್ಟಾಭಿಷೇಕ-ವಾದಂತೆ, ಇಲ್ಲಿ ಯುಯುತ್ಸುವಿಗೂ ಪಟ್ಟಾಭಿಷೇಕವಾಯಿತು. ಅಲ್ಲಿ ನಾಯಿಯೊಂದಕ್ಕೆ ರಾಮ-ನಿಂದ ನ್ಯಾಯ ಸಂದಂತೆ, ಇಲ್ಲಿ ಧರ್ಮರಾಜನಿಂದ ನಾಯಿಯೊಂದಕ್ಕೆ ನ್ಯಾಯ ಸಂದಿತು. ಅಲ್ಲಿ ಮೃತಪ್ರಾಯನಾದ ಲಕ್ಷ್ಮಣನಿಗೆ ಹನುಮಂತ ಸಂಜೀವನದಿಂದ ಪ್ರಾಣದಾನ ಮಾಡಿದಂತೆ, ಇಲ್ಲಿ ಹತಧೈರ್ಯನಾದ ಅರ್ಜುನನಿಗೆ ಶ್ರೀಕೃಷ್ಣ ಗೀತಾಮೃತದಿಂದ ಜ್ಞಾನದಾನ ಮಾಡಿದ. ಆ ಸಂಜೀ-ವನದಿಂದ ಇತರ ಕಪಿಗಳೆಲ್ಲ ಬದುಕಿದಂತೆ, ಇಲ್ಲಿಯ ಗೀತಾಮೃತದಿಂದ ಸಕಲಜಗತ್ತೂ ಬದುಕಿದೆ.

ಮಹಾಭಾರತ ಮತ್ತು ರಾಮಾಯಣ ಯುದ್ಧಗಳು ಜಗತ್ತು ಕಂಡ ಎರಡು ಶ್ರೇಷ್ಠ ಮಹಾಯುದ್ಧಗಳು. ಎರಡೂ ದುಷ್ಟದಮನಕ್ಕೋಸ್ಕರ ನಡೆದ ಯುದ್ಧಗಳೇ. ಆದರೆ ಎರಡರಲ್ಲೂ ತುಂಬ ವೈಲಕ್ಷಣ್ಯವಿದೆ. ರಾಮಾಯಣದ ಯುದ್ಧವು ದೇವದಾನವಯುದ್ಧವೇ. ಆದರೆ ಅದರಲ್ಲಿ ದಾನವರು ಹೆಚ್ಚಾಗಿ ದಾನವರೂಪದಲ್ಲಿಯೇ ಇದ್ದರು. ದೇವತೆಗಳು ಹಾಗಲ್ಲ. ಅವರದೆಲ್ಲ ಪ್ರಧಾನವಾಗಿ ವಾನರರೂಪ. ಸರ್ವೋತ್ತಮನಾದ ಶ್ರೀರಾಮ ನರರೂಪದಲ್ಲಿದ್ದ; ಹಾಗೇ ನರ-ರೂಪದಲ್ಲಿದ್ದ ಮತ್ತೊಬ್ಬ ಅವನ ತಮ್ಮ ಲಕ್ಷ್ಮಣ ಮಾತ್ರ. ಪರಸ್ಪರ ಬಂಧುಗಳು ಆ ಸೈನ್ಯಗಳಲ್ಲಿ ಸೇರಿರಲಿಲ್ಲ. ರಾವಣನ ತಮ್ಮ ವಿಭೀಷಣ ಹೊರತು ಬೇರಾವ ಬಾಂಧವರೂ ಪರಸ್ಪರ ಹೋರಾಟಕ್ಕಿಳಿದಿರಲಿಲ್ಲ. ರಾವಣನ ಸೈನ್ಯದಲ್ಲಂತೂ ಒಬ್ಬ ದೇವಾಂಶನೂ ಇರಲಿಲ್ಲ. ಮಹಾಭಾರತ ಯುದ್ಧದಲ್ಲಾದರೋ ಉಭಯಪಕ್ಷದವರಲ್ಲಿ ಬಂಧುಜನ ತುಂಬಿಹೋಗಿದ್ದಾರೆ. ಇಷ್ಟು ಅಪಾರ-ಸಂಖ್ಯೆಯಲ್ಲಿ ಬಾಂಧವರೇ ಪಾಲ್ಗೊಂಡ ಯುದ್ಧ ಮತ್ತೊಂದು ನಡೆದಿಲ್ಲ. ಉಭಯಪಕ್ಷದಲ್ಲೂ ರಾಕ್ಷಸರು ಪಾಲ್ಗೊಂಡಿದ್ದರು. ಸ್ವತಃ ಕೌರವರೇ ದೈತ್ಯರಾಗಿದ್ದರು. ಘಟೋತ್ಕಚ ಮತ್ತು ಅವನ ಪರಿವಾರ ಪಾಂಡವರ ಕಡೆಯ ರಾಕ್ಷಸ ವರ್ಗದವರಾದರೆ, ಅಲಂಬುಸ ಅಲಾಯುಧ, ಅಲಂಬಲ ಮೊದಲಾದ ರಾಕ್ಷಸರ ದೊಡ್ಡ ಹಿಂಡೇ ಕೌರವರ ಪಕ್ಷದಲ್ಲಿತ್ತು. ಕೌರವರ ಕಡೆ ದ್ರೋಣ, ಕೃಪ, ಅಶ್ವತ್ಥಾಮರೆಂಬ ಮೂವರೂ ಬ್ರಾಹ್ಮಣರು. ಆದರೆ ಪಾಂಡವರ ಕಡೆ ಒಬ್ಬ ಬ್ರಾಹ್ಮಣನೂ ಇರಲಿಲ್ಲ. ಪಾಂಡವರ ಕಡೆಯ ಸಾತ್ಯಕಿ ಮತ್ತು ಚೇಕಿತಾನ ಮತ್ತು ಕೌರವರ ಕಡೆಯ ಕೃತವರ್ಮ - ಈ ಮೂವರು ಯಾದವವೀರರು. ಮಹಾಭಾರತಯುದ್ಧದಲ್ಲಿ ಪಾಲ್ಗೊಂಡಿದ್ದ ಭೀಷ್ಮ-ಶಿಖಂಡಿ, ಸಾತ್ಯಕಿ-ಭೂರಿಶ್ರವಸ್, ದ್ರೋಣ-ದ್ರುಪದ, ವಿರಾಟ-ಸುಶರ್ಮ, ಕರ್ಣ-ಅರ್ಜುನ ಹೀಗೆ ಅನೇಕ ಪ್ರಮುಖರಿಗೆ ಪರಸ್ಪರ ಪ್ರತ್ಯೇಕ ವೈರವೂ ಇದ್ದಿತು. ಅಲ್ಲಿಯ ಅಣ್ಣ ವಾಲಿ ತಮ್ಮ ಸುಗ್ರೀವನಿಂದಾಗಿ

ಶ್ರೀರಾಮನಿಂದ ಮರೆಯಿಂದ ಹತನಾದ; ಇಲ್ಲಿಯ ಅಣ್ಣ ಕರ್ಣ ತಮ್ಮ ಅರ್ಜುನನಿಂದಾಗಿ ಶ್ರೀಕೃಷ್ಣನ ಸೂಚನೆಯಂತೆ ರಥದಿಂದ ಕೆಳಗಿಳಿದಿದ್ದಾಗ ಹತನಾದ. ಅಲ್ಲಿಯ ಅಣ್ಣ ಇಲ್ಲಿಯ ತಮ್ಮ ಎಂಬುದು ವಿಶೇಷವೇ. ವಾಲಿ ರಾಮಾಯಣದ ಖಳನಾದ ರಾವಣನ ಮೈತ್ರಿ ಬೆಳೆಸಿದ್ದರೆ, ಇಲ್ಲಿಯ ಅಣ್ಣ ಕರ್ಣ ಮಹಾಭಾರತದ ಖಳನಾದ ದುರ್ಯೋಧನನ ಮೈತ್ರಿ ಬೆಳೆಸಿದ್ದ. ಅಲ್ಲಿ ವಾಲಿ ರಾಮ-ನಿಗೆ ಅಪ್ರಿಯನಾದರೆ, ಇಲ್ಲಿ ಕರ್ಣ ಕೃಷ್ಣನಿಗೆ ಅಪ್ರಿಯನಾದ. ಅಲ್ಲಿಯ ಪತನ ಇಂದ್ರದೇವನದಾದರೆ, ಇಲ್ಲಿಯ ಪತನ ಸೂರ್ಯದೇವನದಾಯಿತು. ಅಲ್ಲಿ ತಮ್ಮನ ಹೆಂಡತಿಯಾದ ರುಮೆಯನ್ನು ವಾಲಿ ತನ್ನವಳನ್ನಾಗಿಸಿಕೊಂಡಿದ್ದರೆ, ಇಲ್ಲಿ ತಮ್ಮಂದಿರ ಪತ್ನಿಯಾದ ದ್ರೌಪದಿಯನ್ನು ಕರ್ಣ ನಿಷ್ಕಾರಣವಾಗಿ ಅವಮಾನಿಸಿದ. ಅಲ್ಲಿಯ ರಾವಣನ ಕುತಂತ್ರಕ್ಕೆ ಮಾರೀಚನ ನೆರವು ಲಭಿಸಿದ್ದಂತೆ, ಇಲ್ಲಿಯ ದುರ್ಯೋಧನನ ಕಪಟಕ್ಕೆ ಸೋದರಮಾವನಾದ ಶಕುನಿಯ ನೆರವು ಲಭಿಸಿತ್ತು.

ಅಲ್ಲಿ ಕಪಿಗಳಿಗೆ ಹಾಗೂ ಲಕ್ಷ್ಮಣನಿಗೆ ಇಂದ್ರಜಿತ್ತಿನ ಸರ್ಪಾಸ್ತ್ರ ಮಾರಕವಾಗಿದ್ದಂತೆ, ಇಲ್ಲಿ ಅರ್ಜುನನಿಗೆ ಕರ್ಣನ ಸರ್ಪಾಸ್ತ್ರ ಮಾರಕವಾಗಿತ್ತು. ರಾಮ, ಹನುಮಂತರ ಅನುಗ್ರಹದಿಂದ ಲಕ್ಷ್ಮಣ ಅದರಿಂದ ಪಾರಾದಂತೆ, ಕೃಷ್ಣ ಭೀಮರ ಅನುಗ್ರಹದಿಂದ ಅರ್ಜುನ ಇದರಿಂದ ಪಾರಾದ.

ಇಂದ್ರಜಿತ್ತಿನ ಬ್ರಹ್ಮಾಸ್ತ್ರ ಹನುಮಂತನಲ್ಲಿ ವಿಫಲವಾಯಿತು. ಅಶ್ವತ್ಥಾಮರು ಪ್ರಯೋಗಿಸಿದ ನಾರಾಯಣಾಸ್ತ್ರ ಬ್ರಹ್ಮಶಿರೋಸ್ತ್ರಗಳು ಭೀಮನಲ್ಲಿ ನಿರೀಕ್ಷಿತವಾದ ಫಲವನ್ನು ನೀಡಲಿಲ್ಲ. ಅಲ್ಲಿಯ ಸುಂದರಕಾಂಡದಲ್ಲಿ ಹನುಮಂತನ ರಾಯಭಾರ; ಇಲ್ಲಿಯ ಉದ್ಯೋಗಪರ್ವದಲ್ಲಿ ಶ್ರೀಕೃಷ್ಣನ ರಾಯಭಾರ. ಎಂದರೆ ಸುಂದರಕಾಂಡ ರಾಮಾಯಣದ ಉದ್ಯೋಗಪರ್ವ; ಉದ್ಯೋಗಪರ್ವ ಮಹಾಭಾರತದ ಸುಂದರಕಾಂಡ. ಶ್ರೀರಾಮನ ಕಪಿಸೈನ್ಯದಲ್ಲಿ ಒಬ್ಬ ಅಯೋಗ್ಯನೂ ಇರಲಿಲ್ಲ. ಅದರಂತೆ ಶ್ರೀಕೃಷ್ಣನ ಪಾಂಡವಸೇನೆಯಲ್ಲಿ ಒಬ್ಬ ಅಯೋಗ್ಯನೂ ಇರಲಿಲ್ಲ. ರಾಮಾಯಣದಲ್ಲಿ ವನವಾಸಕಾಲದಲ್ಲಿ ರಾವಣನಿಂದ ಸೀತಾಪಹರಣದ ಪ್ರಯತ್ನ ನಡೆದಂತೆ, ಮಹಾಭಾರತದ ವನಪರ್ವದಲ್ಲಿ ಜಯದ್ರಥನಿಂದ ದ್ರೌಪದಿಯ ಅಪಹರಣದ ಪ್ರಯತ್ನ ನಡೆಯಿತು. ಅದು ಲಕ್ಷ್ಮಿಯ ಅಪಹರಣದ ಪ್ರಯತ್ನವಾದರೆ, ಇದು ಸರಸ್ವತಿಯ ಅಪಹರಣದ ಪ್ರಯತ್ನವಾಯಿತು. ಎರಡು ಪ್ರಯತ್ನಗಳೂ ಸಂಪೂರ್ಣ ವಿಫಲವಾದವು ಎಂಬುದು ಮತ್ತೊಂದು ವಿಶೇಷ.

ರಾಮಬಾಣದಿಂದ ರಾವಣ ಹತನಾದರೆ, ಭೀಮನ ಗದಾಪ್ರಹಾರದಿಂದ ದುರ್ಯೋಧನ ಹತನಾದ. ಅದು ಸರ್ವೋತ್ತಮನ ಮಹಿಮೆಯನ್ನು ಸಾರಿದಂತೆ, ಇದು ಜೀವೋತ್ತಮನ ಮಹಿಮೆಯನ್ನು ಸಾರುತ್ತದೆ.

## ಕೃಷ್ಣಕಥೆ ಪಾಂಡವಕಥೆಗಳ ಕಾಲಾನುಕ್ರಮಸಮನ್ವಯ

ಕೃಷ್ಣನ ಕಥೆಯೊಂದಿಗೆ ಪಾಂಡವರ ಕಥೆಯೂ ಸಹ ಶ್ರೀಮದ್ಭಾಗವತಾದಿಗಳಲ್ಲಿ ಬಂದಿದ್ದರೆ, ಪಾಂಡವರ ಕಥೆಯೊಂದಿಗೆ ಕೃಷ್ಣನ ಕಥೆಯು ಹರಿವಂಶ, ವಿಷ್ಣುಪುರಾಣ ಮತ್ತು ಭಾಗವತ ಮೊದಲಾದವುಗಳಲ್ಲಿ ಬಂದಿದೆ. ಅದರಲ್ಲೂ ಮಹಾಭಾರತ ವಿಶೇಷವಾಗಿ ಪಾಂಡವಕಥೆಯಾದರೆ, ಭಾಗವತಾದಿಗಳು ಪ್ರಧಾನವಾಗಿ ಕೃಷ್ಣಕಥೆಯಾಗಿವೆ. ಆ ಎರಡು ಕಥೆಗಳಲ್ಲೂ ಸಹ ಕಾಲಕ್ರಮದ ಹೊಂದಾಣಿಕೆ ಬಗ್ಗೆ ಚಿಂತನೆ ನಡೆಸುವ ಕೃತಿಗಳು ಕಂಡುಬರುವುದಿಲ್ಲ; ಎಂದರೆ ಕೃಷ್ಣಾವತಾರ-ವಾದಾಗ ಪಾಂಡವರು ಎಲ್ಲಿದ್ದರು? ಪಾಂಡವರ ವನವಾಸಕಾಲಕ್ಕೆ ಕೃಷ್ಣಕಥೆ ಯಾವ ಹಂತದಲ್ಲಿತ್ತು?

ರುಗ್ಮಿಣೀಕಲ್ಯಾಣದ ಪ್ರಸಂಗದಲ್ಲಿ ಪಾಂಡವಕಥೆಯ ಘಟ್ಟ ಯಾವುದಾಗಿತ್ತು? ಮೊದಲಾದ ಪ್ರಶ್ನೆಗಳು ಉದ್ಭವಿಸುವುದು ಸಹಜ. ಈ ದಿಕ್ಕಿನಲ್ಲಿ ವಿಚಾರ ಮಾಡಿ, ಸಮರ್ಪಕ ಉತ್ತರ ನೀಡಿದ ಏಕಮಾತ್ರ ಕೃತಿ ಎಂಬ ಹಿರಿಮೆಯೂ ಮಹಾಭಾರತತಾತ್ಪರ್ಯನಿರ್ಣಯಕ್ಕೇ ಸಲ್ಲುತ್ತದೆ. ಹನ್ನೊಂದನೆಯ ಅಧ್ಯಾಯದಿಂದ ಮುಂದಿನ ಎಲ್ಲ ಅಧ್ಯಾಯಗಳಲ್ಲೂ ಹೀಗೆ ಕೃಷ್ಣಕಥೆ, ಪಾಂಡವಕಥೆಗಳನ್ನು ಕಾಲಕ್ರಮದಲ್ಲಿ ಸ್ವಲ್ಪವೂ ಗೊಂದಲವಾಗದಂತೆ ನಿರೂಪಿಸಿರುವ ಅಪೂರ್ವ ಹಿರಿಮೆ ಇದರದು.

## ಸಮಸ್ಯೆಗಳ ವಿಶ್ಲೇಷಣೆ

ಮಹಾಭಾರತವು ಸಮಸ್ಯೆಗಳ ಬೀಡು. ದ್ರೌಪದಿಯ ಪಂಚಪತಿತ್ವ, ಭೀಮಸೇನನ ದುಃಶಾಸನ-ರಕ್ತಪಾನ, ದುರ್ಯೋಧನನ ಊರುಭಂಗ ಮೊದಲಾದ ಮುಖ್ಯಸಮಸ್ಯೆಗಳನ್ನು ಪರಿಹರಿಸಲು ಆ ಮುಂಚಿನ ಯಾರಿಂದಲೂ ಸಾಧ್ಯವಾಗಿರಲಿಲ್ಲ. ಬದಲಾಗಿ ಅವೆಲ್ಲ ತಪ್ಪೇ ಎಂಬ ಭಾವನೆ ಬರುವಂತೆಯೇ ನಿರೂಪಿಸಿದವರೇ ಹೆಚ್ಚು. ಈ ಬಗ್ಗೆ ಹೆಚ್ಚಿನ ಕೃತಿಗಳು ಪ್ರತಿಗಾಮಿಧೋರಣೆಯನ್ನೇ ಅನುಸರಿಸಿ, ಮೂಲಕೃತಿಗೆ ನ್ಯಾಯ ತೋರುವಲ್ಲಿ ವಿಫಲಗೊಂಡಿವೆ. ಆದರೆ ಮಹಾಭಾರತ-ತಾತ್ಪರ್ಯನಿರ್ಣಯ ಇವಕ್ಕೆಲ್ಲ ಮೂಲಗ್ರಂಥಗಳ ಆಧಾರದಿಂದಲೇ ನೀಡಿರುವ ಪರಿಹಾರ ತೀರ ವಿನೂತನವೂ, ಖಚಿತವೂ ಆದುದು. ಮಹಾಭಾರತತಾತ್ಪರ್ಯನಿರ್ಣಯ ಎಂಬ ಇದರ ಹೆಸರು ಅದೆಷ್ಟು ಔಚಿತ್ಯಪೂರ್ಣ ಎನ್ನುವುದನ್ನು ಇಂತಹ ವಿವೇಚನೆಗಳಿಂದ ಅರ್ಥಮಾಡಿಕೊಳ್ಳಬಹುದು.

ಕೌರವಸಭೆಯಲ್ಲಿ ದ್ರೌಪದಿಯು ಭೀಷ್ಮಾದಿಗಳನ್ನು ಪ್ರಶ್ನಿಸುವಳು : ಯುಧಿಷ್ಠಿರನು ದ್ಯೂತದಲ್ಲಿ ಸೋತಿದ್ದು ಮೊದಲು ನನ್ನನ್ನೊ? ಅಥವಾ ತನ್ನನ್ನೋ? ಈ ಪ್ರಶ್ನೆಯ ಔಚಿತ್ಯವನ್ನು ವಿಶ್ಲೇಷಿಸುವುದರಲ್ಲಿ ಎಲ್ಲ ವಿಮರ್ಶಕರೂ ಸೋತವರೇ. ಆದರೆ ಇದರ ಬಗ್ಗೆ ತಾತ್ಪರ್ಯನಿರ್ಣಯ ನೀಡುವ ಬೆಳಕು ಎಷ್ಟು ಅಪೂರ್ವ ಎಂಬುದನ್ನು ಗಮನಿಸಬೇಕು. ಪತಿ ಎನ್ನಿಸಿದವನು ತನ್ನ ಪತ್ನಿಯನ್ನು ದ್ಯೂತದಲ್ಲಿ ಸೋಲುವ ಹಕ್ಕನ್ನು ಹೊಂದಿಯೇ ಇಲ್ಲ. ಆದ್ದರಿಂದ ಅವನು ಮೊದಲು ನನ್ನನ್ನು ಸೋಲುವುದು ಧರ್ಮವಲ್ಲ. ತನ್ನನ್ನು ಸೋತಾದ ಮೇಲೆ ಸಹ ಅವನು ತನ್ನ ಪತ್ನಿಯನ್ನು ಸೋಲುವಂತಿಲ್ಲ. ತಾನು ಸೋಲುವಾಗಲೇ ಅರ್ಧಾಂಗಿಯಾದ ತನ್ನ ಪತ್ನಿಯ ಸಮೇತನಾಗಿಯೇ ಸೋತಿರುತ್ತಾನೆ. ಪ್ರತ್ಯೇಕವಾಗಿ ಅವಳನ್ನು ಪಣವಾಗಿಟ್ಟು ಸೋಲುವ ಹಕ್ಕು ಅವನಿಗೆ ಇಲ್ಲವೇ ಇಲ್ಲ. [೧]ಪತ್ನಿ ಎಂದಿಗೂ ಸಹ ಅಧೀನಳಾಗಿರುವುದು ತನ್ನ ಪತಿಗೇ ಹೊರತು ಮತ್ತೊಬ್ಬ ಗಂಡಸಿಗಲ್ಲ[೨].

---

೧. ಈ ಸೂಕ್ಷ್ಮವನ್ನು ಅರ್ಥಮಾಡಿಕೊಳ್ಳದೆ ''ದ್ರೌಪದಿಯ ಹೇಳಿಕೆ ಮೂರ್ಖತನದ್ದು ಹಾಗೂ ಭಯಂಕರ-ವಾಗಿತ್ತು. ಈ ಪ್ರಶ್ನೆಗೆ ಏನೇ ಉತ್ತರ ಸಿಕ್ಕಿದ್ದರೂ ಆ ಉತ್ತರವು ಅವಳಿಗೆ ಅನುಕೂಲವಾಗಿರಲಿಲ್ಲ''(ಪು. ೧೦೫) ಎಂಬ ಯುಗಾಂತ (ಲೇ.ಇರಾವತಿ ಕರ್ವೆ, ಪ್ರಾ.ಸಾಹಿತ್ಯ ಅಕಾಡೆಮಿ, ಹೊಸದೆಹಲಿ) ಎಂಬ ಕೃತಿಯಲ್ಲಿನ ಮಾತು ಎಷ್ಟು ಅವಿವೇಕದ್ದು ಎಂಬುದು ಸ್ಫುಟಪಡುವುದು; ಈ ಯುಗಾಂತ ಕೃತಿಯಲ್ಲಿ ''ಮಹಾಭಾರತಕಾಲದ ಜನರಿಗೆ ಲಿಪಿ ಮತ್ತು ಲೇಖನಗಳ ಅರಿವು ಇರಲಿಲ್ಲ''(ಪು.೨೫) ಮೊದಲಾದ ಇನ್ನೂ ಅನೇಕ ಅಪ್ರಬುದ್ಧವಾದ ಹೇಳಿಕೆಗಳು ಸಾಕಷ್ಟಿವೆ.

೨. ಕಥಂ ದ್ಯೂತೇ ಜಿತಾ ಚಾಹಮಜಿತೇ ಸ್ವಪತೌ ಸ್ಥಿತೇ ।
ಸಮಾನಧರ್ಮಿಣೀಮಾಹುರ್ಭಾರ್ಯಾಂ ಯಸ್ಮಾದ್ವಿಪಶ್ಚಿತಃ ॥
ಸಹೈವ ಕರ್ಮ ಕರ್ತವ್ಯಂ ಪತೌ ದಾಸೇ ಹಿ ಭಾರ್ಯಯಾ ।
ದಾಸೀತ್ವಂ ನ ಪೃಥಙ್ ಮೇ ಸ್ಯಾತ್ ಜಿತೇಽಪಿ ಹಿ ಪತೌ ತತಃ ॥ –ಮ.ಭಾ.ತಾ.ನಿ.(೨೧/೩೩೦, ೩೩೧)

ಭೀಮಸೇನನು ರಕ್ತಪಾನ ಮಾಡಲೇ ಇಲ್ಲ. ತನ್ನ ಪ್ರತಿಜ್ಞೆಯನ್ನು ಪೂರೈಸಲೆಂದು ಪರಸ್ತ್ರೀಯರನ್ನು ಕೆಣಕುವ ದುಷ್ಟಜನರ ಮನಸ್ಸಿನಲ್ಲಿ ಭೀತಿ ಹುಟ್ಟಿಸಲೆಂದು ಕುಡಿದಂತೆ ನಟಿಸಿದನು ಮಾತ್ರ. ಇದನ್ನು ಮೂಲಭಾರತದ ಹಿನ್ನೆಲೆಯಲ್ಲಿ ಅವರು ಸಮರ್ಥಿಸಿರುವುದಂತೂ ತೀರ ವಿಶಿಷ್ಟವಾದುದು[1]. ಹೀಗೆ ದುಃಶಾಸನವಧೆಯ ಕಾರ್ಯವು ನಿಂದ್ಯವಾಗದೆ, ರಣಯಜ್ಞರೂಪವಾಗಿ ವಂದ್ಯವೇ ಆಯಿತು ಎಂದೂ ಸಹ ನಿರೂಪಿಸಿರುವರು[2]. ದುರ್ಯೋಧನನ ವಧೆಯು ಸಹ ಯುದ್ಧಧರ್ಮಕ್ಕೆ ಅನುಗುಣವಾಗಿ ನಡೆದ ಶ್ರೇಷ್ಠಕಾರ್ಯ ಎಂಬುದಾಗಿ ಸಮರ್ಥಿಸಿರುವರು.

## ಅಂಶಾವತಾರಾದಿಗಳ ನಿರೂಪಣೆ

ರಾಮಾಯಣ, ಮಹಾಭಾರತ ಹಾಗೂ ಪುರಾಣಗಳ ಮತ್ತೊಂದು ವಿಶೇಷತೆ ಎಂದರೆ ಅವುಗಳಲ್ಲಿ ಉದ್ದಕ್ಕೂ ಕಂಡುಬರುವ ದೇವದೈತ್ಯರ ಅಂಶಾವತಾರಗಳ ವಿವರಣೆ. ಮಹಾಭಾರತದ ಆದಿಪರ್ವದಲ್ಲಂತೂ [3]ಅಂಶಾವತರಣಪರ್ವ ಎಂಬ ಉಪಪರ್ವವೇ ಉಂಟು. ಅದರ ಇತರ ಸ್ಥಳಗಳಲ್ಲೂ, ಪುರಾಣಾಂತರಗಳಲ್ಲೂ ಅವುಗಳ ಉಲ್ಲೇಖ ವಿಶೇಷವಾಗಿ ಕಂಡುಬರುತ್ತವೆ. ರಾಮಾಯಣ, ಮಹಾಭಾರತಗಳ ಪ್ರಮುಖ ದೇವದೈತ್ಯರ ಅಂಶಾವತಾರ ವಿಶೇಷವಾಗಿ ಪ್ರಚಾರದಲ್ಲಿದೆ. ಆದರೆ ಅವನ್ನೆಲ್ಲ ವ್ಯವಸ್ಥಿತವಾಗಿ ನಿರೂಪಿಸಿರುವ ಅಸಾಧಾರಣ ಹಿರಿಮೆ ಮಹಾಭಾರತತಾತ್ಪರ್ಯನಿರ್ಣಯದ್ದು. ಮಹಾಭಾರತವನ್ನು ಕುರಿತು ಗ್ರಂಥ ರಚಿಸಿರುವ ಬೇರಾರೂ ತೀರಾ ಸಾಮಾನ್ಯರೀತಿಯಲ್ಲೂ ಇವುಗಳ

---

೧. ಇತ್ಯುಕ್ತ್ವಾ ತಂ ಪುನಃ ಪ್ರಾಹ ಕಥಂ ತೇ ನರಶೋಣಿತಮ್ ।
ಪೀತಂ ನರೇಣೈವ ಸತಾ ನ ಪೀತಮಿತಿ ಸೋಽಬ್ರವೀತ್ ॥
ದಂತಾಂತರಂ ನ ಮೇ ಪ್ರಾಪ ಶೋಣಿತಂ ತತ್ ಸುತಸ್ಯ ತೇ ।
ಪ್ರತಿಜ್ಞಾಪಾಲನಾಯಾಪಿ ಪ್ರತಿಕರ್ತುಂ ಚ ತತ್ಕೃತಮ್ ॥
ಭೀಷಣಾಯ ಚ ಶತ್ರೂಣಾಂ ಪೀತವಚ್ಚ ಪ್ರದರ್ಶಿತಮ್ ।
ವೇದದೃಷ್ಟಶ್ಚ ಧರ್ಮೋಽಯಮಿತಿ ಪಾಪಜನಂ ಪ್ರತಿ ॥ -ಮ.ಭಾ.ತಾ.ನಿ.(೨೮/೨೧೬-೨೧೮)

೨. ದಂತಾಂತರಂ ನ ಪ್ರವಿವೇಶ ತಸ್ಯ ರಕ್ತಂ ಹ್ಯಪೇಯಂ ಪುರುಷಸ್ಯ ಜಾನತಃ ॥
ತಥಾಽಪಿ ಶತ್ರುಪ್ರತಿಭೀಷಣಾಯ ಪಪಾವಿವಾಸ್ವಾದ್ಯ ಪುನಃ ಪುನರ್ಭೃಶಮ್ ।
ಸ್ಮರನ್ ನೃಸಿಂಹಂ ಭಗವಂತಮೀಶ್ವರಂ ಸ ಮನ್ಯುಸೂಕ್ತಂ ಚ ದದರ್ಶ ಭಕ್ತ್ಯಾ ॥
'ಯಸ್ತೇ ಮನ್ಯೋ' ಇತ್ಯತೋ ನಾರಸಿಂಹಂ ಸೋಮಂ ತಸ್ಮೈ ಚಾರ್ಪಯಚ್ಛೋಣಿತಾಖ್ಯಮ್ ।
ಯುದ್ಧಾಖ್ಯಯಜ್ಞೇ ಸೋಮಬುದ್ಧ್ಯಾಽರಿವಕ್ಷ ಇಹೇತಿ ಸಾಮ್ನಾ ಗದಯಾ ವಿಭಿಂದನ್ ॥
-ಮ.ಭಾ.ತಾ.ನಿ.(೨೭/೧೪೭-೧೪೯)

೩. ಮಹಾಭಾರತದ ಆದಿಪರ್ವದಲ್ಲಿನ ಉಪಪರ್ವಗಳಲ್ಲಿ 'ಅಂಶಾವತರಣ'ಪರ್ವ ಎಂಬುದು ಒಂದು. ಹೆಚ್ಚಿನ ಅಂಶಾವತಾರದ ವಿವರಗಳು ಈ ಭಾಗದಲ್ಲಿ ಮುಖ್ಯವಾಗಿ ಬಂದಿದ್ದು ಪ್ರಾಸಂಗಿಕವಾಗಿ ಕೃತಿಯ ಬೇರೆಡೆಗಳಲ್ಲೂ ಕಂಡುಬರುವುದುಂಟು. ಇತರ ಪುರಾಣಗಳಲ್ಲಿ ಮುಖ್ಯವಾಗಿ ಈ ಅಂಶಾವತಾರಗಳ ವಿವರಣೆ ಹೆಚ್ಚಾಗಿ ಬಂದಿದೆ. ಪುಣೆಯ ಭಂಡಾರಕರ್ ಸಂಸ್ಥೆಯ ಪರಿಷ್ಕೃತ ಆವೃತ್ತಿಯಲ್ಲಿ ಅಂಶಾವತರಣ ಪರ್ವ ಲುಪ್ತವಾಗಿದೆ. ಅದು ಅನಂತರದ ಸೇರ್ಪಡೆ ಎಂಬುದು ಅವರ ವಾದ. ಆದರೆ ಕ್ರಿ.ಶ. ೧೨ನೇ ಶತಮಾನದ ಕ್ಷೇಮೇಂದ್ರನ ಭಾರತಮಂಜರಿಯಲ್ಲಿ ಅಂಶಾವತಾರವು ಕಂಡುಬರುವುದರಿಂದ ಅದು ಪ್ರಾಚೀನ ಎಂಬುದು ನಿಶ್ಚಿತವಾಗುವುದು. ಅದರಂತೆ ಪರ್ವಸಂಗ್ರಹಪರ್ವವು ಸಹ (ಆದಿಪರ್ವ ಶ್ಲೋ.೯-೧೭, ಪರ್ವಸಂಗ್ರಹ ಶ್ಲೋ.೧೮-೨೪, ಅಂಶಾವತರಣ - ಶ್ಲೋಕ ೯೮-೨೨೫- ಭಾರತಮಂಜರೀ).

ವಿವರಣೆಯ ಬಗ್ಗೆ ಯತ್ನಿಸಿಲ್ಲ. ಬದಲಾಗಿ ಅಂತಹ ಭಾಗಗಳನ್ನು ಪ್ರಕ್ಷಿಪ್ತ ಮೊದಲಾದ ಕಾರಣಗಳನ್ನು ಮುಂದಿಟ್ಟು ಗೌಣವಾಗಿ ಕಂಡವರು ಕೆಲವರಾದರೆ, ವಿರುದ್ಧವಾಗಿ ಚಿಂತನೆ ಮಾಡಿದವರು ಮತ್ತೆ ಕೆಲವರು. ಶ್ರೀಮಧ್ವರು ಈ ವಿವರಗಳನ್ನು ಸಮಗ್ರವಾಗಿ ಪರಿಶೀಲಿಸಿ, ಒಟ್ಟು ಕಥಾಸರಣಿಯಲ್ಲಿ ಈ ಅಂಶಾವತಾರದ ಪರಿಕಲ್ಪನೆಯ ಮಹತ್ತ್ವವನ್ನು ಅರ್ಥಪೂರ್ಣವಾಗಿ ವಿವರಿಸಿರುವರು[೧].

## ವರ-ಶಾಪಗಳ ವಿವೇಚನೆ

ಇತಿಹಾಸ, ಪುರಾಣಪ್ರಪಂಚದ ಮತ್ತೊಂದು ವೈಶಿಷ್ಟ್ಯ ಅವುಗಳಲ್ಲಿ ಉದ್ದಕ್ಕೂ ಕಂಡುಬರುವ ವರ-ಶಾಪಗಳ ವಿವರಗಳು. ಸಾಮಾನ್ಯವಾಗಿ ದೈತ್ಯರ ಉನ್ನತಿಗೆ ವರಗಳು ಕಾರಣವಾಗಿದ್ದರೆ, ದೇವತೆಗಳ ಕ್ಲೇಶಗಳಿಗೆ ಅವರಿಗೆ ಒದಗಿದ್ದ ಶಾಪಗಳು ಕಾರಣವಾಗಿರುತ್ತವೆ. ಕೆಲವು ಪ್ರಸಂಗಗಳಲ್ಲಿ ದೈತ್ಯರಿಗೆ ಶಾಪಗಳೂ, ದೇವತೆಗಳಿಗೆ ವಿಶೇಷವರಗಳೂ ಸಹ ಇರುವುದುಂಟು. ಇವೆಲ್ಲವುಗಳ ವಿವೇಚನೆಯನ್ನು ವಿಶೇಷರೀತಿಯಲ್ಲಿ ಮಾಡುವ ಪ್ರಯತ್ನ ಮುಂಚಿನ ಯಾವ ವ್ಯಾಖ್ಯಾನಕಾರರಿಂದಲೂ ನಡೆದಿರಲಿಲ್ಲ. ಶ್ರೀಮಧ್ವರ ಮಹಾಭಾರತತಾತ್ಪರ್ಯನಿರ್ಣಯ ಇಂತಹ ವರ-ಶಾಪಗಳ ಬಗ್ಗೆಯೂ ಸಹ ಖಚಿತವೂ, ಸಮಗ್ರವೂ ಆದ ವಿವರಗಳನ್ನು ನೀಡಿದೆ. ಉದಾಹರಣೆಗೆ ಕರ್ಣನ ಪ್ರಸಂಗವನ್ನು ಗಮನಿಸಬಹುದು. ಕರ್ಣನಿಗೆ ಪರಶುರಾಮರ ಶಾಪವಿದ್ದ ವಿವರವನ್ನು ಜನ ತಿಳಿದಿರುವರು. ಆದರೆ ಆತನಿಗೆ ಪರಶುರಾಮರಿಂದ ಲಭಿಸಿದ್ದ ಅಪೂರ್ವ ವರ, ಅನುಗ್ರಹಗಳನ್ನು ಯಾರೂ ಗಮನಿಸಿಲ್ಲ. ಅದರ ವಿವರಗಳನ್ನು ಸಮಗ್ರವಾಗಿ ನೀಡಿರುವ ಶ್ರೇಯಸ್ಸು ಈ ಕೃತಿಯದು (೧೫/೫೭-೫೯). ಅದರಂತೆ ಉತ್ತಮರೆನ್ನಿಸುವವರು ಪರಾಭವಗೊಂಡಾಗ ಅದಕ್ಕೆ ಹಿನ್ನೆಲೆಯಾಗಿ ಅವರಿಗೆ ಒದಗಿದ್ದ ಶಾಪವು ಕಾರಣ ಎಂದಾಗುವುದು ; ಅದರಂತೆ ತಾರತಮ್ಯದಲ್ಲಿ ಕಡಿಮೆ ಎನ್ನಿಸಿದವರು ಯಶಸ್ಸನ್ನು ಸಾಧಿಸಿದಾಗ ಅದಕ್ಕೆ ಹಿನ್ನೆಲೆಯಾಗಿ ಅವರಿಗಿದ್ದ ವರವು ಕಾರಣವಾಗುವುದು ಎಂಬ ಪ್ರಮೇಯವು ಸಹ ತಿಳಿಯುವಂತಾಗಿ ದೇವತಾತಾರತಮ್ಯವು ಅಬಾಧಿತ ಎಂದಾಗುವುದು.

## ಜೀವದ್ವಯಾವೇಶದ ಪರಿಕಲ್ಪನೆ

ಪೂತನಾ, ಶಿಶುಪಾಲ, ದಂತವಕ್ತ್ರ ಮೊದಲಾದ ಅಸುರರು ಸದ್ಗತಿಯನ್ನು ಪಡೆದುಕೊಂಡಂತೆ ಭಾಗವತಾದಿಗ್ರಂಥಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಪೂತನೆ ತಾಟಕೆಯೆಂಬ ರಾಕ್ಷಸಿ, ಶಿಶುಪಾಲನು ಹಿರಣ್ಯಕಶಿಪು, ದಂತವಕ್ತ್ರನು ಹಿರಣ್ಯಾಕ್ಷ ಎಂಬ ಮೊದಲಾದ ವಿವರಗಳು ಅವುಗಳಲ್ಲೇ ಬಂದಿದ್ದು ಅವರೆಲ್ಲ ಸ್ವರೂಪತಃ ಭಗವದ್ದ್ವೇಷಿಗಳಾದ ಅಸುರರು. ಅವರಿಗೆಲ್ಲ ದುರ್ಗತಿ ಖಚಿತ ಎಂಬ

---

೧. ಮಹಾಭಾರತತಾತ್ಪರ್ಯನಿರ್ಣಯದಲ್ಲಿ ನಿರೂಪಿತವಾಗಿರುವ ಅಂಶಾವತಾರದ ವಿವರಗಳನ್ನು ಶ್ರೀನಾರಾಯಣಪಂಡಿತರು ತಮ್ಮ 'ಅಂಶಾವತಾರ' ಎಂಬ ಕೃತಿಯಲ್ಲಿ ಅಕಾರಾದಿಕ್ರಮದಲ್ಲಿ ಸಂಗ್ರಹಿಸಿಕೊಟ್ಟಿರುವರು. ಕೆಲವರು ಸಲ್ಲದ ಕಾರಣಗಳನ್ನು ಮುಂದಿರಿಸಿ ಈ ಕೃತಿಯ ಪ್ರಾಮಾಣ್ಯವನ್ನು ಹಾಗೂ ಅದರ ನಾರಾಯಣಪಂಡಿತಾಚಾರ್ಯರ ಕರ್ತೃತ್ವವನ್ನು ಪ್ರಶ್ನಿಸುವುದುಂಟು. ಆದರೆ, ತಮ್ಮ ಅಪೂರ್ವ ಭಾಗವತಾದಿಗಳ ಟಿಪ್ಪಣಿಗಳಿಂದ ಪ್ರಖ್ಯಾತರಾಗಿರುವ ಶ್ರೀಸತ್ಯಧರ್ಮತೀರ್ಥರು ಇದನ್ನು ಉಲ್ಲೇಖಿಸಿರುವುದು ಅಂತಹ ಆಕ್ಷೇಪಕ್ಕೆ ಉತ್ತರವಾಗಿದೆ -'..**ಅಂಶಾವತಾರೇ ನಾರಾಯಣಪಂಡಿತಾಚಾರ್ಯವಿರಚಿತೇ - ರಾಜಾ ದಶರಥಃ ಪೂರ್ವಂ ಮನುಃ ಸ್ವಾಯಂಭುವಃ ಸ್ಮೃತಃ। ಉಕ್ತಂ ಪದ್ಮಪುರಾಣೇ ಚ ಹ್ಯವತಾರಪ್ರಸಂಗತಃ। ಇತ್ಯುಕ್ತೇಃ** (೯/೧/೮೨); ಆದ್ದರಿಂದ 'ಅಂಶಾವತಾರ'ದ ಬಗ್ಗೆ ಲಘುವಾಗಿ ಮಾತನಾಡುವುದು ತರವಲ್ಲ.

ಮಾತು ಅವುಗಳಲ್ಲೇ ಬಂದಿದೆ. ಎಂದರೆ ಅವರಿಗೆ ಸದ್ಗತಿ ಆಗುವುದು ಹೇಗೆ ಉಚಿತ? ಈ ವಿರೋಧದ ಪರಿಹಾರವನ್ನು ಆಚಾರ್ಯರು ಪರಿಹರಿಸಿರುವ ರೀತಿ ತುಂಬಾ ಅಪೂರ್ವವಾದುದು (೧೨/೮೭,೮೮). ಸದ್ಗತಿಗೆ ತೆರಳಿದ್ದು ತಾಟಕೆಯಲ್ಲ; ಅವಳಲ್ಲಿ ಆವಿಷ್ಟಳಾಗಿದ್ದ ಉರ್ವಶೀ. ಅದರಂತೆ ಮುಕ್ತರಾದದ್ದು ಶಿಶುಪಾಲ ದಂತವಕ್ರರಲ್ಲ; ಅವರಲ್ಲಿ ಆವಿಷ್ಟರಾಗಿದ್ದ ವಿಷ್ಣುಪಾರ್ಷದರಾದ ಜಯ ಹಾಗೂ ವಿಜಯ ಎಂಬುದು ಇವುಗಳ ಭಾವ.

## ಉಪಾಖ್ಯಾನಗಳ ವಿವೇಚನೆ

ಇತಿಹಾಸಪುರಾಣಗಳೆಂದರೆ ಉಪಾಖ್ಯಾನಗಳ ಮಹಾಸಾಗರವೇ ಸರಿ. ಉಪಾಖ್ಯಾನಗಳಿಲ್ಲದ ಇತಿಹಾಸಪುರಾಣಗಳನ್ನು ಊಹಿಸಲೂ ಸಾಧ್ಯವಿಲ್ಲ. ಮಹಾಭಾರತವೊಂದರಲ್ಲೇ ನೂರಾರು ಉಪಾಖ್ಯಾನಗಳು ದಾಖಲಾಗಿವೆ. ರಾಮಾಯಣದಲ್ಲಿನ ಉಪಾಖ್ಯಾನಗಳ ಸಂಖ್ಯೆಯು ಸಹ ಅಪಾರ. ಪುರಾಣಗಳಲ್ಲಂತು ಉಪಾಖ್ಯಾನಗಳದೇ ಸಾಮ್ರಾಜ್ಯ. ಆದರೆ ಅಂತಹ ಉಪಾಖ್ಯಾನಗಳಿಗೆ ಮೂಲ ಆಖ್ಯಾನಗಳೊಂದಿಗೆ ಇರುವ ಸಂಬಂಧ, ಅವುಗಳ ಹಿನ್ನೆಲೆ, ಅವುಗಳ ಆಂತರ್ಯ ಮೊದಲಾದವುಗಳ ಬಗ್ಗೆ ಚಿಂತನೆ ನಡೆದೇ ಇಲ್ಲ ಎನ್ನಬಹುದು. ಅವೆಲ್ಲವೂ ಇತಿಹಾಸ ಎಂಬುದು ಕೆಲವರ ವಾದವಾದರೆ, ಅವೆಲ್ಲವೂ ಕೇವಲ ಕಲ್ಪನೆ ಎಂಬುದು ಮತ್ತೆ ಕೆಲವರ ವಾದ. ಆದರೆ ಅವುಗಳ ಮಹತ್ತ್ವವನ್ನು ಸಮಗ್ರವಾಗಿ ವಿಶ್ಲೇಷಿಸಿ, ಅವುಗಳ ತಾತ್ಪರ್ಯದ ಗ್ರಹಣಕ್ಕೆ ಅಪೂರ್ವ-ವಾದ ವಿವರಣೆಯನ್ನು ಸಾಧಾರವಾಗಿ ನಿರೂಪಿಸಿದ ಶ್ರೇಯಸ್ಸು ಮಹಾಭಾರತತಾತ್ಪರ್ಯ-ನಿರ್ಣಯದ್ದಾಗಿದೆ[1]. ಅದರಂತೆ ಇತಿಹಾಸಪುರಾಣಗಳಲ್ಲಿನ ಎಲ್ಲ ಉಪಾಖ್ಯಾನಗಳೂ ಸಹ ಐತಿಹಾಸಿಕವೆಂದೇನೂ ಆಗಬೇಕಾಗಿಲ್ಲ. ಅವುಗಳಲ್ಲಿ ಕೆಲವು ಕಾಲ್ಪನಿಕವೂ ಆಗಿದ್ದು ಅಂತಹವುಗಳಿಂದ ನಿರೂಪಿತವಾಗುವ ತತ್ತ್ವಮಾತ್ರವೇ ಗ್ರಾಹ್ಯವೆನ್ನಿಸುವುದು ಎಂಬ ಸೂಕ್ಷ್ಮವಿಚಾರವನ್ನು ಅವರು ಸೂಕ್ತ ಆಧಾರಗಳನ್ನಿತ್ತು ನಿರೂಪಿಸಿರುವರು.

## ಇತಿಹಾಸಪುರಾಣಗಳ ಆಧ್ಯಾತ್ಮಿಕಮೌಲ್ಯ

ವೇದೋಪನಿಷತ್ತುಗಳಂತೆ ಇತಿಹಾಸಪುರಾಣಗಳೂ ಸಹ ಮೂಲತಃ ಆಧ್ಯಾತ್ಮಿಕಕೃತಿಗಳಾಗಿದ್ದು ಅವುಗಳು ಮುಖ್ಯವಾಗಿ ತತ್ತ್ವವನ್ನೇ ಪ್ರತಿಪಾದಿಸುವುವು ಎಂಬ ಪ್ರಮೇಯವನ್ನು ಸ್ಫುಟಪಡಿಸುವುದು ಮಹಾಭಾರತತಾತ್ಪರ್ಯನಿರ್ಣಯದ ಮತ್ತೊಂದು ಕೊಡುಗೆ. ಆ ಮುಂಚಿನ ಮತಾಚಾರ್ಯ-ರಾರೂ ಗಮನಿಸದ ಈ ಮಹತ್ತ್ವಪೂರ್ಣವಾದ ಅಂಶವನ್ನು ಅನಾವರಣಗೊಳಿಸಿದ ಹಿರಿಮೆ

---

೧. ಮಾರ್ಕಂಡೇಯಸ್ತದಾಽಽಗತ್ಯ ತೇಷಾಮಕಥಯತ್ ಕಥಾಃ।
ಬಹ್ವೀಶ್ಚೈವ ವಿಚಿತ್ರಾಶ್ಚ ಭಾಷಾತ್ರಯಸಮನ್ವಿತಾಃ॥
ಲೋಕದರ್ಶನಮಾಶ್ರಿತ್ಯ ದೇವಾಶ್ಚ ಮುನಯಸ್ತಥಾ।
ಬ್ರೂಯುಃ ಕಥಾಸ್ತತ್ರ ಶಿಕ್ಷಾ ಗ್ರಾಹ್ಯಾ ನಾರ್ಥಃ ಕಥಂಚನ॥
ಅರ್ಥಃ ಸಮಾಧಿಭಾಷಾಸು ಗ್ರಾಹ್ಯಃ ಸರ್ವೋಽಪ್ಯಸಂಶಯಮ್।
ಪರದರ್ಶನಭಾಷಾಸು ಜ್ಞೇಯಂ ತದ್ದರ್ಶನಂ ತಥಾ॥
ಗ್ರಾಹ್ಯೋ ನಾರ್ಥೋ ವೈದಿಕಂ ತು ದರ್ಶನಂ ಗ್ರಾಹ್ಯಮೇವ ಚ।
ಅನ್ಯಾರ್ಥೋ ಗುಹ್ಯಭಾಷಾಸು ಗ್ರಾಹ್ಯ ಏವಂ ವಿನಿರ್ಣಯಃ॥ -ಮ.ಭಾ.ತಾ.ನಿ.(೨೨/೩೮೪- ೩೮೭)

ಆಚಾರ್ಯ ಶ್ರೀಮಧ್ವರದು. ಮೂಲತಃ ಅವು ಮೂಲಶಾಸ್ತ್ರಗಳ ಅತ್ಯಂತ ಪ್ರಮುಖಘಟಕಗಳು ಎಂದು ನಿರೂಪಿಸಿ, ಮಹಾಭಾರತವಂತೂ ಶಾಸ್ತ್ರರಾಜ ಎಂದು ಸ್ಥಾಪಿಸಿದ ಅಪೂರ್ವತೆಯೂ ಅವರದಾಗಿದೆ. ರಾಮಾಯಣ, ಮಹಾಭಾರತಗಳು ಒಂದರ್ಥದಲ್ಲಿ ಮಹಾಕಾವ್ಯಗಳಾದರೂ, ಮೂಲತಃ ಅವೆರಡೂ ಇತಿಹಾಸಗಳು. ಪುರಾಣಕ್ಕಿಂತ ಮೇಲಿನ ಸ್ಥಾನ ಅವುಗಳದು. ಇನ್ನೂ ಹೆಚ್ಚಾಗಿ ಅವೆರಡೂ ಭಾಗವತಾದಿಪುರಾಣಗಳನ್ನೊಳಗೊಂಡಂತೆ ಅವೆರಡೂ ಆಧ್ಯಾತ್ಮಿಕಕೃತಿಗಳು. ಅವುಗಳ ಪ್ರಧಾನಮೌಲ್ಯ ಅಡಗಿರುವುದೇ ಅವುಗಳ ಆಧ್ಯಾತ್ಮಿಕತೆಯಲ್ಲಿ. ಆಧ್ಯಾತ್ಮಿಕಮೌಲ್ಯ ಅವುಗಳಲ್ಲಿ ಓತಪ್ರೋತವಾಗಿದೆ ಎಂದು ನಿರೂಪಿಸಿ, ಅವುಗಳನ್ನು ಅರ್ಥೈಸಿಕೊಳ್ಳಲು ಅವರು ಮಾರ್ಗದರ್ಶನ-ವನ್ನೂ ನೀಡಿರುವರು. ಮಹಾಭಾರತದ ಆಧ್ಯಾತ್ಮಿಕ ವಿವೇಚನೆಯ ಬಗ್ಗೆ ಅವರ ವಿವರಣೆಯನ್ನು ಇಲ್ಲಿ ಗಮನಿಸಬಹುದು[೧].

## ಮೂಲಗ್ರಂಥಗಳ ಅರ್ಥವೈಭವ

ವೇದೋಪನಿಷತ್ತುಗಳನ್ನೊಳಗೊಂಡಂತೆ ಆಕರಗ್ರಂಥಗಳನ್ನು ಒಂದು ಸೀಮಿತ ಅರ್ಥದಲ್ಲಿ ಮಾತ್ರವೇ ನೋಡುವ ಪರಿಪಾಠ ಹಿಂದಿನವರದಾಗಿತ್ತು. ಆದರೆ, ವೇದೋಪನಿಷತ್ತುಗಳ ಹಾಗೂ ಇತಿಹಾಸಪುರಾಣಗಳ ಅರ್ಥಪ್ರಪಂಚ ಅತ್ಯಂತ ಗಹನವಾದುದು. ಅವುಗಳು ಅನೇಕಾರ್ಥಗಳ ಗಣಿಗಳು. ವೇದಗಳಿಗೆ ಅತಿ ಕಡಿಮೆ ಎಂದರೂ ಮೂರು ಅರ್ಥ. ಮಹಾಭಾರತಕ್ಕೆ ಅತಿಕಡಿಮೆ ಎಂದರೂ ಹತ್ತು ಅರ್ಥಗಳು, ವಿಷ್ಣುಸಹಸ್ರನಾಮದ ಪ್ರತಿಯೊಂದು ನಾಮಕ್ಕೂ ಕನಿಷ್ಠ ನೂರು ಅರ್ಥಗಳು ಎಂದು ತಿಳಿಸಿ ತಮ್ಮ ಈ ಮಾತಿಗೆ ಆಧಾರವಾಗಿ ಸ್ಕಂದಪುರಾಣದ ವಚನವನ್ನು ಋಗ್ಭಾಷ್ಯದಲ್ಲಿ ಉಲ್ಲೇಖಿಸಿ ಸ್ಫುಟಪಡಿಸಿದರು. ಇದರಿಂದಾಗಿ ಆಕರಗ್ರಂಥಗಳ ಅರ್ಥವೈಶಾಲ್ಯ ಅನಾವರಣಗೊಂಡು ಅವುಗಳ ಮಹತ್ತ್ವದ ಮರ್ಮ ಜಿಜ್ಞಾಸುಗಳಿಗೆ ತಿಳಿಯುವಂತಾಯಿತು. ತಮ್ಮ ಋಗ್ಭಾಷ್ಯದಲ್ಲಿ ವೇದಮಂತ್ರಗಳಿಗೆ ಉದ್ದಕ್ಕೂ ಆ ರೀತಿಯ ಅರ್ಥವೈಭವವನ್ನು ಅವರು ನಿರೂಪಿಸಿಯೂ ತೋರಿಸಿರುವರು[೨]. ಇದರಿಂದಾಗಿ ಕಥೆ ಎಂಬುದಾಗಿ ಮಾತ್ರವೇ ಇತಿಹಾಸ-ಪುರಾಣಗಳನ್ನು ನೋಡುವ ಜನತೆಗೆ ಅವು ಮೂಲತಃ ಅರ್ಥರಾಶಿಯನ್ನೊಳಗೊಂಡ ಶಾಸ್ತ್ರ-ಗ್ರಂಥಗಳು ಎಂಬ ಅರಿವು ಮೂಡುವಂತಾಯಿತು.

---

೧. ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ। -ಮ.ಭಾ.ತಾ.ನಿ.(೨/೧೪೬)

೨. ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ।
ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್ ॥ - (ಋಗ್ಭಾಷ್ಯೋದ್ಧೃತಸ್ಕಂದಪುರಾಣವಚನ)
ಭಾರತಾರ್ಥಸ್ತ್ರಿಧಾ ಪ್ರೋಕ್ತಃ ಸ್ವಯಂ ಭಗವತೈವ ಹಿ।
ಮನ್ವಾದಿ ಕೇಚಿದ್ಬ್ರುವತೇ ಹ್ಯಾಸ್ತೀಕಾದಿ ತಥಾಽಪರೇ॥
ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ।
ಸಕೃಷ್ಣಾನ್ ಪಾಂಡವಾನ್ ಗೃಹ್ಯ ಯೋಽಯಮರ್ಥಃ ಪ್ರವರ್ತತೇ॥
ಪ್ರಾತಿಲೋಮ್ಯಾದಿವೈಚಿತ್ರ್ಯಾತ್ ತಮಾಸ್ತೀಕಂ ಪ್ರಚಕ್ಷತೇ।
ಧರ್ಮೋ ಭಕ್ತ್ಯಾದಿದಶಕಃ ಶ್ರುತಾದಿಃ ಶೀಲವೈನಯೌ॥
ಸಬ್ರಹ್ಮಕಾಸ್ತು ತೇ ಯತ್ರ ಮನ್ವಾದಿಂ ತಂ ವಿದುರ್ಬುಧಾಃ॥ -ಮ.ಭಾ.ತಾ.ನಿ.(೨/೧೩೬-೧೩೯)

## ಮನ್ವಾದಿಶ್ಲೋಕದ ಅಪೂರ್ವಾರ್ಥದ ನಿರೂಪಣೆ

ಇತಿಹಾಸಪುರಾಣಗಳ ಅರ್ಥವೈಭವಕ್ಕೆ ನಿದರ್ಶನವನ್ನಾಗಿ ಅವರು ಮಹಾಭಾರತದ ಈ ಕೆಳಗಿನ ಶ್ಲೋಕವನ್ನು ವಿವರಿಸಿದ ಭಾಗವನ್ನು ಉಲ್ಲೇಖಿಸಬಹುದು : **ಮನ್ವಾದಿ ಕೇಚಿದ್ಬ್ರುವತೇ ಹ್ಯಾಸ್ತೀಕಾದಿ ತಥಾऽಪರೇ ॥ ತಥೋಪರಿಚರಾದ್ಯನ್ಯೇ ಭಾರತಂ ಪರಿಚಕ್ಷತೇ ।** – ಇದಕ್ಕೆ, "ಕೆಲವರು ಮಹಾಭಾರತವನ್ನು 'ಮನ್ವಾದಿ' ಅರ್ಥ ಉಳ್ಳದ್ದೆಂದೂ, ಮತ್ತೆ ಕೆಲವರು 'ಆಸ್ತೀಕಾದಿ' ಅರ್ಥ ಉಳ್ಳದ್ದೆಂದೂ, ಇನ್ನು ಕೆಲವರು 'ಉಪರಿಚರಾದಿ' ಅರ್ಥ ಉಳ್ಳದ್ದೆಂದೂ ಹೇಳುವರು" ಎಂಬುದು ಸಾಮಾನ್ಯವಾದ ಅರ್ಥ.

ಮಹಾಭಾರತದ ಅರ್ಥವೈವಿಧ್ಯವನ್ನು ತಿಳಿಸುವ ಈ ಶ್ಲೋಕವನ್ನು ಕೆಲವರು ಮಹಾಭಾರತವು ಭಿನ್ನ ಭಿನ್ನ ಕಾಲದಲ್ಲಿ ಭಿನ್ನ ಭಿನ್ನ ಗಾತ್ರವನ್ನು ಪಡೆಯಿತೆಂದೂ, ಅಂತಹ ಅದರ ಪ್ರಧಾನ ಅವತರಣಿಕೆಗಳು 'ಜಯ', 'ಭಾರತ' ಮತ್ತು 'ಮಹಾಭಾರತ' ಎಂಬದಾಗಿ ಮೂರು ಎಂದೂ, ಅವುಗಳ ಆರಂಭವನ್ನು ಈ ಶ್ಲೋಕ ಸೂಚಿಸುತ್ತದೆ ಎಂದೂ ಅರ್ಥಮಾಡಿಕೊಂಡಿರುವರು. 'ಮನ್ವಾದಿ' ಎಂದರೆ 'ನಾರಾಯಣಂ ನಮಸ್ಕೃತ್ಯ' ಎಂಬ ಶ್ಲೋಕವನ್ನು ಆದಿಯಾಗಿ ಉಳ್ಳ ಅವತರಣಿಕೆ; 'ಆಸ್ತೀಕಾದಿ' ಎಂದರೆ ಆಸ್ತಿಕನ ಕಥೆಯನ್ನು ಆದಿಯಾಗಿ ಉಳ್ಳ ಅವತರಣಿಕೆ; 'ಉಪರಿಚರಾದಿ' ಎಂದರೆ 'ಉಪರಿಚರವಸು'ವಿನ ಪ್ರಸಂಗವನ್ನು ಆದಿಯಾಗಿ ಉಳ್ಳ ಅವತರಣಿಕೆ ಎಂದೂ ಅವರ ತಿಳುವಳಿಕೆ. ಮೊದಲ ಹಂತದ ಭಾರತ 'ಜಯ'ದಲ್ಲಿ ೮೮೦೦ ಶ್ಲೋಕ, ಎರಡನೆಯ ಹಂತದ ಪರಿಷ್ಕರಣ 'ಭಾರತ'ದಲ್ಲಿ ಅದರ ಶ್ಲೋಕ ವ್ಯಾಪ್ತಿ ೨೪೦೦೦ಕ್ಕೆ ಹೆಚ್ಚಿತ್ತೆಂದೂ, ಮೂರನೆಯ ಹಾಗೂ ಇಂದಿನ ಹಂತದ ಅವತರಣಿಕೆ ಮಹಾಭಾರತ ಲಕ್ಷಶ್ಲೋಕಗಳನ್ನೂ ಮೀರಿದೆ ಎಂದೂ ಅವರ ವಾದ. ಇಂತಹ ಬೃಹದ್ಗ್ರಂಥ ಎಂದೂ ಒಂದೇ ಕಾಲಕ್ಕೆ ಒಬ್ಬನೇ ವ್ಯಕ್ತಿಯಿಂದ ಬರೆಯಲ್ಪಟ್ಟಿರುವುದು ಅಸಾಧ್ಯ ಎಂಬುದು ಅವರು ಅದಕ್ಕೆ ಕೊಡುವ ಕಾರಣ. ಅದರಲ್ಲಿ ಬರುವ ಉಪಾಖ್ಯಾನಗಳೆಲ್ಲ ಕೊನೆಯ ಹಂತದ ಸೇರ್ಪಡೆ ಎಂಬುದು ಅವರ ವಿಚಾರ. ವಾಸ್ತವವಾಗಿ ಈ ಶ್ಲೋಕ ಮಹಾಭಾರತದ ವಿಭಿನ್ನ ಆರಂಭಗಳನ್ನು ತಿಳಿಸುವ ಶ್ಲೋಕ ಎಂಬ ಅವರ ವಿಚಾರವೇ ಅರ್ಥಹೀನವಾದುದು. ಮಹಾಭಾರತಕ್ಕಿರುವ ಅರ್ಥವೈವಿಧ್ಯವನ್ನು ತಿಳಿಸುವುದು ಈ ಶ್ಲೋಕದ ಮುಖ್ಯವಿಷಯ. ಮಹಾಭಾರತದಲ್ಲಿ ಇಂದು ಉಪಲಬ್ಧವಿರುವಂತೆಯೇ, ಈ ಶ್ಲೋಕದ ಅನಂತರ 'ವಿವಿಧಂ ಸಂಹಿತಾಜ್ಞಾನಂ ದೀಪಯಂತಿ ಮನೀಷಿಣಃ' ಎಂಬ ವಾಕ್ಯವಿದ್ದು ಅದು 'ಹೀಗೆ ಅನೇಕ ಪ್ರಾಜ್ಞರು ಇದನ್ನು ಹೀಗೆ ವಿವಿಧ ರೀತಿಯ ಅರ್ಥ ಉಳ್ಳದ್ದನ್ನಾಗಿ ತಿಳಿಯುವರು' ಎಂದೇ ಸ್ಪಷ್ಟವಾಗಿ ಹೇಳುತ್ತದೆ.

[೧]ಯುಧಿಷ್ಠಿರನು ಧರ್ಮಕ್ಕೆ ಅಭಿಮಾನಿ; ಭೀಮಸೇನನು ಭಕ್ತಿ, ಜ್ಞಾನ ಮೊದಲಾದ ಹತ್ತು ಗುಣಗಳಿಗೆ ಅಭಿಮಾನಿ; ಅರ್ಜುನನು ಶ್ರವಣ, ಮನನ ಮತ್ತು ನಿಧಿಧ್ಯಾಸನಗಳೆಂಬ ಮೂರು ಗುಣಗಳಿಗೆ ಅಭಿಮಾನಿ; ನಕುಲನು ಶೀಲಕ್ಕೆ ಅಭಿಮಾನಿ; ಸಹದೇವನು ವಿನಯಕ್ಕೆ ಅಭಿಮಾನಿ ಮತ್ತು ದ್ರೌಪದಿ ವೇದಾಭಿಮಾನಿನಿ. ಹೀಗೆ ದ್ರೌಪದಿ ಮತ್ತು ಭೀಮಾದಿ ಪಾಂಡವರು ಹದಿನೇಳು ಗುಣಗಳಿಗೆ ಅಭಿಮಾನಿದೇವತೆಗಳಾಗಿರುವರು; ಅವರ ಹಿರಿಮೆಯ ವರ್ಣನೆ ಎಂದರೆ ಅವರಿಂದ ಅಭಿಮನ್ಯವಾದ ಗುಣಗಳ ಹಿರಿಮೆಯ ವರ್ಣನೆಯೇ ಆಗಿ ಮಹಾಭಾರತವೆಲ್ಲ ಆಧ್ಯಾತ್ಮಿಕವಾಗಿ-

---

೧. ಧರ್ಮೋ ಭಕ್ತ್ಯಾದಿದಶಕಃ ಶ್ರುತಾದಿಃ ಶೀಲವೈನಯೌ ।
ಸಬ್ರಹ್ಮಕಾಸ್ತು ತೇ ಯತ್ರ ಮನ್ವಾದಿಂ ತಂ ವಿದುರ್ಬುಧಾಃ ॥ –ಮ.ಭಾ.ತಾ.ನಿ. (೨/೧೩೯)

ಬಿಡುತ್ತದೆ. ಹೀಗೆ ಆಯಾ ವ್ಯಕ್ತಿಗಳ ಮಹಿಮೆಯು ಆಯಾ ಗುಣದ ಮಹಿಮೆ ಎಂಬದಾಗಿ ತಿಳಿಸುವ ಈ ತೆರನಾದ ಅರ್ಥಕ್ಕೆ 'ಮನ್ವಾದಿ' ಅರ್ಥ ಎಂದು ಹೆಸರು. ಈ ಮನ್ವಾದಿ ಅರ್ಥಗಳನ್ನು ಮುಂದೆ ದ್ರೌಪದೀಸ್ವಯಂವರ ಮೊದಲಾದ ಅನೇಕ ಪ್ರಸಂಗಗಳಲ್ಲಿ ವಿವರಿಸಲಾಗಿದೆ[೧]. ಪಾಂಡವರು ಮೊದಲಾದವರ ಕಥೆಯನ್ನು ನೇರವಾಗಿ ತಿಳಿಸುವ ಅರ್ಥ ಆಸ್ತೀಕಾದಿ ಅರ್ಥ.

## ದೇವತಾತಾರತಮ್ಯದ ವಿವೇಚನೆ

ತಾರತಮ್ಯತತ್ತ್ವವು ವೇದೋಪನಿಷತ್ತುಗಳ ಮುಖ್ಯಪ್ರಮೇಯಗಳಲ್ಲೊಂದು. ತೈತ್ತಿರೀಯೋಪ-ನಿಷತ್ತಿನ ಆನಂದವಲ್ಲಿಯಲ್ಲಿ ನಿರೂಪಿತವಾಗಿರುವ ಈ ಪ್ರಮೇಯವನ್ನು ಇತಿಹಾಸಪುರಾಣಗಳಲ್ಲಿ ಸದೃಷ್ಟಾಂತವಾಗಿ ಕಾಣಬಹುದು. ರಾಮಾಯಣ, ಮಹಾಭಾರತಗಳ ಕಥೆಯಲ್ಲಿನ ವಿವಿಧಪಾತ್ರಗಳು ವರ್ತಿಸುವ ಪರಿಯಲ್ಲಿ ಆ ಪಾತ್ರಗಳ ಸ್ವರೂಪಯೋಗ್ಯತೆ ಪ್ರತಿಫಲಿತವಾಗಿದ್ದು ಅವುಗಳ ತಾರತಮ್ಯವೂ ಸಹ ಸ್ಫುಟಪಡುತ್ತದೆ. ಮೂಲಗ್ರಂಥಗಳಲ್ಲಿ ಪ್ರತಿಪಾದಿತವಾದ ದೇವತಾತಾರತಮ್ಯ ಹಾಗೂ ದೈತ್ಯತಾರತಮ್ಯಗಳು ಉದ್ದಕ್ಕೂ ಕಂಡುಬರುತ್ತವೆ ಎಂಬುದನ್ನು ಸಹ ಸಮಗ್ರ ವಿವೇಚಿಸುವ ಕೃತಿಯಾಗಿಯೂ ಮಹಾಭಾರತತಾತ್ಪರ್ಯನಿರ್ಣಯ ಅತ್ಯಂತ ಗಮನಾರ್ಹ. ಇತಿಹಾಸಪುರಾಣ-ಗಳ ಸಕಲ ಆಖ್ಯಾನ, ಉಪಾಖ್ಯಾನಗಳಿಗೂ ಈ [೨]ದೇವತಾತಾರತಮ್ಯದಲ್ಲಿಯೇ ಮಹಾತಾತ್ಪರ್ಯ. ತಾರತಮ್ಯದಲ್ಲಿ ವ್ಯತ್ಯಾಸವಾದಂತೆ ಕಂಡುಬರುವ ಪ್ರಸಂಗಗಳನ್ನು ಅವರು ವಿಶ್ಲೇಷಿಸಿ, ಅಲ್ಲಿಯ ಆಂತರ್ಯವನ್ನು ಸ್ಫುಟಪಡಿಸಿರುವರು.

---

೧. ಔಪರಿಚರಾದ್ಯರ್ಥವನ್ನು ಅವರು ಹೀಗೆ ತಿಳಿಸಿರುವರು :
ನಾರಾಯಣಸ್ಯ ನಾಮಾನಿ ಸರ್ವಾಣಿ ವಚನಾನಿ ತು ।
ತತ್ಸಾಮರ್ಥ್ಯಾಭಿಧಾಯೀನಿ ತಮೌಪರಿಚರಂ ವಿದುಃ ॥ -ಮ.ಭಾ.ತಾ.ನಿ.(೨/೧೪೦)
ಸಕಲ ಭಾರತವಚನಗಳೂ ಶ್ರೀನಾರಾಯಣನ ನಾಮಗಳೇ ಆಗಿದ್ದು ಅವನ ಮಾಹಾತ್ಮ್ಯವನ್ನು ಪ್ರತಿ-ಪಾದಿಸುವವು ಎಂದು ನಿರೂಪಿಸುವ ಅರ್ಥವನ್ನು ಜ್ಞಾನಿಗಳು 'ಔಪರಿಚರಾದಿ' ಅರ್ಥ ಎಂದು ತಿಳಿಯುವರು. ಮಹಾಭಾರತದ ಸ್ವರ, ಪದ, ವಾಕ್ಯರೂಪವಾದ ಸಕಲವಚನಗಳೂ ನಾರಾಯಣನ ನಾಮಗಳೇ ಆಗಿದ್ದು ಪ್ರತಿಯೊಂದರಿಂದಲೂ ಅವನ ಸರ್ವೋತ್ತಮತ್ವಾದಿ ಹಿರಿಮೆಯು ಪ್ರತಿಪಾದಿತವಾಗಿವೆ ಎಂದು ತಿಳಿಸುವ ಅರ್ಥಕ್ಕೆ 'ಔಪರಿಚರಾದ್ಯರ್ಥ' ಎಂದು ಭಾವ. ಈ ಅರ್ಥದಂತೆ ಸಮಗ್ರ ಮಹಾಭಾರತಗ್ರಂಥ 'ನಾರಾಯಣನ ನಾಮಾವಳಿ' ಎಂದರ್ಥ. ಸರ್ವದೇವತೆಗಳಿಗಿಂತಲೂ ಮಿಗಿಲಾದವನಾದ್ದರಿಂದ ನಾರಾಯಣನಿಗೆ 'ಉಪರಿಚರ' ಎಂದು ಹೆಸರು; ಅಂತಹ ನಾರಾಯಣನನ್ನೇ ಪರಮಮುಖ್ಯವೃತ್ತಿಯಿಂದ ಮಹಾಭಾರತವು ಪ್ರತಿಪಾದಿಸುತ್ತದೆ. ಸಕಲವೇದವಚನಗಳೂ ಸಹ ಹೀಗೆಯೇ ನಾರಾಯಣನ ನಾಮಾವಳಿಗಳಾಗಿವೆ ಎಂಬ ಪುರಾಣವಚನವನ್ನು ಇಲ್ಲಿ ಸ್ಮರಿಸಬಹುದು; ಅದರಂತೆ ಇತರ ಸಕಲವಾಙ್ಮಯವೂ ಪರಮ ಮುಖ್ಯವೃತ್ತಿಯಿಂದ ನಾರಾಯಣನ ನಾಮಾವಳಿಯೇ ಆಗಿದೆ ಎಂದೂ ತಿಳಿಯಬೇಕು: 'ಸರ್ವೈಶ್ಚವೈದಿಕಪದ್ಯೈರಪಿ ಲೋಕಶಬ್ದೈರ್ಮೇಘಾಗ್ನಿವಾರಿಧಿ ತಲಾದಿರವೈಶ್ಚ ಸರ್ವೈಃ । ಏಕೋಽಭಿಧೇಯಃ ಪರಿಪೂರ್ಣಗುಣಃ ಪ್ರಿಯೋಽಲಂ ನಾರಾಯಣೋ ಮಮ ಸದೈವ ಸುತುಷ್ಟಿಮೇತು ॥'(ಐತರೇಯಭಾಷ್ಯ).

೨. ಬಲದೇವಸ್ತತಃ ಪಶ್ಚಾತ್ ತತಃ ಪಶ್ಚಾಚ್ಚ ಫಲ್ಗುನಃ ।
ನರಾವೇಶಾದನ್ಯಥಾ ತು ದ್ರೌಣಿಃ ಪಶ್ಚಾತ್ ತತೋಽಪರೇ ॥ -ಮ.ಭಾ.ತಾ.ನಿ.(೨/೪೩)
ಅಕ್ಷಯಾವಿಷುಧೀ ದಿವ್ಯೋ ಧ್ವಜೋ ವಾನರಲಕ್ಷಣಃ ।
ಗಾಂಡೀವಂ ಧನುಷಾಂ ಶ್ರೇಷ್ಠಂ ತೇನ ದ್ರೌಣೇರ್ವರೋಽರ್ಜುನಃ ॥ -ಮ.ಭಾ.ತಾ.ನಿ.(೨/೧೭೮)

## ಇತಿಹಾಸಪುರಾಣಗಳ ವಿವೇಚನೆಗೆ ಮಾರ್ಗದರ್ಶನ

ಇತಿಹಾಸಪುರಾಣಪ್ರಪಂಚ ಅತ್ಯಂತ ಗಹನವಾದುದು[೧]. ಅದರ ಪರಿಜ್ಞಾನವಿಲ್ಲದೆ ವೇದೋಪನಿಷತ್ತುಗಳ ಅರ್ಥನಿರ್ಣಯವಂತೂ ಅಶಕ್ಯ[೨]. ಅಂದರೆ ಇತಿಹಾಸಪುರಾಣಗಳು ಒಂದರ್ಥದಲ್ಲಿ ಸಮಗ್ರವೈದಿಕಸಾಹಿತ್ಯದ ಭಾಷ್ಯ. ಆದರೆ ತನ್ನ ಜಟಿಲತೆಯಿಂದಾಗಿ ಇತಿಹಾಸಪುರಾಣಪ್ರಪಂಚ ತೆರೆದುಕೊಳ್ಳುವುದು ದುರ್ಲಭ. ಈ ನಿಟ್ಟಿನಲ್ಲಿ ಮಹಾಭಾರತತಾತ್ಪರ್ಯನಿರ್ಣಯದ ಕೊಡುಗೆ ಅಪಾರ. ಈ ಮೊದಲೇ ಹೇಳಿರುವಂತೆ ಅದು ಸಮಗ್ರ ಇತಿಹಾಸಪುರಾಣಗಳ ಭಾಷ್ಯ. ಇತಿಹಾಸ ಪುರಾಣಗಳ ಅರ್ಥಗಳನ್ನು ನಿರ್ಣಯಿಸುವುದರ ಜೊತೆಗೆ ನಿರ್ಣಯಕ್ಕೆ ಮಾರ್ಗದರ್ಶಕವಾದ ಸೂತ್ರಗಳನ್ನು ಸಹ ನೀಡಿರುವುದು ಈ ಕೃತಿಯ ಮತ್ತೊಂದು ಹಿರಿಮೆ[೩].

---

೧. ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ।
ನ ಚೇತ್ ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ॥

೨. ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚಲಿಷ್ಯತಿ॥

೩. ನಿರ್ಣಯಾಯೈವ ಯತ್ ಪ್ರೋಕ್ತಂ ಬ್ರಹ್ಮಸೂತ್ರಂ ತು ವಿಷ್ಣುನಾ।
ವ್ಯಾಸರೂಪೇಣ ತದ್ಗ್ರಾಹ್ಯಂ ತತ್ಪ್ರೋಕ್ತಾಃ ಸರ್ವನಿರ್ಣಯಾಃ॥
ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಮ್।
ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್॥
ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ।
ಸರ್ವದೋಷವಿಹೀನತ್ವಂ ಗುಣೈಃ ಸರ್ವೈರುದೀರ್ಣತಾ॥ -ಮ.ಭಾ.ತಾ.ನಿ.(೧/೪೨-೪೪)
ವ್ಯತ್ಯಾಸಾಸ್ತ್ವೇವಮಾದ್ಯಾಶ್ಚ ಪ್ರಾತಿಲೋಮ್ಯಾದಯಸ್ತಥಾ॥
ದೃಶ್ಯಂತೇ ಭಾರತಾದ್ಯೇಷು ಲಕ್ಷಣಗ್ರಂಥತಶ್ಚ ತೇ।
ಜ್ಞಾಯಂತೇ ಬಹುಭಿರ್ವಾಕ್ಯೈಃ ನಿರ್ಣಯಗ್ರಂಥತಸ್ತಥಾ॥
ತಸ್ಮಾದ್ವಿನಿರ್ಣಯಗ್ರಂಥಾನಾಶ್ರಿತ್ಯೈವ ಚ ಲಕ್ಷಣಮ್।
ಬಹುವಾಕ್ಯಾನುಸಾರೇಣ ನಿರ್ಣಯೋಽಯಂ ಮಯಾ ಕೃತಃ॥
ಉಕ್ತಂ ಲಕ್ಷಣಶಾಸ್ತ್ರೇ ಚ ಕೃಷ್ಣದ್ವೈಪಾಯನೋದಿತೇ।
ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವ ಚ॥
ವ್ಯತ್ಯಾಸಾದೀನ್ ಸಪ್ತಭೇದಾನ್ ವೇದಾದ್ಯರ್ಥಂ ತಥಾ ವದೇತ್।
ಸ ಯಾತಿ ನಿರಯಂ ಘೋರಮನ್ಯಥಾಜ್ಞಾನಸಂಭವಮ್।
ಇತ್ಯನ್ಯೇಷು ಚ ಶಾಸ್ತ್ರೇಷು ತತ್ರ ತತ್ರೋದಿತಂ ಬಹು॥
ವ್ಯತ್ಯಾಸಃ ಪ್ರಾತಿಲೋಮ್ಯಂ ಚ ಗೋಮೂತ್ರೀ ಪ್ರಘಸಸ್ತಥಾ।
ಉಕ್ಷಣಃ ಸುಧುರಃ ಸಾಧುಃ ಸಪ್ತ ಭೇದಾಃ ಪ್ರಕೀರ್ತಿತಾಃ॥
ಇತ್ಯಾದಿಲಕ್ಷಣಾನ್ಯತ್ರ ನೋಚ್ಯಂತೇಽನ್ಯಪ್ರಸಂಗತಃ।
ಅನುಸಾರೇಣ ತೇಷಾಂ ತು ನಿರ್ಣಯಃ ಕ್ರಿಯತೇ ಮಯಾ। -ಮ.ಭಾ.ತಾ.ನಿ.(೯/೧೩೫-೧೪೧)
ಭಾಷಾಸ್ತು ತ್ರಿವಿಧಾಸ್ತತ್ರ ಮಯಾ ವೈ ಸಂಪ್ರದರ್ಶಿತಾಃ॥
ಉಕ್ತೋ ಯೋ ಮಹಿಮಾ ವಿಷ್ಣೋಃ ಸ ತೂಕ್ತೋ ಹಿ ಸಮಾಧಿನಾ।
ಶೈವದರ್ಶನಮಾಲಂಬ್ಯ ಕ್ವಚಿಚ್ಛೈವೀ ಕಥೋದಿತಾ॥

ಎಂದರೆ "ಬ್ರಹ್ಮಸೂತ್ರ ಮೊದಲಾದಂತಹ ನಿರ್ಣಾಯಕಶಾಸ್ತ್ರಗಳ ಅಧ್ಯಯನ, ಉಪಕ್ರಮ, ಉಪಸಂಹಾರ, ಅರ್ಥವಾದ, ಉಪಪತ್ತಿ, ಅಭ್ಯಾಸ, ಅಪೂರ್ವತಾ, ಫಲ ಎಂಬ ಷಡ್ವಿಧತಾತ್ಪರ್ಯ-ನಿರ್ಣಯಗಳ ಅಳವಡಿಕೆ, ಸಮಾಧಿ, ದರ್ಶನ ಮತ್ತು ಗುಹ್ಯ ಎಂಬ ಭಾಷಾತ್ರಯದ ವಿವೇಚನೆ, ವೈದರ್ಭೀ, ಗೌಡೀ, ಪಾಂಚಾಲಿ ಮೊದಲಾದ ನೂರು ಶೈಲಿಗಳ ಪರಿಜ್ಞಾನ, ವ್ಯತ್ಯಾಸ, ಪ್ರಾತಿ-ಲೋಮ್ಯ, ಗೋಮೂತ್ರಿ, ಪ್ರಘಸ, ಉಕ್ಷಣ, ಸುಧುರ ಮತ್ತು ಸಾಧು ಎಂಬ ಸಪ್ತವಿಧನಿರೂಪಣಾ-ಪ್ರಭೇದಗಳ ಪರಿಕಲ್ಪನೆ – ಇಷ್ಟೆಲ್ಲ ಪರಿಕರಗಳ ಹಿನ್ನೆಲೆಯಲ್ಲಿ ಮಾತ್ರ ಇತಿಹಾಸಪುರಾಣಗಳ ಹೃದಯವನ್ನು ಅರಿಯಲು ಸಾಧ್ಯ" ಎಂದರ್ಥ. ಈ ದೃಷ್ಟಿಕೋನ ಸಮಗ್ರ ವಿಮರ್ಶನಪ್ರಪಂಚಕ್ಕೇ ಆಚಾರ್ಯ ಶ್ರೀಮಧ್ವರ ವಿನೂತನ ಕೊಡುಗೆ.

## ಅಪೂರ್ವ ಪಾತ್ರಚಿತ್ರಣ

ಮಹಾಭಾರತದ ಪಾತ್ರಪ್ರಪಂಚ ಅತ್ಯಂತ ಸಂಕೀರ್ಣವಾದುದು. ರಾಮಾಯಣವನ್ನು ಹೊರತು ಪಡಿಸಿ, ಜಗತ್ತಿನ ಬೇರಾವ ಕೃತಿಗಳೂ ಸಂಖ್ಯೆ ಹಾಗೂ ಸಂಕೀರ್ಣತೆಯಲ್ಲಿ ಇದನ್ನು ಹೋಲಲಾರವು. ಮಹಾಭಾರತ ತನ್ನ ತತ್ತ್ವ ಹಾಗೂ ಕಥೆಗಳಿಂದ ವಿಶ್ವದ ಅನುಪಮಕೃತಿಯಾಗಿರುವಂತೆ, ಅಪೂರ್ವ-ಪಾತ್ರಪ್ರಪಂಚದಿಂದಾಗಿಯೂ ಅದ್ವಿತೀಯವೆನ್ನಿಸಿದೆ. ಕುರುಕುಲಪಿತಾಮಹರೆನ್ನಿಸಿದ ಭೀಷ್ಮ, ಕುರು-ಪಾಂಡವರು ಮೊದಲಾಗಿ ಸಮಸ್ತಕ್ಷತ್ರಿಯವೃಂದದ ಆಚಾರ್ಯರೆನ್ನಿಸಿದ ದ್ರೋಣ, ಧರ್ಮ-ಸ್ವರೂಪನೆನ್ನಿಸಿದ ರಾಜ ಯುಧಿಷ್ಠಿರ, ಅಪ್ರತಿಮ ಧನುರ್ಧಾರಿ ಎನ್ನಿಸಿದ ಅರ್ಜುನ, ಮೇಲ್ನೋಟಕ್ಕೆ ಪಂಚಪತಿಗಳನ್ನು ಹೊಂದಿದ್ದಂತೆ ಕಂಡರೂ ವಿಶ್ವದ ಅಗ್ರಮಾನ್ಯ ಪತಿವ್ರತಾಶಿರೋಮಣಿಯೆನ್ನಿಸಿದ ದ್ರೌಪದೀ, ಸ್ವತಃ ಸೂರ್ಯಾವತಾರನಾಗಿಯೂ ಜೀವನ ಪೂರ್ತಿ ದುರ್ಯೋಧನಾದಿದುಷ್ಟಶಕ್ತಿಗಳ ಗ್ರಹಣಕ್ಕೆ ಒಳಗಾದ ಕರ್ಣ, ಪುತ್ರವ್ಯಾಮೋಹದಿಂದಾಗಿ ಒಳಗೂ ಕುರುಡಾಗಿದ್ದ ಧೃತರಾಷ್ಟ್ರ, ತನ್ನ ಮಕ್ಕಳನ್ನು ಸಾತ್ತ್ವಿಕ ಮಾರ್ಗದಲ್ಲಿಯೇ ಪೂರ್ಣ ಅಭ್ಯುದಯ ಕಾಣಲು ಪ್ರಯತ್ನಿಸಿ ಯಶಸ್ವಿಯಾದ ಕುಂತೀ, ದುರ್ಯೋಧನಾದಿದುಷ್ಟಕೌರವರ ತಾಯಿ ಎನ್ನಿಸಿಕೊಂಡು ವ್ಯಾಮೋಹಕ್ಕೆ ಬೀಳದೆ ಧರ್ಮಪ್ರಜ್ಞೆಯನ್ನು ಮೆರೆದ ಗಾಂಧಾರಿ, ಎಲ್ಲಕ್ಕೂ ಮಿಗಿಲಾಗಿ ಸಮಸ್ತದುಷ್ಟಕೂಟಕ್ಕೆ ಸಿಂಹಸ್ವಪ್ನವಾಗಿ ಮೆರೆದ ಭೀಮಸೇನ, ಸಮಗ್ರಕಾರ್ಯಗಳ ಸೂತ್ರಧಾರನಾದ ಭಗವಂತ ಶ್ರೀಕೃಷ್ಣ – ಹೀಗೆ ಇಲ್ಲಿಯ ಒಂದೊಂದು ಪಾತ್ರವೂ ಅತ್ಯಂತ ವಿಶಿಷ್ಟ ಇಂತಹ ಪಾತ್ರಗಳ ಹಿರಿಮೆಗರಿಮೆಗಳನ್ನು ದುಷ್ಟಪಾತ್ರಗಳ ದುರ್ಗುಣಗಳನ್ನು ಮೂಲಕೃತಿಯ ಬೆಳಕಿನಲ್ಲಿ ಸಮಗ್ರವಾಗಿ ವಿವೇಚಿಸುವ ಅಸಾಮಾನ್ಯಕೃತಿ ಎಂಬುದಾಗಿಯೂ ಮಹಾಭಾರತತಾತ್ಪರ್ಯನಿರ್ಣಯ ಅತಿಮುಖ್ಯವೆನ್ನಿಸುವ ಕೃತಿ.

ಮಹಾಭಾರತದಲ್ಲಿ ಭಗವಂತನಾದ ಶ್ರೀಹರಿಯು ವಾಸಿಷ್ಠಕೃಷ್ಣ ಯಾದವಕೃಷ್ಣ ಮತ್ತು ಭಾರ್ಗವರಾಮ ಎಂಬ ಮೂರು ರೂಪಗಳಿಂದ ಕಂಗೊಳಿಸಿದ್ದು ವಿಶೇಷ. ಅದರಂತೆ ಮಹಾಲಕ್ಷ್ಮಿ ರುಗ್ಮಿಣೀ, ಸತ್ಯಭಾಮಾ ಎಂಬ ಶ್ರೀರೂಪ, ಭೂರೂಪ ಹಾಗೂ ದುರ್ಗಾರೂಪವೆಂಬ ರೂಪ-

---

ಸಮಾಧಿಭಾಷಯೋಕ್ತಂ ಯತ್ ತತ್ ಸರ್ವಂ ಗ್ರಾಹ್ಯಮೇವ ಹಿ ।
ಅವಿರುದ್ಧಂ ಸಮಾಧೇಸ್ತು ದರ್ಶನೋಕ್ತಂ ಚ ಗೃಹ್ಯತೇ ॥
ಆದ್ಯಂತಯೋರ್ವಿರುದ್ಧಂ ಯದ್ದರ್ಶನಂ ತದುದಾಹೃತಮ್ ।
ದರ್ಶನಾಂತರಸಿದ್ಧಂ ಚ ಗುಹ್ಯಭಾಷಾಽನ್ಯಥಾ ಭವೇತ್ ॥ –ಮ.ಭಾ.ತಾ.ನಿ.(೨/೧೧೯-೧೨೦)

ತ್ರಯದಿಂದ ಅವತರಿಸಿದ್ದು ಸಹ. ಯಮನೂ ಸಹ ಜಾಂಬವಂತ, ವಿದುರ ಮತ್ತು ಯುಧಿಷ್ಠಿರ ಎಂಬ ರೂಪತ್ರಯಗಳಿಂದ ಸಾಧನೆ ನಡೆಸಿದ್ದು ಗಮನಾರ್ಹ.

ವಾಯುದೇವರು ಹನುಮಂತ ಮತ್ತು ಭೀಮಸೇನ ಎಂಬ ಎರಡು ರೂಪಗಳಿಂದ ಪಾಲ್ಗೊಂಡಿದ್ದರೆ, ಬೃಹಸ್ಪತ್ಯಾಚಾರ್ಯರು ದ್ರೋಣ ಮತ್ತು ಉದ್ಧವ ಎಂಬ ಎರಡು ರೂಪಗಳಿಂದ ಅವತರಿಸಿದ್ದರು. ಪತ್ರತಾಪನೆಂಬ ರುದ್ರನು ಬಾಹ್ಲೀಕಪುತ್ರನಾದ ಸೋಮದತ್ತ, ಜರಾಸಂಧಪುತ್ರನಾದ ಸಹದೇವ ಎಂಬ ಎರಡು ರೂಪಗಳನ್ನು ಹೊಂದಿದ್ದ; ಎರಡೂ ಪಕ್ಷದಲ್ಲಿ ಭಾಗವಹಿಸಿದ್ದ ವಿಶೇಷತೆ ಇವನದು. ಷಣ್ಮಹಿಷಿಯರಲ್ಲಿ ಒಬ್ಬಳಾದ ನೀಲಾದೇವಿ ಎರಡು ರೂಪಗಳಿಂದ ಕೃಷ್ಣಪತ್ನಿ ಎನ್ನಿಸಿದ್ದು ಮತ್ತೊಂದು ವಿಶೇಷ. ಪಾಂಡುರಾಜ, ಅರ್ಜುನ, ದ್ರೋಣ ಮೊದಲಾದವರ ಹಿರಿಮೆಗಳನ್ನು ಸೂಕ್ತ ವಿಶೇಷಣಗಳ ಮೂಲಕ ಚಿತ್ರಿಸುವ ಅವರ ಕೆಲವು ವಾಕ್ಯಗಳನ್ನು ಗಮನಿಸಬಹುದು[೧].

ಕೌರವರು ಹಾಗೂ ಪಾಂಡವರು ವೇದವ್ಯಾಸರ ಮೊಮ್ಮಕ್ಕಳು. ಮತ್ತೊಂದು ರೀತಿಯಲ್ಲಿ ಭೀಷ್ಮರ ಮೊಮ್ಮಕ್ಕಳು. ಎಂದರೆ ವೇದವ್ಯಾಸ, ಭೀಷ್ಮ – ಇಬ್ಬರೂ ಕುರುಪಾಂಡವರ ಪಿತಾಮಹರು. ಆದರೆ ವೇದವ್ಯಾಸರು ಸದಾ ಪಾಂಡವಹಿತೈಷಿಗಳಾಗಿದ್ದು, ದುರ್ಯೋಧನಾದಿಗಳ ಬಗ್ಗೆ ತಟಸ್ಥ-ಧೋರಣೆಯನ್ನು ಅನುಸರಿಸಿದರು. ಭೀಷ್ಮರು ಪಾಂಡವರ ಹಿತೈಷಿಗಳಾಗಿದ್ದರೂ, ದುರ್ಯೋಧನನ ಪಕ್ಷವನ್ನು ವಹಿಸಿ, ಪಾಂಡವರ ವಿರುದ್ಧ ಕಾದಿ ಪತನ ಹೊಂದಿದರು. ವೇದವ್ಯಾಸರಿಗೆ ಸಾಧ್ಯವಾದದ್ದು ಭೀಷ್ಮರಿಗೆ ಸಾಧ್ಯವಾಗಲಿಲ್ಲ. ವೇದವ್ಯಾಸರು ಸಾಕ್ಷಾದ್ಭಗವಂತನಾದರೆ, ಭೀಷ್ಮರು ಭಗವದ್ಭಕ್ತರು ಮಾತ್ರವೇ ಆಗಿದ್ದರು ಎಂಬುದಕ್ಕೂ ಇದು ದ್ಯೋತಕ. ಮಹಾಭಾರತ ಹಾಗೂ ರಾಮಾಯಣಗಳ ಕಾಲ ಅತ್ಯಂತ ವಿಶಿಷ್ಟ ಬಗೆಯದು. ಶ್ರೀಹರಿಯ ಶ್ರೀರಾಮ ಹಾಗೂ ಶ್ರೀಕೃಷ್ಣ ರೂಪಗಳ ಸೇವೆಗೆಂದು ದೇವತೆಗಳ ದಂಡೇ ಅವತರಿಸಿದ್ದ ಕಾಲ ಅದು. ಇತರ ಭಗವದವತಾರಗಳ ಕಾಲದಲ್ಲಿ ಇಷ್ಟು ಅಪಾರ ಸಂಖ್ಯೆಯಲ್ಲಿ ದೇವತಾವೃಂದ ಅವತರಿಸಿರಲಿಲ್ಲ.

ಶ್ರೀರಾಮಾವತಾರದಲ್ಲಿ ಅಷ್ಟದಿಕ್ಪಾಲಕರಲ್ಲಿ ಇಂದ್ರ ವಾಲಿಯಾಗಿ, ಅಗ್ನಿ ನೀಲನಾಗಿ, ಯಮ ಜಾಂಬವಂತನಾಗಿ, ನಿರ್ಋತಿ ದುರ್ಮುಖನಾಗಿ, ವರುಣ ಸುಷೇಣನಾಗಿ, ಕುಬೇರ ಕಧನನಾಗಿ ಅವತರಿಸಿ ಶ್ರೀರಾಮರೂಪದ ಸೇವೆಯನ್ನು ಮಾಡಿದ್ದರು. ಶ್ರೀಕೃಷ್ಣಾವತಾರದಲ್ಲಿ ಇಂದ್ರ ಅರ್ಜುನ-ನಾಗಿ, ಅಗ್ನಿಯು ಧೃಷ್ಟದ್ಯುಮ್ನನಾಗಿ, ಯಮನು ಯುಧಿಷ್ಠಿರ, ವಿದುರ ಹಾಗೂ ಜಾಂಬವಂತನಾಗಿ, ನಿರ್ಋತಿಯು ಘಟೋತ್ಕಚನಾಗಿ, ವರುಣ ಶಂತನುವಾಗಿ, ಕುಬೇರ ಭಗದತ್ತನಾಗಿ ಹಾಗೂ ರುದ್ರದೇವರು ಅಶ್ವತ್ಥಾಮನಾಗಿ ಅವತರಿಸಿ ಶ್ರೀಕೃಷ್ಣರೂಪದ ಸೇವೆಯನ್ನು ವಿಶೇಷವಾಗಿ ಮಾಡಿದರು. ಅಧೋದಿಕ್ಕಿನ ಅಧಿಪತಿಯಾದ ಶೇಷದೇವರು ಶ್ರೀರಾಮಾವತಾರದಲ್ಲಿ ಲಕ್ಷ್ಮಣನಾಗಿ,

---

೧. ಪಾಂಡುಶ್ಚ ಪುತ್ರಕಗುಣೈಃ ಸ್ವಗುಣೈಶ್ಚ ಸಾಕ್ಷಾತ್ಕೃಷ್ಣಾತ್ಮಜಃ ಸತತಮಸ್ಯ ಪದೈಕಭಕ್ತಃ।
ಲೋಕಾನವಾಪ ವಿಮಲಾನ್ ಮಹಿತಾನ್ ಮಹದ್ಭಿಃ ಕಿಂ ಚಿತ್ರಮತ್ರ ಹರಿಪಾದವಿನಮ್ರಚಿತ್ತೇ॥
–ಮ.ಭಾ.ತಾ.ನಿ.(೧೪/೫೪)

ದೇಯಾ ಚ ಕನ್ಯಾ ನಾಸ್ತಿ ಪಾರ್ಥೇನ ತುಲ್ಯೋ ವರೋಽಸ್ಮಾಕಂ ಕೌರವೇಯಶ್ಚ ಪಾರ್ಥಃ।
ಪೌತ್ರಶ್ಚ ಕೃಷ್ಣಸ್ಯ ಸುಪೂರ್ಣಶಕ್ತೇಃ ಪೈತೃಷ್ವಸೇಯೋ ವೀರತಮೋ ಗುಣಾಢ್ಯಃ॥ –ಮ.ಭಾ.ತಾ.ನಿ.(೨೦/೨೦೨)
ಅಥಾಖಿಲಾನಾಂ ಪೃಥಿವೀಪತೀನಾಮಾಚಾರ್ಯಮಗ್ರ್ಯಂ ರಥಿನಾಂ ಸುವಿದ್ಯಮ್।
ರಾಮಸ್ಯ ವಿಶ್ವಾಧಿಪತೇಃ ಸುಶಿಷ್ಯಂ ಚಕ್ರೇ ಚಮೂಪಂ ಧೃತರಾಷ್ಟ್ರಪುತ್ರಃ॥ –ಮ.ಭಾ.ತಾ.ನಿ.(೨೬/೧)

ಶ್ರೀಕೃಷ್ಣಾವತಾರದಲ್ಲಿ ಬಲರಾಮನಾಗಿ ಅವತರಿಸಿ ವಿಶೇಷವಾಗಿ ಭಗವತ್ಸೇವೆಯನ್ನು ಮಾಡಿದರು. ಊರ್ಧ್ವದಿಕ್ಕಿನ ಬ್ರಹ್ಮದೇವರಿಗೆ ಅವತಾರವಿಲ್ಲ. ಆದರೂ ಭೀಷ್ಮ ದ್ರೋಣ ಮೊದಲಾದವರಲ್ಲಿ ಬ್ರಹ್ಮದೇವರ ಅಂಶವಿದ್ದಿತು ಎಂಬುದು ಗಮನಿಸಬೇಕಾದ ಅಂಶ. ಭಾವಿಬ್ರಹ್ಮರಾದ ಶ್ರೀವಾಯು-ದೇವರು ಶ್ರೀರಾಮಾವತಾರದಲ್ಲಿ ಹನುಮಂತನಾಗಿ ಶ್ರೀಕೃಷ್ಣಾವತಾರದಲ್ಲಿ ಹನುಮದ್ರೂಪದೊಂದಿಗೆ ಭೀಮರೂಪದಿಂದಲೂ ಶ್ರೀಹರಿಯನ್ನು ಸೇವಿಸಿದರು.

ಈ ಎಲ್ಲ ದೇವತೆಗಳ ಮುಖ್ಯವಾದ ಉದ್ದೇಶ ಭಗವತ್ಕಾರ್ಯ ಸಾಧನೆ. ಇದರಿಂದ ಶ್ರೀಹರಿಯ ಸರ್ವೋತ್ತಮತ್ವವು ಸಾಧಿತವಾಗುವುದು. ಶ್ರೀಹರಿಯು ಅಷ್ಟದಿಕ್ಪಾಲಕರಲ್ಲಿ ಸ್ವತಃ ಅಂತರ್ಯಾಮಿ-ಯಾಗಿ ನೆಲೆಸಿದ್ದು ಸಕಲ ಲೋಕಪಾಲಕನಾಗಿರುವನು. ಇದು ಅವನೇ ಸರ್ವಲೋಕಪಾಲಕ ಎಂಬುದಕ್ಕೂ ದ್ಯೋತಕವಾಗಿರುವ ವಿಚಾರ. ನವಗ್ರಹಗಳಲ್ಲಿ ಗ್ರಹರಾಜನಾದ ಸೂರ್ಯನು ಕರ್ಣನಾದ; ಚಂದ್ರನ ಅಂಶವು ಅಭಿಮನ್ಯುವಿನಲ್ಲಿತ್ತು. ಮಂಗಳನು ಅರ್ಜುನಪುತ್ರನಾದ ಇರಾವಂತ ; ಬುಧನು ಅಭಿಮನ್ಯು ; ಬೃಹಸ್ಪತಿಯಂತೂ ದ್ರೋಣಾಚಾರ್ಯರು ; ಉದ್ಧವ ಅವರ ಇನ್ನೊಂದು ರೂಪ; ಶುಕ್ರಶಿಷ್ಯನಾದ ಕಣಿಕನು ಕೌರವರ ಗುರುವಾಗಿದ್ದ ; ರಾಹುವಿನ ಅಂಶ ಭೀಷ್ಮಕರಾಜನಲ್ಲಿತ್ತು - ಹೀಗೆ ಹೆಚ್ಚಿನ ಗ್ರಹಗಳು ಒಂದು ರೀತಿಯಲ್ಲಿ ಮಹಾಭಾರತದಲ್ಲಿ ಪಾಲ್ಗೊಂಡಿರುವುದು ಗಮನಾರ್ಹ.

ಗಾಂಧಾರಿಯ ಮಕ್ಕಳು ನೂರು; ಕುಂತಿಯ ಮಕ್ಕಳು ಮೂರು. ಗಾಂಧಾರಿಯದು ಸಂಖ್ಯಾ-ಬಲ, ಕುಂತಿಯದು ಸತ್ತ್ವಬಲ. ಮೂರರಿಂದ ನೂರು ಸೋತದ್ದೇ ಮಹಾಭಾರತದ ಸಂದೇಶ. ಗಾಂಧಾರಿಯ ಮಕ್ಕಳು ನೂರಾರು ವಿಷಯಾಸೆಗಳ ಸಂಕೇತವಾದರೆ, ಕುಂತಿಯ ಮೂರು ಮಕ್ಕಳು ಜ್ಞಾನ ಭಕ್ತಿ ವೈರಾಗ್ಯಗಳೆಂಬ ಮೂರರ ಸಂಕೇತ ಎಂಬುದು ಇದರ ರಹಸ್ಯ. ಕೀಚಕ ಉಪಕೀಚಕರ ಸಂಖ್ಯೆ ಒಟ್ಟು ೧೦೬ ; ಅವರನ್ನೂ ಸಹ ನಾಶಪಡಿಸಿದ ಹಿರಿಮೆ ಭೀಮಸೇನನದು.

## ಅನನ್ಯತಾತ್ತ್ವಿಕವಿಶ್ಲೇಷಣೆ

ಇತಿಹಾಸಪುರಾಣಗಳು ಮೂಲತಃ ಆಧ್ಯಾತ್ಮಿಕಮೌಲ್ಯಗಳ ತವನಿಧಿ. ಮಹಾಭಾರತದ ಆಧ್ಯಾತ್ಮಿಕ ಮೌಲ್ಯವನ್ನು ಇತಿಹಾಸಪುರಾಣಗಳು ಬಗೆಬಗೆಯಾಗಿ ಅನಾವರಣಗೊಳಿಸಿವೆ. ಆದರೆ, ಅವುಗಳನ್ನು ಸೂಕ್ತರೀತಿಯಲ್ಲಿ ವಿವೇಚಿಸುವ, ವಿಶ್ಲೇಷಿಸುವ ಕಾರ್ಯ ನಡೆದಿರಲೇ ಇಲ್ಲ. ಇತರ ಮತಾ-ಚಾರ್ಯರು ಇತಿಹಾಸಪುರಾಣಗಳ ಮಹತ್ತ್ವವನ್ನು ಗೌಣವನ್ನಾಗಿಸಿದ್ದರಿಂದ ಅವುಗಳ ಆಧ್ಯಾತ್ಮಿಕ-ಮೌಲ್ಯ ಕಡೆಗಣನೆಗೆ ಒಳಗಾಗಿದ್ದಿತು. ಅವುಗಳನ್ನು ಅಪೂರ್ವರೀತಿಯಲ್ಲಿ ಪ್ರಮಾಣಪೂರ್ವಕವಾಗಿ ವಿಶ್ಲೇಷಿಸಿ ವಿವರಿಸಿದ ಹಿರಿಮೆ ಆಚಾರ್ಯ ಶ್ರೀಮಧ್ವರದು.

[೧]ಮಹಾಭಾರತದ ತಾತ್ತ್ವಿಕ ಮೌಲ್ಯದ ಬಗ್ಗೆ ಗಮನಹರಿಸಿದ ಆಧುನಿಕ ವಿದ್ವಾಂಸರಾದ ಡಾ॥ವಿ. ಎಸ್.ಸುಕ್ಥಂಕರ್(ಕ್ರಿ.ಶ.೧೮೮೭-೧೯೪೩) ಅವರು, ಮಹಾಭಾರತದ ತಾತ್ತ್ವಿಕವಿವೇಚನೆಯ ಬಗ್ಗೆ

೧. ಪುಣೆಯ ಭಂಡಾರ್ಕರ್ ಸಂಸ್ಥೆಯ ಪರಿಷ್ಕೃತಪಾಠದ ಆದಿಪರ್ವದ ಸಂಪುಟ ಬಂದದ್ದು ಕ್ರಿ.ಶ. ೧೯೩೩ರಲ್ಲಿ; ಸ್ವರ್ಗಾರೋಹಣಪರ್ವಸಂಪುಟ ಬಂದದ್ದು ಕ್ರಿ.ಶ.೧೯೫೯ರಲ್ಲಿ; ಅನುಶಾಸನಪರ್ವದ ಕೊನೆಯ ಸಂಪುಟ ಬಂದದ್ದು ಕ್ರಿ.ಶ.೧೯೬೬ರಲ್ಲಿ; ಎಂದರೆ ಅದರ ಪ್ರಕಾಶನಕಾರ್ಯ ಪೂರೈಸಲು ತಗುಲಿದ ಒಟ್ಟು ಅವಧಿ ೩೩ ವರ್ಷಗಳಷ್ಟು ಸುದೀರ್ಘ ಕಾಲ ಎಂದಾಗುವುದು.

ಮೊದಲ ಬಾರಿಗೆ ಬೆಳಕು ಚೆಲ್ಲಿದ ಶ್ರೇಯಸ್ಸು ಮಹಾಮಹಿಮರಾದ ಶ್ರೀಆನಂದತೀರ್ಥರದು ಎಂದು ತುಂಬ ಗೌರವದಿಂದ ಉಲ್ಲೇಖಿಸಿರುವರು :

.......... I will only mention that this is no new discovery of mine, but that such psychological and metaphysical explanations of the characters and the plot of the Mahābhārata are scattered in the ancient Indian commentaries of the epic, the best known among them being the Mahābhārata-tātparya-nirṇaya of Ānandatīrtha, the great Madhvācārya, who has clearly stated in that work that the story of the Great Epic has been related in such a way as to convey also an allegorical meaning :

**evam adhyātmaniṣṭhaṁ hi Bhārataṁ sarvam ucyate ।**
**durvijñeyam ataḥ sarvair Bhāratam tu surair api ॥**

Ānandatīrtha explains the symbolism by giving the psychological concepts corresponding to many of the important characters, differing partly from those given by me. ........

- On the Meaning of the Mahābhārata[೧]

ಮಹಾಭಾರತತಾತ್ಪರ್ಯನಿರ್ಣಯ ನೀಡಿರುವ ಆಧ್ಯಾತ್ಮಿಕ ತತ್ತ್ವವಿವೇಚನೆಯ ಸಂಗ್ರಹ ಹೀಗಿದೆ[೨]. ಭಕ್ತಿ, ವೈರಾಗ್ಯಸಹಿತವಾದ ಜ್ಞಾನ, ಪ್ರಜ್ಞೆ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ ಮತ್ತು ಬಲ -

---

೧. Pub : Asiatic Society of Bombay, Town hall, Bombay, 1957.

೨. ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ ।
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಃ ॥
ಏತದ್ದಶಾತ್ಮಕೋ ವಾಯುಸ್ತಸ್ಮಾದ್ಭೀಮಸ್ತದಾತ್ಮಕಃ ।
ಸರ್ವವಿದ್ಯಾ ದ್ರೌಪದೀ ತು ಯಸ್ಮಾತ್ ಸೈವ ಸರಸ್ವತೀ ॥
ಅಜ್ಞಾನಾದಿಸ್ವರೂಪಸ್ತು ಕಲಿರ್ದುರ್ಯೋಧನಃ ಸ್ಮೃತಃ ।
ವಿಪರೀತಂ ತು ಯಜ್ಜ್ಞಾನಂ ದುಃಶಾಸನ ಇತೀರಿತಃ ॥
ನಾಸ್ತಿಕ್ಯಂ ಶಕುನಿರ್ನಾಮ ಸರ್ವದೋಷಾತ್ಮಕಾಃ ಪರೇ ।
ಧಾರ್ತರಾಷ್ಟ್ರಾಸ್ತ್ವಹಂಕಾರೋ ದ್ರೌಣೀ ರುದ್ರಾತ್ಮಕೋ ಯತಃ ॥
ದ್ರೋಣಾದ್ಯಾ ಇಂದ್ರಿಯಾಣ್ಯೇವ ಪಾಪಾನ್ಯನ್ಯೇ ತು ಸೈನಿಕಾಃ ।
ಪಾಂಡವೇಯಾಶ್ಚ ಪುಣ್ಯಾನಿ ತೇಷಾಂ ವಿಷ್ಣುರ್ನಿಯೋಜಕಃ ॥
ಏವಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ ।
ದುರ್ವಿಜ್ಞೇಯಮತಃ ಸರ್ವೈರ್ಭಾರತಂ ತು ಸುರೈರಪಿ ॥
ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ ।
ತಥಾಽಪಿ ವಿಷ್ಣುಪರತಾ ಭಾರತೇ ಸಾರಸಂಗ್ರಹಃ ॥
ಇತ್ಯಾದಿ ವ್ಯಾಸವಾಕ್ಯೈಸ್ತು ವಿಷ್ಣೂತ್ಕರ್ಷೋಽವಗಮ್ಯತೇ ।
ವಾಯ್ವಾದೀನಾಂ ಕ್ರಮಶ್ಚೈವ ತದ್ವಾಕ್ಯೈರೇವ ಚಿಂತ್ಯತೇ ॥ -ಮ.ಭಾ.ತಾ.ನಿ.(೨/೧೪೧-೧೪೮)

ಈ ಹತ್ತೂ ಗುಣಗಳ ಸಂಕೇತವಾಗಿ ಭೀಮನು ವೃಕೋದರ ಎನ್ನಿಸುವನು. ಭೀಮನ ಮಹಿಮೆಯನ್ನು ಉಲ್ಲೇಖಿಸುವ ಪ್ರತಿಪ್ರಸಂಗದಲ್ಲೂ ಈ ಹತ್ತುಗುಣಗಳ ಮಹತ್ತ್ವವು ಪ್ರತಿಪಾದಿತವಾಗಿದೆ ಎಂದು ತಿಳಿಯಬೇಕು ಎಂದು ಭಾವ. ಇದರಂತೆ ಧರ್ಮರಾಜ, ಅರ್ಜುನ, ನಕುಲ ಮತ್ತು ಸಹದೇವರ ಮಹತ್ತ್ವದ ನಿರೂಪಣೆಯಲ್ಲೂ ಕ್ರಮವಾಗಿ ಧರ್ಮ, ಶ್ರವಣ, ಮನನ ಮತ್ತು ಧ್ಯಾನ, ಶೀಲ ಮತ್ತು ವಿನಯಗಳೆಂಬ ಗುಣಗಳ ಹಿರಿಮೆ ನಿರೂಪಿತವಾಗಿದೆ ಎಂಬುದಾಗಿ ಸಹ ತಿಳಿಯಬೇಕು. ಭೀಮಸೇನನು ಈ ಹತ್ತುಗುಣಗಳ ಸಂಕೇತವಾಗಿರುವಂತೆ, ಇವರ ಪೂರ್ವಾವತಾರರಾದ ಹನುಮಂತ ಮತ್ತು ಉತ್ತರಾವತಾರರಾದ ಶ್ರೀಮದಾಚಾರ್ಯರೂ ಸಹ ಈ ಹತ್ತೂ ಗುಣಗಳ ಸಂಕೇತವಾಗಿರುವರು ಎಂದೂ ತಿಳಿಯಬೇಕು. ಅಜ್ಞಾನ, ಭ್ರಮ, ಪ್ರಮಾದಿಗಳಿಗೆ ಅಭಿಮಾನಿ–ದೈತ್ಯನಾದ ಕಲಿಯೇ ದುರ್ಯೋಧನ; ವಿಪರೀತ (ಮಿಥ್ಯಾ)ಜ್ಞಾನವು ದುಃಶಾಸನ ಎಂದು ಹೇಳಲ್ಪಟ್ಟಿದೆ. ಶಕುನಿಯು ನಾಸ್ತಿಕ್ಯಸ್ವರೂಪ, ಇತರ ಕೌರವರು ಇತರ ಸಕಲದೋಷಗಳ ಸ್ವರೂಪರು, ಅಶ್ವತ್ಥಾಮರು ರುದ್ರಾವತಾರರಾದ್ದರಿಂದ ಅವರು ಅಹಂಕಾರಸ್ವರೂಪರು, ದ್ರೋಣಾದಿ(ಕರ್ಣ, ಭೀಷ್ಮ ಅಭಿಮನ್ಯು, ನಕುಲಸಹದೇವರು ಮತ್ತು ಅರ್ಜುನ)ಗಳು ಇಂದ್ರಿಯಸ್ವರೂಪರು; ಕೌರವರ ಪಕ್ಷದ ಸೈನಿಕರೆಲ್ಲ ಪಾಪಗಳ ಸಂಕೇತ; ಪಾಂಡವಸೈನಿಕರು ಪುಣ್ಯಗಳ ಸಂಕೇತ; ಇವರಿಗೆಲ್ಲ (ಶ್ರೀಕೃಷ್ಣರೂಪದ) ಭಗವಂತನೇ ನಿಯೋಜಕ. ಪಾಂಡವರ ಪ್ರಸಂಗ ಬಂದಾಗ ಧರ್ಮಾದಿಗಳ ಪರವಾಗಿ ಅವುಗಳನ್ನು ಅರ್ಥಮಾಡಿಕೊಳ್ಳುವಂತೆ, ದುರ್ಯೋಧನ, ದುಃಶಾಸನ, ಶಕುನಿ, ಅಶ್ವತ್ಥಾಮ, ದ್ರೋಣಭೀಷ್ಮಾದಿಗಳು, ಕೌರವಸೈನ್ಯದ ರಾಜಾದಿಗಳು ಮತ್ತು ಪಾಂಡವಸೈನ್ಯದ ರಾಜಾದಿಗಳ ಪ್ರಸಂಗಗಳು ಬಂದಾಗಲೆಲ್ಲ ಕ್ರಮವಾಗಿ ಅಜ್ಞಾನಾದಿಗಳು, ಮಿಥ್ಯಾಜ್ಞಾನ, ನಾಸ್ತಿಕ್ಯ, ಅಹಂಕಾರ, ಇಂದ್ರಿಯಗಳು, ಪಾಪಗಳು ಮತ್ತು ಪುಣ್ಯಗಳನ್ನು ಅರ್ಥಮಾಡಿಕೊಳ್ಳಬೇಕು ಎಂದು ಭಾವ. ''ಸಾಧನಶರೀರದಲ್ಲಿನ ಧರ್ಮಾದಿ ಹದಿನೇಳು ಗುಣಗಳ ಸಂಕೇತ ಪಂಚಪಾಂಡವರು ಮತ್ತು ದ್ರೌಪದಿ; ದ್ರೌಪದಿಯು ಮುಖದಲ್ಲಿರುವ ವಾಣಿಯ ಸಂಕೇತವೂ ಆಗಿರುವರು'' ಎಂಬುದು ಇದರಲ್ಲಿನ ಅಧ್ಯಾತ್ಮದ ಸಂಗ್ರಹ.

ವಿಕರ್ಣಾದಿಗಳು ಕಾಮಕ್ರೋಧಾದಿ ಸಹಜವಾದ ಪ್ರಬಲಪಾಪಗಳಿಗೂ, ಕೌರವಸೈನಿಕರು ಪರಹಿಂಸೆ, ಪರದ್ರವ್ಯಾಪಹರಣ, ಪರನಿಂದೆ, ಪರನಾರೀಗಮನ ಮೊದಲಾದ ಕಾದಾಚಿತ್ಕ ಪಾಪಗಳಿಗೂ ನಿಯಾಮಕರು ಎಂದು ತಿಳಿಯಬೇಕು. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

ಇದರಂತೆ ಕಾಲನೇಮಿಯ ಅವತಾರನಾದ ಕಂಸನು ಕಾಮಾಭಿಮಾನೀ ದೈತ್ಯ; ವಿಪ್ರಚಿತ್ತಿಯ ಅವತಾರನಾದ ಜರಾಸಂಧನು ಮಿಥ್ಯಾಜ್ಞಾನಕ್ಕೆ ಅಭಿಮಾನಿಯಾದ ದೈತ್ಯ; ಶ್ರೀಕೃಷ್ಣಭೀಮರಿಂದ ಹತರಾದ ಇಬ್ಬರು ಬಕಾಸುರರು ಮಿಥ್ಯಾಚಾರ ಮತ್ತು ಶೋಷಣೆಗೆ ಸಂಕೇತ; ಧೃತರಾಷ್ಟ್ರನು ಧರ್ಮಾಧರ್ಮಗಳನ್ನು ಕಾಣದ ಅಜ್ಞಾನಿಯಾದ ಜೀವ; ಗಾಂಧಾರಿಯು ಅಂತಹ ಜೀವನ ಅವಿವೇಕದ ಬುದ್ಧಿ; ಧೃಷ್ಟದ್ಯುಮ್ನನು ಅಗ್ನಿ; ಹೀಗೆ ಅಧ್ಯಾತ್ಮಾರ್ಥವನ್ನು ತಿಳಿಯಬೇಕು.

ಒಟ್ಟಾಗಿ ಕುರುಪಾಂಡವರ ಸಂಘರ್ಷವು ಧರ್ಮಾಧರ್ಮಗಳ, ತತ್ತ್ವಜ್ಞಾನ ಮಿಥ್ಯಾಜ್ಞಾನಗಳ, ಪಾಪಪುಣ್ಯಗಳ ಸಂಘರ್ಷಕ್ಕೆ ಪ್ರತೀಕವಾಗಿದ್ದು ಮಹಾಭಾರತವು ಅದ್ಭುತವಾದ ಆಧ್ಯಾತ್ಮಿಕಕೃತಿ ಎನ್ನಿಸುತ್ತದೆ. ಭೀಮನಿಂದ ಸಮಸ್ತಕೌರವರ ಹನನ ಎಂಬುದು ಭಕ್ತ್ಯಾದಿ ಸದ್ಗುಣಗಳಿಂದ ಅಜ್ಞಾನಾದಿ

ಸಕಲದೋಷಗಳ ವಿನಾಶ ಎಂಬ ತತ್ತ್ವವನ್ನೂ ಶ್ರೀಕೃಷ್ಣನ ಸರ್ವಸ್ವಾಮಿತ್ವ ಸರ್ವೋತ್ತಮತ್ವ-ಗಳನ್ನೂ ತಿಳಿಸಿಕೊಡುತ್ತವೆ[1].

---

೧. ಈ ತಾತ್ತ್ವಿಕವಿಶ್ಲೇಷಣೆಯ ಹಿನ್ನೆಲೆಯಲ್ಲಿ ದ್ರೌಪದೀಸ್ವಯಂವರದ ಪ್ರಸಂಗದ ಅಧ್ಯಾತ್ಮವನ್ನು ಹೀಗೆ ಅರ್ಥಮಾಡಿಕೊಳ್ಳಬಹುದು : ಅಲ್ಲಿಯ ಧನುಸ್ಸು ಶಿವ ನೀಡಿದ್ದು; ಲಕ್ಷ್ಯ ಮತ್ಸ್ಯಯಂತ್ರ; ಅದನ್ನು ನೋಡಬೇಕಾದದ್ದು ಪಾತ್ರೆಯಲ್ಲಿನ ನೀರಿನಲ್ಲಿ; ಧನುಸ್ಸಿನಲ್ಲಿ ಹೂಡಬೇಕಾದದ್ದು ಐದು ಬಾಣಗಳನ್ನು ; ಹೊಡೆಯಬೇಕಾದದ್ದು ಆ ಐದೂ ಬಾಣಗಳಿಂದ ಒಟ್ಟಾಗಿ ; ಮತ್ಸ್ಯಯಂತ್ರ ಭೇದಿಸಿ ಕೆಳಕ್ಕೆ ಬಿದ್ದಾಗ ಮಾತ್ರ ದ್ರೌಪದೀ ಸ್ವಯಂವರ. ಇಲ್ಲಿಯ ಮತ್ಸ್ಯಯಂತ್ರ ಮತ್ಸ್ಯಾದಿ ರೂಪನಾದ ಪರಬ್ರಹ್ಮನಾದ ಶ್ರೀಹರಿಯ ಸಂಕೇತ. ಪಾತ್ರೆಯಲ್ಲಿನ ನೀರು ಶಾಸ್ತ್ರದ ಸಂಕೇತ, ಮತ್ಸ್ಯದ ಪ್ರತಿಬಿಂಬವನ್ನು ಅದರಲ್ಲಿ ನೋಡುವುದು ಎಂದರೆ ಭಗವಂತನ ಮಹಿಮೆಯನ್ನು ಶಾಸ್ತ್ರದ ಮೂಲಕ ಕಾಣುವುದು ಎಂದರ್ಥ. ಧನುಸ್ಸು ಎಂದರೆ ಮನಸ್ಸು ಐದು ಬಾಣಗಳು ಎಂದರೆ ಪಂಚ ಜ್ಞಾನೇಂದ್ರಿಯಗಳು. ಧನುಸ್ಸನ್ನು ಕಟ್ಟುವುದು ಎಂದರೆ ಮನಸ್ಸನ್ನು ನಿಗ್ರಹಿಸಿ ಹತೋಟಿಯಲ್ಲಿಟ್ಟುಕೊಳ್ಳುವುದು ಎಂದರ್ಥ. ಬಾಣಗಳನ್ನು ಧನುಸ್ಸಿನಲ್ಲಿ ಹೂಡುವುದು ಎಂದರೆ ಪಂಚ ಜ್ಞಾನೇಂದ್ರಿಯಗಳನ್ನು ಮನಃಪೂರ್ವಕವಾಗಿ ಲಕ್ಷ್ಯದ ಕಡೆಗೆ ತೊಡಗಿಸುವುದು ಎಂದರ್ಥ. ಹಾಗೆ ಧನುಸ್ಸಿನಲ್ಲಿ ಇಟ್ಟು ಐದು ಬಾಣಗಳಿಂದ ಮತ್ಸ್ಯಯಂತ್ರವನ್ನು ಹೊಡೆಯುವುದು ಎಂದರೆ ಪಂಚೇಂದ್ರಿಯ-ಗಳನ್ನು ಶ್ರೀಹರಿಯತ್ತ ಕೇಂದ್ರೀಕರಿಸಿ ಚಿಂತಿಸುವುದು ಎಂದರ್ಥ ('ಬ್ರಹ್ಮ ತಲ್ಲಕ್ಷ್ಯಮುಚ್ಯತೇ' - ಅಥರ್ವಣೋಪನಿಷತ್). ಹೊಡೆಯುವುದು ಎಂದರೆ ಚೆನ್ನಾಗಿ ಅರಿಯುವುದು ಎಂದರ್ಥ. ಮತ್ಸ್ಯಯಂತ್ರ ಕೆಳಗೆ ಬೀಳುವುದು ಎಂದರೆ ಶ್ರೀಹರಿಯ ವ್ಯಾಪ್ತರೂಪವನ್ನು ಮನಸ್ಸಿನಲ್ಲಿ ತುಂಬಿಕೊಂಡು ಬಿಂಬರೂಪದ ಅವನನ್ನು ಧ್ಯಾನಿಸುವುದು ಎಂದರ್ಥ. ಹಾಗೆ ಮಾಡಿದಾಗ ದ್ರೌಪದಿ ಮಾಲೆ ಹಾಕುವಳು ಎಂದರೆ ಅಪರೋಕ್ಷಜ್ಞಾನ ಸಿದ್ಧಿಸುವುದು ಎಂದರ್ಥ. ಈ ಕಾರ್ಯ ಶಿಶುಪಾಲ ಮೊದಲಾದ ನಾಲ್ವರಿಗೂ ಆಗಲಿಲ್ಲ. ಅವರು ಧನುಸ್ಸನ್ನು ಹೆದೆಯೇರಿಸುವುದರಲ್ಲೇ ಸೋತು ಹೋದವರು. ಎಂದರೆ ಮನೋನಿಗ್ರಹ ಸಾಧ್ಯವಾಗದೇ ವಿಫಲರಾದವರು. ಶಿಶುಪಾಲನಿಗೆ ಸಲ್ಲದ ಕಾಮ, ಶಲ್ಯನಿಗೆ ಸಲ್ಲದ ಬಲಪ್ರದರ್ಶನದ ಮೋಹ, ಜರಾಸಂಧನಿಗಂತೂ ಬಲುಬಗೆಯ ಮದ, ಕರ್ಣನಿಗೆ ದುರ್ಯೋಧನನ ವ್ಯಾಮೋಹ. ಆದ್ದರಿಂದ ಅವರಾರಿಗೂ ಧನುಸ್ಸನ್ನು ಪೂರ್ಣಮಾಡಲು ಸಾಧ್ಯವಾಗಲೇ ಇಲ್ಲ. ಬಳಿಕ ಬಂದಿದ್ದು ಭೀಮಾರ್ಜುನರು. ಭೀಮನಂತೂ ಭಾರತೀಪತಿಯೇ; ಅರ್ಜುನ ಮತ್ಸ್ಯಯಂತ್ರಭೇದನ ಮಾಡಿದ್ದು ಲೋಕಪ್ರಸಿದ್ಧ. ಅವನ ಯಶಸ್ಸಿಗೆ ಮೊದಲ ಕಾರಣ, ಅಣ್ಣನಾದ ವಾಯುದೇವರ ಅವತಾರನಾದ ಭೀಮನಿಂದ ಅನುಮತಿ ಪಡೆದದ್ದು ಇದು 'ಶ್ರೀಗುರುಭ್ಯೋನಮಃ' ಎನ್ನುವುದಕ್ಕೆ ಸಂಕೇತ. ಅನಂತರ ಭಗವಂತನಾದ ಕೃಷ್ಣನನ್ನು ನೋಡಿ ಭಕ್ತಿಯಿಂದ ಮನಸ್ಸಿನಲ್ಲೇ ವಂದಿಸಿದ್ದು ಇದು 'ಹರಿಃ ಓಂ' ಎನ್ನುವುದಕ್ಕೆ ಸಂಕೇತ. ಅಂತೂ ಹರಿವಾಯುಗಳ ಅನುಗ್ರಹ ಪಡೆದದ್ದು ಅವನ ಮೊದಲ ಅರ್ಹತೆ ಎಂದಾಯಿತು. ಬಳಿಕ ಅವನು ಧನುಸ್ಸನ್ನು ವಂದಿಸಿ ಅದನ್ನು ಕೈಗೆತ್ತಿಕೊಂಡ. ಇಲ್ಲಿ ಧನುಸ್ಸನ್ನು ವಂದಿಸುವುದು ಎಂದರೆ ಧನುಸ್ಸನ್ನು ನೀಡಿದ ಶಿವನನ್ನು ವಂದಿಸುವುದು. ಧನುಸ್ಸನ್ನು ನೀಡಿದ ಶಿವ ಮನಸ್ಸಿನ ಅಭಿಮಾನಿದೇವತೆಯೂ ಹೌದು. ಮನೋನಿಗ್ರಹ ಸಾಧ್ಯವಾಗುವುದು ಮನೋಭಿಮಾನಿ ದೇವತೆಯಾದ ಶಿವನಿಗೆ ಮಣಿದಾಗಲೇ ಎಂದರ್ಥ. ಬಳಿಕ ಅರ್ಜುನ ಪ್ರತಿಬಿಂಬವನ್ನು ನೋಡುತ್ತಾ ಧನುಸ್ಸಿನಲ್ಲಿ ಐದು ಬಾಣಗಳನ್ನು ಹೂಡಿದ್ದು ಶಾಸ್ತ್ರಾಧ್ಯಯನವನ್ನು ಮಾಡುತ್ತಾ ಪಂಚೇದ್ರಿಯಗಳನ್ನು ಭಗವಂತನ ಕಡೆಗೆ ಕೇಂದ್ರೀಕರಿಸಿದ್ದಕ್ಕೆ ಸಂಕೇತ. ಐದೂ ಬಾಣಗಳು ಒಟ್ಟಾಗಿ ಮತ್ಸ್ಯಯಂತ್ರಕ್ಕೆ ತಾಗಿದ್ದು ಧ್ಯಾನದ ಸಿದ್ಧಿಯ ಸಂಕೇತ. ಮತ್ಸ್ಯಯಂತ್ರ ಭೇದನವಾಗಿದ್ದು ಬಿಂಬರೂಪ ದರ್ಶನಕ್ಕೆ ಸೂಚಕ. ದ್ರೌಪದಿ ಮಾಲೆ ಹಾಕಿದ್ದು ಅರ್ಜುನನಿಗೆ ವಿದ್ಯಾಭಿಮಾನಿನಿಯಾದ ಸರಸ್ವತಿ ಒಲಿದು ಅಪರೋಕ್ಷಜ್ಞಾನವಾಗಿದ್ದಕ್ಕೆ ಸಂಕೇತ. ಹೀಗೆ ಇಡೀ ಪ್ರಸಂಗ ಅಪರೋಕ್ಷಜ್ಞಾನಸಾಧನೆಯ ಪರಿಯನ್ನು ಬಣ್ಣಿಸುವ ಅಧ್ಯಾತ್ಮದ ಸಾರಸರ್ವಸ್ವವಾಗಿದೆ. ಹೀಗೆ ಮೇಲ್ನೋಟಕ್ಕೆ ಕಾಣುವ ರೋಚಕ ಕಥೆ ಒಳನೋಟಕ್ಕೆ ಮೋಚಕವಾದ ತತ್ತ್ವಶಾಸ್ತ್ರವಾಗುವುದು ಶ್ರೀವ್ಯಾಸರ

ಮಹಾಭಾರತವನ್ನು ರಚಿಸಿದ ಶ್ರೀವೇದವ್ಯಾಸದೇವರೂ, ಮಹಾಭಾರತತಾತ್ಪರ್ಯನಿರ್ಣಯ-ವನ್ನು ರಚಿಸಿದ ಶ್ರೀಮಧ್ವಾಚಾರ್ಯರೂ ಈ ಇಬ್ಬರೂ ಮಹಾಭಾರತದ ಮುಖ್ಯಪಾತ್ರಧಾರಿ-ಗಳು. ಶ್ರೀಮಧ್ವಾಚಾರ್ಯರು ಭೀಮಸೇನನ ರೂಪದಿಂದ ಪಾತ್ರಧಾರಿಗಳಾಗಿದ್ದರು. ಒಬ್ಬರು ಸರ್ವೋತ್ತಮರಾದರೆ ಮತ್ತೊಬ್ಬರು ಜೀವೋತ್ತಮರು. ಅವರು ವೇದವ್ಯಾಸರಾದರೆ, ಇವರು ಅಭಿನವವೇದವ್ಯಾಸರು.

## ವಿಮರ್ಶೆಯ ಸೂತ್ರಗಳು

ಮಹಾಭಾರತದ ಕಥೆ, ಪಾತ್ರಗಳು, ತತ್ತ್ವ ಮೊದಲಾದವುಗಳನ್ನು ವಿಮರ್ಶಿಸಲು ಸಹಾಯಕ-ವಾಗುವ ಸೂತ್ರಗಳನ್ನು ಮಹಾಭಾರತತಾತ್ಪರ್ಯನಿರ್ಣಯವು ಒದಗಿಸಿದೆ. ಬ್ರಾಹ್ಮಣಪಾತ್ರಗಳ ಹಿರಿಮೆಯನ್ನು ಅವರ ಜ್ಞಾನದಿಂದಲೂ, ಕ್ಷತ್ರಿಯರ ಹಿರಿಮೆಯನ್ನು ಅವರ [೧]ಬಾಹುಬಲದಿಂದಲೂ,

---

ಅದ್ಭುತವಾದ ರಚನಾಕೌಶಲಕ್ಕೆ ಹಿಡಿದ ಕನ್ನಡಿ. ಇಲ್ಲಿ ದ್ರೌಪದಿ ಮಾಲೆ ಹಾಕಿದ್ದು ಸರಸ್ವತಿ ಒಲಿಯುವುದಕ್ಕೆ ಸಂಕೇತ. ಅರ್ಜುನ ಇಂದ್ರಾವತಾರ, ಇಂದ್ರ ವಾಯು-ಭಾರತಿಯರ ನಾಲ್ವರು ಪುತ್ರರಲ್ಲಿ ಒಬ್ಬ. ಎಂದರೆ ಭೀಮ ಭಾರತೀಪತಿಯಾದರೆ, ಅರ್ಜುನ ಭಾರತೀಪುತ್ರ. ದ್ರೌಪದಿ ಅವನ ಕೊರಳಿಗೆ ಮಾಲೆ ಹಾಕಿದ್ದು ತಾಯಿ ಮಗನ ಕೊರಳಿಗೆ ಹಾಕಿದ ಅನುಗ್ರಹಮಾಲೆಯ ಸಂಕೇತ.

೧. ಯೋ ಯ ಏವ ಬಲಜ್ಯೇಷ್ಠಃ ಕ್ಷತ್ರಿಯೇಷು ಸ ಉತ್ತಮಃ ।
ಅಂಗಂ ಚೇದ್ವಿಷ್ಣುಕಾರ್ಯೇಷು ತದ್ಭಕ್ತ್ಯೈವ ನ ಚಾನ್ಯಥಾ ॥
ಬಲಂ ನೈಸರ್ಗಿಕಂ ತಚ್ಚೇದ್ವರಾಸ್ತ್ರಾದೇಸ್ತದನ್ಯಥಾ ।
ಅನ್ಯಾವೇಶನಿಮಿತ್ತಂ ಚೇದ್ಬಲಮನ್ಯಾತ್ಮಕಂ ಹಿ ತತ್ ॥
ದೇವೇಷು ಬಲಿನಾಮೇವ ಭಕ್ತಿಜ್ಞಾನೇ ನ ಚಾನ್ಯಥಾ ।
ಸ ಏವ ಚ ಪ್ರಿಯೋ ವಿಷ್ಣೋರ್ನಾನ್ಯಥಾ ತು ಕಥಂಚನ ॥
ತಸ್ಮಾದ್ಯೋ ಯೋ ಬಲಜ್ಯೇಷ್ಠಃ ಸ ಗುಣಜ್ಯೇಷ್ಠ ಏವ ಚ ।
ಬಲಂ ಹಿ ಕ್ಷತ್ರಿಯೇ ವ್ಯಕ್ತಂ ಜ್ಞಾಯತೇ ಸ್ಥೂಲದೃಷ್ಟಿಭಿಃ ॥
ಜ್ಞಾನಾದಯೋ ಗುಣಾ ಯಸ್ಮಾತ್ ಜ್ಞಾಯಂತೇ ಸೂಕ್ಷ್ಮದೃಷ್ಟಿಭಿಃ ।
ತಸ್ಮಾದ್ಯತ್ರ ಬಲಂ ತತ್ರ ವಿಜ್ಞಾತವ್ಯಾ ಗುಣಾಃ ಪರೇ ॥
ದೇವೇಷ್ವೇವ ನ ಚಾನ್ಯೇಷು ವಾಸುದೇವಪ್ರತೀಪತಃ ।
ಕ್ಷತ್ರಾದನ್ಯೇಷ್ವಪಿ ಬಲಂ ಪ್ರಮಾಣಂ ಯತ್ರ ಕೇಶವಃ ।
ಪ್ರವೃತ್ತೋ ದುಷ್ಟನಿಧನೇ ಜ್ಞಾನಕಾರ್ಯೇ ತದೈವ ಚ ॥
ಅನ್ಯತ್ರ ಬ್ರಾಹ್ಮಣಾನಾಂ ತು ಪ್ರಮಾಣಂ ಜ್ಞಾನಮೇವ ಹಿ ।
ಕ್ಷತ್ರಿಯಾಣಾಂ ಬಲಂ ಚೈವ ಸರ್ವೇಷಾಂ ವಿಷ್ಣುಕಾರ್ಯತಾ ॥ -ಮ.ಭಾ.ತಾ.ನಿ. (೨/೧೭-೨೩)
ಯತ್ರ ರೂಪಂ ತತ್ರ ಗುಣಾಃ ಭಕ್ತ್ಯಾದ್ಯಾಃ ಸ್ತ್ರೀಷು ನಿತ್ಯಶಃ ।
ರೂಪಂ ಹಿ ಸ್ಥೂಲದೃಷ್ಟೀನಾಂ ದೃಶ್ಯಂ ವ್ಯಕ್ತಂ ತತೋ ಹಿ ತತ್ ॥
ಪ್ರಾಯೋ ವೇತ್ತುಂ ನ ಶಕ್ಯಂತೇ ಭಕ್ತ್ಯಾದ್ಯಾಃ ಸ್ತ್ರೀಷು ಯತ್ ತತಃ ।
ಯಾಸಾಂ ರೂಪಂ ಗುಣಾಸ್ತಾಸಾಂ ಭಕ್ತ್ಯಾದ್ಯಾ ಇತಿ ನಿಶ್ಚಯಃ ॥
ತಚ್ಚ ನೈಸರ್ಗಿಕಂ ರೂಪಂ ದ್ವಾತ್ರಿಂಶಲ್ಲಕ್ಷಣೈರ್ಯುತಮ್ ।
ನಾಲಕ್ಷಣಂ ವಪುರ್ಮಾತ್ರಂ ಗುಣಹೇತುಃ ಕಥಂಚನ ॥
ಆಸುರೀಣಾಂ ವರಾದೇಸ್ತು ವಪುರ್ಮಾತ್ರಂ ಭವಿಷ್ಯತಿ ।

ಸ್ತ್ರೀಯರ ತಾರತಮ್ಯವನ್ನು ಅವರ ರೂಪಸಂಪತ್ತಿನಿಂದಲೂ ನಿರ್ಣಯಿಸಬೇಕು ಎಂಬ ಅವರ ವಿವೇಚನೆ ತೀರ ವಿನೂತನವಾದುದು. ಇಂತಹ ವಿವೇಚನೆಗೆ ನೆರವಾಗುವ ಜ್ಞಾನ, ಬಲ ರೂಪಗಳು ಸ್ವಾಭಾವಿಕವಾಗಿರಬೇಕೇ ಹೊರತು, ವರ, ಅನ್ಯಾವೇಶ, ಅಸ್ತ್ರಗಳಿಂದಾಗಿ ಬಂದವುಗಳಾಗಿರಬಾರದು ಎಂಬ ಎಚ್ಚರವನ್ನೂ ಅವರು ನೀಡಿರುವರು[೧].

ಬಲಾಧಿಕ್ಯವು ಉತ್ತಮತ್ವಕ್ಕೆ ದ್ಯೋತಕ ಎಂಬುದು ನಿಜ; ಆದರೆ ಅಂತಹ ಬಲವು ಸಹಜ ಬಲವಾಗಿರಬೇಕೇ ಹೊರತು, ವರಬಲವಾಗಲೀ, ಅಸ್ತ್ರಬಲವಾಗಲೀ ಆಗಿರಕೂಡದು; ಬ್ರಹ್ಮ ರುದ್ರ ಮೊದಲಾದವರ ಬಲದಿಂದಾಗಿ ಬಲಿಷ್ಠರೆನ್ನಿಸಿದ್ದ ಕಂಸ, ಜರಾಸಂಧ, ಕೀಚಕ ಮೊದಲಾದವರು ಅಧಮರೇ ಹೊರತು ಉತ್ತಮರಲ್ಲ; ನರಾವೇಶದಿಂದ ಕೂಡಿದ ಅರ್ಜುನ ಮೊದಲಾದವರ ಸಕಲಹಿರಿಮೆಯೂ ಸಹ ಅವರ ಸಹಜಹಿರಿಮೆಯಿಂದಲ್ಲ; ಆದ್ದರಿಂದ ಅವನು ರುದ್ರಾವತಾರರಾದ ಅಶ್ವತ್ಥಾಮರನ್ನು ಯುದ್ಧದಲ್ಲಿ ಗೆದ್ದರೂ, ಅವನು ಅವರಿಗಿಂತ ಉತ್ತಮನಲ್ಲ; ಅವರನೇ ಆಗಿರುವನು. ಆದ್ದರಿಂದ ಅಸ್ತ್ರಾದಿಬಲಗಳನ್ನು ಹೊಂದದೆ ಸಹಜವಾಗಿಯೇ ಬಲಿಷ್ಠನಾಗಿದ್ದ ಭೀಮಸೇನನೇ ಸರ್ವಜೀವೋತ್ತಮ ಎಂದು ಭಾವ. ಹನುಮಂತ, ಮಧ್ವ ಎಂಬ ಅವರ ಇತರ ಅವತಾರಗಳಲ್ಲೂ ಅವರದು ಇದೇ ರೀತಿಯ ಸಹಜಬಲವೇ ಆಗಿದೆ ಎಂಬದೂ ಗಮನಾರ್ಹ.

ಆಚಾರ್ಯರ ಇತರ ಕೃತಿಗಳಂತೆ ಈ ಕೃತಿಯೂ ಪ್ರಮಾಣೋದಾಹರಣೆಗಳಿಂದ ತುಂಬಿದೆ. ತಾವು ಹೇಳುವ ಪ್ರತಿ ವಿಚಾರವನ್ನು ಸಹ ಸೂಕ್ತಪ್ರಮಾಣದೊಂದಿಗೆ ದೃಢಪಡಿಸುವ ಅವರ ಅಪೂರ್ವಶೈಲಿ ವಿಮರ್ಶನಪ್ರಪಂಚದ ಮತ್ತೊಂದು ಅದ್ಭುತ. ತಾತ್ಪರ್ಯನಿರ್ಣಯದ ಮೊದಲೆರಡು ಅಧ್ಯಾಯಗಳ ಬಹುಭಾಗ ಮೂಲತಃ ಇಂತಹ ಪ್ರಮಾಣಸಂಗ್ರಹವೇ ಆಗಿದೆ. ಕಥಾನಿರೂಪಣೆಯ ಪ್ರಸಂಗದಲ್ಲೂ ಅವರು ಮೂಲದಲ್ಲಿ ಬಳಕೆಯಾದ ಪದಗಳನ್ನೇ ಪ್ರಧಾನವಾಗಿ ಅಳವಡಿಸಿಕೊಂಡಿರುವುದು ಕೃತಿಯನ್ನು ಪಾರದರ್ಶಕವನ್ನಾಗಿಸಿದ್ದು, ಜಿಜ್ಞಾಸುಗಳಿಗೆ ಅತ್ಯಂತ ಉಪಕಾರಕವೆನ್ನಿಸಿದೆ. ಇಂತಹ ಅದ್ಭುತಕೃತಿಯನ್ನು ನೀಡಿರುವುದಲ್ಲದೆ, ಇಲ್ಲಿಯ ಮಾರ್ಗದರ್ಶನದ ಹಿನ್ನೆಲೆಯಲ್ಲಿ ಸಂಶೋಧಕರು ಅವಶ್ಯ ಪ್ರವರ್ತಿಸಲೇಬೇಕು; ಇಲ್ಲಿ ನೀಡಿರುವುದು [೨]ದಿಗ್ದರ್ಶನ ಮಾತ್ರ ಎಂಬ ಸಂದೇಶವನ್ನು ನೀಡಿ ಜಿಜ್ಞಾಸುಗಳ ಸಾಧನಕ್ರಮವನ್ನು ಸಹ ಸೂಚಿಸಿ, ನಿಜವಾದ ಅರ್ಥದಲ್ಲಿ ಶ್ರೀಮದಾಚಾರ್ಯರು ಆದರ್ಶ ಗುರುಗಳಾಗಿರುವರು.

## ಮಹಾಭಾರತದಲ್ಲಿ ೧೮ರ ಮಹತ್ತ್ವ

ಮಹಾಭಾರತದಲ್ಲಿನ ಒಟ್ಟು ಪರ್ವಗಳ ಸಂಖ್ಯೆ ೧೮; ಅದರಲ್ಲಿನ ಭಗವದ್ಗೀತೆಯಲ್ಲಿನ ಒಟ್ಟು ಅಧ್ಯಾಯಗಳ ಸಂಖ್ಯೆ ೧೮; ಮಹಾಭಾರತದ ಯುದ್ಧ ನಡೆದದ್ದು ೧೮ ದಿನಗಳು; ಕುರು–

---

ನ ಲಕ್ಷಣಾನ್ಯತಸ್ತಾಸಾಂ ನೈವ ಭಕ್ತಿಃ ಕಥಂಚನ ॥ –ಮ.ಭಾ.ತಾ.ನಿ.(೨/೩೬–೩೯)

೧. ಬಲಂ ನೈಸರ್ಗಿಕಂ ತಚ್ಚೇದ್ವರಾಸ್ತ್ರಾದೇಸ್ತದನ್ಯಥಾ ।
ಅನ್ಯಾವೇಶನಿಮಿತ್ತಂ ಚೇದ್ಬಲಮನ್ಯಾತ್ಮಕಂ ಹಿ ತತ್ ॥ – ಮ.ಭಾ.ತಾ.ನಿ. (೨/೧೮)

೨. ಇತ್ಯಾದ್ಯನಂತವಾಕ್ಯಾನಿ ಸಂತ್ಯೇವಾರ್ಥೇ ವಿವಕ್ಷಿತೇ ।
ಕಾನಿಚಿದ್ದರ್ಶಿತಾನ್ಯತ್ರ ದಿಙ್ಮಾತ್ರಪ್ರತಿಪತ್ತಯೇ ॥ –ಮ.ಭಾ.ತಾ.ನಿ.(೨/೧೭೯)

ಪಾಂಡವರ ಒಟ್ಟು ಸೇನೆ ೧೮ ಅಕ್ಷೋಹಿಣೀ; ಮಹಾಪುರಾಣಗಳ ಸಂಖ್ಯೆ ೧೮; ಉಪಪುರಾಣಗಳ ಸಂಖ್ಯೆ ೧೮; ಪ್ರಧಾನಸ್ಮೃತಿಗಳ ಸಂಖ್ಯೆ ೧೮; ಶ್ರೀಕೃಷ್ಣನಿಂದ ಜರಾಸಂಧ ಪರಾಭವಗೊಂಡಿದ್ದು ೧೮ ಸಲ; ಭಾಗವತಪುರಾಣದಲ್ಲಿನ ಒಟ್ಟು ಗ್ರಂಥಗಳ ಸಂಖ್ಯೆ ೧೮ ಸಾವಿರ; ಪಾಂಡವರು ಧೃತರಾಷ್ಟ್ರ ನಿರ್ಯಾಣದವರೆಗೆ ರಾಜ್ಯ ಪಾಲಿಸಿದ್ದು ೧೮ ವರ್ಷಗಳು; ಅನಂತರದ ರಾಜ್ಯಪಾಲನೆ ಪುನಃ ೧೮ ವರ್ಷ; [೧]ಅಕ್ಷೋಹಿಣೀ ಸಂಖ್ಯೆಯ ಚತುರಂಗ ಬಲದಲ್ಲಿನ ಆನೆ, ಕುದುರೆ, ರಥ ಹಾಗೂ ಪದಾತಿಗಳ ಸಂಖ್ಯೆಗಳ ಮೊತ್ತವೂ ಸಹ ೧೮. ಆದರಂತೆ [೨]ಚಮೂ, [೩]ಅನೀಕಿನೀ ಎಂಬ ಅಕ್ಷೋಹಿಣಿಯ ವಿಭಾಗಗಳಲ್ಲಿನ ರಥ ಮೊದಲಾದವುಗಳ ಸಂಖ್ಯೆಯು ಸಹ ೧೮. ಇದೇ ಮೊದಲಾಗಿ '೧೮' ಎಂಬುದು ಮಹಾಭಾರತ ಹಾಗೂ ಇತರ ಧಾರ್ಮಿಕ ಸಾಹಿತ್ಯದಲ್ಲಿ ತುಂಬಾ ಪ್ರಾಶಸ್ತ್ಯ ಪಡೆದ ಸಂಖ್ಯೆಯಾಗಿದೆ. ಮಹಾಭಾರತದ ಮತ್ತೊಂದು ಹೆಸರಾದ 'ಜಯ' ಎಂಬದನ್ನು ಸಂಖ್ಯಾರೂಪದಲ್ಲಿ ಬರೆದಾಗ '೧೮' ಎಂದಾಗುತ್ತದೆ. 'ಮನ್ವಾದಿ' ಅರ್ಥವನ್ನು ತಿಳಿದಾಗ ಈ ಹದಿನೆಂಟರ ರಹಸ್ಯ ಬಿಚ್ಚಿಕೊಳ್ಳುತ್ತದೆ. ಧರ್ಮಾದಿ ಹದಿನೆಂಟು ಸಾಧನಗಳಿಂದ ೧೮ನೆಯವನಾದ ಪರಬ್ರಹ್ಮನಾದ ಶ್ರೀಕೃಷ್ಣನ ಪರಮಾನುಗ್ರಹವು ಲಭಿಸಿ ಸಕಲರೂ ಬಯಸುವ ಮೋಕ್ಷ ಲಭಿಸುತ್ತದೆ ಎಂಬ ಸೂಚನೆ ಇದರಲ್ಲಿದೆ. ಹೀಗೆ 'ಮನ್ವಾದಿ' ಅರ್ಥದ ವಿವರಣೆಯೊಂದಿಗೆ ಇದರ ರಹಸ್ಯವನ್ನು ಬಿಡಿಸುವ ಹಾದಿ ತೋರಿಸಿದ ಹಿರಿಮೆ ಶ್ರೀಮಧ್ವಾಚಾರ್ಯರದೇ ಆಗಿದೆ ಎಂಬುದು ವಿಶೇಷ.

## ಆರು ತಲೆಮಾರುಗಳ ವ್ಯಕ್ತಿಗಳು ಪಾಲ್ಗೊಂಡಿದ್ದ ಮಹಾಯುದ್ಧ

ಮಹಾಭಾರತ ಯುದ್ಧದಲ್ಲಿ ಕನಿಷ್ಠ ಆರು ತಲೆಮಾರುಗಳಿಗೆ ಸೇರಿದ್ದ ವ್ಯಕ್ತಿಗಳು ಪಾಲ್ಗೊಂಡಿದ್ದರು. ಭೀಷ್ಮರಿಗೂ ಪಿತೃಸದೃಶನಾಗಿದ್ದ ಬಾಹ್ಲೀಕರಾಜ ಉಭಯಸೈನ್ಯಗಳಲ್ಲಿದ್ದ ಅತ್ಯಂತ ಹಿರಿಯ. ಎಂಟು-ನೂರು ವಯಸ್ಸಿನ ಭೀಷ್ಮ ಅನಂತರದ ತಲೆಮಾರಿನವರು. ದ್ರುಪದ, ವಿರಾಟ, ಸೋಮದತ್ತ, ದ್ರೋಣ, ಕೃಪ ಇವರೆಲ್ಲ ಭೀಷ್ಮರ ಸಮವಯಸ್ಕರು. ಭೂರಿ, ಭೂರಿಶ್ರವಸ್ಸು, ಶಲ, ಶಲ್ಯ, ಕಾಶೀರಾಜ ಮೊದಲಾದವರು ಮೂರನೆಯ ತಲೆಮಾರಿನವರು. ಪಾಂಡವ-ಕೌರವರು ನಾಲ್ಕನೆಯ ತಲೆ-ಮಾರಿನವರು ಮತ್ತು ಹೆಚ್ಚಿನವರು ಇದಕ್ಕೆ ಸೇರಿದವರು. ಪಾಂಡವ-ಕೌರವರ ಪುತ್ರರು ಎಂದರೆ ಘಟೋತ್ಕಚ, ಅಭಿಮನ್ಯು, ಲಕ್ಷಣ ಮೊದಲಾದವರು ಐದನೆಯ ತಲೆಮಾರಿನವರು. ಹಾಗೂ ಘಟೋತ್ಕಚನ ಮಗ ಅಂಜನವರ್ಮ ಮತ್ತು ಇರಬಹುದಾದ ಅವನ ಓರಗೆಯವರು ಆರನೆಯ ಹಾಗೂ ಕೊನೆಯ ತಲೆಮಾರಿನವರು. ದ್ರೌಪದೀಪುತ್ರರು, ಅಭಿಮನ್ಯು ಇವರೆಲ್ಲ ಮೂವತ್ತರ ಆಸುಪಾಸಿನ ತರುಣರು.

---

೧. ರಥಗಳು - ೨೧,೮೭೦ = ೧೮; ಆನೆಗಳು - ೨೧,೮೭೦=೧೮; ಕುದುರೆಗಳು - ೬೫,೬೧೦=೧೮; ಪದಾತಿಗಳು - ೧,೦೯,೩೫೦ = ೧೮.

೨. ರಥಗಳು - ೭೨೯ = ೧೮; ಆನೆಗಳು - ೭೨೯=೧೮; ಕುದುರೆಗಳು - ೨೧೮೭=೧೮; ಪದಾತಿಗಳು - ೩.೬೪೫ = ೧೮.

೩. ರಥಗಳು - ೨೧೮೭ = ೧೮; ಆನೆಗಳು - ೨೧೮೭=೧೮; ಕುದುರೆಗಳು - ೬೫೬೧=೧೮; ಪದಾತಿಗಳು - ೧,೦೯,೩೫೦ = ೧೮.

## ಮಹಾಭಾರತಯುದ್ಧದ ಸಮಯದಲ್ಲಿ ಪಾಂಡವ-ಕೌರವರ ವಯಸ್ಸು

ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ್ದು ಒಟ್ಟು ೧೦೬ ವರ್ಷಗಳು ಮತ್ತು ೬ ತಿಂಗಳುಗಳ ಅನಂತರ. ಪಾಂಡವರು ಸ್ವರ್ಗಾರೋಹಣ ಮಾಡಿದ್ದೂ ಆಗಲೇ. ಅವರು ಕುರುಕ್ಷೇತ್ರಯುದ್ಧದ ಅನಂತರ ರಾಜ್ಯಭಾರ ನಡೆಸಿದ್ದು ಒಟ್ಟು ಮೂವತ್ತಾರು ವರ್ಷಗಳು; ಅಂದರೆ ಕುರುಕ್ಷೇತ್ರ ಯುದ್ಧ-ಕಾಲಕ್ಕೆ ಶ್ರೀಕೃಷ್ಣನ ವಯಸ್ಸು ೭೦ ವರ್ಷ ೬ ತಿಂಗಳು; ಭೀಮಸೇನ ಅವನಿಗಿಂತ ಐದುತಿಂಗಳು ಹಿರಿಯ, ಅರ್ಜುನ ೭ ತಿಂಗಳು ಕಿರಿಯ. ಎಂದರೆ ಅವರ ವಯಸ್ಸುಗಳು ಕ್ರಮವಾಗಿ ೭೦ ವರ್ಷ ೧೧ ತಿಂಗಳು ಮತ್ತು ೬೯ ವರ್ಷ ೧೧ ತಿಂಗಳುಗಳು. ಯುಧಿಷ್ಠಿರ ಭೀಮನಿಗಿಂತ ೧ ವರ್ಷ ಹಿರಿಯ. ಅವನ ವಯಸ್ಸು ೭೧ವರ್ಷ ೧೧ ತಿಂಗಳು. ನಕುಲ ಸಹದೇವರ ವಯಸ್ಸು ೬೮ವರ್ಷ ೧೧ ತಿಂಗಳುಗಳು. ಕೌರವರಲ್ಲಿ ದುರ್ಯೋಧನ ಭೀಮನಿಗಿಂತ ಒಂದು ದಿನ ಮಾತ್ರ ಹಿರಿಯ. ಅವನ ನೂರು ಜನ ತಮ್ಮಂದಿರ ಅಂತರ ಕ್ರಮವಾಗಿ ಒಂದು ದಿನ ಮಾತ್ರ.

## ಮಹಾಭಾರತದ ಕೆಲವು ಸಂದೇಶಗಳು

ಕುರುಪಾಂಡವರಿಬ್ಬರೂ ವೇದವ್ಯಾಸರ ಸಂತತಿ ಎಂಬ ಮಾತಿನಲ್ಲಿ ಸುರಾಸುರರಿಗೆಲ್ಲ ಭಗವಂತನೇ ಸೃಷ್ಟಿಕರ್ತ ಎಂಬ ತತ್ತ್ವವೂ ಅಡಗಿದೆ. ಆದರೂ ವ್ಯಾಸಾನುಗ್ರಹ ಪಾಂಡವರಿಗೆ ಮಾತ್ರ, ಕೌರವರಿಗಲ್ಲ ಎಂಬಲ್ಲಿ ದೈವಾನುಗ್ರಹ ಸಾತ್ತ್ವಿಕರಿಗೇ ಹೊರತು, ತಾಮಸರಿಗಲ್ಲ ಎಂಬ ಭಾವ ಸೂಚಿತ. ಶ್ರೀವೇದವ್ಯಾಸರು ಪಾಂಡವರಿಗೆ ಪಿತಾಮಹ ಮಾತ್ರವಲ್ಲದೆ, ವಿದ್ಯೋಪದೇಶಕ ಗುರುಗಳೂ ಆದರು. ಕೌರವರಿಗೆ ಗುರುಗಳಾಗಲಿಲ್ಲ. ಎಂಬುದು ಭಗವಂತ ಯೋಗ್ಯರಿಗಷ್ಟೇ ಜ್ಞಾನ ನೀಡುವನು ಎಂಬುದಕ್ಕೆ ಸೂಚಕ. ದ್ರೋಣಾಚಾರ್ಯರು ಕುರುಪಾಂಡವರಿಬ್ಬರಿಗೂ ಅಸ್ತ್ರವಿದ್ಯಾಗುರುಗಳು. ಎಂದರೆ ಭಗವಂತ ಎಲ್ಲ ದೃಷ್ಟಿಯಿಂದಲೂ ಕೌರವರಿಗೆ ಪಾಂಡವರಂತೆ ಸಮಾನ ಅವಕಾಶವನ್ನೇ ನೀಡಿದ. ಆದರೆ ಅದರ ಸಲ್ಲಾಭ ದೊರೆತದ್ದು ಪಾಂಡವರಿಗೇ ಹೊರತು ಕೌರವರಿಗಲ್ಲ.

ಕುರುಪಾಂಡವರಿಬ್ಬರಿಗೂ ವೇದವ್ಯಾಸರು, ಭೀಷ್ಮರು ಪಿತಾಮಹರು. ಇಬ್ಬರದೂ ಚಂದ್ರವಂಶ, ಕುರುವಂಶ. ಗುರುಗಳು ದ್ರೋಣಾಚಾರ್ಯರು. ಇಬ್ಬರಿಗೂ ದೊರೆತದ್ದು ಪರಶುರಾಮರ ದಿವ್ಯಾಸ್ತ್ರಗಳೇ. ಕಾದಿದ್ದು ಕುರುಕ್ಷೇತ್ರದಲ್ಲಿಯೇ. ಆದರೆ ಪಾಂಡವರದು ದಾಖಲೆಯ ವಿಜಯ-ವಾದರೆ, ಕೌರವರದು ದಾಖಲೆಯ ಪರಾಜಯವೇ ಆಯಿತು. ಇದು ಅವರ ಸ್ವರೂಪಯೋಗ್ಯತೆ-ಯಲ್ಲಿನ ಅಂತರವನ್ನು ತೋರಿಸುವ ಅಪೂರ್ವನಿದರ್ಶನ. ಮಹಾಭಾರತದ ಮೊದಲ ಐದು ಪರ್ವಗಳು ಪಾಂಡವರ ೭೨ವರ್ಷಗಳಷ್ಟು ದೀರ್ಘಜೀವನದ ಇತಿಹಾಸವನ್ನು ನಿರೂಪಿಸುತ್ತಿದ್ದರೆ, ಕೊನೆಯ ಎಂಟು ಪರ್ವಗಳು ಅವರ ಅನಂತರದ ೩೬ ವರ್ಷಗಳ ಜೀವನವನ್ನು ನಿರೂಪಿಸುತ್ತವೆ. ಆದರೆ ಕೇವಲ ೧೮ ದಿನಗಳಲ್ಲಿ ನಡೆದ ಮಹಾಭಾರತಯುದ್ಧದ ನಿರೂಪಣೆಗಾಗಿ ಐದುಪರ್ವಗಳನ್ನೇ ಮೀಸಲಾಗಿಟ್ಟಿದ್ದಾರೆ ಶ್ರೀವೇದವ್ಯಾಸರು. ಇದರಿಂದ ಮಾನವನ ಜೀವನದಲ್ಲಿ ಸಂಘರ್ಷವೇ ಹೆಚ್ಚು ಎಂದು ಸೂಚಿಸಲ್ಪಟ್ಟಂತಾಗಿದೆ.

## ಮಹಾಭಾರತದ ವ್ಯಾಖ್ಯಾನಗಳು

ಮಹಾಭಾರತದ ಕಥಾಸಂಗ್ರಹ ಹಾಗೂ ವಿಮರ್ಶೆ ಮೊದಲಾದ ಇತರ ಕಾರಣಗಳಿಂದ ಮಹತ್ತ್ವಪೂರ್ಣವೆನ್ನಿಸುವ ಮಹಾಭಾರತತಾತ್ಪರ್ಯನಿರ್ಣಯವು ಮಹಾಭಾರತದ ಒಂದು

ಅಪೂರ್ವ ವ್ಯಾಖ್ಯಾನವಾಗಿಯೂ ಸಹ ಗಮನಾರ್ಹವೆನ್ನಿಸುವುದು. ಮಹಾಭಾರತದ ಮೇಲೆ ಈಗ ತಿಳಿದುಬಂದಿರುವಂತೆ ೨೨ ವ್ಯಾಖ್ಯಾನಗಳು ಉಲ್ಲೇಖಿಸಲ್ಪಟ್ಟಿವೆ. ದೇವಬೋಧ-ವಿಮಲಬೋಧ (ವಿಮಲಶ್ಲೋಕೀ,ಕ್ರಿ.ಶ. ೧೧೫೦)-ಸರ್ವಜ್ಞನಾರಾಯಣ (ಸುಮಾರು ೧೧೦೦-೧೩೦೦) - [೧]ಅರ್ಜುನಮಿಶ್ರ (೧೪೦೦-೧೫೦೦)ಹಾಗೂ ನೀಲಕಂಠ (೧೬೦೦-೧೭೦೦), ಶ್ರೀನಂದನ, ಚತುರ್ಭುಜ, ನಂದಿಕೇಶ್ವರ, ನಂದನಾಚಾರ್ಯ, ಪರಮಾನಂದಭಟ್ಟಾಚಾರ್ಯ, ರತ್ನಗರ್ಭ, ರಾಮಕೃಷ್ಣ ಹಾಗೂ ಶ್ರೀನಿವಾಸಾಚಾರ್ಯ - ಇವು ಪ್ರಸಿದ್ಧವಿರುವ ವ್ಯಾಖ್ಯಾನಗಳು. ಆನಂದ-ಪೂರ್ಣ (ವಿದ್ಯಾಸಾಗರ, ಸುಮಾರು ೧೨೦೦-೧೩೫೦) ಎಂಬುದು ಮತ್ತೊಂದು. ವಿದ್ಯಾಸಾಗರನ ವ್ಯಾಖ್ಯಾನದಲ್ಲಿ ಹನ್ನೆರಡು ಪ್ರಾಚೀನವ್ಯಾಖ್ಯಾನಗಳು ಉಲ್ಲೇಖಿಸಲ್ಪಟ್ಟಿವೆ. ಜಗದ್ಧರ, ಜನಾರ್ದನ ಮುನಿ, ವಿದ್ಯಾನಿಧಿಭಟ್ಟ ಹಾಗೂ ಸೃಷ್ಟಿಧರಭಟ್ಟ ಎಂಬವು ಅವುಗಳಲ್ಲಿ ಕೆಲವು. ಆದರೆ ಮಹಾಭಾರತದ ತಾತ್ತ್ವಿಕವಿವೇಚನೆಗೆ ಮುಖ್ಯವಾಗಿ ನೆರವಾಗುವ ವಿಶಿಷ್ಟಕೃತಿ ಶ್ರೀಮನ್ಮಧ್ವಾ-ಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ[೨] ಮಾತ್ರ[೩].

ಸಮಗ್ರಮಹಾಭಾರತದ ಅಧಿಕೃತ ಸಂಗ್ರಹ, ಸೂಕ್ತಪ್ರಸಂಗಗಳ ವಿಶ್ಲೇಷಣೆ, ರಾಮಾಯಣ, ಮಹಾಭಾರತಗಳ ಸಂಬಂಧದ ವಿವೇಚನೆ , ಮಹಾಭಾರತದ ಆಧ್ಯಾತ್ಮಿಕಮೌಲ್ಯದ ಚಿಂತನೆ, ಹರಿ-ವಂಶ, ಶ್ರೀಮದ್ಭಾಗವತ, ವಿಷ್ಣುಪುರಾಣ ಮೊದಲಾದ ಇತರ ಇತಿಹಾಸಪುರಾಣರೂಪದ ಆಕರ-ಗ್ರಂಥಗಳ ಬಳಕೆ, ಆಪಾತತಃ ವಿರೋಧಗಳ ಸಮನ್ವಯ, ದೇವದೈತ್ಯರ ಅಂಶಾವತಾರಗಳ ವಿವರ, ವೇದೋಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ದೇವತಾತಾರತಮ್ಯದ ವಿವೇಚನೆ, ಸರ್ವತ್ರ ಶ್ರೀಹರಿಯ ಪಾರಮ್ಯದ ಪ್ರತಿಪಾದನೆ, ಪ್ರಾಣತತ್ತ್ವದ ಪ್ರಾಧಾನ್ಯದ ನಿರೂಪಣೆ, ವೇದೋಪ-ನಿಷತ್ತುಗಳಂತೆ ಇತಿಹಾಸ ಪುರಾಣಗಳ ಅಧ್ಯಯನದ ಅಗತ್ಯದ ಪ್ರತಿಪಾದನೆ, ವರಶಾಪಗಳ ಬಗ್ಗೆ ಸಮಗ್ರ ವಿಶ್ಲೇಷಣೆ, ಮಹಾಭಾರತಾದಿಗಳ ಬಹ್ವರ್ಥತ್ವದ ಸಾಧನೆ - ಮೊದಲಾದವು ಆಚಾರ್ಯ ಶ್ರೀಮಧ್ವರ ಮಹಾಭಾರತತಾತ್ಪರ್ಯನಿರ್ಣಯ ಕೃತಿಯ ಅನನ್ಯ ಸಾಧನೆ.

ಪ್ರಸ್ತುತ ಮಧ್ವಭಾರತವು ಮಹಾಭಾರತತಾತ್ಪರ್ಯನಿರ್ಣಯದ ಭಾರತ ಕಥಾನಕದ ಕನ್ನಡ ಸಾರರೂಪವಾಗಿರುವ ಕೃತಿ. ಹನ್ನೊಂದನೆಯ ಅಧ್ಯಾಯದಿಂದ ೩೨ನೆಯ ಅಧ್ಯಾಯದವರೆಗಿನ ಪ್ರತಿಶ್ಲೋಕದಲ್ಲಿನ ಭಾವವೂ ಸಹ ಇದರಲ್ಲಿ ಸರಳವಾಗಿ, ನೇರವಾಗಿ ನಿರೂಪಿತವಾಗಿದೆ. ಮೂಲ-ಕೃತಿಯಲ್ಲಿನ ಕಥಾನಿರೂಪಣೆಯನ್ನು ಸರ್ವರೂ ತಿಳಿದುಕೊಳ್ಳಲು ಇದು ನೆರವಾಗುವುದು ನಿಶ್ಚಿತ.

---

೧. ಅರ್ಜುನಮಿಶ್ರನ ವ್ಯಾಖ್ಯಾನದಲ್ಲಿ ದೇವಬೋಧ(ಜ್ಞಾನದೀಪಿಕಾ), ವಿಮಲಬೋಧ (ವಿಷಮಶ್ಲೋಕಟೀಕಾ) ಹಾಗೂ ಶಾಂಡಿಲ್ಯಮಾಧವ ಎಂಬವು ಸರ್ವಜ್ಞನಾರಾಯಣ(ಭಾರತಾರ್ಥಪ್ರಕಾಶ)ನ ವ್ಯಾಖ್ಯಾನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

೨. ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯವನ್ನು ಆಧರಿಸಿ ಶ್ರೀವಾದಿರಾಜಸ್ವಾಮಿಗಳು ಲಕ್ಷಾಲಂಕಾರ ಎಂಬ ಅಪೂರ್ವವ್ಯಾಖ್ಯಾನವನ್ನು ಮಹಾಭಾರತದ ಮೇಲೆ ರಚಿಸಿದ್ದು ಅದು ಪ್ರಕಾಶಿತವಾಗಿದೆ; ವಿವರಗಳನ್ನು ನಮ್ಮ ಮಹಾಭಾರತತಾತ್ಪರ್ಯನಿರ್ಣಯ(ಅನುವಾದ, ವಿವರಣೆಗಳ ಸಮೇತ) ಪ್ರಕಾಶನದಲ್ಲಿ ಕೊಡಲಾಗಿದೆ.

೩. ಈ ಬಗ್ಗೆ ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ ಕನ್ನಡ ಅನುವಾದ ಸಮೇತ ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಕೊಡಲಾಗಿದೆ.

ಬೇರಾವ ಕೃತಿಯಿಂದಲೂ ಪಡೆಯಲಾಗದ ಮಹಾಭಾರತದ ಕಥೆಯ ಸಂಗ್ರಹ ನಿರೂಪಣೆಯನ್ನು ಇದರಿಂದ ಪಡೆದುಕೊಳ್ಳಲು ಸಾಧ್ಯ. ಅಗತ್ಯವೆನ್ನಿಸುವ ಸ್ಥಳಗಳಲ್ಲಿ ಮಾತ್ರ ಶ್ರೀಮದಾಚಾರ್ಯರ, ಇತರ ಗ್ರಂಥಗಳಿಂದ ಹಾಗೂ ವ್ಯಾಖ್ಯಾನಗಳಿಂದ ಸ್ಫುಟಪಡುವ ಅನೇಕ ಅಂಶಗಳನ್ನು ಅಡಿಟಿಪ್ಪಣಿಗಳಲ್ಲಿ ನೀಡಲಾಗಿದೆ. ಪ್ರಾಸಂಗಿಕವಾಗಿ ಪಂಪಭಾರತ, ಕುಮಾರವ್ಯಾಸಭಾರತಗಳಲ್ಲಿನ ನಿರೂಪಣೆಯ ವಿಮರ್ಶೆಯನ್ನೂ ಅಡಿಟಿಪ್ಪಣಿಯಲ್ಲಿ ಮಾಡಲಾಗಿದೆ. ಮೂಲಮಹಾಭಾರತಕೃತಿಗೆ ಅನುಗುಣವಾದ ಪರ್ವಕ್ರಮದ ನಿರೂಪಣೆಯನ್ನು ಇಲ್ಲಿ ಅನುಸರಿಸಲಾಗಿದೆ. ವಾಚಕರ ಅನುಕೂಲಕ್ಕಾಗಿ ಉದ್ದಕ್ಕೂ ಉಪಶೀರ್ಷಿಕೆಗಳನ್ನು ಕೊಡಲಾಗಿದೆ. ಇಲ್ಲಿಯ ವಿವರಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನಮ್ಮ ಪ್ರಕಾಶನದ ಅನುವಾದ, ವಿವರಣೆಗಳ ಸಮೇತವಾದ ಮಹಾಭಾರತ ತಾತ್ಪರ್ಯನಿರ್ಣಯ ಕೃತಿಯಿಂದ ಪಡೆಯಬಹುದು.

ಈ ಕೃತಿಯ ರಚನೆಯಾಗಿದ್ದು ನಾನು ೧೯೭೪ರಿಂದ ೧೯೭೭ರವರೆಗೆ ಚಿಕ್ಕಮಗಳೂರಿನ ಸರ್ಕಾರಿ ಪ್ರಥಮದರ್ಜೆ ಕಾಲೇಜಿನಲ್ಲಿ ಉಪನ್ಯಾಸಕನಾಗಿದ್ದಾಗ; ಪಾಠಪ್ರವಚನಗಳಿಗೆ ಅಷ್ಟಾಗಿ ಅವಕಾಶವಿಲ್ಲದ ಆ ಊರಿನಲ್ಲಿ ಹೆಚ್ಚಿನ ಲೇಖನಕಾರ್ಯ ನಡೆಯಿತು. ಕಾರಣಾಂತರಗಳಿಂದ ಈ ಕೃತಿ ಇಷ್ಟು ವಿಳಂಬವಾಗಿ ಪ್ರಕಾಶನಗೊಳ್ಳುತ್ತಿದೆ.

ಪ್ರಸ್ತುತ ಆವೃತ್ತಿ ಎರಡನೆಯದು. ಮೊದಲ ಆವೃತ್ತಿಯ ಪ್ರತಿಗಳು ಕೇವಲ ೮/೧೦ ದಿನಗಳಲ್ಲಿ ತೀರಿದ್ದರಿಂದ ಇದು ಪ್ರಕಾಶನಗೊಳ್ಳುತ್ತಿದೆ. ಶ್ರೀಹರಿವಾಯುಗಳ ವಿಶೇಷಭಕ್ತರಾದ ತಮ್ಮ ತಾಯಿ **ಶ್ರೀಮತಿ ಆರ್.ಸರೋಜಾ**(ದಿ.ಸಿ.ಎಸ್.ರಂಗನಾಥರಾವ್ ಅವರ ಧರ್ಮಪತ್ನಿ) ಅವರ ಸಹಸ್ರಚಂದ್ರದರ್ಶನ ಶಾಂತಿಯ ಶುಭಸಂದರ್ಭದಲ್ಲಿ ಶ್ರೀಹರಿವಾಯುಗಳ ಪ್ರೀತಿಗಾಗಿ ಅವರ ಪುತ್ರ ಬೆಂಗಳೂರಿನ **ಶ್ರೀ ಸಿ.ಆರ್.ಮುರಳಿ**ಯವರು ಇದನ್ನು ಪ್ರಾಯೋಜಿಸಿರುವರು; ಪರಮ ಆಸ್ತಿಕರೂ, ವಿಶೇಷವಾಗಿ ಶ್ರೀಹರಿಗುರುಗಳ ಸೇವಾಪ್ರಸಕ್ತರೂ ಆದ **ಶ್ರೀಮತಿ ಎಸ್.ಪ್ರೇಮಾ** ಹಾಗೂ **ಶ್ರೀ ಸಿ.ಆರ್.ಮುರಳಿ** ಸಿ.ಎ., ಅವರದು ತತ್ತ್ವಜ್ಞಾನದ ಪ್ರಸಾರದಲ್ಲಿ ಬಹುಬಗೆಯ ಸೇವೆಯಿಂದಾಗಿ ಮಠಮಾನ್ಯಗಳಿಗೆ, ಸಮಾಜಕ್ಕೆ ತುಂಬಾ ಪ್ರಿಯರಾಗಿರುವರು. ಇದರ ಡಿ ಟಿ ಪಿ ಕಾರ್ಯ ನಮ್ಮ ಪ್ರತಿಷ್ಠಾನದ್ದು. ಇದರ ಒಂದು ಹಂತದ ಡಿ.ಟಿ.ಪಿ. ಕಾರ್ಯವನ್ನು ನಿರ್ವಹಿಸಿದ್ದು ಶ್ರೀಮತಿ ವಿದ್ಯಾ ಹಾಗೂ ಅವರ ಪತಿ ದಿ। ಹರೀಶ್ ಅವರು. ಕರಡುತಿದ್ದುವ ಕಾರ್ಯವನ್ನು ಸಮಗ್ರವಾಗಿ ನಿರ್ವಹಿಸಿದವರು ಚಿ।।ಆನಂದಪದ್ಮನಾಭ (ಸುದರ್ಶನ), ನನ್ನ ತಮ್ಮ ಶ್ರೀ ವಿ.ಮಾರುತಿರಾವ್, ಹಾಗೂ ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಇವರು. ಡಿ.ಟಿ.ಪಿ. ಕಾರ್ಯದಲ್ಲಿ ಸಹಕರಿಸಿದವರು ಶ್ರೀಮತಿ ಬಿ.ಎನ್.ಶಶಿಕಲಾ, ಕೆ.ಆರ್.ಭಾಗ್ಯಲಕ್ಷ್ಮಿ ಹಾಗೂ ನನ್ನ ಧರ್ಮಪತ್ನಿ ಸೌ. ಜಯಶ್ರೀ. ಮುಖಪುಟದ ವಿನ್ಯಾಸ ಮಾಡಿರುವುದು ನನ್ನ ಸೊಸೆ ಶ್ರೀಮತಿ ಶ್ರುತಿ ವ್ಯಾಸನಕೆರೆ. ಮುದ್ರಣ ಬೆಂಗಳೂರಿನ ವಾಗರ್ಥ ಅವರದು. ಈ ಎಲ್ಲರಿಗೂ ನಮ್ಮ ಪ್ರತಿಷ್ಠಾನವು ಋಣಿ.

ಬೆಂಗಳೂರು **ವ್ಯಾಸನಕೆರೆ ಪ್ರಭಂಜನಾಚಾರ್ಯ**
ವಿಜಯ ಸಂವತ್ಸರ – **ಶ್ರೀಮಧ್ವನವಮೀ**
೮.೨.೨೦೧೪

॥ ಶ್ರೀಃ ॥

# ಮಧ್ವಭಾರತ

## [೧] ಹಿನ್ನೆಲೆ

**ನಾರಾಯಣಾಯ ಪರಿಪೂರ್ಣಗುಣಾರ್ಣವಾಯ ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।**
**ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥**
**ನಾರಾಯಣಂ ಸುರಗುರುಂ ಜಗದೇಕನಾಥಂ ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥**
**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥**

ಸೃಷ್ಟಿಯ ಪ್ರಾರಂಭದ ಕಾಲ ; ಆವರೆಗೂ ನಾರಾಯಣನೊಬ್ಬನೇ ಮಹಾಲಕ್ಷ್ಮಿಯಿಂದ ಆಲಿಂಗಿತನಾಗಿ ಇದ್ದ. ಪರಕಾಲ ಮುಗಿದ ಮೇಲೆ ಲೋಕಹಿತಕ್ಕೆಂದು ಸೃಷ್ಟಿಯನ್ನು ಪ್ರಾರಂಭಿಸಿದ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬ ನಾಲ್ಕು ರೂಪಗಳನ್ನು ಸ್ವೀಕರಿಸಿದ; ಇವುಗಳಲ್ಲಿ ಮೋಕ್ಷ ನೀಡುವ ರೂಪ ವಾಸುದೇವ ; ಸೃಷ್ಟಿ ಮಾಡುವ ರೂಪ ಪ್ರದ್ಯುಮ್ನ ; ಅನಿರುದ್ಧರೂಪವು ಸ್ಥಿತಿಗೆ ಕಾರಣವಾದುದು ; ಲಯ ಮಾಡುವ ರೂಪ ಸಂಕರ್ಷಣ. ಮಹಾಲಕ್ಷ್ಮಿಯು ಶ್ರೀಹರಿಯ ಆದೇಶದಂತೆ ಕ್ರಮವಾಗಿ ಮಾಯಾ, ಜಯಾ, ಕೃತಿ ಹಾಗೂ ಶಾಂತಿ ಎಂಬ ನಾಲ್ಕು ರೂಪಗಳನ್ನು ಧರಿಸಿದಳು. ಪ್ರದ್ಯುಮ್ನರೂಪದಿಂದ ಸೃಷ್ಟಿಯನ್ನು ಪ್ರಾರಂಭಿಸಿದ ಶ್ರೀಹರಿ, ಅದನ್ನು ಅನಿರುದ್ಧರೂಪದಿಂದ ಮುಂದುವರೆಸಿದ. ಸಾಧನೆಗಾಗಿ ಜೀವರಿಗೆಲ್ಲ ಅವರವರಿಗೆ ಉಚಿತವಾದ ದೇಹವನ್ನು ನೀಡಿದ. ಮುಂದೆ ಮತ್ಸ್ಯಾದಿ ದಶರೂಪಗಳನ್ನು, ಕೇಶವಾದಿ ದ್ವಾದಶರೂಪಗಳನ್ನು, ನಾರಾಯಣಾದಿ ಶತರೂಪಗಳನ್ನು, ವಿಶ್ವ ಮೊದಲಾದ ಸಾವಿರರೂಪಗಳನ್ನು, ಪರಾದಿ ಬಹುರೂಪಗಳನ್ನು ಅಜಿತಾದಿ ಅನಂತರೂಪಗಳನ್ನು ಪ್ರಕಟಪಡಿಸಿದ. ಅವನ

---

೧. ಆಚಾರ್ಯ ಶ್ರೀಮಧ್ವರ ಮಹಾಭಾರತತಾತ್ಪರ್ಯನಿರ್ಣಯವು ಮಹಾಭಾರತದೊಂದಿಗೆ ರಾಮಾಯಣ, ಪಂಚರಾತ್ರ, ಹರಿವಂಶ, ಶ್ರೀಮದ್ಭಾಗವತಾದಿ ಪುರಾಣಗಳು ಮೊದಲಾಗಿ ಸಕಲಶಾಸ್ತ್ರಗಳ ಸಾರವನ್ನು ಅನಾವರಣಗೊಳಿಸಿದ ಕೃತಿ. ಒಟ್ಟು ಮೂವತ್ತೆರಡು ಅಧ್ಯಾಯಗಳ ಆ ಕೃತಿಯಲ್ಲಿ ಮೊದಲ ಅಧ್ಯಾಯದಲ್ಲಿ ಸಕಲಶಾಸ್ತ್ರಾರ್ಥನಿರ್ಣಯವು ನಿರೂಪಿತವಾಗಿದೆ. ಎರಡನೆಯ ಅಧ್ಯಾಯದಲ್ಲಿ ಮಹಾಭಾರತದ ನಿರ್ಣಯಕ್ಕೆ ಅಗತ್ಯವಾದ ವಿಮರ್ಶನಸೂತ್ರಗಳ ನಿರ್ಣಯವು ಸೋದಾಹರಣವಾಗಿ ಪ್ರತಿಪಾದಿತವಾಗಿದೆ. ಮೂರನೆಯ ಅಧ್ಯಾಯದಲ್ಲಿ ಸೃಷ್ಟಿಕ್ರಮವು ಮುಂದುವರೆದು, ಶ್ರೀರಾಮಾವತಾರದವರೆಗಿನ ಭಗವದ–ವತಾರಗಳ ಸೂಕ್ಷ್ಮವಿವರಗಳು ಬಂದಿವೆ. ಮೂರನೆಯ ಅಧ್ಯಾಯದಿಂದ ಒಂಭತ್ತನೆಯ ಅಧ್ಯಾಯದ ಪರಿಸಮಾಪ್ತಿಯವರೆಗೆ ರಾಮಾಯಣದ ನಿರ್ಣಯವು ನಿರೂಪಿತವಾಗಿದೆ. ಹತ್ತನೆಯ ಅಧ್ಯಾಯದಲ್ಲಿ ಶ್ರೀವೇದವ್ಯಾಸಾವತಾರದ ಸಮಗ್ರವಿವೇಚನೆ ಬಂದಿದೆ. ಹನ್ನೊಂದನೆಯ ಅಧ್ಯಾಯದಿಂದ ಮೂವತ್ತೆರಡನೆಯ ಅಧ್ಯಾಯದವರೆಗಿನ ಮುಂದಿನ ಸಮಗ್ರಕೃತಿಯಲ್ಲಿ ಮಹಾಭಾರತದ ವಿವರವಾದ ವಿಶ್ಲೇಷಣೆ ನಡೆದಿದೆ. ಪ್ರಸ್ತುತ 'ಮಧ್ವಭಾರತ' ಕೃತಿಯು ಮಹಾಭಾರತ ಭಾಗದ ಕಥಾರೂಪದ ನಿರೂಪಣೆಯಾಗಿದ್ದು ಇದರ ಗ್ರಹಿಕೆಗೆ ಅಗತ್ಯವಾದ ಪೂರ್ವಾಧ್ಯಾಯಗಳ ಸಾರಸಂಗ್ರಹವನ್ನು ಇಲ್ಲಿ ಕೊಡಲಾಗಿದೆ.

ಸಕಲರೂಪಗಳೂ ಸಹ ಸ್ವಗತಭೇದವಿವರ್ಜಿತವಾದವುಗಳು, ಜ್ಞಾನಾನಂದಾದಿ ಅನಂತಗುಣಗಳಿಂದ ಪರಿಪೂರ್ಣವಾದವುಗಳು ಹಾಗೂ ಸಕಲ ದೋಷರಹಿತವಾದವುಗಳು. ಶ್ರೀಹರಿಗೂ ಅವನ ರೂಪ, ಗುಣ, ಕ್ರಿಯೆ ಮೊದಲಾದವುಗಳಿಗೂ ಯಾವುದೇ ವಿಧವಾದ ಭೇದವೂ ಸಹ ಯಾವ ಕಾಲಕ್ಕೂ ಸರ್ವಥಾ ಇರುವುದಿಲ್ಲ. ಮುಂದೆ ವಾಸುದೇವರೂಪದಿಂದ ಬ್ರಹ್ಮ , ಸಂಕರ್ಷಣರೂಪದಿಂದ ವಾಯು, ಪ್ರದ್ಯುಮ್ನರೂಪದಿಂದ ಸರಸ್ವತಿಭಾರತಿಯರು ಸೃಷ್ಟರಾದರು. ಬ್ರಹ್ಮವಾಯುಗಳಿಂದ ಶೇಷಗರುಡಾದಿಗಳ ಸೃಷ್ಟಿ ನಡೆಯಿತು. ಅನಿರುದ್ಧನಿಂದ ತತ್ತ್ವಗಳ ಸೃಷ್ಟಿಯಾಯಿತು. ಬ್ರಹ್ಮದೇವರಿಂದ ತತ್ತ್ವಾಭಿಮಾನಿ ದೇವತೆಗಳು ಸೃಷ್ಟರಾದರು. ಮುಂದೆ ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮಾಂಡ ಸೃಷ್ಟಿಯಾಗಿ, ಶ್ರೀಹರಿಯ ನಾಭಿಕಮಲದಿಂದ ಬ್ರಹ್ಮದೇವರು ಜನಿಸಿದರು. ಬ್ರಹ್ಮದೇವರಿಂದ ಲೋಕಸೃಷ್ಟಿ ಹಾಗೂ ಶಿವಾದಿ ದೇವತಾಸೃಷ್ಟಿ ನಡೆಯಿತು. ಮುಂದೆ ಕಶ್ಯಪರಿಂದ ಪುನಃ ದೇವತೆಗಳು ಅವತರಿಸಿದರು. ಶ್ರೀಹರಿಯು ವರಾಹರೂಪದಿಂದ ಹಿರಣ್ಯಾಕ್ಷನನ್ನು ಸಂಹರಿಸಿದ. ಮತ್ಸ್ಯರೂಪದಿಂದ ಹಯಗ್ರೀವಾಸುರನನ್ನು ಕೊಂದು, ಬ್ರಹ್ಮದೇವರಿಗೆ ವೇದಗಳನ್ನು ನೀಡಿದ. ನರಸಿಂಹಾವತಾರದಿಂದ ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ಅನುಗ್ರಹಿಸಿದ. ಕೂರ್ಮರೂಪದಿಂದ ಲೋಕಧಾರಕ-ನಾದ ಶ್ರೀಹರಿ ಸಮುದ್ರಮಥನಕಾಲದಲ್ಲಿ ಮಂದರವನ್ನು ಧರಿಸಿದ. ಮುಂದೆ ನಡೆದದ್ದು ವಾಮನಾವತಾರ. ಆ ರೂಪದಿಂದ ಬಲಿಯನ್ನು ಉದ್ಧರಿಸಿದ. ಪರಶುರಾಮರೂಪದಿಂದ ದುಷ್ಟಕ್ಷತ್ರಿಯರನ್ನು ಸಂಹರಿಸಿ, ಜಗತ್ತನ್ನು ಉದ್ಧರಿಸಿದ. ರಾವಣಕುಂಭಕರ್ಣರ ಸಂಹಾರಕ್ಕೋಸ್ಕರ ದೇವತಾಪ್ರಾರ್ಥನೆಯಂತೆ ಶ್ರೀರಾಮರೂಪವನ್ನು ಪ್ರಕಟಿಸಿದ. ಅತ್ಯದ್ಭುತವಾದ ಕಾರ್ಯಗಳನ್ನು ಮಾಡುತ್ತಲೇ, ಅಸುರನಿಗ್ರಹದೊಂದಿಗೆ ಲೋಕಶಿಕ್ಷಣವನ್ನೂ ಮಾಡಿದ.

ಇಪ್ಪತ್ತೆಂಟನೆಯ ದ್ವಾಪರಯುಗವು ಪ್ರಾರಂಭವಾಗುವ ಮುನ್ನ ಬ್ರಹ್ಮಾದಿದೇವತೆಗಳ ಪ್ರಾರ್ಥನೆ-ಯಂತೆ ವೇದಾದಿ ಸಕಲಶಾಸ್ತ್ರಗಳ ಉದ್ಧಾರಕ್ಕಾಗಿ [೧] ಶ್ರೀವೇದವ್ಯಾಸರೂಪದಿಂದ ಪ್ರಾದುರ್ಭೂತನಾದ; ಅನಂತವೇದಗಳನ್ನು ಪ್ರಕಟಿಸಿದ ; ಮಹಾಭಾರತವನ್ನು ಬರೆದ ; ಭಾಗವತಾದಿಪುರಾಣಗಳನ್ನು ರಚಿಸಿದ ; ಸಕಲಶಾಸ್ತ್ರನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ರಚಿಸಿದ ; ಶುಕ ವೈಶಂಪಾಯನಾದಿ ಶಿಷ್ಯರ ಮೂಲಕ ಸಮಸ್ತಶಾಸ್ತ್ರಪ್ರಪಂಚದ ರಕ್ಷಣೆಯ ಪರಂಪರೆಯನ್ನು ನಿರ್ಮಿಸಿದ.

ಜಗತ್ತನ್ನು ಆಳಿದ ಪ್ರಸಿದ್ಧ ರಾಜರಲ್ಲಿ ಸ್ವಾಯಂಭುವಮನು ಪ್ರಪ್ರಥಮ ಚಕ್ರವರ್ತಿ ; ಅವನ ಪುತ್ರರಾದ ಪ್ರಿಯವ್ರತ ಹಾಗೂ ಉತ್ತಾನಪಾದರು ಆ ಬಳಿಕ ರಾಜ್ಯವಾಳಿದವರು. ಭರತ ಮೊದಲಾದವರು ಪ್ರಿಯವ್ರತನ ವಂಶದ ಮಹನೀಯರಾದರೆ, ಧ್ರುವ, ಪೃಥು ಮೊದಲಾದವರು ಉತ್ತಾನಪಾದನ ವಂಶದ ಪ್ರಖ್ಯಾತ ರಾಜರು ; ಸೂರ್ಯ ಹಾಗೂ ಚಂದ್ರ ಬೆಳಕು ಕೊಡುವ ದೇವತೆಗಳಾದಂತೆ ರಾಜವಂಶವನ್ನು ಬೆಳೆಸಿದ ಮಹಾತ್ಮರೂ ಆಗಿರುವರು. ಸೂರ್ಯವಂಶದಲ್ಲಿ ಭಗವಂತನಾದ ಶ್ರೀರಾಮ ಅವತರಿಸಿ, ಅದನ್ನು ಪಾವನಗೊಳಿಸಿದ. ರಾಮರಾಜ್ಯ ಎಂಬುದು ವಿಶ್ವದ ದಾಖಲೆಯ ರಾಜ್ಯ ಎನ್ನಿಸಿತು. ಚಂದ್ರವಂಶದಲ್ಲಿ ಭಗವಂತನಾದ ಶ್ರೀಕೃಷ್ಣ ಅವತರಿಸಿ, ಜಗತ್ತಿಗೆ ಗೀತಾಮೃತವನ್ನು ನೀಡಿ ಪಾವನಗೊಳಿಸಿದ; ಚಂದ್ರನು ಬ್ರಹ್ಮಪುತ್ರನಾದ ಅತ್ರಿಮುನಿಯಿಂದ ಜನಿಸಿ, ಬ್ರಹ್ಮನ ಸನ್ನಿಧಾನದಿಂದಾಗಿ ದಿಕ್ಪಾಲಕನಾಗಿ ವಂಶ ಪ್ರವರ್ತಕನಾಗಿ ಖ್ಯಾತನಾದ. ಪಾಂಡವರು ಅವತರಿಸಿದ್ದು ಸಹ ಚಂದ್ರವಂಶದಲ್ಲಿಯೇ.

---

೧. ಶ್ರೀವೇದವ್ಯಾಸರೂಪದ ವಿವರವಾದ ವಿಶ್ಲೇಷಣೆಯನ್ನು ನಮ್ಮ ಪ್ರಕಾಶನ(೨೦೧೨)ದ 'ಶ್ರೀವೇದವ್ಯಾಸದರ್ಶನ' ಎಂಬ ಕೃತಿಯಲ್ಲಿ ಕೊಡಲಾಗಿದೆ.

# ಆದಿ ಪರ್ವ

## ಕುರು-ಪಾಂಡವರ ಪೂರ್ವಜರು

ಚಂದ್ರನ ಮಗ ಬುಧ ; ಅವನ ಮಗ ಪುರೂರವಸ್ ; ಬಳಿಕ ಆಯು, ನಹುಷ, ಯಯಾತಿ ಮೊದಲಾದ ರಾಜರು ಆಳಿದರು. ಪ್ರಜಾವತ್ಸಲರು. ಅವರಲ್ಲಿ ಯಯಾತಿಗೆ ದೇವಯಾನೀ ಮತ್ತು ಶರ್ಮಿಷ್ಠೆ ಎಂಬ ಇಬ್ಬರು ಪತ್ನಿಯರು. ಯದು ಮತ್ತು ತುರ್ವಸು ಎಂಬ ಇಬ್ಬರು ಮಕ್ಕಳು ದೇವಯಾನಿಯಲ್ಲೂ, ದ್ರುಹ್ಯ, ಅನು ಮತ್ತು ಪುರು ಎಂಬ ಮೂವರು ವೃಷಪರ್ವಸುತೆ ಶರ್ಮಿಷ್ಠೆಯಲ್ಲೂ ಜನಿಸಿದರು. ಅವರೆಲ್ಲ ತಮ್ಮ ಹಿಂದಿನವರಂತೆ ಮಹಾವಿಷ್ಣುಭಕ್ತರು; ಯದುವಿನ ವಂಶದಲ್ಲಿ ಮುಂದೆ ಚಕ್ರವರ್ತಿ ಎನ್ನಿಸಿದ ಕಾರ್ತವೀರ್ಯಾರ್ಜುನ ಜನ್ಮ ತಾಳಿದ. ದತ್ತಾತ್ರೇಯರೂಪಿಯಾದ ವಿಷ್ಣುವಿನ ಅನುಗ್ರಹದಿಂದ ಯೋಗಶಕ್ತಿಯನ್ನು ಹೊಂದಿದ್ದ ಮಹಾಭಾಗ್ಯ ಅವನದಾಗಿತ್ತು. ಅವನ ವಂಶದಲ್ಲಿ ವಿಷ್ಣುವನ್ನಾಶ್ರಯಿಸಿದ ಯಾದವರು ಜನಿಸಿದರು. ಪುರುವಂಶದಲ್ಲಿ ಚಕ್ರವರ್ತಿ ಎನ್ನಿಸಿದ ಭರತ ಹುಟ್ಟಿದ. ಕುರು ಎಂಬಾತ ಜನಿಸಿದ್ದು ಈ ಭರತವಂಶದಲ್ಲೇ. ಕುರುವಂಶದಲ್ಲಿ ಪ್ರತೀಪರಾಜ ಹುಟ್ಟಿದ. ಅವನಿಗೆ ಮಹಾತೇಜಸ್ವಿಗಳಾದ ದೇವಾಪಿ, ಬಾಹ್ಲೀಕ ಮತ್ತು ಶಂತನು ಎಂಬ ಮೂವರು ಪುತ್ರರು ಜನಿಸಿದರು. ಹಿರಿಯನಾದ ದೇವಾಪಿ ಚರ್ಮದೋಷ ಹೊಂದಿದ್ದರಿಂದ ತಪಸ್ಸಿಗಾಗಿ ಕಾಡಿಗೆ ತೆರಳಿದ. ಅವನು ಮುಂದೆ [೧]ಕೃತಯುಗದಲ್ಲಿ ರಾಜನಾಗುವನು. ಬಾಹ್ಲೀಕನು [೨]ಪುತ್ರಿಕಾಧರ್ಮದಿಂದ ಬಾಹ್ಲೀಕರಾಜ್ಯಕ್ಕೆ ಸೇರಿಹೋದ. ಹಿರಣ್ಯಕಶಿಪುವಿನ ಪುತ್ರ ಪ್ರಹ್ಲಾದನೇ ಇವನು. ವಾಯುವಿನ ಆವೇಶವನ್ನು ಹೊಂದಿದ ಅವನು ಮಹಾಬಲಶಾಲಿ. ಅವನು ಹುಟ್ಟುವಾಗಲೇ ಭೂಮಿ ಸೀಳಿತಂತೆ. ಅವನು ಭೂಭಾರಹರಣವೆಂಬ ವಿಷ್ಣುವಿನ ಕಾರ್ಯದಲ್ಲಿ ಅಂಗವೆನ್ನಿಸಲೆಂದೇ ಹುಟ್ಟಿಬಂದಿದ್ದ. ಪತ್ರತಾಪನೆಂಬ ರುದ್ರ ಅವನ ಮಗ ಸೋಮದತ್ತನಾದ. ಅಜೈಕಪಾತ್, ಅಹಿರ್ಬುಧ್ನಿ ವಿರೂಪಾಕ್ಷ ಎಂಬ ಮೂವರು ರುದ್ರರು ಅವನ ಮಕ್ಕಳಾಗಿ ಭೂರಿ, ಭೂರಿಶ್ರವಸ್ ಮತ್ತು ಶಲ ಎಂಬ ಹೆಸರಿನಿಂದ ಜನಿಸಿದರು. ಭೂರಿಶ್ರವನು ಶಿವ ಮೊದಲಾದ ಇತರ ಎಲ್ಲ ರುದ್ರರ ಆವೇಶವನ್ನೂ, ವಿಶೇಷವಾಗಿ ರುದ್ರದೇವರ ಆವೇಶವನ್ನೂ ಹೊಂದಿದ್ದರಿಂದ ಅತ್ಯಂತ ಬಲಾಢ್ಯನೂ, ಶ್ರೇಷ್ಠ ಅಸ್ತ್ರಪಾರಂಗತನೂ ಆದ. ಸೋಮದತ್ತ ಆ ಉದ್ದೇಶದಿಂದಲೇ ಶಿವನನ್ನು ಕುರಿತು ತಪಸ್ಸನ್ನು ಆಚರಿಸಿದ್ದ. ''ನಿನ್ನ ಶತ್ರುಗಳ ಹುಟ್ಟಡಗಿಸುವ, ಬಲವೀರ್ಯಸಂಪನ್ನನಾದ ಭೂರಿಶ್ರವಸ್ ಎಂಬ ಮಗ ಹುಟ್ಟುವನು. ನನ್ನ ಆವೇಶವನ್ನೂ ಹೊಂದಿರುವ ಅವನು ಯಜ್ಞಶೀಲನೂ ಆಗುವನು'' ಎಂಬ ವರವನ್ನು ಶಿವ ಅವನಿಗೆ ದಯಪಾಲಿಸಿದ್ದ. ಇದರಿಂದಾಗಿ ಭೂರಿಶ್ರವಸ್ ಅತ್ಯಂತ ಬಲಶಾಲಿ ಎನ್ನಿಸಿದ.

---

೧. ಆ ವೇಳೆಗೆ ತಪಸ್ಸಿನ ಪ್ರಭಾವದಿಂದಾಗಿ ಅವನ ಚರ್ಮರೋಗ ಪರಿಹಾರ ಹೊಂದಿರುವುದರಿಂದ ರಾಜನಾಗಲು ಅರ್ಹತೆ ಲಭಿಸಿರುವುದು ಎಂದು ತಿಳಿಯಬೇಕು.

೨. ಗಂಡು ಸಂತತಿ ಇಲ್ಲದ ಅರಸ ತಮ್ಮ ಮಗಳ ಮಗನನ್ನು ತಮ್ಮ ಮಗನನ್ನಾಗಿ ಸ್ವೀಕರಿಸುವ ಪದ್ಧತಿ 'ಪುತ್ರಿಕಾಧರ್ಮ' ಎನ್ನಿಸುವುದು.

## ಶಂತನುವಿನ ಪೂರ್ವಕಥೆ

ಒಂದು ಪರ್ವಕಾಲ. ಪೂರ್ವಸಮುದ್ರದತ್ತ ಬ್ರಹ್ಮದೇವರು ನಡೆದಿದ್ದರು. ಗಂಗಾಸಂಗಮ-ದಿಂದ ಕೂಡಿದ್ದ ಸಮುದ್ರ ಉಕ್ಕೇರಿ ನಿಂತಿತ್ತು. ಸಮುದ್ರದ ಒಂದು ಹನಿ ನೀರು ಅವರಿಗೆ ಸಿಡಿಯಿತು. ಹಿರಿಯರಿಗೆ ಮಾಡಿದ ದ್ರೋಹಕ್ಕಾಗಿ ಶಾಪವಿತ್ತರು : "ನೀನು ಮಹಾಭಿಷಕ್ ಮತ್ತು ಶಂತನು ಎಂಬ ಎರಡು ಜನ್ಮಗಳನ್ನು ಹೊಂದಿ ರಾಜನಾಗು. ಈ ಗಂಗೆಯೇ ಅಲ್ಲೂ ನಿನಗೆ ಪತ್ನಿಯಾಗುವಳು. 'ಶಾಂತೋ ಭವ' ಎಂಬ ನನ್ನ ಮಾತಿನಿಂದಾಗಿ ನಿನ್ನ ಎರಡನೆಯ ಜನ್ಮಕ್ಕೆ ಶಂತನು ಎಂದೇ ಹೆಸರಾಗಲಿ."

ವರುಣರಾಜ ಮಹಾಭಿಷಕ್ ರಾಜನಾದ. ಚಿರಕಾಲ ಭೂಮಿಯನ್ನು ಪಾಲಿಸಿದ ಅವನು ಒಮ್ಮೆ ಬ್ರಹ್ಮದೇವರ ಸಭೆಯಲ್ಲಿ ದೇವವೃಂದದಲ್ಲಿ ಆಸೀನನಾಗಿದ್ದ. ಆ ವೇಳೆಗೆ ಅಲ್ಲಿಗೆ ಗಂಗಾದೇವಿಯ ಆಗಮನವಾಯಿತು. ತುಂಬಿದ ಸಭೆಯಲ್ಲಿ ಗಂಗೆಯ ಸೆರಗು ಜಾರಿತು. ಎಲ್ಲ ದೇವತೆಗಳು ತಲೆಬಾಗಿಸಿದರೂ ಅವನು ಮಾತ್ರ ಗಂಗೆಯಿಂದ ಕಣ್ಣು ತೆಗೆಯದಾದ. ಬ್ರಹ್ಮದೇವ ತತ್‌ಕ್ಷಣವೇ ಶಂತನುವಾಗಿ ಜನಿಸೆಂದು ನುಡಿಯಲು, ವರುಣ ಭೂಮಿಗಿಳಿದು ಪ್ರತೀಪನ ಮಗನಾಗಿ 'ಶಂತನು' ಎನ್ನಿಸಿದ.

## ಭೀಷ್ಮ ಜನನದ ಹಿನ್ನೆಲೆ

ಅಷ್ಟವಸುಗಳಲ್ಲಿ [೧]'ದ್ಯು' ಎಂಟನೆಯವನು. ವರಾಂಗಿ ಅವನ ಪತ್ನಿ. ಅದೇ ಹೆಸರಿನ ಸುಬಿಂದರಾಜನ ಪತ್ನಿ ಅವಳ ಪ್ರಾಣಸಖಿ. ಅವಳಿಗೋಸ್ಕರ ಹುಟ್ಟು ಮತ್ತು ಸಾವುಗಳನ್ನು ಇಲ್ಲವಾಗಿಸುವ ನಂದಿನಿ ಎಂಬ ವಸಿಷ್ಠಮುನಿಗಳ [೨]ಧೇನುವನ್ನು ಬಂಧಿಸಿ ತರಲು, ವರಾಂಗಿ ತನ್ನ ಪತಿ 'ದ್ಯು'ವನ್ನು ಪ್ರೇರಿಸಿದಳು. ಪತ್ನಿಯ ಮಾತಿನಿಂದ ದ್ಯು ಆ ಚೋರತನಕ್ಕೆ ಕೈಹಾಕಿದ. ಸೋದರವಾತ್ಸಲ್ಯದಿಂದಾಗಿ ಉಳಿದ ಏಳು ವಸುಗಳೂ ಅವನನ್ನು ಹಿಂಬಾಲಿಸಿದರು. ವಿಷಯ ತಿಳಿದ ವಸಿಷ್ಠರ ಬಾಯಿಂದ ಮಾತು ಹೊರಟಿತು – "ಈ ಅಕಾರ್ಯಕ್ಕಿಳಿದ ನೀವೆಲ್ಲ ಮನುಷ್ಯರಾಗಿ ಹುಟ್ಟಿರಿ. ಮುಖ್ಯ ಅಪರಾಧಿಯಾದ ದ್ಯು ಮಾತ್ರ ಎಂಟುಜನರ ಆಯುಷ್ಯವನ್ನೂ ಹೊತ್ತು ಭೂಮಿಯಲ್ಲಿರಲಿ. ನೀವೆಲ್ಲ ಹುಟ್ಟಿದ ಕೂಡಲೇ ಮರಳಿರಿ. ಪತಿಯನ್ನು ಕುಕಾರ್ಯದಲ್ಲಿ ಪ್ರೇರಿಸಿದ ವರಾಂಗಿಯು ಮಾತ್ರ ಅಂಬಾ ಎಂಬ ಹೆಸರಿನ ರಾಜಪುತ್ರಿಯಾಗಿ ಹುಟ್ಟಲಿ. ಜನ್ಮಪಿಡೀ ಗಂಡನಿಲ್ಲದೆ ಬಾಳಲಿ. ಮುಂದೆ ಪುಂಸ್ತ್ವವನ್ನು ಆಶ್ರಯಿಸಿ ಪತಿಯ ಮರಣಕ್ಕೂ ಕಾರಣಳಾಗಲಿ. ಇವನೂ ಸಹ ಆಜೀವ ಬ್ರಹ್ಮಚಾರಿಯಾಗಿದ್ದು ಅನಂತರ ಶರಮಂಚದಲ್ಲಿ

೧. ಪ್ರಭಾಸ ಎಂಬುದು ಈ ದ್ಯು ವಸುವಿನ ನಾಮಾಂತರ.

೨. ಈ ಗೋ ಅಪಹರಣದ ಪ್ರಸಂಗ ವಸುಗಳಿಗೆ ಮುಖ್ಯವಾಗಿ ದ್ಯು ವಸುವಿಗೆ ಅಪಾರವಾದ ನೋವಿಗೆ ಕಾರಣವಾದ ಸಂಗತಿಯಾಯಿತು. ಗೋವುಗಳ ಅಪಹರಣದ ಪ್ರಯತ್ನವೇ ಮಹಾದುರಂತಕ್ಕೆ ಕಾರಣ-ವಾಗುವಾಗ, ಇನ್ನು ಅವುಗಳ ಹಿಂಸೆ, ವಧೆ ಮೊದಲಾದವುಗಳು ಅದೆಂತಹ ಘೋರಪಾತಕ ಎಂಬುದನ್ನು ಗಮನಿಸಬೇಕು.

ಮಲಗಿ ಎಂಟು ಹುಟ್ಟುಸಾವುಗಳ ನೋವನ್ನು ಅನುಭವಿಸಲಿ.'' ಈ ಮಾತು ವಸಿಷ್ಠರ ಬಾಯಿಂದ ಬಂದಿದ್ದವಾದರೂ, ಅದು ಹೊರಟಿದ್ದು ಅವರಲ್ಲಿ ಆವೇಶ ಮಾಡಿದ್ದ ಬ್ರಹ್ಮದೇವ-ರಿಂದಲೇ. ತಮ್ಮ ತಪ್ಪನ್ನು ಅರಿತ ವಸುಗಳು ಶಾಪನೀಡಿದವರು ಬ್ರಹ್ಮದೇವರೆಂಬುದನ್ನು ಅರಿತು ಶರಣು ಹೊಂದಿದರು. ''ನಾವು ಮನುಷ್ಯಸ್ತ್ರೀಯ ಗರ್ಭವನ್ನು ಹೊಂದಲಾರೆವು. ಇವನು ನಮ್ಮೆಲ್ಲರ ಬಲವನ್ನೂ ಹೊಂದಿರಲಿ. ನಿನ್ನ ಅಂಶವೂ ಇವನಲ್ಲಿರಲಿ'' ಎಂದು ಪ್ರಾರ್ಥಿಸಿದರು. ಬ್ರಹ್ಮದೇವರು ಸಮ್ಮತಿಸಿದರು.

ಅವರೆಲ್ಲ ದೇವನದಿಯಾದ ಗಂಗೆಯನ್ನು ಸಮೀಪಿಸಿ, ಕೇಳಿಕೊಂಡರು – ''ನಾವೆಲ್ಲ ನಿನ್ನ ಮಕ್ಕಳಾಗಿ ಹುಟ್ಟುವೆವು. ಹಾಗೆ ಜನಸಿದ ಕೂಡಲೇ ನೀನು ನಮ್ಮನ್ನು ಕೊಂದುಬಿಡು''; ಅದರಿಂದ ತನಗೆ ಪಾಪ ಒದಗದಿರಲಿ ಹಾಗೂ ತನ್ನ ಬಗ್ಗೆ ಅವರಿಗೆ ಅಪ್ರೀತಿ ಹುಟ್ಟದಿರಲಿ; ಎಂಬ ವರದ ನಿಬಂಧನೆಯ ಮೇಲೆ ಗಂಗೆ ಅದಕ್ಕೆ ಒಪ್ಪಿದಳು.

ತನ್ನ ಕಾರ್ಯ ನಿರ್ವಿಘ್ನವಾಗಿ ನಡೆಯಬೇಕೆಂದು ಗಂಗೆ ಒಂದು ಉಪಾಯ ಹೂಡಿದಳು. ತಾನಾಗಿಯೇ ಬಯಸಿಬಂದವಳಂತೆ ಪ್ರತೀಪರಾಜನ ಬಲತೊಡೆಯನ್ನೇರಿ ಕುಳಿತು, ತನ್ನನ್ನು ಮದುವೆಯಾಗಲು ಕೇಳಿಕೊಂಡಳು. ಪ್ರತೀಪರಾಜ ವಿಚಾರಮಾಡಿ ಉತ್ತರಿಸಿದ – ''ಬಲತೊಡೆ ಮಗಳು ಹಾಗೂ ಸೊಸೆಯದು, ಎಡತೊಡೆ ಪತ್ನಿಯದು. ನೀನು ನನ್ನ ಬಲತೊಡೆಯನ್ನೇರಿ-ರುವುದರಿಂದ ನನಗೆ ಸೊಸೆಯಾಗುವುದೇ ಯೋಗ್ಯ. ಮಗ ಶಂತನುವನ್ನು ಮದುವೆಯಾಗು''. ''ಶಂತನುವನ್ನೇ ಮದುವೆಯಾಗುವೆ. ಆದರೆ ಅವನು ನನ್ನನ್ನು 'ನೀನು ಯಾರು' ಎಂದು ಕೇಳಕೂಡದು, ನಾನು ಎಂತಹ ಅಕಾರ್ಯ ಮಾಡಿದರೂ ಅದಕ್ಕೆ ಅಡ್ಡಿಮಾಡಕೂಡದು ; ಅದಕ್ಕೆ ಕಾರಣವನ್ನೂ ಕೇಳಕೂಡದು ; ಇವುಗಳಲ್ಲಿ ಒಂದಕ್ಕೆ ತಪ್ಪಿದರೂ ನಾನು ಅವನನ್ನು ತೊರೆದುಹೋಗುವೆ'' ಎಂಬ ನಿಬಂಧನೆಯನ್ನು ಮುಂದಿರಿಸಿ ಗಂಗೆ ಅದಕ್ಕೆ ಸಮ್ಮತಿಸಿದಳು. ಅವನು ತನ್ನ ಮಗ ಶಂತನುವಿಗೆ ಆ ನಿಬಂಧನೆಗಳನ್ನೆಲ್ಲ ತಿಳಿಸಿ, ಗಂಗೆಯನ್ನು ಮದುವೆಯಾಗಲು ಹೇಳಿದ. ಮುಂದೆ ಗಂಗೆಯು ಆ ನಿಬಂಧನೆಗಳನ್ನು [೧] ಶಂತನುವಿಗೆ ನೇರವಾಗಿಯೂ ತಿಳಿಸಿ ಅವನೊಂದಿಗೆ ವಿವಾಹವಾದಳು.

## ದೇವವ್ರತನ ಜನ್ಮ

ಅವರಿಬ್ಬರ ದಾಂಪತ್ಯದಲ್ಲಿ ಜನಿಸಿದ ಮೊದಲ ಏಳು ಮಕ್ಕಳೂ ಗಂಗೆಯಿಂದಲೇ ಗಂಗೆಯ ಪಾಲಾದವು. ಎಂಟನೆಯ ಮಗುವನ್ನೂ ಸಹ ಕೊಲ್ಲುವಂತೆ ಅವಳು ನಟಿಸಿದಾಗ, ತಡೆಯದಾದ ಶಂತನು ''ಎಲೈ, ನೀನು ಯಾರು? ಏತಕ್ಕೋಸ್ಕರ ಕಟುಕಿಯಂತೆ ಮಕ್ಕಳನ್ನು ಕೊಲ್ಲುತ್ತಿರುವಿ ? ದೇವತಾಸ್ತ್ರೀಯಂತಹ ರೂಪದ ನಿನಗೆ ಈ ಕಾರ್ಯ ಕೆಡುಕಲ್ಲದಿರಬಹುದು'' ಎನ್ನಲು, ಗಂಗೆ

೧. ಗಂಗೆಯು ಹೀಗೆ ಶಂತನು ಹಾಗೂ ಅವನ ತಂದೆ ಪ್ರತೀಪರಾಜ ಇಬ್ಬರಿಂದಲೂ ಆ ರೀತಿ ಸಮ್ಮತಿ ಪಡೆಯಲು ಅವಳು ಕೈಗೊಂಡಿದ್ದ ಕಾರ್ಯವು ಶಿಶುಹತ್ಯೆಯಂತಹ ಘೋರಕಾರ್ಯವಾಗಿದ್ದುದೇ ಕಾರಣ ಎಂದು ತಿಳಿಯಬೇಕು.

ಕಾರಣವನ್ನೆಲ್ಲ ವಿವರಿಸಿ ತನ್ನ ನಿಬಂಧನೆಯಂತೆ ಶಂತನುವನ್ನು ತ್ಯಜಿಸಿ ಹೊರಟಳು[೧]. ಹೋಗುವಾಗ ಶಂತನುವಿನ ಅಪ್ಪಣೆ ಪಡೆದು ತನ್ನೊಂದಿಗೆ ಆ ಮಗುವನ್ನೂ ಕರೆದೊಯ್ದಳು. 'ದೇವವ್ರತ' ಎಂಬುದು ಅದರ ಹೆಸರು. ಐವತ್ತು ವರ್ಷಗಳ ಕಾಲ ಬೃಹಸ್ಪತ್ಯಾಚಾರ್ಯರ ಬಳಿ ವೇದಗಳನ್ನೂ, ಆ ಬಳಿಕ ಐವತ್ತು ವರ್ಷಗಳ ಕಾಲ ಪರಶುರಾಮರ ಬಳಿ ತತ್ತ್ವಶಾಸ್ತ್ರವನ್ನೂ, ಬಳಿಕ ಇಪ್ಪತ್ತೈದು ವರ್ಷಗಳ ಕಾಲ ಶಸ್ತ್ರಾಸ್ತ್ರವಿದ್ಯೆಯನ್ನೂ ಕಲಿತು ದೇವವ್ರತ ಮಹಾಜ್ಞಾನಿಯಾದ. ಆ ವೇಳೆಗೆ ತಾಯಿ ಭಾಗೀರಥಿ ದೇವವ್ರತನನ್ನು ಶಂತನುವಿಗೆ ಒಪ್ಪಿಸಲೆಂದು ಭೂಮಿಗೆ ಕರೆತಂದಳು. ದೇವವ್ರತ ಗಂಗಾನದಿಯನ್ನು ತನ್ನ ಬಾಣಗಳಿಂದ ಹರಿಯದಂತೆ ತಡೆದ. ಬೇಟೆಗೆಂದು ಬಂದಿದ್ದ ಶಂತನು, ಬಾಯಾರಿ ಗಂಗೆಯ ಬಳಿ ಬಂದು ಅಲ್ಲಿ ನೀರು ತುಂಬಾ ಕಡಿಮೆ ಇದ್ದುದನ್ನು ಕಂಡು ಅಚ್ಚರಿಪಟ್ಟು, ಕಾರಣವನ್ನು ಹುಡುಕುತ್ತಿರಲು, ಅಸ್ತ್ರಪ್ರಯೋಗ-ನಿರತನಾದ ದೇವವ್ರತ ಕಣ್ಣಿಗೆ ಬಿದ್ದ. ಆದರೆ ಅವನು ತಂದೆಯ ನೋಟ ತನ್ನತ್ತ ಬೀಳುತ್ತಲೇ ಅದೃಶ್ಯನಾದ. ಅಚ್ಚರಿಪಡುತ್ತಿದ್ದ ಶಂತನುವನ್ನು ಸಮೀಪಿಸುತ್ತ ಗಂಗೆಯು ದೇವವ್ರತನನ್ನು ಒಪ್ಪಿಸಿ, ''ಇವನು ನಿನ್ನ ಮಗ ದೇವವ್ರತ. ಬಲವೀರ್ಯೋಪೇತನಾದ ಇವನು ಶ್ರೇಷ್ಠವಾದ ಅಸ್ತ್ರಗಳಲ್ಲೂ ಪಾರಂಗತ. ಇವನ ಅಣ್ಣಂದಿರೆಲ್ಲ ನನ್ನಲ್ಲಿ ದೇಹ ಬಿಟ್ಟು ಪವಿತ್ರರಾಗಿ ತಮ್ಮ ಲೋಕವನ್ನು ಸೇರಿರುವರು. ಅವರಿಗಾಗಿ ದುಃಖಿಸದೆ, ಇವನೊಡನೆ ನೀನು ಸಂತೋಷದಿಂದಿರು'' ಎಂಬುದಾಗಿ ಹೇಳಿ ಅದೃಶ್ಯಳಾದಳು. ಸಂತುಷ್ಟನಾದ ಶಂತನು ಯೌವರಾಜ್ಯದಲ್ಲಿ ಮಗನನ್ನು ಅಭಿಷೇಕಿಸಿದನು. ಮತ್ತೊಮ್ಮೆ ದೇವವ್ರತ ತಂದೆಯ ಅನುಮತಿ ಪಡೆದು ೫೦ ವರ್ಷಗಳಕಾಲ ಬೃಹಸ್ಪತಿಯಲ್ಲಿ ವೇದಗಳನ್ನೂ, ಪರಶುರಾಮರ ಬಳಿ ೩೦೦ವರ್ಷಗಳ ಕಾಲ ತತ್ತ್ವಶಾಸ್ತ್ರವನ್ನೂ,

---

೧. ದೇವತೆಗಳಿಗೆ ಮನುಷ್ಯರೊಂದಿಗೆ ನೆಲೆಸುವುದು ಅಷ್ಟಾಗಿ ಹಿತಕರವೆನ್ನಿಸದು. ಶಂತನು ತನ್ನ ಪತಿಯಾದ ವರುಣನೇ ಆಗಿದ್ದರೂ, ಅವನು ಮನುಷ್ಯದೇಹದಿಂದ ಹುಟ್ಟಿಬಂದಿದ್ದ. ಗಂಗೆ ಮಾತ್ರ ತನ್ನ ಮೂಲರೂಪ-ದಿಂದಲೇ ಅವನ ಪತ್ನಿಯಾಗಿ ಆವರೆಗೂ ಅವನೊಂದಿಗಿದ್ದಳು. ಅದಕ್ಕೆ ವಸುಗಳ ಕೋರಿಕೆ ಕಾರಣವಾಗಿದ್ದಿತು. ಆ ಕಾರ್ಯ ಪೂರೈಸುತ್ತಲೇ ತನ್ನ ಲೋಕಕ್ಕೆ ಮರಳುವುದು ಅವಳ ಉದ್ದೇಶವಾಗಿದ್ದಿತು. ಅದಕ್ಕೆ ಅನುವಾಗಲೆಂದೇ ಅವಳು ಹಾಗೆ ನಿಬಂಧನೆಗಳನ್ನು ಮುಂದಿಟ್ಟು ವಿವಾಹವಾಗಿದ್ದಳು. ಇದರಿಂದ ಗಂಗೆಯು ಶಂತನುವಿನ ಮೂಲರೂಪದ ಪತ್ನಿಯೇ ಆಗಿದ್ದರೂ ಅವನನ್ನು ತೊರೆಯಲು ಕಾರಣ ಸ್ಪಷ್ಟಪಡುವುದು. ಅದರಂತೆ ತಮ್ಮ ನಿಜರೂಪ ತಿಳಿದ ಮೇಲೆ ಭೂಲೋಕದಲ್ಲಿ ತಮ್ಮ ವಾಸವನ್ನು ಮುಂದುವರೆಸುವುದು ದೇವತೆಗಳಿಗೆ ಧರ್ಮವೆನ್ನಿಸದು. ಅದರಿಂದಾಗಿಯೇ ತಾನು ಯಾರು ಎಂದು ಕೇಳಕೂಡದು ಎಂಬ ನಿಬಂಧನೆಯನ್ನು ಮುಂದಿರಿಸಿದ್ದಳು. ಈಗ 'ನೀನು ಯಾರು?' ಎಂದು ಶಂತನು ಕೇಳುತ್ತಲೇ ತಾನು ಗಂಗೆ ಎಂಬುದನ್ನು ತಿಳಿಸಬೇಕಾದ ಅನಿವಾರ್ಯತೆ ಉಂಟಾದಾಗ, ಅವಳು ತನ್ನ ಭೂಲೋಕದ ವಾಸವನ್ನು ಮುಂದುವರೆಸುವುದು ಸಾಧ್ಯವಿರಲಿಲ್ಲ. ಹೀಗೆ ಗಂಗೆಯ ಮೂರು ನಿಬಂಧನೆಗಳೂ ಸಹ ಅರ್ಥಪೂರ್ಣ-ವಾಗಿದ್ದವು ಎಂದು ತಿಳಿಯಬೇಕು. ಗಂಡನ ರೂಪ ಮನುಷ್ಯನದು; ಹೆಂಡತಿಯಾದ ಗಂಗೆಯ ಮೂಲರೂಪ ದೇವತೆಯದು ಎಂಬುದನ್ನು ಸಹ ಹೀಗೆ ಅರ್ಥಮಾಡಿಕೊಳ್ಳಬಹುದು. ಮುನ್ನವೇ ಸ್ನಾನ ಪೂರೈಸಿದ ಹೆಂಡತಿ, ಇನ್ನೂ ಸ್ನಾನಮಾಡದ ಗಂಡನ ಸ್ಪರ್ಶದಿಂದ ಮೈಲಿಗೆ ಎನ್ನಿಸುವುದು ಲೋಕದಲ್ಲಿ ಕಂಡಿದೆ. ಅದರಂತೆ ಇಲ್ಲಿ ಗಂಗೆಯದು ಶಂತನುವಿನ ದೇಹದಂತೆ ಮನುಷ್ಯದೇಹವಾಗಿರದೆ, ದಿವ್ಯದೇಹವಾಗಿದ್ದುದು ಮುಖ್ಯಕಾರಣ.

೫೦ವರ್ಷಗಳಕಾಲ ಅಸ್ತ್ರವಿದ್ಯೆಯನ್ನೂ ಅಧ್ಯಯನ ಮಾಡಿ ತಂದೆಯ ಬಳಿಗೆ ಮರಳಿದ. ಹೀಗೆ ಅಪಾರವಾದ ಪಾಂಡಿತ್ಯ ಹಾಗೂ ಶಸ್ತ್ರಾಸ್ತ್ರವಿದ್ಯೆಯ ಪ್ರಾವೀಣ್ಯ ಪಡೆದ ಹಿರಿಮೆ ಅವನದಾಯಿತು.

## ಕೃಪ - ಕೃಪೀ

ದೇವವ್ರತ ಜನಿಸಿದ ಸಮಯದಲ್ಲೇ ಒಮ್ಮೆ ಬೇಟೆಗೆಂದು ಹೋಗಿದ್ದ ಶಂತನುರಾಜ ಶರದ್ವಾನ್ ಎಂಬ ಋಷಿಯಿಂದ ಜನಿಸಿದ್ದ ಒಂದು ಮಿಥುನ(ಅವಳಿ)ವನ್ನು ಕಂಡ. ಶರದ್ವಾನ್ ಋಷಿ ತಪಸ್ಸುಮಾಡುತ್ತಿದ್ದಾಗ ಊರ್ವಶಿಯನ್ನು ಕಂಡಾಗ ಸ್ಖಲಿಸಿದ ವೀರ್ಯ ಶರಸ್ತಂಬದ ಮೇಲೆ ಬಿದ್ದಿತು. ಅದರಿಂದ ಜನಿಸಿದ ಆ ಅವಳಿಯಲ್ಲಿ ಗಂಡುಮಗು ಭಗವತ್ಕಾರ್ಯದಲ್ಲಿ ಪಾಲ್ಗೊಳ್ಳಲೆಂದು ಜನಿಸಿಬಂದಿದ್ದ ವಿಷ್ಕಂಭ ಎಂಬ ರುದ್ರ ; ಹೆಣ್ಣುಮಗು ದೇವಗುರು ಬೃಹಸ್ಪತಿಗಳ ಪತ್ನಿ ತಾರೆ. ಕರುಣೆ ತುಂಬಿದ ಶಂತನು ಆ ಮಕ್ಕಳನ್ನು ಮನೆಗೆ ಕರೆತಂದು ಪೋಷಿಸಿದ. ಅವನು ತನ್ನ ಕೃಪೆಗೆ ಪಾತ್ರರಾದ ಅವರಿಬ್ಬರಿಗೂ 'ಕೃಪ' ಮತ್ತು 'ಕೃಪೀ' ಎಂದೇ ಹೆಸರಿಟ್ಟ. ಮುಂದೆ ಕೃಪನ ತಪಸ್ಸಿಗೆ ಮೆಚ್ಚಿದ ಮಹಾವಿಷ್ಣು ಅವನಿಗೆ ಮುಂದಿನ ಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬನಾಗುವ ಯೋಗವನ್ನೂ, ಚಿರಂಜೀವಿತ್ವವನ್ನೂ ವರವನ್ನಾಗಿ ನೀಡಿದ. ಶಂತನುವಿನ ಮನೆಯಲ್ಲೇ ಬೆಳೆದ ಕೃಪ ದೇವವ್ರತನಿಗೆ ಸ್ನೇಹಿತನಾದ. ಕೃಪನು ಕೌಶಿಕರ ಬಳಿ ಸಕಲಶಾಸ್ತ್ರಗಳನ್ನು ಅಧ್ಯಯನ ಮಾಡಿದ. ಅಸ್ತ್ರವಿದ್ಯೆಯನ್ನೂ ಕಲಿತ. ವೇದವ್ಯಾಸರಲ್ಲಿ ತತ್ತ್ವಶಾಸ್ತ್ರವನ್ನು ಅಧ್ಯಯನಮಾಡಿ ಸರ್ವಜ್ಞ ಎನ್ನಿಸಿದ.

## ದ್ರೋಣ - ದ್ರುಪದ

ಕೃಪ ಹುಟ್ಟಿದ ಸಮಯದಲ್ಲೇ ಬೃಹಸ್ಪತ್ಯಾಚಾರ್ಯರ ಪುತ್ರನಾದ ಭರಧ್ವಾಜಮುನಿ ಸ್ನಾನಕ್ಕೆಂದು ಗಂಗೆಯ ಬಳಿಗೆ ತೆರಳಿದ್ದ. ಅಲ್ಲಿ ಬಟ್ಟೆ ಜಾರಿದ ಘೃತಾಚೀ ಎಂಬ ಅಪ್ಸರೆಯನ್ನು ಕಂಡ. ತತ್‌ಕ್ಷಣವೇ ಸ್ಖಲಿಸಿದ ವೀರ್ಯವನ್ನು ಒಂದು ದ್ರೋಣ(ದೊನ್ನೆ)ದಲ್ಲಿ ಕೂಡಿಟ್ಟು ಪೋಷಿಸಲು, ಅದರಿಂದ ಬ್ರಹ್ಮಾವೇಶದಿಂದ ಕೂಡಿದ ಬೃಹಸ್ಪತ್ಯಾಚಾರ್ಯರು ಮಗುವಾಗಿ ಜನಿಸಿದರು. ದ್ರೋಣದಲ್ಲಿ ಹುಟ್ಟಿದ್ದರಿಂದ 'ದ್ರೋಣ' ಎಂದೇ ಅವರಿಗೆ ಹೆಸರಾಯಿತು. ತಂದೆಯ ಬಳಿಯೇ ಅಧ್ಯಯನ ಮಾಡಿದ ಆ ಸ್ವಯಂ ಬೃಹಸ್ಪತಿಗೆ ಸರ್ವಜ್ಞ ಎನ್ನಿಸಲು ಹೆಚ್ಚು ಸಮಯ ಬೇಕಾಗಲಿಲ್ಲ.

ಅದೇ ಸಮಯದಲ್ಲಿ ಮಕ್ಕಳಿಲ್ಲದ ಪೃಷತ ಎಂಬ ಪಾಂಚಾಲದೇಶದ ರಾಜ ಕಾಡಿನಲ್ಲಿ ಘೋರ ತಪಸ್ಸನ್ನು ಆಚರಿಸುತ್ತಿರಲು, ಒಬ್ಬ ಅಪ್ಸರೆ ಕಣ್ಣಿಗೆ ಬಿದ್ದು ವೀರ್ಯ ಸ್ಖಲಿಸಿತು, ಅವನು ನಾಚಿಕೆಯಿಂದ ಅದನ್ನು ಕಾಲಿನಿಂದ ಮುಚ್ಚಿದ. ಹೂಹೂ ಎಂಬ ಸತ್ಯಲೋಕದ ಗಂಧರ್ವ, ಆವಹ ಎಂಬ ಮರುತ್ತಿನ ಅಂಶದಿಂದ ಕೂಡಿ ಅಲ್ಲಿ ಜನಿಸಿದ. ಪಾದದಿಂದ ಮುಚ್ಚಲ್ಪಟ್ಟು ಜನ್ಮತಳೆದ ಅವನಿಗೆ 'ದ್ರುಪದ' ಎಂದೇ ಹೆಸರಾಯಿತು. ದ್ರುಪದನ ಶಸ್ತ್ರ , ಶಾಸ್ತ್ರಗಳ

ಅಧ್ಯಯನವೂ ಭರದ್ವಾಜಮುನಿಯಲ್ಲಿಯೇ ನಡೆದು, ದ್ರೋಣದ್ರುಪದರಲ್ಲಿ ಆಪ್ತತ್ವ ಬೆಳೆಯಿತು. ಗುರುಪುತ್ರನಲ್ಲಿಯ ತನ್ನ ವಿಶ್ವಾಸವನ್ನು ತೋರಿಸಲು ದ್ರುಪದ "ಮುಂದೆ ನಾನು ರಾಜನಾದಾಗ ನಿಮಗೆ ಅರ್ಧರಾಜ್ಯವನ್ನು ನೀಡುವೆ" ಎಂದು ವಚನವಿತ್ತ. ಕಾಲವು ಗತಿಸಿ, ದ್ರೋಣ ಕೃಪೀದೇವಿಯ ಕೈಹಿಡಿದು ಹಸ್ತಿನಾವತಿಯಲ್ಲಿ ವಾಸಿಸತೊಡಗಿದರು. ಆ ಸಮಯ–ದಲ್ಲಿನ ದ್ರೋಣರ ಜೀವನೋಪಾಯ ಶ್ರೇಷ್ಠಧರ್ಮವೆನ್ನಿಸಿದ "[೧]ಶಿಲೋಂಛವೃತ್ತಿ"ಯಾಗಿತ್ತು. ಅದೇ ಸಮಯದಲ್ಲಿ ಭೀಷ್ಮರೊಂದಿಗೂ ದ್ರೋಣರಿಗೆ ಮೈತ್ರಿ ಬೆಳೆಯಿತು.

ವಯಸ್ಸಿನಲ್ಲಿ ಇವರೆಲ್ಲರಿಗೆ ಸಮನಾದ ವಿರಾಟರಾಜ 'ಹಾಹಾ' ಎಂಬ ಸತ್ಯಲೋಕದ ಗಂಧರ್ವ; ಆವನಲ್ಲಿ ವಿವಹ ಎಂಬ ಮರುತ್ತಿನ ಅಂಶವೂ ಇತ್ತು; ಅವನು ಮತ್ಸ್ಯದೇಶಕ್ಕೆ ರಾಜನಾದ.

## ದೇವವ್ರತ ಭೀಷ್ಮನಾದ

ಹೀಗಿದ್ದಾಗ ಒಮ್ಮೆ ಬೇಟೆಗೆ ಹೋದ ಶಂತನು ಒಬ್ಬ ರೂಪವತಿಯಾದ ಕನ್ಯೆಯನ್ನು ಕಂಡು ಮೋಹಿತನಾದ. ಅವಳು ಉಪರಿಚರ ಎಂಬ ವಸುವಿನ ಮಗಳು[೨]. ದಾಶರಾಜನ ಮನೆಯಲ್ಲಿ ಬೆಳೆದಿದ್ದಳು. ಅವಳ ಹೆಸರು 'ಸತ್ಯವತೀ'. ಅವಳಿಗೆ ಕಾಳೀ ಹಾಗೂ ಮತ್ಸ್ಯಗಂಧೀ ಎಂಬ ಇತರ ಹೆಸರುಗಳೂ ಇದ್ದವು. ಪರಾಶರ ಋಷಿಯಿಂದ ಭಗವಾನ್ ವೇದವ್ಯಾಸರಿಗೆ ಜನ್ಮವಿತ್ತಿದ್ದ ಅವಳು, ಆ ಮುನಿಯಿಂದ ಮತ್ತೆ ಕನ್ಯಾತ್ವವನ್ನೂ, ದೇಹಕ್ಕೆ ಯೋಜನದೂರ ಪಸರಿಸುವ ದಿವ್ಯಗಂಧವನ್ನು ಪಡೆದುಕೊಂಡು, ಅಂದಿನಿಂದ 'ಯೋಜನಗಂಧೀ' ಎಂಬ ಪ್ರಸಿದ್ಧಿಯನ್ನೂ ಪಡೆದಿದ್ದಳು. ಶಂತನು ದಾಶರಾಜನನ್ನು ಅವಳನ್ನು ತನಗೆ ಧಾರೆ ಎರೆಯಲು ಕೇಳಿಕೊಳ್ಳಲು, ಅವನು ಅವಳಲ್ಲಿ ಜನಿಸುವ ಮಕ್ಕಳಿಗೆ ರಾಜ್ಯನೀಡುವ ವಚನ ನೀಡಿದರೆ ಮಾತ್ರ ಅವಳನ್ನು ಧಾರೆಯೆರೆಯುವುದಾಗಿ ತಿಳಿಸಿದ[೩]. ಅದಕ್ಕೆ ಒಪ್ಪಲಾಗದೆ ಖಿನ್ನನಾದ ಶಂತನು ಮನೆಗೆ

---

೧. ಸುಗ್ಗಿಯ ಕಾಲದಲ್ಲಿ ರೈತರು ಕಣದಲ್ಲಿ ಪೈರಿನಿಂದ ಧಾನ್ಯಗಳನ್ನು ಬೇರ್ಪಡಿಸಿ ಒಯ್ದ ಬಳಿಕ, ಭೂಮಿಯಲ್ಲಿ ಉಳಿಯುವ ಧಾನ್ಯಗಳನ್ನು ಸಂಗ್ರಹಿಸಿ, ಅವುಗಳಿಂದಲೇ ಹೊಟ್ಟೆಹೊರೆಯುವ ಜೀವನರೀತಿಯನ್ನು 'ಶಿಲೋಂಛವೃತ್ತಿ' ಎನ್ನುವರು.

೨. ವಸುವು ತನ್ನ ಪತ್ನಿಗೆ ನೀಡಲೆಂದು ಗಿಡಗ ಒಂದರ ಮೂಲಕ ಕಳುಹಿಸಿದ್ದ ರೇತಸ್ಸು, ಅದು ಮತ್ತೊಂದು ಗಿಡಗದೊಂದಿಗೆ ಕಾದಾಟದಲ್ಲಿ ತೊಡಗಿದಾಗ ಯಮುನಾ ನದಿಯಲ್ಲಿ ಬಿದ್ದು ಅದನ್ನು ಹೆಣ್ಣು ಮೀನೊಂದು ನುಂಗಿತು. ಆ ಮೀನು ದಾಶರಾಜನ ಕೈಸೇರಿದಾಗ, ಅದರಲ್ಲಿ ಒಂದು ಹೆಣ್ಣು ಮತ್ತು ಒಂದು ಗಂಡು ಎಂಬ ಅವಳಿಗಳು ಗೋಚರಿಸಿದವು. ಅವುಗಳನ್ನು ಆ ದಾಶರಾಜ ಉಪರಿಚರ ವಸುವಿಗೆ ಒಪ್ಪಿಸಿದಾಗ, ಅವು ತನ್ನ ಮಕ್ಕಳು ಎಂದು ಗುರುತಿಸಿ ಆನಂದಿಸಿದ. ದಾಶರಾಜನ ಪ್ರಾಮಾಣಿಕತೆಗೆ ಮೆಚ್ಚಿ ಹೆಣ್ಣುಶಿಶುವನ್ನು ಅವನಿಗೆ ಕಾಣಿಕೆಯಾಗಿ ನೀಡಿದ. ಅವಳೇ ಈ ಸತ್ಯವತಿ. ಉಪರಿಚರ ವಸು ಇರಿಸಿಕೊಂಡ ಗಂಡುಮಗು 'ಮತ್ಸ್ಯರಾಜ' (ವಿರಾಟ) ಎನ್ನಿಸಿತು.

೩. ಸತ್ಯವತಿ ಮೇಲೆ ಹೇಳಿದಂತೆ ಮೂಲತಃ ರಾಜಪುತ್ರಿ. ಅವಳು ರಾಜನ ಬಳಿಯೇ ಬೆಳೆದಿದ್ದರೆ ಮುಂದೆ ರಾಜಕುಮಾರನೊಬ್ಬನ ಪತ್ನಿಯಾಗಿ ಮಹಾರಾಣಿ ಎನ್ನಿಸಿ ಅವಳ ಮಕ್ಕಳಿಗೆ ರಾಜ್ಯ ಲಭಿಸುತ್ತಿತ್ತು. ತನ್ನಲ್ಲಿ ಬೆಳೆದ ಕಾರಣಕ್ಕೆ ಅವಳು ಅಂತಹ ಭಾಗ್ಯದಿಂದ ವಂಚಿತಳಾಗಕೂಡದು ಎಂಬ ಕಾರಣದಿಂದ ದಾಶರಾಜ ಹಾಗೆ ನಿಬಂಧನೆ ಹಾಕಿದ ಎಂದು ತಿಳಿಯಬಹುದು.

ಮರಳಿದ. ತಂದೆಯ ಬಾಡಿದ ಮುಖವನ್ನು ಗಮನಿಸಿದ ದೇವವ್ರತನು ಶಂತನುವಿನ ಸಾರಥಿಯ ಮೂಲಕ ನಡೆದ ವಿಷಯವನ್ನು ತಿಳಿದುಕೊಂಡ. ತಂದೆಯ ಅಭಿಲಾಷೆಯನ್ನು ಪೂರೈಸಲು ನಿಶ್ಚಯಿಸಿ, ಕೂಡಲೇ ದಾಶರಾಜನ ಬಳಿಗೆ ಹೋಗಿ, ''ನಾನು ರಾಜ್ಯವಾಳುವುದಿಲ್ಲ, ಮದುವೆಯನ್ನೂ ಆಗುವುದಿಲ್ಲ. ಆದ್ದರಿಂದ ನನ್ನ ಸಂತತಿಯಿಂದಲೂ ನಿನಗೆ ಭಯ ಒದಗದು'' ಎಂದು ಘೋರ ಪ್ರತಿಜ್ಞೆ ಮಾಡಿದ; ಅಂತಹ ಭಯಂಕರ ವ್ರತ ಕೈಕೊಂಡ ಅವನನ್ನು ದೇವತೆಗಳು ಪುಷ್ಪವೃಷ್ಟಿಯಿಂದ ಅಭಿನಂದಿಸಿ ''[೧]ಭೀಷ್ಮ'' ಎಂದು ಕರೆದರು. ವಿಚಾರಿಸಿದಾಗ ಅವಳು ಜನ್ಮತಃ [೨]ರಾಜಪುತ್ರಿಯೆಂದೂ ಸಹ ದೃಢಪಟ್ಟಿತು. ಅವಳನ್ನು ಕರೆತಂದು ತಂದೆಗೆ ವೈಭವದಿಂದ ವಿವಾಹ ಮಾಡಿಸಿದ. ''ಸಜ್ಜನರ ಮನಸ್ಸು ಸ್ವಾಭಾವಿಕವಾಗಿಯೇ ಎಂದೂ ಪಾಪಕಾರ್ಯದಲ್ಲಿ ಮಗ್ನವಾಗದು'' ಎಂಬ ಆತ್ಮಸಾಕ್ಷಿಯನ್ನು ಆಧರಿಸಿ ಶಂತನು ತಾನು ಬಯಸಿದ ಅವಳನ್ನು ಮದುವೆಯಾದ ; ಮಗನ ತ್ಯಾಗ ಅವನಿಗೆ ಅಪಾರ ಸಂತೋಷವನ್ನುಂಟು ಮಾಡಿತು ; ''ಇಚ್ಛಾಮರಣಿಯಾಗು'' ಎಂದು ವರವಿತ್ತು ಅವನನ್ನು ಹರಸಿದ. ಅನೇಕ ವರ್ಷಗಳು ಕಳೆದವು. ಶಂತನುವಿಗೆ ಸತ್ಯವತಿಯಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯ ಎಂಬ ಇಬ್ಬರು ಪುತ್ರರು ಜನಿಸಿದರು. ಅವರಿನ್ನೂ ಚಿಕ್ಕವರಿರುವಾಗಲೇ ವೃದ್ಧಾಪ್ಯ ತಲುಪಿದ್ದ ಶಂತನು, ''ಈ ಜೀರ್ಣದೇಹದಿಂದೇನು ಪ್ರಯೋಜನ'' ಎಂದು ಭಾವಿಸಿ, ಸ್ವೇಚ್ಛೆಯಿಂದ ದೇಹ ತೊರೆದು ತನ್ನ ಮೂಲರೂಪವನ್ನು ಸೇರಿಕೊಂಡ. ಸಾಮಾನ್ಯವಾಗಿ ಆ ಕಾಲದಲ್ಲಿ ಯಾರೂ ಬಯಸದೆ ದೇಹ ತೊರೆಯುತ್ತಿರಲಿಲ್ಲ. ತಪೋನಿರತರಾದ ಅಂತಹವರಿಗೆ ಸ್ವಇಚ್ಛೆ ಅಥವಾ ಬಲಿಷ್ಠರಿಂದ ವಧೆಯ ಹೊರತು ಬೇರಾವ ರೀತಿಯಿಂದಲೂ ಸಾವು ಒದಗುತ್ತಿರಲಿಲ್ಲ. ಅತಿಯಾದ ವಿಷಯಾಸಕ್ತಿ ಮತ್ತು ತಪೋಹೀನತೆ ಮಾತ್ರವೇ ಎಂತಹುದೋ ಮೃತ್ಯುವಿಗೆ ಕಾರಣವಾಗುವುದು[೩]. ಆದ್ದರಿಂದ ಶಂತನು ದೇಹಬಿಟ್ಟದ್ದು ಸ್ವೇಚ್ಛೆಯಿಂದಲೇ ಆಗಿತ್ತು.

## ಚಿತ್ರಾಂಗದನ ಮರಣ

ತಂದೆಯ ಅಂತ್ಯಕ್ರಿಯೆಯನ್ನು ಸಾಂಗವಾಗಿ ನೆರವೇರಿಸಿದ ಭೀಷ್ಮ ಚಿತ್ರಾಂಗದನನ್ನು ಮಹಾರಾಜನನ್ನಾಗಿಯೂ, ವಿಚಿತ್ರವೀರ್ಯನನ್ನು ಯುವರಾಜನನ್ನಾಗಿಯೂ ಅಭಿಷೇಕಿಸಿದ.

---

೧. ಮೊದಲಿಗೆ ಹೀಗೆ ದೇವವ್ರತನಾದವನು ಮಾತ್ರವೇ ಮುಂದೆ ಭೀಷ್ಮನಂತೆ ಮಾನ್ಯನಾಗಲು ಸಾಧ್ಯ ಎಂಬುದು ಇಲ್ಲಿಯ ಧ್ವನಿ. ದೇವವ್ರತ ಎಂಬುದು ಋಷಿವ್ರತ, ಪಿತೃವ್ರತ ಎಂಬ ಇತರ ವ್ರತಗಳಿಗೂ ಸಂಕೇತವಾಗಿ ಒಟ್ಟಾಗಿ ದೇವಯಜ್ಞ ಮೊದಲಾದ ಪಂಚಮಹಾಯಜ್ಞಗಳನ್ನೂ ವ್ರತವನ್ನಾಗಿ ಆಚರಿಸುವ ವಿಶೇಷ ಕರ್ತವ್ಯವನ್ನು ಸೂಚಿಸುವುದು.

೨. ಈಗಾಗಲೇ ಸ್ಪಷ್ಟಪಟ್ಟಿರುವಂತೆ ಸತ್ಯವತಿ ದಾಶರಾಜನ ಬಳಿಯೇ ಬೆಳೆದಿದ್ದರೂ ಮೂಲತಃ ಅವಳು ಕ್ಷತ್ರಿಯಕನ್ಯೆ. ಅದನ್ನು ಸ್ವತಃ ಗಮನಿಸಿದ್ದ ದಾಶರಾಜ ಅವಳನ್ನು ಕ್ಷತ್ರಿಯೋಚಿತರೀತಿಯಲ್ಲೇ ಬೆಳೆಸಿದ್ದ. ಆದರಿಂದಾಗಿ ಶಂತನು ಅವಳನ್ನು ವಿವಾಹವಾಗಿದ್ದು ಜಾತ್ಯಂತರವಿವಾಹಕ್ಕೆ ನಿದರ್ಶನವೆನ್ನಿಸದೆ ಸವರ್ಣೀಯವಿವಾಹವೇ ಆಯಿತು ಎಂಬ ವಿವರ ಮತ್ಸ್ಯಪುರಾಣದಲ್ಲಿನ ವ್ಯಾಸತೀರ್ಥಮಾಹಾತ್ಮ್ಯ ಎಂಬ ಭಾಗದಲ್ಲಿ ಬಂದಿದೆ.

೩. ವಿಚಿತ್ರವೀರ್ಯ ಅಂತಹ ದುರಂತದ ಸಾವಿಗೆ ನಿದರ್ಶನ.

ಚಿತ್ರಾಂಗದ ಎಂಬ ಗಂಧರ್ವನು ಯುದ್ಧಾಕಾಂಕ್ಷಿಯಾಗಿ ಈ ಚಿತ್ರಾಂಗದ ರಾಜನ ಬಳಿ ಬಂದು "ಅಯ್ಯಾ ರಾಜ ! ನೀನು ನಿನ್ನ ಹೆಸರನ್ನು ಬದಲಾಯಿಸಿಕೋ ; ಇಲ್ಲವೇ ಯುದ್ಧದಲ್ಲಿ ನನ್ನನ್ನು ಎದುರಿಸು. ಎಂದೂ ಇಬ್ಬರು ಚಿತ್ರಾಂಗದರಿರುವುದನ್ನು ನಾನು ಒಪ್ಪಲಾರೆ' ಎಂದ. ಯುದ್ಧಕ್ಕೆ ಅಂಜಿ ಹೆಸರು ಬದಲಿಸುವ ಕ್ಷುದ್ರಕಾರ್ಯಕ್ಕೆ ಒಪ್ಪದ ವೀರ ಚಿತ್ರಾಂಗದ ಯುದ್ಧವನ್ನೇ ಆರಿಸಿಕೊಂಡ. ಅವರಿಬ್ಬರಿಗೂ ಕುರುಕ್ಷೇತ್ರದಲ್ಲಿ ನಡೆದ ಘೋರಯುದ್ಧದಲ್ಲಿ ಕೊನೆಗೆ ಚಿತ್ರಾಂಗದ ಹತನಾದ. ಆಗ ಅವನಿಗಿನ್ನೂ ಮದುವೆ ಆಗಿರಲಿಲ್ಲ. ವಿಚಿತ್ರವೀರ್ಯನನ್ನು ರಾಜಪದವಿಯಲ್ಲಿ ಕುಳ್ಳಿರಿಸಿ ಭೀಷ್ಮರೇ ರಾಜ್ಯಭಾರವನ್ನು ಯೋಗ್ಯರೀತಿಯಿಂದ ನಿರ್ವಹಿಸತೊಡಗಿದರು.

## ವಿಚಿತ್ರವೀರ್ಯನ ವಿವಾಹ

ಕಾಶಿರಾಜನು ತನ್ನ ಮೂವರು ಪುತ್ರಿಯರಿಗೆ ಸ್ವಯಂವರವೇರ್ಪಡಿಸಿದ್ದ ಘೋಷಣೆ ಭೀಷ್ಮರಿಗೆ ತಲುಪಿತು. ಅವರಿಗೆ ಬ್ರಹ್ಮದತ್ತನೆಂಬ ಸಾಲ್ವರಾಜನೊಂದಿಗೆ ಪಾಣಿಗ್ರಹಣದ ಸಿದ್ಧತೆಯೂ ನಡೆದಿತ್ತು. ಕೂಡಲೇ ಅಲ್ಲಿಗೇ ಧಾವಿಸಿದ ಭೀಷ್ಮರು ಅಲ್ಲಿ ನೆರೆದಿದ್ದ ಸಾಲ್ವ ಮೊದಲಾದ ಎಲ್ಲ ರಾಜರನ್ನೂ ಜಯಿಸಿ, ಆ ಕನ್ಯೆಯರನ್ನು ಕರೆತಂದರು. ಅವರಲ್ಲಿ ಅಂಬಿಕೆ ಮತ್ತು ಅಂಬಾಲಿಕೆ ಇಬ್ಬರೂ ಭೀಷ್ಮರೊಂದಿಗೆ ಬರಲು ಒಪ್ಪಿದರು. ಸ್ವರೂಪದಲ್ಲಿ ಭೀಷ್ಮರ ಪತ್ನಿಯಾದ ವರಾಂಗಿಯೇ ಆಗಿದ್ದ ಅಂಬೆ ಮಾತ್ರ ಅದಕ್ಕೆ ಒಪ್ಪದೆ, ತಾನು ಸಾಲ್ವನನ್ನೇ ವಿವಾಹವಾಗಬಯಸಿರುವುದಾಗಿ ಹಟ ಹಿಡಿದಳು. ಅವಳನ್ನು ಕಳುಹಿಸಿಕೊಟ್ಟು ಉಳಿದಿಬ್ಬರೊಂದಿಗೆ ಭೀಷ್ಮರು ಹಸ್ತಿನಾವತಿಗೆ ಮರಳಿದರು. ಇತ್ತ ಅಂಬೆಯು ಸಾಲ್ವನ ಬಳಿಗೆ ಹೋಗಲು, ಅವನು "ನೀನು ಮತ್ತೊಬ್ಬನ ಜತೆ ಹೋದವಳು" ಎಂದು ನಿಂದಿಸಿ, ಸ್ವೀಕರಿಸಲು ನಿರಾಕರಿಸಿದ. ಆಗ ಅಂಬೆ ಮತ್ತೆ ಭೀಷ್ಮರ ಬಳಿಗೆ ಬಂದು ಅವರೇ ತನ್ನನ್ನು ಮದುವೆಯಾಗಲು ಕೇಳಿಕೊಂಡಳು. ಆದರೆ ಅವರು ಅವಳಿಗೆ ತಮ್ಮ ಪ್ರತಿಜ್ಞೆಯ ವಿಷಯ ತಿಳಿಸಿ ಮದುವೆಯಾಗಲು ನಿರಾಕರಿಸಿದರು[೧]. ನಿರಾಶಳಾದ ಅವಳು ಭೀಷ್ಮರ ಗುರುಗಳಾದ ಪರಶುರಾಮರ ಬಳಿಗೆ ಹೋಗಿ ತನ್ನನ್ನು ಭೀಷ್ಮರು ಒಪ್ಪಿಕೊಳ್ಳುವಂತೆ ಮಾಡಲು ಕೇಳಿಕೊಂಡಳು. ಇತ್ತ ಅಂಬಿಕೆ, ಅಂಬಾಲಿಕೆಯರೊಂದಿಗೆ ವಿಚಿತ್ರವೀರ್ಯನ ವಿವಾಹವನ್ನು ವಿಜೃಂಭಣೆಯಿಂದ ಭೀಷ್ಮರು ನಡೆಸಿದರು.

## ಭೀಷ್ಮ ಪರಾಭವ

ಪರಶುರಾಮರು ಬಂದು ಭೀಷ್ಮರಿಗೆ ಅಂಬೆಯನ್ನು ಪರಿಗ್ರಹಿಸಲು ಹೇಳಿದಾಗ, ಭೀಷ್ಮರು ತಮ್ಮ ಪ್ರತಿಜ್ಞೆಯನ್ನು ಅರಿಕೆಮಾಡಿಕೊಂಡು ಅದನ್ನು ನಿರಾಕರಿಸಿದರು. ಆಗ ಪರಶುರಾಮರು ಭೀಷ್ಮರ ಕೀರ್ತಿಯನ್ನು ಬೆಳಗಿಸಲೆಂದು, ಯುದ್ಧಕ್ಕೆ ತೊಡಗಿದರು. ಅನೇಕ ದಿನ ನಡೆದ ಆ

೧. ವಾಸ್ತವವಾಗಿ ಭೀಷ್ಮ-ಅಂಬೆಯರು ಮೂಲತಃ ಪತಿಪತ್ನಿಯರಾದ ದ್ಯು ವಸು ಹಾಗೂ ವರಾಂಗಿ. ಆದರೆ ಗೋಹರಣದಂತಹ ಕುಕಾರ್ಯಕ್ಕೆ ಗಂಡನನ್ನು ಪ್ರೇರೇಪಿಸಿದ ಪಾಪದಿಂದಾಗಿ ಒದಗಿದ ಬ್ರಹ್ಮದೇವರ ಶಾಪದಿಂದಾಗಿ ಅವರಿಬ್ಬರಿಗೆ ವಿವಾಹಯೋಗ ತಪ್ಪಿ ಪರಸ್ಪರರಲ್ಲಿ ದ್ವೇಷ ಮೂಡುವಂತಾಯಿತು.

ಯುದ್ಧವನ್ನು ದೇವತೆಗಳು ನಿಲ್ಲಿಸಿದರು. ಪರಶುರಾಮರು ಭೀಷ್ಮರನ್ನು ಯುದ್ಧದಲ್ಲಿ ಜಯಿಸಿ-ದರೂ ಕೊಲ್ಲದೆ ಸಂರಕ್ಷಿಸಿ ಅಪಾರ ಕೀರ್ತಿಯನ್ನು ಕರುಣಿಸಿದರು[೧]. ಹಠಬಿಡದ ಅಂಬೆ, ಕೋಪತಪ್ತಳಾಗಿ ಭೀಷ್ಮರನ್ನು ಕೊಲ್ಲಲು ಸಂಕಲ್ಪಿಸಿ, ಅದಕ್ಕೆಂದು ಪುರುಷತ್ವವನ್ನು ಬಯಸಿ, ಶಿವನನ್ನು ಕುರಿತು ತಪಸ್ಸನ್ನು ಆಚರಿಸಿದಳು[೨]. ಅವಳ ತಪಸ್ಸಿಗೆ ಪ್ರೀತನಾಗಿ ಶಿವ ''ನಿನಗೆ ಕಾಲಾಂತರದಲ್ಲಿ ಪುರುಷದೇಹ ಲಭಿಸುವುದು'' ಎಂದು ಹೇಳಿ, ಮಾಲೆಯೊಂದನ್ನು ಕೊಟ್ಟು ''ಈ ಮಾಲೆ ಧರಿಸುವವನೇ ಮುಂದೆ ಭೀಷ್ಮನನ್ನು ಸಂಹರಿಸುವನು'' ಎಂದು ತಿಳಿಸಿದನು. ಆ ಮಾಲೆಯನ್ನು ಹಿಡಿದುಕೊಂಡು ಅಂಬೆ ಅನೇಕ ರಾಜರ ಬಳಿ ಹೋಗಿ ಮಾಲೆಯ ವಿಷಯ ತಿಳಿಸಿ ಅದನ್ನು ಧರಿಸಲು ಕೇಳಿಕೊಂಡಳು. ಆದರೆ ಭೀಷ್ಮರ ಭಯದಿಂದಾಗಿ ಯಾರೊಬ್ಬರೂ ಅದನ್ನು [೩]ಧರಿಸಲು ಒಪ್ಪಲಿಲ್ಲ , ನಿರಾಶಳಾದ ಅಂಬೆ ಅದನ್ನು ದ್ರುಪದನ ಮನೆಯ ಬಾಗಿಲಲ್ಲಿರಿಸಿ ಹೊರಟುಹೋದಳು ; ಯೋಗಶಕ್ತಿಯಿಂದ ದೇಹವನ್ನೂ ತೊರೆದಳು.

---

೧. ಪರಶುರಾಮರನ್ನು ಭೀಷ್ಮರು ಜಯಿಸಿದರೆಂದೇ ಜನ ತಪ್ಪಾಗಿ ತಿಳಿದಿರುವುದುಂಟು. ವಸ್ತುಸ್ಥಿತಿ ಹಾಗಲ್ಲ ; ಯುದ್ಧವನ್ನು ಆರಂಭಿಸುವ ಮುನ್ನವೇ ಭೀಷ್ಮರು ಪರಶುರಾಮರ ರಥದ ಬಳಿಗೆ ತೆರಳಿ ಪ್ರದಕ್ಷಿಣೆ ಮಾಡಿ ರಕ್ಷಿಸಲು ಪ್ರಾರ್ಥಿಸಿಕೊಂಡಾಗ ಪರಶುರಾಮರು ಅವರಿಗೆ ಅಭಯ ನೀಡಿದ ವಿವರ ಮಹಾಭಾರತದಲ್ಲಿದೆ; ಹಾಗೆ ಅಭಯವನ್ನು ನೀಡಿದ್ದರಿಂದಲೇ ಅವರನ್ನು ಗೆಲ್ಲಲು, ಕೊಲ್ಲಲು ಅವರು ಬಯಸಲಿಲ್ಲ ಎಂಬುದು ಮುಖ್ಯಭಾವ. ಈ ರಹಸ್ಯವನ್ನು ತಿಳಿಯದವರು ಪರಶುರಾಮರು ಭೀಷ್ಮರನ್ನು ಗೆಲ್ಲಲು ಶಕ್ತರಾಗಲಿಲ್ಲ ಎಂದು ತಪ್ಪಾಗಿ ಭಾವಿಸುವರು. ಪರಶುರಾಮರೂಪವು ಶ್ರೀಹರಿಯ ದಶಾವತಾರಗಳಲ್ಲೊಂದು ; ಎಂದರೆ ಅವರು ಸಾಕ್ಷಾತ್ ಭಗವಂತ. ಭೀಷ್ಮರು ಒಬ್ಬ ವಸುದೇವತೆ ಮಾತ್ರ; ಎಂದಮೇಲೆ ಭೀಷ್ಮರು ಅವರಿಗೆ ಯಾವ ರೀತಿಯಲ್ಲಿ ತಾನೆ ಸವಾಲೆನ್ನಿಸಲು ಸಾಧ್ಯ? ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಪರಶುರಾಮರ ಅಪಾರವಾದ ಕಾರುಣ್ಯ ಹಾಗೂ ಭಕ್ತವಾತ್ಸಲ್ಯ. ಶಿಷ್ಯನಾಗಿ ತಮ್ಮೊಡನೆ ನೇರವಾಗಿ ಯುದ್ಧಕ್ಕೆ ನಿಂತ ಭೀಷ್ಮರ ತಪ್ಪನ್ನು ಅವರು ಮನ್ನಿಸಿದ ಪರಿ ಅತ್ಯಂತ ಅಪೂರ್ವವಾದುದು. ಅದನ್ನೇ ಶ್ರೀಜಗನ್ನಾಥದಾಸರು 'ಬಾಣದಲಿಟ್ಟ ಭೀಷ್ಮನ ಅವಗುಣಗಳೆಣಿಸಿದನೆ ಕರುಣಾಳು'(ಹರಿಕಥಾಮೃತಸಾರ ೨/೮) ಎಂದು ಬಣ್ಣಿಸಿರುವರು. ಮುಂದೆ ಕುರುಕ್ಷೇತ್ರದಲ್ಲಿ ಭೀಷ್ಮರು ಶ್ರೀಕೃಷ್ಣರೂಪದ ಶ್ರೀಹರಿಯ ಮೇಲೂ ಹೀಗೆ ಬಾಣಗಳನ್ನು ಪ್ರಯೋಗಿಸಿದ ವಿವರ ಸುಪ್ರಸಿದ್ಧ. ದಾಸರ ಮಾತು ಈ ಎರಡು ಪ್ರಸಂಗಗಳಿಗೂ ಅನ್ವಯಿಸುವುದು ಎಂದು ತಿಳಿಯಬೇಕು.

೨. ಅಂಬೆಯು ಪರಶುರಾಮರನ್ನು ಶರಣುಹೊಂದಿಯೂ ತನ್ನ ಬಯಕೆಯನ್ನು ಈಡೇರಿಸಿಕೊಳ್ಳಲಾಗಲಿಲ್ಲ ಎಂಬಲ್ಲಿ ಪರಶುರಾಮರ ಬಗ್ಗೆ ತಪ್ಪುಕಲ್ಪನೆ ಉಂಟಾಗುವ ಸಂಭವವಿದೆ. ಆದರೆ ಅವರು ನಿಜಕ್ಕೂ ಪರಮಕರುಣಾಶೀಲರಾದ್ದರಿಂದ ತಮ್ಮನ್ನು ಶರಣುಹೊಕ್ಕ ಅಂಬೆಗೆ ಅನುಗ್ರಹವನ್ನೇ ಮಾಡಿದರು. ಆ ಜನ್ಮದಲ್ಲಿ ಅವಳಿಗೆ ಪತಿಯೊಂದಿಗೆ ಯೋಗವಾಗಕೂಡದು ಎಂಬ ಬ್ರಹ್ಮದೇವರ ಶಾಪವನ್ನು ಮನ್ನಿಸಲೆಂದು ಆ ಜನ್ಮದಲ್ಲಿಯೇ ಅವಳಿಗೆ ಭೀಷ್ಮರೊಂದಿಗೆ ವಿವಾಹಮಾಡಿಸುವ ಕಾರ್ಯವನ್ನು ಮಾಡಲಿಲ್ಲ. ಆದರೆ ಅವಳ ಮರಣಾನಂತರ ಮೂಲರೂಪವನ್ನು ಸೇರಿ ಮುಂಚಿನಂತೆ ತನ್ನ ಪತಿಯಾದ ದ್ಯು ನಾಮಕ ವಸುವಿನ ಜೊತೆಗೂಡುವ ಸೌಭಾಗ್ಯವನ್ನು ಪಡೆಯುವಂತೆ ಅನುಗ್ರಹಿಸಿದರು. ಇದು ಪರಶುರಾಮರ ಅನುಗ್ರಹದ ಫಲ. ಇಲ್ಲವಾಗಿದ್ದಲ್ಲಿ ಅವಳು ತಾರೆಯಂತೆ ಮರಣಾನಂತರವೂ ಅನೇಕವರ್ಷಗಳ ಕಾಲ ಮೂಲರೂಪವನ್ನು ಸೇರಲಾಗದಂತಹ ದುಃಸ್ಥಿತಿಗೆ ಒಳಗಾಗುವ ಅಪಾಯವಿತ್ತು ಎಂದು ತಿಳಿಯಬೇಕು.

೩. ಆ ಮಾಲೆಯನ್ನು ದ್ರುಪದ ತನ್ನ ಕೋಶದಲ್ಲಿ ಸುರಕ್ಷಿತವಾಗಿ ಇರಿಸಿದ. ಮುಂದೆ ದ್ರೌಪದೀ ಸ್ವಯಂವರ ಕಾಲದಲ್ಲಿ ದ್ರೌಪದಿಯು ಅರ್ಜುನನ ಕೊರಳಲ್ಲಿ ಹಾಕಿದ ಮಾಲೆ ಇದೇ ಆಗಿತ್ತು. ಶಿವನ ಮಾತಿನಂತೆ ಅದನ್ನು ಧರಿಸಿದ ಅರ್ಜುನನಿಂದಲೇ ಭೀಷ್ಮರ ಅವಸಾನವಾಯಿತು ಎಂಬ ವಿಶೇಷಾಂಶ ಶ್ರೀವಾದಿರಾಜರ ವ್ಯಾಖ್ಯಾನದಲ್ಲಿದೆ.

## ಶಿಖಂಡಿಯಾದ ಅಂಬೆ

ಇದೇ ಸಮಯದಲ್ಲಿ ಪುತ್ರಾರ್ಥಿಯಾದ ದ್ರುಪದರಾಜ ಶಿವನನ್ನು ಕುರಿತು ತಪೋನಿರತನಾಗಿದ್ದ. ಶಿವ ''ನಿನಗೆ ಹೆಣ್ಣು ಮಗುವೊಂದು ಜನಿಸಿ, ಅನಂತರ ಅದೇ ಗಂಡಾಗುವುದು'' ಎಂದು ವರನೀಡಿದ. ಅದರಂತೆ ಜನಿಸಿದ ಹೆಣ್ಣುಮಗುವಿಗೆ 'ಶಿಖಂಡಿನೀ'[೧] ಎಂದು ಹೆಸರಿಟ್ಟ. ಭೀಷ್ಮರನ್ನು ಕೊಲ್ಲುವ ಹಠತೊಟ್ಟ ಅಂಬೆಯೇ ಈ ಶಿಖಂಡಿನೀ; ಗಂಡುಮಗುವಿನಂತೆಯೇ ಬೆಳೆಸಿ, ಪ್ರಾಪ್ತವಯಸ್ಕಳಾದಾಗ ದಶಾರ್ಣದೇಶದ ರಾಜನ ಮಗಳೊಂದಿಗೆ ಮದುವೆಯನ್ನೂ ಮಾಡಿದ. ಮದುವೆಯಾದ ಕೂಡಲೇ ತನ್ನ ಗಂಡ ಗಂಡೇ ಅಲ್ಲವೆಂಬುದನ್ನು ರಾಜಕುಮಾರಿ ತಿಳಿದು, ಅದನ್ನು ತನ್ನ ತಾಯಿಗೆ ತಿಳಿಸಿದಳು. ಅನಂತರ ಕ್ರಮೇಣ ಅದು ದಶಾರ್ಣರಾಜನಿಗೂ ತಿಳಿದು, ಅವನು ಕೋಪತಪ್ತನಾಗಿ, ದ್ರುಪದನ ಮೇಲೆ ಯುದ್ಧವನ್ನೇ ಘೋಷಿಸಿ ಸೈನ್ಯಸಮೇತನಾಗಿ ತೆರಳಿದ. ಆದರೆ ದ್ರುಪದರಾಜ ರುದ್ರದೇವರ ಮಾತಿನ ಮೇಲೆ ಗಾಢವಿಶ್ವಾಸವಿರಿಸಿ, ತನ್ನ ಮಗಳನ್ನು ಗಂಡೆಂದೇ ವಾದಿಸಿದ. ''ಬೇಕಾದರೆ ಪರೀಕ್ಷಿಸಿ ನೋಡು. ಹುಡುಗಿಯ ಮಾತು ಕೇಳಿಕೊಂಡು ಯುದ್ಧಕ್ಕೆ ಬಂದಿರುವ ನೀನೆಂತು ರಾಜ್ಯವಾಳುವಿ'' ಎಂದು ಮೂದಲಿಸಿದ. ಇಷ್ಟೆಲ್ಲ ಮಾಡಿದ್ದರೂ, ಪರೀಕ್ಷಿಸಿದಾಗ ನಿಜಸ್ಥಿತಿ ಹೊರಬೀಳುವುದೆಂಬ ಚಿಂತೆಯಲ್ಲಿದ್ದ ತನ್ನ ತಂದೆತಾಯಿಗಳ ದುಃಖವನ್ನು ಗಮನಿಸಿದ ಶಿಖಂಡಿನೀ ಅವರಿಗಾಗುವ ಅವಮಾನವನ್ನು ತಪ್ಪಿಸಲೆಂದು ಮನೆಯನ್ನು ತ್ಯಜಿಸಿ, ಕಾಡಿಗೆ ಹೋಗಿ ದುಃಖಿಸುತ್ತಾ ಕುಳಿತುಕೊಂಡಳು. ಅವಳ ದುಃಖವನ್ನು ಕಂಡು ಅಲ್ಲಿದ್ದ ತುಂಬುರು ಎಂಬ ಗಂಧರ್ವನು ಕಾರಣವನ್ನು ಕೇಳಿ, ಮನಸ್ಸು ಕರಗಿದವನಾಗಿ, ತನ್ನ ದೇಹವನ್ನು ಅವಳಿಗೆ ಕೊಟ್ಟು , ಅವಳ ದೇಹವನ್ನು ತಾನು ಸ್ವೀಕರಿಸಿದ. ತನ್ನ ದೇಹವನ್ನು ಮಾರನೇ ದಿನ ಹಿಂದಿರುಗಿಸಲು ಹೇಳಿ ಕಳುಹಿಸಿಕೊಟ್ಟ. ಅನಂತರ ಅವಳು ಮನೆಗೆ ಬಂದು ತಂದೆ ತಾಯಿಗಳಿಗೆ ನಡೆದ ವಿಷಯ ತಿಳಿಸಿದಾಗ ಅವರು ತುಂಬಾ ಸಂತೋಷಿಸಿದರು. ಅನೇಕ ಉಪಾಯಗಳಿಂದ ಅವಳನ್ನು ಪರೀಕ್ಷಿಸಿದ ಮಾವ, ಅವನು ಗಂಡು ಎಂಬುದನ್ನು ಖಚಿತಪಡಿಸಿಕೊಂಡು, ತನ್ನ ದುಡುಕಿಗೆ ನಾಚಿ ತನ್ನ ಪಟ್ಟಣಕ್ಕೆ ಹಿಂದಿರುಗಿದ.

---

೧. ಭೀಷ್ಮರ ಸಂಹಾರಕ್ಕೆ ನೆರವಾಗಲೆಂದು ಪುರುಷತ್ವವನ್ನು ಬಯಸಿ ಶಿವನನ್ನು ಕುರಿತು ತಪಸ್ಸುಮಾಡಿದ್ದರೂ ಅವಳಿಗೆ ಪುರುಷದೇಹ ಲಭಿಸಲಿಲ್ಲ. ಅದಕ್ಕೆ ಕಾರಣ ಹೀಗಿದೆ. ಜೀವರಲ್ಲಿ ಸ್ವರೂಪತಃ ಪುರುಷರು, ಸ್ತ್ರೀಯರು ಎಂಬ ಪ್ರಭೇದವಿದೆ. ಅದರಂತೆ ಪುರುಷಜೀವರು ಸದಾ ಪುರುಷರೇ ಆಗಿಯೂ ಸ್ತ್ರೀಜೀವರು ಸದಾ ಸ್ತ್ರೀಯರೇ ಆಗಿಯೂ ಜನಿಸುವರು. ವರ, ಶಾಪ ಮೊದಲಾದ ಕಾರಣಗಳಿಂದ ಪುರುಷಜೀವರಿಗೆ ಒಮ್ಮೊಮ್ಮೆ ಸ್ತ್ರೀದೇಹವು ಒದಗುವುದುಂಟು ; ಇದಕ್ಕೆ ಶ್ರೀಕೃಷ್ಣನ ಅಂಗಸಂಗದ ಭಾಗ್ಯಕ್ಕಾಗಿ ಶ್ರೀಕೃಷ್ಣಪತ್ನಿಯರಾಗಲೆಂದು ಸ್ತ್ರೀದೇಹ ಪಡೆದ ಅಗ್ನಿಪುತ್ರರು ನಿದರ್ಶನ. ಆದರೆ ಸ್ತ್ರೀಜೀವರಿಗೆಂದೂ ಪುರುಷದೇಹವು ವರ ಮೊದಲಾದ ಎಂತಹ ಪ್ರಬಲಕಾರಣಗಳಿಂದಲೂ ಸಹ ಸರ್ವಥಾ ಲಭಿಸದು. ಅದಕ್ಕೆಂದೇ ಅವಳು ಹಾಗೆ ತಪಸ್ಸುಮಾಡಿ ಪ್ರಾರ್ಥಿಸಿಕೊಂಡರೂ ಪುರುಷತ್ವವನ್ನು ನೀಡದೆ ಮುಂದೆ ಪುರುಷದೇಹದಲ್ಲಿ ನೆಲೆಸುವಂತಾಗುವುದು ಎಂಬ ವರವನ್ನು ಶಿವ ನೀಡಿದ್ದ ಎಂದು ತಿಳಿಯಬೇಕು.

ಇತ್ತ ಸ್ತ್ರೀವೇಷದಲ್ಲಿ ತುಂಬುರು ಕಾಡಿನಲ್ಲಿದ್ದಾಗ, ಅಲ್ಲಿಗೆ ಅವನ ಒಡೆಯನಾದ ಕುಬೇರ ಆಗಮಿಸಿದ. ಅವನಿಗೆ ತನ್ನ ಅವಸ್ಥೆಯನ್ನು ತೋರಿಸಲು ನಾಚಿ ತುಂಬುರು ಅಡಗಿಕೊಳ್ಳಲು ಯತ್ನಿಸಿದ. ಅದನ್ನು ಗಮನಿಸಿದ ಕುಬೇರ ವಿಚಾರಿಸಿ ವಿಷಯ ತಿಳಿದು - "ನೀನು ಆ ಕನ್ಯೆಯು [೧]ಯುದ್ಧದಲ್ಲಿ ಮೃತಳಾಗುವವರೆಗೂ ಹೀಗೆಯೇ ಇರು" ಎಂದು ಶಪಿಸಿದ.

ಮಾರನೇ ದಿನ ದೇಹವನ್ನು ಹಿಂದಿರುಗಿಸಲು ಬಂದ ಶಿಖಂಡಿನಿಗೆ ಎಲ್ಲ ವಿಷಯವನ್ನು ತಿಳಿಸಿದ ತುಂಬುರು, ಆ ದೇಹವನ್ನೇ ಹೊಂದಿರಲು ತಿಳಿಸಿ ಕಳುಹಿಸಿಕೊಟ್ಟ. ಅನಂತರ ಶಿಖಂಡೀ ಎಂಬ ಹೆಸರಿನಿಂದ ಅಸ್ತ್ರಶಸ್ತ್ರಪ್ರವೀಣನಾಗಿ ಶಿಖಂಡಿನೀ ಬೆಳೆದಳು. ಹೀಗೆ ಹೆಣ್ಣಾಗಿ ಜನಿಸಿದ ಶಿಖಂಡಿನೀ ಶಿಖಂಡೀ ಎನ್ನಿಸಿ ಲೋಕದ ಕಣ್ಣಿಗೆ ಗಂಡೆಂದೇ ಕಾಣುತ್ತಿದ್ದಳು. ವಾಸ್ತವವಾಗಿ ಅವಳು ನೆಲೆಸಿದ್ದು ತುಂಬುರುವಿನ ಪುರುಷದೇಹದಲ್ಲಿಯೇ ಹೊರತು ತಾನೇ ಪುರುಷದೇಹವನ್ನು ಪಡೆದು ಅಲ್ಲ.

## ಧೃತರಾಷ್ಟ್ರ - ಪಾಂಡು

ಇಬ್ಬರು ಹೆಂಡಿರನ್ನು ಪಡೆದ ವಿಚಿತ್ರವೀರ್ಯ ಅನೇಕ ವರ್ಷಗಳ ಕಾಲ ಸುಖಿಸಿದ. ಅತಿಯಾದ ಭೋಗಲಾಲಸೆ ಎಂದೂ ಒಳಿತಲ್ಲವೆಂಬ ಮಾತು ವಿಚಿತ್ರವೀರ್ಯನ ವಿಷಯದಲ್ಲಿ ನಿಜವಾಯಿತು. ಕ್ಷಯರೋಗದಿಂದ ಪೀಡಿತನಾಗಿ ಬಳಲಿದ ಅವನು ಬಹಳ ದಿನ ಬದುಕಲಿಲ್ಲ. ಹೀಗೆ ಸತ್ಯವತಿಯ ಇಬ್ಬರು ಮಕ್ಕಳೂ ಒಂದಲ್ಲ ಒಂದು ಕಾರಣದಿಂದ ಮೃತರಾದರು. ಮೊದಲನೆಯನವನಿಗೆ ಇನ್ನೂ ಮದುವೆಯೇ ಆಗಿರಲಿಲ್ಲ; ಎರಡನೆಯವನಿಗೆ ಮಕ್ಕಳಾಗಿರಲಿಲ್ಲ. ಎಷ್ಟೇ ಬಗೆಯಿಂದ ಹೇಳಿದರೂ ಭೀಷ್ಮ ತಮ್ಮ ಪ್ರತಿಜ್ಞೆಯನ್ನು ಪಾಲಿಸಲೆಂದು ರಾಜ್ಯವಾಳಲು ಒಪ್ಪಲಿಲ್ಲ. ರಾಜನಿಲ್ಲದ ರಾಜ್ಯ ಹೇಗೆ ತಾನೇ ಉಳಿಯಬಲ್ಲದು? ಚಿಂತೆಗೀಡಾದ ತಾಯಿ ಸತ್ಯವತಿ ಭೀಷ್ಮ ಮೊದಲಾದವರಿಗೆ ವಿಷಯವನ್ನು ತಿಳಿಸಿ, ತನ್ನ ಮಗ ಕೃಷ್ಣದ್ವೈಪಾಯನರನ್ನು ಸ್ಮರಿಸಿದಳು. ಜಗತ್ತಿಗೆ ತಂದೆಯಾದ, ಮುಪ್ಪುಸಾವುಗಳನ್ನು ನಾಶಮಾಡುವ ಸ್ವಾಮಿಯಾದ, ಲೋಕದ ಎಲ್ಲ ಆಗುಹೋಗುಗಳನ್ನು ಬಲ್ಲಂತಹ ಸರ್ವಜ್ಞರಾದ ಶ್ರೀವೇದವ್ಯಾಸರು ಕೂಡಲೇ ಕಾಣಿಸಿಕೊಂಡರು. ಭೀಷ್ಮಾದಿ ಪ್ರಮುಖರೆಲ್ಲ ಪರಮಾನಂದದಿಂದ ಅವರನ್ನು ಸ್ವಾಗತಿಸಿದರು. ತಾಯಿ ಸತ್ಯವತಿಯು ಮಗನನ್ನು ಆದರಿಸಿದಳು; ನಡೆದ ವಿಷಯವನ್ನೆಲ್ಲ ತಿಳಿಸಿ, "ಇಂತಹ ಪ್ರಸಂಗದಲ್ಲಿ ವಂಶವನ್ನುಳಿಸುವ ಹೊಣೆಯನ್ನು ನೀನು ವಹಿಸಿಕೊಳ್ಳಬೇಕು. ಹೇಗೂ ವಿಚಿತ್ರ-ವೀರ್ಯ ನಿನಗೆ ತಮ್ಮ. ಆಪತ್ಕಾಲದಲ್ಲಿ ತಮ್ಮನ ಪತ್ನಿಯಲ್ಲಿ [೨]ಸಂತಾನವನ್ನು ಪಡೆಯುವುದು ಶಾಸ್ತ್ರಸಮ್ಮತ. ಆದ್ದರಿಂದ ನಿನ್ನಿಂದ ಅಂತಹ ಉಪಕಾರ ಲೋಕಹಿತಕ್ಕಾಗಿ ಈಗ ಅಗತ್ಯವಾಗಿದೆ." ಸತ್ಯವತಿಯ ಪ್ರಾರ್ಥನೆಗೆ ಭೀಷ್ಮಾದಿಗಳೂ ದನಿಗೂಡಿಸಿದರು.

---

೧. ಕುರುಕ್ಷೇತ್ರಯುದ್ಧದ ಹದಿನೆಂಟನೆಯ ದಿನದ ಮಧ್ಯರಾತ್ರಿಯಲ್ಲಿ ಈ ಶಿಖಂಡಿಯು ಅಶ್ವತ್ಥಾಮರಿಂದ ಹತನಾಗುವನು. ಅಂದಿನಿಂದ ಪುನಃ ತುಂಬುರುವಿಗೆ ಅವನ ದೇಹವು ಮರಳಿ ಲಭಿಸುವುದು ಎಂದರ್ಥ.

೨. ಹೀಗೆ ಸಂತತಿ ಪಡೆಯುವುದಕ್ಕೆ 'ನಿಯೋಗಪದ್ಧತಿ' ಎಂದು ಹೆಸರು ; ಇದು ಕಲಿಯುಗದಲ್ಲಿ ನಿಷಿದ್ಧ ಎಂಬ ಮಾತು ಸ್ಮೃತಿಗಳಲ್ಲಿ ಬಂದಿದೆ.

ಭಗವಂತ ನುಡಿದ : "ಅಮ್ಮಾ ! ಮಹಾಲಕ್ಷ್ಮಿಯ ಹೊರತು ನನ್ನ ಸ್ಪರ್ಶಕ್ಕೆ ಅರ್ಹತೆ ಹೊಂದಿದ ಬೇರೊಬ್ಬ ಸ್ತ್ರೀ ದೇವಲೋಕದಲ್ಲೂ ಇಲ್ಲ. ಆದರೂ ನಿನ್ನ ಮಾತನ್ನು ನಡೆಸುವೆ. ರಮಾ ಸನ್ನಿಧಾನಕ್ಕಾಗಿ ನಿನ್ನ ಸೊಸೆ ಒಂದು ವರ್ಷಕಾಲ ವ್ರತವನ್ನಾಚರಿಸಲಿ. ಆಗ ಮಾತ್ರ ನಿನ್ನ ಅಪೇಕ್ಷೆ ಈಡೇರುವುದು." "ಅದಾಗದು. ರಾಜನಿಲ್ಲದೆ ರಾಜ್ಯ ಉಳಿಯಲಾರದು" ಎಂದು ಸತ್ಯವತಿ ಆತಂಕ ವ್ಯಕ್ತಪಡಿಸಿ ಕೂಡಲೇ ಸಂತತಿಯನ್ನು ಕರುಣಿಸಲು ಕೇಳಿಕೊಂಡಳು. "ಹಾಗಿದ್ದಲ್ಲಿ ತುಂಬಾ ಸೌಮ್ಯರೂಪದ ನಾನು ನಿನ್ನ ಸೊಸೆ ಬಳಿ ಬಂದಾಗ ಅತಿ ಭೀಕರನಾಗಿ ಗೋಚರಿಸುವೆ ; ಅದನ್ನು ತಡೆದುಕೊಂಡರೆ ಮಾತ್ರ ಗುಣಾಢ್ಯನೂ, ಬಲಶಾಲಿಯೂ ಆದ ಮಗನು ಜನಿಸುವನು" ಎಂದು ಅವರು ನಿಬಂಧನೆಯನ್ನು ಮುಂದಿಟ್ಟರು. ಅದಕ್ಕೆ ಒಪ್ಪಿದ ಸತ್ಯವತಿಯು ಹಿರಿಯ ಸೊಸೆ ಅಂಬಿಕೆಯನ್ನು ಎಚ್ಚರಿಕೆ ಹೇಳಿ ಶ್ರೀವೇದವ್ಯಾಸರ ಬಳಿ ಕಳುಹಿಸಿಕೊಟ್ಟಳು. ಹೆಚ್ಚಿನ ಆಸೆ ಆಕಾಂಕ್ಷೆಗಳನ್ನು ಹೊತ್ತು ಒಳಬಂದ ಅಂಬಿಕೆ ಶ್ರೀವೇದವ್ಯಾಸರ ಭಯಾನಕರೂಪವನ್ನು ನೋಡಿ ಗಾಬರಿಗೊಂಡು ಕಣ್ಣುಗಳನ್ನು ಮುಚ್ಚಿಕೊಂಡಳು. ಅವಳ ಆ [೧]ತಪ್ಪಿನಿಂದಾಗಿ ಅವಳಿಗೆ ಕುರುಡಮಗು ಜನಿಸಿತು. ಅವನೇ 'ಧೃತರಾಷ್ಟ್ರ'. ಧೃತರಾಷ್ಟ್ರನೆಂಬ ಗಂಧರ್ವನೇ ಹಾಗೆ ಅವತರಿಸಿ ಬಂದಿದ್ದ. ವಾಯುವಿನ ಆವೇಶವನ್ನು ಹೊಂದಿದ್ದ ಅವನು ಬಲಾಢ್ಯನಾಗುವಂತೆ ಶ್ರೀವೇದವ್ಯಾಸರು ವರವಿತ್ತರು.

ಮಗು ಕುರುಡೆಂಬುದನ್ನು ಗಮನಿಸಿದ ಸತ್ಯವತಿ, ಇನ್ನೊಬ್ಬ ಮಗನನ್ನು ಅಂಬಾಲಿಕೆಯಲ್ಲಿ ಹುಟ್ಟಿಸಲು ಕೋರಿದಳು. ಅವಳೂ ಸಹ ವ್ಯಾಸರ ಭಯಾನಕರೂಪವನ್ನು ಕಂಡು ಬೆಚ್ಚಿದಳು. ಅಕ್ಕನಿಗಾದ ಅವಸ್ಥೆಯಿಂದಾಗಿ ಕಣ್ಣು ಮುಚ್ಚುವುದನ್ನು ಪ್ರಯತ್ನಪೂರ್ವಕ ತಡೆದುಕೊಂಡಳು. ಆದರೆ ಭಯದಿಂದಾಗಿ ಅವಳ ಮೈ ಬಿಳಿಚಿಕೊಂಡಿತು. ಪರಾವಹನೆಂಬ ಗಂಧರ್ವ, ವಾಯುವಿನ ಆವೇಶದಿಂದ ಕೂಡಿಕೊಂಡು ಅವಳಿಗೆ ಮಗುವಾಗಿ ಜನಿಸಿದ. ಅವಳ ತಪ್ಪಿನಿಂದಾಗಿ ಮೈಯೆಲ್ಲ ಬಿಳಿಚಿಕೊಂಡಿದ್ದ ಆ ಮಗುವಿಗೆ 'ಪಾಂಡು[೨]' ಎಂದೇ ಹೆಸರಾಯಿತು. ಮಗುವಿನ ಬಿಳಿ ಬಣ್ಣವನ್ನು ಗಮನಿಸಿ, ಚಿಂತೆಗೀಡಾದ ಸತ್ಯವತಿ, ಯಾವುದೇ ದೋಷವಿಲ್ಲದ

---

೧. ವ್ಯಕ್ತಿಯ ಸಹಜಸಾಮರ್ಥ್ಯವೇನೇ ಇದ್ದರೂ ತಾಯಿತಂದೆಯರ ತಪ್ಪು, ದೇಶಕಾಲಗಳ ಪ್ರಭಾವ ಹಾಗೂ ತಮ್ಮ ಪೂರ್ವಾರ್ಜಿತಕರ್ಮ ಮೊದಲಾದ ಕಾರಣಗಳಿಂದ ಕುರುಡುತನ ಮೊದಲಾದ ದೋಷಗಳಿಗೆ ಒಳಗಾಗುವನು ಎಂಬ ವಿಶೇಷನಿರ್ಣಯವನ್ನು ಶ್ರೀಮಧ್ವಾಚಾರ್ಯರು ತಿಳಿಸಿರುವರು. ಅಂಬಿಕೆ ಕಣ್ಣುಮುಚ್ಚಿಕೊಂಡಿದ್ದರಿಂದ ಅವಳ ಮಗನಾದ ಧೃತರಾಷ್ಟ್ರ ಕುರುಡಾದ. ಅಂಬಾಲಿಕೆಯ ಮಗ ಪಾಂಡು ಬಿಳಿಮೈಯ್ಯವನಾದ. ಇದು ತಂದೆತಾಯಿಗಳು ತಮ್ಮ ಮಕ್ಕಳ ವಿಚಾರದಲ್ಲಿ ವಹಿಸಬೇಕಾದ ಎಚ್ಚರಿಕೆಯನ್ನು ತಿಳಿಸುವ ಪ್ರಸಂಗ. ತಂದೆತಾಯಿಗಳ ಮಧುಮೇಹ ಮೊದಲಾದ ರೋಗಗಳು ಮಕ್ಕಳಿಗೆ ಒದಗುವ ಪ್ರಸಂಗವೂ ಸಹ ಇದಕ್ಕೆ ನಿದರ್ಶನ ಎಂದು ತಿಳಿಯಬಹುದು.

೨. ಪಾಂಡುವಿನ ದೇಹ ಈ ಕಾರಣದಿಂದ ಬಿಳಿಚಿಕೊಂಡಿದ್ದಿತೇ ಹೊರತು ಅದು ಒಂದು ರೋಗವಾಗಿರಲಿಲ್ಲ; ಹಾಗೆ ಚರ್ಮರೋಗವಿದ್ದ ದೇವಾಪಿಯನ್ನು ರಾಜ್ಯಕ್ಕೆ ಅನರ್ಹ ಎಂದು ನಿಶ್ಚಯಿಸಿದ ಪ್ರಸಂಗ ಈಗಾಗಲೇ ಬಂದಿದೆ. ಅದು ರೋಗವಾಗಿದ್ದಲ್ಲಿ ಪಾಂಡುವು ರಾಜನಾಗಲು ಸಾಧ್ಯವಾಗುತ್ತಿರಲಿಲ್ಲ.

ಇನ್ನೊಬ್ಬ ಮಗನನ್ನು ಅನುಗ್ರಹಿಸಲು ಪ್ರಾರ್ಥಿಸಿ, ಅವರ ಬಳಿಗೆ ಇನ್ನೊಮ್ಮೆ ತೆರಳಿ ಭಕ್ತಿಯಿಂದ ಉಪಾಸನೆ ಮಾಡಲು ಅಂಬಿಕೆಗೆ ಆಜ್ಞಾಪಿಸಿದಳು. ಆದರೆ ಭಗವಂತನ ಇಚ್ಛೆ ವಿಚಿತ್ರವಾದುದು. ಅವಳಿಗೆ ಆ ಮುಂಚಿನ ಅನುಭವ ಕಣ್ಣಿಗೆ ಕಟ್ಟಿದಂತಿತ್ತು. ಅದರಿಂದಾಗಿ ಇನ್ನೊಮ್ಮೆ ಅವರ ಬಳಿಗೆ ಹೋಗುವ ಧೈರ್ಯ ಸಾಲದಾಯಿತು. ಅದರೊಂದಿಗೆ ಕೆಟ್ಟ ಬುದ್ಧಿಯೂ ಹುಟ್ಟಿ ತನ್ನ ಬದಲಿಗೆ ತನ್ನ ದಾಸಿಯನ್ನು ಆ ಕಾರ್ಯಕ್ಕೆ ನಿಯೋಜಿಸಿದಳು. ಭಗವಂತನ ಮಾಯೆ ಎಂದರೆ ಇದೇ ! ಅವಳಿಗೆ ತನ್ನ [೧] ಒಡವೆ ವಸ್ತ್ರಗಳನ್ನು ನೀಡಿ ಕಳುಹಿಸಿಕೊಟ್ಟಳು ; ಸ್ವಭಾವತಃ ಭಗವದ್ಭಕ್ತಳಾದ ಅವಳು ಮಾತ್ರ ಅವರ ಭೀಕರರೂಪದಿಂದ ಕಂಗೆಡದೆ ಆದರದಿಂದ ಸೇವಿಸಿದಳು. ಅವಳಲ್ಲಿ ಗುಣಗಳ ಖಣಿ ಎನ್ನಿಸಿದ ವಿದುರ ಜನ್ಮತಾಳಿದ.

## ವಿದುರನ ಕಥೆ

ಹಿಂದೊಮ್ಮೆ ಮಾಂಡವ್ಯ ಎಂಬ ಋಷಿಯ ಮನಸ್ಸಿನಲ್ಲಿ ವಸಿಷ್ಠರ ಸಾಮ್ಯ ಪಡೆಯುವ ಸಲ್ಲದ ಬಯಕೆ ಮೂಡಿತು. ಕೂಡಲೇ ಆ ಋಷಿ ಘೋರತಪಸ್ಸಿಗೆ ತೊಡಗಿದ. ತನಗೆ ಉಚಿತವಲ್ಲದ್ದಕ್ಕೆ ಕೈಹಾಕುವ ಯಾರನ್ನು ತಾನೇ ಕೇಡು ಬಿಟ್ಟಿದೆ ? ಒಂದು ದಿನ ರಾಜನ ಮನೆಯಲ್ಲಿ ಅಪಾರಸಂಪತ್ತನ್ನು ಲೂಟಿಮಾಡಿದ ಚೋರರ ತಂಡವೊಂದು, ಕಾವಲುಪಡೆಯ ಕಣ್ಣಿಗೆ ಬಿದ್ದಿತು. ಕೂಡಲೇ ಅಲ್ಲಿಂದ ಕಾಲ್ಕಿತ್ತ ಗುಂಪು ಓಡುತ್ತ, ಮಾಂಡವ್ಯರ ಬಳಿಯೇ ಬಂದು, ಅಲ್ಲಿ ಆ ಎಲ್ಲ ಸಂಪತ್ತನ್ನೂ ಸುರಿದು ಅಡಗಿಕೊಂಡಿತು. ಬೆನ್ನಟ್ಟಿಬಂದ ರಾಜಭಟರು ಮಾಂಡವ್ಯರ ಬಳಿ ಬಂದು, ''ಮಾಲು ಸಮೇತ ಸಿಕ್ಕಿಬಿದ್ದ ಕಳ್ಳ'' ಎಂದು ಅವರನ್ನು ಇತರ ಕಳ್ಳರೊಂದಿಗೆ ರಾಜನ ಬಳಿ ಹಿಡಿದೊಯ್ದರು. ರಾಜಾಜ್ಞೆಯಂತೆ ಚೋರರೊಂದಿಗೆ ಮುನಿಯನ್ನು ಸಹ ಶೂಲಕ್ಕೇರಿಸಿದರು. ಇತರ ಕಳ್ಳರು ಕೂಡಲೇ ಸತ್ತರು. ಆದರೆ ಅಸಂಪ್ರಜ್ಞಾತಸಮಾಧಿಯಲ್ಲಿ ನಿರತನಾಗಿದ್ದ ಮಾಂಡವ್ಯಮುನಿ ಮಾತ್ರ ಸಾಯಲಿಲ್ಲ. ವಿಷಯ ತಿಳಿದ ರಾಜ ಅಲ್ಲಿಗೆ ಆಗಮಿಸಿ ಅವರು ಮುನಿವರ್ಯರೆಂಬುದನ್ನು ಗುರುತಿಸಿ ಶೂಲದಿಂದ ಬಿಡುಗಡೆಮಾಡಿ ತನ್ನನ್ನು ಮನ್ನಿಸಲು ಅವರನ್ನು ಕೇಳಿಕೊಂಡ. ಆದರೆ ಶೂಲದ ತುದಿಮಾತ್ರ ಅವರ ಕಂಠದಲ್ಲಿಯೇ ಸಿಲುಕಿಕೊಂಡಿತು. ಅಂದಿನಿಂದ ಅವರಿಗೆ 'ಅಣಿಮಾಂಡವ್ಯ' ಎಂದು ಹೆಸರಾಯಿತು. ರಾಜನನ್ನು ಕ್ಷಮಿಸಿದ ಅವರು ನ್ಯಾಯಕ್ಕಾಗಿ ಯಮಧರ್ಮನನ್ನೇ ಕೇಳಿದರು - ''ಪ್ರಭು ! ಯಾವ ತಪ್ಪಿಗಾಗಿ ನನಗೆ ಈ ಶಿಕ್ಷೆ ?'' ಋಷಿಗೆ ಬುದ್ಧಿ ಕಲಿಸಲು ತಾನೇ ಹೂಡಿದ ನಾಟಕವನ್ನು ಬೆಳೆಸುತ್ತಾ ಯಮ ನುಡಿದ - ''ಹಿಂದೊಮ್ಮೆ ಚಿಕ್ಕವನಿದ್ದಾಗ ನೀನು ಒಂದು ನೊಣವನ್ನು

೧. ವೇದವ್ಯಾಸರ ಬಳಿಗೆ ತೆರಳಲು ಒಪ್ಪಿಕೊಂಡ ದಾಸಿಗೆ ಮಹಾರಾಣಿಯ ಒಡವೆ ವಸ್ತ್ರಗಳು ಲಭಿಸುವಂತಾಯಿತು. ವೇದವ್ಯಾಸರ ಸೇವೆಗೆ ತೊಡಗುವವರಿಗೆ ಅಪಾರ ಭೋಗಭಾಗ್ಯಗಳು, ಮಹಾರಾಣಿಯ ವೈಭವ ದೊರೆಯುವುದು ಎಂಬುದಕ್ಕೆ ಇದು ಉತ್ತಮ ನಿದರ್ಶನ. ಅದರಂತೆ ಅವರ ಬಳಿಗೆ ತೆರಳಲು ಸಿದ್ಧಳಾಗದ ಅಂಬಿಕೆಗೆ ಆ ಒಡವೆ ವಸ್ತ್ರಗಳನ್ನು ಇರಿಸಿಕೊಳ್ಳುವ ಭಾಗ್ಯ ಉಳಿಯಲಿಲ್ಲ. ವೇದವ್ಯಾಸರ ಸೇವೆಗೆ ತಮ್ಮನ್ನು ಒಪ್ಪಿಸಿಕೊಳ್ಳದವರಿಗೆ ಐಶ್ವರ್ಯ ಉಳಿಯಲಾರದು ಎಂಬುದಕ್ಕೂ ಇದು ಉತ್ತಮ ನಿದರ್ಶನ.

ಚಿತ್ರಹಿಂಸೆಮಾಡಿ ಕೊಂದಿರುವೆ. ಅದರ ಫಲ ಈಗ ಈ ರೀತಿ ನಿನ್ನನ್ನು ಕಾಡಿದೆ.'' ಕೋಪಗೊಂಡ ಮುನಿ ನುಡಿದ - ''ವ್ಯಕ್ತಿಯು [೧] ಹನ್ನೆರಡರ ಹೊಸ್ತಿಲು ದಾಟುವವರೆಗೂ ಅವನಿಗೆ ಪುಣ್ಯ-ಪಾಪಗಳ ಲೇಪವಿಲ್ಲ ಎಂಬುದು ಶಾಸ್ತ್ರದ ನಿಯಮ; ಅದಕ್ಕೆಲ್ಲ ಅವನ ತಂದೆತಾಯಿಗಳೇ ಹೊಣೆಗಾರರು. ಹೀಗಿದ್ದೂ ಇದಕ್ಕೆ ನನ್ನನ್ನು ಗುರಿಮಾಡಿದ ನೀನು ದಾಸೀಪುತ್ರನಾಗಿ ಜನಿಸು.'' ಶಾಪದೊಂದಿಗೆ ಋಷಿಯ ತಪಸ್ಸೂ [೨] ಕ್ಷಯಿಸಿತು. ಅವರ ಅಧಿಕಪುಣ್ಯ ನಾಶವಾಗಿ ಸದ್ಬುದ್ಧಿ ಹುಟ್ಟಿತು. ತನ್ನ ತಪ್ಪಿನ ಅರಿವಾಗಿ ಮಾಂಡವ್ಯರು ನಾಚಿದರು. ವರವಾಗಲಿರುವ ಶಾಪವನ್ನು ಯಮ ಸಂತೋಷದಿಂದ ಸ್ವೀಕರಿಸಿದ. ಆ ಯಮನೇ ಇಂದು ದಾಸೀಪುತ್ರನಾಗಿ ಹುಟ್ಟಿಬಂದ. ಇದನ್ನೆಲ್ಲ ಬಲ್ಲ ವೇದವ್ಯಾಸರು ಗಂಭೀರಸ್ವರದಲ್ಲಿ ಹೇಳಿದರು - ''ಇವನು ಮಹಾಜ್ಞಾನಿ-ಯಾಗುವನು. ಅಧ್ಯಾತ್ಮವಿದ್ಯೆಯಲ್ಲಿ ನಿರತನಾಗುವ ಇವನಿಗೆ 'ವಿದುರ' ಎಂದೇ ಹೆಸರಾಗಲಿ. ಇವನು ಧನುರ್ವಿದ್ಯೆಯಲ್ಲೂ ನೀತಿಶಾಸ್ತ್ರದಲ್ಲೂ ಕೋವಿದನೆನಿಸುವನು.'' ಆದರೇನು, ಎಷ್ಟಾದರೂ ಅವನು ದಾಸೀಪುತ್ರನೆಂಬುದನ್ನು ತಿಳಿದ ಸತ್ಯವತಿಗೆ ಸಮಾಧಾನವಾಗಲಿಲ್ಲ. ಮತ್ತೆ ಬೇಡಿಕೊಂಡಳು -''ಎರಡನೆಯ ಸೊಸೆಯಲ್ಲಿ ಇನ್ನೊಂದು ಮಗುವನ್ನು ಅನುಗ್ರಹಿಸಬೇಕು.'' ''ಅದು ಸಾಧ್ಯವಿಲ್ಲ[೩]'' ಎಂದು ನುಡಿದು ವೇದವ್ಯಾಸರು ಅದೃಶ್ಯರಾದರು.

ಮುನಿಗಳನ್ನು ಕರೆಸಿ, ಮಕ್ಕಳಿಗೆ ಸಂಭ್ರಮದಿಂದ ಜಾತಕರ್ಮಾದಿಗಳನ್ನು ಭೀಷ್ಮರು ನೆರವೇರಿಸಿದರು. ಆಗಾಗ್ಗೆ ಆಗಮಿಸುತ್ತಿದ್ದ ವೇದವ್ಯಾಸರು ಅವರಿಗೆ ಶಾಸ್ತ್ರವಿದ್ಯೆಯನ್ನು ಕರುಣಿ-ಸಿದರು. ಪಾಂಡುವಿಗೆ ಶಸ್ತ್ರವಿದ್ಯೆಯನ್ನು ಸ್ವಯಂ ಭೀಷ್ಮರೇ ಉಪದೇಶಿಸಿದರು. ತಿಳುವಳಿಕೆಯಲ್ಲಿ ಮಾತ್ರ ವಿದುರನದೇ ಮೇಲುಗೈ ಆಗಿತ್ತು. ಅಸ್ತ್ರವಿದ್ಯೆಯನ್ನು ಕರಗತ ಮಾಡಿಕೊಂಡ ಪಾಂಡು ಭೂಮಿಯನ್ನೆಲ್ಲ ಗೆಲ್ಲುತ್ತಾ ಹೊರಟ.

ಅದೇ ಸಮಯದಲ್ಲಿ ತುಂಬುರು ಗಂಧರ್ವನು ಉದ್ವಹನೆಂಬ ಮರುತ್ತಿನ ಅಂಶದಿಂದ ಕೂಡಿಕೊಂಡು ಗವದ್ಗಣ ಎಂಬ ವಿಚಿತ್ರವೀರ್ಯನ ಸೂತನ ಮಗನಾಗಿ ಜನಿಸಿದ. ಸಂಜಯ-ನೆಂದು ಅವನ ಹೆಸರು. ಅವನು ತುಂಬಾ ಬುದ್ಧಿವಂತ, ವಿದ್ಯಾವಂತ ಹಾಗೂ ವೇದವ್ಯಾಸರ

---

೧. ಮನುಷ್ಯನಿಗೆ ಹನ್ನೆರಡು ವರ್ಷ ತುಂಬುವವರೆಗೂ ಅವನು ಮಾಡುವ ಪಾಪಪುಣ್ಯಗಳ ಲೆಕ್ಕ ಅವನ ಪೋಷಕರದು ಎಂಬುದು ಅವರೆಗೂ ಇದ್ದ ಶಾಸ್ತ್ರದ ವಿಧಿ. ಮಾಂಡವ್ಯರು ಅದನ್ನು ಉಲ್ಲೇಖಿಸಿ ಅಂದಿನಿಂದ ಅದು ಹದಿಮೂರು ತುಂಬುವವರೆಗೂ ಅನ್ವಯಿಸದಿರಲಿ ಎಂದು ವಿಸ್ತರಿಸಿದರು ಎಂಬ ವಿಶೇಷ ವಿವರ ಮಹಾಭಾರತದಲ್ಲಿದೆ; ಇದು ಹದಿನಾಲ್ಕನೆಯ ವಯಸ್ಸಿನಿಂದ ಪಾಪಪುಣ್ಯಗಳ ಲೆಕ್ಕ ಪ್ರಾರಂಭವಾಗುವುದು ಎಂಬ ಕೃಷ್ಣಾಮೃತಮಹಾರ್ಣವದ ವಚನಗಳಿಗೆ ಸಂವಾದಿಯಾಗಿದೆ.

೨. ದೇವತೆಗಳೂ, ಮುನಿಗಳೂ ಕಾರಣಾಂತರದಿಂದ ಮಾಡುವ ಇಂತಹ ಅವಿಹಿತ ತಪಸ್ಸಿನ ಪುಣ್ಯ ಸ್ತೋತ್ತಮರಿಗೆ ಶಾಪ ನೀಡಿದ ಕೂಡಲೇ ಕ್ಷಯಿಸುವುದು ಎಂಬುದು ವಿಶೇಷಾಂಶ.

೩. ವೇದವ್ಯಾಸರು ಹೀಗೆ ನಾಲ್ಕನೆಯ ಮಗುವನ್ನು ನೀಡಲು ನಿರಾಕರಿಸಲು ಕಾರಣ ಮುಂದೆ ಕುಂತಿಯು ನಾಲ್ಕನೆಯ ಮಗುವನ್ನು ಪಡೆಯಲು ನಿರಾಕರಿಸುವ ಪ್ರಸಂಗದಲ್ಲಿ ಬಂದಿದೆ. ವಿವರಗಳನ್ನು ಮುಂದೆ ಕಾಣಬಹುದು.

ಶಿಷ್ಯ ; ಅವನು ವಿಶೇಷತಃ ಧೃತರಾಷ್ಟ್ರನ ಅನುಯಾಯಿ. ಗಾಂಧಾರದೇಶದ ರಾಜನ ಮಗಳೂ, ಶಕುನಿಯ ಅಕ್ಕನೂ ಆದ ಗಾಂಧಾರಿಯನ್ನು ಧೃತರಾಷ್ಟ್ರ ಮದುವೆಯಾದ[೧].

## ಕುಂತಿಯ ಕಥೆ

ಶೂರನೆಂಬ ಯಾದವರಾಜನಿಗೆ ಪೃಥೆ ಎಂಬ ಮಗಳು ಜನಿಸಿದಳು ; ವಸುದೇವ ಅವಳ ಸೋದರ. ಶೂರರಾಜ ತನ್ನ ಸ್ನೇಹಿತ ಕುಂತೀಭೋಜನಿಗೆ ತನ್ನ ಮಗಳನ್ನು ದಾನವಾಗಿತ್ತ. ಆದ್ದರಿಂದ ಪೃಥೆಗೆ ಕುಂತಿ ಎಂಬ ಹೆಸರು ಬಂತು ; ಅವಳು ಮೂಲರೂಪದಲ್ಲೂ ಪಾಂಡುರಾಜನ ಪತ್ನಿಯೇ ಆಗಿದ್ದವಳು. ಕೂರ್ಮ ಎಂಬ ಮರುತ್ತಿನ ಅವತಾರನಾದ ಕುಂತಿಭೋಜ ಪೃಥೆಯನ್ನು ವಿಶೇಷವಾದ ಆಸ್ಥೆಯಿಂದ ಪೋಷಿಸಿದ. ಹೀಗಿರಲು ಒಂದು ದಿನ ರುದ್ರಾವತಾರಿಗಳೂ, ತೀವ್ರಕೋಪಿಗಳೂ ಆದ ದುರ್ವಾಸ ಮುನಿಗಳು ಕುಂತಿಭೋಜನ ಬಳಿ ಬಂದು ಕೇಳಿದರು : "ರಾಜನೇ ! ನಿನ್ನಲ್ಲೇ ಕೆಲಕಾಲ ಇರಲು ನಾವು ಬಂದಿದ್ದೇವೆ." ಕುಂತಿಭೋಜ ವಿನಯದಿಂದ ವಿಜ್ಞಾಪಿಸಿಕೊಂಡ : "ಸ್ವಾಮಿ ! ರಾಜಕಾರ್ಯದಲ್ಲಿ ನನಗೆ ಬಿಡುವು ದೊರೆಯದು. ನನ್ನ ಮಗಳು ಕುಂತಿ ಇನ್ನೂ ಚಿಕ್ಕವಳು. ಅವಳೇ ನಿಮ್ಮನ್ನು ಸಾಧ್ಯವಾದಷ್ಟು ಉಪಚರಿಸುವಳು. ಆಕಸ್ಮಿಕವಾಗಿ ಘಟಿಸಬಹುದಾದ ಅವಳ ತಪ್ಪನ್ನು ಮನ್ನಿಸುವುದಾದಲ್ಲಿ ತಮ್ಮನ್ನು ಸ್ವಾಗತಿಸಲು ಸಂತೋಷವೇ ಸರಿ." ದುರ್ವಾಸರು ಸಮ್ಮತಿಸಿದರು. ತನ್ನ ಮಾತಿನಂತೆ ರಾಜನು ಕುಂತಿಯನ್ನು ಅವರ ಸೇವೆಗೆ ನಿಯಮಿಸಿದ. ಕುಂತಿ ತನ್ನಿಂದ ಶಕ್ಯವಿದ್ದಷ್ಟೂ ಮುನಿಯನ್ನು ಉಪಚರಿಸಿದಳು. [೨]ಇತರರಾರೂ ಮಾಡಲಾಗದಷ್ಟು ಉತ್ಕೃಷ್ಟವಾಗಿತ್ತು ಅವಳ ಸೇವೆ. ದುರ್ವಾಸರು ಅಲ್ಲಿಂದ ಮತ್ತೆ ಹೊರಡಬಯಸಿದ್ದು ಹದಿಮೂರು ವರ್ಷಗಳ ಬಳಿಕ. ಆವರೆಗೂ ಕುಂತಿಯ ನಿಷ್ಠೆಯಲ್ಲಿ ಯಾವ ಚ್ಯುತಿಯೂ ಬರಲಿಲ್ಲ; ಅವರು

---

೧. ಗಾಂಧಾರದೇಶದ ರಾಜಕುಮಾರಿಯಾದ ಗಾಂಧಾರಿಗೆ ಧಾರೆಯ ಸಮಯದಲ್ಲಿ ತನ್ನ ಕೈಹಿಡಿಯುವವನು ಹುಟ್ಟುಕುರುಡ ಎಂದು ತಿಳಿದಾಗ ಅವಳು ಅವನಿಗಿಲ್ಲದ ನೋಡುವ ಭಾಗ್ಯ ತನಗೂ ಬೇಡವೆಂದು ನಿರ್ಧರಿಸಿ ಆ ಕೂಡಲೇ ಎರಡೂ ಕಣ್ಣುಗಳು ಕಾಣದಂತೆ ಬಟ್ಟೆ ಬಿಗಿದುಕೊಂಡಳು ಎಂಬ ಉಲ್ಲೇಖ ಮಹಾಭಾರತದಲ್ಲಿದೆ. ಇದು ಒಂದರ್ಥದಲ್ಲಿ ಮನೆಯ ಯಜಮಾನ ಕುರುಡನಾದರೆ, ಯಜಮಾನಿಯೂ ಕುರುಡಿ ಎನ್ನಿಸುವ ತತ್ತ್ವಕ್ಕೆ ಸೂಚಕವಾಗಿದೆ. ಹೀಗೆ ಧೃತರಾಷ್ಟ್ರ ಗಾಂಧಾರಿಯರು ಕಣ್ಣುಕಾಣದವರಾದರೆ, ಅವರ ಮಕ್ಕಳಾದ ಕೌರವರು ಧರ್ಮವನ್ನೇ ಕಾಣಲಾಗದ ವಿಚಿತ್ರ ಕುರುಡುತನಕ್ಕೆ ಒಳಗಾಗಿ ಇಡೀ ಕುಟುಂಬವೇ ಕುರುಡುತನಕ್ಕೆ ಗುರಿಯಾಯಿತು. ಇದಕ್ಕೆಲ್ಲಾ ಅಂಬಿಕೆ ವೇದವ್ಯಾಸರನ್ನು ನೋಡಲಾಗದೆ ಕಣ್ಣುಗಳನ್ನು ಮುಚ್ಚಿಕೊಂಡಿದ್ದೇ ಮೂಲಕಾರಣ ; ಎಂದರೆ ಇದು ಶ್ರೀವೇದವ್ಯಾಸರ ಶಾಸ್ತ್ರವನ್ನು ನೋಡಲಾಗದವರು ಹಾಗೂ ಅವರ ಇಡೀ ಕುಟುಂಬ ಧರ್ಮಾಧರ್ಮಗಳ ಪರಿಜ್ಞಾನದ ಬಗ್ಗೆ ಕುರುಡಾಗುವುದು ಎಂಬ ತತ್ತ್ವಕ್ಕೆ ನಿದರ್ಶನ.

೨. ಕುಂತಿ ಹಾಗೆ ದುರ್ವಾಸರನ್ನು ಅಪೂರ್ವರೀತಿಯಲ್ಲಿ ಸೇವಿಸಲು ಸಾಧ್ಯವಾಗಿದ್ದು, ಅವರು ಕುಂತಿಭೋಜನ ಪ್ರಾರ್ಥನೆಯಂತೆ ಅವಳಿಂದ ಘಟಿಸಬಹುದಾದ ತಪ್ಪನ್ನು ಕ್ಷಮಿಸುವೆ ಎಂಬ ವರದ ಬಲದಿಂದಾಗಿ. ಆದರೆ ದುರ್ವಾಸರು ಬಯಸಿದ್ದನ್ನು ಎಲ್ಲ ರೀತಿಯಲ್ಲಿ ನೀಡಿ ತಾನು ಸರ್ವೋತ್ತಮ ಎಂದು ತೋರಿಸಿದ್ದು ತನ್ನ ಶ್ರೀರಾಮ ಹಾಗೂ ಶ್ರೀಕೃಷ್ಣರೂಪಗಳಿಂದ ಶ್ರೀಹರಿ ಮಾತ್ರ ಎಂಬುದು ವಿಶೇಷ.

ಪ್ರಸನ್ನರಾದರು. ಕುಂತಿಯನ್ನು ಕರೆದು ದಿವ್ಯಮಂತ್ರವೊಂದನ್ನು ಉಪದೇಶಿಸಿದರು. ಅವಳು ಕರೆಯುವ ಯಾವ ದೇವತೆಯೇ ಆದರೂ, ಅವಳ ಬಳಿ ಬಂದು ಪುತ್ರನನ್ನು ಅನುಗ್ರಹಿಸಲೇ-ಬೇಕಾದ ಸಾಮರ್ಥ್ಯ ಆ ಮಂತ್ರದಲ್ಲಿತ್ತು. ಋತುಕಾಲವೊಂದರಲ್ಲಿ ಕುಂತಿಗೆ ಆ ಮಂತ್ರದ ಶಕ್ತಿಯನ್ನು ಪರೀಕ್ಷಿಸುವ ಕುತೂಹಲ ಹುಟ್ಟಿತು. ಮಂತ್ರವನ್ನು ಪಠಿಸಿ ಸೂರ್ಯನನ್ನೇ ಆಹ್ವಾನಿಸಿದಳು. ಕೂಡಲೇ ಒಂದಂಶದಿಂದ ಧರೆಗಿಳಿದು ಬಂದ ಸೂರ್ಯದೇವ, ಕುಂತಿಯು ಪರಿಪರಿಯಾಗಿ ಪ್ರಾರ್ಥಿಸಿದರೂ ಕೇಳದೆ, ಪುತ್ರನೊಬ್ಬನನ್ನು ಅನುಗ್ರಹಿಸಿಯೇ ತೆರಳಿದ. ಹಾಗೆ ಹುಟ್ಟಿದ್ದು ಸ್ವಯಂ ಭಾಸ್ಕರನೇ, ಹುಟ್ಟಿದಾಗಲೇ ಮಗುವಿನ ಕಿವಿಗಳಲ್ಲಿ ಚಿನ್ನದ ಕುಂಡಲಗಳು ಹೊಳೆಯುತ್ತಿದ್ದವು. ಕವಚವೂ ಸೇರಿಕೊಂಡಿತ್ತು. ಹಿಂದೆ ವಾಲಿಯನ್ನು ಕೊಲ್ಲಿಸಿದ ಸುಗ್ರೀವನೇ ಇವನು. ಆ ಪಾಪದ ಫಲದಿಂದ ಸಹಸ್ರವರ್ಮ ಎಂಬ ಅಸುರನೊಬ್ಬನ ಆವೇಶವೂ ಅವನಲ್ಲಿ ಸೇರಿಕೊಂಡಿತ್ತು. ಅದರಿಂದಾಗಿಯೇ ಕರ್ಣನ ಬುದ್ಧಿ ಒಮ್ಮೊಮ್ಮೆ ಹಾದಿ ತಪ್ಪುತ್ತಿತ್ತು. ಕುಂಡಲ-ಗಳಿಂದುಂಟಾದ ಕಿವಿಗಳ ಅದ್ಭುತ ಕಾಂತಿಯಿಂದಾಗಿ ಅವನಿಗೆ "ಕರ್ಣ" ಎಂಬ ಹೆಸರೇ ರೂಢಿಯಲ್ಲಿ ಬಂದಿತು. ಮಗುವನ್ನು ಕಂಡು ಏನೂ ತೋಚದಾದ ಕುಂತಿ ಕ್ಷಣಕಾಲ ಯೋಚಿಸಿ, ಒಂದು ಬುಟ್ಟಿಯಲ್ಲಿ ಮಗುವನ್ನಿಟ್ಟು [೧] ನದಿಯಲ್ಲಿ ತೇಲಿಬಿಟ್ಟಳು. ಆ ಮಗುವನ್ನು ಕಂಡವರು ಉತ್ತಮರೀತಿಯಲ್ಲಿ ಅದನ್ನು ಪೋಷಿಸಲಿ ಎಂಬ ವಿಚಾರದಿಂದ ಹೇರಳವಾಗಿ ರತ್ನಗಳನ್ನು ಅದರಲ್ಲಿ ತುಂಬಿಸಿದ್ದಳು. ಜನಾಪವಾದದ ಭಯ ಕುಂತಿಯಿಂದ ಹಾಗೆ ಮಾಡಿಸಿತು. ಪ್ರವಾಹದಲ್ಲಿ ಸಾಗಿ ಕ್ರಮೇಣ ಯಮುನೆಯನ್ನು ಸೇರಿ, ಮುಂದೆ ಗಂಗೆಯ ಮೂಲಕ ಆ ಬುಟ್ಟಿ ಅಧಿರಥ ಎಂಬ ಸೂತನೊಬ್ಬನ ಕೈ ಸೇರಿತು. ಅಧಿರಥನ ಪತ್ನಿ ರಾಧೆ. ದಂಪತಿಗಳಿಬ್ಬರಿಗೂ ಲಕ್ಷಣವಂತ ಮಗುವನ್ನು ಕಂಡು ಆನಂದಕ್ಕೆ ಪಾರವೇ ಇಲ್ಲವಾಯಿತು. ಜೊತೆಯಲ್ಲೇ ದೊರೆತ ರತ್ನಗಳ ರಾಶಿ ಅವರ ದಾರಿದ್ರ್ಯವನ್ನೂ ನೀಗಿಸಿತು. ತನ್ನೊಂದಿಗೆ ಐಶ್ವರ್ಯ ತಂದ ಆ ಮಗುವಿಗೆ "ವಸುಷೇಣ" ಎಂದೇ ಅವರು ಹೆಸರಿಟ್ಟರು. ಆದರೂ ಕರ್ಣಕುಂಡಲಗಳಿಂದಾಗಿ ವಿಶೇಷವಾಗಿ ಕಂಗೊಳಿಸುತ್ತಿದ್ದ ಕಿವಿಗಳಿಂದಾಗಿ "ಕರ್ಣ"ನೆಂದೇ ಆ ಮಗು ಪ್ರಖ್ಯಾತವಾಯಿತು. ಬಾಲ್ಯ-ದಿಂದಲೂ ಎದ್ದು ಕಾಣುವ ಪ್ರತಿಭೆಯಿಂದಾಗಿ ಆ ಮಗು ಎಲ್ಲರ ಗಮನ ಸೆಳೆಯಿತು. ಬೆಳೆದಂತೆಲ್ಲ, ಸಕಲ ಶ್ರುತಿಗಳನ್ನು ಶಾಸ್ತ್ರಗಳನ್ನು ಅಧ್ಯಯನಮಾಡಿದ ಆ ಕರ್ಣ ಸ್ವಲ್ಪ ದಿನದಲ್ಲೇ ವಿಶೇಷ ಜ್ಞಾನಿಯೂ, ಮಹಾ ಬಲಶಾಲಿಯೂ ಎನ್ನಿಸಿದ.

---

೧. ಕುಂತಿ ಹಾಗೆ ಮಗುವನ್ನು ತ್ಯಜಿಸಿದ್ದು ಗಂಗೆಯಲ್ಲಿ ಎಂಬ ಉಲ್ಲೇಖ ಪಂಪಭಾರತ(ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯು ಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್‌ಗಳಿ ನೊಯ್ಯ ನೊಯ್ಯನೆ ತಳ್ಕೈಸಿ - ೧/೯೬) ಹಾಗೂ ಕುಮಾರವ್ಯಾಸಭಾರತಗಳಲ್ಲಿದೆ (ರಾಯ ಕೇಳ್ಳೆ ಸಕಲಲೋಕದ ತಾಯಲಾ ಜಾಹ್ನವಿ ತರಂಗದಿ ನೋಯಲೀಯದೆ ಮುಳುಗಲೀಯದೆ ಚಾಚಿದಳು ತಡಿಗೆ -೧/೩/೨೨). ಆದರೆ, ಕುಂತಿಭೋಜನ ದೇಶದಲ್ಲಿ ಹರಿಯುತ್ತಿದ್ದುದು ಅಶ್ವನದಿಯೆಂಬ ನದಿಯೇ ಹೊರತು, ಗಂಗಾನದಿಯಲ್ಲ. ಇದರಿಂದ ವ್ಯಾಸಭಾರತದ ನಿಖರತೆಯನ್ನು ಇತರ ಭಾರತಗಳು ಹೊಂದಿಲ್ಲ ಎಂಬ ಅಂಶ ತಿಳಿಯುವುದು.

ಅವಳನ್ನು ಪಾಂಡುವಿಗೆ ತಂದುಕೊಂಡು ವಿವಾಹಮಹೋತ್ಸವವನ್ನು ವಿಜೃಂಭಣೆಯಿಂದ ನಡೆಸಿದರು. ಶೂರರಾಜನಿಗೆ ಶೂದ್ರಸ್ತ್ರೀಯಲ್ಲಿ ಜನಿಸಿದ [೧]ಆರುಣೀ ಎಂಬ ಕನ್ಯೆಯನ್ನು ವಿದುರ ವಿವಾಹವಾದ.

## ಶಲ್ಯ - ಮಾದ್ರಿ

ಋತಾಯನ ಮದ್ರದೇಶದ ದೊರೆ. ಇಂದ್ರನನ್ನು ಹೋಲುವ ಮಗ, ಒಬ್ಬ ಶ್ರೇಷ್ಠ ಕನ್ಯೆ - ಹೀಗೆ ಇಬ್ಬರು ಮಕ್ಕಳನ್ನು ಪಡೆಯಬೇಕೆಂಬ ಬಯಕೆಯಿಂದ ಅವನು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿದ. ಅವನ ತಪಸ್ಸಿಗೆ ಮೆಚ್ಚಿದ ಬ್ರಹ್ಮನ ಅನುಗ್ರಹದಿಂದ ಶಲ್ಯ ಅವನ ಮಗನಾಗಿ ಜನಿಸಿದ. ಪ್ರಹ್ಲಾದನ ತಮ್ಮ ಸಹ್ಲಾದನೇ ಆ ರೀತಿ ಹುಟ್ಟಿಬಂದಿದ್ದ. ಜೊತೆಗೆ ವಾಯುವಿನ ಆವೇಶವನ್ನೂ ಹೊಂದಿದ್ದ ಅವನು ಭೂಮಿಯಲ್ಲಿ ತುಂಬಾ ಬಲಶಾಲಿ ಎಂದು ಪ್ರಖ್ಯಾತನಾದ; ಸಕಲಶತ್ರುಗಳ ಪಾಲಿಗೂ ಶಲ್ಯಪ್ರಾಯನೇ ಆದ. ಮುಂದೆ 'ಮಾದ್ರಿ' ಎಂಬ ಹೆಣ್ಣು ಮಗುವೂ ಜನಿಸಿತು. ಮುಂದೆ ಪಾಂಡುರಾಜನೇ ಮಾದ್ರಿಯ ಪತಿಯಾದ. ಮಾದ್ರಿಯೂ ಪೂರ್ವಜನ್ಮದಲ್ಲಿ ಪಾಂಡುವಿನ ಮೂಲರೂಪದ ಪತ್ನಿಯೇ ಆಗಿದ್ದವಳು.

ಹೀಗೆ ಇಬ್ಬರು ಪತ್ನಿಯರನ್ನು ಪಡೆದ ಪಾಂಡುರಾಜನಿಗೆ ಅತೃಪ್ತಿಗೆ ಕಾರಣವೇ ಇರಲಿಲ್ಲ. ಧರ್ಮದಿಂದ ರಾಜ್ಯವಾಳಿದ ಅವನಿಗೆ ಭೀಷ್ಮರ ಮಾರ್ಗದರ್ಶನವಿತ್ತು. ಅಣ್ಣನನ್ನೂ ಗೌರವ-ದಿಂದ ಕಾಣುತ್ತಿದ್ದ , ಅವನಿಗೆ ವಿದುರನ ಸಲಹೆಗಳು ತುಂಬಾ ಉಪಯುಕ್ತವಾಗುತ್ತಿದ್ದವು. ಭೀಷ್ಮನೇನೋ ಧೃತರಾಷ್ಟ್ರನನ್ನೇ ರಾಜನೆಂದು, ಪಾಂಡುವನ್ನು ಯುವರಾಜನೆಂದೂ ಅಭಿಷೇಕಿ-ಸಿದರು. ಆದರೂ ಧೃತರಾಷ್ಟ್ರ ಮಾತ್ರ ತಾನು ಕುರುಡನೆಂಬ ಕಾರಣದಿಂದ ಆ ಅಧಿಕಾರವನ್ನು ಒಪ್ಪಿಕೊಳ್ಳಲಿಲ್ಲ. ಕೊನೆಗೆ ಪಾಂಡುವೇ ಅದನ್ನು ನಿರ್ವಹಿಸಿದ. ಭೀಷ್ಮ-ಧೃತರಾಷ್ಟ್ರರ ಮಾರ್ಗದರ್ಶನದಲ್ಲಿ ಏಕವೀರನೆನ್ನಿಸಿ ಪಾಂಡುರಾಜ ರಾಜ್ಯವಾಳಿದ ; ಐಶ್ವರ್ಯದ ರಾಶಿಯನ್ನೇ ಗೆದ್ದು ತಂದ. ಅದರಿಂದ ಧೃತರಾಷ್ಟ್ರ ಅನೇಕ ಯಾಗಗಳನ್ನು ಮಾಡಿ ಸಂತೋಷಪಟ್ಟ.

## ಸತ್ಯವತಿಗೆ ಸದ್ಗತಿ

''ಮುಂದೆ ಬರಲಿರುವ ಕೌರವ-ಪಾಂಡವರ ವೈರದ ಪ್ರಸಂಗದಲ್ಲಿ ಇವಳು ಇರುವುದು ಬೇಡ'' ಎಂಬ ಭಾವನೆಯಿಂದ ವೇದವ್ಯಾಸರು ತಮ್ಮ ತಾಯಿ ಸತ್ಯವತಿಯನ್ನು ತಮ್ಮ ಆಶ್ರಮಕ್ಕೇ ಕರೆದೊಯ್ದರು. ಅವರನ್ನು ಸೊಸೆಯರಿಬ್ಬರೂ ಹಿಂಬಾಲಿಸಿದರು. ಸತ್ಯವತಿಯು ಮಗ ಹೇಳಿದ ಮಾರ್ಗದಲ್ಲೇ ಹರಿಯನ್ನು ಮಗನೆಂದೂ, ಪರಮಾತ್ಮನೆಂದೂ ಉಪಾಸನೆ ಮಾಡಿ ಪರಮ-ಪದವಿಯನ್ನು ಹೊಂದಿದಳು. ಸೊಸೆಯಂದಿರಿಬ್ಬರೂ ಸ್ವರ್ಗವನ್ನು ಪಡೆದರು. ವ್ಯಾಸರ

೧. ಕುಂತಿ ಹಾಗೂ ಆರುಣೀ ಇಬ್ಬರೂ ಶೂರರಾಜನ ಮಕ್ಕಳು ; ಆದ್ದರಿಂದ ಅವರಿಬ್ಬರದು ಅಕ್ಕ-ತಂಗಿಯರ ಸಂಬಂಧವೆನ್ನಿಸಿತು. ವಿದುರ ಮುಂದೆ ಅವಳಲ್ಲಿ ತನಗೆ ಅನುರೂಪನೆನ್ನಿಸಿದ ಅನೇಕ ಮಕ್ಕಳನ್ನು ಪಡೆದ.

ಅನುಗ್ರಹದಿಂದಲೂ, ಮಗನ ಸದ್ಗುಣಗಳ ಸ್ವಭಾವದಿಂದಲೂ ವಿದುರನ ತಾಯಿ ಸತ್ಯಲೋಕವನ್ನು ಪಡೆದಳು. ಅಂಬಾಲಿಕೆಯೂ ಕ್ರಮವಾಗಿ ಪರಮಪದವಿಯನ್ನು ಪಡೆದಳು. ಆದರೆ ಅಂತಹ ಉತ್ತಮಗತಿ ಅಂಬಿಕೆಗೆ ದೊರೆಯಲಿಲ್ಲ ; ಇಲ್ಲಿ ಯಾವ ರೀತಿಯಲ್ಲಿ ಪರಮಾತ್ಮನತ್ತ ಮನಸ್ಸು ಹರಿದಿರುತ್ತದೋ, ಪರಲೋಕದಲ್ಲೂ ಅದಕ್ಕನುಗುಣವಾದ ಗತಿಯೇ ದೊರೆಯುವುದು.

## ಪಾಂಡುರಾಜನಿಗೆ ಕಿಂದಮರ ಶಾಪ

ಸ್ವಲ್ಪ ಕಾಲ ಗತಿಸಿತು. ಪಾಂಡುರಾಜ ಅಣ್ಣನಿಗೆ ರಾಜ್ಯ ಒಪ್ಪಿಸಿ, ಹೆಂಡತಿಯರನ್ನು ಕರೆದು-ಕೊಂಡು ಅರಣ್ಯಕ್ಕೆ ಹೊರಟ. ನಾರಾಯಣಕ್ಷೇತ್ರವೆನ್ನಿಸಿದ ಬದರಿಯಲ್ಲಿ ಕೆಲಕಾಲ ನೆಲೆಸಿದ. ಅಲ್ಲಿದ್ದಾಗಲೂ ಗೃಹಸ್ಥಧರ್ಮದಿಂದಲೇ ಬಾಳುತ್ತ, ಭೋಗಗಳನ್ನು ಅನುಭವಿಸುತ್ತಲೇ, ಮುನಿಗಳೊಂದಿಗೆ ಕೂಡಿಕೊಂಡು ಭಕ್ತಿಯಿಂದ ನಾರಾಯಣನನ್ನು ಕುರಿತು ತಪಸ್ಸನ್ನು ಆಚರಿಸಿದ. ಒಮ್ಮೆ ಅವನು ಒಂದು ಜಿಂಕೆಯ ಜೋಡಿಯ ಮೇಲೆ ಬಾಣಪ್ರಯೋಗ ಮಾಡಿದ. ಅವು ವಾಸ್ತವವಾಗಿ ಜಿಂಕೆಗಳಾಗಿರದೆ ಹೊಸದಾಗಿ ಮದುವೆಯಾಗಿದ್ದ ಋಷಿದಂಪತಿ-ಗಳಾಗಿದ್ದವು ; ಅವರಿಗೆ ಪಾಂಡುರಾಜನ ಬಾಣ ನಾಟಿ ಸಾವನ್ನಪ್ಪಿದವು. ಸಾಯುವ ಮುನ್ನ ಆ ಋಷಿ ''ನೀನೂ ಸಹ ಪತ್ನಿಯ ಜೊತೆಗೂಡಿದ ಕೂಡಲೇ ಮೃತನಾಗು'' ಎಂದು ಶಪಿಸಿದ. ಪಶ್ಚಾತ್ತಾಪದಗ್ಧನಾದ ಪಾಂಡುರಾಜ ಸಂನ್ಯಾಸ ಸ್ವೀಕರಿಸುವ ಹವಣಿಕೆಯಲ್ಲಿರಲು, ಕುಂತಿ ಪ್ರಯತ್ನಪೂರ್ವಕ ಅದನ್ನು ತಡೆದಳು. ಅವರಿಬ್ಬರೊಂದಿಗೆ ಕೂಡಿ ಅವನು ನಾರಾಯಣಾಶ್ರಮದ ಮಧ್ಯದಲ್ಲಿದ್ದ ಶತಶೃಂಗ ಪರ್ವತದಲ್ಲಿ ವಾಸಿಸುತ್ತ ತೀವ್ರವಾದ ತಪಸ್ಸಿನಲ್ಲಿ ಮಗ್ನನಾದ. ಕೃಷ್ಣನಲ್ಲಿ ನೆಟ್ಟ ಮನಸ್ಸು ಹಾಗೂ ವಿಷ್ಣುಪಾದದ ಸಂಗದಿಂದಾಗಿ ಪವಿತ್ರವಾದ ಗಂಗೆಯ ನೀರಿನಲ್ಲಿ ನಿರಂತರ ಸ್ನಾನಾದಿಗಳಿಂದ ರಾಜನ ದೇಹವು ಅತ್ಯಂತ ನಿರ್ಮಲವಾಯಿತು.

## ದೇವದೈತ್ಯರ ಸಮರ

ಇದೇ ಸಮಯದಲ್ಲಿ ಪಾಪಿಜನರ ಅನ್ಯಾಯವನ್ನು ಸಹಿಸದೆ ಭೂದೇವಿ ಬ್ರಹ್ಮಾದಿ-ದೇವತೆಗಳನ್ನು ಮೊರೆಹೊಕ್ಕಳು. ಅವಳನ್ನೂ ಜೊತೆಗೆ ಕರೆದುಕೊಂಡು ಅವರೆಲ್ಲ ಕ್ಷೀರಾಬ್ಧಿ-ಶಾಯಿಯೂ, ಶೇಷಶಾಯಿಯೂ, ಸಾಟಿಯಿಲ್ಲದ ಆನಂದಪೂರ್ಣದೇಹನೂ, ಐಶ್ವರ್ಯಾದಿ ಷಡ್ಗುಣಪೂರ್ಣನೂ ಆದ ಶ್ರೀಹರಿಯನ್ನು ಸಮೀಪಿಸಿ, ಅನಂತಶಕ್ತಿಯಾದ ಅವನನ್ನು ಪುರುಷಸೂಕ್ತದಿಂದ ಸ್ತುತಿಸಿದರು – ''ಸ್ವಾಮಿ ! ಭೂದೇವಿಯು ಅನೇಕ ಮಹಾದೈತ್ಯರ ಆಕ್ರಮಣದಿಂದ ಖಿನ್ನಳಾಗಿದ್ದಾಳೆ. ಅವರೆಲ್ಲ ಅತ್ಯಂತ ಪಾಪಿಗಳು. ದುರ್ಜನರ ಸಂಗ ಭಾರ ಎನ್ನಿಸುವುದಲ್ಲವೇ ! ಪ್ರಭೋ ! ನಮ್ಮ ಮಾತನ್ನು ಲಾಲಿಸು. ನಮ್ಮ ಮೇಲಿನ ಅನುಗ್ರಹದಿಂದ ನೀನು ಹಿಂದೆ ಕೊಂದಿದ್ದ ದಿತಿಯ ಮಕ್ಕಳೆಲ್ಲ ಇಂದು ಭೂಮಿಯಲ್ಲಿ ಮತ್ತೆ ಹುಟ್ಟಿರುವರು. ಹಿಂದೆ ದೇವ–ದೈತ್ಯರಿಗೆ ನಡೆದ ಘೋರ ಸಂಗ್ರಾಮದಲ್ಲಿ ರುದ್ರನಿಂದ ವರ ಪಡೆದ ಶಂಬರನನ್ನು

ಇಂದ್ರನೂ, ಬ್ರಹ್ಮನಿಂದ ವರ ಪಡೆದಿದ್ದ ವಿಪ್ರಚಿತ್ತಿಯನ್ನು ವಾಯುದೇವರೂ, ಕಾಲನೇಮಿಯನ್ನು ನೀನೂ ಸಂಹರಿಸಿದಿರಿ. ಅವರೆಲ್ಲ ಈಗ ರಾಜಕುಲದಲ್ಲಿ ಜನಿಸಿ, ಧರ್ಮಿಷ್ಠರಂತೆ ವರ್ತಿಸುತ್ತ ಭೂಮಿಯನ್ನು ಪೀಡಿಸುತ್ತಿರುವರು. ಕಾಲನೇಮಿಯು ಉಗ್ರಸೇನನ ಮಗ ಕಂಸನಾಗಿಯೂ, ವಿಪ್ರಚಿತ್ತಿಯು ಜರಾಸಂಧನಾಗಿಯೂ ಹುಟ್ಟಿರುವರು. ಜರಾಸಂಧ ತನ್ನ ಅಸ್ತಿ, ಪ್ರಾಸ್ತಿ ಎಂಬ ಇಬ್ಬರು ಮಕ್ಕಳನ್ನು ಕಂಸನಿಗಿತ್ತು, ಸಂಬಂಧವನ್ನು ಬೆಳೆಸಿರುವನು. ಮಧುಕೈಟಭರು ಹಂಸ-ಡಿಬಿಕರಾಗಿ ಹುಟ್ಟಿ , ಶಿವನ ವರದಿಂದ ಅವಧ್ಯರೆನ್ನಿಸಿರುವರು. ಅವರೆಲ್ಲ ಈಗ ಜರಾಸಂಧನ ಹಿಂಬಾಲಕರಾಗಿರುವರು. ರಾವಣ ಕುಂಭಕರ್ಣರು ಶಿಶುಪಾಲ ದಂತವಕ್ರರೆಂಬ ಹೆಸರಿನಿಂದ ಹುಟ್ಟಿರುವರು ; ನಿನ್ನ ಮಾತಿನಂತೆ ನೀನೇ ಅವರನ್ನು ಕೊಲ್ಲಬೇಕಾಗಿದೆ. ಬಲಿಚಕ್ರವರ್ತಿಯಲ್ಲಿ ಆವೇಶಿಸಿ ಅವನ ಬುದ್ಧಿಯನ್ನು ಕೆಡಿಸಿದ್ದ [೧]ಬಲಿ ಎಂಬ ದೈತ್ಯನು ಬ್ರಹ್ಮದತ್ತನ ಮಗನಾಗಿ ಸಾಲ್ವರಾಜನಾಗಿರುವನು. ಅವನೂ ಈಗ ಜರಾಸಂಧನ ಅನುಯಾಯಿ. ಬಾಣನ ಬುದ್ಧಿ ಕೆಡಿಸಿದ ಬಾಣಾಸುರನು ಕೀಚಕನಾಗಿ ಹುಟ್ಟಿರುವನು. ಇವರೆಲ್ಲರನ್ನೂ ಸಂಹರಿಸುವ ಕಾರ್ಯ-ದಲ್ಲಿ ನೀನೇ ಅವತಾರಮಾಡಿ ನಮ್ಮನ್ನು ಉದ್ಧರಿಸಬೇಕು.'' ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿದ ಭಗವಂತನಾದ ಶ್ರೀಹರಿಯು ಅವರೆಲ್ಲರನ್ನು ಮೇರುಪರ್ವತದ ಮೇಲಕ್ಕೆ ಕರೆ-ದೊಯ್ದು ಚತುರ್ಮುಖಬ್ರಹ್ಮನನ್ನು ಕುರಿತು ಹೇಳಿದ ''ನಿನ್ನ ಭಕ್ತಿಗೆ ನಾನು ವಶವಾಗಿದ್ದೇನೆ. ನೀನು ಹೇಳಿದ ಸ್ಥಳದಲ್ಲಿ ಅವತರಿಸುವೆ.''

## ವಸುದೇವಾದಿಗಳ ಜನ್ಮ

ಬ್ರಹ್ಮದೇವರು ವಿಜ್ಞಾಪಿಸಿಕೊಂಡರು - ''ಹಿಂದೆ ನಾನು ವರುಣನಿಗೆ ಉತ್ತಮವಾದ ಗೋವುಗಳನ್ನು ನೀಡಿದ್ದೆ. ಅವನ್ನೆಲ್ಲ ಅವನ ತಂದೆ ಕಶ್ಯಪ ಮುನಿಯು ಅದಿತಿ, ಸುರಭಿಯರಿಂದ ಪ್ರಚೋದಿತನಾಗಿ ಅಪಹರಿಸಿದ್ದನು. ಅದನ್ನೆಲ್ಲ ವರುಣ ನನ್ನ ಮುಂದೆ ಅರಿಕೆ ಮಾಡಿಕೊಂಡಿದ್ದ. ''ನೀನು ಕ್ಷತ್ರಿಯನಾಗಿ ಜನಿಸಿದರೂ, ಗೋಪಾಲಕನಾಗಿ ಬದುಕು'' ಎಂದು ನಾನು ಕಶ್ಯಪನನ್ನು ಶಪಿಸಿದೆ. ಅವನು ಈಗ ಶೂರನ ಮಗನಾಗಿ ವಸುದೇವ ಎಂಬ ಹೆಸರಿನಿಂದ ಹುಟ್ಟಿರುವನು. ಅವನ ಪತ್ನಿಯರಾದ ಅದಿತಿ ಸುರಭಿಯರು ದೇವಕೀ, ರೋಹಿಣೀ ಎಂಬ ಅವನ ಹೆಂಡತಿಯರಾಗಿರುವರು. ಆದ್ದರಿಂದ ನೀನು ದೇವಕೀಸುತನಾಗಿ ಅವತರಿಸು. ದ್ರೋಣ ಎಂಬ ವಸು ತನ್ನ ಪತ್ನಿ ಧರೆಯಿಂದ ಕೂಡಿಕೊಂಡು ನಿನ್ನ ತಂದೆಯೆನ್ನಿಸಿಕೊಳ್ಳುವ ಆಸೆಯಿಂದ ತಪಸ್ಸುಮಾಡಿದ್ದ. ಅದೇ ರೀತಿ ನಾನು ವರವನ್ನೂ ಅವನಿಗೆ ಅನುಗ್ರಹಿಸಿರುವೆ. ಅವರಿಬ್ಬರೂ ನಂದಗೋಪ ಮತ್ತು ಯಶೋದೆ ಎಂಬ ದಂಪತಿಗಳಾಗಿ ಹುಟ್ಟಿರುವರು. [೨]ನಂದನೂ ಶೂರನ

೧. ಇದರಿಂದ ಬಲಿ ಎಂಬ ಹೆಸರಿನ ಒಬ್ಬ ದೇವತೆ ಹಾಗೂ ಒಬ್ಬ ದೈತ್ಯ ಇರುವುದು ತಿಳಿಯುವುದು. ಅದರಂತೆ ಸಾತ್ತ್ವಿಕಸ್ವಭಾವದ ಬಾಣ ಅಸುರಸ್ವಭಾವದ ಬಾಣ ಹಾಗೂ ಸಾತ್ತ್ವಿಕಸ್ವಭಾವದ ವೃತ್ರಾಸುರ ಅಸುರ-ಸ್ವಭಾವದ ವೃತ್ರಾಸುರರು ಇರುವುದು ಸಹ ಗಮನಾರ್ಹ.

೨. ವಸುದೇವನು ಶೂರನ ಮಗನಾಗಿದ್ದಂತೆ, ನಂದಗೋಪನೂ ಶೂರನ ಮಗನೇ ; ಹೀಗೆ ಅವರಿಬ್ಬರದು

ಮಗನೇ. ಆದರೆ ಅವನ ತಾಯಿ ಮಾತ್ರ ವೈಶ್ಯಜಾತಿಯವಳು. ದೇವಕೀ ವಸುದೇವರು ನಿನ್ನನ್ನು ಮಗನಾಗಿ ಪಡೆಯಲು, ನಿನ್ನನ್ನೇ ಕುರಿತು ತಪಸ್ಸು ಮಾಡಿರುವರು. ಆದ್ದರಿಂದ ನೀನು ಮೊದಲು ಅವರ ಮಗನಾಗಿ ಜನಿಸಿ, ಅನಂತರ ಗೋಕುಲಕ್ಕೆ ತೆರಳು.'' ಅದಕ್ಕೆ ಸಮ್ಮತಿಸಿದ ಭಗವಂತ ಉಳಿದೆಲ್ಲ ದೇವತೆಗಳನ್ನು ಕುರಿತು ''ನೀವೆಲ್ಲ ನಿಮ್ಮ ಕಾರ್ಯಕ್ಕೆ ಅನುಗುಣವಾಗುವ ರೂಪದಿಂದ ಭೂಮಿಯಲ್ಲಿ ಅವತರಿಸಿರಿ'' ಎಂದು ಆದೇಶಿಸಿದ.

## ಭಗದತ್ತಾದಿಗಳ ಜನನ

ಶ್ರೀಹರಿಯ ಆಜ್ಞೆಯಂತೆ ದೇವತೆಗಳೆಲ್ಲ ಭೂಮಿಯಲ್ಲಿ ಅವತರಿಸಿದರು. ಕುಬೇರ ನರಕಾಸುರನ ಮಗನಾಗಿ ಭಗದತ್ತನೆಂಬ ಹೆಸರಿನಿಂದ ಹುಟ್ಟಿದ. ಅವನು ಹಾಗೆ ಹುಟ್ಟಲು ಕಾರಣವಿತ್ತು. ಅವನಿಗೆ ಶಿವನು ಸುಪ್ರತೀಕವೆಂಬ ಆನೆಯನ್ನು ನೀಡಿದ್ದ. ಅದನ್ನು ನರಕಾಸುರ ಕುಬೇರನಿಂದ ಬಲಾತ್ಕಾರದಿಂದ ಕಿತ್ತುಕೊಂಡಿದ್ದ. ತನ್ನ ಆನೆಯನ್ನು ಮತ್ತೆ ಪಡೆಯುವ ಆಸೆಯಿಂದ ಅವನು ನರಕಾಸುರನ ಮಗನೇ ಆಗಿ ಹುಟ್ಟಿದ್ದ. ಅಸುರನೊಬ್ಬನ ಆವೇಶದಿಂದಾಗಿ ತಂದೆಯಾದ ನರಕಾಸುರನು ಸಾಯುವವರೆಗೂ ಹಾದಿತಪ್ಪಿ ನಡೆಯುತ್ತಿದ್ದ. ಅನಂತರ ಮಾತ್ರ ಧರ್ಮಾಚರಣೆಯಲ್ಲೇ ನಿರತನಾಗಿ, ಶಿವನ ಆವೇಶದಿಂದಾಗಿ ಮಹಾಬಲಶಾಲಿ ಎನ್ನಿಸಿದ. ಕೃಷ್ಣಪಕ್ಷಕ್ಕೆ ಅಭಿಮಾನಿಯಾದ ದೇವತೆಯು ಶಿನಿ ಎಂಬ ಯಾದವನ ಮಗನಾದ ಸತ್ಯಕನ ಪುತ್ರನಾಗಿ ಯುಯುಧಾನ(ಸಾತ್ಯಕಿ) ಎಂಬ ಹೆಸರಿನಿಂದ ಹುಟ್ಟಿದ. ಅವನಲ್ಲಿ ಗರುಡನ ಆವೇಶವೂ ಇತ್ತು. ಸಂವಹನೆಂಬ ಮರುತ್ತನ ಅಂಶ ಹಾಗೂ ಮಹಾವಿಷ್ಣುವಿನ ಚಕ್ರದ ಅಂಶವೂ ಅವನಲ್ಲಿತ್ತು. ಹೃದಿಕ ಎಂಬುವನು ಯಾದವರಲ್ಲಿ ಭೋಜವಂಶದವನು ; ಅವನಿಗೆ ಮಗನಾಗಿ ಕೃತವರ್ಮ ಜನಿಸಿದ. ಅವನು ಶುಕ್ಲಪಕ್ಷದ ಅಭಿಮಾನಿದೇವತೆಯ ಅವತಾರ. ಮಹಾವಿಷ್ಣುವಿನ ಪಾಂಚಜನ್ಯದ ಅಂಶ ಹಾಗೂ ಪ್ರವಹ ಎಂಬ ಮರುತ್ತಿನ ಅಂಶ ಅವನಲ್ಲಿತ್ತು. ಅದೇ ರೀತಿ ಎಲ್ಲ ಯಾದವರೂ ಎಲ್ಲ ಗೋಪರೂ ಒಂದಲ್ಲ ಒಂದು ದೇವತೆಯ ಅವತಾರವೇ ಆಗಿದ್ದವರು.

ಪಾಂಡವರಿಗೆ ಸಹಾಯವಾದವರೆಲ್ಲ ದೇವತೆಗಳು ಇಲ್ಲವೇ ಅವರ ಅನುಚರರು. ಅದಕ್ಕೆ [೧]ವಿರುದ್ಧವಾದವರೆಲ್ಲ ದೈತ್ಯರು. ಹಾಗಲ್ಲದೆ ಅತ್ತಿಂದಿತ್ತ ಓಡಾಡುತ್ತಿದ್ದವರೆಲ್ಲ ರಾಜಸರು-ಮಾನುಷರು.

ಭಗವಂತನಲ್ಲಿ ಹೆಚ್ಚಿನ ಪ್ರೀತಿ ದೇವತೆಗಳ ಲಕ್ಷಣ; ಭಗವದ್ದ್ವೇಷ ಅಸುರರ ಲಕ್ಷಣ. ಆದ್ದರಿಂದ ಹರಿಭಕ್ತರಾದವರೆಲ್ಲ ವಿಶೇಷತಃ ದೇವತೆಗಳೇ ಸರಿ.

---

ಅಣ್ಣ-ತಮ್ಮಂದಿರ ಸಂಬಂಧ. ಇದರಿಂದ ನಂದನ ಪುತ್ರಿಯಾಗಿ ಅವತರಿಸಿದ ದುರ್ಗೆ ವಸುದೇವಪುತ್ರನಾಗಿ ಅವತರಿಸಿದ ಶ್ರೀಕೃಷ್ಣನಿಗೆ ತಂಗಿ ಎಂಬ ಪ್ರಸಿದ್ಧಿ ಉಂಟಾಯಿತು ಎಂದು ತಿಳಿಯಬೇಕು.

೧. ವಿರುದ್ಧವಾದವರು ಎಂದರೆ ತಾತ್ತ್ವಿಕವಾಗಿ ಎಂದರ್ಥ. ಭೀಷ್ಮಾದಿಗಳು ಕೌರವರ ಪಕ್ಷ ಸೇರಿದ್ದು ತಾತ್ತ್ವಿಕ ಕಾರಣದಿಂದಲ್ಲದೇ ಹಂಗು ಮೊದಲಾದ ಇತರ ಕಾರಣಗಳಿಂದ. ಆದ್ದರಿಂದ ಅವರು ಕೌರವಪಕ್ಷದಲ್ಲಿ ಸೇರಿ ಹೋರಾಡಿದರೂ, ಮೂಲತಃ ದೇವತೆಗಳೇ ಆದವರು ಎಂದು ತಿಳಿಯಬೇಕು.

## ಶ್ರೀಕೃಷ್ಣಾವತಾರದ ಪೂರ್ವರಂಗ

ಗಂಧರ್ವಮುನಿಯು ದೇವಕ ಎಂಬ ಹೆಸರಿನಿಂದ ಆಹುಕನ ಮಗನಾಗಿ ಜನಿಸಿದ. ಅವನು ಉಗ್ರಸೇನನ ತಮ್ಮ. ದೇವಕನಿಗೆ ಅದಿತಿಯು ದೇವಕಿ ಎಂಬ ಮಗಳಾಗಿ ಹುಟ್ಟಿದಳು. ಕಶ್ಯಪನ ಉಳಿದ ಪತ್ನಿಯರೂ ಅವನ ಮಕ್ಕಳಾಗಿ ಹುಟ್ಟಿದರು. ಹಿರಿಯಳಾದ ದೇವಕಿಯನ್ನು ಆಹುಕ ತನ್ನ ಮಗಳನ್ನಾಗಿ ಸ್ವೀಕರಿಸಿದ. ಆದ್ದರಿಂದ ದೇವಕಿಯು ಕಂಸನಿಗೆ ಒಂದು ರೀತಿಯಲ್ಲಿ ಸೋದರತ್ತೆಯೂ ಮತ್ತೊಂದು ರೀತಿಯಲ್ಲಿ ತಂಗಿಯೂ ಎನ್ನಿಸಿದಳು. ದೇವಕಿಯನ್ನು ವಸು-ದೇವನಿಗೆ ಕೊಟ್ಟು ವೈಭವದ ವಿವಾಹಮಹೋತ್ಸವ ಜರುಗಿತು. ಆ ಸಮಯದಲ್ಲಿ ನವದಂಪತಿ-ಗಳ ಮಾಂಗಲಿಕರಥವನ್ನು ಕಂಸನೇ ಉತ್ಸಾಹದಿಂದ ಸಾರಥಿಯಾಗಿ ನಡೆಸಿದ. ಆಗ ಆಕಾಶ-ವಾಣಿಯು ಕಂಸನನ್ನುದ್ದೇಶಿಸಿ ನುಡಿಯಿತು : ''ಎಲವೋ ಮೂರ್ಖ ! ಇವಳ ಎಂಟನೆಯ ಮಗುವೇ ನಿನ್ನ ಮೃತ್ಯು.'' ಕಡಿವಾಣವನ್ನು ಕೆಳಕ್ಕೆ ಚೆಲ್ಲಿದ ಕಂಸ ಕರವಾಳವನ್ನು ಒರೆಯಿಂದ ಸೆಳೆದು ತಂಗಿಯನ್ನು ಸಂಹರಿಸಲು ಉದ್ಯುಕ್ತನಾದ. ವಸುದೇವ ತನ್ನ ಮಕ್ಕಳನ್ನೆಲ್ಲ ಹುಟ್ಟಿದ ಕೂಡಲೇ ಕಂಸನಿಗೊಪ್ಪಿಸುವ ವಚನ ನೀಡಿ ತನ್ನ ಪತ್ನಿಯನ್ನು ಬಿಡಿಸಿಕೊಂಡ. ಅನಂತರ ದೇವಕಿಯ ಆರು ಜನ ತಂಗಿಯರನ್ನೂ ವಸುದೇವ ವಿವಾಹವಾದ. ಆ ಮೊದಲೇ ಬಾಹ್ಲೀಕ-ರಾಜನ ಮಗಳಾದ ರೋಹಿಣಿಯನ್ನು ವಸುದೇವ ವರಿಸಿದ್ದ. ಅದೇ ರೀತಿ ಕಾಶಿರಾಜನ ಮಗಳಾಗಿ ಜನಿಸಿದ್ದ ದಿತಿಯನ್ನೂ ಕರವೀರರಾಜನ ಮಗಳಾಗಿ ಜನಿಸಿದ್ದ ದನುವನ್ನೂ ಪುತ್ರಿಕಾ-ಪುತ್ರಧರ್ಮದಿಂದ ಮದುವೆಯಾಗಿದ್ದ. ಅವರಿಬ್ಬರಲ್ಲಿ ಕ್ರಮವಾಗಿ ಪೌಂಡ್ರಕ ವಾಸುದೇವ ಮತ್ತು ಶೃಗಾಲ ವಾಸುದೇವರು ಮಕ್ಕಳಾಗಿ ಹುಟ್ಟಿದರು. ಇವರಲ್ಲಿ ಪೌಂಡ್ರಕನು ವೇನ ಮತ್ತು ಶೃಗಾಲನು ಧುಂಧು (ಮಧುದೈತ್ಯನ ಪುತ್ರ) ಎಂಬ ದೈತ್ಯರು. ದೇವಕಿಯನ್ನು ಮದುವೆಯಾದ ಮೇಲೆ ಮೊದಲ ಇಬ್ಬರು ಪತ್ನಿಯರ ಬಳಿ ವಸುದೇವ ಸುಳಿಯಲಿಲ್ಲ. ಅಂದಿನಿಂದ ಪೌಂಡ್ರಕ, ಶೃಗಾಲರು ವೃಷ್ಣಿದ್ವೇಷಿಗಳಾದರು. ಉಳಿದ ಪತ್ನಿಯರಲ್ಲಿ ವಸುದೇವ ಪಡೆದ ಮಕ್ಕಳೆಲ್ಲ ದೇವತೆಗಳೇ. ಭೂಮಿಗಿಳಿದು ಬಂದ ಪ್ರತಿಯೊಬ್ಬ ದೇವತೆಯು ವೇದವ್ಯಾಸರ ಶಿಷ್ಯರೇ ಆಗಿದ್ದರು. ಅವರಿಂದ ಜ್ಞಾನ ಪಡೆದ ಅವರೆಲ್ಲ ತಮ್ಮ ಯೋಗ್ಯತೆಗೆ ತಕ್ಕಂತೆ ಸರ್ವಜ್ಞರೇ ಆದರು.

## ಕಂಸ ಕೊಂದ ದೇವಕೀಪುತ್ರರು

ಹಿಂದೆ ಮರೀಚಿಯ ಮಕ್ಕಳಾದ ಆರು ಜನ ಋಷಿಗಳು, ದೇವಲ ಎಂಬ ಮುನಿಯನ್ನು ಅವನ ಕೃಶಶರೀರಕ್ಕಾಗಿ ಅಪಹಾಸ್ಯ ಮಾಡಿದ್ದರು ; ದೇವಲನ ಶಾಪದಿಂದ ಅವರೆಲ್ಲ ಕಾಲನೇಮಿಯ ಮಕ್ಕಳಾಗಿ ಹುಟ್ಟಿದರು. ಆಗ ಅವಧ್ಯರಾಗಬಯಸಿದ ಅವರೆಲ್ಲ ಬ್ರಹ್ಮನನ್ನು ಕುರಿತು ತಪಸ್ಸನ್ನು ಆಚರಿಸಿದರು. ಬ್ರಹ್ಮನಿಂದ ಅಂತಹ ವರವನ್ನು ಪಡೆದುಕೊಂಡರೂ ಸಹ. ಆ ಸಮಯದಲ್ಲಿ ವರಬಲದಿಂದ ಜಗತ್ತಿನಲ್ಲೆಲ್ಲ ತಾನೇ ತಾನಾಗಿ ಮೆರೆಯುತ್ತಿದ್ದ ಹಿರಣ್ಯಕಶಿಪು ಈ ವಾರ್ತೆ ತಿಳಿದು ಕ್ರುದ್ಧನಾದ. ತಾನಿರುವಾಗ ಬೇರೆಯವರ ಬಳಿ ವರ ಪಡೆದ ಅವರ ವರ್ತನೆ ಆ ಅಸುರನಿಗೆ ಹಿಡಿಸಲಿಲ್ಲ; ''ನೀವೆಲ್ಲ ಮನುಷ್ಯರಾಗಿ ಭೂಮಿಯಲ್ಲಿ ಹುಟ್ಟಿರಿ. ಆಗ ನಿಮ್ಮ

ತಂದೆಯೇ ನಿಮ್ಮನ್ನು ಕೊಲ್ಲುವಂತಾಗಲಿ'' ಎಂದು ಅವರನ್ನು ಶಪಿಸಿದ. ಶ್ರೀಹರಿಯ ಆಜ್ಞೆಯಿಂದ ದುರ್ಗಾದೇವಿ ಅವರನ್ನೆಲ್ಲ ಕ್ರಮವಾಗಿ ದೇವಕಿಯ ಗರ್ಭದಲ್ಲಿ ಸೇರಿಸಿದಳು. ಅವರನ್ನು ಕ್ರಮವಾಗಿ ಅವರೆಲ್ಲರ [೧] ತಂದೆಯಾಗಿದ್ದ ಕಾಲನೇಮಿ ಕಂಸನೇ ಕೊಂದುಬಿಟ್ಟ.

## ಸಂತತಿ ಪಡೆಯಲು ಪಾಂಡುವಿನ ನಿರ್ಧಾರ

ಇತ್ತ ನಾರಾಯಣಾಶ್ರಮದಲ್ಲಿ ಪಾಂಡುರಾಜನ ದಿನಗಳು ಸಾರ್ಥಕ ರೀತಿಯಲ್ಲಿಯೇ ಕಳೆಯುತ್ತಿದ್ದವು. ಒಮ್ಮೆ ಮುನಿಗಳೆಲ್ಲ ತಂಡೋಪತಂಡವಾಗಿ ಬ್ರಹ್ಮದೇವರ ಸಭೆಗೆಂದು ಹೊರಟಿದ್ದ ದೃಶ್ಯ ಕಣ್ಣಿಗೆ ಬಿದ್ದು ಪಾಂಡುರಾಜ ಸಪತ್ನೀಕನಾಗಿ ಅವರನ್ನು ತಾನೂ ಹಿಂಬಾಲಿಸಿದ. ಸ್ವಲ್ಪ ದೂರ ಸಾಗಿದ ಮೇಲೆ ಪಾಂಡುರಾಜನಿಗೆ ಅವರನ್ನು ಅನುಸರಿಸಲು ಸಾಧ್ಯವಾಗದಾಯಿತು. ''ಪಾಂಡುರಾಜ ! ಮಕ್ಕಳಿಲ್ಲದ ನಿನಗೆ ಅಲ್ಲಿ ಪ್ರವೇಶ ದೊರೆಯಲಾರದು'' - ಎಂದು ಮುನಿಗಳು ಅದಕ್ಕೆ ಕಾರಣವನ್ನು ತಿಳಿಸಿದರು. ಆ ಮಾತು ಪಾಂಡುರಾಜನಿಗೆ ದಿಗ್ಭ್ರಮೆ ಹುಟ್ಟಿಸಿತು. [೨] ಮಕ್ಕಳಿಲ್ಲದೆಯೂ ಸದ್ಗತಿ ಲಭಿಸುವುದು ಎಂದು ಶಾಸ್ತ್ರಗಳು ನುಡಿದಿವೆ. ಆದರೆ

---

೧. ಕಂಸ ದೇವಕಿಯ ಮಕ್ಕಳೆಂದು ಕೊಲ್ಲುತ್ತಿದ್ದುದು ನಿಜವಾಗಿಯೂ ತನ್ನ ಮೂಲರೂಪವಾದ ಕಾಲನೇಮಿಯ ಮಕ್ಕಳನ್ನೇ ; ಎಂದರೆ ತನ್ನ ಮಕ್ಕಳನ್ನೇ. ಇದರ ಪರಿವೆ ಮಾತ್ರ ಅವನಿಗಿರಲಿಲ್ಲ. ಇದು ಇತರರ ವಸ್ತುಗಳನ್ನು ನಾಶಪಡಿಸಿದೆವೆಂದು ಸಂಭ್ರಮಿಸುವ ಜನ ನಿಜಕ್ಕೂ ನಾಶಪಡಿಸಿದ್ದು ತಮ್ಮ ದೇಶದ ಸಂಪತ್ತನ್ನೇ ; ತಾವು ಗಳಿಸಿದ ಪುಣ್ಯರೂಪದ ಸಂಪತ್ತನ್ನೇ ಎಂಬ ಸಂದೇಶವನ್ನು ಸೂಚಿಸುವುದು.

೨. ಸಂತತಿ ಇಲ್ಲದೆ ಸದ್ಗತಿ ಇಲ್ಲ; ಅದರಲ್ಲೂ ಪುತ್ರ ಸಂತಾನವಿಲ್ಲದೆ ಸದ್ಗತಿ ಇಲ್ಲ ಎಂಬುದು ಹೆಚ್ಚು ಪ್ರಚಾರದಲ್ಲಿರುವ ಮಾತು. ಶಾಸ್ತ್ರವಚನವೂ ಹಾಗೇ ಇದೆ – 'ಅಪುತ್ರಸ್ಯ ಗತಿರ್ನಾಸ್ತಿ', 'ನಾಪುತ್ರಸ್ಯ ಲೋಕೋಽಸ್ತಿ'. ಇವುಗಳ ಸರಿಯಾದ ಅರ್ಥವನ್ನು ತಿಳಿಯದವರು ಪುತ್ರಸಂತಾನವಿಲ್ಲದೆ ಸದ್ಗತಿ ಸಾಧ್ಯವಿಲ್ಲ ಎಂದು ತಪ್ಪು ತಿಳಿಯುವ ಸಾಧ್ಯತೆ ಇದೆ. ಆದ್ದರಿಂದ ಅದರ ಬಗ್ಗೆ ಶ್ರೀಮದಾಚಾರ್ಯರು ಇಲ್ಲಿ ಈ ರೀತಿಯ ಸ್ಪಷ್ಟೀಕರಣ ನೀಡಿರುವರು. ಮೋಕ್ಷಕ್ಕೆ ಅಗತ್ಯವಾದುದು ಜ್ಞಾನವೇ ಹೊರತು, ಸಂತತಿ ಮೊದಲಾದ ಇತರ ಯಾವುದೂ ಅಲ್ಲ. ಬೇರೆಲ್ಲ ಇದ್ದು ಜ್ಞಾನವೊಂದು ಇಲ್ಲವಾದರೆ, ಅವರಿಗೆಂದೂ ಸದ್ಗತಿ ಲಭಿಸದು ಎಂಬುದೇ ಶಾಸ್ತ್ರವಾಣಿ - 'ಜ್ಞಾನೇನೈವ ಪರಂ ಪದಮ್'. ಜ್ಞಾನವಿಲ್ಲದೇ ಸದ್ಗತಿ ಪಡೆದ ಒಂದು ನಿದರ್ಶನವೂ ದೊರೆಯುವುದಿಲ್ಲ. ಆದರೆ ಸಂತತಿ ಮೊದಲಾದವುಗಳಿಲ್ಲದೇ ಸದ್ಗತಿ ಪಡೆದ ನಿದರ್ಶನಗಳು ಅನೇಕ ಉಂಟು. ನಾರದೀಯಪುರಾಣದಲ್ಲಿ ಬಂದಿರುವ ರುಕ್ಮಾಂಗದನ ಮಗನಾದ ಧರ್ಮಾಂಗದ(ಧರ್ಮಭೂಷಣ) ಅಂತಹ ಒಂದು ನಿದರ್ಶನ. ಸಂಧ್ಯಾವಳಿ ಧರ್ಮಾಂಗದನ ತಾಯಿ. ರುಕ್ಮಾಂಗದ ಏಕಾದಶೀವ್ರತವನ್ನು ತನ್ನ ಆಳ್ವಿಕೆಯಲ್ಲಿ ಕಡ್ಡಾಯ ಮಾಡಿದ್ದ ವೈಷ್ಣವಶಿರೋಮಣಿ. ಅದರಿಂದಾಗಿ ಅವನ ಪ್ರಜೆಗಳಾರೂ ನರಕಕ್ಕೆ ಹೋಗುತ್ತಿರಲಿಲ್ಲ. ಆಗ ಬ್ರಹ್ಮದೇವರು ಮೋಹಿನೀ ಎಂಬವಳನ್ನು ಕಳುಹಿಸಿ, ರಾಜನನ್ನು ಸತ್ತ್ವಪರೀಕ್ಷೆಗೆ ಗುರಿಪಡಿಸಿದರು. ತನ್ನನ್ನು ಮೆಚ್ಚಿದ ಅವನಿಗೆ ಅವಳು ಏಕಾದಶೀವ್ರತವನ್ನು ಬಿಟ್ಟಲ್ಲಿ ಮಾತ್ರ ಅವನನ್ನು ಮದುವೆಯಾಗುವುದಾಗಿ ತಿಳಿಸಿದಳು. ಅದಾಗದಿದ್ದಲ್ಲಿ ಅವನ ಮಗ ಧರ್ಮಾಂಗದನ ಶಿರಸ್ಸನ್ನಾದರೂ ತರಿಯಬೇಕು ಎಂದಳು. ಆಗ ಧರ್ಮಾಂಗದ ಮುಂದೆ ಬಂದು ತಂದೆಗೆ ಹೇಳಿದ : ''ಏಕಾದಶೀವ್ರತವನ್ನು ಬಿಡುವುದು ಬೇಡ; ನನ್ನ ತಲೆಯನ್ನೇ ಅರ್ಪಿಸುವೆ''. ಅದರಂತೆ ಧರ್ಮಾಂಗದ ದೇಹ ತೊರೆದಾಗ, ಮೆಚ್ಚಿದ ಶ್ರೀಹರಿ ಅವರೆಲ್ಲರಿಗೂ ಸದ್ಗತಿಯನ್ನು ನೀಡಿದ. ಹೀಗೆ ಧರ್ಮಾಂಗದನು ಸಂತತಿ ಪಡೆಯುವುದಿರಲಿ, ವಿವಾಹವನ್ನೂ ಆಗದೆ ಸದ್ಗತಿಗೆ ತೆರಳಿದ. ಅದಕ್ಕೆ ಅವನು ದಿವ್ಯತತ್ತ್ವಜ್ಞಾನಿಯಾಗಿದ್ದುದೇ ಮುಖ್ಯಕಾರಣ.

ಒಬ್ಬ ವ್ಯಕ್ತಿ ಯಾವ ಕಾರ್ಯಕ್ಕಾಗಿ ಅವತರಿಸಿರುವನೋ ಆ ಕಾರ್ಯವನ್ನು ಪೂರೈಸದೆ ಸದ್ಗತಿ ಪಡೆಯಲಾರ ಎಂಬುದೂ ಶಾಸ್ತ್ರಗಳ ನಿರ್ಣಯ. ಇಲ್ಲಿ ಪಾಂಡುರಾಜ ಮುಖ್ಯದೇವತೆಗಳ ಜನ್ಮಕ್ಕೆ ಕಾರಣವಾಗುವ ಹಿರಿಯ ಉದ್ದೇಶಕ್ಕಾಗಿ ಜನ್ಮ ಪಡೆದಿದ್ದ. ಅವನ ಆ ಕಾರ್ಯ ಇನ್ನೂ ಪೂರೈಸಿರಲಿಲ್ಲ. ಅದನ್ನು ಗಮನದಲ್ಲಿಟ್ಟುಕೊಂಡು ಮುನಿಗಳು ಆ ರೀತಿ ಹೇಳಿದರು. ಇಲ್ಲವಾದಲ್ಲಿ ಮಕ್ಕಳಿಲ್ಲದೆಯೂ ಸದ್ಗತಿ ದೊರೆಯುವುದು. ಸಂಧ್ಯಾವಳಿಯ ಮಗನಾದ ಧರ್ಮಾಂಗದ, ಮಕ್ಕಳಿಲ್ಲದೆಯೂ ಸದ್ಗತಿ ಪಡೆದನಷ್ಟೆ!

## ಯುಧಿಷ್ಠಿರನ ಜನನ

ಆ ವೇಳೆಗಾಗಲೇ ಕಲಿ, ಇಂದ್ರಜಿತ್ ಮೊದಲಾದ ರಾಕ್ಷಸರೆಲ್ಲ ಧೃತರಾಷ್ಟ್ರನ ಪತ್ನಿ ಗಾಂಧಾರಿಯ ಗರ್ಭದಲ್ಲಿ ಸೇರಿದ್ದರು. ಚಿಂತಾಕ್ರಾಂತನಾದ ಪಾಂಡು ಕುಂತಿಯನ್ನು ಕುರಿತು ಹೇಳಿದ – ''ನನಗಿಂತ ಉತ್ತಮನಾದವನಿಂದ ನೀನು ಪುತ್ರನನ್ನು ಪಡೆ. ಹಾಗಿಲ್ಲದೆ ನಮಗೆ ಮಕ್ಕಳಾಗುವ ಸಾಧ್ಯತೆ ಇಲ್ಲ; ಅದಿಲ್ಲದೆ ಸದ್ಗತಿಯಾಗುವಂತಿಲ್ಲ.'' ಗಂಡನ ಮಾತನ್ನು ತುಂಬಾ ಕಷ್ಟದಿಂದಲೇ ಅಂಗೀಕರಿಸುತ್ತ, ಕುಂತಿ ಬಿನ್ನವಿಸಿದಳು – ''ನನ್ನಲ್ಲಿ ದೇವತೆಗಳನ್ನು ವಶಪಡಿಸಿಕೊಂಡು ಮಕ್ಕಳನ್ನು ಪಡೆಯಲು

---

ಆದ್ದರಿಂದ ಜ್ಞಾನದಿಂದಲೇ ಮೋಕ್ಷ ಎಂಬುದು ಸಿದ್ಧಾಂತ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ವಾಕ್ಯಕ್ಕೆ 'ಜ್ಞಾನಹೀನನಿಗೆ ಸದ್ಗತಿ ಇಲ್ಲ' ಎಂದೇ ಅರ್ಥ. ಅಲ್ಲಿನ 'ಪುತ್ರ' ಶಬ್ದಕ್ಕೆ 'ಜ್ಞಾನ'ವೆಂದೇ ಅರ್ಥ ('ಜ್ಞಾನಪುತ್ರವಾನ್' – ಐತರೇಯಭಾಷ್ಯ). ಹರಿದಾಸರ ಕೃತಿಗಳಲ್ಲೂ ಈ ತತ್ತ್ವ ನಿರೂಪಿತವಾಗಿದೆ. ಶ್ರೀಮದ್ಭಾಗವತತಾತ್ಪರ್ಯ-ದಲ್ಲೂ ಶ್ರೀಮದಾಚಾರ್ಯರು ಈ ವಿಷಯವನ್ನು ನಿರೂಪಿಸಿರುವರು. ಸನಕಾದಿಗಳು ಆಜೀವನ್ನೈಷ್ಠಿಕ-ಬ್ರಹ್ಮಚಾರಿಗಳು. ಅವರಿಗೆ ಸಂತತಿಯ ಪ್ರಸಕ್ತಿಯೇ ಇಲ್ಲ. ಆದರೆ ಅವರೆಲ್ಲ ಮೋಕ್ಷ ಹೊಂದುವವರಲ್ಲಿ ಮುಂಚೂಣಿಯಲ್ಲಿರುವವರು ಎಂಬುದನ್ನು ಗಮನಿಸಬೇಕು. ಎಂದರೆ ಪುತ್ರರಿರುವುದು, ಇಲ್ಲದಿರುವುದು ಮುಖ್ಯವಲ್ಲ; ಜ್ಞಾನವಿರುವುದಷ್ಟೇ ಮುಖ್ಯ ಎಂಬುದು ಇದರ ಮಥಿತಾರ್ಥ. ಪುತ್ರರಿದ್ದಲ್ಲಿ ಅದು ಸಾಧನೆಗೆ ಅತಿಶಯ ತಂದು ಕೊಡಬಹುದೇ ಹೊರತು, ಅದೇ ಮೂಲಸಾಧನೆಯಾಗದು. ಅಂತಹ ಪುತ್ರರೂ ಸಹ ಯೋಗ್ಯವೈಷ್ಣವಪುತ್ರರೇ ಆಗಬೇಕೇ ಹೊರತು, ಸರ್ವಥಾ ದುರ್ಯೋಧನಾದಿಗಳಂತಹ ದುಷ್ಟಪುತ್ರರಲ್ಲ. ಇಲ್ಲಿ ಪಾಂಡುರಾಜನಿಗೆ ಸದ್ಗತಿಯ ಸಮಸ್ಯೆ ಇಲ್ಲವೇ ಇಲ್ಲ. ಅವನು ಮೂಲತಃ ಪರಾವಹ ಮರುತ್ತಿನ ಅವತಾರ; ಎಂದರೆ ದಿವ್ಯತತ್ತ್ವಜ್ಞಾನಿ ('ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ') ಅಪರೋಕ್ಷಜ್ಞಾನಿಗಳಿಗೆ ಮೋಕ್ಷ ಖಚಿತ ಎಂಬುದು ಶಾಸ್ತ್ರದ ನಿರ್ಣಯವಲ್ಲವೆ! ಅವನಿಗೀಗ ಬ್ರಹ್ಮಸಭೆಗೆ ಅವಕಾಶ ಲಭಿಸದ್ದು ಒಂದು ವಿಶೇಷ. ಅದಕ್ಕೆ ಕಾರಣ ಪುತ್ರರಿಲ್ಲದ್ದು ಎಂಬುದಲ್ಲ; ಅವನಿನ್ನೂ ತನ್ನ ಅವತಾರದ ಮುಖ್ಯಕಾರ್ಯವನ್ನು ಪೂರೈಸಿಲ್ಲ ಎಂದು. ಅವನ ಅವತಾರದ ಮುಖ್ಯಕಾರ್ಯ ಸಂತತಿ ಪಡೆಯಲು ತನ್ನ ಪತ್ನಿಯರಿಗೆ ಆದೇಶ ನೀಡುವುದು ಮಾತ್ರ ಆಗಿತ್ತು. ಅದನ್ನಿನ್ನೂ ಅವನು ಪೂರೈಸಿರಲಿಲ್ಲ. ಅದಕ್ಕೆಂದೇ ಅವನಿಗೆ ಬ್ರಹ್ಮಸಭೆಗೆ ಹೋಗುವ ಅವಕಾಶ ಲಭಿಸಲಿಲ್ಲ ಎಂದು ಭಾವ. ಇಂತಹ ಅವತಾರಕಾರ್ಯ ಪುತ್ರೋತ್ಪತ್ತಿಯ ಹೊರತು ಬೇರೆ ಯಾವುದೇ ಆಗಿದ್ದರೂ ಅದು ಸದ್ಗತಿಗೆ ಪ್ರತಿಬಂಧಕವಾಗುವುದು ನಿಶ್ಚಿತ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬುದಕ್ಕೆ ಪುತ್ರಜನನಕ್ಕೋಸ್ಕರ ಅವತರಿಸಿದವನು ಮಾತ್ರ ಆ ಕಾರ್ಯ ಪೂರೈಸದೆ, ಸದ್ಗತಿಗೆ ತೆರಳಲಾರ ಎಂಬ ವಿಶೇಷಾರ್ಥ ಜನಾರ್ದನೀಯದಲ್ಲಿದೆ. ಖಾಂಡವವನದಹನ ಪ್ರಸಂಗದಲ್ಲಿ ಬರುವ ಮಂದಪಾಲ ಋಷಿಯ ಪ್ರಸಂಗವೂ ಇಂತಹುದೇ ಎಂಬುದನ್ನು ಗಮನಿಸಬೇಕು. ಅವರಿಗೆ ಹಾಗೆ ಜನಿಸಿದ ಜರಿತಾರಿ ಮೊದಲಾದ ಪಕ್ಷಿಗಳು ಅಗ್ನಿಸೂಕ್ತವನ್ನು ಪಠಿಸಿ ಸುಡದೆ ಪಾರಾದ ವಿವರ ಅಲ್ಲಿದೆ.

ತಂದೆಯೇ ನಿಮ್ಮನ್ನು ಕೊಲ್ಲುವಂತಾಗಲಿ'' ಎಂದು ಅವರನ್ನು ಶಪಿಸಿದ. ಶ್ರೀಹರಿಯ ಆಜ್ಞೆಯಿಂದ ದುರ್ಗಾದೇವಿ ಅವರನ್ನೆಲ್ಲ ಕ್ರಮವಾಗಿ ದೇವಕಿಯ ಗರ್ಭದಲ್ಲಿ ಸೇರಿಸಿದಳು. ಅವರನ್ನು ಕ್ರಮವಾಗಿ ಅವರೆಲ್ಲರ [೧] ತಂದೆಯಾಗಿದ್ದ ಕಾಲನೇಮಿ ಕಂಸನೇ ಕೊಂದುಬಿಟ್ಟ.

## ಸಂತತಿ ಪಡೆಯಲು ಪಾಂಡುವಿನ ನಿರ್ಧಾರ

ಇತ್ತ ನಾರಾಯಣಾಶ್ರಮದಲ್ಲಿ ಪಾಂಡುರಾಜನ ದಿನಗಳು ಸಾರ್ಥಕ ರೀತಿಯಲ್ಲಿಯೇ ಕಳೆಯುತ್ತಿದ್ದವು. ಒಮ್ಮೆ ಮುನಿಗಳೆಲ್ಲ ತಂಡೋಪತಂಡವಾಗಿ ಬ್ರಹ್ಮದೇವರ ಸಭೆಗೆಂದು ಹೊರಟಿದ್ದ ದೃಶ್ಯ ಕಣ್ಣಿಗೆ ಬಿದ್ದು, ಪಾಂಡುರಾಜ ಸಪತ್ನೀಕನಾಗಿ ಅವರನ್ನು ತಾನೂ ಹಿಂಬಾಲಿಸಿದ. ಸ್ವಲ್ಪ ದೂರ ಸಾಗಿದ ಮೇಲೆ ಪಾಂಡುರಾಜನಿಗೆ ಅವರನ್ನು ಅನುಸರಿಸಲು ಸಾಧ್ಯವಾಗದಾಯಿತು. ''ಪಾಂಡುರಾಜ ! ಮಕ್ಕಳಿಲ್ಲದ ನಿನಗೆ ಅಲ್ಲಿ ಪ್ರವೇಶ ದೊರೆಯಲಾರದು'' - ಎಂದು ಮುನಿಗಳು ಅದಕ್ಕೆ ಕಾರಣವನ್ನು ತಿಳಿಸಿದರು. ಆ ಮಾತು ಪಾಂಡುರಾಜನಿಗೆ ದಿಗ್ಭ್ರಮೆ ಹುಟ್ಟಿಸಿತು. [೨] ಮಕ್ಕಳಿಲ್ಲದೆಯೂ ಸದ್ಗತಿ ಲಭಿಸುವುದು ಎಂದು ಶಾಸ್ತ್ರಗಳು ನುಡಿದಿವೆ. ಆದರೆ

---

೧. ಕಂಸ ದೇವಕಿಯ ಮಕ್ಕಳೆಂದು ಕೊಲ್ಲುತ್ತಿದ್ದುದು ನಿಜವಾಗಿಯೂ ತನ್ನ ಮೂಲರೂಪವಾದ ಕಾಲನೇಮಿಯ ಮಕ್ಕಳನ್ನೇ ; ಎಂದರೆ ತನ್ನ ಮಕ್ಕಳನ್ನೇ. ಇದರ ಪರಿವೆ ಮಾತ್ರ ಅವನಿಗಿರಲಿಲ್ಲ. ಇದು ಇತರರ ವಸ್ತುಗಳನ್ನು ನಾಶಪಡಿಸಿದೆವೆಂದು ಸಂಭ್ರಮಿಸುವ ಜನ ನಿಜಕ್ಕೂ ನಾಶಪಡಿಸಿದ್ದು ತಮ್ಮ ದೇಶದ ಸಂಪತ್ತನ್ನೇ ; ತಾವು ಗಳಿಸಿದ ಪುಣ್ಯರೂಪದ ಸಂಪತ್ತನ್ನೇ ಎಂಬ ಸಂದೇಶವನ್ನು ಸೂಚಿಸುವುದು.

೨. ಸಂತತಿ ಇಲ್ಲದೆ ಸದ್ಗತಿ ಇಲ್ಲ; ಅದರಲ್ಲೂ ಪುತ್ರ ಸಂತಾನವಿಲ್ಲದೆ ಸದ್ಗತಿ ಇಲ್ಲ ಎಂಬುದು ಹೆಚ್ಚು ಪ್ರಚಾರದಲ್ಲಿರುವ ಮಾತು. ಶಾಸ್ತ್ರವಚನವೂ ಹಾಗೇ ಇದೆ – 'ಅಪುತ್ರಸ್ಯ ಗತಿರ್ನಾಸ್ತಿ', 'ನಾಪುತ್ರಸ್ಯ ಲೋಕೋऽಸ್ತಿ'. ಇವುಗಳ ಸರಿಯಾದ ಅರ್ಥವನ್ನು ತಿಳಿಯದವರು ಪುತ್ರಸಂತಾನವಿಲ್ಲದೆ ಸದ್ಗತಿ ಸಾಧ್ಯವಿಲ್ಲ ಎಂದು ತಪ್ಪು ತಿಳಿಯುವ ಸಾಧ್ಯತೆ ಇದೆ. ಆದ್ದರಿಂದ ಅದರ ಬಗ್ಗೆ ಶ್ರೀಮದಾಚಾರ್ಯರು ಇಲ್ಲಿ ಈ ರೀತಿಯ ಸ್ಪಷ್ಟೀಕರಣ ನೀಡಿರುವರು. ಮೋಕ್ಷಕ್ಕೆ ಅಗತ್ಯವಾದುದು ಜ್ಞಾನವೇ ಹೊರತು, ಸಂತತಿ ಮೊದಲಾದ ಇತರ ಯಾವುದೂ ಅಲ್ಲ. ಬೇರೆಲ್ಲ ಇದ್ದು ಜ್ಞಾನವೊಂದು ಇಲ್ಲವಾದರೆ, ಅವರಿಗೆಂದೂ ಸದ್ಗತಿ ಲಭಿಸದು ಎಂಬುದೇ ಶಾಸ್ತ್ರವಾಣಿ - 'ಜ್ಞಾನೇನೈವ ಪರಂ ಪದಮ್'. ಜ್ಞಾನವಿಲ್ಲದೇ ಸದ್ಗತಿ ಪಡೆದ ಒಂದು ನಿದರ್ಶನವೂ ದೊರೆಯುವುದಿಲ್ಲ. ಆದರೆ ಸಂತತಿ ಮೊದಲಾದವುಗಳಿಲ್ಲದೇ ಸದ್ಗತಿ ಪಡೆದ ನಿದರ್ಶನಗಳು ಅನೇಕ ಉಂಟು. ನಾರದೀಯಪುರಾಣದಲ್ಲಿ ಬಂದಿರುವ ರುಕ್ಮಾಂಗದನ ಮಗನಾದ ಧರ್ಮಾಂಗದ(ಧರ್ಮಭೂಷಣ) ಅಂತಹ ಒಂದು ನಿದರ್ಶನ. ಸಂಧ್ಯಾವಳಿ ಧರ್ಮಾಂಗದನ ತಾಯಿ. ರುಕ್ಮಾಂಗದ ಏಕಾದಶೀವ್ರತವನ್ನು ತನ್ನ ಆಳ್ವಿಕೆಯಲ್ಲಿ ಕಡ್ಡಾಯ ಮಾಡಿದ್ದ ವೈಷ್ಣವಶಿರೋಮಣಿ. ಅದರಿಂದಾಗಿ ಅವನ ಪ್ರಜೆಗಳಾರೂ ನರಕಕ್ಕೆ ಹೋಗುತ್ತಿರಲಿಲ್ಲ. ಆಗ ಬ್ರಹ್ಮದೇವರು ಮೋಹಿನೀ ಎಂಬವಳನ್ನು ಕಳುಹಿಸಿ, ರಾಜನನ್ನು ಸತ್ತ್ವಪರೀಕ್ಷೆಗೆ ಗುರಿಪಡಿಸಿದರು. ತನ್ನನ್ನು ಮೆಚ್ಚಿದ ಅವನಿಗೆ ಅವಳು ಏಕಾದಶೀವ್ರತವನ್ನು ಬಿಟ್ಟಲ್ಲಿ ಮಾತ್ರ ಅವನನ್ನು ಮದುವೆಯಾಗುವುದಾಗಿ ತಿಳಿಸಿದಳು. ಅದಾಗದಿದ್ದಲ್ಲಿ ಅವನ ಮಗ ಧರ್ಮಾಂಗದನ ಶಿರಸ್ಸನ್ನಾದರೂ ತರಿಯಬೇಕು ಎಂದಳು. ಆಗ ಧರ್ಮಾಂಗದ ಮುಂದೆ ಬಂದು ತಂದೆಗೆ ಹೇಳಿದ : ''ಏಕಾದಶೀವ್ರತವನ್ನು ಬಿಡುವುದು ಬೇಡ; ನನ್ನ ತಲೆಯನ್ನೇ ಅರ್ಪಿಸುವೆ''. ಅದರಂತೆ ಧರ್ಮಾಂಗದ ದೇಹ ತೊರೆದಾಗ, ಮೆಚ್ಚಿದ ಶ್ರೀಹರಿ ಅವರೆಲ್ಲರಿಗೂ ಸದ್ಗತಿಯನ್ನು ನೀಡಿದ. ಹೀಗೆ ಧರ್ಮಾಂಗದನು ಸಂತತಿ ಪಡೆಯುವುದಿರಲಿ, ವಿವಾಹವನ್ನೂ ಆಗದೆ ಸದ್ಗತಿಗೆ ತೆರಳಿದ. ಅದಕ್ಕೆ ಅವನು ದಿವ್ಯತತ್ತ್ವಜ್ಞಾನಿಯಾಗಿದ್ದುದೇ ಮುಖ್ಯಕಾರಣ.

ಒಬ್ಬ ವ್ಯಕ್ತಿ ಯಾವ ಕಾರ್ಯಕ್ಕಾಗಿ ಅವತರಿಸಿರುವನೋ ಆ ಕಾರ್ಯವನ್ನು ಪೂರೈಸದೆ ಸದ್ಗತಿ ಪಡೆಯಲಾರ ಎಂಬುದೂ ಶಾಸ್ತ್ರಗಳ ನಿರ್ಣಯ. ಇಲ್ಲಿ ಪಾಂಡುರಾಜ ಮುಖ್ಯದೇವತೆಗಳ ಜನ್ಮಕ್ಕೆ ಕಾರಣವಾಗುವ ಹಿರಿಯ ಉದ್ದೇಶಕ್ಕಾಗಿ ಜನ್ಮ ಪಡೆದಿದ್ದ. ಅವನ ಆ ಕಾರ್ಯ ಇನ್ನೂ ಪೂರೈಸಿರಲಿಲ್ಲ. ಅದನ್ನು ಗಮನದಲ್ಲಿಟ್ಟುಕೊಂಡು ಮುನಿಗಳು ಆ ರೀತಿ ಹೇಳಿದರು. ಇಲ್ಲವಾದಲ್ಲಿ ಮಕ್ಕಳಿಲ್ಲದೆಯೂ ಸದ್ಗತಿ ದೊರೆಯುವುದು. ಸಂಧ್ಯಾವಳಿಯ ಮಗನಾದ ಧರ್ಮಾಂಗದ, ಮಕ್ಕಳಿಲ್ಲದೆಯೂ ಸದ್ಗತಿ ಪಡೆದನಷ್ಟೆ!

## ಯುಧಿಷ್ಠಿರನ ಜನನ

ಆ ವೇಳೆಗಾಗಲೇ ಕಲಿ, ಇಂದ್ರಜಿತ್ ಮೊದಲಾದ ರಾಕ್ಷಸರೆಲ್ಲ ಧೃತರಾಷ್ಟ್ರನ ಪತ್ನಿ ಗಾಂಧಾರಿಯ ಗರ್ಭದಲ್ಲಿ ಸೇರಿದ್ದರು. ಚಿಂತಾಕ್ರಾಂತನಾದ ಪಾಂಡು ಕುಂತಿಯನ್ನು ಕುರಿತು ಹೇಳಿದ – ''ನನಗಿಂತ ಉತ್ತಮನಾದವನಿಂದ ನೀನು ಪುತ್ರನನ್ನು ಪಡೆ. ಹಾಗಿಲ್ಲದೆ ನಮಗೆ ಮಕ್ಕಳಾಗುವ ಸಾಧ್ಯತೆ ಇಲ್ಲ; ಅದಿಲ್ಲದೆ ಸದ್ಗತಿಯಾಗುವಂತಿಲ್ಲ.'' ಗಂಡನ ಮಾತನ್ನು ತುಂಬಾ ಕಷ್ಟದಿಂದಲೇ ಅಂಗೀಕರಿಸುತ್ತ, ಕುಂತಿ ಬಿನ್ನವಿಸಿದಳು – ''ನನ್ನಲ್ಲಿ ದೇವತೆಗಳನ್ನು ವಶಪಡಿಸಿಕೊಂಡು ಮಕ್ಕಳನ್ನು ಪಡೆಯಲು

---

ಆದ್ದರಿಂದ ಜ್ಞಾನದಿಂದಲೇ ಮೋಕ್ಷ ಎಂಬುದು ಸಿದ್ಧಾಂತ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ವಾಕ್ಯಕ್ಕೆ 'ಜ್ಞಾನಹೀನನಿಗೆ ಸದ್ಗತಿ ಇಲ್ಲ' ಎಂದೇ ಅರ್ಥ. ಅಲ್ಲಿನ 'ಪುತ್ರ' ಶಬ್ದಕ್ಕೆ 'ಜ್ಞಾನ'ವೆಂದೇ ಅರ್ಥ ('ಜ್ಞಾನಪುತ್ರವಾನ್' – ಐತರೇಯಭಾಷ್ಯ). ಹರಿದಾಸರ ಕೃತಿಗಳಲ್ಲೂ ಈ ತತ್ತ್ವ ನಿರೂಪಿತವಾಗಿದೆ. ಶ್ರೀಮದ್ಭಾಗವತತಾತ್ಪರ್ಯ-ದಲ್ಲೂ ಶ್ರೀಮದಾಚಾರ್ಯರು ಈ ವಿಷಯವನ್ನು ನಿರೂಪಿಸಿರುವರು. ಸನಕಾದಿಗಳು ಆಜೀವನೈಷ್ಠಿಕ-ಬ್ರಹ್ಮಚಾರಿಗಳು. ಅವರಿಗೆ ಸಂತತಿಯ ಪ್ರಸಕ್ತಿಯೇ ಇಲ್ಲ. ಆದರೆ ಅವರೆಲ್ಲ ಮೋಕ್ಷ ಹೊಂದುವವರಲ್ಲಿ ಮುಂಚೂಣಿಯಲ್ಲಿರುವವರು ಎಂಬುದನ್ನು ಗಮನಿಸಬೇಕು. ಎಂದರೆ ಪುತ್ರರಿರುವುದು, ಇಲ್ಲದಿರುವುದು ಮುಖ್ಯವಲ್ಲ; ಜ್ಞಾನವಿರುವುದಷ್ಟೇ ಮುಖ್ಯ ಎಂಬುದು ಇದರ ಮಥಿತಾರ್ಥ. ಪುತ್ರರಿದ್ದಲ್ಲಿ ಅದು ಸಾಧನೆಗೆ ಅತಿಶಯ ತಂದು ಕೊಡಬಹುದೇ ಹೊರತು, ಅದೇ ಮೂಲಸಾಧನೆಯಾಗದು. ಅಂತಹ ಪುತ್ರರೂ ಸಹ ಯೋಗ್ಯವೈಷ್ಣವಪುತ್ರರೇ ಆಗಬೇಕೇ ಹೊರತು, ಸರ್ವಥಾ ದುರ್ಯೋಧನಾದಿಗಳಂತಹ ದುಷ್ಟಪುತ್ರರಲ್ಲ. ಇಲ್ಲಿ ಪಾಂಡುರಾಜನಿಗೆ ಸದ್ಗತಿಯ ಸಮಸ್ಯೆ ಇಲ್ಲವೇ ಇಲ್ಲ. ಅವನು ಮೂಲತಃ ಪರಾವಹ ಮರುತ್ತಿನ ಅವತಾರ; ಎಂದರೆ ದಿವ್ಯತತ್ತ್ವಜ್ಞಾನಿ ('ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ') ಅಪರೋಕ್ಷಜ್ಞಾನಿಗಳಿಗೆ ಮೋಕ್ಷ ಖಚಿತ ಎಂಬುದು ಶಾಸ್ತ್ರದ ನಿರ್ಣಯವಲ್ಲವೆ! ಅವನಿಗೀಗ ಬ್ರಹ್ಮಸಭೆಗೆ ಅವಕಾಶ ಲಭಿಸದ್ದು ಒಂದು ವಿಶೇಷ. ಅದಕ್ಕೆ ಕಾರಣ ಪುತ್ರರಿಲ್ಲದ್ದು ಎಂಬುದಲ್ಲ; ಅವನಿನ್ನೂ ತನ್ನ ಅವತಾರದ ಮುಖ್ಯಕಾರ್ಯವನ್ನು ಪೂರೈಸಿಲ್ಲ ಎಂದು. ಅವನ ಅವತಾರದ ಮುಖ್ಯಕಾರ್ಯ ಸಂತತಿ ಪಡೆಯಲು ತನ್ನ ಪತ್ನಿಯರಿಗೆ ಆದೇಶ ನೀಡುವುದು ಮಾತ್ರ ಆಗಿತ್ತು. ಅದನ್ನಿನ್ನೂ ಅವನು ಪೂರೈಸಿರಲಿಲ್ಲ. ಅದಕ್ಕೆಂದೇ ಅವನಿಗೆ ಬ್ರಹ್ಮಸಭೆಗೆ ಹೋಗುವ ಅವಕಾಶ ಲಭಿಸಲಿಲ್ಲ ಎಂದು ಭಾವ. ಇಂತಹ ಅವತಾರಕಾರ್ಯ ಪುತ್ರೋತ್ಪತ್ತಿಯ ಹೊರತು ಬೇರೆ ಯಾವುದೇ ಆಗಿದ್ದರೂ ಅದು ಸದ್ಗತಿಗೆ ಪ್ರತಿಬಂಧಕವಾಗುವುದು ನಿಶ್ಚಿತ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬುದಕ್ಕೆ ಪುತ್ರಜನನಕ್ಕೋಸ್ಕರ ಅವತರಿಸಿದವನು ಮಾತ್ರ ಆ ಕಾರ್ಯ ಪೂರೈಸದೆ, ಸದ್ಗತಿಗೆ ತೆರಳಲಾರ ಎಂಬ ವಿಶೇಷಾರ್ಥ ಜನಾರ್ದನೀಯದಲ್ಲಿದೆ. ಖಾಂಡವವನದಹನ ಪ್ರಸಂಗದಲ್ಲಿ ಬರುವ ಮಂದಪಾಲ ಋಷಿಯ ಪ್ರಸಂಗವೂ ಇಂತಹುದೇ ಎಂಬುದನ್ನು ಗಮನಿಸಬೇಕು. ಅವರಿಗೆ ಹಾಗೆ ಜನಿಸಿದ ಜರಿತಾರಿ ಮೊದಲಾದ ಪಕ್ಷಿಗಳು ಅಗ್ನಿಸೂಕ್ತವನ್ನು ಪಠಿಸಿ ಸುಡದೆ ಪಾರಾದ ವಿವರ ಅಲ್ಲಿದೆ.

ಸಾಧ್ಯವಾಗುವ ಒಂದು ದಿವ್ಯಮಂತ್ರವಿದೆ. ದೇವತೆಗಳ ಹೊರತು ನಿನಗಿಂತ ಉತ್ತಮರು ಬೇರೆಯವರು ದೊರೆಯಲಾರರು. ದೇವತೆಗಳಲ್ಲೂ ನಿನ್ನನ್ನು ಮೀರಿಸುವವರ ಸಂಖ್ಯೆ ಹೆಚ್ಚೇನಿಲ್ಲ. ಅವರಲ್ಲಿ ನಿನ್ನನ್ನು ಮೀರಿಸುವ ಯಾವ ದೇವತೆಯಿಂದ ನಾನು ಪುತ್ರನನ್ನು ಪಡೆಯಲಿ, ತಿಳಿಸು." ಯೋಚಿಸುತ್ತ ಪಾಂಡು ಹೀಗೆಂದ - "ಧರ್ಮದ ನೆರವಿಲ್ಲದೆ ರಾಜನು ಭೂಮಿಯನ್ನು ಪಾಲಿಸಲಾರ. ಧರ್ಮದ ಅಧಿದೇವತೆ ಯಮಧರ್ಮರಾಜನೇ ಅಲ್ಲವೇ. ಅವನಿಂದ ಜನಿಸಿದ ಮಗು ಶ್ರೇಷ್ಠನೂ, ಧಾರ್ಮಿಕನೂ ಆಗುವನು. ಆದ್ದರಿಂದ ಅವನನ್ನೇ ಕರೆ."

ಕುಂತಿಯ ಮಂತ್ರದ ಕರೆಗೆ ಯಮಧರ್ಮ ಧಾವಿಸಿ ಬಂದ. ಅವನಿಂದ ಕೂಡಲೇ ಪುತ್ರರತ್ನವೊಂದನ್ನು ಕುಂತಿ ಪಡೆದಳು. ಯಮನು ತಾನೇ ತನ್ನ ಪುತ್ರನೆನ್ನಿಸಿ ಹಾಗೆ ಜನಿಸಿ ಬಂದಿದ್ದ. ಮಗು "ಯುಧಿಷ್ಠಿರ" ಎಂಬ ಹೆಸರನ್ನು ಹೊಂದಿ ಬೆಳೆಯಿತು.

## ದುರ್ಯೋಧನಾದಿಗಳ ಜನನ

ಹಾಗೆ ಕುಂತಿ ಮಗನನ್ನು ಪಡೆದ ವಾರ್ತೆ ಗಾಂಧಾರಿಯ ಕಿವಿಗೆ ಬಿದ್ದಿತು. ಅಸೂಯೆಯಿಂದ ಉರಿದೆದ್ದ ಗಾಂಧಾರಿ ತಿಂಗಳುಗಳುರುಳಿದ್ದರೂ, ಪ್ರಸವವಾಗದಿದ್ದ ತನ್ನ ಗರ್ಭವನ್ನೇ ಹೊಡೆದು-ಕೊಂಡಳು. ಗರ್ಭಪಾತವಾಗುತ್ತಿದ್ದಂತೆಯೇ ವೇದವ್ಯಾಸರು ಆಗಮಿಸಿದರು ; ನೂರೊಂದಾಗಿ ಒಡೆದಿದ್ದ ಗರ್ಭವನ್ನು ಪ್ರತ್ಯೇಕ ಪ್ರತ್ಯೇಕವಾಗಿ ತುಪ್ಪ ತುಂಬಿದ ಘಟಗಳಲ್ಲಿರಿಸಿ, ದೇವಕಾರ್ಯದ ಸಿದ್ಧಿಗಾಗಿ ಅವರು ಅವುಗಳನ್ನು ಉಳಿಸಿದರು. ದಿನಕ್ಕೊಬ್ಬರಂತೆ ನೂರು ಜನರು ನೂರು ಕಲಶಗಳಿಂದ ಹುಟ್ಟಿದರು ; ನೂರೊಂದನೆಯವಳಾಗಿ ದುಃಶಲೆ ಜನಿಸಿದಳು. ಹಿರಿಯ ಮಗನೇ ಕಲಿ. ಸುಯೋಧನ ಎಂಬುದು ಅವನ ಇಲ್ಲಿಯ ಹೆಸರು. ಮುಖ್ಯವಾಯುವಿನ ಸನ್ನಿಧಾನ-ದಿಂದಾಗಿ ಅಪಾರ ಬಲ ಅವನಲ್ಲಿ ತುಂಬಿತ್ತು. ಮೇರುಪರ್ವತದ ಮೇಲೆ ದೇವತೆಗಳು ಅವತರಿಸುವ ವಿಚಾರವನ್ನು ಹೇಗೋ ಕಿವಿಗೆ ಬೀಳಿಸಿಕೊಂಡ ದೈತ್ಯವರ್ಗ ತಾನೂ ಹುಟ್ಟಲಿಚ್ಛಿಸಿ ಮುಕ್ಕಣ್ಣನನ್ನು ಕುರಿತು ತಪಸ್ಸು ಮಾಡಿತು. ಅವರಿಂದ ವರ ಪಡೆದ ಆ ದೈತ್ಯವೃಂದ ಇಲ್ಲಿ ಹೀಗೆ ಅವತರಿಸಿತು. ಅದರ ಪ್ರಭಾವದಿಂದಲೇ ದುರ್ಯೋಧನ ವಜ್ರಕಾಯನಾಗಿದ್ದ. ತುಪ್ಪ ತುಂಬಿದ ಎರಡನೆಯ ಕಲಶದಿಂದ [೧]ಇಂದ್ರಜಿತ್ ಹೊರಬಂದ ; ದುಃಶಾಸನ ಎಂಬುದು ಅವನ ಹೆಸರು. ಅನಂತರ ವಿಕರ್ಣನೆಂಬ ಹೆಸರಿನಿಂದ ಅತಿಕಾಯ ಜನಿಸಿದ ; ಖರ ಚಿತ್ರಸೇನನೆನ್ನಿಸಿದ. ಹೀಗೆಯೇ ಒಬ್ಬರಾದ ಮೇಲೆ ಒಬ್ಬರಂತೆ ಅಸುರರ ತಂಡ ಉದ್ಭವಿಸಿತು. ದೋಷದ ರಾಶಿಗಳೇ ಮೂರ್ತೀಭವಿಸಿದ್ದ ಅವರಲ್ಲಿ ಗುಣಗಳೆಲ್ಲಿಂದ ಬಂದಾವು ! ಕಿರಿಯಳಾದ ದುಃಶಲೆಯಂತೂ ಸಾಕ್ಷಾತ್ ಸುಳ್ಳಿನ ಅವತಾರವೇ ; ಅವಳಲ್ಲಿ ಕುಹುವಿನ ಪ್ರವೇಶ ಬೇರೆ. ಅಭಿಮನ್ಯುವನ್ನು

೧. ಇಂದ್ರಜಿತ್, ಅತಿಕಾಯ, ಖರ ಎಂಬುವರು ರಾಮಾಯಣಕಾಲದಲ್ಲಿ ಅವತರಿಸಿದ್ದ ದೈತ್ಯರು. ಇವರಲ್ಲಿ ಇಂದ್ರಜಿತ್ ಅತಿಕಾಯರು ರಾವಣನ ಪುತ್ರರಾದರೆ, ಖರ ಎಂಬುವನು ರಾವಣನ ಮಲತಮ್ಮನಾಗಿದ್ದನು. ಇದರಿಂದ ರಾಮಾಯಣದ ದುಷ್ಟವರ್ಗವೂ ಸಹ ಮಹಾಭಾರತಕಾಲಕ್ಕೆ ಅವತರಿಸಿ ದೇವವರ್ಗಕ್ಕೆ ವಿರೋಧ-ವೆಸಗುವ ಕಾರ್ಯದಲ್ಲಿ ತೊಡಗಿತು ಎಂದಾಗುವುದು. ಒಂದುರೀತಿಯಲ್ಲಿ ಇದು ಜನ್ಮ ಕಾಲಗಳು ಬದಲಾದರೂ ಸ್ವರೂಪ ಮಾತ್ರ ಸರ್ವಥಾ ಬದಲಾಗದು ಎಂಬ ತತ್ತ್ವಕ್ಕೆ ನಿದರ್ಶನ ಎಂದು ತಿಳಿಯಬಹುದು.

ಕೊಲ್ಲಿಸುವ ನೀಚಕಾರ್ಯಕ್ಕೆಂದು ಅವಳು ಜನಿಸಿಬಂದಿದ್ದಳು. ಅವಳ ಮಾತಿಗೆ ಕಿವಿಗೊಟ್ಟೇ ಅಲ್ಲವೇ ಮುಂದೆ ಸೈಂಧವನು ಅಭಿಮನ್ಯುವಿನ ಮರಣಕ್ಕೆ ಕಾರಣನಾಗುವುದು? ಆ ಸೈಂಧವನಾದರೂ ಕಾಲಕೇಯ ಗುಂಪಿನ ಒಬ್ಬ [೧] ದಾನವ. ನಿರ್ಋತಿಯ ತಮ್ಮ ನಿರ್ಋತ, ನಾಸಿಕಾಭಿಮಾನಿಯಾದ ಮರುತ್ತಿನಿಂದ ಕೂಡಿ, ಯುಯುತ್ಸು ಎಂಬ ಹೆಸರಿನಿಂದ ಹುಟ್ಟಿದ. ಅವನೂ ಧೃತರಾಷ್ಟ್ರನ ಪುತ್ರನೇ ಆದರೂ ಗಾಂಧಾರಿಯಲ್ಲಿ ಜನಿಸಿದವನಲ್ಲ, ವೈಶ್ಯಜಾತಿಯ ಬೇರೊಬ್ಬ ಸ್ತ್ರೀಯಲ್ಲಿ ಹುಟ್ಟಿದ್ದ ಅವನು ವಯಸ್ಸಿನಲ್ಲಿ ಸುಯೋಧನನಿಗಿಂತ ಕಿರಿಯ, ಉಳಿದ ಕೌರವರಿಗಿಂತ ಹಿರಿಯ[೨].

## ಭೀಮಾವತಾರ

ಯುಧಿಷ್ಠಿರನು ಹುಟ್ಟಿ ಕೆಲವು ದಿನಗಳು ಕಳೆದಿದ್ದವು. ಮತ್ತೊಬ್ಬ ಪುತ್ರನನ್ನು ಬಯಸಿದ ಪಾಂಡು ಕುಂತಿಗೆ ಹೇಳಿದ – ''ಧರ್ಮ ಉಳಿಯಬೇಕಾದರೆ ಅದಕ್ಕೆ ಬಾಹುಬಲ ಹಾಗೂ ಜ್ಞಾನಬಲಗಳ ನೆರವು ಅತ್ಯಗತ್ಯ. ಅವುಗಳಿಲ್ಲದೆ ಧರ್ಮ ಹೇಗೆ ತಾನೇ ಉಳಿದೀತು ? ಆದ್ದರಿಂದ ಎರಡೂ ಬಲಗಳಿಂದ ತುಂಬಿರುವ ಮತ್ತೊಬ್ಬ ಮಗನನ್ನು ಪಡೆ. ಯಜ್ಞಗಳಲ್ಲಿ ಅಶ್ವಮೇಧ ದೊಡ್ಡದು. ಮನುಷ್ಯನಿಗೆ ಕಾಣುವ ಜ್ಯೋತಿಸ್ಸುಗಳಲ್ಲಿ ಸೂರ್ಯನೇ ಹಿರಿಯ. ವರ್ಣಗಳಲ್ಲಿ ಎಲ್ಲ ಗುಣಗಳಿಂದಲೂ ಬ್ರಹ್ಮಜ್ಞಾನಿಯು ಶ್ರೇಷ್ಠ ದೇವತೆಗಳಲ್ಲಿ ಹರಿಯನ್ನು ಬಿಟ್ಟರೆ ವಾಯುವೇ ಹಿರಿಯ. ವಿಷ್ಣುವು ವ್ಯಾಸರೂಪದಿಂದ ನನಗೆ ತಂದೆಯಾಗಿರುವುದರಿಂದ, ನಿನಗೆ ಮಾವನಾಗುವನು. ಮಾವನಿಂದ ಪುತ್ರನನ್ನು ಪಡೆಯುವುದು ಕೂಡದು. ಆದ್ದರಿಂದ ವಾಯುವನ್ನೇ ಕರೆ.''

ಜಗತ್ತಿನಲ್ಲಿ ಜ್ಞಾನ, ಬಲ, ಹಾಗೂ ವಿಷ್ಣುಭಕ್ತಿಗಳಲ್ಲಿ ಸಾಟಿಯನ್ನೇ ಹೊಂದಿರದ ವಾಯುದೇವ, ಕುಂತಿಯ ಕರೆಗೆ ಒಲಿದು ಬಂದ; ತಾನೇ ಮಗನಾಗಿ ಜನಿಸಿದ. ಸಕಲವಿದ್ಯೆಗಳಿಗೆ ಆಕರನಾದ್ದರಿಂದ ಭೀಮ ಎಂದೂ ಹಾಗೂ ಸ್ವಾಮಿಯಾದ ವಿಷ್ಣುವಿನೊಂದಿಗೆ ಸದಾ ಪರಮಭಕ್ತಿಯಿಂದ ಕೂಡಿಕೊಂಡಿದ್ದರಿಂದ ಸೇನ ಎಂದೂ, ಒಟ್ಟಾಗಿ 'ಭೀಮಸೇನ' ಎಂದು ಅವನಿಗೆ ಹೆಸರಾಯಿತು. ಭೀಮ ಹುಟ್ಟುತ್ತಿದ್ದಂತೆಯೇ ಭೂಮಿ ಸೀಳಿತು. ಒಮ್ಮೆ ಕುಂತಿ ಮಗುವನ್ನೆತ್ತಿಕೊಂಡು ಓಡಾಡುತ್ತಿದ್ದಾಗ, ಹುಲಿಯ ಗರ್ಜನೆ ಕೇಳಿಸಿತು. ಹುಲಿಗೆ ಭಯಪಟ್ಟು ಮೈಮರೆತ ಕುಂತಿಯ ಕೈಯಿಂದ ಮಗು ಜಾರಿ ಕೆಳಗುರುಳಿತು. ಎಚ್ಚರಗೊಂಡು ಗಾಬರಿಯಿಂದ ಮಗುವನ್ನು ಹುಡುಕಿ ಧಾವಿಸಿದ ಕುಂತಿ ಅಚ್ಚರಿಯಿಂದ ಪುಲಕಗೊಂಡಳು. ಮಗು ಬಿದ್ದ ರಭಸಕ್ಕೆ ಪರ್ವತ ಪುಡಿಪುಡಿಯಾಗಿ ಶತಶೃಂಗ ಎಂಬ ಹೆಸರು ಅದಕ್ಕೆ ಸಾರ್ಥಕವಾಯಿತು.

---

೧. ಗಾಂಧಾರಿಯ ನೂರುಪುತ್ರರೂ ಸಹ ಕಲಿ ಮೊದಲಾದ ದೈತ್ಯರ ಅವತಾರರಾದರೆ, ದುಃಶಲೆ ಎಂಬ ಮಗಳೂ ಸಹ ಸುಳ್ಳಿನ ಅಭಿಮಾನಿದೈತ್ಯಳೇ; ಅದರಂತೆ ಅವಳ ಗಂಡನಾದ ಜಯದ್ರಥನೂ ದೈತ್ಯನೇ. ಹೀಗೆ ಇಡೀ ಕುಟುಂಬವೇ ದೈತ್ಯರನ್ನೊಳಗೊಂಡಿದ್ದು ವಿಶೇಷ. ಮುಂದೆ ಅವರೆಲ್ಲಾ ಸಕುಟುಂಬರಾಗಿಯೇ ಮೃತರಾಗುವರು ಎಂಬುದೂ ಸಹ ಗಮನಾರ್ಹವಾದ ಅಂಶ.

೨. ಭೀಮಸೇನನು ದುರ್ಯೋಧನ ಜನಿಸಿದ ಮಾರನೆಯ ದಿನ ಅವತರಿಸಿದ್ದರಿಂದ ಯುಯುತ್ಸುವು ಅವನಿಗೆ ಸಮವಯಸ್ಕ ಎಂದಾಗುವುದು.

ಮಗು ಮಾತ್ರ ಆಡುತ್ತ ಮಲಗಿತ್ತು. ಭೀಮ ಜನಿಸುತ್ತಿದ್ದಂತೆಯೇ ರಾಕ್ಷಸರೆಲ್ಲ ರಕ್ತಕಾರಿದರು. ಅವರ ಸೈನ್ಯದ ಪಾಡೂ ಹಾಗೇ ಆಗಿತ್ತು. ಅಸುರಪಕ್ಷಪಾತಿಗಳಾದ ರಾಜರ ಮನಸ್ಸೆಲ್ಲ ಅವ್ಯಕ್ತ ಭಯದಿಂದ ತುಂಬಿಹೋಯಿತು; ಬೆಳೆಯುತ್ತಿದ್ದ ಭೀಮನಿಂದ ದೇವವರ್ಗ ನಲಿಯುತ್ತಿತ್ತು.

## ಬಲರಾಮನಾಗಿ ಆದಿಶೇಷ

ಅದೇ ವೇಳೆಗೆ ಶ್ರೀಹರಿಯ ಆಜ್ಞೆಯಿಂದ ಆದಿಶೇಷ ದೇವಕಿಯ ಗರ್ಭವನ್ನು ಪ್ರವೇಶಿಸಿದ ; ಅಲ್ಲಿ ಮೂರು ತಿಂಗಳು ಕಳೆಯುತ್ತಿದ್ದಂತೆಯೇ ಶ್ರೀಹರಿಯ ಆದೇಶದಂತೆ ದುರ್ಗಾದೇವಿ ಅವನನ್ನು ರೋಹಿಣಿಯ ಗರ್ಭಕ್ಕೆ ವರ್ಗಾಯಿಸಿದಳು; ಅಲ್ಲಿ ಏಳು ತಿಂಗಳುಗಳ ಕಾಲ ಇದ್ದು ಜನಿಸಿದ; ಬಲಾಢ್ಯನಾದ ಅವನಿಗೆ ಬಲದೇವ ಎಂದೇ ಹೆಸರಾಯಿತು.

## ಶ್ರೀಕೃಷ್ಣಾವತಾರ

ಅನಂತರ ಕಲ್ಯಾಣಗುಣಗಳ ಮುಖ್ಯಧಾಮನಾದ ಶ್ರೀಹರಿಯು ದೇವಕಿಯಲ್ಲಿ ಅವತರಿಸಿದ. ಉತ್ತಮ ಸುಖಜ್ಞಾನಬಲದೇಹನೂ, ಯಾವುದೇ ದೋಷದ ಸ್ಪರ್ಶ ಇಲ್ಲದವನೂ, ಹುಟ್ಟೇ ಇಲ್ಲದವನೂ ಆದ ಅವನ ದೇಹ ಪ್ರಾಕೃತ ಹೇಗಾದೀತು ? ಶುಕ್ಲರಕ್ತಗಳಿಂದುಂಟಾದ ದೇಹ-ವೆಂದೂ ಅವನದಾಗಲಾರದು. ಆದರೂ ವಸುದೇವ-ದೇವಕಿಯರ ಮಗನೆಂದೇ ವ್ಯವಹರಿಸ-ಲ್ಪಟ್ಟ. ಮೊದಲಿಗೆ ವಸುದೇವನಲ್ಲಿ ಪ್ರವೇಶಿಸಿ, ಅವನಿಂದ ಅನಂತರ ಋತುಕಾಲದಲ್ಲಿಯೇ ದೇವಕಿಯನ್ನು ಪ್ರವೇಶಿಸಿ ಅಲ್ಲಿ ಏಳೂವರೆ ತಿಂಗಳುಗಳನ್ನು ಕಳೆದು ಶ್ರೀಕೃಷ್ಣನು ಪ್ರಕಟನಾದ. ಶುಕ್ಲರಕ್ತಗಳ ಸಂಬಂಧವೇ ಇಲ್ಲದಂತೆ ನೃಸಿಂಹನಾಗಿ ಸ್ತಂಭದಿಂದ ಕಾಣಿಸಿಕೊಂಡಂತೆಯೇ ಶ್ರೀಕೃಷ್ಣನೂ ಪ್ರಾದುರ್ಭವಿಸಿದ. ಆದರೂ ಅವಿವೇಕಿ ಜನರಿಗೆ ಭ್ರಮೆ ಉಂಟುಮಾಡಲೆಂದು ಈ ರೀತಿ ಹುಟ್ಟಿದಂತೆ ಮಾಡಿದ. ತನಗೆ ಪ್ರಾಕೃತದೇಹದ ಸಂಬಂಧವಿಲ್ಲವೆಂಬುದನ್ನು ತೋರಿಸಲೆಂದೇ ಶಂಖಚಕ್ರಗದಾಪದ್ಮಸಮೇತನಾಗಿ ಪ್ರಕಟನಾದ. ಅಸಂಖ್ಯಸೂರ್ಯರನ್ನೂ ಮೀರಿಸುವ ಕಾಂತಿ-ಯುಕ್ತವಾದ ಕಿರೀಟ, ಮಿಂಚಿನಂತೆ ಹೊಳೆಯುವ ಕುಂಡಲಗಳು, ಪೀತಾಂಬರ, ವನ-ಮಾಲೆಗಳಿಂದ ಕೂಡಿಕೊಂಡೇ ಅನಂತಸೂರ್ಯಪ್ರಕಾಶದ ಅವನು ಪ್ರಾದುರ್ಭವಿಸಿದ. ಆ ಗುಣಗಳ ಖಣಿಯನ್ನು ಬ್ರಹ್ಮಾದಿದೇವತೆಗಳೆಲ್ಲ ಆದರದಿಂದ ಸಮೀಪಿಸಿ ಸ್ತುತಿಸಿದರು. ವಸುದೇವನನ್ನು ಕುರಿತು – ''ನನ್ನನ್ನು ನಂದನ ಮನೆಗೆ ಕರೆದೊಯ್ಯಿ'' ಎಂದು ಆಜ್ಞಾಪಿಸಿ, ಎರಡು ಕೈಗಳ ಮಗುವಾಗಿ ಅವನು ಪವಡಿಸಿದ.

## ದುರ್ಗಾವತಾರ

ವಿಷ್ಣುವಿನ ಆಣತಿಯಂತೆ ಮಹಾಲಕ್ಷ್ಮಿಯು 'ದುರ್ಗೆ' ಎಂಬ ಹೆಸರಿನಿಂದ ನಂದನಿಂದ ಯಶೋದೆಯಲ್ಲಿ ಅವತರಿಸಿದಳು. ಶ್ರೀಕೃಷ್ಣನನ್ನು ಕರೆದುಕೊಂಡು ನಂದನ ಮನೆಯನ್ನು ಪ್ರವೇಶಿಸಿದ ವಸುದೇವ ಅವನನ್ನು ಅಲ್ಲಿ ಮಲಗಿಸಿ, ದುರ್ಗೆಯನ್ನು ಎತ್ತಿಕೊಂಡು ಮರಳಿದ.

ಮೊದಲ ಆರು ಮಕ್ಕಳನ್ನು ಕೊಂದು, ಏಳನೆಯದು ಗರ್ಭಪಾತವಾಯಿತೆಂದು ಭಾವಿಸಿದ ಕಂಸ, ಕೃಷ್ಣ ಜನನದ ವಾರ್ತೆ ಕಿವಿಗೆ ಬೀಳುತ್ತಲೇ, ಅತ್ತ ಧಾವಿಸಿದ. ಆ ಹೆಣ್ಣು ಮಗುವಿನ ಕಾಲುಗಳನ್ನು ಹಿಡಿದುಕೊಂಡು ಬಂಡೆಯ ಮೇಲೆ ಅಪ್ಪಳಿಸಿದ. ಕೈತಪ್ಪಿಸಿ ನೆಗೆದ ದುರ್ಗೆ ಎಂಟು ಭುಜದಿಂದ ಕೂಡಿ, ಆಕಾಶದಲ್ಲಿ ಕಾಣಿಸಿಕೊಂಡಳು. ಬ್ರಹ್ಮಾದಿದೇವತೆಗಳೆಲ್ಲ ಅವಳನ್ನು ಸ್ತುತಿಸತೊಡಗಿದರು. ''ಎಲವೋ ಪಾಪಿ ! ನಿನ್ನ ಮೃತ್ಯು ಈಗಾಗಲೇ ಬೇರೆಡೆ ಹುಟ್ಟಿಯಾಗಿದೆ. ನಿರಪರಾಧಿಯಾದ ನನ್ನನ್ನು ವಿನಾಕಾರಣ ಕೊಲ್ಲುವ ನಿನ್ನ ಸಾಹಸ ಎಂದೂ ನಡೆಯದು'' - ಎಂದು ಅದೃಶ್ಯಳಾದ ಅವಳು ಮಗುವಿನ ರೂಪದಲ್ಲಿ ಮತ್ತೆ ದೇವಕಿಯ ಮಡಿಲಲ್ಲಿ ಮಲಗಿದಳು; ಅದು ತಂದೆತಾಯಿಗಳ ಹೊರತಾಗಿ ಬೇರಾರಿಗೂ ತಿಳಿಯಲಿಲ್ಲ. ಇತ್ತ ಕಂಸ ತನ್ನ ಅವಿವೇಕಕ್ಕೆ ಮರುಗಿದಂತೆ ನಟಿಸಿ ವಸುದೇವ ದೇವಕಿಯರನ್ನು ಮತ್ತೆ ಮತ್ತೆ ಕ್ಷಮಿಸಲು ಪ್ರಾರ್ಥಿಸಿಕೊಂಡ. ಅವರೂ ಕೋಪವನ್ನು ಬಿಟ್ಟು ನುಡಿದರು - ''ರಾಜನೇ ! ಸುಖದುಃಖ-ಗಳಿಗೆಲ್ಲ ಪರಮಾತ್ಮನನ್ನು ಬಿಟ್ಟು ಬೇರಾವ ಕಾರಣ ತಾನೇ ಇದೆ.''

## ಕಂಸನ ಶಿಶುಹತ್ಯೆಯ ಯೋಜನೆ

ಕಂಸ ತನ್ನ ಮಂತ್ರಿಗಳ ದೊಡ್ಡ ಸಭೆಯೊಂದನ್ನು ಕರೆಸಿ, ದುರ್ಗೆಯ ಮಾತುಗಳನ್ನೆಲ್ಲ ವಿವರಿಸಿದ. ಅತ್ಯಂತಪಾಪಿಗಳಾದ ಅವರು ಚಿಕ್ಕಮಕ್ಕಳನ್ನೆಲ್ಲ ಕೊಂದುಹಾಕುವ ಸಲಹೆಯನ್ನು ಮುಂದಿಟ್ಟರು. ಆ ಕಾರ್ಯದಲ್ಲಿ ಅವರನ್ನು ನಿಯಮಿಸಿ, ಸ್ವಯಂ ಪಾಪಿಯಾದ ಕಂಸ ಸಭೆಯನ್ನು ವಿಸರ್ಜಿಸಿದ. ಯಾವಾಗಲೂ ಹಿಂಸೆಯಲ್ಲೇ ಸಂತೋಷಪಡುವ ಆ ಪಾಪಿವೃಂದ ಶಿಶುಹತ್ಯೆಯ ಕಾರ್ಯದಲ್ಲಿ ಸಹಜವಾಗಿಯೇ ಅವಿರತವಾಗಿ ತೊಡಗಿಕೊಂಡಿತು.

## ನಂದಾದಿಗಳ ಸಂಭ್ರಮ

ಬೆಳಗಿನ ಝಾವದಲ್ಲಿ ಹಾಸಿಗೆಯ ಮೇಲೆ ಪವಡಿಸಿದ್ದ ಪುಂಡರೀಕಾಕ್ಷನನ್ನು ಕಂಡ ನಂದ-ಯಶೋದೆಯರು ವಸುದೇವ-ದೇವಕಿಯರ ಪುತ್ರನಾದ ಅವನನ್ನು ತಮ್ಮ ಮಗುವೆಂದೇ ಭಾವಿಸಿದರು. ಮೂಲತಃ ಜಗಜ್ಜನಕನಾದ ಕೃಷ್ಣ ಅವರಾರ ಮಗನೂ ಆಗಿರಲಿಲ್ಲ ಎಂಬುದು ವಸ್ತುಸ್ಥಿತಿ. ಆನಂದಕ್ಕೆ ಸೀಮೆಗಾಣದಾದ ನಂದ ಲಕ್ಷಗಟ್ಟಳೆ ಗೋವುಗಳನ್ನು, ಸುವರ್ಣರತ್ನಗಳ ಆಭರಣಗಳನ್ನು, ಬೆಲೆಬಾಳುವ ವಸ್ತ್ರಗಳನ್ನು ದಾನಮಾಡಿದ. ಗೋಪ-ಗೋಪಿಯರೆಲ್ಲ ಉಡುಗೊರೆಗಳೊಂದಿಗೆ ಯಶೋದೆಯ ಬಳಿ ಸಾಗಿದರು. ಒಂದು ತಿಂಗಳು ಹೀಗೆ ಕಳೆದಾದ ಮೇಲೆ ನಂದ ಕಂಸನ ಬಳಿಗೆ ಹೋದ. ಅವನು ಆ ಮೊದಲು ಕಂಸನಿಗೆ ಕರ ಒಪ್ಪಿಸಲೆಂದೇ ಬೃಹದ್ವನದಿಂದ ಮಥುರೆಯತ್ತ ಯಶೋದೆಯ ಸಮೇತನಾಗಿ ಬಂದಿದ್ದ. ಮಾರ್ಗದಲ್ಲಿದ್ದ ಯಮುನೆಯ ಬಳಿ ಬಿಡಾರ ಮಾಡಿದ್ದಾಗ ಯಶೋದೆಯು ದುರ್ಗೆಯನ್ನು ಪ್ರಸವಿಸಿದ್ದಳು. ವಸುದೇವ ಆ ಸಮಯದಲ್ಲೇ ಕೃಷ್ಣನನ್ನು ಅಲ್ಲಿ ಬಿಟ್ಟು, ದುರ್ಗೆಯನ್ನು ಕರೆದೊಯ್ದದ್ದು; ಕಂಸನಿಗೆ ಕಾಣಿಕೆ ಒಪ್ಪಿಸಿಯಾದ ಮೇಲೆ ಅಣ್ಣ ವಸುದೇವನನ್ನು ಕಂಡಾಗ, ಅವನು ''ಆಪತ್ತುಗಳು ಕಾದಿವೆ, ಬೇಗ ತೆರಳು'' ಎಂದು ಎಚ್ಚರಿಸಿದ.

## ಪೂತನಾಸಂಹಾರ

ಕೂಡಲೇ ನಂದ ರಾತ್ರೋರಾತ್ರಿ ಯಮುನೆಯತ್ತ ಧಾವಿಸಿದ. ಆ ವೇಳೆಗಾಗಲೇ ಕಂಸನ ಸಾಕುತಾಯಿ ಪೂತನಿಯು ಶಿಶುಹತ್ಯೆಯ ಕಾರ್ಯದಲ್ಲಿ ನಿರತಳಾಗಿ ಸಾಗುತ್ತ , ಗೋಷ್ಠದ ಬಳಿಗೆ ಬಂದಿದ್ದಳು. ವಿವಿಧಬಗೆಯ ಸುಂದರಸ್ತ್ರೀ ಆಕೃತಿಯನ್ನು ತಾಳಿ, ಶಿಶುಗಳನ್ನು ಎತ್ತಿಕೊಂಡು ವಿಷಪೂರಿತ ಮೊಲೆಗಳನ್ನು ಉಣ್ಣಿಸುತ್ತ, ಅವುಗಳನ್ನು ಕೊಲ್ಲುವುದು ಅವಳ ಹತ್ಯೆಯ ವಿಧಾನವಾಗಿತ್ತು. ಯಮುನಾತೀರದ ಬಳಿ ಹಾಕಿದ್ದ ಡೇರೆಯಲ್ಲಿ ಪವಡಿಸಿದ್ದ ಶ್ರೀಕೃಷ್ಣನನ್ನು ಸಮೀಪಿಸಿ, ಅವನನ್ನು ಪೂತನೆ ಎತ್ತಿಕೊಂಡಳು. ಅದನ್ನು ನಿದ್ರೆಯ ಮಂಪರಿನಲ್ಲಿದ್ದ ಯಶೋದೆ ಅಷ್ಟಾಗಿ ಗಮನಿಸಲಿಲ್ಲ. ಅವಳಿಗೆ ಹಾಗೆ ನಿದ್ರೆ ಬರಲು ಪೂತನೆಯ ಮಾಯೆಯೂ ಕಾರಣ-ವಾಗಿತ್ತು. ಪೂತನೆಯು ತನ್ನ ಬಾಯಲ್ಲಿರಿಸಿದ ಸ್ತನವನ್ನು ಭಗವಂತ ಅವಳ ಪ್ರಾಣಗಳ ಸಮೇತ ಹೀರಿದ. ಸಾಯುತ್ತಿದ್ದಂತೆಯೇ ಭೀಕರವಾದ ತನ್ನ ನಿಜರೂಪವನ್ನು ಧರಿಸಿದ ಪೂತನೆ, ಆ ಪ್ರಾಂತವನ್ನೆಲ್ಲ ವ್ಯಾಪಿಸಿ ಸತ್ತುಬಿದ್ದಳು. ಅದೇ ವೇಳೆಗೆ ನಂದನೂ ಆ ಸ್ಥಳವನ್ನು ಸೇರಿದ. ನಡೆದ ಕೃತ್ಯ ಎಲ್ಲರನ್ನೂ ದಿಗ್ಭ್ರಮೆಗೊಳಿಸಿತು.

ತಾಟಕಿ ಎಂಬ ರಾಕ್ಷಸಿಯೇ ಈ ರೀತಿ ಹುಟ್ಟಿ ಬಂದಿದ್ದಳು. ಹೀಗೆ ಶ್ರೀಕೃಷ್ಣನಿಗೆ ಕೇಡು ಬಗೆದಿದ್ದರಿಂದಾಗಿ ನಿತ್ಯನರಕಕ್ಕೆ ತೆರಳಿದಳು. ಅವಳಲ್ಲಿ ಊರ್ವಶಿಯ ಆವೇಶವಿದ್ದಿದ್ದರಿಂದ ಕೃಷ್ಣನಿಗೆ ಮೊಲೆಯೂಡುವ ಭಾಗ್ಯ ಲಭಿಸಿತ್ತು. ತುಂಬುರುವಿನ ಜೊತೆಗೂಡಿದ ಅಪರಾಧಕ್ಕಾಗಿ ಕುಬೇರನಿಂದ ಹಾಗೆ ಶಪಿಸಲ್ಪಟ್ಟಿದ್ದ ಊರ್ವಶಿಯು, ಈಗ ಶ್ರೀಕೃಷ್ಣನ ಸ್ಪರ್ಶದಿಂದ ಶುದ್ಧಳಾಗಿ ಮತ್ತೆ ಸ್ವರ್ಗಕ್ಕೆ ಮರಳಿದಳು. ರಮೆಯರಸ ಒಲಿದಾಗ ಯಾವುದು ತಾನೇ ದುರ್ಲಭ !

## ಶಕಟಾಸುರನ ಸಂಹಾರ

ಶ್ರೀಕೃಷ್ಣನಿಗೆ ನಾಲ್ಕನೆಯ ತಿಂಗಳು ತುಂಬುತ್ತಿದ್ದಂತೆಯೇ "[೧]ನಿಷ್ಕ್ರಮಣ" ಮಹೋತ್ಸವ ನಡೆಯಿತು. ಅವನ ಜನ್ಮನಕ್ಷತ್ರವೂ ಸಹ ಅದೇ ದಿನ ಬಂದಿದ್ದಿತು. ಅಂದು ಬೆಳಿಗ್ಗೆ ಮಹೋತ್ಸವ-ವೊಂದು ಏರ್ಪಟ್ಟಿತ್ತು. ಒಂದು ಬಂಡಿಯ ಕೆಳಗೆ ಕೃಷ್ಣನನ್ನು ಮಲಗಿಸಿದ್ದರು. ಕಂಸನಿಂದ ಕೃಷ್ಣನ ಹತ್ಯೆಗಾಗಿ ಕಳುಹಿಸಲ್ಪಟ್ಟ ಅಸುರರಲ್ಲಿ ಒಬ್ಬನಾದ ಶಕಟಾಸುರ ಆ ಬಂಡಿಯನ್ನು ಆವೇಶಿಸಿ ನಿಂತಿದ್ದ. ಅವನನ್ನು ಕೊಲ್ಲಲೆಂದು ಕೃಷ್ಣ ಕಾಲಿನಿಂದ ಒಮ್ಮೆ ಅದನ್ನು ಒದ್ದ. ಗಾಡಿಯ ಒಳಗೆ ಅಡಗಿದ್ದ ಆ ಅಸುರನ ಶರೀರ ಪುಡಿಯಾಯಿತು. ಕ್ಷಣಾರ್ಧದಲ್ಲಿ ಬೃಹದಾಕಾರದ ದೈತ್ಯ ಸತ್ತುಬಿದ್ದ. ಕೃಷ್ಣನ ಒದೆತದ ರಭಸಕ್ಕೆ ಬಂಡಿಯ ಚಕ್ರ ಮೊದಲಾದವುಗಳೆಲ್ಲ ಕಿತ್ತು ಈಡಾಡಿದವು. ಭಯಗೊಂಡ ಯಶೋದೆ ಆತುರದಿಂದ ಧಾವಿಸಿ ಮಗುವನ್ನು ಎತ್ತಿಕೊಂಡು ವಿಪ್ರಶ್ರೇಷ್ಠರ ಮಂತ್ರೋಕ್ತಿಗಳಿಂದ ರಕ್ಷೆ ಹಾಕಿಸಿದಳು. ನದಿಯಿಂದ ಮರಳಿದ ನಂದ ಅದನ್ನೆಲ್ಲ ಕಂಡು, ಅವಳ ಅಜಾಗರೂಕತೆಗಾಗಿ ಯಶೋದೆಯ ಮೇಲೆ ಸಿಟ್ಟುಮಾಡಿದ. ಕಂಸಭೃತ್ಯನನ್ನು ಕೊಂದ ಕೃಷ್ಣ

---

೧. ನಿಷ್ಕ್ರಮಣ ಎಂಬುದು ಮಗುವನ್ನು ಮೊದಲಬಾರಿಗೆ ಮನೆಯಿಂದ ಹೊರಕ್ಕೆ ಕರೆದೊಯ್ಯುವ ಸಂಸ್ಕಾರ ; ಇದು ಷೋಡಶಸಂಸ್ಕಾರಗಳಲ್ಲಿ ಒಂದು.

ಮಾತ್ರ ಮತ್ತೆ ಶಿಶುವಿನಂತೆಯೇ ಪವಡಿಸಿದ. ಇಂತಹ ಬಾಲಲೀಲೆಗಳಿಂದ ಗೋಪರನ್ನು ಸಂತೋಷಪಡಿಸುತ್ತ ಶ್ರೀಕೃಷ್ಣ ಅಲ್ಲಿ ನೆಲೆಸಿದ.

## ಅರ್ಜುನನಾಗಿ ಇಂದ್ರ

ಲೋಕದ ಕಣ್ಣಿನಲ್ಲಿ ಈ ರೀತಿ ಕೃಷ್ಣ ಬೆಳೆಯುತ್ತಿದ್ದಂತೆಯೇ, ಅತ್ತ ಪಾಂಡುರಾಜ ಕುಂತಿಗೆ ಮತ್ತೆ ಹೇಳಿದ - ''ಮೊದಲಿಗೆ ನಮಗೆ ಧರ್ಮಿಷ್ಠನಾದ ಒಬ್ಬ ಮಗ ಜನಿಸಿದ; ಬಳಿಕ ಬಾಹುಬಲ ಜ್ಞಾನಬಲಗಳಲ್ಲಿ ಎಲ್ಲರನ್ನೂ ಮೀರುವ ಇನ್ನೊಬ್ಬ ಮಗ ಜನಿಸಿದ ; ಅಂತಹ ಒಬ್ಬನೇ ಮಗನಿದ್ದರೆ, ಅವನೇನಾದರೂ ಶತ್ರುಗಳೊಡನೆ ಕಾದಲು ಹೊರಟಾಗ, ಇತ್ತ ಪಟ್ಟಣವನ್ನು ಬೇರೆ ಶತ್ರುಗಳು ಮುತ್ತಿದರೆ ಧರ್ಮವನ್ನು ರಕ್ಷಿಸುವವರಾರು? ಆದ್ದರಿಂದ ಬಲಶಾಲಿಯಾದ ಮಕ್ಕಳು ಇಬ್ಬರಿರುವುದೇ ಉಚಿತ. ಶಸ್ತ್ರಾಸ್ತ್ರಕುಶಲನಾದ ಮತ್ತೊಬ್ಬ ಮಗ ನಮಗೆ ಬೇಕು. ಅಂತಹ ದೇವತೆಯನ್ನು ಆಹ್ವಾನಿಸು. ಶೇಷದೇವನು ನಿನ್ನ ಸೋದರನಾದ ವಸುದೇವನ ಮಗನಾಗಿ ಹುಟ್ಟಿರುವುದರಿಂದ ಅವನಿಂದ ಸಂತಾನ ಪಡೆಯುವುದು ಯೋಗ್ಯ-ವಲ್ಲ. ಶ್ರೀಹರಿಯಾಜ್ಞೆಯಿಂದಾಗಿ ಗರುಡದೇವನು ಅವತಾರವಿಲ್ಲದವನು. ಇನ್ನು ಕ್ರೋಧಾತ್ಮಕ-ನಾದ ಶಂಕರನು ಪಾಲನಕಾರ್ಯದಲ್ಲಿ ಯೋಗ್ಯನಲ್ಲ. ಇವರನ್ನೆಲ್ಲ ಬಿಟ್ಟರೆ, ಉಳಿದವರಲ್ಲೆಲ್ಲ ಇಂದ್ರನೇ ಶ್ರೇಷ್ಠ. ಆದ್ದರಿಂದ ಆ ಸ್ವರ್ಗಾಧಿಪತಿಯನ್ನೇ ಆಹ್ವಾನಿಸು.'' ಪತಿಯಾಜ್ಞೆಯಂತೆ ಕುಂತಿ ಇಂದ್ರನನ್ನು ನೆನೆದು ಮಂತ್ರವನ್ನು ಪಠಿಸಿದಳು. ಪ್ರಸನ್ನನಾದ ಮಹೇಂದ್ರ ಕುಂತಿಯ ಮಗನಾಗಿ ತಾನೇ ಜನಿಸಿದ. ನರನ ಅಂಶ ಹಾಗೂ ವಿಷ್ಣುವಿನ ಆವೇಶ ಈ ಎರಡರಿಂದ ಅತ್ಯಂತ ಬಲಶಾಲಿಯೂ ಆಗಿದ್ದ ಅವನು ಅಸ್ತ್ರವಿಶಾರದನೂ ಆದ ; ಅವನೇ 'ಅರ್ಜುನ'.

ಅಲ್ಲಿಗೂ ತೃಪ್ತನಾಗದ ಪಾಂಡು ರೂಪವಂತನಾದ ಮತ್ತೊಬ್ಬ ಮಗನನ್ನು ಅಪೇಕ್ಷಿಸಲು, [೧]ಧರ್ಮವಿರುದ್ಧವೆಂಬ ಕಾರಣದಿಂದ ಕುಂತಿ ಅದನ್ನು ನಿರಾಕರಿಸಿದಳು.

## ಉದ್ಧವಾದಿಗಳ ಜನನ

ಇವರೆಲ್ಲರಿಗಿಂತ ಮುಂಚಿತವಾಗಿಯೇ ಬೃಹಸ್ಪತಿಯು, ವಾಯುವಿನ ಆವೇಶದಿಂದ ಕೂಡಿ-ಕೊಂಡು, ''ಉದ್ಧವ''ನೆಂಬ ಹೆಸರಿನಿಂದ ಭಗವಂತನ ಸೇವೆಗಾಗಿ ಜನಿಸಿದ್ದ. ಅವನು ಉಪಗವ ಎಂಬ ಕುರುವೀರನ ಮಗ. ಕೌರವಪಕ್ಷವನ್ನು ಸೇರುವ ದ್ರೋಣರೂಪದ ತನ್ನನ್ನು ಬಹಳವಾಗಿ ಶ್ರೀಕೃಷ್ಣ ಮೆಚ್ಚಲಾರ ಎಂಬ ಕಾರಣದಿಂದಲೇ, ಬೃಹಸ್ಪತಿ ಈ ರೀತಿ ಮತ್ತೊಂದು ರೂಪದಿಂದ ಅವತರಿಸಿದ್ದ. ಬೃಹಸ್ಪತಿಯಿಂದಲೇ ಎಲ್ಲ ವಿದ್ಯೆಗಳನ್ನು ಅಭ್ಯಸಿಸಿದ ಅವನು, ರಾಜನೀತಿಕೋವಿದನೂ, ಸರ್ವಜ್ಞನೂ ಆಗಿ, ಯಾದವರಿಗೆ ಮಂತ್ರಿ ಎನ್ನಿಸಿದ. ಸಾತ್ಯಕಿಯು ಹುಟ್ಟಿದ್ದು ಮೂರು ವರ್ಷಗಳ

---

೧. ಎಂತಹ ಆಪತ್ತಿನಲ್ಲೂ ಮೂರಕ್ಕಿಂತ ಹೆಚ್ಚು ಮಕ್ಕಳನ್ನು ಪಡೆಯುವುದು ಉಚಿತವಲ್ಲ ; ಅದು ಧರ್ಮಕ್ಕೆ ವಿರುದ್ಧ ಎಂಬ ಕಾರಣವನ್ನು ನೀಡಿ ಕುಂತಿಯು ನಾಲ್ಕನೆಯ ಮಗುವನ್ನು ಪಡೆಯಲು ನಿರಾಕರಿಸಿದಳು ಎಂದರ್ಥ. ಶ್ರೀವೇದವ್ಯಾಸರೂ ಸಹ ಹೀಗೆಯೇ ನಾಲ್ಕನೆಯ ಮಗುವನ್ನು ಅನುಗ್ರಹಿಸಲು ನಿರಾಕರಿಸಿದ ಈ ಹಿಂದಿನ ಪ್ರಸಂಗವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಬಳಿಕ. ಅದೇ ದಿನವೇ ಪ್ರತಿಭ ಎಂಬ ಮರುತ್ತಿನ ಅವತಾರನಾದ ಚೇಕಿತಾನ ಶ್ರೀಹರಿಯ ಸೇವೆಗಾಗಿ ಜನಿಸಿದ್ದ. ಕೃತವರ್ಮನು ಜನಿಸಿದ್ದೂ ಅಂದೇ. ಮೂರು ವರ್ಷಗಳ ನಂತರ ಯುಧಿಷ್ಠಿರ ಜನಿಸಿದ; ಮಾರನೆಯ ವರ್ಷ ಅಶ್ವತ್ಥಾಮ ಹುಟ್ಟಿದ. ಹುಟ್ಟಿದ ಕೂಡಲೇ ಅಶ್ವದಂತೆ ಕೆನೆದಿದ್ದರಿಂದ ''ಅಶ್ವತ್ಥಾಮ'' ಎಂದು ಹೆಸರಾದ ಅವನು ಶಿವನ ಅವತಾರ. ಸರ್ವಜ್ಞನೂ, ಬಲಶಾಲಿಯೂ, ಅಸ್ತ್ರನಿಪುಣನೂ ಆದ ಅವರು ದ್ರೋಣ-ಕೃಪಿಯರ ಮಗ. ಅನಂತರ ನಾಲ್ಕನೆಯ ದಿನ ದುರ್ಯೋಧನ ಹುಟ್ಟಿದ. ಭೀಮಸೇನ ಜನಿಸಿದ್ದು ಅದರ ಮಾರನೆಯ ದಿನ. ಬಲರಾಮ ಹುಟ್ಟಿದಾಗ ಭೀಮನಿಗೆ ಎರಡು ತಿಂಗಳಾಗಿದ್ದವು; ಬಲಶಾಲಿಯೂ, ಗುಣವಂತನೂ, ಸರ್ವಜ್ಞನೂ ಆದ ಅವನು ಲಕ್ಷ್ಮಣನಾಗಿದ್ದಾಗ ಶ್ರೀರಾಮರೂಪದ ಹರಿಯನ್ನು ಸೇವಿಸಿ [೧] ಖಿನ್ನನಾಗಿ, ಇಲ್ಲಿ ಈಗ ಶ್ರೀಕೃಷ್ಣನಿಗೆ ಅಣ್ಣನಾಗಿ ಹುಟ್ಟಿದ್ದ. ಕಂಸ ವಸುದೇವ-ದೇವಕಿಯರನ್ನು ಬಂಧಿಸಿ ಕಾರಾಗೃಹದಲ್ಲಿ-ರಿಸಿದ್ದಾಗ, ದೇವಕಿಯ ಮಕ್ಕಳನ್ನು ಗುರುತಿಸುವ ಸಲುವಾಗಿ, ಗರ್ಭಧರಿಸಿದ್ದ ಉಳಿದೆಲ್ಲ ವಸುದೇವ ಪತ್ನಿಯರನ್ನು ಬೇರೆಡೆಗೆ ಸಾಗಿಸಿದ್ದ. ಆ ಸಮಯದಲ್ಲಿ ರೋಹಿಣಿಯು ಹೆರಿಗೆಗಾಗಿ ನಂದನ ಮನೆಗೆ ಕಳುಹಿಸಲ್ಪಟ್ಟದ್ದರಿಂದ, ಬಲರಾಮನ ಜನನ ಗೋಕುಲದಲ್ಲೇ ಆಯಿತು. ಕೃಷ್ಣಾವತಾರ-ವಾದಾಗ ಬಲರಾಮನಿಗೆ ಮೂರು ತಿಂಗಳು. ಶ್ರೀಹರಿ ಹಾಗೂ ಶೇಷ ಇಬ್ಬರನ್ನೂ ಪುತ್ರರನ್ನಾಗಿ ಪಡೆಯಲು ವಸುದೇವ ದೇವಕಿಯರು ತಪಸ್ಸನ್ನಾಚರಿಸಿದ್ದರು. ವಿಷ್ಣ್ವಾವಿಷ್ಟನಾದ ಬಲಶಾಲಿಯಾದ ಪುತ್ರ ತನಗೆ ಜನಿಸಬೇಕೆಂದು ರೋಹಿಣಿಯೂ ತಪಸ್ಸನ್ನಾಚರಿಸಿದ್ದಳು. ಆದ್ದರಿಂದಲೇ ಬಲರಾಮ ದೇವಕಿಯ ಗರ್ಭದಲ್ಲಿ ಮೂರುತಿಂಗಳು ಕಳೆದು ಅನಂತರ ರೋಹಿಣಿಯ ಗರ್ಭಕ್ಕೆ ಬಂದಿದ್ದ. ಅಂದರೆ, ಅವನು ದೇವಕೀ ಹಾಗೂ ರೋಹಿಣೀ ಇಬ್ಬರಿಗೂ ಪುತ್ರನೆನ್ನಿಸಿದ. ಬಲರಾಮ-ಕೃಷ್ಣರಿಬ್ಬರೂ ಗೋಕುಲದಲ್ಲಿ ಮನೋಹರವಾದ ಲೀಲೆಗಳನ್ನು ತೋರಿಸುತ್ತ ಬೆಳೆದರು.

## ಬಾಯಲ್ಲಿ ಬ್ರಹ್ಮಾಂಡ ತೋರಿದ ಬಾಲಕೃಷ್ಣ

ತನ್ನನ್ನು ಬಹಳವಾಗಿ ಪ್ರಾಕೃತಶಿಶುವೆಂದೇ ಭಾವಿಸಿದ್ದ ತಾಯಿಗೆ ಅರಿವು ಮೂಡಿಸಲೆಂದು, ಒಮ್ಮೆ ಆಕಳಿಸುವ ನೆಪದಲ್ಲಿ ಕೃಷ್ಣ ತನ್ನ ಬಾಯಿಯಲ್ಲಿ ಬ್ರಹ್ಮಾಂಡವನ್ನೇ ತೋರಿಸಿದ. ಪಂಚಮಹಾಭೂತಗಳು, ಮನಸ್ಸು, ಅಹಂಕಾರ, ಮಹತ್ತತ್ತ್ವ ಹಾಗೂ ಪ್ರಕೃತಿಯಿಂದಲೂ, ಬ್ರಹ್ಮಾದಿದೇವತೆಗಳಿಂದಲೂ, ಸುರಾಸುರರ ಗುಂಪುಗಳಿಂದಲೂ ಒಡಗೂಡಿದ ಬ್ರಹ್ಮಾಂಡವನ್ನು ಮಗುರೂಪದ ಕೃಷ್ಣನ ಬಾಯಿಯಲ್ಲಿ ಕಂಡ ಯಶೋದೆ ಭಯಭೀತಳಾಗಿ ಕಣ್ಣುಗಳನ್ನು ಮುಚ್ಚಿಕೊಂಡಳು ; ಶ್ರೀಕೃಷ್ಣ ತನ್ನ ವಿಶ್ವರೂಪವನ್ನು ಮರೆಮಾಡಿದ.

---

೧. ಶೇಷದೇವರು ಲಕ್ಷ್ಮಣರೂಪದಲ್ಲಿ ಶ್ರೀರಾಮರೂಪದ ಶ್ರೀಹರಿಯನ್ನು ವನವಾಸಾದಿಗಳ ಕಾಲದಲ್ಲಿ ಸೇವಿಸಿ ಬಳಲಿದ್ದ ಕಾರಣದಿಂದ ಪುನಃ ತಮ್ಮನಾಗಿ ಜನಿಸಿದಲ್ಲಿ ಸೇವೆ ಅನಿವಾರ್ಯ ಎಂದು ಭಾವಿಸಿ ಹಾಗೆ ಅಣ್ಣ ಬಲರಾಮನಾಗಿ ಅವತರಿಸಿದ ಎಂದು ಅರ್ಥ ; ಅದರಂತೆ ಲಕ್ಷ್ಮಣರೂಪದಲ್ಲಿ ತಾನು ಶ್ರೀಹರಿಗೆ ಸಲ್ಲಿಸಿದ್ದ ಸೇವೆಯು ಸಾಲದೆಂದು ಭಾವಿಸಿ ಶೇಷದೇವರು ಕೃಷ್ಣಾವತಾರಕಾಲದಲ್ಲೂ ಹೀಗೆ ಬಲರಾಮನಾಗಿ ಅವತರಿಸಿದರು ಎಂಬುದು ಅವರ ಅವತಾರಕ್ಕೆ ಇನ್ನೊಂದು ಕಾರಣ.

## ತೃಣಾವರ್ತನ ವಧೆ

ಒಮ್ಮೆ ಮಗುವನ್ನಾಡಿಸುತ್ತಿದ್ದ ಯಶೋದೆ, ಇದ್ದಕ್ಕಿದ್ದಂತೆಯೇ ಹೆಚ್ಚಿದ ಮಗನ ಭಾರವನ್ನು ತಡೆಯಲಾರದೆ, ಕೆಳಗಿಳಿಸಿ, ಮನೆಗೆಲಸದಲ್ಲಿ ಮಗ್ನಳಾದಳು. ಆಗ ಕಾಣಿಸಿಕೊಂಡ ಸುಂಟರ–ಗಾಳಿಯು ಶಿಶುವಾದ ಶ್ರೀಕೃಷ್ಣನನ್ನು ಮೇಲೆತ್ತಿಕೊಂಡು ಗಗನಕ್ಕೆ ಹಾರಿತು. ತೃಣಾವರ್ತ ಎಂಬ ಕಂಸನ ಸೇವಕನಾದ ಒಬ್ಬ ಅಸುರ ಕೃಷ್ಣನನ್ನು ಕೊಲ್ಲಲೆಂದು ಆ ರೀತಿ ಬಂದಿದ್ದ. ಆದರೆ ಅಂತರಿಕ್ಷದಲ್ಲಿ ಕೃಷ್ಣನ ಕೈಗೆ ಸಿಕ್ಕಿ ಉಸಿರುಕಟ್ಟಿದವನಾಗಿ ಪರ್ವತಕಾಯನಾದ ಆ ಅಸುರ ಬಂಡೆಯ ಮೇಲೆ ಬಿದ್ದು ಅಸು ನೀಗಿದ. ಪುಡಿಪುಡಿಯಾಗಿ ಕೆಳಗೆ ಬಿದ್ದ ತೃಣಾವರ್ತನ ದೇಹವನ್ನು ಕಂಡು ಜನರು ಆಶ್ಚರ್ಯಚಕಿತರಾದರು. ಕೃಷ್ಣ ಮಾತ್ರ ಎಂದಿನಂತೆ ಆಡುತ್ತಿದ್ದ.

ಸಿಟ್ಟು ಮಾಡದವರಿಗೆ ಪುಣ್ಯವನ್ನು ನೀಡಲೆಂದು, ಮಾಡಿದವರ ಅರ್ಹತೆ ಮೀರಿದ ಪುಣ್ಯವನ್ನು ನಾಶಪಡಿಸಲೆಂದು, ಬೆಣ್ಣೆ ಮೊದಲಾದುವುಗಳನ್ನು ಕದಿಯುತ್ತ ಸುಖಸಾಗರನಾದ ಶ್ರೀಕೃಷ್ಣ ಗೋಕುಲದಲ್ಲಿ ಓಡಾಡಿದ.

## ನಕುಲಸಹದೇವರ ಜನನ

ಗುರು ಮತ್ತು ಸೂರ್ಯರು ಸಿಂಹರಾಶಿಯಲ್ಲಿದ್ದ ವರ್ಷದ ಭಾದ್ರಪದಮಾಸದಲ್ಲಿ ಶ್ರೀಕೃಷ್ಣ ಅವತರಿಸಿದ. ಅದೇ ವರ್ಷ ಫಾಲ್ಗುಣಮಾಸದಲ್ಲಿ ಫಲ್ಗುಣ ಹುಟ್ಟಿದ. ಒಂದುವರ್ಷ ಕಳೆದ ಮೇಲೆ ಮಾದ್ರಿ ಪಾಂಡುರಾಜನನ್ನು ಕೇಳಿಕೊಂಡಳು: ''ಕುಂತಿಯಲ್ಲಿ ನಿನಗೆ ಶ್ರೇಷ್ಠರಾದ ಮಕ್ಕಳಾದರು. ನಿನ್ನ ಅನುಗ್ರಹದಿಂದ ನಾನೂ ಸಹ ಸಂತತಿಯನ್ನು ಪಡೆಯುವಂತಾಗಬೇಕು. ಕುಂತಿಯನ್ನು ನನಗೆ ಮಂತ್ರ ಉಪದೇಶಿಸಲು ಹೇಳು.'' ಮಾದ್ರಿಗೆ ಮಂತ್ರವನ್ನು ಉಪದೇಶಿಸಲು ಪಾಂಡುರಾಜ ಕುಂತಿಗೆ ಹೇಳಿದ. ಕುಂತಿಯು ಒಂದು ಸಲ ಮಾತ್ರ ಫಲಿಸುವ ನಿಬಂಧನೆಯೊಂದಿಗೆ ತಾನು ಮಾದ್ರಿಗೆ ಆ ಮಂತ್ರವನ್ನು ಉಪದೇಶಿಸಲು ಒಪ್ಪಿದಳು. ಅದೇ ರೀತಿ ಮಾದ್ರಿಗೆ ಮಂತ್ರವನ್ನುಪದೇಶಿಸಿ, ಅದು ಒಂದು ಸಲ ಮಾತ್ರ ಫಲಿಸುವುದೆಂದು ಮತ್ತೆ ಎಚ್ಚರಿಸಿದಳು. ಮಂತ್ರವನ್ನು ಸ್ವೀಕರಿಸಿದ ಮಾದ್ರಿ ಒಂದೇ ಸಲ ಉಚ್ಚರಿಸುವುದರಿಂದ ತಾನು ಇಬ್ಬರು ಪುತ್ರರನ್ನು ಪಡೆಯಲು ಸಾಧ್ಯವೇ ಎಂಬುದನ್ನು ಯೋಚಿಸಿದಳು – ''ದೇವತೆಗಳಲ್ಲಿ ಅಶ್ವಿನೀದೇವತೆಗಳು ಎಂದೂ ಸಹ ಜೊತೆ–ಯಾಗಿಯೇ ಇರುವವರು. ಅವರಿಬ್ಬರ ಹೆಸರೂ ಸಹ ಒಂದೇ ಆಗಿದೆ. ಅವರಿಬ್ಬರಿಗೂ ಪತ್ನಿ ಸಹ ಒಬ್ಬಳೇ. ಆದ್ದರಿಂದ ಒಂದು ಬಾರಿಯ ಉಚ್ಚಾರಣೆಗೆ ಅವರಿಬ್ಬರೂ ಬರುವರು. ಅಂದರೆ ನನಗೆ ಇಬ್ಬರು ಮಕ್ಕಳಾಗಲು ಸಾಧ್ಯವಿದೆ'' ಎಂದು ನಿಶ್ಚಯಿಸಿ ಮಾದ್ರಿ ಮಂತ್ರವನ್ನು ಪಠಿಸಿದಳು. ಕೂಡಲೇ ಕಾಣಿಸಿಕೊಂಡ ಅಶ್ವಿನೀದೇವತೆಗಳಿಂದ ಇಬ್ಬರು ಪುತ್ರರು ಹುಟ್ಟಿದರು. ಆ ಇಬ್ಬರೇ ಅವಳಿಗಳಾದ ನಕುಲ–ಸಹದೇವರು. ಅವರಲ್ಲಿ ನಕುಲ ಮೊದಲು ಹುಟ್ಟಿದವನು. ಮಂತ್ರ ಇನ್ನೊಮ್ಮೆ ಫಲಿಸುವಂತೆ ಪತಿಯ ಮೂಲಕ ಕೇಳಿಕೊಂಡ ಮಾದ್ರಿಯ ಬೇಡಿಕೆಯನ್ನು ಅಂಗೀಕರಿಸದೆ ಕುಂತಿಯು ಪಾಂಡುವಿಗೆ ಹೇಳಿದಳು – ''ನಿನ್ನ ಅಪ್ಪಣೆಯಿಲ್ಲದೆ ಅಶ್ವಿನೀದೇವತೆಗಳನ್ನು ಆಹ್ವಾನಿಸಿ

ಇಬ್ಬರು ಮಕ್ಕಳನ್ನು ಪಡೆದ ಇವಳು ಕುಟಿಲೆ ; ಇನ್ನೊಮ್ಮೆ ಮಂತ್ರ ಫಲಿಸಿದರೆ ನನ್ನ ಮಕ್ಕಳೊಂದಿಗೆ ಹಗೆತನವನ್ನು ಸಾಧಿಸಬಹುದು. ದಯವಿಟ್ಟು ನನ್ನನ್ನು ಒತ್ತಾಯ ಮಾಡದಿರು''. ಪಾಂಡುರಾಜ ಸುಮ್ಮನಾದ.

ವಿಶೇಷನಾಮದಿಂದ ಕರೆಯಲ್ಪಟ್ಟಾಗ ಮಾತ್ರವೇ ದೇವತೆಗಳು ಮಕ್ಕಳನ್ನು ಅನುಗ್ರಹಿಸುತ್ತಾರೆ. ಆದರೆ ಅಶ್ವಿನೀದೇವತೆಗಳ ವಿಶೇಷನಾಮವೂ ಸಹ ಒಂದೇ ಆಗಿದ್ದರಿಂದ ಹಾಗೆ ಮಾದ್ರಿ ಅವರನ್ನು ಕರೆದಿದ್ದಳು.

## ಪಂಚರೂಪದ ವಾಯು

ಯುಧಿಷ್ಠಿರ ಮೊದಲಾದ ಇತರ ನಾಲ್ವರಲ್ಲೂ ವಾಯುದೇವರು ಪ್ರವೇಶಿಸಿದರು. ಅದರಲ್ಲೂ ಅರ್ಜುನನಲ್ಲಿ ವಿಶೇಷ ಸನ್ನಿಧಾನವನ್ನಿರಿಸಿದರು. ಯುಧಿಷ್ಠಿರನಲ್ಲಿ ಸೌಮ್ಯರೂಪದಿಂದಲೂ, ಅರ್ಜುನನಲ್ಲಿ ವೀರರೂಪದಿಂದಲೂ, ಶೃಂಗಾರರೂಪದಿಂದ ನಕುಲನಲ್ಲೂ, ಸುನೀತಿರೂಪದಿಂದ ಸಹದೇವನಲ್ಲೂ ವಾಯುದೇವರ ಆವೇಶ ಉಂಟಾಯಿತು. ರೂಪವಂತನಾದ ಮಗನು ಬೇಕೆಂದು ಪಾಂಡುರಾಜ ಬಯಸಿದ್ದರಿಂದಲೇ ಚತುರ್ಥಪುತ್ರ ನಕುಲನಲ್ಲಿ ಶೃಂಗಾರರೂಪವನ್ನು ವಾಯುದೇವರು ಇರಿಸಿದರು. ಎಲ್ಲಾ ಗುಣಗಳಿಂದಲೂ ಕೂಡಿದ ವಾಯುದೇವರ ಮುಖ್ಯರೂಪವೇ ಭೀಮಸೇನ. ಸಾಮಾನ್ಯವಾಗಿ ಅತ್ಯಂತ ಕೋಮಲಶರೀರದ ಮನುಷ್ಯನನ್ನೇ ರೂಪವಂತ ಎಂದು ಜನರು ಕರೆಯುವರಲ್ಲವೆ ! ಆದ್ದರಿಂದಲೇ ವಜ್ರಕಾಯದ ಭೀಮಸೇನನು ನಕುಲನಿಗಿಂತ ಹೆಚ್ಚಿನ ರೂಪವಂತನಾದರೂ ಕೋಮಲಕಾಯದ ಮತ್ತೊಬ್ಬ ರೂಪವಂತ ಮಗನನ್ನು ಪಾಂಡು ಬಯಸಿದ್ದ. ಆದರೆ ಭೀಮಸೇನನದು ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಅಪ್ರಾಕೃತರಿಗೆ ಮನೋಹರವೆನ್ನಿಸುವ ದಿವ್ಯರೂಪ. ಕೋಮಲಕಾಂತಿಯ ರೂಪವನ್ನು ಮಾತ್ರ ವಾಯುದೇವರು ನಕುಲನಲ್ಲಿ ವ್ಯಕ್ತಪಡಿಸಿದರು. ಹೀಗೆ ವಾಯುದೇವರು ಅಲ್ಲಿ ಐದು ರೂಪಗಳಿಂದ ನೆಲೆಸಿದ್ದರು.

ವಿಷ್ಣುವಿನಿಂದ ಕೂಡಿದ ಈ ಐದುಜನ ಪಾಂಡವರು ಹಿಂದಿನ ಕಲ್ಪದಲ್ಲಿ ಇಂದ್ರಪದವಿಯಲ್ಲಿದ್ದವರು. 'ಯಜ್ಞ' ಎಂಬ ರೂಪದಿಂದ ಸಾಕ್ಷಾತ್ ಶ್ರೀವಿಷ್ಣುವೇ ಒಮ್ಮೆ ಇಂದ್ರನಾಗಿದ್ದ. ಅವನೇ ಈಗ ಕೃಷ್ಣನಾದ. ಭೀಮಸೇನ, ಧರ್ಮರಾಜ ಹಾಗು ನಕುಲ ಸಹದೇವರು ಕ್ರಮವಾಗಿ ದ್ವಿತೀಯ, ತೃತೀಯ, ಚತುರ್ಥ ಮತ್ತು ಪಂಚಮ ಇಂದ್ರರಾಗಿದ್ದರು. ಷಷ್ಠ ಮತ್ತು ಸಪ್ತಮ ಇಂದ್ರ ಪುರಂದರ; ಅವನೇ ಅರ್ಜುನ.

ಕ್ಷತ್ರಿಯೋಚಿತವಾದ ಸಂಸ್ಕಾರವನ್ನು ಕ್ರಮವಾಗಿ ಪಡೆದು, ಅವರೆಲ್ಲ ತಮ್ಮ ತೇಜಸ್ಸು ಹಾಗೂ ಮಹಿಮೆಗಳಿಂದ ಬೆಳೆದರು. ಅವರೆಲ್ಲರೂ ಸರ್ವಜ್ಞರೂ, ಸರ್ವಧರ್ಮಯುಕ್ತರೂ ಮತ್ತು ಪರಮಭಗವದ್ಭಕ್ತರೂ ಆಗಿದ್ದರು.

## ಬಲರಾಮ-ಕೃಷ್ಣರಿಗೆ ನಾಮಕರಣಾದಿಗಳು

ಯಾದವರ ಪುರೋಹಿತರಾದ ಗರ್ಗಾಚಾರ್ಯರು ವಸುದೇವನ ಮಾತಿನಂತೆ ಗೋಕುಲಕ್ಕೆ ಬಂದು [೧]ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನು ಬಲರಾಮ ಮತ್ತು ಕೃಷ್ಣರಿಗೆ ನೆರವೇರಿಸಿದರು. ''ನಿನ್ನ ಪುತ್ರ ಕೃಷ್ಣ ವಿಷ್ಣುವಿಗಿಂತ ಯಾವುದೇ ಗುಣದಲ್ಲೂ ಕಡಿಮೆಯಿಲ್ಲ; ಇವನ ಆಶ್ರಯದಲ್ಲಿ ನೀವೆಲ್ಲ ಉನ್ನತ ಸುಖವನ್ನು ಪಡೆಯುವಿರಿ'' ಎಂಬ ಗರ್ಗಾಚಾರ್ಯರ ಮಾತು ನಂದನಿಗೆ ತುಂಬಾ ಹರ್ಷವನ್ನುಂಟುಮಾಡಿತು.

## ಮಣ್ಣು ತಿಂದು ಬ್ರಹ್ಮಾಂಡ ತೋರಿದ ಕೃಷ್ಣ

ಅಣ್ಣನಿಂದ ಕೂಡಿ ನಡೆದಾಡಲಾರಂಭಿಸಿದ ಶ್ರೀಕೃಷ್ಣ ಗೋಕುಲವನ್ನೆಲ್ಲ ಪಾವನಗೊಳಿಸಿದ. ಮತ್ತೆ ತನ್ನ ಬಗ್ಗೆ ಪ್ರಾಕೃತಶಿಶುವೆಂಬ ಭಾವವನ್ನು ಹೊಂದಿದ್ದ ಯಶೋದೆಯ ಅಜ್ಞಾನವನ್ನು ದೂರಾಗಿಸಲು, ಗೆಳೆಯರಿಗೆಲ್ಲ ಕಾಣುವಂತೆ ಮಣ್ಣನ್ನು ತಿಂದ. ವಿಷಯ ತಿಳಿದ ಯಶೋದೆ ಮಗನನ್ನು ನಿಂದಿಸತೊಡಗಲು, ''ನಾನು ಮಣ್ಣನ್ನು ತಿಂದಿಲ್ಲ, ಬೇಕಾದರೇ ನೀನೇ ನೋಡು'' ಎಂದು ಬಾಯ್ತೆರೆದ ಕೃಷ್ಣ ಅಲ್ಲಿ ಮತ್ತೊಮ್ಮೆ ಬ್ರಹ್ಮಾಂಡವನ್ನೆಲ್ಲ ತೋರಿಸಿದ. ಈ ಸಲ ಯಶೋದೆಗೆ ಶ್ರೀಕೃಷ್ಣನು ನಾರಾಯಣ ಎಂಬುದು ಮನಸ್ಸಿಗೆ ಇನ್ನೂ ಹೆಚ್ಚು ದೃಢವಾಯಿತು. ಆದರೂ ಭಗವಂತ ತನ್ನ ಅಚಿಂತ್ಯಶಕ್ತಿಯಿಂದ ಮತ್ತೆ ಅದನ್ನು ಮರೆಯಾಗುವಂತೆ ಮಾಡಿದ.

## ನವನೀತಚೋರನಾದ ಶ್ರೀಕೃಷ್ಣ

ಹೀಗೆ ಲೀಲೆಯಿಂದ ಜಗತ್ತನ್ನು ಅನುಕರಿಸುತ್ತಿದ್ದ ಅನಂತಸುಖರೂಪಿಯಾದ ಶ್ರೀಕೃಷ್ಣನು ಗೋಕುಲದಲ್ಲಿ ಓಡಾಡಿದ. ಒಮ್ಮೆ ಸ್ತನ್ಯಪಾನ ಮಾಡಿಸುತ್ತಿದ್ದ ಯಶೋದೆಯು ಹಾಲು ಉಕ್ಕುತ್ತಿದ್ದುದನ್ನು ಗಮನಿಸಿ, ಕೃಷ್ಣನನ್ನು ಕೆಳಕ್ಕಿಳಿಸಿ ಹೊರಟಳು. ಕೋಪವನ್ನು ನಟಿಸುತ್ತ ಕೃಷ್ಣ ಮೊಸರಿನ ಪಾತ್ರೆಯನ್ನು ಒಡೆದು ಹಾಕಿದ. ಕಡೆಯುತ್ತಿದ್ದಂತೆಯೇ ಮೇಲೆ ಕಾಣಿಸಿಕೊಂಡ ಚಂದ್ರನಂತಿದ್ದ ಬೆಣ್ಣೆಯನ್ನು ತೆಗೆದುಕೊಂಡು ಗುಟ್ಟಾಗಿ ತಿಂದ. ದೇವತೆಗಳು ತಾವು ಯಾವ ಯುಗದಲ್ಲಿ ಜನಿಸುವರೋ, ಯಾವ ವಯಸ್ಸಿನಲ್ಲಿರುವರೋ ಅವುಗಳಿಗೆ ಉಚಿತವಾದ ರೀತಿಯಲ್ಲೇ ನಡೆದುಕೊಳ್ಳತಕ್ಕದ್ದು ಎಂಬ ನಿಯಮವನ್ನು ತೋರಿಸಿಕೊಡಲೆಂದೇ ಸ್ವಯಂ ಅಧರ್ಮಕ್ಕೆ ಕಿಚ್ಚಿನಂತಿದ್ದ ಭಗವಂತನಾದ ಶ್ರೀಕೃಷ್ಣ ಹಾಗೆ ನಡೆದುಕೊಂಡ. ಮನುಷ್ಯ, ಪ್ರಾಣಿ ಮೊದಲಾದ ರೂಪಗಳಿಂದಲೂ ಬಾಲ್ಯಾದಿ ಯೌವನಾದಿ ಅವಸ್ಥೆಗಳನ್ನು ಹೊಂದಿಯೂ ಅವುಗಳಿಗೆ ಉಚಿತವಾದ ಕಾರ್ಯಗಳನ್ನು ಭಗವಂತ ನಡೆಸುತ್ತಿದ್ದ. ಬ್ರಾಹ್ಮಣ, ರಾಜ, ಗೋಪ ಮೊದಲಾದ ರೂಪಗಳನ್ನು ತಳೆಯುತ್ತ, ಅದಕ್ಕುಚಿತವಾಗಿ ವರ್ತಿಸುತ್ತಾ ದೇವತೆಗಳಿಗೆ ಪಾಠ

---

೧. ಶ್ರೀಕೃಷ್ಣನು ಗೊಲ್ಲರ ಮಧ್ಯೆ ಬೆಳೆದರೂ ಅವನಿಗೆ ಹೀಗೆ ಕ್ಷತ್ರಿಯೋಚಿತ ಸಂಸ್ಕಾರವಾದ್ದರಿಂದ ಕ್ಷತ್ರಿಯ ಎನ್ನಿಸಿದ. ಆದರೆ, ಸೂತರ ಮಧ್ಯೆ ಬೆಳೆದ ಕರ್ಣ ಕ್ಷತ್ರಿಯಸಂಸ್ಕಾರಗಳನ್ನು ಹೊಂದದೆ, ಸೂತರ ಸಂಸ್ಕಾರಗಳನ್ನೇ ಹೊಂದಿದ್ದರಿಂದ ಸೂತಪುತ್ರನೆಂದೆನಿಸಿದ ಎಂಬ ವಿಶೇಷಾಂಶ ಇದರಿಂದ ತಿಳಿಯುವುದು.

ಕಲಿಸುತ್ತಿದ್ದ. ಆದರೂ ಉಳಿದೆಲ್ಲ ದೇವತೆಗಳಿಗಿಂತ ತಾನು ಅತ್ಯಂತ ಶ್ರೇಷ್ಠ ಎಂಬುದನ್ನು ಅದ್ಭುತ-ಕಾರ್ಯಗಳ ಮೂಲಕ ಆಗಾಗ ಪ್ರಕಟಪಡಿಸುತ್ತಿದ್ದ.

## ಯಮಲಾರ್ಜುನಭಂಜನ

ಕೃಷ್ಣನು ಬೆಣ್ಣೆಯನ್ನು ಕದ್ದು ತಿಂದದ್ದನ್ನು ಗಮನಿಸಿದ ಯಶೋದೆ ಕೋಲೊಂದನ್ನು ತೆಗೆದುಕೊಂಡು ಕೃಷ್ಣನನ್ನು ಬೆನ್ನಟ್ಟಿದಳು ; ಕೃಷ್ಣ ಓಡಲಾರಂಭಿಸಿದ. ಮನಸ್ಸಿಗೆ ನಿಲುಕದ ಮಹಾಮಹಿಮನಾದ ಅವನ ಹಿಂದೆ ಯಶೋದೆ ಓಡಿದಳು. ಬಳಲಿದ ತಾಯಿಯನ್ನು ಕಂಡು ತಾನು ಭಕ್ತವತ್ಸಲ ಎಂಬುದನ್ನು ತೋರಿಸಲು, ಅವಳ ಕೈಗೆ ಸಿಕ್ಕ. ಎಂದೂ ಬಂಧನವಿಲ್ಲದ ಭಗವಂತನನ್ನು ಕಟ್ಟುವ ಮತ್ತೊಂದು ಸಾಹಸಕ್ಕೆ ಕೈಹಾಕುತ್ತ ಯಶೋದೆ ಹಗ್ಗವನ್ನು ತೆಗೆದುಕೊಂಡಳು. ಅದು ಸಾಕಾಗದಿರಲು, ಮತ್ತೊಂದನ್ನು, ಅದರ ನಂತರ ಇನ್ನೊಂದನ್ನು ಹೀಗೆ ಒಂದಾದ ಮೇಲೊಂದರಂತೆ ಮನೆಯಲ್ಲಿನ ಹಗ್ಗಗಳನ್ನೆಲ್ಲಾ ತೆಗೆದುಕೊಂಡರೂ, ಸಫಲಳಾಗಲಿಲ್ಲ. ಅನಂತಶರೀರದ ತನ್ನನ್ನು ಹೀಗೆ ಬಂಧಿಸಲು ಸಾಧ್ಯವಿಲ್ಲ ಎಂಬುದನ್ನು ತೋರಿಸಿದ ಭಗವಂತ ತನ್ನ ಲೀಲೆಯಿಂದ ಒಂದು ಕರುವನ್ನು ಕಟ್ಟಲಾಗುವ ಚಿಕ್ಕಹಗ್ಗದಲ್ಲೇ ಬಂಧನಕ್ಕೆ ಸಿಕ್ಕಿದ. ಮಗನು ತಾಯಿಗೆ ಅಧೀನನಾಗಿರಬೇಕೆಂಬ ನಿಯಮವನ್ನು ತೋರಿಸುವುದು ಅದರ ಉದ್ದೇಶವಾಗಿತ್ತು. ಧುನಿ, ಚಮು, ಪೂತನಿ ಮತ್ತು ಶಕಟಾಸುರ ಈ ನಾಲ್ವರೂ ಪಾರ್ವತಿಯನ್ನು ಕುರಿತು ತಪಸ್ಸು ಮಾಡಿ ಅವಧ್ಯತ್ವವರವನ್ನು ಪಡೆದಿದ್ದರು. ಅನಂತರ ತೃಣಾವರ್ತನು ಸಹ ಅದೇ ರೀತಿಯ ವರ ಪಡೆದಿದ್ದ. ಅವರಲ್ಲಿ ಪೂತನಿ, ಶಕಟಾಸುರ ಮತ್ತು ತೃಣಾವರ್ತರು ಈಗಾಗಲೇ ಕೃಷ್ಣನಿಂದ ಹತರಾಗಿದ್ದರು. ಧುನಿ ಮತ್ತು ಚಮು ಎಂಬ ದೈತ್ಯರು ಎರಡು ಅರ್ಜುನವೃಕ್ಷಗಳಲ್ಲಿ ಸೇರಿಕೊಂಡಿದ್ದರು. ಆ ವೃಕ್ಷಗಳಲ್ಲಿ ನಳಕೂಬರ ಮತ್ತು ಮಣಿಗ್ರೀವ ಎಂಬ ಕುಬೇರನ ಮಕ್ಕಳೂ ನೆಲೆಸಿದ್ದರು. ತಮ್ಮ ಬಳಿ ಬೆತ್ತಲೆ ಕಾಣಿಸಿಕೊಂಡ ಅವರಿಬ್ಬರನ್ನು ನಾರದರು ತರುಗಳಾಗುವಂತೆ ಶಪಿಸಿದ್ದರು. ಕೃಷ್ಣ ತನ್ನನ್ನು ಕಟ್ಟಿಹಾಕಿದ್ದ ಒರಳಿನೊಂದಿಗೆ ಆ ಮರಗಳ ಮಧ್ಯೆ ಹೋಗಿ ಅವುಗಳನ್ನು ಬೀಳಿಸಿದ. ಧುನಿ-ಚಮುಗಳು ಹತರಾದರು. ನಳಕೂಬರ ಮತ್ತು ಮಣಿಗ್ರೀವರು ಶಾಪಮುಕ್ತರಾಗಿ ಪರಮಾತ್ಮನನ್ನು ಸ್ತುತಿಸಿ ಮತ್ತೆ ತಮ್ಮ ಸ್ಥಾನವನ್ನು ಪಡೆದರು. ಇದನ್ನೆಲ್ಲಾ ಗಮನಿಸುತ್ತಿದ್ದ ಗೋಪಾಲರು ಆಶ್ಚರ್ಯಚಕಿತರಾದರು.

## ಗೋಕುಲದಿಂದ ವೃಂದಾವನಕ್ಕೆ

ಬೃಹದ್ವನದಲ್ಲಿ ಈ ರೀತಿಯ ಲೀಲೆಗಳನ್ನು ಪ್ರದರ್ಶಿಸಿದ ಶ್ರೀಕೃಷ್ಣ ವೃಂದಾವನಕ್ಕೆ ತೆರಳ-ಬಯಸಿದವನಾಗಿ ನಂದಾದಿಗಳು ಗೋಕುಲವನ್ನು ಬಿಡುವಂತೆ ಮಾಡಲು ತನ್ನ ರೋಮ-ಕೂಪಗಳಿಂದ ಹುಲಿಗಳಂತೆ ಬಲಿಷ್ಠವಾದ ತೋಳಗಳನ್ನು ಸೃಷ್ಟಿಮಾಡಿದ. ಕೋಟ್ಯಂತರ ಸಂಖ್ಯೆಯಿಂದ ಕಾಣಿಸಿಕೊಂಡ ಅವುಗಳಿಂದ ಪೀಡಿತರಾದ ಅವರು ಕೃಷ್ಣನೊಂದಿಗೆ ಗೋಕುಲ-ವನ್ನು ಬಿಟ್ಟು ವೃಂದಾವನಕ್ಕೆ ತೆರಳಿದರು. ವೃಂದಾವನದಲ್ಲಿ ಅನೇಕ ರೀತಿಯ ಮನೋಹರ ಲೀಲೆಗಳಿಂದ ನಂದಾದಿಗಳನ್ನು ಕೃಷ್ಣ ಸಂತೋಷಪಡಿಸಿದ.

## ವತ್ಸಾಸುರ ಬಕಾಸುರರ ವಧೆ

ತನ್ನ ಚಂದ್ರನಂತಹ ಕಾಂತಿಯ, ಚಂದ್ರನನ್ನೂ ನಾಚಿಸುವ ಮುಖಾರವಿಂದದ ಬಲರಾಮನೊಂದಿಗೆ ಕೂಡಿಕೊಂಡು ಶ್ರೀಕೃಷ್ಣ ಗೋಪಾಲಕನಾದ. ಕರುವಿನ ವೇಷದಲ್ಲಿ ಬಂದು ತನ್ನನ್ನು ಕೊಲ್ಲಲು ಹೊಂಚುಹಾಕುತ್ತಿದ್ದ ವತ್ಸಾಸುರ ಎಂಬ ಶಿವನ ವರವನ್ನು ಪಡೆದಿದ್ದ ಕಂಸಭೃತ್ಯನನ್ನು ಕೃಷ್ಣನು ವೃಕ್ಷದ ಮೇಲೆ ಅಪ್ಪಳಿಸಿ ಸಂಹರಿಸಿದ. ಷಣ್ಮುಖನ ವರದ ರಕ್ಷೆಯಿಂದ ಕೂಡಿದ್ದ ಬಕ ಎಂಬ ರಾಕ್ಷಸ ಬಕಪಕ್ಷಿಯ ರೂಪದಲ್ಲಿ ಬಂದು ಕೃಷ್ಣನನ್ನು ನುಂಗಿದ. ಬೆಂಕಿಯಂತೆ ಸುಡಲಾರಂಭಿಸಿದ ಅವನನ್ನು ಮತ್ತೆ ಮುಖದಿಂದ ಹೊರಗೆ ಹಾಕಿ ಕೊಕ್ಕಿನಿಂದ ಕುಕ್ಕಿ ಕೊಲ್ಲಲು ಯತ್ನಿಸಿದ; ಅವನ ಎರಡು ಕೊಕ್ಕುಗಳನ್ನು ತನ್ನ ಎರಡು ಕೋಮಲವಾದ ಕೈಗಳಿಂದ ಹಿಡಿದು ಕೃಷ್ಣ ಆ ದೈತ್ಯನನ್ನು ಎರಡಾಗಿ ಸೀಳಿಹಾಕಿದ. ಬಕವಧೆಯಿಂದುಂಟಾದ ತಮ್ಮ ಹರ್ಷವನ್ನು ಬ್ರಹ್ಮಾದಿದೇವತೆಗಳು ಪುಷ್ಪವೃಷ್ಟಿಗರೆದು ವ್ಯಕ್ತಪಡಿಸಿದರು.

ಈ ರೀತಿಯಾಗಿ ದೇವಶ್ರೇಷ್ಠರಿಂದ ವಂದಿತಪಾದಕಮಲನಾದ ಶ್ರೀಕೃಷ್ಣ ಗೋಪಾಲಕರೊಂದಿಗೆ ವಿಹರಿಸುತ್ತ ಭೂಲೋಕದಲ್ಲಿ ಆರನೆಯ ವರ್ಷಕ್ಕೆ ಕಾಲಿಟ್ಟ.

## ಕಾಲಿಯಮರ್ದನ

ಆಗೊಮ್ಮೆ ಕೃಷ್ಣನು ಬಲರಾಮನನ್ನು ಬಿಟ್ಟು ಗೋವುಗಳೊಂದಿಗೆ ಗೋಪಾಲಕರ ಜೊತೆ ಹೊರಟ; ಅಚಿಂತ್ಯಶಕ್ತಿಸಂಪನ್ನನಾದ ಕೃಷ್ಣ ಯಮುನಾನದಿಯ ತೀರದಲ್ಲಿ ವಿಹಾರ ಮಾಡುತ್ತಿದ್ದ. ಗೋಪರಿಗೆ ಮುಂದೆ ಬರಲಿರುವ ದುಃಖಪ್ರಸಂಗದಲ್ಲಿ ಧೈರ್ಯ ಹೇಳಲಿ ಎಂಬ ಉದ್ದೇಶದಿಂದ ಬಲರಾಮನನ್ನು ಹಾಗೆ ಅಲ್ಲಿಯೇ ಬಿಟ್ಟು ಹೊರಟಿದ್ದ. ಗರುಡನನ್ನು ಬಿಟ್ಟು ಉಳಿದೆಲ್ಲರನ್ನು ಆವರಿಸುವಷ್ಟು ಕ್ರೂರವಾದ ವಿಷದ ಗಾಢತೆಯಿಂದಲೂ, ಬ್ರಹ್ಮನಿಂದ ಬಂದ ಅವಧ್ಯತ್ವವರದಿಂದಲೂ ಕೊಬ್ಬಿದ್ದ ಕಾಳಿಂಗ ಎಂಬ ಸರ್ಪವೊಂದು ಯಮುನಾನದಿಯ ಮಡುವೊಂದರಲ್ಲಿ ಸೇರಿಕೊಂಡಿತ್ತು. ಅಲ್ಲಿಗೆ ಬರುತ್ತಿದ್ದಂತೆಯೇ ಅಲ್ಲಿಯ ನೀರನ್ನು ಕುಡಿದು ಪ್ರಜ್ಞೆ ತಪ್ಪಿ ಬಿದ್ದಿದ್ದ ಸ್ನೇಹಿತರನ್ನೂ , ಗೋವುಗಳನ್ನೂ ಕೃಷ್ಣ ತನ್ನ ದಿವ್ಯನೋಟವೆಂಬ ಅಮೃತದಿಂದ ಮತ್ತೆ ಬದುಕಿಸಿದ. ಅಲ್ಲಿಯೇ ಬೆಳೆದಿದ್ದ ಎತ್ತರವಾದ ಕದಂಬವೃಕ್ಷದ ತುದಿಯನ್ನು ಏರಿ, ಭುಜ ಚಪ್ಪರಿಸಿಕೊಂಡು, ತೀವ್ರವೇಗದಿಂದ ಕೃಷ್ಣ ಮಡುವಿನಲ್ಲಿ ಧುಮುಕಿದ; ಅವನು ಧುಮುಕಿದ ರಭಸಕ್ಕೆ ಉಲ್ಲೋಲ-ಕಲ್ಲೋಲಗೊಂಡ ಆ ಮಡುವಿನ ವಿಷಪೂರಿತ ನೀರು ನೂರು ಧನುಸ್ಸುಗಳಷ್ಟು ದೂರದ ಪ್ರಾಂತಕ್ಕೆ ಸುತ್ತಲೂ ಚಿಮ್ಮಿತು. ಅನಂತಬಲನಾದ ಪರಮಾತ್ಮನ ಶಕ್ತಿಗೆ ಇದಾವ ಲೆಕ್ಕ? ತನ್ನ ಮಡುವನ್ನೆಲ್ಲ ಉಲ್ಲೋಲ-ಕಲ್ಲೋಲಗೊಳಿಸಿದ ಕೃಷ್ಣನನ್ನು ಕಾಲಿಯ ಕೋಪದಿಂದ ಆಕ್ರಮಿಸಿ ತನ್ನ ಶರೀರದಿಂದ ಸುತ್ತುಕಟ್ಟಿ ಬಂಧಿಸಿ, ವಿಷದ ಹಲ್ಲುಗಳಿಂದ ಕಚ್ಚತೊಡಗಿದ. ತನ್ನ ಶಕ್ತಿಯ ಅರಿವಿಲ್ಲದೆ ಮೇಲೆ ಬಿದ್ದ ಆ ಭಕ್ತ ಕಾಲಿಯನ ಅಪರಾಧವನ್ನು ಕೃಷ್ಣ ಮನ್ನಿಸಿದ. ಅಶುಭಶಕುನಗಳನ್ನು ಕಂಡ ಗೋಪವೃಂದವೆಲ್ಲಾ ಆ ವೇಳೆಗೆ ಆ ಮಡುವಿನ ಬಳಿ ನೆರೆದು ದುಃಖಿಸತೊಡಗಿತ್ತು. ಬಲರಾಮನ ಸಮಾಧಾನದ ಮಾತುಗಳಿಗೂ ಸಹ ಅವರ ದುಃಖ ತಗ್ಗದಾಗಿತ್ತು.

ತನ್ನ ಅನೇಕಭಕ್ತರ ದುಃಖವನ್ನು ಕಂಡ ಕರುಣಾಳುವಾದ ಶ್ರೀಕೃಷ್ಣ ಆ ಒಬ್ಬ ಭಕ್ತನಾದ ನಾಗನನ್ನು ಹಿಂಸಿಸತೊಡಗಿದ. ಅವನ ಉನ್ನತವಾದ ಹೆಡೆಗಳ ಮೇಲೆ ನರ್ತಿಸ- ತೊಡಗಿದ ಅವನನ್ನು ಬ್ರಹ್ಮಾದಿದೇವತೆಗಳು ಪುಷ್ಪವೃಷ್ಟಿಗರೆಯುತ್ತಾ ಸ್ತುತಿಸಲಾರಂಭಿಸಿದರು. ನೋವನ್ನು ತಾಳಲಾರದೆ ಕಾಳಿಂಗ ತನ್ನ ಎಲ್ಲ ಮುಖಗಳಿಂದ ರಕ್ತವನ್ನು ಕಾರುತ್ತ ಮನಸ್ಸಿನಲ್ಲಿಯೇ ನಾರಾಯಣನನ್ನು ಶರಣುಹೊಕ್ಕ. ಭಗವಂತನ ವಿವಿಧರೀತಿಯ ನರ್ತನದಿಂದ ಘಾಸಿಗೊಂಡ ; ಹೆಡೆಗಳಲ್ಲಿ ಗಾಯಗೊಂಡು ಪ್ರಜ್ಞೆ ತಪ್ಪುತ್ತಿದ್ದ ಅವನ ದುರವಸ್ಥೆಯನ್ನು ಕಂಡ ಅವನ ಪತ್ನಿಯರು ಕೃಷ್ಣನ ಬಳಿಗೆ ಧಾವಿಸಿ, ಪರಿಪರಿಯಾಗಿ ಸ್ತುತಿಸಿದರು. ಅವರಿಂದಲೂ, ಅವನಿಂದಲೂ ಸ್ತುತಿಸಲ್ಪಟ್ಟ ಭಗವಂತ ಅವರಿಗೆಲ್ಲ ಅಭಯವಿತ್ತು ಯಮುನೆಯ ಮಡುವನ್ನು ಬಿಟ್ಟು ಸಮುದ್ರವನ್ನು ಸೇರಿಕೊಳ್ಳಲು ಅಪ್ಪಣೆ ಮಾಡಿದ. ಯಮುನೆಯ ಮಡು ಅಂದಿನಿಂದ ಶುದ್ಧಜಲದಿಂದ ಕೂಡಿತು. ಆ ವೇಳೆಗೆ ಕತ್ತಲಾಗಲು ಅಂದಿನ ರಾತ್ರಿ ಎಲ್ಲರೂ ಅಲ್ಲಿಯೇ ತಂಗಿದರು. ರಾತ್ರಿಯ ವೇಳೆಯಲ್ಲಿ ಕಾಣಿಸಿಕೊಂಡ ಭಯಂಕರ ಕಾಡ್ಗಿಚ್ಚನ್ನು ನುಂಗಿ ಗೋಗೋಪರನ್ನು ಕೃಷ್ಣ ಸಂರಕ್ಷಿಸಿದ.

## ಉಗ್ರಾಸುರನ ವಧೆ

ದೇವದೈತ್ಯರ ಗುಂಪುಗಳ ಮನಸ್ಸಿಗೂ ಎಟುಕದ ದಿವ್ಯಕಾರ್ಯಗಳನ್ನು ಅನಂತ ಶಕ್ತಿಶಾಲಿ-ಯಾದ ಕೃಷ್ಣ ಲೀಲಾಜಾಲವಾಗಿ ಮಾಡುತ್ತಿರುವಾಗ ಉಗ್ರ ಎಂಬ ಅಸುರನಿಂದ ಮತ್ತೊಂದು ವಿಧವಾದ ಆಪತ್ತು ಗೋಕುಲಕ್ಕೆ ಬಂದೊದಗಿತು. ವೃಕ್ಷರೂಪದ ಆ ದೈತ್ಯನ ವಾಸನೆಯಿಂದಲೇ ಎಲ್ಲ ವಿಧದ ಪ್ರಾಣಿಗಳು ಅನೇಕ ರೋಗಗಳಿಗೆ ತುತ್ತಾಗಿ ಪ್ರಾಣ ನೀಗತೊಡಗಿದವು. ಜಗತ್ತನ್ನೇ ನಾಶಮಾಡುವ ಮುಖ್ಯಉದ್ದೇಶವನ್ನು ಹೊಂದಿದ್ದ ಹಾಗೂ ಬ್ರಹ್ಮವರದ ಪ್ರಭಾವದಿಂದಾಗಿ ಯಾರಿಂದಲೂ ಸಹಿಸಲಾಗದ ಅವನ ವಿಷದ ಪ್ರಭಾವಕ್ಕೆ ಸ್ವಯಂ ಬಲರಾಮನೂ ಒಳಗಾದನೆಂದಮೇಲೆ ಉಳಿದವರ ಪಾಡೇನು ! ಶ್ರೀಕೃಷ್ಣ ತನ್ನ ಸ್ಪರ್ಶಮಾತ್ರ- ದಿಂದಲೇ ಬಲರಾಮನನ್ನು ಗುಣಪಡಿಸಿ, ತನ್ನ ಬಲದಿಂದ ಆ ವಿಷದ ವೃಕ್ಷವನ್ನೂ, ಅದೇ ರೂಪದಲ್ಲಿ ಬೆಳೆದು ನಿಂತಿದ್ದ ಆ ದೈತ್ಯನ ಅನುಯಾಯಿಗಳನ್ನೂ ಬೇರು ಸಮೇತ ಕಿತ್ತು ನಾಶಮಾಡಿದ. ಗೋವೇಷದಲ್ಲಿ ತಿರುಗುತ್ತಿದ್ದ ಬ್ರಹ್ಮದೇವರ ವರ ಪಡೆದಿದ್ದ ಇತರ ದೈತ್ಯರನ್ನು ಸಹ ಸಂಹರಿಸಿ ಆ ವೃಕ್ಷಗಳನ್ನೆಲ್ಲ ಸುಟ್ಟುಹಾಕಿದ. ಭಗವಂತನ ಪ್ರಭಾವದಿಂದ ಗೋಕುಲಕ್ಕೆ ಒದಗಿದ್ದ ಆಪತ್ತು ದೂರವಾಯಿತು; ಎಲ್ಲರೂ ಗುಣಮುಖರಾಗಿ ಮೊದಲಿನಂತಾದರು.

## ನೀಲಾ ಸ್ವಯಂವರ

ಕುಂಭಕ ಎಂಬ ಯಶೋದೆಯ ಸಹೋದರ ತನ್ನ ಮಗಳು ನೀಲಾದೇವಿಗೋಸ್ಕರ ಒಂದು ಸ್ವಯಂವರವನ್ನೇರ್ಪಡಿಸಿದ್ದ. ಏಳು ಮದಿಸಿದ ಗೂಳಿಗಳನ್ನು ಕಾಳಗದಲ್ಲಿ ಎದುರಿಸಿ ಗೆಲ್ಲಬೇಕಾದ ಆ ಸವಾಲು ಉಳಿದವರ ಪಾಲಿಗೆ ಮನಸ್ಸಿಗೂ ಎಟುಕದಾಗಿತ್ತು ; ಕಾರಣ ಅವೆಲ್ಲ ಶಿವನ ವರದಿಂದ ಅವಧ್ಯವಾದ ರಾಕ್ಷಸರಾಗಿದ್ದವು. ಅಲ್ಲಿಗೆ ಧಾವಿಸಿದ ಕೃಷ್ಣ ಅವನ್ನೆಲ್ಲ ಸಂಹರಿಸಿ

ನೀಲಾದೇವಿಯ ಕೈಹಿಡಿದ. ಕೃಷ್ಣಪತ್ನಿಯೇ ಆದ ನೀಲಾದೇವಿಯು ಪೂರ್ವಜನ್ಮದಲ್ಲಿ ಕೃಷ್ಣಾವತಾರದಲ್ಲಿ ತಾನು ಪ್ರಥಮಪತ್ನಿಯಾಗಬೇಕೆಂದೂ, ಉಪನಯನಕ್ಕಿಂತ ಮುಂಚಿತವಾಗಿಯೇ ಶ್ರೀಕೃಷ್ಣ ತನ್ನನ್ನು ವಿವಾಹವಾಗಬೇಕೆಂದೂ ತಪಸ್ಸನ್ನಾಚರಿಸಿದ್ದಳು. ಆದ್ದರಿಂದ ಉಪನಯನಕ್ಕಿಂತ ಮುನ್ನವೇ ಕೃಷ್ಣ ಅವಳನ್ನು ವಿವಾಹವಾದ. ಅದರಂತೆ ಗೋಪಿಯರೂ ಸಹ ಉಪನಯನಕ್ಕೆ ಮುಂಚಿತವಾಗಿಯೇ ಕೃಷ್ಣನ ಸಂಗಮವಾಗಬೇಕೆಂದು ಬೇಡಿದ್ದರಿಂದ ಅವರನ್ನೂ ಸಹ ಆ ಮೊದಲೇ ಭಗವಂತ ಕೂಡಿದ.

## ಧೇನುಕಾಸುರನ ವಧೆ

ಒಮ್ಮೆ ಕೃಷ್ಣ-ಬಲರಾಮರನ್ನು ಗೆಳೆಯರಾದ ಗೋಪಾಲರೆಲ್ಲರು ಮಾಗಿದ ಖರ್ಜೂರದ ಫಲಗಳನ್ನು ತಮಗೆ ತಿನ್ನಿಸಬೇಕೆಂದು ಬೇಡಿಕೊಂಡರು. ಅವರಾಗಲೇ ಒಂದು ಮಾಗಿದ ಖರ್ಜೂರವನಕ್ಕೆ ಹೋಗಿಬಂದಿದ್ದರು. ಅದನ್ನು ತಾವೇ ಪಡೆಯುವ ಅವರ ಯತ್ನ ವಿಫಲವಾಗಿತ್ತು. ಧೇನುಕನೆಂಬ ಒಬ್ಬ ದೈತ್ಯನು ಗಣೇಶನ ವರದಿಂದ ಕೂಡಿ ತನ್ನ ಪರಿವಾರ ಸಮೇತನಾಗಿ ಆ ರೀತಿಯ ತಾಳವನವನ್ನು ಆಕ್ರಮಿಸಿ ನಿಂತಿದ್ದ. ಕೃಷ್ಣ-ಬಲರಾಮರು ವನವನ್ನು ಪ್ರವೇಶಿಸಿ ಹಣ್ಣುಗಳನ್ನು ಕಿತ್ತು ಗೋಪರಿಗೆ ಕೊಡತೊಡಗಲು, ಧೇನುಕನು ಕತ್ತೆಯರೂಪದಲ್ಲಿ ಬಂದು ಹಣ್ಣು ಕೀಳುತ್ತಿದ್ದ ಬಲರಾಮನನ್ನು ತನ್ನೆರಡು ಹಿಂಗಾಲುಗಳಿಂದ ಒದ್ದು ಸಂಹರಿಸಲೆತ್ನಿಸಿದ. ಅದನ್ನು ಗಮನಿಸಿದ ಬಲರಾಮ ಅವನ ಎರಡು ಹಿಂಗಾಲುಗಳನ್ನು ಹಿಡಿದು ಮರಗಳ ಮೇಲೆ ಅಪ್ಪಳಿಸಿ ಕೊಂದುಹಾಕಿದ. ಆ ಕ್ರೂರಿಯು ಸಾಯುತ್ತಿದ್ದಂತೆಯೇ ದಟ್ಟವಾದ ತಾಳವನದಲ್ಲಿದ್ದ ಕತ್ತೆಯ ರೂಪದ ಅವನ ಅನುಚರರೆಲ್ಲ ಭಯಂಕರ ಸ್ವರದಿಂದ ಒರಲುತ್ತ ರಕ್ಕಸಾಂತಕನಾದ ಕೃಷ್ಣನನ್ನು ಹಾಗೂ ಬಲರಾಮನನ್ನು ಮುತ್ತಿದರು. ಆದರೆ ಕೃಷ್ಣರಾಮರ ಪೆಟ್ಟಿಗೆ ಅವರೆಲ್ಲ ಕೂಡಲೇ ಯಮಪಟ್ಟಣ ಸೇರಿದರು. ಹೀಗೆ ಕೃಷ್ಣ ಬಲರಾಮರು ವಿಘ್ನೇಶ್ವರನ ವರ ಪಡೆದ ಅವರನ್ನೆಲ್ಲ ಕೊಂದು, ಗೋಪಾಲಕರಿಗೆ ಖರ್ಜೂರಫಲಗಳನ್ನು ತಿನ್ನಿಸಿದರು.

## ಪ್ರಲಂಬಾಸುರನ ವಧೆ

ಒಮ್ಮೆ ಕೃಷ್ಣ ಬಲರಾಮರ ನೇತೃತ್ವದಲ್ಲಿ ಎರಡು ಗುಂಪುಗಳಾಗಿ ನೆರೆದು ಆಟವಾಡುತ್ತಿದ್ದ ಗೋಪಾಲಕರ ಮಧ್ಯದಲ್ಲಿ ಪ್ರಲಂಬ ಎಂಬ ಕಂಸನ ಕಡೆಯ ರಾಕ್ಷಸ ತಾನೂ ಸೇರಿಕೊಂಡ. ಕೃಷ್ಣನ ಪಕ್ಷದವರು ಗೆಲ್ಲುತ್ತ ನಡೆದರು. ಆಟದ ನಿಯಮದಂತೆ ಸೋತಗುಂಪಿನ ಪ್ರಲಂಬನು ಬಲರಾಮನನ್ನು ಹೊರಬೇಕಾಯಿತು. ಹೊರುತ್ತಿದ್ದಂತೆಯೆ ತನ್ನ ನಿಜರೂಪವನ್ನು ತಾಳಿದ ಪ್ರಲಂಬಾಸುರನು ಬಲರಾಮನನ್ನು ಹೊತ್ತು ಓಡತೊಡಗಿದ; ಗಗನಕ್ಕೆ ನೆಗೆದ. ಭಯಗೊಂಡ ಬಲರಾಮನನ್ನು ಕೃಷ್ಣ ಅವನಲ್ಲಿಯ ತನ್ನ ಆವೇಶವನ್ನು ಪ್ರಕಟಪಡಿಸುತ್ತ ಹುರಿದುಂಬಿಸಿದ. ಇದರಿಂದ ಧೈರ್ಯಗೊಂಡ ಬಲರಾಮ ತನ್ನ ಮುಷ್ಟಿಯ ಪೆಟ್ಟಿನಿಂದ ಪ್ರಲಂಬನನ್ನು ಕೊಂದುಹಾಕಿದ. ಬಲರಾಮನ ಸಾಹಸಕ್ಕೆ ಬೆರಗಾದ ದೇವತೆಗಳು ''ಬಲದೇವ'' ಎಂಬ ಹೆಸರಿನಿಂದ ಅವನನ್ನು ಕರೆದರು.

ಮತ್ತೊಮ್ಮೆ ಗೋವುಗಳನ್ನು, ಗೋಪಾಲಕರನ್ನು ಸುಡಹೊರಟಿದ್ದ ಕಾಡ್ಗಿಚ್ಚನ್ನು ಕೃಷ್ಣ ನುಂಗಿ-ಹಾಕಿದ.

## ವಿಪ್ರಸ್ತ್ರೀಯರಿಂದ ಆತಿಥ್ಯಸ್ವೀಕಾರ

ಒಮ್ಮೆ ಕೃಷ್ಣನೊಂದಿಗೆ ಸಂಚರಿಸುತ್ತ ಬಹಳದೂರ ನಡೆದಿದ್ದ ಗೋಪಾಲಕರು ಹಸಿವಿನ ಬಾಧೆಯನ್ನು ತಾಳಲಾರದೆ ಕೃಷ್ಣನಲ್ಲಿ ಹೇಳಿಕೊಂಡರು. ಕೃಷ್ಣನು ''ಇಲ್ಲಿಯೇ ಸಮೀಪದಲ್ಲಿ ಬ್ರಾಹ್ಮಣರ ಸಮೂಹವೊಂದು ಸತ್ರವೊಂದನ್ನು ನಡೆಸುತ್ತಿದೆ. ಅವರನ್ನು ಕೇಳಿ'' ಎಂದ. ಆದರೆ ಬ್ರಾಹ್ಮಣರಿಂದ ಆಸೆ ಈಡೇರದೆ ಹಿಂದಿರುಗಿದ ಗೋಪರನ್ನು : ''ನಾನು ಹೇಳಿದ್ದೇನೆ ಎಂದು ಹೇಳಿ ತಿಳಿಸಿ ಅವರ ಪತ್ನಿಯರನ್ನು ಕೇಳಿರಿ'' ಎಂದು ಪುನಃ ಕಳುಹಿಸಿಕೊಟ್ಟ. ಅವರೆಲ್ಲಾ ಕೃಷ್ಣನ ಅಪ್ಪಣೆಯನ್ನು ಗೋಪರ ಮೂಲಕ ಕೇಳುತ್ತಿದ್ದಂತೆಯೇ ಷಡ್ವಿಧವಾದ ಭಕ್ಷಭೋಜ್ಯಾದಿಗಳನ್ನು ತೆಗೆದುಕೊಂಡು ಗಂಡ ಮಕ್ಕಳನ್ನು ಲೆಕ್ಕಿಸದೆ ಧಾವಿಸಿ ಬಂದರು. ಆದರೆ ಗಂಡನಿಂದ ತಡೆಯಲ್ಪಟ್ಟ ಒಬ್ಬಳು ಮಾತ್ರ ಹಾಗೆ ಬರಲಾಗದೆ ಅಸುನೀಗಿದಳು. ಗೋಪರೊಂದಿಗೆ ಕೂಡಿಕೊಂಡು ಶ್ರೀಕೃಷ್ಣ ಅದನ್ನು ಸ್ವೀಕರಿಸಿ ಗೋಕುಲಕ್ಕೆ ನಡೆದ. ಅವನ ಅಪ್ಪಣೆ ಮೀರಿದ ಬ್ರಾಹ್ಮಣರೆಲ್ಲ ವಿಷಯ ತಿಳಿದ ಮೇಲೆ ತಮ್ಮ ತಪ್ಪಿಗಾಗಿ ಬಹಳವಾಗಿ ಪರಿತಪಿಸಿದರು.

## ಗೋವರ್ಧನೋದ್ಧಾರ

ಒಮ್ಮೆ ಗೋಪರೆಲ್ಲ ಸೇರಿ ಇಂದ್ರೋತ್ಸವದ ಪ್ರಯತ್ನದಲ್ಲಿ ನಿರತರಾಗಿರುವುದನ್ನು ಕಂಡ ಕೃಷ್ಣನು, ಇಂದ್ರನು ತನ್ನನ್ನು ಮನುಷ್ಯಮಾತ್ರನೆಂದು ತಿಳಿಯದಿರಲಿ ಎಂದು ಎಚ್ಚರಿಸುವ ಉದ್ದೇಶದಿಂದ, ಅವರ ಆ ಪ್ರಯತ್ನವನ್ನು ತಡೆದ ; ''ಗೋಪರಾದ ನಮಗೆಲ್ಲ ಗೋವರ್ಧನ-ಗಿರಿಯನ್ನು ಪೂಜಿಸುವುದೇ ಸ್ವಧರ್ಮ''ವೆಂದು ಬೋಧಿಸಿ, ಅವರೆಲ್ಲ ತನ್ನ ಪೂಜೆಯಲ್ಲಿ ನಿರತರಾಗುವಂತೆ ಮಾಡಿದ ; ತಾನು ವಿಶಾಲದೇಹವನ್ನು ಹೊಂದಿ ನಾನಾವಿಧ ರಸಗಳಿಂದ ತುಂಬಿದ ಅನ್ನದ ಬಲಿಯನ್ನು ಸ್ವೀಕರಿಸಿದ. ಕೃಷ್ಣನು ವಿಷ್ಣುವೆಂಬುದನ್ನು ಮರೆತ ಇಂದ್ರ ಕ್ರುದ್ಧನಾಗಿ, ಭೀಕರ ಮಳೆಯನ್ನು ಸುರಿಸಲು ಮೋಡಗಳನ್ನು ಕಳುಹಿಸಿದ. ಆನೆಯ ಸೊಂಡಿಲ-ಗಾತ್ರದ ಧಾರೆಗಳನ್ನು ಎಡೆಬಿಡದೆ ಸುರಿಸುತ್ತ ಆ ಮೋಡಗಳು ಗೋಕುಲವನ್ನೆಲ್ಲ ನಾಶಪಡಿಸುವ ಕಾರ್ಯದಲ್ಲಿ ತೊಡಗಿದವು. ಸಂಕಷ್ಟಕ್ಕೀಡಾದ ಗೋಪರನ್ನೆಲ್ಲ ರಕ್ಷಿಸುವ ಸಲುವಾಗಿ ಕೃಷ್ಣ ಗೋವರ್ಧನಗಿರಿಯನ್ನು ಕಮಲದ ದಳದಷ್ಟು ಕೋಮಲವಾದ ತನ್ನ ಎಡಗೈಯಿಂದ ಲೀಲಾಜಾಲವಾಗಿ ಮೇಲೆತ್ತಿದ. ಅದರ ಬುಡದಲ್ಲಿ ಗೋಪರೆಲ್ಲ ತಮ್ಮ ಗೋವುಗಳೊಂದಿಗೆ ಸೇರಿಕೊಂಡು ಆಪತ್ತಿನಿಂದ ಪಾರಾದರು.

## ಇಂದ್ರನ ಶರಣಾಗತಿ

ಎಡೆಬಿಡದೆ ಏಳುದಿನಗಳ ಕಾಲ ಮಳೆ ಸುರಿಸಿದರೂ ಗೋಕುಲವೆಲ್ಲ ಸುರಕ್ಷಿತವಾಗಿರುವುದನ್ನು ಕಂಡು ಕೃಷ್ಣ ವಿಷ್ಣುವೆಂಬುದನ್ನು ನೆನಪಿಸಿಕೊಂಡ ಇಂದ್ರ ಭಯಭೀತನಾಗಿ ಸ್ವರ್ಗದಿಂದ ಕೃಷ್ಣನ

ಪಾದಸನ್ನಿಧಿಗೆ ಧಾವಿಸಿದ. ಅನಂತಗುಣಸಾಗರನೂ, ಹರನಿಗೆ ಗುರುವಾದ ಬ್ರಹ್ಮನಿಗಿಂತ ಹಿರಿಯನೂ ಆದ ಕೃಷ್ಣನನ್ನು ಸಹಸ್ರಾಕ್ಷನಾದ ಇಂದ್ರ ಶ್ರೇಷ್ಠವೇದಮಂತ್ರಗಳಿಂದ ಸ್ತುತಿಸಿದ – ''ಎಣಿಕೆಯಿರದ ಮಹಿಮೆಯ ನಿನ್ನಿಂದಲೇ ಈ ಜಗತ್ತೆಲ್ಲ ಹುಟ್ಟಿಬಂದಿದೆ ; ಎಲ್ಲದರ ರಕ್ಷಕನೂ, ಕೊನೆಗೆ ಎಲ್ಲವನ್ನೂ ಭಕ್ಷಿಸುವನೂ ನೀನೇ ಆಗಿರುವಿ. ; ಈ ಜಗದ ಬಂಧಮೋಕ್ಷಗಳೂ ನಿನ್ನಿಂದಲೇ. ಎಲೈ ! ಪರಿಪೂರ್ಣಶಕ್ತಿಯುಳ್ಳವನೇ ! ನಿನಗೆ ಸಮನಾದವನು ಎಂದೂ ಎಲ್ಲಿಯೂ ಯಾರೂ ಇಲ್ಲ. ನಾನು ನಿನ್ನನ್ನು ಆಶ್ರಯಿಸಿದವನು. ನನ್ನ ಈ ಹುಡುಗುತನವನ್ನು ದಯವಿಟ್ಟು ಮನ್ನಿಸು.'' ಕೃಷ್ಣ ಮುಗುಳ್ನಗೆಯಿಂದ ಉತ್ತರಿಸಿದ – ''ನಾನು ಎಂದೂ ನಿನ್ನನ್ನು ಕ್ಷಮಿಸಿದವನೆ. ನಿನಗೆ ತಿಳುವಳಿಕೆಯನ್ನುಂಟುಮಾಡಲೆಂದೇ ಹಾಗೆ ಮಾಡಿದೆ.'' ''ಗೋವಿಂದ'' ಎಂದು ಸ್ತುತಿಸಿ, ಅವನಿಗೆ ಅಭಿಷೇಕ ಮಾಡಿ, ಮತ್ತೊಮ್ಮೆ ನಮಸ್ಕರಿಸಿ ಇಂದ್ರ ಅಲ್ಲಿಂದ ತೆರಳಿದ. ಗೋವರ್ಧನ-ಗಿರಿಯನ್ನು ಎತ್ತಿದ ಅಸಾಧಾರಣ ಕಾರ್ಯದಿಂದ ಇವನು ವಿಷ್ಣುವೆಂದೇ ಖಚಿತಮಾಡಿಕೊಂಡ ಗೋಪರೆಲ್ಲ ಸಂತೋಷದಿಂದ ಕೃಷ್ಣನನ್ನು ಹಿಂಬಾಲಿಸಿ ನಡೆದರು.

ಅಂದಿನಿಂದ ಗೋಪರೆಲ್ಲ ಕೃಷ್ಣನನ್ನು ನಾರಾಯಣನೆಂದೇ ಅರಿತರು. ''ಇವನು ನಾರಾಯಣನಿಗೆ ಸಮ'' ಎಂದು ನಂದನಿಗೆ ಗರ್ಗಾಚಾರ್ಯರು ಹೇಳಿದ್ದ ಮಾತು ಅವರ ಭಾವನೆಯನ್ನು ದೃಢಪಡಿಸಿತು. ವಿಶೇಷವಾದ ಪೂಜೆಯನ್ನು ಅವರೆಲ್ಲ ಕೃಷ್ಣನಿಗೆ ನಡೆಸಿದರು. ಷಣ್ಮುಖನ ವರದಿಂದ ಸಾವಿಲ್ಲದವನಾಗಿದ್ದ ಪ್ರಲಂಬನನ್ನು ಸಂಹರಿಸಿದ ಬಲರಾಮನನ್ನೂ ಸಹ ದೊಡ್ಡ ದೇವತೆಯೆಂದು ಅರ್ಥಮಾಡಿಕೊಂಡ ಗೋಪರು ಅವನನ್ನೂ ವಿಶೇಷವಾಗಿ ಆದರಿಸಿದರು.

## ಗೋಪೀಜನಜಾರ

ಕೃಷ್ಣನೇ ತಮಗೆ ಪತಿಯಾಗಬೇಕೆಂಬ ಬಯಕೆಯಿಂದ ಕಾತ್ಯಾಯನೀವ್ರತವನ್ನು ಕೈಗೊಂಡ ಗೋಪಕನ್ಯೆಯರನ್ನು ಶ್ರೀಕೃಷ್ಣ ವರಿಸಿದ. ಆ ವೇಳೆಗಾಗಲೇ ಬೇರೆಯವರೊಂದಿಗೆ ವಿವಾಹವಾಗಿದ್ದ ಇತರ ಗೋಪಿಯರೂ ಸಹ ಕಾಮಬಾಣಪೀಡಿತರಾಗಿ ಬೆಳದಿಂಗಳ ರಾತ್ರಿಗಳಲ್ಲಿ ಕೃಷ್ಣನೊಂದಿಗೆ ಕ್ರೀಡಿಸಿದರು. ಅವರಲ್ಲಿ ಜನಿಸಿದ ''ನಾರಾಯಣೀ'' ಎಂಬ ಹೆಸರಿನ ಬಲಶಾಲಿಗಳಾದ ಹತ್ತುಲಕ್ಷ ಜನ ಪುತ್ರರು ಗೋಪಾಲಕರಾದರು. ಅವರೆಲ್ಲ ಹರಿಭಕ್ತಿವೃದ್ಧಿಗಾಗಿ ಪರತತ್ತ್ವವನ್ನು ತಿಳಿಯ-ಲೆಂದು ಧರೆಗೆ ಇಳಿದುಬಂದಿದ್ದ ದೇವತೆಗಳೇ ಆಗಿದ್ದರು. ಆ ಎಲ್ಲ ಸ್ತ್ರೀಯರನ್ನು ಮೊದಲೇ ವರಕೊಟ್ಟಿದ್ದಂತೆ ಶ್ರೀಕೃಷ್ಣನು ಉಪನಯನಕ್ಕೆ ಮುಂಚಿತವಾಗಿಯೂ, ಬಲರಾಮನ ವಿವಾಹಕ್ಕೆ ಮುನ್ನವೇ ಅವರೊಂದಿಗೆ ರಮಿಸಿದ ; ಭಗವಂತ ಎಲ್ಲ ಕೋರಿಕೆಗಳ ಸಿದ್ಧಿಗೆ ಚಿಂತಾಮಣಿಯೂ, ಅಮಂಗಲಗಳ ಲೇಪವಿಲ್ಲದವನೂ ಆದವನಲ್ಲವೆ!

## ಶಂಖಚೂಡನ ಸಂಹಾರ

ಪೂರ್ಣಚಂದ್ರನಿಂದ ಕಂಗೊಳಿಸುತ್ತಿದ್ದ ಒಂದು ರಾತ್ರಿಯ ಸಮಯ ; ಕನ್ನೈದಿಲೆಗಳ ಮನಸೆಳೆಯುವ ಸುವಾಸನೆಯಿಂದ ಕೂಡಿ ಬೀಸುತ್ತಿದ್ದ ಗಾಳಿಯ ಮನೋಹರ ಪರಿಸರ ;

ಗೋಪಿಕೆಯರೆಲ್ಲ ಭಗವಂತನ ಮುಖಕಮಲದಿಂದುದ್ಭವಿಸಿದ ಮನೋಹರವಾದ ಸಂಗೀತದಲ್ಲಿ ಪರವಶರಾಗಿದ್ದ ಆ ವೇಳೆಯಲ್ಲಿ ಶಿವನ ವರದ ರಕ್ಷಣೆಯನ್ನು ಹೊಂದಿದ್ದ ಶಂಖಚೂಡ ಎಂಬ ಕುಬೇರಭೃತ್ಯನಾದ ಯಕ್ಷ ಅಲ್ಲಿಗೆ ನುಗ್ಗಿದ. ಅವರನ್ನೆಲ್ಲ ಪೀಡಿಸತೊಡಗಿದ ಆ ಶಂಖಚೂಡ ಕೃಷ್ಣನ ಅಂಗೈಯ ಹೊಡೆತಕ್ಕೆ ಅಸುನೀಗಿದ. ಅವನಲ್ಲಿದ್ದ ಮಣಿಯನ್ನು ಕೃಷ್ಣ ಕಿತ್ತುಕೊಂಡ.

## ಅರಿಷ್ಟಾಸುರನ ವಧೆ

''ಅರಿಷ್ಟ ''ಎಂಬ ಹೆಸರಿನ ಮತ್ತೊಬ್ಬ ದೈತ್ಯ ಶಿವನಿಂದ ಅವಧ್ಯತ್ವವರವನ್ನು ಪಡೆದು ಕೊಬ್ಬಿದ್ದ. ಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ಎತ್ತಿನ ವೇಷವನ್ನು ಧರಿಸಿ, ಗೋಕುಲದಲ್ಲಿ ಕಾಣಿಸಿಕೊಂಡು ಗೋವುಗಳನ್ನೆಲ್ಲ ಪೀಡಿಸಲಾರಂಭಿಸಿದ. ಕೃಷ್ಣ ಅವನನ್ನು ತನ್ನತ್ತ ಆಹ್ವಾನಿಸಿದ. ತನ್ನೆರಡು ಕೋಡುಗಳನ್ನು ಮುಂದೆ ಮಾಡಿಕೊಂಡು ಅವನು ಶ್ರೀಹರಿಯುತ್ತ ಹಾರಿದ. ಕೃಷ್ಣ ಅವನ ಕೋಡುಗಳನ್ನು ಹಿಡಿದು ಭೂಮಿಯ ಮೇಲೆ ಅಪ್ಪಳಿಸಿ, ಯಜ್ಞದಲ್ಲಿ ಪಶುವನ್ನು ಸಂಹರಿಸುವಂತೆ, ಆ ಪಾಪಿಯನ್ನು ಕೊಂದು ಹಾಕಿದ.

## ಕೇಶಿಯ ವಧೆ

ಕಂಸನಿಂದ ಕಳುಹಿಸಲ್ಪಟ್ಟ ಕೇಶೀ ಎಂಬ ಮತ್ತೊಬ್ಬ ರಾಕ್ಷಸನು ಕುದುರೆಯ ವೇಷ ತಾಳಿ ಕೃಷ್ಣನನ್ನು ಸಂಹರಿಸಲೆಂದು ಆಗಮಿಸಿದ. ಪಾರ್ವತಿಯ ವರದಿಂದ ಅವಧ್ಯನಾಗಿದ್ದ ಅವನ ಬಾಯಲ್ಲಿ ಕೃಷ್ಣ ತನ್ನ ಕೈಯನ್ನು ತುರುಕಿದ. ಕೃಷ್ಣನ ತೋಳು ಒಳಗೇ ಬೆಳೆಯತೊಡಗಿತು. ಆ ತೋಳನ್ನು ತಿನ್ನಲು ಪ್ರಯತ್ನಿಸಿದ ಅವನು ತನ್ನ ಹಲ್ಲುಗಳನ್ನೆಲ್ಲ ಮುರಿದುಕೊಂಡವನಾಗಿ ಉಸಿರು ಕಟ್ಟಿ ಹೊಟ್ಟೆ ಒಡೆದು ಸತ್ತುಬಿದ್ದ. ಶ್ರೀಹರಿಯ ಈ ಕಾರ್ಯ ಬ್ರಹ್ಮಾದಿದೇವತೆಗಳನ್ನು ಸಂತೋಷ-ಪಡಿಸಿತು. ಬ್ರಹ್ಮನ ವರ ಪಡೆದಿದ್ದ ಮಯನ ಮಗನಾದ ''ವ್ಯೋಮ'' ಎಂಬ ಮತ್ತೊಬ್ಬ ರಾಕ್ಷಸ ಗೋಪರನ್ನೆಲ್ಲ ಒಮ್ಮೆ ಬಿಲವೊಂದರಲ್ಲಿ ಅಡಗಿಸಿಟ್ಟ ; ಪಶುವನ್ನೆಂಬಂತೆ ಅವನನ್ನು ವಧಿಸಿದ ಶ್ರೀಕೃಷ್ಣ ಅವರನ್ನೆಲ್ಲ ಅಲ್ಲಿಂದ ಪಾರುಮಾಡಿದ.

## ಅಕ್ರೂರಪ್ರೇಷಣ

ಸಕಲಜಗತ್ತಿನ ಸ್ವಾಮಿಯಾದ ಶ್ರೀಕೃಷ್ಣನು ಬೇರಾರಿಗೂ ಸಾಧ್ಯವಾಗದ ಈ ರೀತಿಯ ಕಾರ್ಯಗಳನ್ನು ಮಾಡುತ್ತಿರಲು, ಬ್ರಹ್ಮನ ತೊಡೆಯಿಂದ ಹುಟ್ಟಿದ ನಾರದಮುನಿ ಅತ್ತ ಕಂಸನ ಬಳಿ ಕಾಣಿಸಿಕೊಂಡು, ಅವನಿಗೆ ವಸುದೇವ ಮಾಡಿದ ಕಾರ್ಯವನ್ನು ವಿವರವಾಗಿ ತಿಳಿಸಿದರು. ಕೋಪದಿಂದ ಉರಿದೆದ್ದ ಕಂಸ ವಸುದೇವನನ್ನು ದೇವಕಿಯೊಂದಿಗೆ ಮತ್ತೆ ಸೆರೆಯಲ್ಲಿರಿಸಿ ಕೃಷ್ಣ-ಬಲರಾಮರನ್ನು ಗೋಪರ ಗುಂಪಿನೊಂದಿಗೆ ಕರೆತರಲೆಂದು ಅಕ್ರೂರನನ್ನು ರಥ ಕೊಟ್ಟು ಗೋಕುಲಕ್ಕೆ ಅಟ್ಟಿದ. ಕಿಶೋರನೆಂಬ ದೇವಗಂಧರ್ವ ಹರಿಸೇವೆಗೆಂದು ಅಕ್ರೂರನೆಂಬ ಹೆಸರಿನಿಂದ ಹುಟ್ಟಿಬಂದಿದ್ದ ; ಸ್ವಾಯಂಭುವಮನುವಿನ ಅಂಶದೊಂದಿಗೆ ಬ್ರಹ್ಮದೇವರ

ಆವೇಶವೂ ಅವನಲ್ಲಿ ಸೇರಿತ್ತು. ಇದರಿಂದಾಗಿ ಅವನು ಮಹಾಜ್ಞಾನಿಯಾಗಿದ್ದ. ಯಾದವರ ವಂಶಕ್ಕೆ ಸೇರಿದ್ದ ಅವನು ಭೋಜಪತಿಯಾದ ಕಂಸನ ಮಂತ್ರಿಯೂ ಆಗಿದ್ದ. ಜಗದೀಶನಾದ ಶ್ರೀಕೃಷ್ಣನನ್ನು ಕಣ್ಣಾರೆ ಕಾಣುವ ಸುಯೋಗವನ್ನು ಕಲ್ಪಿಸಿದ ಕಂಸನ ಅಪ್ಪಣೆ ಅವನಿಗೆ ಅಪಾರ ಹರ್ಷವನ್ನುಂಟುಮಾಡಿತು.

## ಅಕ್ರೂರನ ಕೃಷ್ಣದರ್ಶನ ಸಂಭ್ರಮ

ರಥವನ್ನು ಏರಿ ದಾರಿಯುದ್ದಕ್ಕೂ ಬ್ರಹ್ಮಾದಿವಂದ್ಯನಾದ ಭಗವಂತನ ಪಾದಕಮಲವನ್ನು ಧ್ಯಾನಿಸುತ್ತಲೇ ಸಾಗಿದ ಅಕ್ರೂರ, ಕೃಷ್ಣಪದಾಂಕಿತವಾದ ಗೋಕುಲವನ್ನು ದೂರದಿಂದ ಕಾಣುತ್ತಿದ್ದಂತೆಯೇ ರೋಮಾಂಚನಗೊಂಡ. ಜಗದೊಡೆಯನ ಪಾದಸಂಗದಿಂದ ಹಿರಿಮೆ ಪಡೆದು ಎಲ್ಲ ಪಾಪಗಳನ್ನು ಇಲ್ಲವಾಗಿಸುವ, ಬ್ರಹ್ಮ ರುದ್ರ ಇಂದ್ರ ಮೊದಲಾದ ಹಿರಿಯ ದೇವತೆಗಳ ಹೊಳೆಯುವ ಕಿರೀಟಗಳ ಮೇಲೆ ಕಂಗೊಳಿಸುವ, ಧೂಳಿನಲ್ಲಿ ಹೊರಳಾಡಿದ. ಗೋಕುಲದಲ್ಲಿ ಕಾಲಿರಿಸಿದ ಅಕ್ರೂರನು ಅಣ್ಣ ಬಲರಾಮನೊಂದಿಗೆ ನೆಲದ ಮೇಲೆ ಕುಳಿತು ಹಾಲು ಕರೆಯುತ್ತಿದ್ದ ಲೋಕಗುರುವಾದ ಶ್ರೀಕೃಷ್ಣನನ್ನು ಕಾಣುತ್ತಲೇ ಹರ್ಷದಿಂದ ಪಾದಕ್ಕೆರಗಿದ. ಕೃಷ್ಣ ಅವನನ್ನು ಮೇಲೆತ್ತಿ ಕೈಹಿಡಿದು ತನ್ನ ಮನೆಗೆ ಕರೆತಂದು ಎಲ್ಲ ರೀತಿಯಿಂದಲೂ ಉಪಚರಿಸಿದ ; ಸ್ವಯಂ ಸರ್ವಜ್ಞನಾದರೂ ಲೋಕವನ್ನು ಅನುಕರಿಸುತ್ತ ಮಥುರೆಯಲ್ಲಿನ ಸಮಾಚಾರಗಳ ಬಗ್ಗೆ ವಿಚಾರಿಸಿದ.

## ಅಕ್ರೂರ ಕಂಡ ಕೃಷ್ಣನ ವಿಶ್ವರೂಪ

ಕಂಸನ ಬಯಕೆಯನ್ನು ಅಕ್ರೂರನ ಬಾಯಿಂದ ಕೇಳಿದ ಕೃಷ್ಣ ಅದರಂತೆ ಮಾರನೆಯ ದಿನವೇ ಬಲರಾಮ ಹಾಗೂ ಗೋಪರೊಂದಿಗೆ ಹೊರಟು ನಿಂತ. ಹಾದಿಯಲ್ಲಿ ಯಮುನೆಯನ್ನು ಕಾಣುತ್ತಲೇ ಅವರಿಬ್ಬರನ್ನು ರಥದಲ್ಲಿಯೇ ಕುಳ್ಳಿರಿಸಿ, ಆಹ್ನಿಕಕ್ಕೆಂದು ಅಕ್ರೂರ ಕೆಳಗಿಳಿದ; ವಿಧ್ಯುಕ್ತವಾಗಿ ಸ್ನಾನಾದಿಗಳನ್ನು ಪೂರೈಸಿ, ಅಘಮರ್ಷಣವನ್ನು ಮಾಡಿ, ಧ್ಯಾನನಿರತನಾದಂತೆಯೇ ಶೇಷಶಾಯಿಯಾದ ಪರಮಾತ್ಮನನ್ನು ಕಂಡ; ದಾನಿಗಳಲ್ಲಿ ಅಗ್ರೇಸರನಾದ ಅವನು ಪ್ರತಿದಿನವೂ ಶೇಷನನ್ನು ಕಾಣುತ್ತಿದ್ದ. ಇಂದು ಮಾತ್ರ ಬಾಲರೂಪಿಯಾದ ಕೃಷ್ಣನನ್ನು ಸಹ ಶೇಷನ ಮೇಲೆ ಕಂಡ ; ಹಾಗಿದ್ದಲ್ಲಿ ಕೃಷ್ಣನು ರಥದಲ್ಲಿಲ್ಲವೆ ಎಂದು ಅದರತ್ತ ನೋಡಿದ ಅಕ್ರೂರನಿಗೆ, ಅಲ್ಲೂ ಸಹ ಕೃಷ್ಣ ಗೋಚರಿಸಿದ. ಮತ್ತೊಮ್ಮೆ ಸ್ನಾನ ಮಾಡಿ ಮತ್ತೆ ಧ್ಯಾನಕ್ಕೆ ಕುಳಿತಾಗಲೂ ಶೇಷಾಸನನಾದ ಭಗವಂತ ಮತ್ತೆ ಗೋಚರಿಸಿದ. ಈ ಬಾರಿಯಂತೂ ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳಿಂದಲೂ, ಮುನಿಶ್ರೇಷ್ಠರಿಂದಲೂ ಸ್ತುತಿಸಲ್ಪಡುತ್ತಿದ್ದ ಲಕ್ಷ್ಮೀಸಮೇತನಾದ ಶ್ರೀಹರಿಯ ದರ್ಶನವೇ ಅವನಿಗೆ ಆಯಿತು. ಅಕ್ರೂರನ ಬಾಯಿಯಿಂದ ಉತ್ತಮಸ್ತುತಿ ಹೊರಹೊಮ್ಮಿತು. ಭಗವಂತ ಅದೃಶ್ಯನಾದ ಮೇಲೆ ರಥವನ್ನೇರಿದ ಅಕ್ರೂರನೊಂದಿಗೆ ಕೃಷ್ಣ ಮಥುರೆಯನ್ನು ಸೇರಿದಾಗ ಆಗಲೇ ಸಂಜೆಯಾಗುತ್ತಿತ್ತು.

## ರಜಕನ ಸಂಹಾರ

ಅಕ್ರೂರನನ್ನು ಮುಂದೆ ಕಳಿಸಿ, ಸಾಟಿಯಿಲ್ಲದ ಬಲಶಾಲಿಯಾದ ಕೃಷ್ಣನು ಬಲರಾಮನಿಂದ ಹಾಗೂ ಗೋಪರಿಂದೊಡಗೂಡಿ ಪಟ್ಟಣವನ್ನು ನೋಡುತ್ತ ರಾಜಮಾರ್ಗದಲ್ಲಿ ಸಾಗಿದ. ಅವನ ದರ್ಶನದಿಂದ ಕುತೂಹಲಗೊಂಡು ಪೂಜಿಸುತ್ತಾ ನಿಂತಿದ್ದ ಪೌರವೃಂದ ಸಾಲುಸಾಲಾಗಿ ಕಾಣಸುತ್ತಿತ್ತು. ದಾರಿಯಲ್ಲಿ ಆನೆಯ ಮೇಲೆ ಬಟ್ಟೆಗಳೊಂದಿಗೆ ಅಗಸನೊಬ್ಬ ಕಾಣಿಸಿಕೊಳ್ಳಲು, ಅವನನ್ನು ಕೃಷ್ಣ ಬಟ್ಟೆಗಳನ್ನು ಕೇಳಿದ. ಕಂಸನ ಪ್ರೀತಿಯ ಬಂಟನಾಗಿದ್ದ ಆ ಅಗಸ ಪಾರ್ವತಿಯ ವರದಿಂದ ಅವಧ್ಯನೂ ಎನಿಸಿದ್ದ. 'ಕೊಡಲಾರೆ' ಎಂದು ಹೇಳುತ್ತ ಬಿರುನುಡಿಗಳನ್ನು ಪ್ರಯೋಗಿಸಿದ ಅವನನ್ನು ಕೃಷ್ಣ ಅಂಗೈಪೆಟ್ಟಿನಿಂದ ಯಮಪಟ್ಟಣಕ್ಕೆ ತಲುಪಿಸಿದ. ಅವನನ್ನು ಸಂಹರಿಸಿ, ಅವನ ಬಟ್ಟೆಗಳಲ್ಲಿ ಕೆಲವನ್ನು ಕೃಷ್ಣ-ಬಲರಾಮರು ಇಬ್ಬರೂ ತೆಗೆದುಕೊಂಡು, ಉಳಿದವನ್ನು ಗೋಪರಿಗೆಲ್ಲ ಹಂಚಿದರು.

## ಕ್ಷೌರಿಕ, ಸುದಾಮರ ಉದ್ಧಾರ

ಹೇಯೋಪಾದೇಯರಹಿತನೂ, ಸದಾ ಆನಂದಪೂರ್ಣನೂ, ಲಾಭನಷ್ಟಗಳಿಲ್ಲದವನೂ, ತಿಳಿವಿಗೆ ಸಿಕ್ಕದವನೂ ಆದ ಶ್ರೀಕೃಷ್ಣನು ಲೋಕವನ್ನು ಅನುಕರಿಸುತ್ತ ಕ್ಷೌರಿಕನಿಂದ ಅಲಂಕಾರ ಹೊಂದಿದ. ಸುದಾಮ ಎಂಬ ಒಬ್ಬ ಮಾಲಾಕಾರನು ಕೃಷ್ಣನಿಗೆ ಮಾಲೆಯೊಂದನ್ನು ಅರ್ಪಿಸಿ ಕೃತಾರ್ಥನಾದ. ಹಿಂದೆ ವೈಕುಂಠದಲ್ಲೂ ತನಗೆ ಅಲಂಕಾರ ಹಾಗೂ ಪುಷ್ಪಸಮರ್ಪಣೆಯ ಸೇವೆಯಲ್ಲಿ ನಿರತರಾಗಿದ್ದು, ತನ್ನ ಸೇವೆಗಾಗಿ ಹೀಗೆ ಇಲ್ಲಿ ಹುಟ್ಟಿ ಬಂದಿದ್ದ ತನ್ನ ಪಾರ್ಷದರನ್ನು ಕೃಷ್ಣ ಅನುಗ್ರಹಿಸಿ, ಇಬ್ಬರಿಗೂ ಸರ್ವಾಭೀಷ್ಟಪ್ರಾಪ್ತಿ ಹಾಗೂ ಸಾರೂಪ್ಯವೆಂಬ ವರಗಳನ್ನೂ ನೀಡಿದ.

## ಅವಕ್ರೆಯಾದ ತ್ರಿವಕ್ರೆ

ರಾಜಮಾರ್ಗದಲ್ಲಿ ಮುಂದೆ ಸಾಗುತ್ತಿದ್ದಂತೆ ರಾಜಯೋಗ್ಯವಾದ ಗಂಧವನ್ನು ತೆಗೆದುಕೊಂಡು ಅರಮನೆಯತ್ತ ಸಾಗುತ್ತಿದ್ದ ಕುಬ್ಜೆಯೊಬ್ಬಳು ಕಣ್ಣಿಗೆ ಬಿದ್ದಳು. ಕೃಷ್ಣ ಕೇಳುತ್ತಿದ್ದಂತೆಯೇ ಅವಳು ಗಂಧವನ್ನೆಲ್ಲ ಅವನಿಗೆ ಅರ್ಪಿಸಿದಳು. ಅಣ್ಣನಿಗೂ ಕೊಟ್ಟು ತಾನೂ ಆ ಗಂಧವನ್ನು ಲೇಪಿಸಿಕೊಂಡ ಕೃಷ್ಣ ಕೂಡಲೇ ಅವಳ ಗೂನನ್ನು ಹೋಗಲಾಡಿಸಿದ. ಮನೆಗೆ ಆಹ್ವಾನಿಸಿದ ಅವಳಿಗೆ 'ಮುಂದೆ ಸಮಯ ಬಂದಾಗ ಬರುವೆ' ಎಂದು ತಿಳಿಸಿ, ಮುಗುಳ್ನಗೆಯಿಂದ ಬೀಳ್ಕೊಟ್ಟ.

## ಶಿವಧನುರ್ಭಂಗ

ಪೂರ್ಣಚಂದ್ರರ ಸಮೂಹವನ್ನು ಮೀರಿಸುವ ಕಾಂತಿ, ಅಸಂಖ್ಯಸೂರ್ಯರ ತೇಜಸ್ಸನ್ನು ಮೀರುವ ವರ್ಚಸ್ಸು, ಪೀತಾಂಬರ, ಬಂಗಾರದಂತೆ ಹೊಳೆಯುವ ಗಂಧಹಾರಗಳು, ಇಂತಹ ಶೃಂಗಾರಸಾಗರನೂ, ಅಗಣ್ಯಗುಣಸಾಗರನೂ ಆದ ಶ್ರೀಕೃಷ್ಣ ಮುಂದೆ ಸಾಗಿದ. ಆಯುಧ-

ಶಾಲೆಯನ್ನು ಸೇರಿ ಅಲ್ಲಿ ಕಂಸನು ಶಿವನಿಂದ ಸಂಪಾದಿಸಿದ್ದ, ಎಲ್ಲರಿಂದ ಅಭೇದ್ಯವೆನ್ನಿಸಿದ್ದ ಧನುಸ್ಸನ್ನು ಕೈಗೆತ್ತಿಕೊಂಡ. ಕೃಷ್ಣನ ಶಕ್ತಿಯನ್ನು ತಡೆಯಲಾರದ ಧನುಸ್ಸು ಅವನು ಎಳೆದು ಬಾಗಿಸುತ್ತಿದ್ದಂತೆಯೇ ಎರಡು ತುಂಡಾಯಿತು. ಸುರಾಸುರರೆಲ್ಲರಿಂದಲೂ ಅಭೇದ್ಯವೆನ್ನಿಸಿದ್ದ ಆ ಧನುಸ್ಸು ಮುರಿಯುತ್ತಿದ್ದಂತೆಯೇ ಬ್ರಹ್ಮಾಂಡವನ್ನೇ ಭೇದಿಸುವ ಭೀಕರ ಶಬ್ದವುಂಟಾಯಿತು. ಆ ಶಬ್ದವು ಕಿವಿಯ ಮೇಲೆ ಬೀಳುತ್ತಿದ್ದಂತೆಯೇ, ಎಷ್ಟೇ ಪ್ರಯತ್ನಿಸಿದರೂ ಧೈರ್ಯ ಪಡೆಯಲು ಆಗದೆ ಕಂಸ ಪ್ರಜ್ಞೆತಪ್ಪಿ ಭೂಮಿಯ ಮೇಲೆ ಉರುಳಿಬಿದ್ದ. ಪುನಃ ಎಚ್ಚೆತ್ತು ಕೃಷ್ಣನನ್ನು ಬಂಧಿಸಲೆಂದು ತನ್ನ ಸೇನೆಯನ್ನು ಅಟ್ಟಿದ. ಆ ಅಸುರಸೇನೆಯು ಕೃಷ್ಣ-ಬಲರಾಮರಿಂದ ಪ್ರಾಣ ಕಳೆದುಕೊಂಡಿತು. ನಂದಾದಿ ಗೋಪರ ಗುಂಪನ್ನು ಸೇರಿದ ಶ್ರೀಕೃಷ್ಣ [೧]ಕ್ಷೀರಾನ್ನವನ್ನು ಭುಂಜಿಸಿ ಆ ರಾತ್ರಿಯನ್ನು ಕಳೆದ.

## ಕಂಸನ ಸನ್ನಾಹ

ಅತ್ಯಂತ ಭಯದಿಂದ ನಡುಗಿಹೋದ ಕಂಸ, ಮಾರನೆಯ ದಿನ ಬೆಳಿಗ್ಗೆ ರಾಜರ ಗುಂಪಿನ ಮಧ್ಯದಲ್ಲಿ ಅತ್ಯಂತ ಎತ್ತರವಾದ ಸಿಂಹಾಸನದ ಮೇಲೆ ಮಂಡಿಸಿದ. ಉಳಿದ ಅನೇಕ ರಾಜರು, ಪ್ರಮುಖ ಪೌರರು, ಅಧಿಕಾರಿಗಳು ತಮ್ಮ ಯೋಗ್ಯತೆಗೆ ಒಪ್ಪುವ ವಿವಿಧರೀತಿಯ ಆಸನಗಳ ಮೇಲೆ ಸಭೆಯಲ್ಲಿ ತುಂಬಿದ್ದರು. ಮುಂದೆ ಸಜ್ಜುಗೊಳಿಸಿದ ಮಾವಟಿಗನೊಂದಿಗೆ ಅಣಿಮಾಡಿ ನಿಲ್ಲಿಸಿದ್ದ ಬೆಟ್ಟದಂತಹ ಆನೆ; ಒಳಗೆ ಸಿದ್ಧರಾಗಿ ನಿಂತಿದ್ದ ಚಾಣೂರ, ಮುಷ್ಟಿಕ ಮೊದಲಾದ ಮಲ್ಲವೀರರು; ಈ ರೀತಿಯ ಉಭಯತಂತ್ರಗಳಿಂದ ಕಂಸನು ಕೃಷ್ಣನನ್ನು ನಿಗ್ರಹಿಸುವ ಹಂಚಿಕೆಯನ್ನು ಹೂಡಿದ್ದ. ಇದರೊಂದಿಗೆ ಶಿವನ ವರದಿಂದ ಅವಧ್ಯವಾಗಿದ್ದ ಇಪ್ಪತ್ತು ಅಕ್ಷೋಹಿಣೀ ಸೇನೆಯು ಕಂಸನ ತಮ್ಮನಾದ ಸುನೀಥ ಎಂಬುವನ ನೇತೃತ್ವದಲ್ಲಿ ಅಣಿಯಾಗಿ ನಿಂತಿತ್ತು. ಆ ಸುನೀಥನು ಹಿಂದೆ [೨]ವೃಕಾಸುರನಾಗಿದ್ದವನು ; ಅವನ ತಮ್ಮಂದಿರೂ ಸಹ ಕಂಸನ ಸೇನೆಯೊಂದಿಗೆ ರಂಗದ ವಿವಿಧಭಾಗಗಳಲ್ಲಿ ಸಿದ್ಧರಾಗಿ ನಿಂತಿದ್ದರು. ಬಲರಾಮನೊಂದಿಗೆ ಕೃಷ್ಣ ಬರುತ್ತಿದ್ದಂತೆಯೇ ಅವನ ಮೇಲೆರಗುವ ಯೋಜನೆಯಲ್ಲಿ ಅವರೆಲ್ಲ ಕಾಯುತ್ತಿದ್ದರು.

## ಕುವಲಯಾಪೀಡದ ವಧೆ

ಸೂರ್ಯ ಉದಿಸಿದ ಮೇಲೆ ಬಲರಾಮ ಹಾಗೂ ಸ್ನೇಹಿತರೊಂದಿಗೆ ಕಂಸನ ಸಭೆಯತ್ತ ಸಾಗಿದ ಕೃಷ್ಣನನ್ನು ಬ್ರಹ್ಮರುದ್ರಾದಿದೇವತೆಗಳೆಲ್ಲ ಅಸುರಸಂಹಾರಕಾರ್ಯಕ್ಕಾಗಿ ಬಹಳವಾಗಿ ಸ್ತುತಿಸಲಾರಂಭಿಸಿದರು. ಮಹಾದ್ವಾರದ ಬಳಿ ನಿಂತಿದ್ದ ರುದ್ರವರದಿಂದ ರಕ್ಷಿತವಾದ

೧. ರಾತ್ರಿಯಲ್ಲಿ ಮೊಸರನ್ನ ನಿಷಿದ್ಧ; ಕ್ಷೀರಾನ್ನವೇ ವಿಹಿತ ಎಂಬುದು ಆಯುರ್ವೇದದಲ್ಲಿ ಪ್ರಸಿದ್ಧ.

೨. ಈ ವೃಕಾಸುರನು ಕೇದಾರದಲ್ಲಿ ಶಿವನನ್ನು ಆರಾಧಿಸಿ ವರ ಪಡೆದು ಅವರ ತಲೆಯ ಮೇಲೇ ಕೈ ಇಡಲು ಹೊರಟು, ತನ್ನ ತಲೆಯ ಮೇಲೇ ಕೈ ಇಟ್ಟುಕೊಳ್ಳುವಂತಾಗಿ ಬೂದಿಯಾದ ಭಸ್ಮಾಸುರ. ಶ್ರೀಕೃಷ್ಣನ ಅನು-ಗ್ರಹದಿಂದ ಶಿವನು ಹಾಗೆ ಸಂಕಟದಿಂದ ಪಾರಾದ ಎಂಬ ವಿವರ ಶ್ರೀಮದ್ಭಾಗವತಮಹಾಪುರಾಣದಲ್ಲಿದೆ : ಮೋಚಿತಃ ಸಂಕಟಾಚ್ಛಿವಃ।(೧೦/೮೨/೩೭).

ಕುವಲಯಾಪೀಡ ಎಂಬ ಆನೆ ಹಾಗೂ ಅದೇ ರುದ್ರವರದಿಂದ ಕೊಬ್ಬಿದ್ದ ಅದರ ಮಾವಟಿಗ ಇಬ್ಬರನ್ನೂ ಕಂಡ ಕೃಷ್ಣ, ಮಾವಟಿಗನನ್ನು ಕುರಿತು : ''ಎಲವೋ ಪಾಪಿ ! ಆನೆಯೊಂದಿಗೆ ಬೇಗ ದೂರ ಹೋಗು'' ಎಂದು ನುಡಿದ. ಶಿವನ ವರದಿಂದ ಕೊಬ್ಬಿದ್ದ ಮಾವಟಿಗನು ಕೃಷ್ಣನ ಮಾತಿನಿಂದ ಕೆರಳಿ ಆನೆಯನ್ನು ಕೃಷ್ಣನ ಮೇಲೆಯೇ ನುಗ್ಗಿಸಿದ. ಕ್ಷಣಕಾಲ ಅದರೊಂದಿಗೆ ಆಟವಾಡಿದ ಕೃಷ್ಣ ಅದನ್ನು ಕೈಯ್ಯಲ್ಲಿ ಹಿಡಿದು ನೆಲದಮೇಲೆ ಬೀಳಿಸಿ ಕುಂಭಸ್ಥಳದ ಮೇಲೆ ಕಾಲೂರಿ, ಎರಡೂ ದಂತಗಳನ್ನು ಕಿತ್ತು ಕೊಂದುಹಾಕಿದ. ಒಂದು ದಂತದಿಂದ ಹೊಡೆದು ಮಾವಟಿಗನನ್ನು ಸಂಹರಿಸಿದ. ಅವಧ್ಯರೆನ್ನಿಸಿದ್ದ ಇಬ್ಬರನ್ನೂ ಕೊಂದ ಕೃಷ್ಣನು ಭುಜದ ಮೇಲೆ ಆನೆಯ ದಂತವನ್ನಿರಿಸಿಕೊಂಡು ಅಣ್ಣನೊಂದಿಗೆ ರಂಗವನ್ನು ಪ್ರವೇಶಿಸಿದ. ಜಗದೊಡೆಯನಾದ ಅವನು ಒಳಕ್ಕೆ ಕಾಲಿರಿಸುತ್ತಿದ್ದಂತೆಯೇ ಅಲ್ಲಿದ್ದ ಸಜ್ಜನರ ಹೃದಯ ಅರಳಿತು ; ದುರ್ಜನರ ಮನಸ್ಸು ಮುದುಡಿತು ; ಸೂರ್ಯ ಹುಟ್ಟುತ್ತಿದ್ದಂತೆಯೇ ಕಮಲಗಳು ಅರಳಿ, ಕುಮುದಗಳು ಮುದುಡುವಂತೆ ಆ ಪ್ರಸಂಗ ಇದ್ದಿತು.

## ಚಾಣೂರ-ಮುಷ್ಟಿಕರ ವಧೆ

ರಂಗವನ್ನು ಪ್ರವೇಶಿಸಿದ ಕೃಷ್ಣನನ್ನು ಕುರಿತು ಅವಧ್ಯತ್ವ ವರ ಪಡೆದಿದ್ದ ಚಾಣೂರ ಮಲ್ಲ : ''ಕೃಷ್ಣ ! ಕೇಳು. ರಾಜನೇ ದೇವತೆ ಎಂದು ಬಲ್ಲವರು ಹೇಳುವರು. ರಾಜನ ಮನಸ್ಸನ್ನು ಮೆಚ್ಚಿಸಿದವರಿಗೆ ಮಹಾಫಲವು ಲಭಿಸುವುದು. ಆದ್ದರಿಂದ ರಾಜನ ಪ್ರೀತಿಗೋಸ್ಕರ ನಾವಿಬ್ಬರೂ ಹೋರಾಡೋಣ. ಬಲರಾಮನು ಮುಷ್ಟಿಕನನ್ನು ಎದುರಿಸಲಿ.'' ಅವನ ಮಾತುಗಳನ್ನು ಕೇಳಿದ ಕೃಷ್ಣ ಪರಿಹಾಸಪೂರ್ವಕ ನುಡಿದ : ''ಅಗತ್ಯವಾಗಿ ಆಗಲಿ''. ಮುನ್ನುಗ್ಗಿದ ಅವನೊಂದಿಗೆ ಕೃಷ್ಣ ಕ್ಷಣಕಾಲ ಹೋರಾಡಿ, ಮಲ್ಲವಿದ್ಯೆಯ ಪಟ್ಟುಗಳನ್ನು ತೋರಿಸಿದ ; ಅವನ ಎರಡು ಕಾಲುಗಳನ್ನು ಹಿಡಿದು, ಪರ್ವತಪ್ರಾಯನಾದ ಅವನನ್ನು ಆಕಾಶದಲ್ಲಿ ಗಿರಗಿರನೆ ತಿರುಗಿಸಿ ಮೂಳೆಗಳೆಲ್ಲ ಪುಡಿಪುಡಿಯಾಗುವಂತೆ ಮಾಡಿದ ; ಅವನನ್ನು ನೆಲದ ಮೇಲೆ ಅಪ್ಪಳಿಸಿ ಹೊಸಕಿಹಾಕಿದ. ಗಗನದಲ್ಲಿ ದೇವತೆಗಳು, ಭೂಮಿಯಲ್ಲಿ ಸಜ್ಜನರು ಕೃಷ್ಣನನ್ನು ಸ್ತುತಿಸಿದರು. ಅದೇ ಕಾಲದಲ್ಲಿ ಬಲರಾಮನ ಮುಷ್ಟಿಯ ಪೆಟ್ಟಿಗೆ ತಲೆ ಒಡೆದು ಮುಷ್ಟಿಕನು ಕೆಳಗುರುಳಿದ. ಕೂಟ, ಕೋಸಲ ಮತ್ತು ಛಲ ಎಂಬ ಹೆಸರಿನ ಮತ್ತೆ ಮೂವರು ಮಲ್ಲರು ನುಗ್ಗಿ ಮೇಲೆ ಬೀಳಲು, ಅವರಲ್ಲಿ ಕೂಟ-ಕೋಸಲರನ್ನು ಕೃಷ್ಣನು, ಛಲನನ್ನು ಬಲರಾಮನೂ ಕೊಂದುಹಾಕಿದರು. ಅನಂತರ ಬಂದ ಸುನೀಥ ಮೊದಲಾದ ಕಂಸನ ತಮ್ಮಂದಿರನ್ನೆಲ್ಲ ಬಲರಾಮನೊಬ್ಬನೇ ಪರಿಘದಿಂದ ಕೊಂದು ಹಾಕಿದ.

## ಕಂಸ ವಧೆ

ಅವರೆಲ್ಲರೂ ಮೃತರಾದದ್ದನ್ನು ಕಂಡು ಅತಿಪಾಪಿಯಾದ ಕಂಸ ಉಳಿದೆಲ್ಲ ತನ್ನ ಸೈನ್ಯವನ್ನು ಕೃಷ್ಣ-ಬಲರಾಮರನ್ನು ಮುತ್ತಲು ಆಜ್ಞಾಪಿಸಿದ. ಕಂಸನ ಅಪ್ಪಣೆ ಕೇಳುತ್ತಿದ್ದಂತೆಯೇ ಇಪ್ಪತ್ತು ಅಕ್ಷೋಹಿಣೀ ಸೇನೆಯು, ನರಿಗಳು ಸಿಂಹವನ್ನು ಮುತ್ತುವಂತೆ ಕೃಷ್ಣನನ್ನು ಸುತ್ತುವರೆಯಿತು.

ಕೃಷ್ಣನ ಬಲ ಅನಂತವೆಂದು ತಿಳಿದಿದ್ದರೂ ಸಹ ಇಂದ್ರ ತನ್ನ ಪಾಲಿನ ಕರ್ತವ್ಯವನ್ನು ಪಾಲಿಸಲೆಂದು ಆಯುಧಗಳಿಂದ ತುಂಬಿದ ತನ್ನ ರಥವನ್ನು ಮಾತಲಿಯ ಸಮೇತವಾಗಿ ಕಳುಹಿಸಿಕೊಟ್ಟ. ತುಂಬಿದ ಸಾಗರವನ್ನು ಜನ ಅರ್ಘ್ಯನೀಡಿ ತುಂಬುವರಲ್ಲವೇ? ಇಂದ್ರ ಕಳುಹಿಸಿದ ತನ್ನ ರಥವನ್ನು ಏರಿದ ಶ್ರೀಕೃಷ್ಣ ತನ್ನ ಅನೇಕವಿಧ ಆಯುಧಗಳೆಂಬ ಕಿರಣಗಳಿಂದ ಸೂರ್ಯನಂತೆ ಕತ್ತಲೆಂಬ ಸೈನ್ಯವನ್ನು ಸಂಪೂರ್ಣವಾಗಿ ನಾಶಮಾಡಿದ. ತನ್ನ ಬಲವೆಲ್ಲ ಸಂಪೂರ್ಣವಾಗಿ ಹತವಾದದ್ದನ್ನು ಕಂಡು ಕಂಸ, ಖಡ್ಗ-ಗುರಾಣಿಗಳನ್ನು ಹಿಡಿದು ತಾನೇ ಕೃಷ್ಣನನ್ನು ಎದುರಿಸಲು ಸಿದ್ಧನಾದ. ಆ ವೇಳೆಗೆ ಕೃಷ್ಣನೇ ತನ್ನ ಮೇಲೆರಗಿದ್ದನ್ನು ಕಂಡ ಅವನು ಹದ್ದಿನ ವೇಗದಲ್ಲಿ ಹಾರುತ್ತ ತಪ್ಪಿಸಿಕೊಳ್ಳಲು ಹೆಣಗಾಡಿದ. ಆದರೆ ಕೃಷ್ಣ ಕ್ಷಣಾರ್ಧದಲ್ಲಿ ಅವನ ತಲೆಯನ್ನು ತನ್ನ ಎಡಗೈಯಲ್ಲಿ ಹಿಡಿದು, ಬಲಗೈಯಿಂದ ಅವನ ತಲೆಯ ಮೇಲೆ ಅಪ್ಪಳಿಸಿದ. ಕಂಸನ ಕಿರೀಟ ಉರುಳಿತು ; ಕಿವಿಗಳಿಂದ ಕುಂಡಲಗಳು ಕಳಚಿ ಬಿದ್ದವು ; ಆಭರಣಗಳೆಲ್ಲ ಕೆಳಗುರುಳಿದವು ; ಬಟ್ಟೆಯೂ ಜಾರಿ ಕೆಳಬೀಳತೊಡಗಿತ್ತು. ಹೀಗೆ ಅತ್ಯಂತ ಶೋಚನೀಯ ಸ್ಥಿತಿಗೆ ಸಿಲುಕಿದ್ದ ಕಂಸನನ್ನು ಸಿಂಹಾಸನದಿಂದ ಕೆಳಕ್ಕೆಳೆದು, ಭೂಮಿಯ ಮೇಲೆ ಉರುಳಿಸಿ, ಎರಡು ಕಾಲುಗಳಿಂದ ಒದ್ದ. ಅದೇ ವೇಳೆಗೆ ಕಂಸನ ಶರೀರದಲ್ಲಿದ್ದ ವಾಯುದೇವ ಹೊರಬಂದು ಕೃಷ್ಣನ ಶರೀರದಲ್ಲಿ ಸೇರಿಕೊಡ. ಬ್ರಹ್ಮಾದಿದೇವತೆಗಳೆಲ್ಲ ನೋಡುತ್ತಿದ್ದಂತೆಯೇ ಕಂಸನ ಶರೀರದಲ್ಲಿದ್ದ ಅಸುರನನ್ನು ಕೃಷ್ಣ ಸಂಹರಿಸಿದ ; ಅವನಲ್ಲಿ ಆವಿಷ್ಟನಾಗಿದ್ದ ಭೃಗುಮುನಿ ತನ್ನ ಲೋಕಕ್ಕೆ ತೆರಳಿದ.

## ಹರಿಭಕ್ತಿಯ ಹಿರಿಮೆ

ಎಲ್ಲ ಜಗತ್ತಿನ ಮುಖ್ಯಸ್ವಾಮಿಯಾದ ಹರಿಯಲ್ಲಿನ ದ್ವೇಷದಿಂದಾಗಿ ಆ ಮೊದಲೇ ಸತ್ತಿದ್ದ ಪೂತನೀ ಮೊದಲಾದ ತನ್ನ ಬಂಧುಗಳೊಂದಿಗೆ, ಅನುಚರರೊಂದಿಗೆ ಕಂಸ ಅಂಧತಮಸ್ಸನ್ನೇ ಹೊಂದಿದ. ಭಗವಂತನ ದ್ವೇಷಿಗಳಾದ ಜನರೆಲ್ಲ ಸೇರುವುದು ಅದೇ ಸ್ಥಳವನ್ನೇ, ಅಲ್ಲವೇ ! ಸದಾ ಅತ್ಯಂತ ದುಃಖದಿಂದ ಕೂಡಿರುವ, ಮತ್ತೆ ಹಿಂತಿರುಗಲಾರದ, ಸುಖದ ಹೆಸರನ್ನೇ ಹೊಂದಿರದ ಅಂಧತಮಸ್ಸನ್ನು ಭಗವದ್ದ್ವೇಷಿಗಳು ಹೊಂದಿಯೇ ಹೊಂದುವರು. ಅವನು ಬ್ರಹ್ಮರುದ್ರಾದಿದೇವತೆಗಳ ಭಕ್ತನೇ ಆಗಿದ್ದರೂ ಉಳಿದೆಲ್ಲಾ ಧರ್ಮಗಳ ಸಾಗರನೇ ಎನ್ನಿಸಿದ್ದರೂ, ಅಂತಹ ಗತಿ ದೈವದ್ರೋಹಿಯಾದವನಿಗೆ ತಪ್ಪಿದ್ದಲ್ಲ. ಇದು ಸಕಲ ಸಚ್ಛಾಸ್ತ್ರಗಳ ನಿರ್ಣಯ.

ಶ್ರೀಹರಿಯನ್ನು ಬ್ರಹ್ಮರುದ್ರಾದಿದೇವತೆಗಳೇ ಮುಖ್ಯವಾದ ಎಲ್ಲ ಜಗತ್ತಿಗೂ, ಸ್ವಯಂ ಲಕ್ಷ್ಮೀದೇವಿಗೂ ಸಹ ಸಕಲಬಗೆಯಲ್ಲೂ ಒಡೆಯನೆಂದೂ, ಸ್ವತಂತ್ರನೆಂದೂ ದೃಢವಾಗಿ ತಿಳಿಯುವ ಅತ್ಯಂತ ಭಕ್ತಿಯಿರುವವನು ಮಾತ್ರನೇ ಮೋಕ್ಷಕ್ಕೆ ಅರ್ಹನಾಗುವನು.

ಆದ್ದರಿಂದಲೇ ವಿವೇಕಿಯಾದವನು ನಿರ್ಮಲವಾದ ಭಕ್ತಿಯಿಂದ ರಮೆಯರಸನನ್ನು ಅನಂತಗುಣಪೂರ್ಣನೆಂದೂ, ದೋಷದೂರನೆಂದೂ ತಿಳಿದು ಉಳಿದೆಲ್ಲ ದೇವತೆಗಳ ಸಮೂಹ-ವನ್ನು ತಾರತಮ್ಯಪೂರ್ವಕ ಶ್ರೀಹರಿಯ ಭಕ್ತರೆಂದು ತಿಳಿಯುತ್ತ ಉಪಾಸನೆ ಮಾಡಬೇಕು.

ಕಂಸನನ್ನು ತನ್ನ ಪರಾಕ್ರಮದಿಂದ ಸಂಹರಿಸಿದ ಕೃಷ್ಣನು, ಬ್ರಹ್ಮಾದಿದೇವತೆಗಳಿಂದ ಪುಷ್ಪ-ವೃಷ್ಟಿಯ ಮೂಲಕ ಪೂಜಿಸಲ್ಪಟ್ಟವನಾಗಿ ಹೆಚ್ಚಾಗಿ ನಲಿದ. ಸರ್ವದಾ ಸುಖರೂಪಿಯಾದ ಅವನು ನಲಿದನೆಂಬ ಮಾತು ಲೋಕರೀತಿಯದಷ್ಟೇ ; ಸದಾ ಉದಿಸಿರುವ ಸೂರ್ಯನನ್ನು ಉದಿಸಿದ ಎಂದು ವ್ಯವಹರಿಸುವುದು ಹೇಗೋ ಹಾಗೆ.

ಅನಂತಸುಖಸಾಗರನೂ, ಸದಾ ವ್ಯಾಪ್ತಸ್ವರೂಪನೂ, ಸದಾ ಸಮಸ್ತದೋಷಗಳಿಂದ ದೂರನೂ ಆಗಿರುವ ಶ್ರೀಹರಿ ಸದಾ ಅನಂತಗುಣಸ್ವರೂಪನೇ ಆಗಿರುವನು.

## ಶ್ರೀಕೃಷ್ಣ - ಬಲರಾಮರ ಉಪನಯನ

ಕೃಷ್ಣನು ತಂದೆತಾಯಿಗಳನ್ನು ಬಂಧನದಿಂದ ಮುಕ್ತರನ್ನಾಗಿಸಿದ ; ಸ್ವಯಂ ಸರ್ವ-ವಂದ್ಯನಾದರೂ ಧರ್ಮರಕ್ಷಣೆಗೋಸ್ಕರ ಬಲರಾಮನೊಂದಿಗೆ ಅವರಿಬ್ಬರಿಗೂ ನಮಸ್ಕರಿಸಿದ. ರಾಜ್ಯಭಾರವನ್ನು ಉಗ್ರಸೇನನಿಗೆ ವಹಿಸಿ ವೈಭವದಿಂದ ಅಭಿಷೇಕಿಸಿದ. ಉಪನಯನಸಂಸ್ಕಾರವನ್ನು ಹೊಂದಿದ. ಸಾಂತ್ವನದ ನುಡಿಗಳೊಂದಿಗೆ ಕೃಷ್ಣನಿಂದ ಬೀಳ್ಕೊಂಡ ನಂದಗೋಪನು ಒಲ್ಲದ ಮನಸ್ಸಿನಿಂದ, ಗೋಪವೃಂದದೊಂದಿಗೆ ವೃಂದಾವನಕ್ಕೆ ಮರಳಿದ; ದಾರಿಯುದ್ದಕ್ಕೂ ಅವನ ಮನಸ್ಸು ಕೃಷ್ಣನ ಚರಣಕಮಲಗಳನ್ನೇ ಧ್ಯಾನಿಸುತ್ತಿತ್ತು; ಅನಂತರ ಕೃಷ್ಣನನ್ನೇ ಧ್ಯಾನಿಸುತ್ತಾ, ಪತ್ನಿಯೊಂದಿಗೆ ವೃಂದಾವನದಲ್ಲೇ ನೆಲೆಸಿದ.

## ಗುರುಕುಲವಾಸದ ನಾಟಕ - ಗುರುದಕ್ಷಿಣೆ

ಕೃಷ್ಣನು ಬಲರಾಮನೊಂದಿಗೆ ಅವಂತೀಪುರದಲ್ಲಿದ್ದ 'ಸಾಂದೀಪಿನಿ' ಎಂಬ ಆಚಾರ್ಯನ ಬಳಿಗೆ ಹೋಗಿ ವೇದ ವೇದಾಂಗಾದಿಗಳನ್ನು ಅಧ್ಯಯನ ಮಾಡಿದ. ಸ್ವಯಂ ಸರ್ವಜ್ಞನಾದ ವೇದವೇದ್ಯನಾದ ಅವನ ಆ ವೇದಕಲಿಯುವ ಕಾರ್ಯ ದೇವತೆಗಳಿಗೆ ಕರ್ತವ್ಯವನ್ನು ಬೋಧಿಸ-ಲೆಂದಷ್ಟೇ ಆಗಿತ್ತು. ''ವಿದ್ವಾಂಸರೇ ಆಗಿದ್ದರೂ ದೇವತೆಗಳು ಸಹ ಭೂಮಿಯಲ್ಲಿ ಅವತರಿಸಿದಾಗ ನರರಂತೆ ವರ್ತಿಸುತ್ತ ತಮ್ಮ ಜ್ಞಾನವನ್ನು ಪ್ರದರ್ಶಿಸದೇ ವಾಸಿಸಬೇಕು ; ಅಧ್ಯಯನಾದಿಗಳನ್ನು ಸಹ ಮಾಡಲೇಬೇಕು'' ಎಂಬ ಹಿರಿಯಧರ್ಮವನ್ನು ತಿಳಿಯಪಡಿಸುವ ಉದ್ದೇಶದಿಂದ ಶ್ರೀಕೃಷ್ಣ ಆ ರೀತಿ ಗುರುಕುಲವಾಸ ಮಾಡಿದ. ಗುರುಗಳು ಒಮ್ಮೆ ನುಡಿಯುತ್ತಿದ್ದಂತೆಯೇ ಎಲ್ಲವನ್ನೂ ಗ್ರಹಿಸುತ್ತಿದ್ದ ಅವನ ಗ್ರಹಣಶಕ್ತಿ ಲೋಕದ ಪಾಲಿಗೆ ಅಚ್ಚರಿಯ ಮಾತಾಗಿತ್ತು; ಎಟುಕದ ಸಾಧನೆಯಾಗಿತ್ತು. ಅಧ್ಯಯನದ ಸಮಾಪ್ತಿಕಾಲದಲ್ಲಿ, ಗುರುದಕ್ಷಿಣೆಯಾಗಿ ಹಿಂದೆ ಮೃತನಾಗಿದ್ದ ಗುರುಪುತ್ರನನ್ನು ಮರಳಿ ಬದುಕಿಸಿ ನೀಡಿದ ; ಬಳಿಕ ಮಥುರೆಗೆ ಮರಳಿದ.

## ಮಥುರೆಯ ವೈಭವ

ಪಟ್ಟಣವಾಸಿಗಳಿಂದ ಬಹಳವಾಗಿ ಗೌರವಿಸಲ್ಪಡುತ್ತ ಕೃಷ್ಣ ಮಥುರೆಯಲ್ಲೇ ನೆಲೆಸಿದ. ತಂದೆತಾಯಿಗಳಾದ ವಸುದೇವ-ದೇವಕಿಯರಿಗಂತೂ ಶ್ರೀಕೃಷ್ಣನಂತಹ ಮಗನಿಂದಾಗಿ ದೊರಕದ ವಸ್ತುವೇ ಉಳಿದಿರಲಿಲ್ಲ. ಕಂಸನ ಆಳ್ವಿಕೆಯಲ್ಲಿ ಬಸವಳಿದು ಹೋಗಿದ್ದ ಎಲ್ಲರಿಗೂ

ಕೃಷ್ಣನ ಒಡೆತನ ನಲಿವಿನ ಸಾಗರವೆನ್ನಿಸಿತು. ಇತರ ಸಜ್ಜನರೇ ಹಾಗೆ ಸಂತೋಷಪಟ್ಟರೆಂದ ಮೇಲೆ ಇನ್ನು ಶ್ರೀಹರಿಯನ್ನೇ ಮಗನನ್ನಾಗಿ ಪಡೆದ ದೇವಕೀ-ವಸುದೇವರ ವಿಷಯದಲ್ಲಿ ಹೇಳುವುದೇನಿದೆ ! ಕೃಷ್ಣನನ್ನು ನಂಬಿದವರು ನೆಲೆಸಿದ ಸ್ಥಳದಲ್ಲೇ ಸುಖಸಂಪತ್ತುಗಳು ತುಂಬಿ ತುಳುಕುವಾಗ, ಸಾಕ್ಷಾತ್ ರಮೆಯರಸನಾದ ಅವನ ಬೀಡಿನಲ್ಲಿನ ಸಂಪತ್ತನ್ನು ವರ್ಣಿಸುವುದೆಂತು ! ಅವನಿಂದ ವೃಂದಾವನದಂತಹ ಅರಣ್ಯವೇ ಸದಾ ಇಂದ್ರನ ಪಟ್ಟಣವಾದ ಅಮರಾವತಿಯಂತಾಗಿತ್ತು ಎಂದ ಮೇಲೆ, ಪಟ್ಟಣವಾದ ಮಥುರೆಯ ಮಾತೇನು ! ಶ್ರೀಹರಿಯು ವಾಸಿಸುವುದರಿಂದಾಗಿಯೇ ಸತ್ಯ- ಲೋಕಕ್ಕೆ ಇನ್ನಿಲ್ಲದ ಪ್ರಾಶಸ್ತ್ಯ ಲಭಿಸಿರುವುದು ; ಅಲ್ಲವೇ? ಅದರಂತೆ ಶ್ರೀಕೃಷ್ಣ ನೆಲೆಸಿದ್ದರಿಂದಾಗಿ ಮಥುರಾನಗರವೆಲ್ಲ ಸುಖಸಂಪತ್ತುಗಳಿಂದ ಕೂಡಿದ ಜನರ ಬೀಡಾಯಿತು.

## ಗದೆಯೊಡನೆ ತಾಯಿಯನ್ನೂ ಕಳೆದುಕೊಂಡ ಜರಾಸಂಧ

ಮೂರುಲೋಕಗಳ ಪಾಲಕನಾದ ಶ್ರೀಕೃಷ್ಣ ಹೀಗೆ ಯಾದವರನ್ನು ಪಾಲಿಸತೊಡಗಿದಾಗ, ಅವನಿಂದಾಗಿ ಗಂಡನನ್ನು ಕಳೆದುಕೊಂಡ ಅಸ್ತಿ ಮತ್ತು ಪ್ರಾಸ್ತಿ ಎಂಬ ಕಂಸನ ಪತ್ನಿಯರು ಅತೀವ ದುಃಖಿತಪ್ತರಾಗಿ ತಮ್ಮ ತಂದೆಯಾದ ಜರಾಸಂಧನ ಬಳಿಗೆ ಹೋಗಿ ತಮ್ಮ ದುಃಖವನ್ನು ತೋಡಿಕೊಂಡರು. ಆ ವಾರ್ತೆಯನ್ನು ಕೇಳುತ್ತಲೇ ಮಗಧದೇಶದ ಅರಸನಾದ, ತನ್ನ ಬಾಹುಬಲದಿಂದಾಗಿ ಯಾರಿಂದಲೂ ಆ ಮೊದಲು ಸೋಲನ್ನೇ ಕಂಡಿರದಿದ್ದ, ಬ್ರಹ್ಮ ರುದ್ರ ಹಾಗೂ ದೂರ್ವಾಸಮುನಿಗಳ ವರದಿಂದಾಗಿ ಅಜೇಯನೂ, ಅವಧ್ಯನೂ ಆಗಿದ್ದ ಜರಾಸಂಧ ಕೆರಳಿ ಕೆಂಡವಾದ. ಹಾಗೆ ಬಹಳವಾಗಿ ಕೆರಳಿದ ಶಿವಭಕ್ತರೆಲ್ಲರ ಗುರುವೂ, ಸಕಲ ಶೈವಶಾಸ್ತ್ರಪಾರಂಗತನೂ ಆದ ಅವನು ಶಿವನಿಂದ ಪಡೆದುಕೊಂಡಿದ್ದ ಗದೆಯನ್ನು ಕೈಗೆತ್ತಿಕೊಂಡ. ಆ ವೇಳೆಗೆ ಅಲ್ಲಿಗೆ ಆಗಮಿಸಿದ ನಾರದರನ್ನು ಕುರಿತು ಕೇಳಿದ : "ಸ್ವಾಮಿ ! ಮಥುರೆ ಇಲ್ಲಿಂದ ಎಷ್ಟು ದೂರವಿದೆ?" ; "ಏಕಶತ ಯೋಜನ" - ನಾರದರ ಉತ್ತರ ಸಿದ್ಧವಾಗಿತ್ತು. ಒಂದುನೂರು (ಏಕಶತ) ಯೋಜನ ಎಂದು ಅವರ ಮಾತನ್ನು ತಪ್ಪಾಗಿ ಅರ್ಥಮಾಡಿಕೊಂಡು ಜರಾಸಂಧ ನಿಂತಲ್ಲಿಂದಲೇ ಗದೆಯನ್ನು ಎಸೆದ. ಆದರೆ, ನಿಜವಾಗಿಯೂ ಮಥುರೆ ಇದ್ದದ್ದು ನೂರೊಂದು (ಏಕ+ಶತ) ಯೋಜನ ದೂರದಲ್ಲಿ. ಭಗವತ್ಸೇವೆಯ ಭಾಗ್ಯವನ್ನು ಪಡೆಯಲೆಂದೇ ನಾರದರು ಆ ರೀತಿಯ ಉತ್ತರವನ್ನಿತ್ತು ಜರಾಸಂಧನನ್ನು ವಂಚಿಸಿದ್ದರು. ಗದೆ ಸರಿಯಾಗಿ ಕೃಷ್ಣನ ಮೇಲೆಯೇ ಬಿದ್ದರೂ, ಕೃಷ್ಣನಿಗೆ ಅದರಿಂದ ಯಾವ ರೀತಿಯ ಕೆಡಕೂ ಒದಗದು ಎಂಬ ಸತ್ಯವನ್ನು ನಾರದರು ತಿಳಿದಿದ್ದರೂ, ತಮ್ಮ ಪಾಲಿನ ಸೇವೆಯನ್ನು ಸಲ್ಲಿಸುವ ಉದ್ದೇಶದಿಂದ ಹಾಗೆ ಆ ಕಾರ್ಯವನ್ನು ಮಾಡಿದ್ದರು. ಜರಾಸಂಧನ ಸಂಕಲ್ಪದಂತೆ ಸರಿಯಾಗಿ ನೂರು ಯೋಜನ ದೂರದಲ್ಲಿಯೇ ಗದೆಯು ಬಿದ್ದು , ಅಲ್ಲಿ ನೆಲೆಸಿದ್ದ ನರಭಕ್ಷಕಿಯಾದ ಅವನ ತಾಯಿ ಜರೆ ಅದರ ಪೆಟ್ಟಿಗೆ ಕೂಡಲೇ ಅಸು ನೀಗಿದಳು. ಉದ್ದೇಶ ವಿಫಲವಾದಾಗ ಗದೆ ಮರಳಿ ಕೈಲಾಸಕ್ಕೆ ಹಿಂದಿರುಗುವುದೆಂದು ಅದನ್ನು ಕೊಡುವಾಗಲೇ ಶಿವ ಎಚ್ಚರಿಸಿದ್ದ. ಕೃಷ್ಣಹನನದ ಅವನ ಕಾರ್ಯ ಈಡೇರದ್ದರಿಂದ

ಗದೆಯು ಕೈಲಾಸಕ್ಕೆ ಮರಳಿ ಶಿವನ ಕೈಸೇರಿತು. ಹೀಗೆ ತಾಯಿಯನ್ನೂ, ಗದೆಯನ್ನೂ ಒಟ್ಟಾಗಿಯೇ ಕಳೆದುಕೊಂಡ ಜರಾಸಂಧನ ಕೋಪ-ತಾಪಗಳಿಗೆ ಮಿತಿಯಿಲ್ಲದಂತಾಯಿತು.

## ಜರಾಸಂಧನಿಂದ ಮಥುರೆಯ ಆಕ್ರಮಣ

ಜರಾಸಂಧ ಕೂಡಲೇ ತನ್ನ ಅಧೀನರಾಗಿದ್ದ ಎಲ್ಲ ರಾಜರಿಗೆ ತ್ವರಿತ ಆದೇಶವನ್ನಿತ್ತು ಅವರನ್ನೆಲ್ಲ ಒಂದುಗೂಡಿಸಿದ ; ಹಾಗೆ ಸಿದ್ಧವಾದ ೨೩ ಅಕ್ಷೋಹಿಣಿಸೇನೆಯೊಂದಿಗೆ ಕೂಡಿಕೊಂಡು ದರ್ಪದಿಂದ ಮಥುರಾಪುರದೆಡೆ ಸಾಗಿದ. ಸಮಗ್ರಪಟ್ಟಣವನ್ನೇ ತನ್ನ ಅಪಾರಸೇನೆಯಿಂದ ಸುತ್ತುವರಿದು ವಿಂದ ಹಾಗೂ ಅನುವಿಂದರನ್ನು ದೂತರನ್ನಾಗಿ ಕೃಷ್ಣನ ಬಳಿಗೆ ಕಳುಹಿಸಿದ. ಅತ್ಯಂತ ದರ್ಪದಿಂದಲೂ, ಭಗವಂತನ ಉಪಹಾಸದಿಂದಲೂ ಕೂಡಿದ ಅವನ ಮಾತುಗಳನ್ನು ಅವರಿಬ್ಬರೂ ಕೃಷ್ಣನಿಗೆ ಅರಿಕೆ ಮಾಡಿದರು : "ಪ್ರಪಂಚದಲ್ಲೇ ಸಾಟಿಯಿಲ್ಲದ ಬಲಪೌರುಷಗಳ ಸಾರರೂಪನಾದ ನೀನೊಬ್ಬ ಹುಟ್ಟುವಿ ಎಂದು ತಿಳಿಯದೆ, ಶಕ್ತಿ ಇಲ್ಲದ ನಾನು ನನ್ನಿಬ್ಬರು ಹೆಣ್ಣುಮಕ್ಕಳನ್ನು ಕಂಸನಿಗೆ ಕೊಟ್ಟುಬಿಟ್ಟೆ; ಅವನಾದರೋ ನಿನ್ನಿಂದ ಹತನಾದ ; ಅಂತಹ ಅತಿದುರ್ಬಲನಾದ ನಾನು ಬಲಶಾಲಿಗಳಲ್ಲಿ ಶ್ರೇಷ್ಠನಾದ ನಿನ್ನನ್ನೊಮ್ಮೆ ಕಣ್ಣಾರೆ ಕಂಡು, ಪ್ರತಾಪವನ್ನು ಕಳೆದುಕೊಂಡು, ಹೆಣ್ಣುಮಕ್ಕಳೊಂದಿಗೆ ಶೀಘ್ರವಾಗಿಯೇ ತಪೋವನಕ್ಕೆ ತೆರಳುವೆ ; ನನ್ನ ಕಣ್ಣಿಗೆ ನೀನು ಕಾಣಿಸು."

## ಕೃಷ್ಣನ ಅದ್ಭುತ ಪ್ರತ್ಯಾಕ್ರಮಣ

ಆಕ್ಷೇಪ, ಬಲದ ಸೊಕ್ಕು ಹಾಗೂ ತನ್ನ ಅಪಹಾಸದಿಂದ ಕೂಡಿದ್ದ ಆ ಮಾತುಗಳನ್ನು ಕೇಳಿ, "ಅದು ನಿಜ" ಎಂಬುದಾಗಿ ಅರ್ಥಗರ್ಭಿತವಾಗಿ ನುಡಿದು, ಮಂದಹಾಸ ಬೀರುತ್ತ, ಬಲರಾಮನಿಂದ ಕೂಡಿಕೊಂಡು ಶ್ರೀಕೃಷ್ಣ ಹೊರಟುನಿಂತ. ಉಳಿದ ಮೂರು ದ್ವಾರಗಳಲ್ಲೂ ಸಾತ್ಯಕಿಯಿಂದ ಕೂಡಿದ ತನ್ನ ಸೈನ್ಯವನ್ನು ನಿಲ್ಲಿಸಿ, ಉತ್ತರದ್ವಾರದಲ್ಲಿ ಬಲರಾಮನೊಂದಿಗೆ ಕೂಡಿಕೊಂಡು ನೃಪಸಮೂಹದೊಂದಿಗೆ ಬಂದಿದ್ದ ಮಗಧರಾಜನನ್ನು ಎದುರಿಸಲು ಶ್ರೀಕೃಷ್ಣ ತಾನೇ ತೆರಳಿದ. ಅವನ ಇಚ್ಛೆಯಿಂದ ಆಗ ಅವನ ಹಾಗೂ ಬಲರಾಮನ ಉಜ್ಜ್ವಲವಾದ ಆಯುಧಗಳು ಕೆಳಗಿಳಿದು ಬಂದವು. ತನ್ನ ಶಾರ್ಙ್ಗ, ಖಡ್ಗ, ಚಕ್ರ, ಶಂಖ, ಬತ್ತಳಿಕೆಗಳು, ಗದೆ ಮೊದಲಾದವುಗಳನ್ನು ತೆಗೆದುಕೊಂಡು ಕೃಷ್ಣನು ದಾರುಕನು ಸಾರಥ್ಯ ವಹಿಸಿದ್ದ ರಥದಲ್ಲಿ ಕುಳಿತ. ರಥರೂಪದಲ್ಲಿದ್ದ ಭೂಮಿಯನ್ನು ಹತ್ತಿ, ಕುದುರೆರೂಪದ ವೇದಗಳನ್ನು ಹೂಡಿ, ಶಾರ್ಙ್ಗ-ಧನುಸ್ಸನ್ನು ಕಟ್ಟಿಕೊಂಡು, ಹರಿತವಾದ ಬಾಣಗಳನ್ನು ತೆಗೆದುಕೊಂಡು, ವೇಗದಿಂದ ಜರಾಸಂಧನ ಬಳಿ ಶ್ರೀಕೃಷ್ಣ ಧಾವಿಸಿದ. ಮುಸಲ, ಹಲಗಳನ್ನು ತೆಗೆದುಕೊಂಡು, ಬಾಣ, ಬಿಲ್ಲು, ಬತ್ತಳಿಕೆಗಳಿಂದ ಕೂಡಿದವನಾಗಿ, ಶತ್ರುಗಳಿಂದ ಸೋಲನ್ನೇ ಕಾಣದ ಮಹಾಬಲಿಷ್ಠನಾದ ಬಲರಾಮನೂ ಸಹ ಹರ್ಷದಿಂದ ಜರಾಸಂಧನ ಸೈನ್ಯದತ್ತ ನುಗ್ಗಿದ. ಅನಂತಶಕ್ತಿಸಂಪನ್ನನಾದ ಕೃಷ್ಣ ಇದಿರಾ-ಗುತ್ತಿರುವುದನ್ನು ಕಂಡು, ರಾಜರಿಂದ ಕೂಡಿದ್ದ ಜರಾಸಂಧ, ಉಕ್ಕೇರಿದ ಸಾಗರದಂತೆ, ಕೆರಳಿದವನಾಗಿ, ಅನೇಕ ವಿಧವಾದ ಶ್ರೇಷ್ಠ ಆಯುಧಗಳ ಮಳೆಗರೆಯುತ್ತ ಮುನ್ನುಗ್ಗಿದ.

## ಉಗ್ರಸೇನನ ಉಗ್ರಪ್ರತಾಪ

ಜರಾಸಂಧನ ಸಿಟ್ಟನ್ನು ಕೆರಳಿಸಬಯಸಿದ ಕೃಷ್ಣ ಮೊದಲಿಗೆ ಉಗ್ರಸೇನನನ್ನು ಮುಂದೆ ಬಿಟ್ಟು, ಅವನ ಹಿಂದೆ ತಾನು ಸಾಗಿದ. ಎದುರಿನಲ್ಲಿ ಉಗ್ರಸೇನನನ್ನು ಕಂಡು ಕೋಪದಿಂದ ನಡುಗುತ್ತ ಜರಾಸಂಧ ಹೀಗೆಂದು ಆರ್ಭಟಿಸಿದ : ''ಎಲವೋ ಪಾಪಿ ! ಮಗನ ಸಾವಿಗೆ ಕಾರಣನಾದ ಶತ್ರು-ಪಕ್ಷದವನೇ ! ರಾಜ್ಯವನ್ನು ಬಯಸಿದ ನಿರ್ಲಜ್ಜನೇ ! ಮುಂದೆ ನಿಲ್ಲಬೇಡ ಹೊರಟುಹೋಗು ; ಮುದಿಹೋತದಂತಿರುವ ನೀನು ನನ್ನಿಂದ ಕೊಲ್ಲಲ್ಪಡಲು ಯೋಗ್ಯನಲ್ಲ; ಸಿಂಹವು ಎದುರಿಸುವುದು ಸಿಂಹವನ್ನೇ ಹೊರತು ನರಿಯನ್ನಲ್ಲವಷ್ಟೆ !'' ಅವನಿಂದ ಹೀಗೆ ಆಕ್ಷೇಪಿಸಲ್ಪಟ್ಟ ಉಗ್ರಸೇನ ಬತ್ತಳಿಕೆ-ಯಿಂದ ಹರಿತವಾದ ಬಾಣವೊಂದನ್ನು ತೆಗೆದುಕೊಂಡು ಅದರಿಂದ ಜರಾಸಂಧನ ಬಿಲ್ಲನ್ನು ಕತ್ತರಿಸಿ, ಗಟ್ಟಿಯಾಗಿ ಸಿಂಹನಾದ ಮಾಡಿದ. ಇನ್ನಿತರ ಅನೇಕ ತೀಕ್ಷ್ಣಬಾಣಗಳಿಂದ ಅವನನ್ನು ಬಹಳವಾಗಿ ನೋಯಿಸಿದ. ಜರಾಸಂಧ ಬೇರೊಂದು ಬಿಲ್ಲನ್ನು ತೆಗೆದುಕೊಂಡು, ಕೋಪದಿಂದ ತುಂಬಾ ಕೆಂಪಾದ ಕಣ್ಣುಗಳಿಂದ ಕೂಡಿ ಉಗ್ರಸೇನನನ್ನು ಕೊಲ್ಲುವ ಬಯಕೆಯಿಂದ ಮುನ್ನುಗ್ಗುತ್ತಿರುವುದನ್ನು ಗಮನಿಸಿದ ಕೃಷ್ಣ ತನ್ನ ರಥವನ್ನು ಮುನ್ನುಗ್ಗಿಸಿ ಅವನನ್ನು ಎದುರಿಸಿದ.

## ಜರಾಸಂಧಾದಿಗಳ ಪರಾಭವ

ಕೃಷ್ಣ ಬರುತ್ತಿದ್ದುದನ್ನು ಕಂಡ ತಕ್ಷಣ ಜರಾಸಂಧನು, ಶಿಶುಪಾಲ , ಪೌಂಡ್ರಕ ವಾಸುದೇವ ಮೊದಲಾದ ರಾಜರಿಂದ ಕೂಡಿಕೊಂಡು ಶ್ರೇಷ್ಠವಾದ ಬಗೆ ಬಗೆಯ ಅಸ್ತ್ರಶಸ್ತ್ರಗಳ ಮಳೆಗರೆದ; ಮೇರುಪರ್ವತದ ಮೇಲೆ ಮೋಡವೊಂದು ಮಳೆಗರೆದಂತೆ. ಕೃಷ್ಣ ಕ್ಷಣಮಾತ್ರದಲ್ಲಿಯೇ ತನ್ನ ಶಾರ್ಙ್ಗಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳಿಂದ ಅವನ ಅಸ್ತ್ರಶಸ್ತ್ರಗಳನ್ನೆಲ್ಲ ಕತ್ತರಿಸಿ ಹಾಕಿದ ; ಎವೆಯಿಕ್ಕುವಷ್ಟರಲ್ಲಿ ಜರಾಸಂಧನ ರಥ, ಸಾರಥಿ ಹಾಗೂ ಕುದುರೆಗಳನ್ನೆಲ್ಲ ನಾಶಪಡಿಸಿ, ಅವನನ್ನು ನಿರಾಯುಧನನ್ನಾಗಿ ಮಾಡಿದ. ಆ ವೇಳೆಗೆ ಜರಾಸಂಧನ ಛತ್ರ, ಧ್ವಜಗಳೂ ಕತ್ತರಿಸಿ ಬಿದ್ದಿದ್ದವು. ಆದರೂ ಕೃಷ್ಣ ಜರಾಸಂಧನನ್ನು ತಾನು ಕೊಲ್ಲಲಿಲ್ಲ. ಭೀಮನಿಗೆ ತನ್ನಲ್ಲಿರುವ ಭಕ್ತಿಯನ್ನು ಪ್ರಕಟಿಸುವ ಮೂಲಕ ಕೀರ್ತಿಯನ್ನು ನೀಡುವ ಉದ್ದೇಶದಿಂದಲೇ ಕೃಷ್ಣ ಹಾಗೆ ಅವನನ್ನು ಜೀವಂತವಾಗಿ ಬಿಟ್ಟಿದ್ದ. ಅನಂತರ ಎದುರಿಸಿದ ಶಿಶುಪಾಲ, ಪೌಂಡ್ರಕ, ಕೀಚಕ, ಶಲ್ಯ, ಸಾಲ್ವ, ಏಕಲವ್ಯ ಮೊದಲಾದ ಎಲ್ಲರನ್ನೂ ಕೃಷ್ಣ ವಿರಥರನ್ನಾಗಿಸಿದ. ಹಂಸ, ಡಿಬಿಕ, ದ್ರುಮ, ರುಕ್ಮಿ, ಬಾಹ್ಲೀಕ, ಭಗದತ್ತ, ಮೈಂದ ಮೊದಲಾದ ಇನ್ನುಳಿದ ಮುಖ್ಯರಾಜರೆಲ್ಲ ಕೃಷ್ಣನ ಬಾಣದ ಏಟುಗಳಿಂದ ತತ್ತರಿಸಿ, ದಿಕ್ಕೆಟ್ಟು ಓಡಿದರು. ಆಯುಧ, ಧ್ವಜ, ಪತಾಕೆ, ರಥ, ಅಶ್ವ, ಸೂತ ಹಾಗೂ ಕವಚಗಳನ್ನು ಕಳೆದುಕೊಂಡು, ತೀಕ್ಷ್ಣಬಾಣಗಳ . ಹೊಡೆತದಿಂದ ಮೈಯೆಲ್ಲ ಗಾಯಗೊಂಡ ಅವರು ಉಟ್ಟ ವಸ್ತ್ರ, ಆಭರಣ, ಕಿರೀಟ, ಹಾರ ಮೊದಲಾದವನ್ನು ಕಳೆದು-ಕೊಂಡವರಾಗಿ, ರಕ್ತವನ್ನು ಕಾರುತ್ತ, ಭಯಗೊಂಡು ನಿಲ್ಲದೆ ಓಡತೊಡಗಿದರು. ಶೋಚನೀಯ-ವಾದ ಸ್ಥಿತಿಗೆ ಸಿಕ್ಕಿ ಅವರೆಲ್ಲ ಕೃಷ್ಣನಿಂದ ಓಡಿಸಲ್ಪಟ್ಟದ್ದನ್ನು ಕಂಡ ಪರಾಕ್ರಮಿಯಾದ ಜರಾಸಂಧ, ವಿವಿಧ ಆಯುಧಗಳಿಂದ ಕೂಡಿದ ಮತ್ತೊಂದು ರಥವನ್ನೇರಿ ಬಲರಾಮನತ್ತ ಧಾವಿಸಿದ.

## ಬಲರಾಮನಿಂದ ಜರಾಸಂಧನ ಪರಾಭವ

ಜರಾಸಂಧ ಬರುತ್ತಿದ್ದಂತೆಯೇ ಬಲರಾಮನ ಮುಸಲದ ಹೊಡೆತಕ್ಕೆ ಅವನ ಹೊಸ ರಥ ಪುಡಿಯಾಯಿತು. ಜರಾಸಂಧ ತನ್ನ ಗದೆಯನ್ನು ಬಲರಾಮನ ವಕ್ಷಸ್ಥಳದತ್ತ ಬೀಸಿದ. ಮುಸಲದಿಂದ ಬಲರಾಮ ಅದನ್ನು ತಡೆಗಟ್ಟಿದ. ಈ ರೀತಿಯಾಗಿ ಈ ಇಬ್ಬರೂ ಉತ್ತಮ-ಬಲಶಾಲಿಗಳು ಹೋರಾಡಿದರು. ಅನಂತರ ಅವರು ದ್ವಂದ್ವಯುದ್ಧಕ್ಕೆ ತೊಡಗಿದರು. ಅಲ್ಲಿದ್ದ ಬೆಟ್ಟ, ವೃಕ್ಷಗಳು, ಬಂಡೆಯ ಸಮೂಹಗಳು ಅವರ ಹೊಡೆತಕ್ಕೆ ಪುಡಿಪುಡಿಯಾಗಿ ಹೋದವು. ವಜ್ರಕ್ಕಿಂತಲೂ ಕಠಿಣವಾದ ಶರೀರದ ಆ ಇಬ್ಬರು ಬಲಶಾಲಿಗಳ ದ್ವಂದ್ವಯುದ್ಧವು ಹೀಗೆಯೇ ಬಹುಕಾಲ ನಡೆಯಿತು. ಆ ವೇಳೆಗಾಗಲೇ ಕೃಷ್ಣ ಉಳಿದೆಲ್ಲ ಶತ್ರುಗಳನ್ನು ಓಡಿಸಿದ್ದ ; ಅವನ ಶಂಖದ ಧ್ವನಿಯನ್ನು ಕೇಳಿ, ತನ್ನ ಶತ್ರು ಮಾತ್ರ ಇನ್ನೂ ಹೋರಾಡುತ್ತಿರುವುದನ್ನು ಕಂಡು ಕೆರಳಿದ ಬಲರಾಮ ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡು ಜರಾಸಂಧನನ್ನು ದೂರತಳ್ಳಿ, ಅಮೋಘವಾದ ಮುಸಲವನ್ನು ಕೈಗೆತ್ತಿಕೊಂಡ. ಅದರ ಹೊಡೆತಕ್ಕೆ ತತ್ತರಿಸಿದ ಜರಾಸಂಧ ಪ್ರಜ್ಞೆತಪ್ಪಿ ಕೆಳಕ್ಕುರುಳಿದ. ಬಲರಾಮ ಅವನನ್ನು ಹಿಡಿದುಕೊಳ್ಳಲು ಧಾವಿಸಿದ.

## ಏಕಲವ್ಯನ ಪರಾಭವ

ಆ ವೇಳೆಗೆ ಕೃಷ್ಣನ ಬಾಣಗಳ ಪೆಟ್ಟಿಗೆ ಹೆದರಿ ಓಡುತ್ತಿದ್ದ ಏಕಲವ್ಯ ಬಲರಾಮನ ಆ ಕಾರ್ಯವನ್ನು ಕಂಡು, ಅವನ ತಲೆಯ ಮೇಲೆ ಬಾಣಗಳನ್ನು ಸುರಿಸಲಾರಂಭಿಸಿದ. ಭಯಗೊಂಡು ಓಡುತ್ತಿದ್ದ ಅವನೊಂದಿಗೆ ಯುದ್ಧಮಾಡಲು ಇಚ್ಛಿಸದ ಕೃಷ್ಣ, ತನ್ನ ಮನಸ್ಸಿನಿಂದ [೧]ಪ್ರದ್ಯುಮ್ನನೆಂಬ ಮಗನನ್ನು ಹುಟ್ಟಿಸಿದ. ಪ್ರದ್ಯುಮ್ನ ಮಹಾಸ್ತ್ರಗಳನ್ನು ಸುರಿಸುತ್ತ ಏಕಲವ್ಯನನ್ನು ಮುತ್ತಿದ. ಈ ವೇಳೆಗೆ ಜರಾಸಂಧನನ್ನು ತನ್ನ ರಥಕ್ಕೆ ಬಲರಾಮ ಎಳೆದು ತಂದ. ಬಹಳ ಹೊತ್ತು ಏಕಲವ್ಯನೊಂದಿಗೆ ಹೋರಾಡಿದ ಪ್ರದ್ಯುಮ್ನ ಕೊನೆಗೆ ಅವನನ್ನು ನಿರಾಯುಧನನ್ನಾಗಿಸಿದ. ಕ್ರೋಧವಶರೆಂಬ ದೈತ್ಯರಿಗೆ ಒಡೆಯನಾದ ಮಣಿಮಂತನೆಂಬ ದೈತ್ಯ, ಒಂದಂಶದಿಂದ ಏಕಲವ್ಯನೆಂಬ ಹೆಸರಿನ ಬೇಡನಾಗಿ ಹುಟ್ಟಿಬಂದಿದ್ದ. ಪ್ರದ್ಯುಮ್ನನನ್ನು ಮತ್ತೆ ತನ್ನೊಳಗೆ ಅಡಗಿಸಿಕೊಂಡು ಶ್ರೀಕೃಷ್ಣನು ಜರಾಸಂಧನ ಎಲ್ಲ ಸೈನ್ಯವನ್ನೂ ಸಂಹರಿಸಿ, ಮತ್ತೆ ಸೈನ್ಯವನ್ನು ಗುಂಪುಗೂಡಿಸಿ ತರಲೆಂಬ ಕಾರಣಕ್ಕಾಗಿ ಜರಾಸಂಧನನ್ನು ಬಲರಾಮನಿಂದ ಬಿಡಿಸಿ ಕಳುಹಿಸಿದ. ಲಜ್ಜೆಯಿಂದ ಮೋರೆ ಜೋಲುಮಾಡಿಕೊಂಡ ಪಾಪಿ ಜರಾಸಂಧ ತನ್ನೆಲ್ಲ ರಾಜರೊಂದಿಗೆ ಕೂಡಿಕೊಂಡು ತನ್ನ ಪಟ್ಟಣವನ್ನು ಸೇರಿಕೊಂಡ. ತನ್ನ ಮಗಳ ಮಗನನ್ನು ಆ ಮೊದಲೇ ಕಂಸನ ಉತ್ತರಾಧಿಕಾರಿಯಾಗಿ ಅಭಿಷೇಕಿಸಿ, ಅವನನ್ನು ಮುಂದಿಟ್ಟುಕೊಂಡು ಮಥುರೆಯನ್ನು ಮುತ್ತಿದ್ದ ಜರಾಸಂಧ, ಅವನನ್ನು ಮುಂದಿಟ್ಟುಕೊಂಡೇ ಮತ್ತೆ ತನ್ನ ಪಟ್ಟಣಕ್ಕೆ ಹಿಂದಿರುಗುವಂತಾಯಿತು.

---

೧. ಪ್ರದ್ಯುಮ್ನ ಹೀಗೆ ಮೊದಲಬಾರಿಗೆ ಶ್ರೀಕೃಷ್ಣನಿಂದ ಜನಿಸಿದ ಪ್ರಸಂಗ ಇದಾಗಿದೆ ; ಆದ್ದರಿಂದ ಕೃಷ್ಣ ಮುಂದೆ ಸಂತತಿಗೋಸ್ಕರವಾಗಿ ಕೈಲಾಸಯಾತ್ರೆ ಮಾಡಿದ ಪ್ರಸಂಗವು ಕೇವಲ ಮೋಹಕ ಎಂಬುದು ದೃಢಪಡುವುದು.

ಅಪಾರಬಲವನ್ನು ಹೊಂದಿದ್ದ ಅವನನ್ನು ಗೆದ್ದ ಕೃಷ್ಣ, ಬ್ರಹ್ಮರುದ್ರಾದಿದೇವತೆಗಳಿಂದ ಪುಷ್ಪ-ವೃಷ್ಟಿಯಿಂದ ಸ್ತುತಿಸಲ್ಪಡುತ್ತಾ, ಬಲರಾಮ, ಮೊದಲಾದವರೊಂದಿಗೆ ಮಥುರೆಯನ್ನು ಪ್ರವೇಶಿಸಿದ ; ದೇವತಾವೃಂದದಿಂದ ವಂದಿತನಾಗಿ ಕ್ರೀಡಿಸಿದ.

## ಪಾಂಡುರಾಜನ ಮರಣ

ಇತ್ತ ಪಾಂಡವರು ಅರಣ್ಯದಲ್ಲಿ ಬೆಳೆಯುತ್ತಿದ್ದಂತೆ, ವರ್ಷಗಳು ಉರುಳುತ್ತಿದ್ದವು. ಆ ದಿನ ಅರ್ಜುನನ ಹದಿನಾಲ್ಕನೆಯ ವರ್ಷದ ಹುಟ್ಟುಹಬ್ಬದ ದಿನವಾಗಿತ್ತು ; ಅವನ ಜನ್ಮನಕ್ಷತ್ರವೂ ಅಂದೇ ಒದಗಿತ್ತು. ಯಜಮಾನಿಯಾದ ಕುಂತಿ, ಆಗಮಿಸಿದ್ದ ಮುನಿಗಳ ಗುಂಪಿನ ಆದರೋ-ಪಚಾರಗಳಲ್ಲಿ ನಿರತಳಾಗಿದ್ದಳು. ಅದೇ ಸಮಯದಲ್ಲಿ ಮಾದ್ರಿಯಿಂದೊಡಗೂಡಿದ ಪಾಂಡುರಾಜ ಗಂಡುಕೋಗಿಲೆಯ ಸ್ವರದಿಂದ ತುಂಬಿದ್ದ ಅರಳಿದ ವನವನ್ನು ಕಂಡ. ಅಲ್ಲಿ ವಸಂತಕಾಲದ ಗಾಳಿಯ ಸ್ಪರ್ಶದಿಂದ ಪುಲಕಗೊಂಡ ಅವನು ಕಾಮಬಾಣಕ್ಕೆ ತುತ್ತಾಗಿ ಮಾದ್ರಿಯೊಂದಿಗೆ ಕ್ರೀಡಿಸತೊಡಗಿದ ; ಹರಿಪಾದಸಂಗಿಯಾದ ಅವನು ಕಿಂದಮ ಋಷಿಯ ಶಾಪದಿಂದಾಗಿ ಕೂಡಲೇ [೧]ಯಮಪಟ್ಟಣವನ್ನು ಸೇರಿದ. ಹಿಂದೊಮ್ಮೆ ಇಂದ್ರನ ದರ್ಶನವನ್ನು ಬಯಸಿ ಬಂದು, ಇಂದ್ರನ ಶಚೀಸಂಗಮಕ್ಕೆ ಅಡ್ಡಿಪಡಿಸಿದ ಪರಿಣಾಮವಾಗಿ ಮಾನುಷಜನ್ಮದಲ್ಲಿ ಹೀಗೆ ರತಿವಿಘ್ನವನ್ನು, ಸಂತಾನಹೀನತೆಯನ್ನು ಹೊಂದಿದ ; ಹಾಗೂ ರತಿಕ್ರೀಡೆಯಲ್ಲಿರುವಾಗಲೇ ಮೃತನಾದ. ತನಗಿಂತ ಉತ್ತಮರಿಗೆ, ವಿಶೇಷವಾಗಿ ದೇವತೆಗಳಿಗೆ ಮಾಡುವ ಅತಿ ಚಿಕ್ಕ ಅಪಚಾರವೂ ಬಹುದೊಡ್ಡ ಪಾತಕವೆನ್ನಿಸುವುದು. ಪತಿಯು ಮೃತನಾದದ್ದನ್ನು ಕಂಡ ಮಾದ್ರಿ ಗಟ್ಟಿಯಾಗಿ ರೋದಿಸತೊಡಗಿದಳು. ಅವಳ ರೋದನಧ್ವನಿಯನ್ನು ಕೇಳಿಸಿಕೊಂಡ ಕುಂತಿ ಹಾಗೂ ಪಾಂಡವರೂ ಅಲ್ಲಿಗೆ ಹೋಗಲು, ಮಾದ್ರಿಯ ಮಾತಿನಂತೆ ಮಕ್ಕಳನ್ನೆಲ್ಲ ಹಿಂದೆಯೇ ನಿಲ್ಲಿಸಿ ಕುಂತಿ ತಾನು ಮಾತ್ರ ಮುಂದೆ ಧಾವಿಸಿದಳು. ಪತಿಯ ಮೃತಶರೀರವನ್ನು ಕಂಡು ಅತ್ಯಂತ ವ್ಯಥಿತಹೃದಯಳಾದ ಕುಂತಿ ಮಾದ್ರಿಯನ್ನು ನಿಂದಿಸುತ್ತ, ಸಹಗಮನ ಮಾಡಲು ನಿಶ್ಚಯಿಸಿದಳು. ಅವಳ ಅಳುವ ಧ್ವನಿಯು ಪಾಂಡವರ ಕಿವಿಗೂ ಬಿದ್ದಿತು. ಅವರೆಲ್ಲ ಬಂದಮೇಲೆ ಅಳುವ ಧ್ವನಿ ಇನ್ನೂ ಹೆಚ್ಚಾಗಿ, ಅದು ಅಲ್ಲಿ ಸೇರಿದ್ದ ಮುನಿಗಳ ಕಿವಿಯನ್ನೂ ತಲುಪಿ, ಕೃಪಾಳುಗಳಾದ ಅವರೂ ಸಹ ಅಲ್ಲಿಗೆ ಧಾವಿಸಿದರು.

## ಮಾದ್ರಿಯ ಸಹಗಮನ

ಋಷಿಗಳ ಮಧ್ಯದಲ್ಲಿ ಸಹಗಮನ ಮಾಡುವ ವಿಷಯದಲ್ಲಿ ಕುಂತಿ–ಮಾದ್ರಿಯರಲ್ಲಿ ಸ್ಪರ್ಧೆ ಏರ್ಪಟ್ಟಿತು. ಋಷಿಗಳು ಕುಂತಿಯನ್ನು ಆ ಕಾರ್ಯದಿಂದ ತಡೆದು, ಬಹುವಾಗಿ ಪ್ರಾರ್ಥಿಸಿ-ಕೊಳ್ಳುತ್ತಿದ್ದ ಮಾದ್ರಿಗೆ ಸಹಗಮನಕ್ಕೆ ಅನುಮತಿಯನ್ನಿತ್ತರು. ಭಾಗವತಧರ್ಮದ ಸೂಕ್ಷ್ಮಗಳನ್ನು

---

೧. ಪಾಂಡುರಾಜ ಹಾಗೆ ಯಮಲೋಕಕ್ಕೆ ತೆರಳಿದ್ದು ಯಮಸಭೆಯ ಸದಸ್ಯನಾಗಿಯೇ ಹೊರತು ನರಕವನ್ನು ಅನುಭವಿಸುವ ಪಾತಕಿಯಾಗಿ ಅಲ್ಲ ಎಂಬ ವಿಶೇಷ ವಿವರವು ಸಭಾಪರ್ವದ ಪ್ರಾರಂಭದಲ್ಲಿ ಬರುವ ನಾರದರ ನಿರೂಪಣೆಯ ಪ್ರಸಂಗದಲ್ಲಿ ನಿರೂಪಿತವಾಗಿದೆ.

ಅರಿತಿದ್ದ ಅವರು ಅವಳಿಗೆ ಹಾಗೆ ಅನುಮತಿ ನೀಡಲು ಅವಳು ಆ ಮೊದಲು ಮಾಡಿದ್ದ ಅಪರಾಧ ಕಾರಣವಾಯಿತು. ಕುಂತಿ ನೀಡಿದ ಮಂತ್ರದಿಂದ ಅಶ್ವಿನೀದೇವತೆಗಳನ್ನು ಪುತ್ರ-ಪ್ರಾಪ್ತಿಗಾಗಿ ಬೇಡಿದ್ದಳಲ್ಲವೆ! ಆ ಅಶ್ವಿನೀದೇವತೆಗಳು ಮಾದ್ರಿಗಿಂತಲೂ ಗುಣದಲ್ಲಿ ಉತ್ತಮ-ರಾಗಿದ್ದರೂ, ಅವಳ ಪತಿ ಪಾಂಡುವಿಗಿಂತ ಉತ್ತಮರಾಗಿರಲಿಲ್ಲ. ಆ ರೀತಿ ಪತಿಗಿಂತ ಉತ್ತಮ-ರಲ್ಲದವರಿಂದ ಪುತ್ರರನ್ನು ಪಡೆಯುವುದು ದೋಷವೇ ಸರಿ. ಅದಕ್ಕೆಂದೇ ಮಾದ್ರಿ ಪಾಂಡುರಾಜನ ಮರಣಕ್ಕೆ ಕಾರಣಳಾಗಬೇಕಾಯಿತು. ಇದನ್ನೆಲ್ಲ ತಿಳಿದಿದ್ದರಿಂದಲೇ ಮುನಿಗಳು ಮಾದ್ರಿಗೆ ಅನುಮತಿಯನ್ನಿತ್ತರು. ಇದರಿಂದಾಗಿ ಗುಣವತಿಯಾಗಿದ್ದರೂ ಮಾದ್ರಿಯು ಲೋಕದಲ್ಲಿ ಹೆಚ್ಚಿನ ಮಾನ್ಯತೆಯನ್ನು ಗಳಿಸಲಿಲ್ಲ.

ಪಾಂಡವರು ಮುನಿಗಳ ಗುಂಪಿನೊಂದಿಗೆ ಕೂಡಿಕೊಂಡು ಪಿತೃಕಾರ್ಯಗಳನ್ನು ವಿಧ್ಯುಕ್ತವಾಗಿ ನಡೆಸಿದರು. ಮಾದ್ರಿಯು ತನ್ನ ಪಾಪಪೂರಿತ ದೇಹವನ್ನು ಅಗ್ನಿಯಲ್ಲಿ ಹೋಮಿಸಿ ಪವಿತ್ರಳಾಗಿ ಪತಿಯ ಲೋಕವನ್ನೇ ಹೊಂದಿದಳು. ಸಾಕ್ಷಾತ್ ವ್ಯಾಸಪುತ್ರನಾದ ಅವರ ಭಕ್ತನೂ ಆದ ಪಾಂಡುವೂ ಸಹ ತನ್ನ ಗುಣಗಳಿಂದಲೂ, ತನ್ನ ಮಕ್ಕಳ ಹಿರಿಮೆಯಿಂದಲೂ, ಮಹನೀಯರು ಗೌರವಿಸುವಂತಹ ಶ್ರೇಷ್ಠಲೋಕಗಳನ್ನು ಪಡೆದ. ಹರಿಪಾದದಲ್ಲಿ ನೆಟ್ಟ ಮನಸ್ಸಿನ ಅವನ ವಿಷಯದಲ್ಲಿ ಇದೇನೂ ಅಚ್ಚರಿಯ ಸಂಗತಿಯಲ್ಲ !

## ಪಾಂಡವರ ಪುರಪ್ರವೇಶ

ಪಾಂಡವರು ಕುಂತಿಯಿಂದ ಕೂಡಿಕೊಂಡು, ಮುನಿಗಳ ಸಮೇತರಾಗಿ, ನಾರಾಯಣಾ-ಶ್ರಮದಿಂದ ಹಸ್ತಿನಾವತಿಗೆ ಹೊರಟರು. ಧೃತರಾಷ್ಟ್ರನ ಮುಂದೆ ಮುನಿಗಳೆಲ್ಲ ನಡೆದ ವಿಷಯವನ್ನು ವಿವರಿಸಿ, ಪಾಂಡುರಾಜ ಮೃತನಾದುದನ್ನು ತಿಳಿಸಿದರು ; ಆದರೆ ಧೃತರಾಷ್ಟ್ರ ಮೌನವಹಿಸಿದ. ಭೀಷ್ಮ ಮತ್ತು ವಿದುರರು ಮಾತ್ರ ಅವರು ಪಾಂಡುವಿನ ಮಕ್ಕಳೆಂದು ತಿಳಿದು ಬಹಳವಾಗಿ ಸಂತೋಷಪಟ್ಟರು. ಸುಯೋಧನ ಮೊದಲಾದ ಪಾಪಿಷ್ಠರೆಲ್ಲ ಶಕುನಿಯೊಂದಿಗೆ ಸೇರಿಕೊಂಡು ಹೇಳಿದರು – ''ಪಾಂಡು ಮೊದಲೇ ಮೃತನಾಗಿರುವಾಗ, ಅವನಿಗೆ ಮಕ್ಕಳೆಲ್ಲಿ ಬಂದರು? ತಂದೆಯ ಮರಣದ ನಂತರ, ತಾಯಿಯಿಂದಲೇ ಜನಿಸಿದ್ದರೂ, ಅದು ತಮ್ಮ ಜನರಿಂದ ಸಮ್ಮತಿಪಡೆದ ಅಧಿಕೃತ ನಿಯೋಗಕ್ರಮವಾಗದಿದ್ದಲ್ಲಿ, ಅಂತಹ ಪುತ್ರರು ರಾಜ್ಯಾಧಿ-ಕಾರಿಗಳೆನಿಸುವುದಿಲ್ಲ.'' ಅವರ ಮಾತು ಮುಗಿಯುತ್ತಿದ್ದಂತೆಯೇ ಕೌರವರ ಗುಂಪನ್ನು ಕುರಿತು ಅಶರೀರವಾಣಿ ಎಚ್ಚರಿಸಿತು – ''ಧರ್ಮಿಷ್ಠರಾದ ಇವರೆಲ್ಲ ಪಾಂಡು ಇನ್ನೂ ಜೀವಿಸಿರುವಾಗಲೇ ಅವನ ಆದೇಶದಿಂದ ಕ್ರಮವಾಗಿ ಯಮಧರ್ಮ, ವಾಯು, ಇಂದ್ರ ಮತ್ತು ಅಶ್ವಿನಿದೇವತೆ-ಗಳಿಂದ ಜನಿಸಿದವರು. ನಾರಾಯಣನಿಂದ ಸದಾ ರಕ್ಷಿತರಾಗಿರುವ ಇವರನ್ನು ನೀವೆಂದೂ ತ್ಯಜಿಸಲಾಗದು.'' ಅಶರೀರವಾಣಿಯ ಮಾತನ್ನು ಸಹ ಶಂಕಿಸುವ ಸಾಹಸಕ್ಕೆ ಅವರು ಕೈಹಾಕುವ ಯತ್ನದಲ್ಲಿದ್ದಾಗ, ಅಲ್ಲಿ ಕೂಡಲೇ ಕಾಣಿಸಿಕೊಂಡ ವೇದವ್ಯಾಸರು, ಪಾಂಡುಪುತ್ರರನ್ನೆಲ್ಲ ಕರೆದುಕೊಂಡು ಪಾಂಡುವಿನ ಮನೆಯನ್ನು ಪ್ರವೇಶಿಸಿದರು. ಅವರು ವೇದವ್ಯಾಸರಿಂದ

ಪರಿಗೃಹೀತರಾದದ್ದನ್ನು ಕಂಡ ಕೂಡಲೇ ಭೀಷ್ಮ ಮೊದಲಾದವರೂ, ಧೃತರಾಷ್ಟ್ರನೇ ಮೊದಲಾದ ಇತರರೂ, ಅವರನ್ನೂ ಆದರಿಸಿ, ಕುಂತಿಯೊಂದಿಗೆ ಪರಿಗ್ರಹಿಸಿದರು. ಅದನ್ನು ಕಂಡ ದುರ್ಯೋಧನಾದಿಗಳ ಮನಸ್ಸು ಖಿನ್ನವಾಯಿತು ; ಹಾಗೆ ದುಃಖಿಸಿದವರಲ್ಲಿ ಶಕುನಿಯೂ ಒಬ್ಬನಾಗಿದ್ದ.

## ಬಾಲಭೀಮನ ಮಹಾಪರಾಕ್ರಮ

ಕೌರವರೆಲ್ಲರಿಗೂ, ಪಾಂಡುಪುತ್ರರೊಂದಿಗೆ ಕೃಪಾಚಾರ್ಯರಿಂದ ಅಸ್ತ್ರವಿದ್ಯೆಯ ಪಾಠ-ವಾಯಿತು. ಅವರೆಲ್ಲ ಮಹಾಸ್ತ್ರಗಳನ್ನು ಅವರಿಂದ ಪಡೆದರು. ಉಳಿದೆಲ್ಲ ರಾಜರ ಮಕ್ಕಳೂ ಅವರೊಂದಿಗೆ ಸೇರಿಕೊಂಡಿದ್ದರು. ಅವರ ಬಾಲಲೀಲೆಗಳಲ್ಲಿ ಭೀಮನಿಂದ ಉಳಿದವರೆಲ್ಲ ಸೋಲನ್ನೂ ಕಂಡರು. ಮಾಗಿದ ಹಣ್ಣುಗಳನ್ನು ತರಲೆಂದು ಮರವನ್ನೇರಿ ಕುಳಿತಿದ್ದ ರಾಜಪುತ್ರರನ್ನೆಲ್ಲ ಕಂಡ ಭೀಮಸೇನ, ಆ ದೊಡ್ಡವೃಕ್ಷದ ಬುಡಕ್ಕೆ ಕಾಲಿನಿಂದ ಒದೆಯುತ್ತಲೇ, ಅವರೆಲ್ಲ ವೃಕ್ಷದಿಂದ ಹಣ್ಣುಗಳೊಂದಿಗೆ ತಪತಪನೆ ಕೆಳಗುರುಳಿದರು. ಅವರ ಮಧ್ಯೆ ಬಿದ್ದ ಹಣ್ಣುಗಳನ್ನು ಭೀಮಸೇನ ತಿಂದುಹಾಕಿದ. ಸಾಮೂಹಿಕಯುದ್ಧ, ದ್ವಂದ್ವಯುದ್ಧ, ಓಡುವುದು, ಹಾರುವುದು, ಈಜುವುದು ಮೊದಲಾದ ವಿವಿಧ ಕ್ರೀಡೆಗಳಲ್ಲಿ ಭೀಮಸೇನನೊಬ್ಬನೇ ಅವರೆಲ್ಲರನ್ನು ಗೆಲ್ಲುತ್ತಿದ್ದ. ಅದಕ್ಕೆಲ್ಲ ಸದಾ ಅವನಲ್ಲಿದ್ದ ವಿಷ್ಣುವಿನ ಪರಮಾನುಗ್ರಹವೇ ಕಾರಣವಾಗಿತ್ತು. ಒಮ್ಮೆ ಎಲ್ಲರನ್ನು ಹಿಡಿದು ಗಂಗೆಯ ನೀರಿನ ಮಧ್ಯೆ ಮುಳುಗಿಸುತ್ತ, ಅವರೆಲ್ಲ ಬಳಲಿ ಒರಲಿದಾಗ ನಗುತ್ತಿದ್ದ. ಮತ್ತೊಮ್ಮೆ ಎಲ್ಲರನ್ನು ಹೊತ್ತು ತುಂಬಿ ಹರಿಯುತ್ತಿದ್ದ ಗಂಗೆಯನ್ನು ದಾಟಿ ಆಚೆಯ ದಡ ಸೇರುತ್ತಿದ್ದ. ಹೀಗೆ ಆ ಭೀಮನು ಪೌರುಷದ ಸಾರವೇ ರೂಪತಾಳಿ ಬಂದಂತೆ ಕಂಗೊಳಿಸುತ್ತಿದ್ದ.

## ಕಾಲಕೂಟವನ್ನು ಜೀರ್ಣಿಸಿಕೊಂಡ ಭೀಮ

ಹರಿ ಹಾಗೂ ವಾಯು ಇಬ್ಬರಲ್ಲಿಯೂ ದ್ವೇಷ ಮಾಡುವವರೆಗೂ ತಮಸ್ಸಿನಲ್ಲಿ ಪ್ರವೇಶವಾಗುವಂತಿಲ್ಲ. ಅದಕ್ಕೆಂದೇ ಆ ರೀತಿಯಾಗಿ ಅಯೋಗ್ಯರಿಗೆ ತಮ್ಮಲ್ಲಿ ದ್ವೇಷ ಹುಟ್ಟಿಸು-ವಂತಹ ಕಾರ್ಯಗಳನ್ನು ಕೃಷ್ಣ-ಭೀಮರು ಮಾಡಿದರು. ತಮಗೆ ಎಂದೂ ಎಟುಕದ ಅನೇಕ ಕಾರ್ಯಗಳನ್ನು ಭೀಮ ನಿತ್ಯವೂ ಮಾಡುತ್ತಿದ್ದುದನ್ನು ಕಂಡ ಧೃತರಾಷ್ಟ್ರನ ಮಕ್ಕಳಿಗೆ ಭೀಮನ ಬಗ್ಗೆ ದ್ವೇಷ ಹೆಚ್ಚುತ್ತಾ ಹೋಯಿತು. ಅವರೆಲ್ಲ ಸೇರಿ ಗುಪ್ತವಾಗಿ ಸಭೆ ಸೇರಿ ಆಲೋಚನೆ ನಡೆಸಿದರು. ಅಲ್ಲಿದ್ದ ಅನೇಕ ರಾಜರ ಮಕ್ಕಳಲ್ಲಿ ದೇವಾಂಶರಾದವರೆಲ್ಲ ಭೀಮನ ಕೃತಿಗಳಿಂದ ಆನಂದಭರಿತರಾದರು. ವಿರೋಧಿಗಳೆಲ್ಲ ದೈತ್ಯರೇ ಆಗಿದ್ದು , ಅವರು ಮಾತ್ರವೇ ಆ ಸಭೆಯಲ್ಲಿ ಭಾಗವಹಿಸಿ ಭೀಮಸೇನನನ್ನು ಕೊಲ್ಲುವ ನಿರ್ಣಯವನ್ನು ಒಮ್ಮತದಿಂದ ಅಂಗೀಕರಿಸಿದರು – "ಈ ಭೀಮ ಪತನಾದಲ್ಲಿ, ಉಳಿದೆಲ್ಲ ಪಾಂಡವರು ಸತ್ತಂತೆಯೇ ಸರಿ. ಆದರೆ ಇವನನ್ನು ಬಲದಿಂದ ಎದುರಿಸುವುದು ಆಗದ ಮಾತು. ವಂಚನೆಯಿಂದ ಇವನನ್ನು ಕೊಂದಲ್ಲಿ, ಬಲದಿಂದ ಅರ್ಜುನನನ್ನು ಸಂಹರಿಸಬಹುದು. ಉಳಿದವರನ್ನೆಲ್ಲ ಸೆರೆಯಲ್ಲಿರಿಸಿದಲ್ಲಿ, ದುರ್ಯೋಧನನ

ರಾಜ್ಯಭಾರಕ್ಕೆ ಯಾವ ಕಂಟಕವೂ ಉಳಿಯದು ; ಇವರಿಬ್ಬರೂ ಹತರಾದಲ್ಲಿ ಉಳಿದ ಪಾಂಡವರು ದುರ್ಯೋಧನನ ದಾಸರಾಗುವರು'' - ಹೀಗೆ ಯೋಚಿಸಿ ಕ್ಷೀರಸಮುದ್ರ-ಮಥನಕಾಲದಲ್ಲಿ ಉದ್ಭವಿಸಿದ ಕಾಲಕೂಟವಿಷವನ್ನು ಶುಕ್ರಾಚಾರ್ಯರು ತಪಸ್ಸಿನಿಂದ ಪಡೆದುಕೊಂಡಿದ್ದನ್ನು ಅರಿತಿದ್ದ ಶಕುನಿ ಅವರ ಬಳಿ ಹೋಗಿ ಉಪಾಯದಿಂದ ಅವರ ಮನಸ್ಸನ್ನು ಒಲಿಸಿ, ತೆಗೆದುಕೊಂಡು ಬಂದ.

ಧೃತರಾಷ್ಟ್ರನ ಮಕ್ಕಳೆಲ್ಲ ಒಟ್ಟಾಗಿ ಆಲೋಚಿಸಿ, ಅಡಿಗೆಯವನ ಮೂಲಕ ಸಕಲಭಕ್ಷ್ಯ-ಭೋಜ್ಯಗಳಲ್ಲಿ ಬೆರೆಸಿ ಆ ವಿಷವನ್ನು ಭೀಮನಿಗೆ ಇತ್ತರು. ಇದನ್ನೆಲ್ಲ ಅರಿತಿದ್ದ ಯುಯುತ್ಸು ಭೀಮನಿಗೆ ಸಕಾಲದಲ್ಲಿಯೇ ಮಾಹಿತಿ ನೀಡಿದ್ದರೂ, ಲೆಕ್ಕಿಸದ ಭೀಮ ಆ ವಿಷಪೂರಿತ ಭಕ್ಷ್ಯಗಳನ್ನೆಲ್ಲ ತಿಂದು, ವಿಷ್ಣುವಿನ ಅನುಗ್ರಹದಿಂದಾಗಿ ಸುಖವಾಗಿ ಜೀರ್ಣಿಸಿಕೊಂಡ.[೧] ಕಾಲ-ಕೂಟವನ್ನು ಜೀರ್ಣಿಸಿಕೊಂಡ ಭೀಮನ ಅಸಾಧಾರಣ ಸಾಮರ್ಥ್ಯ ದುರ್ಯೋಧನಾದಿ-ಗಳನ್ನು ದಂಗುಬಡಿಸಿತು. ಗಂಗಾತೀರದಲ್ಲಿ ಉನ್ನತಭವನವನ್ನು ನಿರ್ಮಿಸುವುದರ ಮೂಲಕ ಭೀಮಸೇನನನ್ನು ಕೊಲ್ಲುವ ಮತ್ತೊಂದು ಯೋಜನೆಯತ್ತ ಅವರ ಮನಸ್ಸು ಹರಿಯಿತು. ಆ ಬಗ್ಗೆಯೂ ಯುಯುತ್ಸು ಎಚ್ಚರಿಕೆಯನ್ನಿತ್ತರೂ ಭೀಮ ಲೆಕ್ಕಿಸದೆ ತಾನೇ ಉಪ್ಪರಿಗೆಯ ತುದಿಯಲ್ಲಿ ಆರಾಮವಾಗಿ ಮಲಗಿ ನಿದ್ರಿಸಿದ. ಹಾಗೆ ತಿಳಿದಿದ್ದರೂ ಭೀಮ ಇಷ್ಟೆಲ್ಲ ಮಾಡುತ್ತಿದ್ದುದು, ಒಂದು ಕಡೆ ಅವನ ಅಪಾರ ಸಾಮರ್ಥ್ಯಕ್ಕೆ ದ್ಯೋತಕವಾದರೆ ಇನ್ನೊಂದು ಕಡೆ ದುರ್ಯೋಧನಾದಿಗಳ ಕೆಟ್ಟಮನೋಭಾವಕ್ಕೆ ಸೂಚಕವಾಗಿತ್ತು. ಭೀಮಸೇನ ನಿದ್ರಿಸಿ-ದುದನ್ನು ಕಂಡೊಡನೆ ಆ ಮೊದಲೇ ಸಿದ್ಧಪಡಿಸಿಟ್ಟುಕೊಂಡಿದ್ದ ಉಕ್ಕಿನ ಸರಪಳಿಗಳಿಂದ ಅವನನ್ನು ಬಿಗಿಯಾಗಿ ಬಂಧಿಸಿ, ಗಂಗೆಯಲ್ಲಿ ಉರುಳಿಸಿಬಿಟ್ಟರು. ಕೋಟಿಯೋಜನ ಆಳದ ಆ ಪ್ರಮಾಣಕೋಟಿ ಎಂಬ ಮಡುವಿನಲ್ಲಿ ಮುಳುಗಿದ ಭೀಮಸೇನ, ಸ್ವಲ್ಪ ಮೈಉಬ್ಬಿಸುವುದರಿಂದ ಮಾತ್ರವೇ ಆ ಎಲ್ಲ ಕಟ್ಟುಗಳನ್ನು ಕತ್ತರಿಸಿಹಾಕಿದ. ಅಲ್ಲಿಂದ ಲೀಲಾಜಾಲವಾಗಿ ಮೇಲೆದ್ದು ಬಂದು ಕಾಣಿಸಿಕೊಂಡ ಅವನಿಂದ ಸಜ್ಜನವೃಂದವೆಲ್ಲ ಹರ್ಷಪಟ್ಟಿತು.

## ಸರ್ಪಗಳನ್ನು ಸದೆಬಡೆದ ಭೀಮ

ಭೀಮನನ್ನು ಮತ್ತೆ ಕಂಡ ಕೌರವರ ಮನಸ್ಸು ಕಳವಳಗೊಂಡಿತು. ಪುನಃ ಸಭೆಸೇರಿದ ಅವರು ಅಷ್ಟಮಹಾಸರ್ಪಗಳನ್ನು ಶುಕ್ರಾಚಾರ್ಯರ ಮಂತ್ರಪ್ರಭಾವದಿಂದ ಅಲ್ಲಿಗೆ ಕರೆಸಿಕೊಂಡು, ತಮ್ಮ ಸೂತನ ವಶಕ್ಕೆ ಕೊಟ್ಟರು. ಆ ಸೂತ ಸುಖವಾಗಿ ಮಲಗಿ ನಿದ್ರಿಸುತ್ತಿದ್ದ ಭೀಮಸೇನನ ಎದೆಯ ಮೇಲೆ ಅವುಗಳನ್ನು ಚೆಲ್ಲಿದ. ಆವರೆಗೆ ಬಂಧನದಲ್ಲಿದ್ದ ಉರಿದೆದ್ದ ಸರ್ಪಗಳು ಸಿಟ್ಟಿನಿಂದ ಭೀಮನನ್ನು ಒಮ್ಮೆಯೇ ಕಚ್ಚಿದವು. ಆದರೆ ಅವುಗಳು ತಮ್ಮೆಲ್ಲ

೧. ಹೀಗೆ ಭೀಮಸೇನನು ಕಾಲಕೂಟವನ್ನು ಸಂಪೂರ್ಣವಾಗಿ ಜೀರ್ಣಿಸಿಕೊಂಡ ಪ್ರಸಂಗವು ವಾಯುದೇವರು ಮೂಲರೂಪದಲ್ಲಿ ಕಾಲಕೂಟವನ್ನು ಕುಡಿದು ನಿರ್ವಿಕಾರವಾಗಿ ಜೀರ್ಣಿಸಿಕೊಂಡ ಪ್ರಸಂಗಕ್ಕೆ ಅಪೂರ್ವ ಪುರಾವೆ ಎನ್ನಿಸುವುದು.

ಹಲ್ಲುಗ್ಗಳನ್ನು ಕಳೆದುಕೊಂಡಿದ್ದು ಮಾತ್ರವೇ ಅದಕ್ಕೆ ದೊರೆತ ಫಲವಾಯಿತು. ಎಚ್ಚರಗೊಂಡ ಭೀಮ ಎಂಟು ಮಹಾಸರ್ಪಗಳನ್ನು ಅತಿದೂರ ಬೀಳುವಂತೆ ತಳ್ಳಿದ. ಅವುಗಳ ವಂಶದ ಇತರ ಅನೇಕ ಸರ್ಪಗಳನ್ನು ಇರುವೆಗಳನ್ನೆಂಬಂತೆ ಹೊಸಕಿಹಾಕಿದ. ಖಡ್ಗ ಹಿಡಿದು ನುಗ್ಗಿದ ಸೂತನನ್ನು ಅಂಗೈ- ಪೆಟ್ಟಿನಿಂದ ಯಮಪುರಿಗೆ ಅಟ್ಟಿದ. ಇಷ್ಟೆಲ್ಲ ಮಾಡಿದಾಗಲೂ ಭೀಮ ಹಾಸಿಗೆ ಬಿಟ್ಟು ಎದ್ದಿರಲೇ ಇಲ್ಲ. ಹಾಗೆಯೇ ಮತ್ತೆ ಮುಂಚಿನಂತೆಯೇ ನಿದ್ರಿಸಿದ.

## ಪ್ರಹ್ಲಾದನನ್ನು ಮೀರಿಸಿದ ಭೀಮ

ಭೀಮನ ಆ ರೀತಿಯ ಅದ್ಭುತ ಸಹಜ ಸಾಮರ್ಥ್ಯ ಕೌರವರಿಗೆ ನಡುಕ ಹುಟ್ಟಿಸಿತು. ಯಾವ ಸರ್ಪಗಳ ಕೇವಲ ಉಸಿರಿನಿಂದಲೇ ಲೋಕಗಳು ಬೂದಿಯಾಗಬಲ್ಲವೋ, ಅಂತಹ ಸರ್ಪಗಳ ಕಚ್ಚುವಿಕೆಯನ್ನು ಸ್ವಲ್ಪ ಕೂಡ ಲೆಕ್ಕಿಸದಾದ ಭೀಮನ ಬಲಕ್ಕೆ ಸಾಟಿಯನ್ನೇ ಅವರು ಕಾಣ-ದಾದರು. ಅಂತಹ ಬಲವನ್ನು ಕಾಣುವುದಿರಲಿ, ಕೇಳಿದ ನೆನಪೂ ಅವರಿಗೆ ಉಂಟಾಗಲಿಲ್ಲ. ಪ್ರಹ್ಲಾದ ಅಂತಹ ಬಾಧೆಗಳನ್ನು ಗೆದ್ದಿದ್ದನಾದರೂ, ಅದು ಅವನು ತನ್ನ ರಕ್ಷಣೆಗೋಸ್ಕರ ಹರಿ-ಸ್ತೋತ್ರ ಮಾಡಿ ಪಡೆದಿದ್ದ ಶಕ್ತಿಯಾಗಿತ್ತು. ಆದರೆ ಭೀಮಸೇನನ ಬಲ ನೈಸರ್ಗಿಕವಾದುದು, ಅವನಲ್ಲಿರುವ ಸಹಜ ಹರಿಭಕ್ತಿಯಂತೆ. ಅವನಲ್ಲಿದ್ದ ಹರಿಯ ಅನುಗ್ರಹವು ಸಹ ಸ್ವಾಭಾವಿಕವೇ ಆಗಿದ್ದಿತು.

ಆದ್ದರಿಂದ ಇವನನ್ನು ಕೃಷ್ಣನೊಂದಿಗೆ ಸೇರಿಸಿ ಒಟ್ಟಾಗಿಯೇ ನಾಶಮಾಡಬೇಕು ಎಂಬ ಮತ್ತೊಂದು ಕ್ರೂರನಿರ್ಣಯಕ್ಕೆ ಬಂದು, ಅತಿಪಾಪಿಗಳಾದ ಅವರೆಲ್ಲ ಕೃಷ್ಣನಿಗೂ ದ್ರೋಹ-ವೆಸಗುವ ಕಾರ್ಯಕ್ಕೆ ಕೈಹಾಕಿದರು. ಅವರಿಂದ ಕಳುಹಿಸಲ್ಪಟ್ಟ ಅನೇಕ ರಾಜರು ಜರಾಸಂಧನ ಪಕ್ಷವನ್ನು ಸೇರಿ, ಒಟ್ಟು ಹದಿನೆಂಟು ಬಾರಿ ಶ್ರೀಕೃಷ್ಣನನ್ನು ಎದುರಿಸಿ ಹೋದರು. ಪ್ರತಿಸಲವೂ ಶ್ರೀಕೃಷ್ಣ ಅವರ ಸೊಕ್ಕಡಗಿಸಿ ಹಿಂದಕ್ಕಟ್ಟುತ್ತಿದ್ದ. ಎಂದಿನಂತೆ ರಥ, ಕುದುರೆ, ಸಾರಥಿ, ಆನೆಗಳನ್ನು ಕಳೆದುಕೊಂಡು, ಶಸ್ತ್ರಗಳಿಂದ ದೇಹಕ್ಕೆ ಗಾಯಮಾಡಿಕೊಂಡು, ಶಸ್ತ್ರಾಸ್ತ್ರಗಳನ್ನೂ, ಧ್ವಜಕವಚ-ಗಳನ್ನೂ ಕಳೆದುಕೊಂಡು, ಬಟ್ಟೆ ಕಳಚಿ, ಕಿರೀಟ ಉರುಳಿ ಅವರೆಲ್ಲ ರಕ್ತಕಾರುತ್ತ ಹಿಂದಿರುಗು-ತ್ತಿದ್ದರು. ಅದೇ ರೀತಿ ಜರಾಸಂಧನೂ ಕೂಡ ಪ್ರತಿಸಲವೂ ಶೋಚನೀಯಸ್ಥಿತಿಗೆ ಸಿಕ್ಕಿ ಪರಿತಪಿಸುತ್ತ ತನ್ನ ಪಟ್ಟಣಕ್ಕೆ ಮರಳುತ್ತಿದ್ದ. ಕೃಷ್ಣ ಪ್ರತಿಬಾರಿಯೂ ಕೈಗೆ ಸಿಕ್ಕ ಅವನನ್ನು ಬಿಟ್ಟು- ''ಬದುಕಿಕೋ'' ಎಂದು ಕಳುಹಿಸುತ್ತಿದ್ದ. ಉಸಿರುಮಾತ್ರವೇ ಆಡುತ್ತಿದ್ದ ಜರಾಸಂಧ ಅಲ್ಲಿಂದ ಕಾಲ್ತೆಗೆಯುತ್ತಿದ್ದ. ಹೀಗೆ ಪ್ರತಿಸಲವೂ ಜರಾಸಂಧಾದಿಗಳನ್ನು ಸೋಲಿಸಿ ಅಚಿಂತ್ಯಬಲನಾದ ಶ್ರೀಕೃಷ್ಣನು ಬಲರಾಮನೊಂದಿಗೆ ಮಥುರೆಯಲ್ಲಿ ಆನಂದದಿಂದಿದ್ದ.

## ಭೀಮಸೇನನ ದಿಗ್ವಿಜಯ

ಭೀಮನನ್ನು ಕೊಲ್ಲುವ ಮತ್ತಷ್ಟು ವಿಫಲಕಾರ್ಯಗಳನ್ನು ಮಾಡಿದ ಕೌರವರು ಅವನನ್ನು ಎದುರಿಸಲು ಯಾವರೀತಿಯಲ್ಲೂ ಸಮರ್ಥರಾಗಲಿಲ್ಲ. ಈ ವೇಳೆಗೆ ಭೀಮ ದಿಗ್ವಿಜಯಕ್ಕೆ

ಹೊರಟು ನಿಂತ. ಮೊದಲಿಗೆ ಪೂರ್ವದಿಕ್ಕನ್ನೂ, ಅನಂತರ ಕ್ರಮವಾಗಿ ದಕ್ಷಿಣ, ಪಶ್ಚಿಮ ಹಾಗೂ ಉತ್ತರದಿಕ್ಕುಗಳನ್ನೂ ಗೆದ್ದ. ಶಿಶುಪಾಲನೆಂಬ ಹೆಸರಿನಿಂದ ದಮಘೋಷನ ಮಗನಾಗಿ ಜನಿಸಿದ್ದ ರಾವಣನನ್ನೂ, ದಂತವಕ್ರ ಎಂಬ ಹೆಸರಿನಿಂದ ಕರೂಶನೃಪನ ಮಗನಾಗಿ ಜನಿಸಿದ್ದ ಕುಂಭ-ಕರ್ಣನನ್ನೂ ಭೀಮನು ಜಯಿಸಿದ. ಅನಂತರ ಪೌಂಡ್ರಕವಾಸುದೇವನನ್ನು, ಭೀಷ್ಮಕನ ಮಗ ರುಗ್ಮಿಯನ್ನು ಜಯಿಸಿದ. ಇಲ್ವಲ ಎಂಬ ನರಭಕ್ಷಕ ದೈತ್ಯನೇ ರುಗ್ಮಿ ಎಂಬ ಹೆಸರಿನಿಂದ ಹುಟ್ಟಿದ್ದ. ಶುಚಿ ಎಂಬ ವಹ್ನಿಪುತ್ರನ ಅಂಶವೂ ಅವನಲ್ಲಿತ್ತು. ಅವನ ತಂದೆ ಭೀಷ್ಮಕನು ಮಿತ್ರ ಎಂಬ ಸೂರ್ಯನ ಅಂಶದಿಂದ ಹುಟ್ಟಿದ್ದ. ಅವನಲ್ಲಿ ರಾಹುವಿನ ಅಂಶವಿತ್ತು. ಕ್ರಥಕೈಶಿಕರೆಂಬ ಅವನ ಇಬ್ಬರು ತಮ್ಮಂದಿರು ಪ್ರಧಾನಾಗ್ನಿಯ ಪುತ್ರರಾದ ಪವಮಾನ ಹಾಗೂ ಶುಂಧ್ಯು ಎಂಬುವರ ಅಂಶ. ತನ್ನ ಬಂಧುವಿನ ಯೋಗ್ಯತೆಯನ್ನು ಪರೀಕ್ಷೆ ಮಾಡಬಯಸಿದ ಶಲ್ಯನೂ ಸಹ ಭೀಮನೊಂದಿಗೆ ಹೋರಾಡಿದ. ಲೀಲಾಜಾಲವಾಗಿಯೇ ಭೀಮ ಅವನನ್ನೂ ಜಯಿಸಿದ. ಏಕಲವ್ಯ ಮೊದಲಾದ ಎಲ್ಲಾ ರಾಜರೂ ಇದೇ ರೀತಿ ಭೀಮನಿಂದ ಸೋತುಹೋದರು. ಭೀಮನ ಬಾಹುಬಲದಿಂದ ರಕ್ಷಿತನಾದ ಅರ್ಜುನ ಉಳಿದೆಲ್ಲ ರಾಜರನ್ನು ಸುಲಭವಾಗಿ ಗೆದ್ದ. ಸಾಲ್ವ ಮತ್ತು ಹಂಸಡಿಬಿಕರನ್ನು ಗೆದ್ದ ಭೀಮಸೇನ ಅರ್ಜುನನೊಂದಿಗೆ ಹಸ್ತಿನಾವತಿಗೆ ಮರಳಿದ. ಅವರೀರ್ವರ ಬಾಹುಬಲಕ್ಕೆ ಧರ್ಮರಾಜ, ಕುಂತಿ, ನಕುಲ-ಸಹದೇವರು,ವಿದುರ ಮತ್ತು ಭೀಷ್ಮರು ಬಹಳವಾಗಿ ಸಂತೋಷಿಸಿದರು. ಉಳಿದ ಸಜ್ಜನ ಸಮೂಹವೂ, ಪೌರರೂ ಹಾಗೂ ಎಲ್ಲ ಯಾದವರೂ ಆನಂದದಿಂದ ನಲಿದರು.

## ರಾಯಭಾರಿಯಾಗಿ ಅಕ್ರೂರ

ಕೃಷ್ಣನು ದುರ್ಯೋಧನಾದಿಗಳ ಕುಹಕವನ್ನು, ಧೃತರಾಷ್ಟ್ರನು ಪುತ್ರರ ವಶವರ್ತಿಯಾಗಿರು-ವುದನ್ನು ಗಮನಿಸಿ, ಅಕ್ರೂರನ ಬಳಿ ಬಂದು, ಧೃತರಾಷ್ಟ್ರನಿಗೆ ವಿವೇಕ ಹೇಳಲೆಂದು ಅವನನ್ನು ಹಸ್ತಿನಾಪುರಕ್ಕೆ ಕಳುಹಿಸಿದ. ಅಲ್ಲಿಗೆ ತೆರಳಿದ ಅಕ್ರೂರನಿಗೆ ಧೃತರಾಷ್ಟ್ರನೂ, ಭೀಷ್ಮರೂ ಹಾಗೂ ಎಲ್ಲ ಕೌರವರೂ ವೈಭವದ ಸ್ವಾಗತ ನೀಡಿದರು. ಪಾಂಡವರ ಬಗ್ಗೆ ಕೌರವರ ಮನೋಭಾವವನ್ನು ಅರಿಯಲೆಂದು ಅಕ್ರೂರ ಕೆಲವು ತಿಂಗಳುಗಳ ಕಾಲ ಅಲ್ಲಿಯೇ ವಾಸ ಮಾಡಿದ. ತನ್ನ ಅನುಭವದಿಂದಲೂ, ವಿದುರ ಹಾಗೂ ಕುಂತಿಯರ ಮಾತಿನಿಂದಲೂ, ಪಾಂಡವರ ವಿಷಯ-ದಲ್ಲಿ ಮಿತ್ರರು, ಶತ್ರುಗಳು ಹಾಗೂ ತಟಸ್ಥರು ಯಾರೆಂಬುದನ್ನು ಅರ್ಥಮಾಡಿಕೊಂಡ ಅಕ್ರೂರ, ಧೃತರಾಷ್ಟ್ರನು ಮಕ್ಕಳ ಕೈಗೊಂಬೆ ಎಂಬುದನ್ನು ಮನಗಂಡು, ಅವನನ್ನು ಕುರಿತು ಭೇದೋ-ಪಾಯಸಹಿತವಾದ ಸಾಮಮಾರ್ಗದಿಂದ ಹಿತವನ್ನು ಉಪದೇಶಿಸಿದ.

## ಕೃಷ್ಣನ ಸಂದೇಶ

''ನೀನು ನಿನ್ನ ಮಕ್ಕಳಲ್ಲೂ ಪಾಂಡವರಲ್ಲೂ ಪಕ್ಷಪಾತವಿಲ್ಲದೆ ನಡೆದುಕೊಂಡರೆ ಕೀರ್ತಿಯನ್ನು, ಧರ್ಮಾರ್ಥಕಾಮಗಳನ್ನು ಹೊಂದುವಿ ; ದೇವತೆಗಳೂ ಹಾಗೂ ಯಾದವರ

ಸಮೂಹದೊಂದಿಗೆ ವಾಸುದೇವನೂ ನಿನ್ನ ವಿಷಯದಲ್ಲಿ ಸುಪ್ರೀತನಾಗುವನು ; ಕೊನೆಗೆ ಮುಕ್ತಿಯನ್ನು ಸಹ ಅವನ ಅನುಗ್ರಹದಿಂದ ಪಡೆಯುವಿ ; ಹಾಗಿಲ್ಲದಿದ್ದಲ್ಲಿ ಅದಕ್ಕೆ ವಿರುದ್ಧವಾದ ಗತಿಯು ನಿನ್ನದಾಗುವುದು ಎಂಬುದಾಗಿ ಕೃಷ್ಣ ಹೇಳಿ ಕಳುಹಿಸಿದ್ದಾನೆ.'' ಎಲ್ಲ ಕೌರವರ ಮಧ್ಯದಲ್ಲಿ ಹೇಳಿದ ಈ ಮಾತಿಗೆ, ಮಕ್ಕಳ ವಶನಾಗಿದ್ದ ಧೃತರಾಷ್ಟ್ರ ಉತ್ತರಿಸಿದ – ''ಎಲ್ಲವೂ ಆ ಭಗವಂತನ ವಶವಷ್ಟೆ ! ನಾವ್ಯಾರೂ ಸ್ವತಂತ್ರರಲ್ಲ. ಭೂಭಾರವಿಳುಹಲೆಂದೇ ಅವನಿಲ್ಲಿ ಅವತರಿಸಿರುವನಲ್ಲವೇ !'' ಅವನ ಮಾತಿನ ಹಿಂದಡಗಿದ್ದ ಕೆಟ್ಟ ಮನಸ್ಸನ್ನು ಅರ್ಥಮಾಡಿಕೊಂಡ ಅಕ್ರೂರ ''ನಿನ್ನ ಮಕ್ಕಳು ಇಲ್ಲವಾದರೆಂದೇ ತಿಳಿ'' ಎಂದು ನುಡಿದ; ಭೀಮ, ಅರ್ಜುನ ಹಾಗೂ ಸಹದೇವರೊಂದಿಗೆ ಮಥುರೆಗೆ ಹಿಂದಿರುಗಿದ. ತಮಗೆ ಉಚಿತವಾದ ಭಾಗವತ ಜ್ಞಾನವನ್ನು ಭೀಮಾರ್ಜುನರು ಕೃಷ್ಣನಿಂದ ಪಡೆಯುತ್ತ, ಸರ್ವಯಾದವರಿಂದ ಆದರಿಸಲ್ಪಟ್ಟವರಾಗಿ ಅಲ್ಲಿ ಬಹುಕಾಲ ವಾಸವಾಗಿದ್ದರು. ಕಲಿಯುವಾಗ ಶ್ರೀಕೃಷ್ಣನ ಮೇಲೆ ಗದೆ ಎತ್ತುವ ಪ್ರಯತ್ನವೂ ಸಹ ಅವನಿಗೆ ದ್ರೋಹವೇ ಆಗುವುದು ಎಂಬ ಭಾವನೆಯಿಂದ ಭೀಮನು ಗದಾಯುದ್ಧವನ್ನು ಕೃಷ್ಣನಿಂದ ಅಭ್ಯಸಿಸದೆ, ಬಲರಾಮನ ಬಳಿ ಅಭ್ಯಸಿಸಿದ. ಆ ಮೊದಲೇ ಕೃಷ್ಣನಿಂದ ತಾನು ತಿಳಿದಿದ್ದ ಗದಾಯುದ್ಧವನ್ನು ಬಲರಾಮನು ಭೀಮನಿಗೆ ಒಪ್ಪಿಸಿದ. ಅರ್ಜುನನು ಕೃಷ್ಣನಿಂದ ಅತ್ಯುತ್ತಮವಾದ ಹಲವು ಅಸ್ತ್ರಗಳನ್ನು ಕಲಿತ. ಸಹದೇವನು ಉದ್ಧವನ ಬಳಿ ನೀತಿಶಾಸ್ತ್ರವನ್ನು ಅಭ್ಯಾಸ ಮಾಡಿದ.

## ನಂದಾದಿಗಳಿಗೆ ಕೃಷ್ಣನ ಸಂದೇಶ

ನೀತಿಶಾಸ್ತ್ರವಿಶಾರದನಾದ ಉದ್ಧವನನ್ನು ಗೋಕುಲಕ್ಕೆ ಕಳುಹಿಸಿಕೊಡುತ್ತ ಕೃಷ್ಣ ಹೀಗೆಂದು ತಿಳಿಸಿದ – ''ನನ್ನ ವಿರಹದಿಂದ ಉಂಟಾಗಿರುವ ನಂದಾದಿಗಳ ದುಃಖವನ್ನು ನೀನು ನನ್ನ ಈ ಮಾತುಗಳಿಂದ ಪರಿಹರಿಸು – ಎಲ್ಲ ಪ್ರಾಣಿಗಳ ಅಂತರಾತ್ಮನಾಗಿರುವ ನನ್ನಿಂದ ಯಾರಿಗೂ ಎಂದಿಗೂ ವಿಯೋಗವಿಲ್ಲ. ನಾನು ಮನುಷ್ಯನೆಂಬ ಭಾವವನ್ನು ಎಂದೂ ಹೊಂದಬೇಡಿರಿ; ಜ್ಞಾನಿಗಳು ನನ್ನನ್ನು ದೋಷದೂರನಾದ ಪರಮಾತ್ಮನೆಂದು ಅರಿತಿದ್ದಾರೆ. ಹಿಂದೊಮ್ಮೆ ಅಜಗರವೊಂದು ನಂದನನ್ನು ಹಿಡಿದಾಗ, ಅವನನ್ನು ಬಿಡಿಸಲು ಯಾರಿಗೂ ಸಾಧ್ಯವಾಗ-ದಾಯಿತು. ಆಗ ನನ್ನ ಪಾದಸ್ಪರ್ಶದಿಂದ ಆ ಹೆಬ್ಬಾವು ದಿವ್ಯ ವಿದ್ಯಾಧರನಾಯಿತು. ಆಗ ಅವನು ಹೇಳಿದ ಮಾತುಗಳನ್ನೆಲ್ಲ ಜ್ಞಾಪಿಸಿಕೊಳ್ಳಿರಿ. ವಿದ್ಯಾಧರನಾಗಿದ್ದಾಗ ಅವನು ತನ್ನ ರೂಪದಿಂದ ಗರ್ವಿತನಾಗಿ ನಿರಂತರ ತಪಸ್ಸಿನಿಂದ ತುಂಬ ಕೃಶರೂ, ವಿರೂಪರೂ ಆಗಿದ್ದ ಆಂಗಿರಸರನ್ನು ಅಪಹಾಸ್ಯ ಮಾಡಿದ್ದ. ಶಾಪದಿಂದ ಕೂಡಲೇ ಅಜಗರವಾಗಿ ಭೂಮಿಯಲ್ಲಿ ಹುಟ್ಟಿದ್ದ ಅವನು ನನ್ನಿಂದ ನಿಜರೂಪವನ್ನು ಪಡೆದ – ''ಇವನು ಮನುಷ್ಯನಲ್ಲ, ಹಿರಿಯರಲ್ಲಿ ಹಿರಿಯನೂ, ಜಗದೊಡೆಯನೂ, ಜಗತ್ಕಾರಣನೂ, ಸ್ವತಂತ್ರನೂ ಆದ ಸಾಕ್ಷಾತ್ ಭಗವಂತನೇ ಆಗಿರುವನು. ಹೀಗೆ ತಿಳಿದು ಅವನನ್ನು ಧ್ಯಾನಿಸುವ ಮುನಿಗಳು ಮುಕ್ತಿಯನ್ನೇ ಪಡೆಯುವರು.'' ಮತ್ತೊಮ್ಮೆ ವರುಣನ ದೂತನೊಬ್ಬ ನಂದನನ್ನು ಹಿಡಿದೊಯ್ದಾಗ, ನಾನು ವರುಣನ ಮನೆಗೆ

ಅವನ ಬಿಡುಗಡೆಗೆಂದು ಹೋಗಿದ್ದೆ. ನನ್ನನ್ನು ಪೂಜಿಸಿದ ವರುಣ ನಂದನನ್ನು ಬಿಡುಗಡೆ ಮಾಡುತ್ತ ಅವನಿಗೆ ತಿಳಿಸಿದ - ''ಇವನು ನಿನ್ನ ಮಗನಲ್ಲ, ಸಾಕ್ಷಾತ್ ಪರಮಪುರುಷ.'' ಗೋಪಾಲಕರಿಗೆಲ್ಲ ಹಿಂದೊಮ್ಮೆ ನಾನು ವೈಕುಂಠಲೋಕವನ್ನು ತೋರಿಸಿದ್ದೆ. ನನ್ನನ್ನು ಧ್ಯಾನಿಸುತ್ತ ಸುಖವಾಗಿರಿ.'' ಭಗವಂತ ಹೇಳಿದ ಮಾತುಗಳನ್ನೆಲ್ಲ ಕೇಳಿದ ಉದ್ಧವ ವೃಂದಾವನಕ್ಕೆ ಹೋಗಿ ಅವನ ಮಾತುಗಳಿಂದ ಎಲ್ಲ ಗೋಕುಲವಾಸಿಗಳ ದುಃಖವನ್ನು ಶಮನಗೊಳಿಸಿ, ಮತ್ತೆ ಕೃಷ್ಣನ ಬಳಿಗೆ ಮರಳಿದ.

## ಪಾಂಡವರಿಗೆ ವೇದವ್ಯಾಸರ ಉಪದೇಶ

ಮೂರುವರ್ಷಗಳಷ್ಟು ಕಾಲ ಮಥುರಾಪಟ್ಟಣದಲ್ಲಿ ಕಳೆದ ಭೀಮಾರ್ಜುನರು ಸಹದೇವ-ನೊಂದಿಗೆ ಕೃಷ್ಣನ ಅಪ್ಪಣೆ ಪಡೆದು ವಿಶೋಕ ಎಂಬ ಕೃಷ್ಣನ ಮಗನೊಂದಿಗೆ ಹಸ್ತಿನಾಪುರಕ್ಕೆ ಮರಳಿದರು. ಹಿಂದಿನ ಜನ್ಮದಲ್ಲಿ ಪಿಂಗಲೆ ಎಂಬ ಹೆಸರಿನ ಒಬ್ಬಳು ಈಗ ತ್ರಿವಕ್ರೆಯಾಗಿ ಹುಟ್ಟಿದ್ದಳು. ಅವಳ ಗೂನನ್ನು ಈಗಾಗಲೇ ಭಗವಂತ ಹೋಗಲಾಡಿಸಿದ್ದ. ಅವಳಲ್ಲಿ ಕೃಷ್ಣನಿಂದ ಜನಿಸಿದ ಮಗನೇ ವಿಶೋಕ. ನಾರದರ ಶಿಷ್ಯನಾದ ಅವನು ಭೀಮಸೇನನ ರಥದ ಸಾರಥಿಯಾದ. ಪಂಚರಾತ್ರವನ್ನು ಅರಿತಿದ್ದ ಅಂತಹ ಸಾರಥಿ ದೊರೆತದ್ದು ಭೀಮನಿಗೂ ಸಂತಸವನ್ನುಂಟುಮಾಡಿತು. ಬಳಿಕ ಭೀಮಸೇನ ಸಾಕ್ಷಾತ್ ಭಗವಂತರಾದ ವೇದವ್ಯಾಸರಿಂದ ತತ್ತ್ವವಿದ್ಯೆಯನ್ನು ಕಲಿತ; ಅರ್ಜುನಾದಿಗಳಿಗೆ ಭಗವತ್ಸ್ವರೂಪವನ್ನು ತಾನೂ ಉಪದೇಶಿಸಿದ. ಭಗವದ್ವಿರೋಧಿ ಎನ್ನಿಸಿದ ಎಲ್ಲ ಶಾಸ್ತ್ರಗಳನ್ನು ಖಂಡಿಸಿ, ಸರ್ವವಿಜಯಿಯಾದ ಭೀಮಸೇನ ಎಲ್ಲೆಡೆಗಳಲ್ಲೂ ಶುದ್ಧ ''ವೈಷ್ಣವ'' ಧರ್ಮವನ್ನೇ ಪ್ರಚುರಪಡಿಸಿದ. ವಾಗ್ಯುದ್ಧ ಬಾಹುಯುದ್ಧ ಎರಡರಲ್ಲೂ ಅವೈಷ್ಣವರನ್ನು ಜಯಿಸುತ್ತಿದ್ದ ಭೀಮ ಎಂದೂ ಕುಂದದ ಅತ್ಯಂತ ಹಿರಿಯ ಮಟ್ಟದ ಜ್ಞಾನವನ್ನು ಹೊಂದಿದ್ದರೂ, ಸಾಕ್ಷಾತ್ ವಿಷ್ಣುವಿನ ಮುಖದಿಂದ ಮತ್ತೆ ಕೇಳುವುದರ ಮೂಲಕ ತನ್ನ ಆ ಪ್ರತಿಭೆಯನ್ನು ಇನ್ನೂ ಹೆಚ್ಚಿಸಿಕೊಂಡ. ರಮೆಯೂ ದಾಸಿ ಎನ್ನಿಸಿರುವ ವಿಷ್ಣುವನ್ನು ಅವಲಂಬಿಸದೆ ಯಾವನು ತಾನೆ ಇರಲು ಸಾಧ್ಯ ! ಧರ್ಮರಾಜನೂ ವೇದ-ವ್ಯಾಸರಿಂದ ಭಗವತ್ತತ್ತ್ವವನ್ನು ತಿಳಿದ. ಸಾಕ್ಷಾತ್ ವಿಷ್ಣುವಿನಿಂದಲೇ ತತ್ತ್ವ ತಿಳಿದ ಸದ್ಧರ್ಮ-ನಿರತರಾದ ಆ ಐವರು ಪಾಂಡುಪುತ್ರರು ಬಹಳವಾಗಿ ನಲಿದರು.

## ಹಾಲಾಹಲವಾದ ಹಾಲು

ಭರದ್ವಾಜಪುತ್ರ ದ್ರೋಣರು ಶಿಲೋಂಛವೃತ್ತಿಯಿಂದಲೇ ತಮ್ಮ ಜೀವನವನ್ನು ನಿರ್ವಹಿಸುತ್ತಿದ್ದ ಸಮಯದಲ್ಲಿ, ಅವರ ಪುತ್ರ ಅಶ್ವತ್ಥಾಮ ದುರ್ಯೋಧನಾದಿಗಳೊಂದಿಗೆ ಆಟಪಾಟಗಳಲ್ಲಿ ಭಾಗವಹಿಸುತ್ತಿದ್ದ. ಮಧ್ಯೆ ಹಾಲು ಕುಡಿಯಲೆಂದು ಮನೆಗೆ ಬರುತ್ತಿದ್ದ ಅವನಿಗೆ ತಾಯಿ ಕೃಪೆ ಹಿಟ್ಟನ್ನು ನೀರಿನಲ್ಲಿ ಕಲಸಿ ಹಾಲೆಂದು ಕುಡಿಯಲು ಕೊಡುತ್ತಿದ್ದಳು. ಅದನ್ನು ಕುಡಿದು ಅವನು ಧಾರ್ತರಾಷ್ಟ್ರರ ಬಳಿ ''ನಾನೂ ಹಾಲು ಕುಡಿದು ಬಂದೆ'' ಎಂದು

ಕುಣಿದಾಡುತ್ತಿದ್ದ. ಒಮ್ಮೆ ಕೌರವರು ಅವನನ್ನು ತಮ್ಮೊಂದಿಗೆ ಕರೆದೊಯ್ದು ಹಾಲನ್ನು ಕುಡಿಸಿದರು. ನಿಜವಾದ ಹಾಲಿನ ರುಚಿಯನ್ನು ಅರ್ಥಮಾಡಿಕೊಂಡ ಅಶ್ವತ್ಥಾಮ, ಮತ್ತೊಮ್ಮೆ ತಾಯಿ ಹಿಟ್ಟು ಕಲಸಿಕೊಟ್ಟ ಹಾಲನ್ನು ಕುಡಿದು, ''ಇದು ಹಾಲಲ್ಲ'' ಎಂದು ಅಳತೊಡಗಿದ. ಅಳುತ್ತಿದ್ದ ತನ್ನ ಮಗನ ಮೇಲಿನ ವಾತ್ಸಲ್ಯದಿಂದಾಗಿ ಕೃಪಿಯಿಂದ ಕಳುಹಿಸಲ್ಪಟ್ಟ ದ್ರೋಣರು ಗೋವೊಂದನ್ನು ಸಂಪಾದಿಸಲೆಂದು ಹೊರಟರು. ಅದಕ್ಕೆಲ್ಲ ಭಗವತ್ಸಂಕಲ್ಪವೇ ಮುಖ್ಯಕಾರಣ-ವಾಗಿತ್ತು. ಯಾರಿಂದಲೂ ಏನನ್ನೂ ಸ್ವೀಕರಿಸಕೂಡದೆಂಬ ನಿಯಮದಲ್ಲಿ ನಿರತರಾಗಿದ್ದ ಅವರು ಪರಶುರಾಮರ ಬಳಿಗೆ ಸಾರಿದರು. ಜಗತ್ತಿಗೆಲ್ಲ ತಂದೆಯೂ, ಸ್ವಾಮಿಯೂ, ಗುರುವೂ ಪರದೈವವೂ ಆದ ಅವರ ಬಳಿ ಬೇಡುವುದು ದೋಷವೆನ್ನಿಸದಲ್ಲವೇ !

ದ್ರೋಣರನ್ನು ಕಾಣುತ್ತಲೇ ಅವರನ್ನು ಭೂಭಾರಹರಣಕ್ಕೆ ನಿಮಿತ್ತಮಾಡಲೆಂದು ನಿಶ್ಚಯಿಸಿ ಪರಶುರಾಮರೂಪಿಯಾದ ಶ್ರೀಹರಿ ಹೀಗೆ ಯೋಚಿಸಿದ – ''ಮನುಷ್ಯರಾಗಿ ಹುಟ್ಟಿರುವ ದೇವತೆಗಳನ್ನು ಮಗನೊಂದಿಗೆ ಕೂಡಿದ ಇವನು ಸಂಹರಿಸಲಿ ; ಪಾಂಡವರಿಗೋಸ್ಕರ ಪ್ರಾಣ-ನೀಗಿ ಹೇಗೂ ಸದ್ಗತಿಹೊಂದುವ ಅವರಿಗೆ ಮೋಕ್ಷದಲ್ಲಿ ಆನಂದವೃದ್ಧಿಗೆ ಕಾರಣವಾಗುವುದು. ದೇವತೆಗಳ ಸಂತತಿಯು ಕಲಿಯುಗದಲ್ಲಿ ಉಳಿಯುವುದು ಸಹ ಒಳ್ಳೆಯದಲ್ಲ ; ಮುಂದೆ ಕಲಿಯುಗದಲ್ಲಿ ಹುಟ್ಟುವವರು ಸಾಮಾನ್ಯವಾಗಿ ಹೆಚ್ಚಾಗಿ ಪಾಪಿಷ್ಠರೇ ಆಗಿರುವರಲ್ಲವೇ? ಆದರೆ ದೇವತೆಗಳ ವಂಶದಲ್ಲಿ ನೂರುಪೀಳಿಗೆಯವರೆಗೆ ಪಾಪಿಗಳು ಜನಿಸಲು ಸಾಧ್ಯವಿಲ್ಲ. ವಿನಾಕಾರಣ ಅಮೋಘರೇತಸ್ಕರಾದ ಅವರ ಸಂತತಿ ಅಳಿಯುವುದೂ ಉಚಿತವೆನ್ನಿಸದು. ದೇವತೆಗಳ ಸಂತಾನ-ವೆಲ್ಲ ಹಾಗೆಯೇ ಉಳಿದಲ್ಲಿ ಕಲಿಯುಗ ಬರಲು ಸಾಧ್ಯವೂ ಆಗದು. ಆದ್ದರಿಂದ ಜನಿಸಿ ಬಂದಿರುವ ದೇವತೆಗಳ ಅಂಶದವರನ್ನು ಇವರು ಹಾಗೂ ಇವರ ಮಗ ಇಬ್ಬರೂ ಕೊಲ್ಲುವಂತಾಗಬೇಕು.'' ಸಾಟಿಯಿಲ್ಲದ ಹಿರಿಮೆಯ ಪರಶುರಾಮ, ತಾನು ಅನಂತಶಕ್ತಿಯಾದ ಜಗದೀಶ್ವರನೇ ಆಗಿದ್ದರೂ, ಕಿರುನಗೆ ಸೂಸುತ್ತಾ ಹೀಗೆಂದ : ''ನಾನು ಎಲ್ಲವನ್ನೂ ದಾನಮಾಡಿರುವುದರಿಂದ ಕೊಡಲು ನನ್ನಲ್ಲೀಗ ದ್ರವ್ಯವೇನೂ ಉಳಿದಿಲ್ಲ. ನಾನು, ನನ್ನ ವಿದ್ಯೆ ಮತ್ತು ಶಸ್ತ್ರಗಳು ಈ ಮೂರು ಮಾತ್ರವೇ ಈಗ ನನ್ನ ಬಳಿ ಇವೆ ; ಈ ಮೂರರಲ್ಲಿ ಬಯಸಿದ್ದನ್ನು ತೆಗೆದುಕೋ.'' ಇದನ್ನು ಕೇಳಿದ ದ್ರೋಣರು ಸಾಕಷ್ಟು ಯೋಚಿಸಿ ವಿಜ್ಞಾಪಿಸಿದರು – ''ಜಗದೊಡೆಯನೂ, ಸ್ವತಂತ್ರನೂ, ಸರ್ವಶಕ್ತನೂ ಆದ ನಿನ್ನನ್ನು ಯಾರು ತಾನೆ ಕೊಂಡೊಯ್ಯಾರು ! ನಿನ್ನ ಸಾಮ್ಯವನ್ನು ಬಯಸಿದವನೂ ಸಹ ಮತ್ತೆಂದೂ ಮೇಲೇಳಲಾಗದ ಅಧೋಗತಿಯನ್ನು ಹೊಂದುವನು. ಸರ್ವೋತ್ತಮನಾದ ನಿನ್ನ ಅಮೋಘ ಆಯುಧಗಳಿಂದ ನಾವೇನು ಮಾಡಲು ಸಾಧ್ಯ ! ಆದ್ದರಿಂದ ಭಗವಂತನಾದ ತಾವು, ಎಲ್ಲದಕ್ಕೂ ಮೂಲವಾದ, ಬಹಳ ಸೂಕ್ಷ್ಮವಾದ ತತ್ತ್ವವಿದ್ಯೆಯನ್ನೇ ನನಗೆ ಅನುಗ್ರಹಿಸಬೇಕು.'' ಹೀಗೆ ಕೇಳಿಕೊಂಡ ಅವರಿಗೆ ಪರಶುರಾಮರು ತತ್ತ್ವವಿದ್ಯೆ ಹಾಗೂ ಅಸ್ತ್ರವಿದ್ಯೆ ಮೊದಲಾದ ವಿವಿಧರೀತಿಯ ವಿದ್ಯೆಗಳನ್ನು ಉಪದೇಶಿಸಿದರು. ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ಅಧ್ಯಯನ ನಡೆಸಿದ ದ್ರೋಣಾಚಾರ್ಯರು, ಅವರ ಅಪ್ಪಣೆ ಪಡೆದು ತೆರಳಿದರು.

## ದ್ರುಪದನ ದರ್ಪ

ದ್ರೋಣರು ಅಲ್ಲಿಂದ ಬರುವಾಗ ಬಾಲ್ಯದ ಮಿತ್ರನಾದ ದ್ರುಪದನನ್ನು ಕಾಣಲೆಂದು ಪಾಂಚಾಲಪಟ್ಟಣಕ್ಕೆ ತೆರಳಿದರು. ಅವರು ಹಾಗೆ ದ್ರುಪದನ ಬಳಿಗೆ ಹೋಗಲು ಒಂದು ಕಾರಣವೂ ಇತ್ತು. ''ಅರ್ಧರಾಜ್ಯವನ್ನು ನಿನಗೆ ನೀಡುವೆನು'' ಎಂದು ಅವರಿಬ್ಬರೂ ಜೊತೆಯಲ್ಲಿ ಹಿಂದೆ ಅರಣ್ಯದಲ್ಲಿ ತಮ್ಮ ತಂದೆಯ ಬಳಿ ಅಭ್ಯಾಸ ಮಾಡುತ್ತಿದ್ದಾಗ ಮಾಡಿದ್ದ ಪ್ರತಿಜ್ಞೆ ಈಗ ಅವರಿಗೆ ನೆನಪಿಗೆ ಬಂದಿತ್ತು. ದ್ರುಪದನ ಸಭೆಗೆ ಬಂದು ''ನಾನು ನಿನ್ನ ಸ್ನೇಹಿತ'' ಎಂದು ಹೇಳಿ-ಕೊಂಡ ದ್ರೋಣರಿಗೆ ವಿಧಿಯ ಸಂಚಿಗೆ ಬಲಿಯಾಗಿ ದರ್ಪದಿಂದ ದ್ರುಪದ ನುಡಿದ : ''ಬಡವನೆಂದೂ ರಾಜನಿಗೆ ಸ್ನೇಹಿತನಾಗಲಾರ ; ಎಂದ ಮೇಲೆ ನನ್ನ ನಿನ್ನ ಸ್ನೇಹ ಅದೆಲ್ಲಿಯದು ! ಹೊರಟು ಹೋಗು.'' ಈ ಮಾತುಗಳನ್ನು ಕೇಳಿದ ಆ ಜಿತೇಂದ್ರಿಯರಾದ ದ್ರೋಣರಿಗೆ, ಭಗವದಿಚ್ಛೆಯಿಂದ ಕೋಪ ಉಕ್ಕಿತು.

## ದ್ರೋಣರ ಅಸ್ತ್ರಕೌಶಲ

''ಪ್ರತಿಗ್ರಹವನ್ನು ತೊರೆದ ನಾನು ನನ್ನ ತಂದೆಯ ಶಿಷ್ಯನೆಂಬ ಕಾರಣದಿಂದ ಇವನ ಬಳಿಗೆ ಬಂದೆ. ''ತಂದೆಯ ಶಿಷ್ಯ ತನ್ನ ಶಿಷ್ಯ ಹಾಗೂ ಶಿಷ್ಯನ ಸಂಪತ್ತು ಗುರುವಿನದು'' ಎಂದು ಭಾವಿಸಿ ಇಲ್ಲಿಗೆ ಬಂದರೆ ಮೂರ್ಖನಾದ ಈ ಪಾಪಿ ನನ್ನನ್ನು ಅವಮಾನಿಸಿ ಕೆಟ್ಟಮಾತುಗಳನ್ನು ಆಡಿರುವನು. ಇವನ ಸೊಕ್ಕನ್ನು ಮುರಿಯುವೆ'' ಎಂದು ನಿಶ್ಚಯಿಸಿ ಅವರು, ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದ ಕುರು-ಪಾಂಡವರ ಬಳಿಗೆ ತೆರಳಿದರು. ''ಪ್ರತಿಗ್ರಹ ತೊರೆದ ನನಗೆ ಶಿಷ್ಯರಾದ ಅವರಿಂದ ಉದ್ದೇಶ ಈಡೇರುವುದು'' ಎಂಬ ವಿಚಾರದಿಂದ ಆಗಮಿಸಿದ ಅವರಿಗೆ ಊರಿನ ಹೊರವಲಯದಲ್ಲಿ ಆಡುತ್ತಿದ್ದ ಕೌರವರು, ಪಾಂಡವರು ಕಣ್ಣಿಗೆ ಬಿದ್ದರು. ಇವರು ಬರುವ ಸಮಯಕ್ಕೆ ಸರಿಯಾಗಿ ಧರ್ಮರಾಜನ ಮುದ್ರೆಯುಂಗುರದೊಂದಿಗೆ ಚೆಂಡು ಸಹ ಸಮೀಪದಲ್ಲಿದ್ದ ಒಂದು ಆಳವಾದ ಬಾವಿಯಲ್ಲಿ ಬಿದ್ದಿತ್ತು. ಅದನ್ನು ಮೇಲೆತ್ತುವ ಉಪಾಯ ಕಾಣದೆ ಉಳಿದವರೆಲ್ಲ ಚಿಂತಾಮಗ್ನರಾಗಿರುವಾಗ, ಭೀಮಸೇನ ''ಆಳವಾದ ಈ ಬಾಪಿಯ ಬುಡದಿಂದ ಅವೆರಡನ್ನು ನಾನೀಗಲೇ ತರುತ್ತೇನೆ, ನೋಡುತ್ತಿರಿ'' ಎಂದು ಹೇಳಿ ಸಿದ್ಧನಾಗುತ್ತಿದ್ದ. ಅದನ್ನೆಲ್ಲ ಗಮನಿಸುತ್ತಿದ್ದ ದ್ರೋಣರು ಅವರ ಬಳಿ ಬಂದು ''ಭರತವಂಶದಲ್ಲಿ ಜನಿಸಿಯೂ ದಿವ್ಯಾಸ್ತ್ರಗಳನ್ನು ತಿಳಿಯದಿರುವ ನಿಮಗೆ ಧಿಕ್ಕಾರ.'' ಎಂದು ನುಡಿದರು. ಅವರು ಅಸ್ತ್ರೋವಿದರು ಎಂದು ಅರಿತುಕೊಂಡ ರಾಜಕುಮಾರರೆಲ್ಲ ಪ್ರಧಾನ ರಾಜಮುದ್ರಿಕೆ ಹಾಗೂ ಕಂದುಕಗಳನ್ನು ಮೇಲೆತ್ತಿಕೊಡಲು ಕೇಳಿಕೊಂಡರು. ಕೂಡಲೇ ಅವರು ಒಂದಾದಮೇಲೊಂದ-ರಂತೆ ಮಂತ್ರಿಸಿದ ದರ್ಭೆಗಳನ್ನು ಪ್ರಯೋಗಿಸಿ, ದಿವ್ಯಾಸ್ತ್ರಬಲದಿಂದ ಚೆಂಡನ್ನು ಮೇಲೆತ್ತಿ-ಕೊಟ್ಟರು. ರಾಜಮುದ್ರಿಕೆಯನ್ನು ಸಹ ತೆಗೆದುಕೊಡಲು ಪ್ರಾರ್ಥಿಸಿದ ಅವರಿಗೆ ''ನನಗೆ ಭೋಜನದ ವ್ಯವಸ್ಥೆಯಾಗಲಿ'' ಎಂದು ನುಡಿದರು. ಬಯಸಿದಷ್ಟು ಹಣ ಅನ್ನಪಾನಗಳನ್ನು

ಕೊಡುವುದಾಗಿ ಕೂಡಲೇ ಧರ್ಮರಾಜ ವಚನವಿತ್ತ. ಒಪ್ಪಿಕೊಂಡ ದ್ರೋಣರು ಅದೇ ರೀತಿ ರಾಜಮುದ್ರಿಕೆಯನ್ನು ಸಹ ಮೇಲೆತ್ತಿಕೊಟ್ಟರು.

## ಕುರು-ಪಾಂಡವರ ದ್ರೋಣಶಿಷ್ಯತ್ವ

ರಾಜಕುಮಾರರೆಲ್ಲ ಒಟ್ಟಾಗಿ ಪ್ರಶ್ನಿಸಿದರು : ''ಪೂಜ್ಯರೇ ! ತಾವು ಯಾರು ?''; ''ನಿಮ್ಮ ತಾತ ತಿಳಿಸುವನು'' ಎಂಬ ದ್ರೋಣರ ಮಾತು ಕಿವಿಗೆ ಬೀಳುತ್ತಿದ್ದಂತೆಯೇ ಅವರು ಭೀಷ್ಮರ ಬಳಿ ಧಾವಿಸಿ ವಿಷಯವನ್ನು ತಿಳಿಸಿ, ಅವರ ವಿಷಯವನ್ನು ತಿಳಿಸಲು ಕೇಳಿಕೊಂಡರು. ದ್ರೋಣರು ಹಸ್ತಿನಾಪುರಿಯಲ್ಲಿಯೇ ವಾಸಿಸುತ್ತಿದ್ದರೂ, ಅರಮನೆಗೆ ಎಂದೂ ಬಾರದಿದ್ದ ಅವರನ್ನು ಕೌರವರು-ಪಾಂಡವರು ಕಂಡಿರಲಿಲ್ಲ. ವಯಸ್ಸಾದ ಕಪ್ಪು ಬ್ರಾಹ್ಮಣ ಎಂಬುದನ್ನೂ, ಅಸ್ತ್ರವಿದ್ಯಾಕೌಶಲವನ್ನೂ ಕೇಳಿದ ಭೀಷ್ಮರು ಅವರು ದ್ರೋಣರೆಂಬುದನ್ನು ಗುರುತಿಸಿದರು. ಅವರಿಂದಲೇ ಅಸ್ತ್ರವಿದ್ಯೆಯನ್ನು ರಾಜಪುತ್ರರಿಗೆ ಹೇಳಿಸಬೇಕೆಂಬ ಯೋಚನೆ ಕೂಡಲೇ ಬಂದಿತು ; ಅವರು ಪರಶುರಾಮರ ಬಳಿ ಅಸ್ತ್ರಗಳನ್ನು ಅಭ್ಯಸಿಸಿದ ವಾರ್ತೆಯನ್ನು ಅವರು ಕೇಳಿದ್ದರು. ದ್ರೋಣರ ವಿಷಯ ತಿಳಿಸಿ, ಅವರೊಂದಿಗೆ ಸ್ವಯಂ ತಾವೇ ದ್ರೋಣರ ಬಳಿಗೆ ತೆರಳಿ ರಾಜಕುಮಾರರನ್ನು ಅವರ ಶಿಷ್ಯರನ್ನಾಗಿ ಒಪ್ಪಿಸಿದರು.

## ಅರ್ಜುನನ ಪ್ರತಿಜ್ಞೆ

''ನನ್ನ ಬಯಕೆಯನ್ನು ಪೂರೈಸುವುದಾಗಿ ಮೊದಲು ಪ್ರತಿಜ್ಞೆ ಮಾಡುವವನನ್ನು , ನಾನು ಧನುರ್ಧಾರಿಗಳಲ್ಲಿ ಅದ್ವಿತೀಯನನ್ನಾಗಿಸುವೆನು.'' ಎಂದು ದ್ರೋಣರು ಹೇಳುತ್ತಲೇ, ಅಂತಹ ಪ್ರತಿಜ್ಞೆಯನ್ನು ಅರ್ಜುನ ಮಾಡಿದ. ''ಉನ್ಮಾದನ'' ಮೊದಲಾದ ಅನೇಕ ದಿವ್ಯಾಸ್ತ್ರಗಳನ್ನು ಆ ಮೊದಲು ಅರ್ಜುನ ಶ್ರೀಕೃಷ್ಣನಿಂದ ತಿಳಿದಿದ್ದರೂ, ಅವುಗಳನ್ನು ಮಹಾ ಆಪತ್ಕಾಲಗಳಲ್ಲಿ ಮಾತ್ರವೇ ಪ್ರಯೋಗಿಸಬೇಕೆಂದು ಕೃಷ್ಣನ ಅಪ್ಪಣೆಯಾಗಿತ್ತು. ಆದ್ದರಿಂದ ಪ್ರಯೋಗಯೋಗ್ಯ-ವಾದ ಇತರ ಅಸ್ತ್ರಗಳ ಬಯಕೆ ಅರ್ಜುನನಲ್ಲಿ ಮನೆ ಮಾಡಿತ್ತು. ಭೀಷ್ಮಾದಿ ಹಿರಿಯರೊಂದಿಗೆ ಮುಂದೆ ಯುದ್ಧ ತಪ್ಪಿದ್ದಲ್ಲ, ಆ ಸಮಯದಲ್ಲಿ ಅವರೊಂದಿಗೆ ನಾನು ಕಾದಬಯಸುವುದಿಲ್ಲ. ಆದ್ದರಿಂದ ಈಗ ಅಸ್ತ್ರಗಳನ್ನು ತಿಳಿದು ಅರ್ಜುನನೇ ಅವರನ್ನು ಎದುರಿಸುವಂತಾದಲ್ಲಿ ನನಗೆ ಧರ್ಮವು ಹೆಚ್ಚುವುದು. ರಮೆಯರಸನ ಹೊರತು ಇತರರಲ್ಲಿ ವರ ಪಡೆಯುವುದು ನನಗೆ ಯೋಗ್ಯವಲ್ಲ. ಆದ್ದರಿಂದ ಅರ್ಜುನನೇ ಪ್ರತಿಜ್ಞೆ ಮಾಡಲಿ.'' ಹೀಗೆಂದು ಯೋಚಿಸಿದ ಭೀಮ ತಾನು ಗುರುಗಳ ಇಷ್ಟವನ್ನು ತೀರಿಸುವಲ್ಲಿ ಸಮರ್ಥನೇ ಆಗಿದ್ದರೂ ಆಗ ಪ್ರತಿಜ್ಞೆಯನ್ನು ಮಾಡಲು ತಾನು ಮುಂದಾಗದೆ, ಅರ್ಜುನನಿಗೆ ಅವಕಾಶ ಕಲ್ಪಿಸಿದ.

ಅರ್ಜುನನ ಪ್ರತಿಜ್ಞೆಯಿಂದ ಸಂತುಷ್ಟರಾದ ದ್ರೋಣರು ಅಂದಿನಿಂದ ಅರ್ಜುನನಲ್ಲಿ ಹೆಚ್ಚು ಪ್ರೀತಿಯನ್ನು ಹೊಂದಿ, ಅವನಿಗೆ ಮಹಾಸ್ತ್ರಗಳನ್ನು ಉಪದೇಶಿಸಿದರು ; ಅವನ ವಿಷಯದಲ್ಲಿ ಪಕ್ಷಪಾತವನ್ನೇ ಹೊಂದಿದ ಅವರು ಅವನನ್ನು ಬಹಳವಾಗಿ ಪ್ರಶಂಸಿಸುತ್ತಿದ್ದರು. ರಹಸ್ಯ-

ವಿದ್ಯೆಗಳನ್ನು ಅವನಿಗೆ ಉಪದೇಶಿಸಿದರು. ಉಳಿದವರಿಗೆ ಎಂದೂ ಆ ರೀತಿ ಅವರು ಅಸ್ತ್ರಗಳನ್ನು ಉಪದೇಶಿಸಲಿಲ್ಲ. ಭೀಮನು ಎಲ್ಲವನ್ನೂ ಸಹ ತನ್ನ ಪ್ರತಿಭೆಯಿಂದಲೇ ತಿಳಿದಿದ್ದರಿಂದ, ತಮ್ಮನಲ್ಲಿ ದ್ರೋಣರಿಗಿದ್ದ ಅದ್ವಿತೀಯ ಪ್ರೀತಿಯನ್ನು ಗಮನಿಸಿ, ಅವನು ಸಕಲ ಅಸ್ತ್ರಗಳನ್ನು ಅವರಿಂದ ತಿಳಿಯಲೆಂದೇ ಅರ್ಜುನನಂತೆ ಅವರನ್ನು ಸೇವಿಸಲಿಲ್ಲ. ಗುರಿಯನ್ನು ನೋಡುವಾಗ ಅಷ್ಟಾಗಿ ಪ್ರಯತ್ನವನ್ನೇ ಮಾಡುತ್ತಿರಲಿಲ್ಲ. ಸೇವೆಯ ಕೆಲಸ ಬಂದಾಗ, ಅರ್ಜುನನನ್ನೇ ಮುಂದೆ ಮಾಡುತ್ತಿದ್ದ. "ನನ್ನ ಬಾಹುಬಲ ಹಾಗೂ ಭಗವಂತನ ಅನುಗ್ರಹ ಇವೆರಡರಿಂದ ಎಲ್ಲ ಶತ್ರುಗಳನ್ನು ನಾಶಮಾಡಬಲ್ಲೆ; ಇದರಿಂದ ನನಗೇನು?" ಎಂಬುದೇ ಅವನ ಸಂಕಲ್ಪವಾಗಿತ್ತು.

## ಲೋಕಗುರುವೆನ್ನಿಸಿದ ದ್ರೋಣರು

ದ್ರೋಣರ ಕೀರ್ತಿಯನ್ನು ಕೇಳಿದ ಅನೇಕ ದೇಶಗಳ ರಾಜಪುತ್ರರು ಅವರಿಂದ ಅಸ್ತ್ರಗಳನ್ನು ಪಡೆಯಲು ಧಾವಿಸಿ ಬಂದರು. ದ್ರೋಣರೂ ಅವರಿಗೆಲ್ಲ ತಾವು [೧]ಪರಶುರಾಮರಿಂದ ಪಡೆದಿದ್ದ ಇತರರಿಗೆ ಸರ್ವಥಾ ತಿಳಿಯದಿದ್ದ ಅಸ್ತ್ರಗಳನ್ನು ಉಪದೇಶಿಸಿದರು. ಇತರ ರಾಜರು ಮನಸ್ಸಿನಲ್ಲಿಯೂ ಯೋಚಿಸಿರದಿದ್ದ ಚಿತ್ರವಿಚಿತ್ರಗಳಾದ ಅಸ್ತ್ರಗಳನ್ನು ಪಡೆದುಕೊಂಡ ರಾಜಪುತ್ರರೆಲ್ಲ ಹಿಂದಿನ ರಾಜರಿಗಿಂತ ಹೆಚ್ಚು ಸಮರ್ಥರೆನ್ನಿಸಿದರು. ಈ ರೀತಿಯಾಗಿ ಹಿಂದಿನ ಮಹಾ ಪರಾಕ್ರಮಿಗಳಾದ ಭರತ, ಮಾಂಧಾತ, ಮರುತ್ತ ಮೊದಲಾದ ಶ್ರೇಷ್ಠ ರಾಜರು ಮಾತ್ರ ಅಸ್ತ್ರದಲ್ಲಿ, ಬಲದಲ್ಲಿ, ಉಳಿದೆಲ್ಲ ವಿದ್ಯೆಗಳಲ್ಲಿ ಇವರಿಗೆ ಸಾಟಿಯೆನ್ನಿಸುವಂತಿದ್ದರು.

## ಪರಶುರಾಮರ ಬಳಿಗೆ ಕರ್ಣ

ದ್ರೋಣರ ಬಳಿ ಅಸ್ತ್ರವಿದ್ಯೆ ಕಲಿಯಲೆಂದು ಕರ್ಣ ಮತ್ತು ಏಕಲವ್ಯರು ಸಹ ಬಂದರು. ಆದರೆ ಪರಶುರಾಮರ ಶಿಷ್ಯರಾದ ಅವರು ಸೂತನೆಂಬ ಕಾರಣದಿಂದ [೨]ಕರ್ಣನನ್ನೂ

---

೧. ದುಷ್ಟಕ್ಷತ್ರಿಯನಾಶಕರು ಎಂದು ವಿಖ್ಯಾತರಾದ ಪರಶುರಾಮರು ಧನುರ್ವಿದ್ಯೆಯ ಪ್ರವರ್ತಕವಾದ ಭಗವದ್ರೂಪ ; ಅಸ್ತ್ರವಿದ್ಯೆಯಲ್ಲಿ ಅವರೇ ಅಂತಿಮ. ಆದರೆ, ಅವರು ದುಷ್ಟಕ್ಷತ್ರಿಯರ ಸಂಹಾರದ ಕಾರ್ಯದಲ್ಲಿ ತೊಡಗಿದ್ದರಿಂದ ಕ್ಷತ್ರಿಯರಾರಿಗೂ ಅವರ ಅಸ್ತ್ರಗಳನ್ನು ಪಡೆಯುವ ಅವಕಾಶ ಲಭಿಸಿರಲಿಲ್ಲ. ಪ್ರಥಮಬಾರಿಗೆ ಅವರಿಂದ ಅಸ್ತ್ರೋಪದೇಶ ಪಡೆದ ಭಾಗ್ಯಶಾಲಿ ಭೀಷ್ಮರು. ಆದರೆ, ಅವರು ಕ್ಷತ್ರಿಯರಾದ್ದರಿಂದ ಸಕಲರಿಗೂ ಅಸ್ತ್ರವಿದ್ಯೆಯನ್ನು ಉಪದೇಶಿಸುವ ಗುರುತ್ವವನ್ನು ಪಡೆಯಲು ಸಾಧ್ಯವಾಗಿರಲಿಲ್ಲ. ಅವರ ಅಸ್ತ್ರದ ಪ್ರಯೋಜನವನ್ನು ಪಡೆದದ್ದು ಪಾಂಡುರಾಜ ಮಾತ್ರ. ಆದರೆ, ದ್ರೋಣಾಚಾರ್ಯರು ಪರಶುರಾಮರ ಬಳಿಯಲ್ಲಿ ಕಲಿತ ಅಸ್ತ್ರವಿದ್ಯೆ ಇತರ ಎಲ್ಲರಿಗೂ ಸಹ ಲಭ್ಯವಾಗುವಂತಾಯಿತು. ಇದರಿಂದ ಇತರರಿಗೆ ಸರ್ವಥಾ ದುರ್ಲಭವೆನ್ನಿಸಿದ ಅಸ್ತ್ರಗಳು ದೊರಕುವಂತಾಗಿ ಆ ಕಾಲದ ಕ್ಷತ್ರಿಯರ ಸಾಮರ್ಥ್ಯ ಹಿಂದಿನ ಅನೇಕರಿಗಿಂತ ಮಿಗಿಲೆನ್ನಿಸುವಂತಾಯಿತು. ಈ ರೀತಿ ಅವರಿಂದ ಅಸ್ತ್ರವಿದ್ಯೆಯ ಶಿಕ್ಷಣ ಪಡೆದ ಹೆಚ್ಚಿನ ಮಹಾವೀರರು ಕುರುಕ್ಷೇತ್ರಯುದ್ಧದಲ್ಲಿ ಪಾಲ್ಗೊಂಡಿದ್ದು ಇತಿಹಾಸ. ಆದರಿಂದಾಗಿಯೇ ಕುರುಕ್ಷೇತ್ರಯುದ್ಧ ರಾಮರಾವಣರ ಯುದ್ಧದ ಅನಂತರದ ದಾಖಲೆಯ ಮಹಾಯುದ್ಧ ಎನ್ನುವ ವಿಶಿಷ್ಟಹಿರಿಮೆಗೆ ಪಾತ್ರವಾಗುವಂತಾಯಿತು.

೨. ದ್ರೋಣರು ಕರ್ಣನಿಗೆ ಒಂದು ಹಂತದವರೆಗೆ ಅಸ್ತ್ರವಿದ್ಯೆಯನ್ನು ಉಪದೇಶಿಸಿದರು. ಬ್ರಹ್ಮಾಸ್ತ್ರ ಮೊದಲಾದವುಗಳನ್ನು ಮಾತ್ರ ಉಪದೇಶಿಸಲಿಲ್ಲ. ಅದಕ್ಕೆ ಅವನು ಸೂತ ಎಂಬುದು ಕಾರಣವಾಗಿತ್ತು.

ಬೇಡನೆಂಬ ಕಾರಣದಿಂದ ಏಕಲವ್ಯನನ್ನೂ ಶಿಷ್ಯರನ್ನಾಗಿ ಪರಿಗ್ರಹಿಸಲಿಲ್ಲ. ತನ್ನ ಬಯಕೆ ಈಡೇರದ ಕರ್ಣ, ''ಈ ಬ್ರಾಹ್ಮಣ ಯಾರಿಂದ ಅಸ್ತ್ರವಿದ್ಯೆಯನ್ನು ಪಡೆದು ಬಂದನೋ, ಆ ಪರಶುರಾಮ-ರೂಪಿಯಾದ ಶ್ರೀಹರಿಯ ಬಳಿಗೇ ನಾನೂ ತೆರಳುವೆ'' ಎಂದು ಆಲೋಚಿಸಿ ಪರಶುರಾಮರ ಆಶ್ರಮವನ್ನು ಸೇರಿದ ; ಅಸ್ತ್ರಗಳನ್ನು ಪಡೆಯಲೇಬೇಕೆಂಬ ಬಯಕೆ ಹೊಂದಿದ್ದ ಕರ್ಣ, ಇತರರಿಗೆ ಅಸ್ತ್ರ ಕೊಡಲು ಅವರು ಒಪ್ಪಲಾರರೆಂಬ ಭಯದಿಂದ ಸರ್ವಜ್ಞರಾದ ಅವರ ಮುಂದೆ ತಾನೂ ಬ್ರಾಹ್ಮಣ ಎಂದು ಸುಳ್ಳಾಡಿದ. ಅವನಾರೆಂಬುದನ್ನು ಚೆನ್ನಾಗಿಯೇ ಬಲ್ಲ ಅವರು ಉದ್ದೇಶಪೂರ್ವಕ ಅವನ ಮಾತನ್ನು ನಂಬಿದಂತೆ ನಟಿಸಿ, ಅವನಿಗೆ ಎಲ್ಲ ದಿವ್ಯಾಸ್ತ್ರಗಳನ್ನು ಉಪದೇಶಿಸಿದರು. ''ಇವನ ಮೇಲಿನ ನಂಬಿಕೆಯಿಂದ ಅಸ್ತ್ರಜ್ಞಚೂಡಾಮಣಿಯಾದ ಅರ್ಜುನ-ನನ್ನು ಎದುರಿಸುವ ನಂಬಿಕೆಯನ್ನು ದುರ್ಯೋಧನ ಹೊಂದಲಿ'' ಎಂಬ ಕಾರಣದಿಂದ ಪರಶುರಾಮರು ಆ ರೀತಿ ಅವನಿಗೆ ಉದ್ದೇಶಪೂರ್ವಕವಾಗಿಯೇ ಅಸ್ತ್ರಗಳನ್ನು ಉಪದೇಶಿ-ಸಿದರು. ಪರಶುರಾಮರಿಂದ ಅಸ್ತ್ರವಿದ್ಯೆಯನ್ನು ಪಡೆದುಕೊಂಡ ಕರ್ಣ, ವಿಜಯ ಎಂಬ ಧನುಸ್ಸನ್ನೂ, ಶ್ರೇಷ್ಠವಾದ [೧]ರಥವನ್ನೂ ಸಹ ಅವರಿಂದ ಪಡೆದ. ಆ ವೇಳೆಗೆ ಕರ್ಣ ಅಲ್ಲಿಗೆ ಬಂದು ನಾಲ್ಕು ವರ್ಷಗಳು ಪೂರೈಸಿದ್ದವು ; ಆದರೂ ಸಹ ಆ ಭಗವಂತನಾದ ಅವರನ್ನು ಬಿಟ್ಟುಹೋಗಲು ಮನಸ್ಸಾಗದೆ ಅಲ್ಲಿಯೇ ಉಳಿದಿದ್ದ.

## ಪರಶುರಾಮರಿಂದ ಕರ್ಣನಿಗೆ ಲಭಿಸಿದ ವರ-ಶಾಪಗಳು

ಒಮ್ಮೆ ಅಗಾಧಜ್ಞಾನರಾಶಿಯಾದ ಪರಶುರಾಮರು ಕರ್ಣನ ತೊಡೆಯ ಮೇಲೆ ತಲೆ ಇರಿಸಿಕೊಂಡು ಗಾಢನಿದ್ರೆ ಬಂದವರಂತೆ ಮಲಗಿದ್ದರು ; ಸ್ವಯಂ ಭಗವಂತನಾದ ಅವರಿಗೆ ನಿದ್ರೆ ಮೊದಲಾದ ದೋಷಗಳು ಸರ್ವಥಾ ಇಲ್ಲವಷ್ಟೆ ! ಇಂದ್ರನಿಗೆ ಅಪಚಾರವೆಸಗಿ ಅವನ ಶಾಪದಿಂದ ಹೇತಿ ಎಂಬ ಒಬ್ಬ[೨]ರಾಕ್ಷಸ ಒಂದು ಕೀಟವಾಗಿ ಜನಿಸಿದ್ದ. ದೇವಕಾರ್ಯಕ್ಕಾಗಿಯೂ, ವಾಲಿಯನ್ನು ಕೊಲ್ಲಿಸಿದ ಸೇಡಿಗಾಗಿಯೂ, ಕರ್ಣನಿಗೆ ಶಾಪಕೊಡಿಸುವ ಉದ್ದೇಶದಿಂದ ಇಂದ್ರ ಆ ಕೀಟವನ್ನು ಪ್ರವೇಶಿಸಿ, ಕರ್ಣನ ತೊಡೆಯನ್ನು ಕೆಳಗಿನಿಂದ ಮೇಲಿನವರೆಗೂ ಬಾಣ

---

ಇದರಲ್ಲಿ ಅನ್ಯಾಯವೆನ್ನಿಸುವುದೇನೂ ಇಲ್ಲ. ಇಂದೂ ಸಹ ಐಚ್ಛಿಕವಿಷಯಗಳನ್ನು ಆರಿಸಿಕೊಳ್ಳುವ ಅರ್ಹತೆ ಇಲ್ಲದವರಿಗೆ ವಿಶ್ವವಿದ್ಯಾಲಯಗಳ ನಿಯಮದಂತೆ ಪ್ರವೇಶ ಲಭಿಸಲಾರದು ಎಂಬುದು ಸುಪ್ರಸಿದ್ಧವೇ ಆಗಿದೆ ಅಲ್ಲವೆ? ಶೇಕಡಾ ೫೦ಕ್ಕಿಂತ ಕಡಿಮೆ ಬಂದವರಿಗೆ ಸಂಶೋಧನೆ ಮೊದಲಾದವುಗಳಿಗೆ ಅವಕಾಶ ಲಭಿಸದು ಎಂಬುದು ಹೇಗೋ ಹಾಗೆ ಈ ಪ್ರಸಂಗವನ್ನು ತಿಳಿಯಬೇಕು.

೧. ಹೀಗೆ ಕರ್ಣ ಪರಶುರಾಮರಿಂದ ಅಪೂರ್ವವಾದ ವಿಜಯ ಎಂಬ ಧನುಸ್ಸನ್ನು ಹಾಗೂ ರಥವನ್ನು ಪಡೆದ ವಿವರ ಅತ್ಯಂತ ರೋಚಕವಾದುದು. ಇದರಿಂದಾಗಿ ಅಂತಹ ಧನುಸ್ಸು ರಥಗಳನ್ನು ಹೊಂದಿದ್ದ ಅವನಿಗೆ ಅರ್ಜುನನೊಂದಿಗೆ ಹೋರಾಡಲು ವಿಶೇಷವಾದ ಸಾಮರ್ಥ್ಯ ಲಭಿಸಿದಂತಾಯಿತು. ಮಹಾಭಾರತದಲ್ಲಿನ ಈ ವಿವರವನ್ನು ಸಂಸ್ಕೃತವನ್ನೂ ಒಳಗೊಂಡಂತೆ ಕನ್ನಡ ಮೊದಲಾದ ಇತರ ಭಾಷೆಗಳಲ್ಲಿ ರಚಿತವಾದ ಮಹಾಭಾರತವನ್ನು ಕುರಿತ ಇತರಕೃತಿಗಳು ಉಲ್ಲೇಖಿಸಿಲ್ಲ ಎಂಬುದು ಗಮನಿಸಬೇಕಾದ ಅಂಶ.

೨. ಈ ರಾಕ್ಷಸನು ಘಟೋತ್ಕಚ ಮೊದಲಾದವರಂತೆ ಸಾತ್ತ್ವಿಕವರ್ಗಕ್ಕೆ ಸೇರಿದ ರಾಕ್ಷಸ ಎಂದು ತಿಳಿಯಬೇಕು.

ಕೊರೆಯುವಂತೆ ಕೊರೆದುಹಾಕಿದ. ಸುರಿದು ಬಂದ ರಕ್ತಧಾರೆಯನ್ನು ನೋಡಿ, ನಿದ್ರೆಯಿಂದ ಎಚ್ಚೆತ್ತವರಂತೆ ಪರಶುರಾಮರು ಮೇಲೆದ್ದು ಕರ್ಣನನ್ನು ಕುರಿತು : "ಮೈಲಿಗೆಯ ರಕ್ತಧಾರೆ ಸುರಿಯುತ್ತಿದ್ದರೂ ನೀನೇಕೆ ನನ್ನನ್ನು ಎಬ್ಬಿಸಲಿಲ್ಲ? ನಿಜವಾಗಿಯೂ ನೀನು ಯಾರು ?" ಎಂದು ಕೇಳಲು ಕರ್ಣ ಅರಿಕೆಮಾಡಿಕೊಂಡ – "ನಿಮ್ಮ ನಿದ್ರೆಗೆ ಭಂಗ ಉಂಟಾದೀತೆಂಬ ಭಯದಿಂದ ನಾನು ಅಲುಗಾಡದೆ ಕುಳಿತು, ಕೀಟದ ಕೊರೆತವನ್ನು ಸಹಿಸಿದೆ. ಜಾತಿಯಲ್ಲಿ ನಾನು ಸೂತ. ಆದರೆ ನಿಮ್ಮ ಮಗನಂತಿರುವ ನಾನು "ಭಾರ್ಗವವಂಶದ ಬ್ರಾಹ್ಮಣ" ಎಂಬುದಾಗಿ ಆಗ ನಿಮ್ಮಲ್ಲಿ ಹೇಳಿಕೊಂಡಿದ್ದೆ. ನೀನೇ ಈ ಎಲ್ಲ ಜಗತ್ತಿನ ತಾಯಿ ತಂದೆ ಗುರು ಎಲ್ಲವೂ ಆಗಿರುವುದರಿಂದ, ನಾನು ನಿನ್ನ ಮಗನೇ ಅಲ್ಲವೇ?" ಈ ವೇಳೆಗೆ ಪರಶುರಾಮನ ಕಣ್ಣಿಗೆ ಬಿದ್ದ ಆ ಕೀಟ, ಅವರ ದೃಷ್ಟಿಯಿಂದ ಶಾಪಮುಕ್ತವಾಗಿ, ಅವರ ಅನುಗ್ರಹದಿಂದ ವಿಮಾನದಲ್ಲಿ ಕುಳಿತು ಸ್ವರ್ಗವನ್ನೇ ಸೇರಿತು. ಪರಶುರಾಮರು ಕೋಪಗೊಂಡವರಂತೆ ಕರ್ಣನಿಗೆ ಹೇಳಿದರು – "ಅಸತ್ಯವಾದಿಯಾದ ನೀನು ನನ್ನ ಬಳಿ ವಾಸಿಸಲು ಅರ್ಹನಲ್ಲ. ಆದರೂ ಈವರೆಗೂ ನನ್ನಲ್ಲಿ ಭಕ್ತಿಯಿಂದ ಸಂಪಾದಿಸಿರುವ ನಿನ್ನ ವಿದ್ಯೆ ವ್ಯರ್ಥವಾಗದು. ಅದರ ಫಲವಾಗಿ ನೀನು ಎಲ್ಲ ಶತ್ರುಗಳನ್ನು ಗೆಲ್ಲುವಿ. ಸ್ಪರ್ಧಿಸದೆ ಹೋರಾಡುವ ನಿನ್ನನ್ನು ಯಾರೂ ಗೆಲ್ಲಲಾರರು[೧]. ಆದರೆ ಸ್ಪರ್ಧೆಯಿಂದ ಹೋರಾಡುವಾಗ ಮಾತ್ರ ನಿನಗೆ ಸೋಲು ತಪ್ಪಿದ್ದಲ್ಲ. ಯುದ್ಧಕಾಲದಲ್ಲಿ ನಿನಗೆ ಅಸ್ತ್ರಗಳು ಮರೆತುಹೋಗುವವು. ಹೊರಟುಹೋಗು." ಅವರಿಗೆ ನಮಸ್ಕರಿಸಿದ ಕರ್ಣ ಅಲ್ಲಿಂದ ತೆರಳಿದ.

## ಏಕಲವ್ಯನ ಗುರುಭಕ್ತಿ

ದ್ರೋಣರಿಂದ ನಿರಾಕೃತನಾದ ಏಕಲವ್ಯನೂ ಕೂಡ ಕಾಡಿನಲ್ಲಿ ಅವರ ಪ್ರತಿಮೆಯೊಂದನ್ನು ಮಾಡಿ ಪೂಜಿಸುತ್ತ, ಅಸ್ತ್ರವಿದ್ಯೆಯನ್ನು ಅಭ್ಯಾಸ ಮಾಡತೊಡಗಿದ. ಒಮ್ಮೆ ಕೌರವ ಪಾಂಡವ-ರೆಲ್ಲರೂ ಬೇಟೆಗೆ ಹೋಗಿದ್ದಾಗ, ಮುಂದೆ ಮೃಗಗಳನ್ನು ಹುಡುಕುತ್ತ ಹೊರಟಿದ್ದ ಧರ್ಮರಾಜ-ನಿಗೆ ಸೇರಿದ ನಾಯಿಯೊಂದು ಬೊಗಳುತ್ತ ನಡೆದಿತ್ತು. ನಾಯಿಯ ಧ್ವನಿ ಕೇಳಿ, ಶಬ್ದ ಕೇಳಿಯೇ ಬಾಣದಿಂದ ಹೊಡೆಯಬಲ್ಲವನಾಗಿದ್ದ ಏಕಲವ್ಯ, ಅದರ ಬಾಯಿಯಲ್ಲಿ ಬಾಣಗಳನ್ನು ತುಂಬಿಸಿದ. ಗಾಯವಾಗದ ರೀತಿಯಲ್ಲಿ ಬಾಣಗಳು ಬಾಯಿಯಲ್ಲಿ ತುಂಬಿದ್ದ ನಾಯಿ ಪಾಂಡವರ ಬಳಿಗೆ ಓಡಿತು. ಬಾಯ್ತುಂಬ ಬಾಣಗಳಿದ್ದರೂ ಸ್ವಲ್ಪವೂ ಗಾಯವಾಗಿರದಿದ್ದ ಆ ಆಶ್ಚರ್ಯವನ್ನು ಕಂಡು ಚಕಿತರಾದ ಕೌರವರೂ, ಪಾಂಡವರೂ ಹಾಗೆ ಮಾಡಿದವನನ್ನು ಹುಡುಕತೊಡಗಿದರು. ಮಣ್ಣಿನ ದ್ರೋಣಾಕೃತಿಯನ್ನು ಪೂಜಿಸುತ್ತ, ಧನುರ್ವಿದ್ಯೆಯನ್ನು

---

೧. ಕರ್ಣನಿಗೆ ಪರಶುರಾಮರು ಶಾಪ ನೀಡಿದ ವಿವರ ಸಾಮಾನ್ಯವಾಗಿ ಪ್ರಚಾರದಲ್ಲಿದೆ ; ಆದರೆ, ಅವರು ಹೀಗೆ ಕರ್ಣನಿಗೆ ಅಪೂರ್ವವಾದ ವರವನ್ನು ನೀಡಿದ ಈ ಉಲ್ಲೇಖ ಪಂಪಭಾರತ, ಗದುಗಿನ ಭಾರತ ಮೊದಲಾದ ಇತರ ಕೃತಿಗಳಲ್ಲಿ ಬಿಟ್ಟು ಹೋಗಿದೆ. ಇದರಿಂದಾಗಿ ಪರಶುರಾಮರ ಬಗ್ಗೆ ಸಲ್ಲದ ತಪ್ಪು ತಿಳುವಳಿಕೆ ಜನರಲ್ಲಿ ಉಂಟಾಗುವಂತಾಗಿದೆ. ಸುಳ್ಳು ಹೇಳಿ ವಿದ್ಯೆ ಕಲಿತ ಅವನಿಗೆ ಶಾಪವನ್ನು ನೀಡಿದ್ದು ಶಿಕ್ಷೆಯಾಗಿರುವಂತೆ, ಇಂತಹ ವರವನ್ನು ನೀಡಿದ್ದು ಅವರ ಅಪಾರಕಾರುಣ್ಯಕ್ಕೆ ನಿದರ್ಶನವಾಗಿದೆ. ಇವುಗಳನ್ನು ಗಮನಿಸದ ವಿಮರ್ಶೆ ಸರ್ವಥಾ ಸಮಂಜಸವೆನ್ನಿಸಲಾರದು.

ಅಭ್ಯಸಿಸುತ್ತಿದ್ದ ಏಕಲವ್ಯ ಅವರ ಕಣ್ಣಿಗೆ ಬಿದ್ದ. ಪಿಶಾಚಿಗಳಿಂದ ಪೈಶಾಚಾಸ್ತ್ರಗಳನ್ನು ಏಕಲವ್ಯ ಆ ಮುನ್ನವೇ ತಿಳಿದಿದ್ದ. ಆದರೂ ದಿವ್ಯಾಸ್ತ್ರಗಳನ್ನು ಪಡೆಯುವ ಉದ್ದೇಶದಿಂದ ದ್ರೋಣರ ಶಿಷ್ಯತ್ವ ಬಯಸಿದ್ದ. ತನಗೆ ಸಮಾನವಾದ ವಿದ್ಯೆಯನ್ನು ಏಕಲವ್ಯನಲ್ಲಿ ಕಂಡ ಅರ್ಜುನ ದ್ರೋಣರ ಬಳಿ ಬಂದು ನೊಂದು ನುಡಿದ : ''ನನಗೆ ನೀವು ನೀಡಿದ್ದ ವಚನ ಸುಳ್ಳಾಯಿತು.'' ದ್ರೋಣರು ಕೂಡಲೇ ಏಕಲವ್ಯನ ಬಳಿ ಬಂದು ಗುರುದಕ್ಷಿಣೆಯನ್ನಾಗಿ ಅವನ ಬಲಗೈ ಹೆಬ್ಬೆರಳನ್ನೇ ಕೇಳಿದರು. ಅವರ ಪ್ರಸಾದದಿಂದ ಹಿರಿಯಮಟ್ಟದ ವಿದ್ಯೆಯನ್ನು ಗಳಿಸಿದ್ದ ಏಕಲವ್ಯ ಬಲಗೈಯ ಹೆಬ್ಬೆರಳನ್ನು ಕತ್ತರಿಸಿ ಅವರಿಗೆ ಅರ್ಪಿಸಿದ. ಅದರಿಂದಾಗಿ ಮುಷ್ಟಿಯ ಶಕ್ತಿ ಕುಂದಿದ ಏಕಲವ್ಯನ ವಿದ್ಯೆ ಅಂದಿನಿಂದ ಅರ್ಜುನನ ವಿದ್ಯೆಗೆ ಸಮವೆನ್ನಿಸಲಿಲ್ಲ[೧]. ಏಕಲವ್ಯನ ಈ ಕಾರ್ಯದಿಂದ

---

೧. ಈ ಪ್ರಸಂಗದಲ್ಲಿ ದ್ರೋಣಾಚಾರ್ಯರು ಮೇಲ್ನೋಟಕ್ಕೆ ಏಕಲವ್ಯನಿಗೆ ಅನ್ಯಾಯ ಮಾಡಿದಂತೆ ಕಾಣುತ್ತದೆ. ಆದರೆ ವಸ್ತುಸ್ಥಿತಿ ಹಾಗಲ್ಲ. ತಮ್ಮ ಬಳಿಗೆ ಅಸ್ತ್ರವಿದ್ಯೆಯನ್ನು ಕಲಿಯಬಯಸಿ ಬಂದ ಅವನಿಗೆ ಅವರು ಆಗಲೇ ಅದನ್ನು ಉಪದೇಶಿಸಲು ನಿರಾಕರಿಸಿದ್ದರು. ಅದಕ್ಕೆ ಅವರು ಅವನು ನಿಷಾದ ಎಂಬ ಕಾರಣವನ್ನೂ ನೀಡಿದ್ದರು. ನಿಷಾದ ಎಂದರೆ ಬೇಟೆಯಾಡುವವನು(ಬೇಟೆಗಾರ). ಪಶುಪಕ್ಷಿಗಳನ್ನು ಕೊಂದುಹಾಕುವವನು. ಅಂತಹವನಿಗೆ ದಿವ್ಯಾಸ್ತ್ರಗಳನ್ನು ಉಪದೇಶಿಸುವುದನ್ನು ಶಾಸ್ತ್ರಗಳು ನಿಷೇಧಿಸಿವೆ. ಸಹಜವಾಗಿಯೇ ಪ್ರಾಣಿಗಳನ್ನು ಸಂಹರಿಸುವ ವೃತ್ತಿಯ ಅವನಿಗೆ ಅಸ್ತ್ರಗಳನ್ನು ಉಪದೇಶಿಸುವುದು ಕಳ್ಳರಿಗೆ, ದರೋಡೆಕೋರರಿಗೆ ಎಕೆ-೪೭ನಂತಹ ಶಸ್ತ್ರಗಳನ್ನು ನೀಡಿದಂತೆಯೇ ಸರಿ. ಇಂದಿಗೂ ಅಂತಹ ಮಾರಕಾಸ್ತ್ರಗಳನ್ನು ಇತರರು ಉಪಯೋಗಿಸುವುದಿರಲಿ, ಅದನ್ನು ತಮ್ಮೊಂದಿಗೆ ಇಟ್ಟುಕೊಳ್ಳುವುದೂ ಸಹ ಕಾನೂನುರೀತ್ಯಾ ಶಿಕ್ಷಾರ್ಹ ಅಪರಾಧ. ಏಕಲವ್ಯ ಅದನ್ನು ಅರ್ಥಮಾಡಿಕೊಳ್ಳುವ ಬದಲು ಸವಾಲೆಂಬಂತೆ ಸ್ವೀಕರಿಸಿ ಮಣ್ಣಿನ ವಿಗ್ರಹವನ್ನು ಮಾಡಿ ಅದನ್ನು ಆರಾಧಿಸುವ ಮೂಲಕ ಅಸ್ತ್ರವಿದ್ಯೆಯನ್ನು ಗಳಿಸಿಕೊಂಡ. ಎಂದರೆ ಮೂಲತಃ ಅವನ ಪ್ರವೃತ್ತಿಯೇ ಪ್ರತಿಗಾಮಿಯದು. ವಿಷಯ ತಿಳಿದ ದ್ರೋಣರು ಅವನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆಯುವ ಮೂಲಕ ಅವನಿಂದ ಪ್ರಾಣಿಸಂಕುಲಕ್ಕೆ ಒದಗಬಹುದಾದ ಅಪಾಯವನ್ನು ಗಮನಾರ್ಹವಾಗಿ ತಪ್ಪಿಸಿದರು. ಇದು ಮೇಲ್ನೋಟಕ್ಕೇ ನ್ಯಾಯವೆಂದು ತೋರುವ ವಿಚಾರ. ಅನ್ಯಾಯದ ಆರೋಪಕ್ಕೆ ಇಲ್ಲಿ ಅವಕಾಶವಿಲ್ಲ. ಅದಕ್ಕಿಂತ ಮಿಗಿಲಾಗಿ ಜರಾಸಂಧನಿಗೆ ಬೆಂಬಲನಾಗಿ ಅವನೊಂದಿಗೆ ಭಗವಂತನಾದ ಶ್ರೀಕೃಷ್ಣನ ವಿರುದ್ಧ ಪ್ರತಿಬಾರಿಯೂ ಯುದ್ಧಕ್ಕೆ ತೆರಳುತ್ತಿದ್ದ ಅವನು ಲೋಕಕಂಟಕ ಎಂಬುದನ್ನು ತಿಳಿಸುತ್ತದೆ. ಇದನ್ನೂ ಏಕಲವ್ಯನ ಕಥೆಗೆ ಮೂಲ ಆಕರವೆನ್ನಿಸಿದ ಮಹಾಭಾರತವೇ ತಿಳಿಸಿದೆ; ಎಂದರೆ ಏಕಲವ್ಯ ಪ್ರಾಣಿಸಂಕುಲಕ್ಕೆ ಮಾತ್ರವಲ್ಲದೆ ಇಡೀ ಜೀವಲೋಕಕ್ಕೇ ಅಪಾಯಕಾರಿಯಾಗಿದ್ದವನು; ದ್ರೋಣರು ಅವನಿಂದಾಗಬಹುದಾಗಿದ್ದ ಈ ಅನರ್ಥವನ್ನು ತಪ್ಪಿಸಿದರು ಎಂಬುದು ಸುವೇದ್ಯ. ಮುಂದೆಯೂ ಏಕಲವ್ಯನು ಶ್ರೀಕೃಷ್ಣನಿಂದಲೇ ಹತನಾದ ವಿವರ ಮಹಾಭಾರತ, ಹರಿವಂಶಗಳಲ್ಲಿ ನಿರೂಪಿತವಾಗಿದೆ. ಶ್ರೀಕೃಷ್ಣ ಸಂಹರಿಸಿದ್ದು ಕೇವಲ ದುಷ್ಟರನ್ನು ಮಾತ್ರವೇ ಅಲ್ಲವೇ : **ವಿನಾಶಾಯ ಚ ದುಷ್ಕೃತಾಮ್**. ಒಬ್ಬ ದುಷ್ಟನಿಗೆ ಮಾಡುವ ಅನ್ಯಾಯ ನಿಜ ಅರ್ಥದಲ್ಲಿ ನ್ಯಾಯವೇ ಆಗುವುದು ಎನ್ನುವ ವಿಚಾರವನ್ನು ಈ ಕಾಲದ ಕಾನೂನು ಸಹ ಒಪ್ಪಿರುವುದು ಇಂದಿನ ಅನೇಕ ನಿದರ್ಶನಗಳಿಂದ ದೃಢಪಟ್ಟಿದೆ ಎಂಬುದು ಸಾಮಾಜಿಕ ನೆಲೆಯಲ್ಲಿ ತಿಳಿದುಬರುವ ವಿಚಾರ. ಇನ್ನು ಆಸ್ತಿಕನೆಲೆಯಲ್ಲಿ ಚಿಂತಿಸಿದಾಗ ಮಹಾಭಾರತ ತಿಳಿಸಿದಂತೆ ಏಕಲವ್ಯನು ಮಣಿಮಂತ ಎಂಬ ಕ್ರೋಧವಶ ದೈತ್ಯರ ಮುಖಂಡ – ಎಂದರೆ ಸಹಜವಾಗಿಯೇ ಭಗವದ್ಗೀತೆ ನಿರೂಪಿಸಿರುವ ಆಸುರೀಸಂಪತ್ತಿನವನು; ಅವನ ಜರಾಸಂಧನ ಸಖ್ಯ ಹಾಗೂ ಶ್ರೀಕೃಷ್ಣದ್ವೇಷ ಇದನ್ನು ದೃಢಪಡಿಸುತ್ತದೆ. ಅಂತಹವನಿಗೆ ಮಾಡಿದ ಅನ್ಯಾಯ ಅನ್ಯಾಯವೆನ್ನಿಸುವುದೇ ಇಲ್ಲ. 'ನಿಕೃತ್ಯಾ ನಿಕೃತಿಂ ಹನ್ಯಾತ್' ಎಂಬುದು ಇಂತಹವರ ಬಗ್ಗೆ

ಪ್ರೀತರಾದ ದ್ರೋಣರು ರೈವತಪರ್ವತದಲ್ಲಿ ಯಾರಿಗೂ ತಿಳಿಯದಂತೆ ಅವನಿಗೆ ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿಸಿಕೊಟ್ಟರು ಮತ್ತು ಅರ್ಜುನನನ್ನು ಧನುರ್ಧಾರಿಗಳಲ್ಲಿ ಶ್ರೇಷ್ಠನನ್ನಾಗಿಸಿದರು.

## ಗೋಮಂತಪರ್ವತದಲ್ಲಿ ಕೃಷ್ಣ-ಬಲರಾಮರು

ಈ ವೇಳೆಗೆ ಎಲ್ಲ ರಾಜರಿಂದ ಕೂಡಿಕೊಂಡ ಜರಾಸಂಧ ಕಾದಲು ಬಯಸಿ ಮತ್ತೊಮ್ಮೆ ಯಾದವರ ಮೇಲೆ ದಂಡೆತ್ತಿ ಬಂದ. ಎಂದೂ ಕುಂದದ ಅಪ್ರತಿಹತ ಬಲೈಶ್ವರ್ಯಯುಕ್ತ-ನಾದರೂ ಕೃಷ್ಣ ಸ್ವೇಚ್ಛೆಯಿಂದ ಮಥುರೆಯನ್ನು ಬಿಟ್ಟು ಹೊರನಡೆದ; ಅಪಾರಸಂಖ್ಯೆಯ ಸೇನೆಯನ್ನು ಹೊಂದಿದ ಪ್ರಬಲಶತ್ರು ಎದುರಿಸಿ ಬಂದಾಗ ಅಲ್ಪಸಾಧನಯುಕ್ತನಾದವನು ಬಲಾಢ್ಯನಾದರೂ ಸಹ ಅನುಸರಿಸಬೇಕಾದ ಶ್ರೇಷ್ಠರಾಜನೀತಿಯನ್ನು ಆ ಮೂಲಕ ತೋರಿಸಿದ. ಬಲರಾಮನೊಂದಿಗೆ ಕೂಡಿಕೊಂಡು ಆ ರೀತಿ ಹೊರಟ ಶ್ರೀಕೃಷ್ಣ ದಕ್ಷಿಣದಿಕ್ಕಿಗೆ ನಡೆದ. ಅನಂತ-ಶಕ್ತಿಯೂ, ಸರ್ವೋತ್ತಮನೂ, ಭಯರಹಿತನೂ ಆದ ಅವನು ಹಾಗೆ ಹೋಗುತ್ತ ದಾರಿಯಲ್ಲಿ ಸಿಕ್ಕ ಪರಶುರಾಮರನ್ನು ಕಂಡು, ತಾವಿಬ್ಬರೂ ಒಬ್ಬರೇ ಆದರೂ ಕ್ರೀಡೆಗೋಸ್ಕರ ಬೇರೊಬ್ಬ ವ್ಯಕ್ತಿಯಿಂದೆಂಬಂತೆ ಅವರಿಂದ ''ಗೋಮಂತಪರ್ವತ ಸುರಕ್ಷಿತಸ್ಥಳ''ವೆಂಬುದನ್ನು ತಿಳಿದು-ಕೊಂಡು ಅಣ್ಣ ಬಲರಾಮನೊಂದಿಗೆ ಅಲ್ಲಿಗೆ ಹೊರಟ.

ಅದೇ ವೇಳೆಗೆ ಕ್ಷೀರಸಾಗರದಲ್ಲಿ ಮುಕ್ತರಲ್ಲದ ದೇವತೆಗಳಿಂದ ಪೂಜೆ ಸ್ವೀಕರಿಸಲೆಂದು ಅವರಿಗೆ ಯೋಗ್ಯವೆನ್ನಿಸಿದ ಅಮುಕ್ತರು ತೆರಳಬಹುದಾದ ಒಂದು ಸ್ಥಾನದಲ್ಲಿ ಶ್ರೀಹರಿ ಕಾಣಿಸಿಕೊಂಡ. ಅವನು ಸಕಲದೇವತೆಗಳೊಂದಿಗೆ ಪೂಜೆಗೊಳ್ಳುತ್ತಿದ್ದ ಆ ಸಮಯದಲ್ಲಿ ಬಲಿ-ಚಕ್ರವರ್ತಿಯೂ ಅಲ್ಲಿಗೆ ಬಂದ. ಅವನಲ್ಲಿರುವ ಅಸುರಾವೇಶವನ್ನು ಬಹಿರಂಗ ಪಡಿಸುವ ಉದ್ದೇಶದಿಂದ ಎಂದೂ ನಿದ್ರೆಯಿಲ್ಲದ ಆ ಸರ್ವೇಶನು ಗಾಢನಿದ್ರೆ ಬಂದವನಂತೆ ಕಣ್ಮುಚ್ಚುತ್ತಾ, ತಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳುವಂತೆ ದೇವತೆಗಳಿಗೆ ಸಂಜ್ಞೆ ಮಾಡಿದ ; ಅವನ ಮನಸ್ಸನ್ನು ಅರ್ಥಮಾಡಿಕೊಂಡ ದೇವತೆಗಳು ತಾವೂ ಕಣ್ಮುಚ್ಚಿ ನಿದ್ರಿಸಿದಂತೆ ನಟಿಸಿದರು. ಅಲ್ಲಿಗೆ ಬಂದ ಬಲಿ ಮೆಲ್ಲನೆ ವಿಷ್ಣುವಿನ ಕಿರೀಟವನ್ನು ಎತ್ತಿಕೊಂಡು ಓಡಿದ. ಅದನ್ನು ಗಮನಿಸಿದ ದೇವತೆಗಳೆಲ್ಲ ಗಹಗಹಿಸಿ ನಕ್ಕರು. ಬ್ರಹ್ಮಾದಿಗಳಿಂದ ಕೂಡಿದ ಪರಮಾತ್ಮನೂ ನಗಲಾರಂಭಿಸಲು, ಗರುಡ ಪಾತಾಳಕ್ಕೆ ಹೋಗಿ ಯುದ್ಧದಲ್ಲಿ ಬಲಿಯನ್ನು ಗೆದ್ದು ಕಿರೀಟವನ್ನು ಹಿಂತೆಗೆದುಕೊಂಡು ಮರಳಿ ಬರುತ್ತಿದ್ದಾಗ ಗೋಮಂತಪರ್ವತದಲ್ಲಿ ಕೃಷ್ಣನನ್ನು ಕಂಡ. ಕೂಡಲೇ ಗರುಡ ಆ ಕಿರೀಟವನ್ನು ಅವನ ತಲೆಯ ಮೇಲಿರಿಸಿ ನಮಸ್ಕರಿಸಿ ಸ್ತುತಿಸಿದ. ಪರಮಾತ್ಮನ ರೂಪಗಳಲ್ಲಿ ಪರಸ್ಪರ ಭೇದವಿಲ್ಲದಿರುವುದರಿಂದ ಆ ಕಿರೀಟ ಕೃಷ್ಣನಿಗೆ ಸರಿಯಾಗಿ ಹೊಂದಿಕೊಂಡಿತು. ಕೃಷ್ಣನ ಇಚ್ಛೆಯಂತೆ ಆ ಕಿರೀಟ ಅದೇ ವೇಳೆಯಲ್ಲಿ ಕ್ಷೀರಸಾಗರದಲ್ಲಿದ್ದ ನಾರಾಯಣರೂಪದ ತಲೆಯ ಮೇಲೂ ಕಾಣಿಸಿಕೊಂಡಿತು. ಹಿಂದೆ ಮೇಲಿನಿಂದ ಇಳಿದು ಬಂದು ಮತ್ತೆ ವೈಕುಂಠಕ್ಕೆ ಮರಳಿದ್ದ

---

ಶಾಸ್ತ್ರಗಳು ತಿಳಿಸಿರುವ ನ್ಯಾಯ. ಹೀಗೆ ದ್ರೋಣರು ಮಾಡಿದ ಕಾರ್ಯದ ಹಿನ್ನೆಲೆಯನ್ನು ಮಹಾಭಾರತ ವಿವರವಾಗಿ ನಿರೂಪಿಸಿದೆ.

ಕೃಷ್ಣನ ಆಯುಧಗಳೂ, ಅದೇ ರೀತಿ ಬಲರಾಮನ ಆಯುಧಗಳೂ ಈಗ ಮತ್ತೆ ಕೆಳಗಿಳಿದು ಬಂದವು. ಬಲರಾಮನ ಹೆಂಡತಿಯಾದ ವಾರುಣಿಯು ಇಂದಿರಾವೇಶದಿಂದ ಕೂಡಿದ ಶ್ರೀ ಎಂಬ ರೂಪದಿಂದ ಅಲ್ಲಿಗೆ ಬಂದಳು. ಅದರಂತೆ ಕಾಂತಿ ಎಂಬ ಮತ್ತೊಂದು ರೂಪದಿಂದಲೂ ಅಲ್ಲಿಗೆ ಬಂದಳು. ಈ ಕಾಂತಿ ಚಂದ್ರನ ಪತ್ನಿಯಾದ ಕಾಂತಿಗಿಂತ ಬೇರೆಯಾದವಳು. ಚಂದ್ರ-ಸಮೂಹಗಳ ಕಾಂತಿಯಿಂದ ಕೂಡಿದ ಬಲರಾಮ ಅವರೊಂದಿಗೆ ಕ್ರೀಡಿಸಿದ ; ವಾರುಣಿಯ ಪೇಯರೂಪದ ಕಾದಂಬರಿಯನ್ನು ಅವನು ಕುಡಿದ.

## ಗೋಮಂತಪರ್ವತದಲ್ಲಿ ಕೃಷ್ಣ-ಬಲರಾಮರ ವೈಭವ

ಕೃಷ್ಣ – ಬಲರಾಮರು ಹೀಗೆ ಅಲ್ಲಿ ಸ್ವೇಚ್ಛೆಯಿಂದ ಕ್ರೀಡಿಸುತ್ತಿದ್ದಾಗ ರಾಜರ ಸಮೂಹದಿಂದ ಕೂಡಿದ ಜರಾಸಂಧ ಅಲ್ಲಿಗೆ ಬಂದು ಗೋಮಂತ ಪರ್ವತವನ್ನು ಸುತ್ತುವರಿದು ಅದಕ್ಕೆ ಬೆಂಕಿ ಇಟ್ಟ. ಅದನ್ನು ನೋಡಿದ ಕೃಷ್ಣ-ರಾಮರು ಅಲ್ಲಿಂದ ಹಾರಿದರು. ಅವರಿಬ್ಬರಿಂದ ಕಾಲಿನಿಂದ ತುಳಿಯಲ್ಪಟ್ಟ ಆ ಪರ್ವತ ಭೂಮಿಯಲ್ಲಿ ಹನ್ನೊಂದು ಯೋಜನದಷ್ಟು ಆಳವಾಗಿ ಮುಳುಗಿ ಮೇಲೆದ್ದಿತು. ಆಗ ಹೊರಹೊಮ್ಮಿದ ಜಲಧಾರೆಯಿಂದ ಎಲ್ಲ ಬೆಂಕಿಯು ನಂದಿಹೋಯಿತು. ಸೇನೆಯನ್ನು ಹೊಕ್ಕ ಅವರಿಬ್ಬರೂ ತಮ್ಮ ಅಸ್ತ್ರಗಳಿಂದ ಎಲ್ಲ ರಾಜರ ಗುಂಪನ್ನು ಹೊಡೆದರು. ಅಲ್ಲಿಗೆ ಬಂದು ಸೇರಿದ ಹಂಸ, ಡಿಬಿಕ, ಏಕಲವ್ಯ, ಕೀಚಕ, ಶಿಶುಪಾಲ, ಪೌಂಡ್ರಕ, ಭಗದತ್ತ, ದಂತವಕ್ರ, ರುಗ್ಮಿ, ಸಾಲ್ವ, ಮೈಂದ, ವಿವಿದ ಮೊದಲಾದವರು ಕೋಪದಿಂದ ಕೃಷ್ಣನನ್ನು ಮುತ್ತಿ ಅವನ ಮೇಲೆ ಶಸ್ತ್ರಾಸ್ತ್ರಗಳ ಮಳೆಗರೆದರು. ಜರಾಸಂಧನ ಸೆರೆಯಲ್ಲಿದ್ದ ಕೃಷ್ಣಭಕ್ತರಾದ ಶಲ್ಯ ಬಾಹ್ಲೀಕ ಮೊದಲಾದವರೂ, ಸೋಮದತ್ತ, ಭೂರಿಶ್ರವಸ್, ವಿರಾಟ, ದ್ರುಪದ ಮೊದಲಾದ ಇತರರೂ ಜರಾಸಂಧನ ಭಯದಿಂದ ಕೃಷ್ಣನ ಮೇಲೆ ಶಸ್ತ್ರಾಸ್ತ್ರಗಳನ್ನೂ, ವೃಕ್ಷಗಳ ಸಮೂಹಗಳನ್ನೂ ಸುರಿಸಿದರು. ಅವರೆಲ್ಲರನ್ನು ಎಂದಿನಂತೆಯೇ ಕೃಷ್ಣ ತನ್ನ ಬಾಣಗಳಿಂದ ಸೂತ, ಕುದುರೆ, ಧ್ವಜ, ಶಸ್ತ್ರ ಕವಚಗಳನ್ನು ಕತ್ತರಿಸಿ, ಸಿಂಹವು ಜಿಂಕೆಗಳನ್ನಟ್ಟುವಂತೆ ಓಡಿಸಿದ. ಕಂಗೆಟ್ಟ ಅವರೆಲ್ಲರೂ ರಕ್ತ ಕಾರುತ್ತ ಅಲ್ಲಿಂದ ಓಡತೊಡಗಿದರು. ಇಪ್ಪತ್ಮೂರು ಅಕ್ಷೋಹಿಣೀ ಸೇನೆಯನ್ನೂ ಸಂಹರಿಸಿದ ಕೃಷ್ಣ ತನ್ನ ಕೈಗೆ ಸಿಕ್ಕ ರುಗ್ಮಿಯನ್ನು ರುಗ್ಮಿಣಿಗೋಸ್ಕರವಾಗಿ ಕೊಲ್ಲದೆ ಬಿಟ್ಟ. ಶಸ್ತ್ರಾಸ್ತ್ರಗಳನ್ನು ರಥವನ್ನು ಕಳೆದುಕೊಂಡಿದ್ದ ರುಗ್ಮಿ ಅಲ್ಲಿ ನಿಲ್ಲದೆ ಪಲಾಯನಗೈದ.

## ಮತ್ತೆ ಸೋತ ಜರಾಸಂಧ

ಬಲರಾಮನೊಂದಿಗೆ ಬಹಳ ಹೊತ್ತು ಹೋರಾಡಿದ ಜರಾಸಂಧ, ಅವನ ಮುಸಲದ ಪೆಟ್ಟಿಗೆ ಪ್ರಜ್ಞೆ ತಪ್ಪಿ ಬಿದ್ದ. ಬಹಳ ಹೊತ್ತಿನ ಮೇಲೆ ಮತ್ತೆ ಎಚ್ಚೆತ್ತ ಅವನು ಕೋಪದಿಂದ ತನ್ನ ಗದೆಯನ್ನು ಬಲರಾಮನ ಎದೆಯ ಮೇಲೆ ಅಪ್ಪಳಿಸಿದ. ಗಾಢವಾದ ಅದರ ಪೆಟ್ಟಿಗೆ ಬಲರಾಮ ಕೂಡಲೇ ಮೂರ್ಛಿತನಾಗಿ ಬಿದ್ದ. ಜರಾಸಂಧನಿಗೆ ಬ್ರಹ್ಮದೇವರು ನೀಡಿದ್ದ ಅಜೇಯತ್ವ ವರವಿದ್ದುದರಿಂದ ಬಲರಾಮನಿಗೆ ಈ ರೀತಿಯಾಯಿತು. ಹಿಂದೆ ಜರಾಸಂಧನನ್ನು ಹಿಡಿದಿದ್ದು ಬಲರಾಮನಲ್ಲಿದ್ದ

ಶುಕ್ಲಕೇಶರೂಪದ ಕೃಷ್ಣನೇ ಆಗಿದ್ದ. ಬಲರಾಮನ ಅಂತಹ ಪರಿಸ್ಥಿತಿಯನ್ನು ಕಂಡ ಕೃಷ್ಣ ತನ್ನ ಗದೆಯನ್ನು ತೆಗೆದುಕೊಂಡು ಜರಾಸಂಧನ ಜತ್ರುಪ್ರದೇಶದ ಮೇಲೆ ಅಪ್ಪಳಿಸಿದ. ಅದರ ಪೆಟ್ಟಿಗೆ ತತ್ತರಿಸಿ ಪ್ರಜ್ಞೆ ತಪ್ಪಿದ ಜರಾಸಂಧ ರಥದಿಂದ ಕೆಳಗುರುಳಿ ಭೂಮಿಯ ಮೇಲೆ ಬಿದ್ದ. ಸ್ವಲ್ಪ ಹೊತ್ತಿನಲ್ಲಿ ಬಲರಾಮ ಎಚ್ಚರಗೊಂಡ. ಅದೇ ಹೊತ್ತಿಗೇ ಜರಾಸಂಧನೂ ಚೇತರಿಸಿಕೊಂಡು ಮೇಲೆದ್ದ. ಕೋಪದಿಂದ ಕೆಂಡವಾಗಿದ್ದ ಬಲರಾಮ ಜರಾಸಂಧನನ್ನು ಕೊಲ್ಲುವ ಉದ್ದೇಶದಿಂದ ಮುಸಲವನ್ನೆತ್ತಿಕೊಂಡು ಅವನತ್ತ ಧಾವಿಸಿದ. ಆಗ ಆಕಾಶವಾಣಿ ಅವನ ಪ್ರಯತ್ನವನ್ನು ತಡೆಯುತ್ತ ಹೀಗೆಂದಿತು - ''ರಾಮ ! ನಿನ್ನಿಂದ ಜರಾಸಂಧನನ್ನು ಕೊಲ್ಲಲಾಗುವುದಿಲ್ಲ. ನಿನ್ನ ಬಲ ಹಾಗೂ ಅಸ್ತ್ರ ಎರಡೂ ಅಮೋಘಗಳೇ. ಅವುಗಳನ್ನು ವ್ಯರ್ಥವೆನ್ನಿಸಿಕೊಳ್ಳಬೇಡ. ಇವನನ್ನು ಕೊಲ್ಲುವ ಬಲಶಾಲಿ ಬೇರೊಬ್ಬನಿರುವನು.'' ಜರಾಸಂಧನನ್ನು ಬಿಟ್ಟು ಬಲರಾಮ ಬೇರೆಡೆಗೆ ತಿರುಗಿದ. ಮತ್ತೆ ನುಗ್ಗಿ ಬಂದ ಜರಾಸಂಧನನ್ನು ಕೃಷ್ಣ ಗದೆಯಿಂದ ಮತ್ತೊಮ್ಮೆ ಹೊಡೆದ. ಈ ಹೊಡೆತಕ್ಕೆ ಜರಾಸಂಧ ಮೈಯೆಲ್ಲ ಜಜ್ಜಿಹೋದವನಾಗಿ ಗಾಢಮೂರ್ಛೆಗೆ ಒಳಗಾದ. ಎಷ್ಟೋ ಹೊತ್ತಿನ ಮೇಲೆ ಎಚ್ಚೆತ್ತ ಅವನು ಭಯದಿಂದ ನಡುಗುತ್ತ ನಾಚಿಕೆಯಿಂದ ಯಾರ ಕಣ್ಣಿಗೂ ಬೀಳದಂತೆ ಉಳಿದ ರಾಜರೊಂದಿಗೆ ಮಗಧದತ್ತ ಪಲಾಯನ ಮಾಡಿದ. ಅದನ್ನು ಗಮನಿಸಿದ ಕೃಷ್ಣ ''ಬದುಕಿಕೋ'' ಎಂದು ಅವನನ್ನು ಆಕ್ರಮಿಸದೆ ಬಿಟ್ಟುಬಿಟ್ಟ. ಆದರೂ ಮತ್ತೆಮತ್ತೆ ಅನೇಕಬಾರಿ ಕೃಷ್ಣನನ್ನು ಎದುರಿಸಿದ ಅವನು ಪ್ರತಿಬಾರಿಯೂ ರಾಜರೊಂದಿಗೆ ಕೂಡಿಕೊಂಡು ಹೀಗೆ ಸೋತು ಓಡುತ್ತಿದ್ದ.

## ಶೃಗಾಲವಾಸುದೇವನ ವಧೆ

ಜರಾಸಂಧನನ್ನು ಗೆದ್ದ ಕೃಷ್ಣ ಬಲರಾಮನೊಂದಿಗೆ ಯುದ್ಧದಲ್ಲಿ ಆ ಮೊದಲೇ ಸೋತಿದ್ದ ಸೋದರತ್ತೆಯ ಪತಿಯಾದ ತನ್ನ ಭಕ್ತನೂ ಆದ ದಮಘೋಷನ ಜೊತೆಯಲ್ಲಿ ''ಮಹಾಲಕ್ಷ್ಮಿಯ ಕ್ಷೇತ್ರವಾದ ಕರವೀರವನ್ನು ನೋಡಲು ಹೋಗೋಣ'' ಎಂದು ಅವನಿಂದ ಆಹ್ವಾನಿತನಾಗಿ ತೆರಳಿದ. [೧]ದನು ಎಂಬ ಗಂಧರ್ವನೇ ಆ ದಮಘೋಷನಾಗಿ ಜನಿಸಿದ್ದ. ತನ್ನ ಪಟ್ಟಣಕ್ಕೆ ಅವರು ಬಂದಿದ್ದನ್ನು ತಿಳಿದ ಶೃಗಾಲವಾಸುದೇವನು ಕೋಪದಿಂದ ಎದುರಿಸಿ ಬಂದ. ಸೂರ್ಯನ ವರದಿಂದ ಅವಧ್ಯನೆನ್ನಿಸಿದ್ದ ಅವನು ಸೂರ್ಯ ನೀಡಿದ್ದ ರಥವನ್ನೇರಿ ಕೃಷ್ಣನ ಮೇಲೆ ಶಸ್ತ್ರಗಳನ್ನು ಬಿಡುತ್ತ ನುಗ್ಗಿದ. ಅವನ ಶಿರಸ್ಸನ್ನು ಕೃಷ್ಣ ಚಕ್ರದಿಂದ ಕತ್ತರಿಸಿ ಹಾಕಿದ; ಚಕ್ರದಿಂದ ಅವನ ದೇಹವನ್ನು ಎರಡಾಗಿ ಸೀಳಿದ. ಭಕ್ತನಾದ ಶೃಗಾಲಪುತ್ರ ಶಕ್ರದೇವನನ್ನು ರಾಜ್ಯದಲ್ಲಿ ಅಭಿಷೇಕಿಸಿ ಅಣ್ಣನೊಂದಿಗೆ ಮಥುರೆಗೆ ಹಿಂದಿರುಗಿದ ; ಆ ಶಕ್ರದೇವ ಮಣಿಭದ್ರ ಎಂಬವನ ಅಂಶ.

---

೧. ಈ ದನು ಗಂಧರ್ವನು ರಾಮಾಯಣಕಾಲದಲ್ಲಿ ಕಬಂಧ ಎಂಬ ಹೆಸರಿನಿಂದ ತ್ರಿಜಟೆಯ ಮಗನಾಗಿ ಜನಿಸಿದ್ದವನು ; ಶ್ರೀರಾಮಲಕ್ಷ್ಮಣರಿಂದ ಹತನಾಗಿ ಉದ್ಧಾರನಾಗಿದ್ದ ಅವನು ಇಲ್ಲಿ ಹೀಗೆ ಮತ್ತೊಮ್ಮೆ ಅವತರಿಸಿ ಬಂದಿದ್ದ.

ಹೀಗೆ ಬಲಿಷ್ಠನಾದವನು ಸೇನೆಯನ್ನು ಬಿಟ್ಟು ದೂರದಿಂದಲೇ ಯುದ್ಧಮಾಡಿ ತನ್ನ ಸೇನೆಯನ್ನು ರಕ್ಷಿಸಿಕೊಳ್ಳಬೇಕು ಎಂಬ ನೀತಿಯನ್ನು ತೋರಿಸಿದ ಸರ್ವಶಕ್ತನಾದ ಶ್ರೀಕೃಷ್ಣ ಮತ್ತೆ ಮಥುರಾಪಟ್ಟಣವನ್ನು ಸೇರಿ ಎಲ್ಲರಿಂದ ಪೂಜಿತನಾದ.

## ಕೃಷ್ಣನಿಗೆ ಅಂಜಿದ ಜರಾಸಂಧಾದಿಗಳು

ದಮಘೋಷನು ತನ್ನ ಪಟ್ಟಣಕ್ಕೆ ತೆರಳಿದ ; ಆ ಬಳಿಕ ರುಗ್ಮಿಣಿಯ ಸ್ವಯಂವರದ ಸಿದ್ಧತೆಗಳು ನಡೆದಿದ್ದ ವಾರ್ತೆ ಕೃಷ್ಣನಿಗೆ ತಿಳಿಯಿತು. ರುಗ್ಮಿಣಿಯನ್ನು ಕೃಷ್ಣನಿಗೆ ಕೊಡಬೇಕೆಂಬ ವಿಚಾರವನ್ನು ಕೃಷ್ಣದ್ವೇಷಿಯಾದ ರುಗ್ಮಿ ತಡೆದು ರುಗ್ಮಿಣಿಯ ಸ್ವಯಂವರವನ್ನು ಘೋಷಿಸಿದ ; ಅದಕ್ಕಾಗಿ ಜರಾಸಂಧ, ಸಾಲ್ವ, ಪೌಂಡ್ರಕ, ಶಿಶುಪಾಲ ಮೊದಲಾದ ಭಯಂಕರ ಪರಾಕ್ರಮಿಗಳು ಕುಂಡಿನಪುರದತ್ತ ನಡೆದರು. ನೆನೆದ ತಕ್ಷಣ ಧಾವಿಸಿ ಬಂದ ಗರುಡನ ಮೇಲೆ ಕುಳಿತು ಕೃಷ್ಣನೂ, ಕುಂಡಿನಪುರದತ್ತ ಹೊರಟ. ಗರುಡನ ರೆಕ್ಕೆಯ ಗಾಳಿಯ ಹೊಡೆತಕ್ಕೆ ಹಾದಿಯಲ್ಲಿ ಹೊರಟಿದ್ದ ಜರಾಸಂಧಾದಿಗಳೆಲ್ಲ ಉರುಳಿಬಿದ್ದರು. ''ಶ್ರೀಹರಿಯ ವಾಹನದ ಬಲವೇ ಇಷ್ಟೆಂದಮೇಲೆ ಶ್ರೀಹರಿಯ ಬಲ ಎಷ್ಟಿದ್ದೀತು ! ಏನು ಮಾಡಿದರೆ ತಾನೇ ನಮಗೆ ಸುಖವಾದೀತು !'' ಎಂಬುದಾಗಿ ಅವರೆಲ್ಲ ವಿಚಾರ ನಡೆಸಿದರು. ಆಗ ಜರಾಸಂಧ : ''ಜಯಶೀಲನಾಗಿರುವ ಇವನು ಕ್ಷೀರಾಬ್ಧಿಶಾಯಿಯೂ, ಪಕ್ಷಿವಾಹನನೂ ಆಗಿರುವ ಸಾಕ್ಷಾತ್ ನಾರಾಯಣನೇ ಸರಿ. ಇವನೊಬ್ಬನಿಂದಲೇ ನಾವು ಯುದ್ಧದಲ್ಲಿ ಎಲ್ಲರೀತಿಯ ಸೋಲನ್ನು ಕಂಡಿದ್ದೇವೆ. ನಾವೆಲ್ಲ ಒಟ್ಟಾಗಿಯೂ ಇವನಿಂದ ಹಲವಾರು ಸಲ ಸೋತಿದ್ದೇವೆ. ಹಿಂದೆ ಒಮ್ಮೆ ಇವನ ಅಣ್ಣ ನನ್ನನ್ನು ಕೊಲ್ಲಲೆಂದೇ ಹೊರಟಿದ್ದ. ಆಗ ಅಶರೀರವಾಣಿಯೊಂದರ ಮಾತಿನಿಂದ ಕೈಗೆ ಸಿಕ್ಕಿದ್ದ ನನ್ನನ್ನು ಹೊಡೆಯದೇ ಬಿಟ್ಟುಬಿಟ್ಟ. ತಾನು ಮಾತ್ರ ಯಾವ ರೀತಿಯಿಂದಲೂ ಪೆಟ್ಟು ತಿನ್ನದೆ ನಮ್ಮನ್ನು ಮತ್ತೆ ಮತ್ತೆ ತೃಣಪ್ರಾಯರನ್ನಾಗಿಸುತ್ತಿರುವ ಇವನ ಬಲವನ್ನು ಹೇಳುವುದೇನಿದೆ? ಇಂತಹ ಉತ್ಕಟವಾದ ಸಂಕಟಪರಿಸ್ಥಿತಿಯಲ್ಲಿ ನಮಗೆ ಏನು ಮಾಡಿದರೆ ಒಳಿತಾದೀತೋ?'' ಎಂದು ಹೇಳಿ ಕಂದಿದ ತನ್ನ ಮುಖವನ್ನು ಕೆಳಕ್ಕೆ ಮಾಡಿದ.

## ಶಿಶುಪಾಲ ದಂತವಕ್ರರ ಹಿತೋಕ್ತಿ

ಹಿಂದೆ ಶ್ರೀಹರಿಯ ಪಾರ್ಷದನಾಗಿದ್ದುದರಿಂದ ಒಮ್ಮೊಮ್ಮೆ ಸರಿಯಾಗಿಯೇ ಯೋಚಿಸುತ್ತಿದ್ದ ಶಿಶುಪಾಲ, ದಂತವಕ್ರನೊಂದಿಗೆ ಕೂಡಿಕೊಂಡು ಹೀಗೆ ಹೇಳಿದ : ''ರಾಜಶ್ರೇಷ್ಠನೇ ! ಕೇಳು. ಹರಿಯನ್ನು ಬ್ರಹ್ಮರುದ್ರರಿಗೂ ಸ್ವಾಮಿಯೆಂದು ಕೆಲವರು ಹೇಳುವರು. ಪ್ರಾಯಶಃ ಅದು ಸುಳ್ಳಲ್ಲವೆಂದು ತೋರುವುದು. ಅವನನ್ನು ಕಂಡಾಗ ಅವನ ಬಗ್ಗೆ ನಮ್ಮಿಬ್ಬರಲ್ಲೂ ಒಮ್ಮೊಮ್ಮೆ ವಿಶೇಷವಾದ ಭಕ್ತಿಯೂ ಮತ್ತೆ ಕೆಲವೊಮ್ಮೆ ಕ್ರೋಧವೂ ಉಂಟಾಗುವುದು. ಇದಕ್ಕೆ ಕಾರಣ ನಮಗೆ ತಿಳಿಯದಾದರೂ, ಅವನು ದೊಡ್ಡವನೆಂಬುವುದರಲ್ಲಿ ಮಾತ್ರ ನಮಗೆ ಸಂಶಯವಿಲ್ಲ. ಸುಖವು ಬೇಕಾದಲ್ಲಿ ನಾವೆಲ್ಲ ವೈರವನ್ನು ಬಿಟ್ಟು ಅವನನ್ನು ಶರಣು ಹೊಂದುವುದೇ ಲೇಸು.

ಇದರ ಹೊರತು ಸುಖ ನೀಡುವ ಬೇರಾವ ಮಾರ್ಗವೂ ತೋಚುತ್ತಿಲ್ಲ.'' ಹೀಗೆಂದ ಅವರಿಬ್ಬರನ್ನು ಜರಾಸಂಧ ಸುಟ್ಟುಬಿಡುವಂತೆ ನೋಡಿದ. ಗಟ್ಟಿಯಾಗಿ ನಗುತ್ತ ಎದ್ದುನಿಂತ ಸೌಭಪತಿಯಾದ ಸಾಲ್ವ ಅವರಿಬ್ಬರನ್ನು ನಿಂದಿಸುತ್ತ, ಬುಸುಗುಟ್ಟುತ್ತಿದ್ದ ಜರಾಸಂಧನತ್ತ ತಿರುಗಿ ಅರಿಕೆ ಮಾಡಿಕೊಂಡ : ''ಸ್ವಯಂ ಜನಾರ್ದನನೇ ಕೃಷ್ಣನಾಗಿ ನಮ್ಮನ್ನು ಕೊಲ್ಲಲೆಂದು ಯಾದವರಲ್ಲಿ ಜನಿಸಿ ಬಂದಿದ್ದಾನೆಂಬುದೇನೋ ನಿಜ ; ನಾವಾದರೋ ದಾನವೇಶ್ವರರು ; ದೃಢವಾಗಿ ಹರಿಯನ್ನು ದ್ವೇಷಿಸುವುದೇ ನಮ್ಮ ಧರ್ಮ ; ಸ್ವಧರ್ಮಪಾಲನೆಯಲ್ಲಿ ಸತ್ತರೂ ನಮಗೆ ಸದ್ಗತಿಯಾಗುವುದು ಖಂಡಿತ ; ಶಿವನೇ ನಮ್ಮ ಪರದೇವತೆ ;  ನೀನೇ ನಮ್ಮ ಗುರು ; ಹರಿಯೇ ನಮ್ಮ ಶತ್ರು'' ಸಾಲ್ವನ ಈ ಮಾತುಗಳನ್ನು ಕೇಳಿದ ಜರಾಸಂಧ : ''ಭಲೇ, ಭಲೇ !'' ಎಂದು ಅವನನ್ನು ಹೊಗಳಿದ. ಈ ರೀತಿ ದುಷ್ಟಮತಿಗಳಾದ ರುಗ್ಮಿಯೇ ಮೊದಲಾದ ಇತರರು, ಶಿಶುಪಾಲ ದಂತವಕ್ರರು ಯುದ್ಧಮಾಡಬೇಕೆಂಬ ದೃಢನಿಶ್ಚಯವನ್ನು ಹೊಂದಿದರು. ''ನಾವೆಲ್ಲ ಕೃಷ್ಣನನ್ನು ಸದಾ ದ್ವೇಷಿಸುವೆವು'' ಎಂದು ವಚನ ನೀಡಿ ಗುರು ಜರಾಸಂಧನ ಪ್ರೀತಿಗೆ ಶಿಶುಪಾಲ ದಂತವಕ್ರರು ಮತ್ತೆ ಪಾತ್ರರಾದರು.

## ಕೃಷ್ಣನನ್ನು ಅವಮಾನಿಸುವ ದುಷ್ಟಯೋಜನೆ

ಒಟ್ಟಾಗಿ ಸೇರಿದ ಆ ಕೇಡುಬುದ್ಧಿಯ ಜನರು ಮತ್ತೆ ಮಂತ್ರಾಲೋಚನೆ ನಡೆಸಿದರು - ''ಕೃಷ್ಣ ಇಲ್ಲಿಗೆ ಬಂದರೆ ಖಂಡಿತವಾಗಿಯೂ ರುಗ್ಮಿಣಿಯನ್ನು ಪಡೆಯುವನು. ಅವನಾದರೋ ತ್ರಿಲೋಕಸುಂದರ ; ರುಗ್ಮಿಣಿಯು ತ್ರಿಲೋಕಸುಂದರಿ ; ಮಾತಿನಿಂದಲೂ ಬಲದಿಂದಲೂ ಅವನು ಸಮಸ್ತಲೋಕವನ್ನು ಗೆದ್ದು ಅವಳನ್ನು ವಶಪಡಿಸಿಕೊಳ್ಳುವನು ; ಜ್ಞಾನಿಶ್ರೇಷ್ಠನೂ, ಶತ್ರುಗಳನ್ನು ಗೆದ್ದವನೂ, ಶ್ರೇಷ್ಠರೂಪಿಯೂ ಆದ ಅವನನ್ನು ಸ್ತ್ರೀಯರಲ್ಲೆಲ್ಲ ಉತ್ತಮಳಾದ ರುಗ್ಮಿಣಿ ಖಂಡಿತವಾಗಿಯೂ ವರಿಸುವಳು ; ಆಗ ನಮ್ಮ ಮನಸ್ಸಿಗೆ ಸಂಪೂರ್ಣ ಗಾಸಿ ಉಂಟಾಗುವುದು. ಬಾಣಗಳಿಂದ ಅವನನ್ನು ಯಾವ ರೀತಿಯಲ್ಲೂ ನಮ್ಮಿಂದ ತಡೆಯಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಹೇಗಾದರೂ ಸ್ವಯಂವರಕ್ಕೆ ಕೃಷ್ಣ ಬರದಂತೆ ನೋಡಿಕೊಳ್ಳುವುದೇ ನಮಗೆ ಉಳಿದಿರುವ ಏಕಮಾತ್ರ ಉಪಾಯ. ಆದ್ದರಿಂದ ನಾವೆಲ್ಲ  ಒಟ್ಟಾಗಿ ಸೇರಿದಾಗ, ಅವನಿಗೆ ಯಾರೂ ಆಸನವನ್ನಾಗಲೀ, ಅರ್ಘ್ಯಾದಿ ಉಪಚಾರಗಳನ್ನಾಗಲೀ ನೀಡಕೂಡದು. ಶ್ರೇಷ್ಠ ಆಸನಗಳ ಮೇಲೆ ಕುಳಿತಿರುವ ನಮ್ಮ ಮುಂದೆ ಅವನು ಭೂಮಿಯ ಮೇಲೆ ಸರ್ವಥಾ ಕುಳಿತುಕೊಳ್ಳಲಾರ. ಅವನು ದೇವತೆಗಳಿಂದ ಪೂಜಿತನಾದವನಷ್ಟೆ ! ಅವಮಾನಕ್ಕೊಳಗಾಗಿ ಅವನು ಕೋಪದಿಂದ ಅಲ್ಲಿಂದ ತನ್ನ ಪಟ್ಟಣಕ್ಕೆ ಹೊರಟು ಹೋಗುವನು. ಆಗ ನಾವು ಸ್ವಯಂವರವನ್ನು ನಡೆಸೋಣ.'' ಎಲ್ಲ ರಾಜರ ಈ ಒಮ್ಮತದ ನಿರ್ಣಯವನ್ನು ಭೀಷ್ಮಕನ ತಮ್ಮನಾದ ಕ್ರಥ ತಿಳಿದುಕೊಂಡು, ಶೀಘ್ರವಾಗಿ ಕೃಷ್ಣನ ಸನ್ನಿಧಿಯನ್ನು ತಲುಪಿ ಎಲ್ಲವನ್ನು ತಿಳಿಸಿದ.

## ಇಂದ್ರನ ಆದೇಶ

ಇಂದ್ರನ ಅಪ್ಪಣೆಯನ್ನು ತಂದ ದೂತನೊಬ್ಬನು ಜರಾಸಂಧಾದಿರಾಜರ ಬಳಿಗೆ ಬಂದು ''ನಾನು ಶಚೀಪತಿಯಾದ ಇಂದ್ರನಿಗೆ ಪ್ರೀತಿಪಾತ್ರನಾದವನು ; ಸದಾ ಅವನ ಕಣ್ಣಿಗೆ

ಕಾಣುವವನು ; ಪ್ರಭುವಾದ ಅವನು ನಿಮ್ಮೆಲ್ಲರಿಗೂ ಹೀಗೆ ಅಪ್ಪಣೆ ಮಾಡಿರುವನು - ಶ್ರೀಹರಿಯು ಸಮಸ್ತರಾಜರಿಗೆಲ್ಲ ಒಡೆಯನಾಗಿರುವ ಮಹನೀಯನೇ ಹೊರತು ಬೇರಲ್ಲ. ನೀವೆಲ್ಲ ತಕ್ಷಣ ಅವನಿಗೆ ಅಭಿಷೇಕ ಮಾಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ನನ್ನ ವಜ್ರಾಯುಧದ ಪೆಟ್ಟು ನಿಮ್ಮ ತಲೆಯ ಮೇಲೆ ಬೀಳುವುದು ಖಂಡಿತ'' - ಈ ರೀತಿಯ ಇಂದ್ರನ ಆದೇಶವನ್ನು ನಡೆಸತಕ್ಕದ್ದು'' ಎಂದು ಹೇಳಿ ಹೊರಟುಹೋದ. ಈ ಮಾತನ್ನು ಕೇಳಿ ಉರಿದೆದ್ದ ಅವರೆಲ್ಲ ಹೀಗೆ ಮಾತನಾಡಿಕೊಂಡರು : ''ಹಿಂದೆ ನಮಗೆ ಅಷ್ಟು ಹೆದರುತ್ತಿದ್ದ ಈ ಇಂದ್ರ ಈಗ ಎಷ್ಟು ಕೊಬ್ಬಿದ್ದಾನೆ ! ಕೃಷ್ಣನ ಬಲದಿಂದಲೇ ಹೀಗೆಲ್ಲ ನಮ್ಮನ್ನು ಬೆದರಿಸುತ್ತಿರುವನು. ನಾವೆಲ್ಲ ವರದಿಂದ ಅವಧ್ಯರೇ ಆಗಿದ್ದರೂ, ನಮಗೆಲ್ಲ ಕಾಣದಂತೆ ಈ ಇಂದ್ರ ವಜ್ರಾಯುಧದಿಂದ ಹೊಡೆದಲ್ಲಿ ನಮಗೆ ತುಂಬಾ ನೋವಂತೂ ಆಗುವುದು. ಹಿಂದೆ ಗಗನದಿಂದಲೇ ಯುದ್ಧ ಮಾಡುತ್ತಿದ್ದರೂ ಇವನನ್ನು ಸೋಲಿಸಲು ನಮ್ಮಿಂದ ಸಾಧ್ಯವಾಗುತ್ತಿತ್ತು. ಈಗ ನಾವು ಇವನ ಮೇಲೆ ಯುದ್ಧ ಹೂಡಿದರೆ, ಈ ಕಡೆ ಕೃಷ್ಣ ನಮ್ಮನ್ನು ಮುತ್ತುವನು. ಕೃಷ್ಣನಿಗೆ ಅಭಿಷೇಕ ಮಾಡುವುದರಿಂದ ಇಂದ್ರನು ವಜ್ರಪ್ರಯೋಗವನ್ನು ನಿಲ್ಲಿಸುವುದಾದಲ್ಲಿ ನಾವು ಹಾಗೆ ಅಭಿಷೇಕ ಮಾಡುವುದೇ ಒಳ್ಳೆಯದು ; ಇಲ್ಲದಿದ್ದಲ್ಲಿ ವರದಿಂದ ಅವಧ್ಯನಾಗಿದ್ದರೂ ಇಂದ್ರನ ವಜ್ರಾಯುಧದ ಪೆಟ್ಟಿನಿಂದ ದನುವಿನ ತಲೆಯು ಉದರದಲ್ಲಿ ಸೇರಿಹೋದ ಹಾಗೆ ನಮ್ಮ ಪರಿಸ್ಥಿತಿಯೂ ಆದೀತು. ಕೃಷ್ಣನ ಬಲದಿಂದ ಇಂದ್ರ ನಮ್ಮನ್ನು ಅಂತಹ ಸ್ಥಿತಿಗೆ ತಲುಪಿಸುವುದು ನಿಶ್ಚಿತ. ''

''ಜರಾಸಂಧಾದಿ ಎಲ್ಲರಿಂದಲೂ ಅಭಿಷೇಕ ನಡೆದರೆ ಅತೀವ ಭಗ್ನಹೃದಯರಾದ ಇವರನ್ನು ಯಾರೂ ಅನುಸರಿಸಲಾರರು ; ಅಸುರರು ಇವರನ್ನು ಹಿಂಬಾಲಿಸದೆ ಜೀವ ಉಳಿಸಿಕೊಳ್ಳಲು ಕೃಷ್ಣನನ್ನೇ ಶರಣು ಹೊಂದುವರು. ಅದರಿಂದ ಅಸುರನಿಗ್ರಹರೂಪವಾದ ದೇವಕಾರ್ಯವು ಹಾಳಾಗುವುದು'' ಎಂಬುದಾಗಿ ಯೋಚಿಸಿದ ದೇವೇಂದ್ರ - ''ಜರಾಸಂಧ, ರುಗ್ಮಿ, ಸಾಲ್ವ ಹಾಗೂ ಶಿಶುಪಾಲ ಈ ನಾಲ್ವರು ಮಾತ್ರ ಕೃಷ್ಣನ ಅಭಿಷೇಕಕಾರ್ಯದಲ್ಲಿ ಪಾಲ್ಗೊಳ್ಳಬೇಕಾಗಿಲ್ಲ'' ಎಂದು ಮತ್ತೊಂದು ಸಂದೇಶವನ್ನು ತಲುಪಿಸಿದ. ಅವರನ್ನು ಹೊರತುಪಡಿಸಿ ಉಳಿದವರೆಲ್ಲ ಇಂದ್ರನ ಅಪ್ಪಣೆಯಂತೆ ಕೃಷ್ಣನನ್ನು ''ರಾಜಾಧಿರಾಜ'' ಎಂಬುದಾಗಿ ಅಭಿಷೇಕಿಸುವ ಕಾರ್ಯಕ್ಕೆ ಸಿದ್ಧರಾದರು.

## ಭೀಷ್ಮಕನಿಗೆ ಕೃಷ್ಣ ತೋರಿದ ವಿಶ್ವರೂಪ

ಆಗ ಇಂದ್ರ ತನ್ನ ಶ್ರೇಷ್ಠ ಆಸನವನ್ನೇ ಕೃಷ್ಣನಿಗೋಸ್ಕರ ಅರ್ಪಿಸಿದ. ಆಕಾಶದಿಂದಿಳಿದ ಅದರ ಮೇಲೆ ಕೃಷ್ಣ ಕುಳಿತುಕೊಂಡ. ಅನಂತರ ಮುನಿಗಳಿಂದ ಕೂಡಿಕೊಂಡ ಸಕಲರಾಜರೂ ಕೃಷ್ಣನನ್ನು ಬಂಗಾರದ ಕೊಡಗಳಿಂದ ಅಭಿಷೇಕಿಸಿದರು. ಆ ಸಮಯದಲ್ಲಿ ಬ್ರಹ್ಮರುದ್ರೇಂದ್ರಾದಿ ಸರ್ವ-ದೇವತೆಗಳೂ ಗಗನದಲ್ಲಿ ಕಾಣಿಸಿಕೊಂಡು ಕೃಷ್ಣನನ್ನು ಸ್ತುತಿಸಿದರು ; ದೇವಗಾಯಕರೆಲ್ಲ ಕೃಷ್ಣನನ್ನು ಹಾಡಿ ಹೊಗಳಿದರು. ಕೃಷ್ಣನು ಭೀಷ್ಮಕನನ್ನು ಕರೆದು ''ನಿನ್ನ ಮಗಳಿಗೋಸ್ಕರ ಸ್ವಯಂವರವನ್ನು ನಡೆಸುವ ನಿನ್ನ ಬಯಕೆಯು ನಿನಗೆ ಒಳಿತನ್ನುಂಟುಮಾಡದು. ಈ ನಿನ್ನ

ಮಗಳು ಸಾಕ್ಷಾತ್ ಲಕ್ಷ್ಮಿ. ಅವಳನ್ನು ಶ್ರೀಹರಿಗೆ ಒಪ್ಪಿಸದಿದ್ದಲ್ಲಿ ಅಂತಹವಳ ತಂದೆ ಎನಿಸಿಕೊಂಡ ನೀನು ಸಂಕಲ್ಪಭ್ರಷ್ಟನಾಗಿ ಅಧೋಗತಿಯನ್ನೇ ಹೊಂದುವಿ. ನಿನ್ನ ಹಿತಕ್ಕೆಂದೇ ಈ ಮಾತನ್ನು ಹೇಳಿದ್ದೇನೆ ; ಹೆಣ್ಣಿನ ಮೇಲಿನ ಆಸೆಯಿಂದ ಹೀಗೆ ಹೇಳಿದೆನೆಂದು ತಪ್ಪಾಗಿ ತಿಳಿಯಬೇಡ ; ನಾನು ಎಂತಹವನು ಎಂಬುದನ್ನು ನೋಡು'' ಎಂದು ಹೇಳಿ ಕೃಷ್ಣ ವಿಶ್ವರೂಪವನ್ನು ತೋರಿಸಿದ. ಎಣಿಸಲಾಗದ ಮುಖ ಬಾಹುಗಳಿಂದ ಕೂಡಿದ ಅದು ಅನಂತತೇಜಸ್ಸಿನಿಂದ ತುಂಬಿತ್ತು ; ಎಣಿಸಲಾಗದ ರೂಪಗಳೂ ಅದರಲ್ಲಿ ತುಂಬಿದ್ದವು ; ರಮಣೀಯವಾದ ಕಿರೀಟ, ಕುಂಡಲ ಅಂಗದ, ಹಾರ, ನೂಪುರಗಳಿಂದ ಅದು ಒಪ್ಪುತ್ತಿತ್ತು ; ಹೊಳೆಯುವ ಕೌಸ್ತುಭದ ಕಾಂತಿಯಿಂದ ಕಂಗೊಳಿಸುತ್ತಿತ್ತು ; ಅದು ಉತ್ತಮ ವಸ್ತ್ರದಿಂದ ಕೂಡಿತ್ತು ; ''ನನ್ನ ಪತ್ನಿಯೂ ಸಹ ಎಂತಹವಳು ಎಂಬುದನ್ನು ನೋಡು'' ಎಂದು ಅನಂತರೂಪದ ಮಹಾಲಕ್ಷ್ಮಿಯ ಅವತಾರಳಾದ ರುಗ್ಮಿಣಿಯನ್ನೂ ಹಾಗೂ ಅವಳ ಅಧೀನದಲ್ಲಿದ್ದ ಸಮಸ್ತದೇವತೆಗಳನ್ನೂ ತೋರಿಸಿದನು. ಆ ಅದ್ಭುತವನ್ನು ಕಂಡ ಭೀಷ್ಮಕ ತುಂಬಾ ಭಯಪಟ್ಟು, ಕೃಷ್ಣನ ಪಾದಗಳಿಗೆರಗಿ ''ನಿನ್ನ ಅಪ್ಪಣೆಯಂತೆ ನಡೆಯುವೆನು''ಎಂದು ನುಡಿದ. ವಿಶ್ವರೂಪವನ್ನು ಮತ್ತೆ ಮರೆಮಾಡಿ ಪುಂಡರೀಕಾಕ್ಷನಾದ ಕೃಷ್ಣ ಪಕ್ಷಿವಾಹನನಾಗಿ ತನ್ನ ಪಟ್ಟಣಕ್ಕೆ ಮರಳಿದ.

ವರುಣ ಮತ್ತು ಜನಕ ಈ ಇಬ್ಬರೂ ಹಿಂದೆ ಸ್ವಯಂವರವನ್ನು ನಡೆಸಿದ್ದರಾದರೂ, ಅವರು ಹಾಗೆ ಮಾಡುವಾಗ ''ತಮ್ಮ ಪುತ್ರಿ ನಿಶ್ಚಯವಾಗಿಯೂ ಶ್ರೀಹರಿಯನ್ನೇ ಹೊಂದುವಳು'' ಎಂಬ ಭಾವವನ್ನೇ ಹೊಂದಿದ್ದರು. ಸ್ವಯಂವರ ಏರ್ಪಡಿಸುವುದು ಕ್ಷತ್ರಿಯಧರ್ಮ ಎಂಬ ಕಾರಣದಿಂದ ಅವರಿಬ್ಬರ ಆ ಪ್ರಯತ್ನವು ದೋಷವೆನ್ನಿಸಲಿಲ್ಲ.

## ಜರಾಸಂಧಾದಿಗಳಿಗಾದ ವ್ಯಥೆ

ಶ್ರೀಹರಿಯು ಆ ರೀತಿ ಎಚ್ಚರಿಸಿ ಭೀಷ್ಮಕನನ್ನು ವಶಪಡಿಸಿಕೊಂಡಿದ್ದನ್ನು ಕಂಡ ಆ ರಾಜರೆಲ್ಲ ಮತ್ತೆ ಸಭೆ ಸೇರಿದರು. ವೃಕೋದರನಲ್ಲಿ ಕೀರ್ತಿ ಹಾಗು ಉತ್ತಮಧರ್ಮಗಳನ್ನು ತೋರಿಸ-ಲೆಂಬುದಕ್ಕಾಗಿ ಮಾತ್ರ ಕೃಷ್ಣ ಜರಾಸಂಧನನ್ನು ತಾನೇ ಕೊಲ್ಲದೆ ಬಿಟ್ಟಿದ್ದ. ಜರಾಸಂಧ ಅದನ್ನು ಅರಿಯದೆ ''ಶಿವನ ವರದಿಂದಾಗಿ ಕೃಷ್ಣನಿಗೆ ತನ್ನನ್ನು ಕೊಲ್ಲಲಾಗುತ್ತಿಲ್ಲ. ಆದ್ದರಿಂದ ಈ ಉತ್ತಮ ಶಿವನ ಅನುಗ್ರಹದಿಂದಾಗಿ ಈಗ ಸೋತಿದ್ದರೂ ಮುಂದೆ ಗೆಲ್ಲುವೆ'' ಎಂದು ಸಮಾಧಾನಗೊಂಡು ಬಾರಿಬಾರಿಗೆ ಸೋಲುತ್ತಿದ್ದಾಗಲೂ ಪುನಃ ಪುನಃ ಹೊಸದಾಗಿ ಯುದ್ಧಕ್ಕೆ ಬರುತ್ತಿದ್ದ. ಶಿವನನ್ನು ಎಂದೂ ಅವಮಾನಿಸುತ್ತಿರಲಿಲ್ಲ. ಆದ್ದರಿಂದ, ಅವನು ರಾಜರನ್ನು ಕುರಿತು ಮತ್ತೆ ನುಡಿದ – ''ಇವನಿಂದ ಯಾವಾಗಲೂ ಸೋಲುತ್ತಿರುವ ನಮ್ಮ ಪೌರುಷಕ್ಕೆ ಧಿಕ್ಕಾರ ; ರಾಜನಲ್ಲದ ಇವನಿಗೆ ಆಸನ ಕೊಡಬಾರದೆಂದೇನೋ ನಾವು ಆಗ ವಿಚಾರ ಮಾಡಿದ್ದೆವು ; ಅದಕ್ಕೆ ವಿರುದ್ಧವಾಗಿಯೇ ಈಗ ನಡೆದುಹೋಯಿತು. ಇವನು ರಾಜರ ಮಧ್ಯದಲ್ಲಿ ಇಂದ್ರನ ಪೀಠವನ್ನಲಂಕರಿಸಿದ ; ನಾವೆಲ್ಲ ಬಯಸದಿದ್ದರೂ ''ಸಮಸ್ತರಾಜರ ರಾಜ'' ಎಂಬ ಹಿರಿಮೆಯನ್ನು ಹೊಂದಿದ ; ಎಂದಮೇಲೆ ಇನ್ನು ಮುಂದೆ ಆ ಕೃಷ್ಣನನ್ನು ನಾವು ಹೇಗೆ ಜಯಿಸಬೇಕೆಂಬುದನ್ನು ವಿಚಾರ

ಮಾಡಿರಿ ; ಅದೇ ರೀತಿ ಈ ಶಿಶುಪಾಲ ರುಗ್ಮಿಣಿಯನ್ನು ಹೊಂದಲು ಏನಾದರೂ ಉಪಾಯ ಸೂಚಿಸಿರಿ ; ನನ್ನ ದತ್ತುಪುತ್ರನಾದ ಈ ಶಿಶುಪಾಲ ನನ್ನ ಸ್ವಂತ ಮಗನಿಗಿಂತ ಹೆಚ್ಚು ; ಶೈವಶಾಸ್ತ್ರದಲ್ಲಿ ನನ್ನ ಶಿಷ್ಯರಾಗಿರುವ ರುಗ್ಮಿ, ಸಾಲ್ವ, ಪೌಂಡ್ರಕ, ಮೊದಲಾದ ರಾಜರೇ ನೀವು ನನ್ನ ಬಯಕೆಯನ್ನು ಈಡೇರಿಸಿರಿ.''

## ಕಾಲಯವನನ ವೃತ್ತಾಂತ

ರುಗ್ಮಿಯೊಂದಿಗೆ ಸಮಾಲೋಚಿಸಿದ ಸೌಭಪತಿಯಾದ ಸಾಲ್ವ ಹೇಳಿದ – ''ಸ್ವಯಂವರದ ವಿಚಾರವನ್ನು ಬಿಡಿ ; ತನ್ನ ತಂಗಿ ರುಗ್ಮಿಣಿಯನ್ನು ರುಗ್ಮಿ ಶಿಶುಪಾಲನಿಗೆ ಕೊಡುವನು. ವಯಸ್ಸಾಗಿ ಶಕ್ತಿ ಕುಂದಿರುವ ಇವನ ತಂದೆ ಮಗನ ಈ ನಿರ್ಧಾರಕ್ಕೆ ಹೇಗೂ ಅಡ್ಡಿಯಾಗಲಾರ ; ಇನ್ನು ಕೃಷ್ಣ ತಾನೇ ಬಂದು ರುಗ್ಮಿಣಿಯನ್ನು ಎತ್ತಿಕೊಂಡು ಹೋಗುವ ಭಯ ಮಾತ್ರ ಇದೆ ; ಅದಕ್ಕೆ ಆ ಮುಂಚಿತವಾಗಿ ಕೃಷ್ಣನನ್ನೇ ನಾವು ಇಲ್ಲವಾಗಿಸಬೇಕು ; ಅದಕ್ಕೊಂದು ಉಪಾಯವನ್ನು ನಾನು ಮಾಡಿದ್ದೇನೆ. ಗರ್ಗನೆಂಬ ಮುನಿಯನ್ನು ಅವನ ಭಾವಮೈದುನ ಒಮ್ಮೆ ಆಕ್ಷೇಪಿಸಿದ. ಪುರೋಹಿತನಾದ ಗರ್ಗಮುನಿಯನ್ನು ಷಂಡ ಎಂಬುದಾಗಿ ಪರಕೀಯನೊಬ್ಬ ಕರೆದುದನ್ನು ಕಂಡು ವೃಷ್ಣಿಗಳು ನಕ್ಕರು.

ಅವರ ಮೇಲೆ ಕ್ರುದ್ಧನಾದ ಗರ್ಗಮುನಿ – ''ನೀವೆಲ್ಲ ಯಾವ ಕೃಷ್ಣನ ಬೆಂಬಲದಿಂದಾಗಿ ನನ್ನನ್ನು ಹಾಸ್ಯ ಮಾಡಿದಿರೋ, ಆ ಕೃಷ್ಣನನ್ನು , ಇತರ ಎಲ್ಲ ವೃಷ್ಣಿಗಳನ್ನು ಸಹ ನಾಶಮಾಡುವ ಮಗನನ್ನು ನಾನು ಬೇಗನೆ ಪಡೆಯುವೆ''ಎಂದು ಹೇಳಿ ಕಾಡಿಗೆ ಹೋಗಿ ಶಿವನನ್ನು ಕುರಿತು ಉಗ್ರವಾದ ತಪಸ್ಸನ್ನು ಆಚರಿಸಿದ. ಉಕ್ಕಿನಪುಡಿಯನ್ನು ತಿನ್ನುವಂತಹ ಉಗ್ರತಪಸ್ಸಿನ ಪ್ರಭಾವದಿಂದಾಗಿ ಒಂದೇ ವರ್ಷದಲ್ಲಿ ಶಿವನನ್ನು ಕಂಡು, ತನಗೆ ಕೃಷ್ಣನನ್ನು ಕೊಲ್ಲುವ ಮಗ ಹುಟ್ಟಬೇಕೆಂಬ ವರವನ್ನು ಪಡೆದ. ಸ್ವಭಾವತಃ ವಿಷ್ಣುಭಕ್ತನಾದ ಆ ಗರ್ಗಮುನಿ ಕ್ರೂರದೈತ್ಯರ ಆವೇಶದಿಂದಾಗಿ ಅಂತಹ ಶ್ರೀಹರಿಗೆ ವಿರುದ್ಧವೆನ್ನಿಸುವ ವ್ರತಕ್ಕೆ ಕೈಹಾಕಿ, ನೈಷ್ಠಿಕವ್ರತವನ್ನು ಕೈಬಿಟ್ಟ. ಅಸುರೆ ಅಪ್ಸರೆಯೊಬ್ಬಳು ಬಲಿಷ್ಠಪುತ್ರನನ್ನು ಹೊಂದುವ ಬಯಕೆಯಿಂದ ಗೋಪಿಕಾಸ್ತ್ರೀಯರ ಮಧ್ಯದಲ್ಲಿ ಒಬ್ಬಳಾಗಿ ಸೇರಿಕೊಂಡು ಆ ಮುನಿಯನ್ನು ಕೂಡಿದಳು. ಗೋಪಿಕಾಸ್ತ್ರೀಯರ ಮೂಲಕ ಮಕ್ಕಳಿಲ್ಲದ ಯವನರಾಜನೊಬ್ಬನಿಂದ ಪೂಜಿಸಲ್ಪಟ್ಟ ಆ ಮುನಿಯ ಮನಸ್ಸು ವಿಕಾರಗೊಂಡಿತು. ಆ ಅಪ್ಸರೆಯಲ್ಲಿ ಮಗನೊಬ್ಬನನ್ನು ಹುಟ್ಟಿಸಿ, ಕ್ರೋಧವಶನಾಗಿ ಬುದ್ಧಿಕೆಟ್ಟ ಮುನಿ ಆ ಯವನನಿಗೆ ನೀಡಿದ. ಶಿವನ ವಿರೋಧಿಯಾದ ಆ ಮುನಿಗೆ ಅದೇ ಸರಿಯಾದುದು. ನೈಷ್ಠಿಕ ಬ್ರಹ್ಮಚರ್ಯಕ್ಕೆ ತಿಲಾಂಜಲಿಯನ್ನಿತ್ತು, ಶ್ರೀಹರಿಯ ವಿರೋಧವನ್ನು ಬಯಸಿದ ಆ ಮುನಿ ಅನಂತರ ಪಶ್ಚಾತಾಪಕ್ಕೆ ಈಡಾಗಿ, ತನ್ನ ತಪ್ಪನ್ನು ಹಳಿದುಕೊಂಡ. ''ಪಾಪಿಷ್ಠನಾದ ನನ್ನನ್ನು ಕಾಪಾಡು'' ಎಂದು ಶ್ರೀಹರಿಯನ್ನೇ ಶರಣುಹೊಕ್ಕ. ವಿಷ್ಣುವಿನ ಅಪ್ಪಣೆಯಂತೆ ಅವನು ಅನಂತರ ವೈಷ್ಣವ ತಪಸ್ಸಿನಲ್ಲಿ ನಿರತನಾದ. ಯಾವಾಗಲೂ ಶಿವನನ್ನು ಪೂಜಿಸುವ ಭಾಗ್ಯ ಆ ಮುನಿಗೆ ಎಲ್ಲಿಂದ ತಾನೇ ಬಂದೀತು ! ನಿನ್ನಂತಹ ದಾನವರು ಮಾತ್ರವೇ ಯಾವಾಗಲೂ

ಶಿವಪೂಜೆಯಲ್ಲಿ ನಿರತರಾಗಿರಲು ಸಾಧ್ಯ. ಅವನಿಗೆ ಕಾಲ ಎಂಬ ಮಗ ಜನಿಸಿದ. ಕೃಷ್ಣನನ್ನು ಕೊಲ್ಲುವ ಕಾಲಕ್ಕಾಗಿಯೇ ಯಾವಾಗಲೂ ಕಾಯುತ್ತಿರುವುದಕ್ಕಾಗಿ ಅವನಿಗೆ 'ಕಾಲ' ಎಂಬ ಹೆಸರೇ ಬಂದಿತು. ಯವನ ಅವನನ್ನು ರಾಜ್ಯದಲ್ಲಿ ಅಭಿಷೇಕಿಸಿದ. ನಿನ್ನ ಶಿಷ್ಯನೇ ಆಗಿರುವ ಅವನು ಶಿವನಲ್ಲಿ ಅಪಾರಭಕ್ತಿಯನ್ನು ಹೊಂದಿರುವನು. ಅಪಾರಸೇನೆಯಿಂದ ಕೂಡಿರುವ ಅವನು ತುಂಬಾ ಬಲಶಾಲಿಯೂ ಆಗಿರುವನು. ನಿನ್ನ ಅಪ್ಪಣೆ ದೊರೆತರೆ ಶೀಘ್ರವಾಗಿ ನಾನು ಅವನ ಬಳಿಗೆ ಹೋಗುವೆ. ಭೂಮಿಯಲ್ಲಿ ಕೃಷ್ಣನಿಲ್ಲದಂತೆ ಮಾಡಿ ನಾವೆಲ್ಲ ಸುಖಿಸೋಣ. ಅನಂತರ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡೋಣ. ದೇವಪಕ್ಷದವರನ್ನೆಲ್ಲಾ ನಾಶಪಡಿಸಿ ನಾವೆಲ್ಲ ಸ್ವೇಚ್ಛೆಯಿಂದಿರಬಹುದು.'' ಈ ಮಾತನ್ನು ಕೇಳಿದ ಜರಾಸಂಧನ ಮನಸ್ಸು ಮುದುಡಿತು. ಕಿರೀಟದಿಂದ ಅಲಂಕೃತವಾದ ತನ್ನ ಶಿರಸ್ಸನ್ನು ಕೂಡಲೇ ಕೆಳಗೆ ಬಗ್ಗಿಸಿದ. ಕೈಕೈ ಹೊಸಕಿಕೊಳ್ಳುತ್ತಾ, ತನ್ನ ಭುಜಗಳನ್ನು ನೋಡಿಕೊಳ್ಳುತ್ತ, ಮೆಲ್ಲಗೆ ಉಸುರಿದ – ''ಕಾರ್ಯ-ಸಿದ್ಧಿಗಾಗಿ ಹೇಗೆ ತಾನೆ ನಾನು ಮತ್ತೊಬ್ಬರನ್ನು ಆಶ್ರಯಿಸಲಿ ; ನನ್ನ ಆಸರೆ ಪಡೆದ ಈ ಭೂಮಂಡಲದ ಜನರೆಲ್ಲ ಅಸಾಧ್ಯವಾದ ಕಾರ್ಯಗಳನ್ನು ಸಾಧಿಸಿಕೊಂಡಿರುವರು ; ಅಂತಹ ಮಗಧಾಧಿಪನಾದ, ಶಿವನ ಪಾದಾರಾಧಕನಾದ, ಸಮಸ್ತರಾಜರ ಒಡೆಯನಾದ ನಾನು ಹಿಂದೆಂದೂ ಮಾಡದಂತಹ ಇಂತಹ ಕಾರ್ಯವನ್ನು ಈಗ ಹೇಗೆ ತಾನೇ ಮಾಡಲಿ?''.

## ಜರಾಸಂಧನಿಗೆ ಸಾಲ್ವನ ಸಾಂತ್ವನ

ಸಾಲ್ವರಾಜ ಕೂಡಲೇ ಉತ್ತರಿಸಿದ – ''ನೀನೇ ಹೀಗೆ ಮೋಹಪರವಶನಾದರೆ, ನಮ್ಮಂತ-ಹವರ ಪಾಡೇನು? ಪ್ರಭು ! ನಿನ್ನ ಶಿಷ್ಯನಾದ ಅವನಿಂದ ಮಾಡಲ್ಪಟ್ಟ ಕಾರ್ಯ ಹೇಗೆ ತಾನೆ ಬೇರೆಯವರಿಂದಾದ ಕಾರ್ಯವಾದೀತು? ರಾಜರು ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವುದು ತಮ್ಮ ಶಿಷ್ಯರು ಹಾಗೂ ಭೃತ್ಯರ ಮೂಲಕವೇ ಅಲ್ಲವೇ? ನಿನ್ನ ಬಲದ ಬೆಂಬಲದಿಂದಲೇ ನಮ್ಮೆಲ್ಲರ ಕಾರ್ಯಗಳು ನಡೆದಿವೆ. ಕೊಡಲಿ ಹಿಡಿದ ಮನುಷ್ಯನನ್ನು ಯಾರಾದರೂ ಅಶಕ್ತ ಎನ್ನುವರೇ ! ನಿನ್ನವನೇ ಆಗಿರುವ ಆ ಕಾಲಯವನ ನಿನಗೆ ಕುಠಾರವಿದ್ದಂತೆಯೇ ಅಲ್ಲವೇ? ನಿನ್ನ ಶಕ್ತಿಯ ಆಸರೆಯಿಲ್ಲದೆ ಏನು ಮಾಡಲೂ ಅವನು ಸಮರ್ಥನಲ್ಲ. ಕೇವಲ ಕೃಷ್ಣನನ್ನು ಕೊಲ್ಲುವ ವರ ಮಾತ್ರ ಅವನಿಗಿದೆ. ಉಳಿದ ಶತ್ರುಗಳನ್ನು ಗೆಲ್ಲುವ ನೀನೇ ಅವನಿಗೆ ರಕ್ಷಕನಲ್ಲವೆ? ಶಿವನ ಅನುಗ್ರಹದಿಂದ ಉಳಿದೆಲ್ಲರನ್ನು ಗೆಲ್ಲುವ ಶಕ್ತಿ ನಿನ್ನಲ್ಲಿದೆ. ವಿಶೇಷವಾಗಿ ಹರಿಯನ್ನು ಕೊಲ್ಲುವ ಶಕ್ತಿಯಿಂದಾಗಿ ಮಾತ್ರ ಇವನನ್ನು ನಾವು ಕೇಳಿಕೊಳ್ಳುವುದು.'' ಹೀಗೆ ಹೇಳಿದ ನಂತರವೂ ಅತೃಪ್ತನಂತೆಯೇ ಇದ್ದ ಜರಾಸಂಧನನ್ನು ನೋಡಿ ಆ ಸಾಲ್ವನು ಸೌಭವನ್ನೇರಿ ಕಾಲಯವನನ ಬಳಿಗೆ ಹೊರಟೇಬಿಟ್ಟ.

## ಕಾಲಯವನನ ಸಮರಸಿದ್ಧತೆ

ಜರಾಸಂಧನ ಕಡೆಯಿಂದ ಬಂದವನೆಂಬುದನ್ನು ಕೇಳಿ ಸಾಲ್ವನನ್ನು ಕಾಲಯವನ ತ್ವರೆಯಿಂದ ಭಕ್ತಿಪೂರ್ವಕವಾಗಿ ಪೂಜಿಸಿದ. ''ಕೃಷ್ಣದ್ವೇಷಿಗಳಿಗೆಲ್ಲ ಜರಾಸಂಧನೇ ದೇವರು''

ಎಂಬುದಾಗಿ ಹೇಳಿ ಜರಾಸಂಧನಿದ್ದ ದಿಕ್ಕನ್ನು ಸಾಷ್ಟಾಂಗ ನಮಸ್ಕರಿಸಿ ಪೂಜಿಸಿದ. ಸಾಲ್ವನ ಮಾತನ್ನು ಕೇಳಿ ತಕ್ಷಣ ಮೂರುಕೋಟಿ ಅಕ್ಷೋಹಿಣೀಸಂಖ್ಯೆಯ ತನ್ನ ಸೇನೆಯೊಂದಿಗೆ ಕೂಡಿಕೊಂಡು ಹೊರಟು ನಿಂತ. ಅವನ ಕುದುರೆಗಳ ಮಲಮೂತ್ರಗಳಿಂದ ಶಕೃತ್ ಎಂಬ ವೇಗಗಾಮಿನಿಯಾದ ನದಿಯೇ ಹರಿಯಿತು. ಕಲಿಯುಗದಲ್ಲಿ ಅದು ಇನ್ನೂ ವೇಗವಾಗಿ ಹರಿಯುತ್ತದೆ. ಆ ನದಿಯಿಂದ ಮತ್ತೆ ಮತ್ತೆ ನಡೆದ ಲೋಕನಾಶವನ್ನು ಗಮನಿಸಿ ಉಳಿದೆಲ್ಲ ಸ್ಥಳಗಳಲ್ಲಿದ್ದ ಅದರ ಮೂತ್ರಾದಿಗಳನ್ನು ವಾಯು ಒಣಗಿಸಿತು. ಗರುಡಾರೂಢನಾದ ಕೃಷ್ಣನು ಬಲರಾಮನೊಂದಿಗೆ ಕೂಡಿಕೊಂಡು ಸದಾ ಸರ್ವಜ್ಞನೇ ಆದರೂ - ಕ್ರೀಡೆಗಾಗಿ ಹೀಗೆ ಆಲೋಚನೆ ನಡೆಸಿದ - ''ಈ ಯವನ ಯುದ್ಧೇಚ್ಛುವಾಗಿ ನಮ್ಮ ಬಳಿ ಬಂದಿರುವನು. ಇವನೊಂದಿಗೆ ನಾವು ಯುದ್ಧಕ್ಕೆ ಹೋದರೆ, ಜರಾಸಂಧನೂ ಯುದ್ಧಕ್ಕೆ ನುಗ್ಗಿ ಬರುವನು. ಅವನೂ ಕೋಪದಿಂದ ಯಾದವರನ್ನು ಕೊಲ್ಲುವನು. ಹಿಂದೆ ನಮ್ಮನ್ನು ಗೆಲ್ಲಬಹುದೆಂಬ ಆಸೆಯಿಂದ ಯಾದವರನ್ನು ಕೊಲ್ಲುವ ಗೋಜಿಗೆ ಹೋಗಿರಲಿಲ್ಲ, ನಮ್ಮನ್ನು ಗೆಲ್ಲುವ ಆಸೆ ಬಿಟ್ಟಿರುವ ಅವನೀಗ ಯಾದವರನ್ನೇ ಕೊಲ್ಲಲು ಯತ್ನಿಸುವನು. ಆದ್ದರಿಂದ ಸಮುದ್ರದ ಮಧ್ಯದಲ್ಲಿ ಪಟ್ಟಣವೊಂದನ್ನು ನಿರ್ಮಿಸಿ ಅದರಲ್ಲಿ ಸಕಲಯಾದವರನ್ನು ನೆಲೆಗೊಳಿಸಬೇಕು.'' ಹೀಗೆ ಹೇಳಿ ವಿಶ್ವಕರ್ಮನನ್ನು ಕೃಷ್ಣ ಬರಮಾಡಿಕೊಂಡ. ಕೃಷ್ಣನ ಅಪ್ಪಣೆಯಂತೆ ಸಾಗರ ಹಿಂದೆ ಸರಿದು ಉಂಟಾದ ದ್ವೀಪದಲ್ಲಿ ಆ ವಿಶ್ವಕರ್ಮ ಕುಶಸ್ಥಲಿಯನ್ನು ನಿರ್ಮಿಸಿದ. ಹನ್ನೆರಡು ಯೋಜನ ವಿಸ್ತೀರ್ಣದ ಅದು ಕ್ಷೀರಸಾಗರ ಮಧ್ಯದ ಶ್ವೇತದ್ವೀಪವನ್ನು ಹೋಲುತ್ತಿತ್ತು. ಸಮುದ್ರದ ಉಪ್ಪುನೀರನ್ನೆಲ್ಲ ಕೃಷ್ಣ ಅಮೃತತುಲ್ಯವನ್ನಾಗಿಸಿದ. ಸುಧರ್ಮ ಎಂಬ ಹೆಸರಿನ ಇಂದ್ರನ ಸಭಾಭವನವನ್ನು ತಂದು ವಾಯು ಸಮರ್ಪಿಸಿದ. ಅದರೊಂದಿಗೆ ನವನಿಧಿಗಳನ್ನು ಸಹ ಸಮರ್ಪಿಸಿ ವಾಯು ಮರಳಿದ. ಎಲ್ಲ ದೇವತೆಗಳು ತಮ್ಮಲ್ಲಿನ[೧] ಉತ್ತಮ ಪದಾರ್ಥಗಳನ್ನು ಕೃಷ್ಣನಿಗೆ ಸಮರ್ಪಿಸಿದರು.

## ಮತ್ತೊಮ್ಮೆ ಜರಾಸಂಧಾದಿಗಳ ಪರಾಭವ

ಗರುಡನನ್ನು ಬಿಟ್ಟು ಕೃಷ್ಣ ಯುದ್ಧಮಾಡಬಯಸಿದ. ಆ ಮುನ್ನ ಮಥುರೆಯಲ್ಲಿದ್ದವರನ್ನು ಕ್ಷಣಮಾತ್ರದಲ್ಲಿ ಕುಶಸ್ಥಲಿಗೆ ಬಂದು ನೆಲೆಸುವಂತೆ ಮಾಡಿದ. ತಾನು ಮಾತ್ರ ಕೇವಲ ಬಾಹುಗಳಿಂದಲೇ ಯುದ್ಧಮಾಡುತ್ತ ಕಾಲಯವನನನ್ನು ಎದುರಿಸಿದ. ಅನಂತಶಕ್ತಿಯಾದ ಅವನು ಜನರಿಗೆ ರಾಜನೀತಿಯನ್ನು ತಿಳಿಸಿಕೊಡಲೆಂದು ಆ ರೀತಿಯಾಗಿ ಯಾದವರು ದ್ವಾರಕೆಗೆ ವಲಸೆಬಂದು ನೆಲೆಸುವಂತೆ ಮಾಡಿದ. ಅನಾದಿಯಿಂದ ಅನಂತಕಾಲದವರೆಗಿನ ಎಲ್ಲ ಜಗತ್ತು

---

೧. ಮೇಲ್ನೋಟಕ್ಕೆ ದೇವತೆಗಳು ತಮ್ಮ ವಸ್ತುಗಳನ್ನೇ ಶ್ರೀಕೃಷ್ಣನಿಗೆ ಸಮರ್ಪಿಸಿದಂತೆ ಕಾಣುವುದು. ಆದರೆ ಶ್ರೀಮದ್ಭಾಗವತದಲ್ಲಿ ಅವುಗಳೆಲ್ಲಾ ಮೂಲತಃ ಶ್ರೀಕೃಷ್ಣನಿಂದ ಅವರಿಗೆ ಅನುಗ್ರಹಿಸಲ್ಪಟ್ಟ ವಸ್ತುಗಳೇ ಹೊರತು ಅವರ ಸ್ವಂತದ ವಸ್ತುಗಳಾಗಿರಲಿಲ್ಲ ಎಂಬ ಅಂಶ ನಿರೂಪಿತವಾಗಿದೆ. ಇದು 'ಈಶಾವಾಸ್ಯಮಿದಂ ಸರ್ವಂ' ಎಂಬ ಉಪನಿಷದ್ವಾಣಿಗೂ ಸಂವಾದಿಯಾಗಿದೆ.

ಯಾರ ಕಟಾಕ್ಷಮಾತ್ರದಿಂದ ರಕ್ಷಿಸಲ್ಪಡುವುದೋ ಅಂತಹ ಭಗವಂತನೇ ಆದ ಶ್ರೀಕೃಷ್ಣನಿಗೆ ಈ ಯಾದವರ ರಕ್ಷಣೆ ಯಾವ ಲೆಕ್ಕ? ಶಿವನ ವರ ಪಡೆದಿರುವ ಈ ಕಾಲಯವನ ಸಮಸ್ತ-ಸೇನೆಯಿಂದ ಕೂಡಿಯೂ ನಿರಾಯುಧನಾದ ತನ್ನನ್ನು ಎದುರಿಸಲು ಸಮರ್ಥನಾಗಲಾರ ಎಂಬುದನ್ನು ತೋರಿಸಲು ನಿರಾಯುಧನಾಗಿಯೇ ಅವನ ಮೇಲೆ ಯುದ್ಧಕ್ಕೆ ಹೊರಟ. ಕೃಷ್ಣನು [೧]ಕೃಷ್ಣಸರ್ಪವೊಂದನ್ನು ಗಡಿಗೆಯಲ್ಲಿರಿಸಿ, ನಾನು ನಿರಾಯುಧನಾದರೂ ಈ ಕೃಷ್ಣಸರ್ಪದಂತೆ ವೈರಿಗಳಾದ ನಿಮ್ಮನ್ನು ನಾಶಮಾಡಬಲ್ಲೆ ಎಂಬುದಾಗಿ ತಿಳಿಸಿದ. ಗಡಿಗೆಯಲ್ಲಿ ಇರುವೆಗಳನ್ನು ತುಂಬಿಸಿ ಹಾವನ್ನು ಕೊಂದು ಮರಳಿ ಕಳುಹಿಸಿದ ಕಾಲಯವನ ಬಹುಜನರ ಬಲದಿಂದ ಒಂಟಿಯಾದ ನಿನ್ನನ್ನು ಈ ಕೃಷ್ಣಸರ್ಪದಂತೆ ನಾನು ಗೆಲ್ಲಬಲ್ಲೆ ಎಂಬುದಾಗಿ ಉತ್ತರ ನೀಡಿದ. ''ಇದರಲ್ಲಿ ಯಾವುದು ಸತ್ಯ ಎಂಬುದನ್ನು ತೋರಿಸುವೆ'' ಎನ್ನುತ್ತ ಕೃಷ್ಣ ಕೂಡಲೇ ಯವನನ ಮೇಲೆ ನುಗ್ಗಿದ ; ಕೇವಲ ತೋಳುಗಳಿಂದಲೇ ಅವನ ಎಲ್ಲ ಸೇನೆಯನ್ನು ಸಂಹರಿಸಿದ. ಮಹಾಸ್ತ್ರ ಶಸ್ತ್ರಗಳನ್ನು ಬಿಡುತ್ತಿದ್ದ ಯವನನನ್ನು ತನ್ನ ಅಂಗೈಯಿಂದ ಹೊಡೆದು ರಥದಿಂದ ಕೆಳಕ್ಕುರುಳಿಸಿದ ; ಕ್ಷಣಾರ್ಧದಲ್ಲಿ ಅವನ ಆಯುಧ ಹಾಗೂ ವಾಹನಗಳನ್ನು ಬಾಹುಗಳಿಂದಲೇ ನಾಶಮಾಡಿ ಮೂರ್ಛಿತನಾಗಿ ಬಿದ್ದಿದ್ದ ಅವನನ್ನು ದೇವತೆಗಳ ಬೇಡಿಕೆಯೊಂದನ್ನು ಪೂರ್ಣಮಾಡುವ ಕಾರಣದಿಂದಾಗಿ ಹೀಗೆ ಕೊಲ್ಲದೇ ಬಿಟ್ಟ.

## ಕಾಲಯವನನನ್ನು ಸುಟ್ಟ ಮುಚುಕುಂದ

ಹಿಂದೆ ಯೌವ್ವನಾಶ್ವನ ಮಗನಾದ ಮುಚಕುಂದರಾಜನಿಗೆ ವರ ನೀಡಿದ ಸುರಶ್ರೇಷ್ಠರು ವರ ನೀಡುವವರಿಗೂ ಒಡೆಯನಾದ ಶ್ರೀಹರಿಯನ್ನು ಪ್ರಾರ್ಥಿಸಿಕೊಂಡಿದ್ದರು - ''ಇವನು ಬೇಡಿರುವ ಅನರ್ಥಕವಾದ ವರವನ್ನು ಸಾರ್ಥಕವಾಗುವಂತೆ ನೀನು ಅನುಗ್ರಹಿಸಬೇಕು. ಮುಂದೆ ಹುಟ್ಟುವ ಕಾಲಯವನನೆಂಬ ನಿನ್ನ ಶತ್ರುವನ್ನು ಕೊಲ್ಲುವ ಭಾಗ್ಯ ಇವನಿಗೆ ಬರಲಿ.'' 'ಆಗಲಿ' ಎಂದು ಅವರಿಗೆ ನೀಡಿದ್ದ ತನ್ನ ವಚನವನ್ನು ಸತ್ಯಮಾಡಲೋಸುಗ ಮುಚುಕುಂದರಾಜ ಮಲಗಿದ್ದ ಗುಹೆಯ ಬಳಿಗೆ ಕೃಷ್ಣ ತೆರಳಿದ. ಪ್ರಜ್ಞೆ ಮರಳಿದ ಕಾಲಯವನ ಭೂಮಿಯಿಂದ ಮೇಲೆದ್ದು ಹೊರಟಿದ್ದ ಕೃಷ್ಣನನ್ನು ಕೋಪದಿಂದ ಹಿಂಬಾಲಿಸಿ ಓಡಿದ. ಮುಚುಕುಂದ ಮಲಗಿದ್ದ ಗುಹೆಯೊಳಗೆ ಪ್ರವೇಶಿಸಿದ ಶ್ರೀಕೃಷ್ಣ ಅಲ್ಲಿ ಅದೃಶ್ಯನಾಗಿ ನಿಂತ. ಮಲಗಿದ್ದ ಮುಚುಕುಂದನನ್ನು ಮುಕುಂದನೆಂದೇ ಭಾವಿಸಿದ ಯವನ ಕಾಲಿನಿಂದ ಒದ್ದ. ಮುಚುಕುಂದರಾಜ ಕಣ್ತೆರೆದು ಅವನನ್ನು ನೋಡಿದ. ನೋಡುತ್ತಿದ್ದಂತೆಯೇ ಕಾಲಯವನ ಉರಿದು ಬೂದಿಯಾದ. ಆ

---

೧. ಕೃಷ್ಣ ಹೀಗೆ ಕೃಷ್ಣಸರ್ಪವನ್ನು ಕಾಲಯವನನ ಬಳಿಗೆ ಕಳುಹಿಸಿ ಅದನ್ನು ಅವನು ಕೊಲ್ಲುವಂತೆ ಮಾಡಿದ್ದು ಈ ಅರ್ಥದಲ್ಲಾದರೂ ಕೃಷ್ಣನನ್ನು ಕೊಲ್ಲಲೆಂದು ಶಿವನು ಕಾಲಯವನನಿಗೆ ನೀಡಿದ್ದ ವರ ಸತ್ಯವಾಗಲಿ ಎಂಬ ಕಾರಣದಿಂದ ಮಾತ್ರ. ಕೃಷ್ಣನ ಬದಲು ಕೃಷ್ಣಸರ್ಪದ ಹತ್ಯೆಯೊಂದಿಗೆ ಶಿವನ ವರ ಪೂರೈಸಿತು. ಹೀಗೆ ಸರ್ವಸಮರ್ಥನಾದ ಕೃಷ್ಣ ಕೆಲವೊಮ್ಮೆ ಇತರದೇವತೆಗಳ ವರವನ್ನು ಬೇರೊಂದು ಅರ್ಥದಲ್ಲಿ ಸತ್ಯವಾಗುವಂತೆ ಮಾಡಿ ಅವರ ಹಿರಿಮೆಯನ್ನು ರಕ್ಷಿಸುವನು ಎಂಬ ವಿಶೇಷಾಂಶ ಇದರಿಂದ ಸೂಚಿತವಾಗುವುದು.

ವಿಷ್ಣುವೇ ಹಾಗೆ ಅವನನ್ನು ಬೆಂಕಿಯಂತೆ ಸುಟ್ಟುಹಾಕಿದ. ಹಿಂದೆ ಶಿವನ ವರದಿಂದಾಗಿ ದೇವತೆ-ಗಳಿಂದ ಅವಧ್ಯರಾದ ಅನೇಕ ರಾಕ್ಷಸರನ್ನು ಹರಿಯ ವರಬಲದಿಂದ ಮುಚುಕುಂದರಾಜ ಸಂಹರಿಸಿದ್ದ; ದೇವತೆಗಳಲ್ಲಿ – ''ನನಗೆ ದೀರ್ಘಕಾಲ ನಿದ್ರೆ ಬರಬೇಕು ; ನಿದ್ರೆಕೆಡಿಸಿದವನು ನನ್ನ ಕಣ್ಣ ನೋಟದಿಂದಲೇ ಉರಿದು ಹೋಗಬೇಕು'' ಎಂಬುದಾಗಿ ವರವನ್ನು ಬೇಡಿದ್ದ. ಇದರಿಂದಾ-ಗಿಯೇ ಕಾಲಯವನ ಉರಿದುಹೋದದ್ದು. ಕಾಲಯವನನಂತಹ ಪಾಪಿಯ ಸಂಹಾರಕ್ಕೆ ಕಾರಣನಾಗಿ ಅಪಾರಪುಣ್ಯವನ್ನು ಆ ಮುಚುಕುಂದರಾಜ ಪಡೆದ. ದೇವತೆಗಳನ್ನು ಸಂತುಷ್ಟಿ-ಗೊಳಿಸುವ ಕಾರ್ಯ ಸರ್ವಥಾ ವ್ಯರ್ಥವಾಗದು. ಅನಂತರ ಕೃಷ್ಣನನ್ನು ಕಂಡು ಉತ್ತಮವಾಗಿ ಸ್ತುತಿಸಿ ಅವನ ಅಪ್ಪಣೆಯಂತೆ ತಪಸ್ಸನ್ನು ಆಚರಿಸಿ ಅವನು ಮುಕ್ತಿಯನ್ನೇ ಹೊಂದಿದ.

ಗುಹೆಯಿಂದ ಹೊರಬಂದ ಕೃಷ್ಣನು ಎಲ್ಲ ರಾಜರಿಂದಲೂ, ಸೈನ್ಯದಿಂದಲೂ ಕೂಡಿ ಬಂದಿದ್ದ ಜರಾಸಂಧನನ್ನು ಬಾಹುವಿನಿಂದಲೇ ಸೋಲಿಸಿದ. ಅಂಗೈಯಿಂದ ಮುಷ್ಟಿಗಳಿಂದ ವೃಕ್ಷಗಳಿಂದ ಹೊಡೆತ ತಿಂದ ಜರಾಸಂಧನ ಸೈನಿಕರೆಲ್ಲ ಪುಡಿಪುಡಿಯಾಗಿ ಸತ್ತುಬಿದ್ದರು. ಜರಾಸಂಧನೂ ಮೂರ್ಛೆ ಹೊಂದಿ ಉರುಳಿದ. ಸಾಲ್ವ, ಪೌಂಡ್ರಕ, ಶಿಶುಪಾಲ ಮೊದಲಾದ ಎಲ್ಲ ರಾಜರನ್ನು ಅದೇ ರೀತಿ ಸೋಲಿಸಿ, ಶ್ರೀಕೃಷ್ಣ ಅಲ್ಲಿಂದ ಕುಶಸ್ಥಲಿಗೆ ತೆರಳಿದ.

## ರುಗ್ಮಿಣೀಹರಣ

ಎಚ್ಚೆತ್ತ ರಾಜರೆಲ್ಲ ಹಿಂದಿರುಗಿ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಡಿಸುವ ಮೂಲಕ ಕೃಷ್ಣನನ್ನು ಜಯಿಸುವ ಆಸೆಯನ್ನು ಹೊತ್ತು ಮತ್ತೆ ಸಿದ್ಧರಾದರು. ಭೀಷ್ಮಕಸಮೇತವಾದ ಎಲ್ಲ ರಾಜರ ಗುಂಪು ರುಗ್ಮಿಣೀ ಶಿಶುಪಾಲರ ವಿವಾಹವನ್ನು ಮಾಡಲು ಮುಂದಾಯಿತು. ಹಾಗೆ ಅವರೆಲ್ಲ ರುಗ್ಮಿಣಿಯನ್ನು ಶಿಶುಪಾಲನಿಗೆ ಕೊಡಲು ಸಿದ್ಧರಾಗುತ್ತಿರುವ ಸಮಯದಲ್ಲಿ ಲೋಕದ ಸಕಲಸ್ತ್ರೀಯರಲ್ಲಿ ಶ್ರೇಷ್ಠಳಾದ ವಿದರ್ಭರಾಜನ ಕುಮಾರಿಯಾದ ರುಗ್ಮಿಣಿಯು ಒಬ್ಬ ಬ್ರಾಹ್ಮಣೋತ್ತಮನನ್ನು ಕೃಷ್ಣನ ಚರಣಸನ್ನಿಧಿಗೆ ಕಳುಹಿಸಿಕೊಟ್ಟಳು. ಅವನ ಮಾತನ್ನು ಕೇಳಿದ ಕೃಷ್ಣ ಕ್ಷಣಮಾತ್ರದಲ್ಲಿ ವಿದರ್ಭದತ್ತ ನಡೆದ. ಬಲರಾಮನು ಎಲ್ಲ ಯಾದವರೊಂದಿಗೆ ಕೂಡಿಕೊಂಡು ಕೃಷ್ಣನನ್ನು ತಾನೂ ಹಿಂಬಾಲಿಸಿ ನಡೆದ. ಕೃಷ್ಣ ಬರುವುದನ್ನು ಗಮನಿಸಿದ ಎಲ್ಲ ರಾಜರೂ ಬಿಲ್ಲು ಬಾಣಗಳನ್ನು ಸಜ್ಜುಗೊಳಿಸಿಕೊಂಡು ಕನ್ಯಾರಕ್ಷಣಕಾರ್ಯದಲ್ಲಿ ಮಗ್ನರಾದರು. ಧಾರೆಗೆ ಮುಂಚೆ, ತಮ್ಮ ಕುಲದ ಪದ್ಧತಿಯಂತೆ, ದುರ್ಗೆಯನ್ನು ನೋಡುವ ನೆಪದಲ್ಲಿ ಹೊರಬಂದ ರುಗ್ಮಿಣಿಯನ್ನು ರಥದಲ್ಲಿ ಕೂಡಿಸಿಕೊಂಡ ಕೃಷ್ಣ ಎಲ್ಲ ರಾಜರೂ ನೋಡು-ತ್ತಿದ್ದಂತೆಯೇ ದ್ವಾರಕೆಯತ್ತ ಪ್ರಯಾಣ ಬೆಳೆಸಿದ. ಕೋಪಗೊಂಡ ಜರಾಸಂಧ ಮೊದಲಾದವರು ಬಾಣಗಳ ಮಳೆಗರೆಯುತ್ತಾ ಕೃಷ್ಣನನ್ನು ಬೆನ್ನಟ್ಟಿ ಹೊರಟರು. ಅವರೆಲ್ಲರನ್ನು ಕ್ಷಣಾರ್ಧದಲ್ಲಿ ನಿರಾಯುಧರನ್ನಾಗಿಸಿ ಕೃಷ್ಣ ಮುಂದೆ ಸಾಗಿದ. ಬೇರೆ ಬಿಲ್ಲು ಕೈಗೆತ್ತಿಕೊಂಡು ಕೃಷ್ಣನನ್ನು ಮತ್ತೆ ತಡೆಯುವ ಸಾಹಸದಲ್ಲಿ ತೊಡಗುತ್ತಿದ್ದ ಅವರನ್ನು ಬಲರಾಮ ಅಡ್ಡಗಟ್ಟಿದ.

## ಜರಾಸಂಧಾದಿಗಳ ಪರಾಭವ

ಬಲರಾಮನಲ್ಲಿ ಪ್ರಕಟಗೊಂಡ ಶ್ರೀಹರಿಯ ಶುಕ್ಲಕೇಶರೂಪವು ಆ ಸಮಯದಲ್ಲಿ ಅವನು ಜರಾಸಂಧನನ್ನು ಗೆಲ್ಲುವಂತೆ ಮಾಡಿತು. ಬಲರಾಮನ ಗದೆಯ ಹೊಡೆತಕ್ಕೆ ಜರಾಸಂಧ ಮೂರ್ಛಿತನಾದ. ಅವನನ್ನು ಗೆದ್ದ ಬಲರಾಮ ದ್ವಾರಕೆಗೆ ಮರಳಿದ. ವರನಿಗೆ ಒಪ್ಪುವ ವಿವಿಧ ತೊಡುಗೆಗಳಿಂದ ಅಲಂಕೃತನಾಗಿದ್ದ ಶಿಶುಪಾಲ ತಾನೂ ಸಹ ಯುದ್ಧದಲ್ಲಿ ಭಾಗಿಯಾಗಲು ಹೊರಟ. ಆ ವೇಳೆಗೆ ಅಲ್ಲಿಗೆ ಬಂದ ಸಾತ್ಯಕಿ ಅವನನ್ನು ಸಿಂಹದಂತೆ ಅಡ್ಡಗಟ್ಟಿದ. ಬಗೆಬಗೆಯ ಮಹಾಸ್ತ್ರಗಳನ್ನು ಪ್ರಯೋಗಿಸುತ್ತ ಬಹುಕಾಲ ಹೋರಾಡಿದ ಅವರು ಒಬ್ಬರನ್ನೊಬ್ಬರು ಬಿರು-ಗಣ್ಣಿನಿಂದ ನೋಡುತ್ತ ನಿಂತರು. ಹೋರಾಟದಲ್ಲಿ ಸಾಮ್ಯವನ್ನು ಸಹಿಸದ ಸಾತ್ಯಕಿ ಒಂದು ಹರಿತವಾದ ಬಾಣವನ್ನು ತೆಗೆದುಕೊಂಡು ಅದನ್ನು ಶಿಶುಪಾಲನ ಎದೆಗೆ ಗುರಿಯಿಟ್ಟು ಪ್ರಯೋಗಿಸಿದ. ಅದರ ಪೆಟ್ಟಿಗೆ ಅವನು ಮೂರ್ಛಿತನಾಗಿ ಬೀಳಲು, ಹರ್ಷಗೊಂಡ ಸಾತ್ಯಕಿಯು ದ್ವಾರಕೆಯತ್ತ ನಡೆದ. ಉಳಿದೆಲ್ಲ ಯಾದವರು ಸೈನ್ಯವನ್ನೆಲ್ಲ ಹಿಮ್ಮೆಟ್ಟಿಸಿ ಹಿಂದಿರುಗಿದರು. ಆ ಮೊದಲೇ ರುಗ್ಮಿ, ಏಕಲವ್ಯ ಮೊದಲಾದವರೆಲ್ಲ ಕೃಷ್ಣನನ್ನು ಬೆನ್ನಟ್ಟಿ ಹೊರಟಿದ್ದರು. ಹಾಗೆ ಬಂದ ಅವರತ್ತ ಸಿಂಹದಂತೆ ಎರಗಿದ ಶ್ರೀಕೃಷ್ಣ ಅವರ ಮೂರು ಅಕ್ಷೋಹಿಣೀ ಸೇನೆಯನ್ನು ಸಂಹರಿಸಿ, ಏಕಲವ್ಯನ ರಥ ಹಾಗೂ ಆಯುಧಗಳನ್ನು ಕತ್ತರಿಸಿ ಹಾಕಿದ. ಶರೀರನಾಶಕವಾದ ಮತ್ತೊಂದು ಬಾಣವನ್ನು ಕೃಷ್ಣ ತನ್ನ ಮೇಲೆ ಪ್ರಯೋಗಿಸುವ ಸನ್ನಾಹದಲ್ಲಿರುವುದನ್ನು ಗಮನಿಸಿದ ಏಕಲವ್ಯ ಭಯದಿಂದ ಅಲ್ಲಿಂದ ಪಲಾಯನ ಮಾಡಿದ. ಏಕಲವ್ಯನಂತಹ ಪರಾಕ್ರಮಿಯೇ ಹಾಗೆ ಹಿಮ್ಮೆಟ್ಟಿದ್ದನ್ನು ಕಂಡು ಭಯಗೊಂಡ ದಂತವಕ್ರ ಮೊದಲಾದವರು ಭಯದಿಂದ ಕೂಡಲೇ ಪಲಾಯನ ಮಾಡಿದರು.

## ರುಗ್ಮಿಯ ಪರಾಭವ

ಕೋಪದಿಂದ ರುಗ್ಮಿಯೊಬ್ಬನೇ ಕೃಷ್ಣನನ್ನು ಎದುರಿಸಿದ. ಅವನ ರಥವನ್ನು ಪುಡಿಗೈದ ಕೃಷ್ಣ ಮತ್ತೊಂದು ಬಾಣದಿಂದ ಅವನ ಬಿಲ್ಲನ್ನು ತುಂಡರಿಸಿದ. ಖಡ್ಗ ಗುರಾಣಿಗಳೊಂದಿಗೆ ರುಗ್ಮಿ ಕೃಷ್ಣನ ರಥವನ್ನೇ ಏರಿ ಬಂದ. ಅವನ ಖಡ್ಗವನ್ನು ಕೃಷ್ಣ ಮುರಿದು ಬೀಳಿಸಿದ. ರುಗ್ಮಿಣಿಯ ಮಾತನ್ನು ಮನ್ನಿಸಿ, ಅವನನ್ನು ಕೊಲ್ಲದೆ ಬಿಟ್ಟ. ಹಾಗೆ ಬಿಡುವಾಗ ಅವನ ತಲೆಯ ಮೇಲೆ ಪಂಚಚೂಡಗಳನ್ನು ಹಾಕಿ ಕಳಿಸಿದ. ರುಗ್ಮಿಣಿಯ ಪ್ರಾರ್ಥನೆ, ಕೃಷ್ಣನ ಒಪ್ಪಿಗೆ ಮೊದಲಾದ ಈ ಕಾರ್ಯಗಳೆಲ್ಲ ಜಗತ್ತಿನ ತಂದೆತಾಯಿಗಳಾದ ಅವರ ಲೋಕವಿಡಂಬನೆ ಮಾತ್ರ ; ಎಂದೂ ಭಿನ್ನಾಭಿಪ್ರಾಯವನ್ನೇ ಹೊಂದಿರದ ಅವರು ಮನುಷ್ಯರಿಗೆ ಧರ್ಮವನ್ನು ಶಿಕ್ಷಿಸುವ ಕಾರಣದಿಂದ ಹಾಗೆ ಮಾಡಿದರು. ಅದಕ್ಕೆಂದೇ ಆ ರೀತಿ ರುಗ್ಮಿಯೊಂದಿಗೆ ಆಟವಾಡಿದರು. ಅನಂತರ ಸೌಭಪತಿ ಸಾಲ್ವ ಕೃಷ್ಣನನ್ನು ಅಡ್ಡಗಟ್ಟಲು ನುಗ್ಗಿದ. ಕೃಷ್ಣನು ಮೃತ್ಯುಕಲ್ಪವಾದ ಬಾಣವೊಂದನ್ನು ಅವನ ವಕ್ಷಃ-ಸ್ಥಳದ ಮೇಲೆ ಬಿಟ್ಟ. ಅದರ ಹೊಡೆತಕ್ಕೆ ಮೈಮರೆತು ನೆಲಕ್ಕೊರಗಿದ ಅವನಿಗೆ ಮತ್ತೆ ಪ್ರಜ್ಞೆ ಬರಲು ಹೆಚ್ಚು ಸಮಯವೇ ಬೇಕಾಯಿತು. ಶಿವನನ್ನು ಮೆಚ್ಚಿಸುವ ಉದ್ದೇಶದಿಂದ ಅವನು ಮತ್ತೆ ತಪಸ್ಸಿಗೆ

ತೆರಳಿದ. ಎಲ್ಲ ರಾಜರ ಬಳಿ ಈ ಭೂಮಿಯ ಮೇಲೆ ಯಾದವರೇ ಇಲ್ಲದಂತೆ ಮಾಡಿಬಿಡುತ್ತೇನೆ ಎಂದು ರಾಜರ ಮಧ್ಯದಲ್ಲಿ ಕೊಚ್ಚಿಕೊಂಡು ತೀವ್ರ ತಪಸ್ಸಿನಲ್ಲಿ ಮಗ್ನನಾದ.

ಶ್ರೀಕೃಷ್ಣನು ಪ್ರಿಯೆಯಾದ ರುಗ್ಮಿಣಿಯೊಂದಿಗೆ ಕೂಡಿಕೊಂಡು ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುತ್ತಾ ಕುಶಸ್ಥಲಿಯನ್ನು ಪ್ರವೇಶಿಸಿದ.

## ಬಲರಾಮನ ವಿವಾಹ

ಈ ಮೊದಲೇ ಬಲರಾಮ ರೇವತಿಯಾಗಿ ಅವತರಿಸಿದ್ದ ವಾರುಣಿಯನ್ನು ಮದುವೆಯಾಗಿದ್ದ. ಅವಳಿಗೆ ಅನುರೂಪನಾದ ಪತಿ ಯಾರೆಂಬುದನ್ನು ತಿಳಿಯಲೆಂದು ಅವಳ ತಂದೆ ರೇವತರಾಜ ಬ್ರಹ್ಮದೇವರ ಬಳಿ ತೆರಳಿದ್ದ. ಬ್ರಹ್ಮದೇವರ ವರದಿಂದಾಗಿ ಅವನಿಗೆ ಹಾಗೆ ಬ್ರಹ್ಮದೇವರ ಸಭೆಗೆ ಹೋಗಲು ಸಾಧ್ಯವಾಗಿತ್ತು. ಅಲ್ಲಿಗೆ ಹೋದಾಗ ಅಲ್ಲಿಯ ಸಭೆಯಲ್ಲಿ ಸಂಗೀತ ನಡೆದಿತ್ತು. ಅದನ್ನು ಕೇಳುತ್ತ ನಿಂತ ಅವನಿಗೆ ಯುಗಗಳೇ ಉರುಳಿದ್ದು ತಿಳಿಯಲಿಲ್ಲ. ಅವರ ಯೋಗ್ಯತೆಗೆ ಮೀರಿದ ಸಂಗೀತವು ಮನುಷ್ಯರನ್ನು ಮೈಮರೆಸುವುದು. ಅದರಿಂದಾಗಿ ಸಂಗೀತ ಮುಗಿಯಲು ಸ್ವಲ್ಪಕಾಲವಷ್ಟೇ ಬೇಕಾಯಿತೆಂದು ತಪ್ಪಾಗಿ ತಿಳಿದ. ಅನಂತರ ಬ್ರಹ್ಮದೇವರಿಂದ ಅಷ್ಟು ಕಾಲದ ವಿವರ ತಿಳಿದಾಗ ಅವನು ಮೂರ್ಛಿತನಾದ. ಬ್ರಹ್ಮದೇವರ ಅನುಗ್ರಹದಿಂದ ಮರಳಿ ಎಚ್ಚೆತ್ತ ಅವನು ತನ್ನ ಮಗಳು ರೇವತಿಗೆ ಯೋಗ್ಯನಾದ ವರನಾರು ಎಂಬುದನ್ನು ತಿಳಿಸಲು ಕೇಳಿಕೊಂಡ. ಅವರು ''ಈಗ ಅವತರಿಸಿರುವ ಬಲರಾಮನೇ ನಿನ್ನ ಮಗಳ ಪತಿ ; ಇವಳನ್ನು ಅವನಿಗೆ ಕೊಡು'' ಎಂದು ತಿಳಿಸಿದರು. ಮಗಳನ್ನು ಜೊತೆಗೇ ಕರೆದುಕೊಂಡು ಬಂದಿದ್ದ ರೇವತರಾಜ ಭೂಲೋಕಕ್ಕೆ ಮರಳಿ ಬಲರಾಮನಿಗೆ ಅವಳನ್ನು ಕೊಟ್ಟು ವಿವಾಹಮಾಡಿ, ತಾನು ತಪಸ್ಸನ್ನು ಆಚರಿಸಿ ಸದ್ಗತಿ ಪಡೆದ. ಪ್ರಾಚೀನಕಾಲದ ರೇವತಿ ಆಗಿನ [೧] ಕಾಲಮಾನಕ್ಕೆ ತಕ್ಕಂತೆ ತುಂಬಾ ಎತ್ತರವಾಗಿದ್ದಳು. ಬಲರಾಮ ತನ್ನ ನೇಗಿಲಿನಿಂದ ಅವಳನ್ನು ತನ್ನ ಎತ್ತರಕ್ಕೆ ಸರಿಹೊಂದುವಂತೆ ಮಾಡಿಕೊಂಡ. ಬಲರಾಮನ ಯಾವ ಇಷ್ಟ ತಾನೇ ಅಪೂರ್ಣವಾಗಿ ಉಳಿಯಲು ಸಾಧ್ಯ ! ಅವಳಲ್ಲಿ ಬಲರಾಮನಿಗೆ ಶಠ ಮತ್ತು ಉಲ್ಮುಕ ಎಂಬ ಇಬ್ಬರು ಪುತ್ರರು ಜನಿಸಿದರು. ಅವರಿಬ್ಬರು ಅರ್ಯಮ ಹಾಗೂ ಅಂಶ ಎಂಬ ಸೂರ್ಯರ ಅವತಾರ.

## ರುಗ್ಮಿಣೀ ಕಲ್ಯಾಣ

ಕೃಷ್ಣನು ಶುಭದಿನವೊಂದರಲ್ಲಿ ರುಗ್ಮಿಣಿಯ ಕೈಹಿಡಿದ. ಆ ದಿನವು ಕುಶಸ್ಥಲಿಯ ನಿವಾಸಿಗಳಿಗೆ ಹಿಂದೆಂದೂ ಆಗದಿದ್ದ ಮಹೋತ್ಸವವೆನ್ನಿಸಿತು. ಆಕಾಶದಲ್ಲಿ ನೆರೆದ ಬ್ರಹ್ಮಾದಿದೇವತೆಗಳೆಲ್ಲರೂ ಲಕ್ಷ್ಮೀಸಮೇತನಾದ ನಾರಾಯಣನನ್ನು ಸ್ತುತಿಸಿದರು. ಮುನಿಶ್ರೇಷ್ಠರೂ, ದೇವಗಂಧರ್ವರೂ

---

೧. ಪ್ರಾಣಿಗಳ ಎತ್ತರ ಮೊದಲಾದವುಗಳು ಯುಗಕ್ರಮದಲ್ಲಿ ಕಡಿಮೆಯಾಗುತ್ತಾ ಬರುವುವು ಎಂಬುದು ಶಾಸ್ತ್ರಗಳ ಪ್ರತಿಪಾದನೆ. ರೇವತಿಯು ಕೃತಯುಗದ ಕನ್ಯೆ ; ಬಲರಾಮ ದ್ವಾಪರಯುಗದ ವರ. ಆದರಿಂದಾಗಿ ರೇವತಿಯ ಎತ್ತರ ಬಲರಾಮನಿಗಿಂತಾ ತುಂಬಾ ಹೆಚ್ಚಾಗಿದ್ದಿತು. ಕೃತಯುಗದ ಮನುಷ್ಯನ ಎತ್ತರ ೨೮ ಮೊಳ ; ತ್ರೇತಾಯುಗದಲ್ಲಿ ೧೪ ; ದ್ವಾಪರದಲ್ಲಿ ೭ ; ಕಲಿಯುಗದಲ್ಲಿ ೩ ೧/೨ ಎಂಬುದಕ್ಕೆ ಇದು ವಿವರಣೆಯಂತಿದೆ.

## ಜರಾಸಂಧಾದಿಗಳ ಪರಾಭವ

ಬಲರಾಮನಲ್ಲಿ ಪ್ರಕಟಗೊಂಡ ಶ್ರೀಹರಿಯ ಶುಕ್ಲಕೇಶರೂಪವು ಆ ಸಮಯದಲ್ಲಿ ಅವನು ಜರಾಸಂಧನನ್ನು ಗೆಲ್ಲುವಂತೆ ಮಾಡಿತು. ಬಲರಾಮನ ಗದೆಯ ಹೊಡೆತಕ್ಕೆ ಜರಾಸಂಧ ಮೂರ್ಛಿತನಾದ. ಅವನನ್ನು ಗೆದ್ದ ಬಲರಾಮ ದ್ವಾರಕೆಗೆ ಮರಳಿದ. ವರನಿಗೆ ಒಪ್ಪುವ ವಿವಿಧ ತೊಡುಗೆಗಳಿಂದ ಅಲಂಕೃತನಾಗಿದ್ದ ಶಿಶುಪಾಲ ತಾನೂ ಸಹ ಯುದ್ಧದಲ್ಲಿ ಭಾಗಿಯಾಗಲು ಹೊರಟ. ಆ ವೇಳೆಗೆ ಅಲ್ಲಿಗೆ ಬಂದ ಸಾತ್ಯಕಿ ಅವನನ್ನು ಸಿಂಹದಂತೆ ಅಡ್ಡಗಟ್ಟಿದ. ಬಗೆಬಗೆಯ ಮಹಾಸ್ತ್ರಗಳನ್ನು ಪ್ರಯೋಗಿಸುತ್ತ ಬಹುಕಾಲ ಹೋರಾಡಿದ ಅವರು ಒಬ್ಬರನ್ನೊಬ್ಬರು ಬಿರು-ಗಣ್ಣಿನಿಂದ ನೋಡುತ್ತ ನಿಂತರು. ಹೋರಾಟದಲ್ಲಿ ಸಾಮ್ಯವನ್ನು ಸಹಿಸದ ಸಾತ್ಯಕಿ ಒಂದು ಹರಿತವಾದ ಬಾಣವನ್ನು ತೆಗೆದುಕೊಂಡು ಅದನ್ನು ಶಿಶುಪಾಲನ ಎದೆಗೆ ಗುರಿಯಿಟ್ಟು ಪ್ರಯೋಗಿಸಿದ. ಅದರ ಪೆಟ್ಟಿಗೆ ಅವನು ಮೂರ್ಛಿತನಾಗಿ ಬೀಳಲು, ಹರ್ಷಗೊಂಡ ಸಾತ್ಯಕಿಯು ದ್ವಾರಕೆಯತ್ತ ನಡೆದ. ಉಳಿದೆಲ್ಲ ಯಾದವರು ಸೈನ್ಯವನ್ನೆಲ್ಲ ಹಿಮ್ಮೆಟ್ಟಿಸಿ ಹಿಂದಿರುಗಿದರು. ಆ ಮೊದಲೇ ರುಗ್ಮಿ, ಏಕಲವ್ಯ ಮೊದಲಾದವರೆಲ್ಲ ಕೃಷ್ಣನನ್ನು ಬೆನ್ನಟ್ಟಿ ಹೊರಟಿದ್ದರು. ಹಾಗೆ ಬಂದ ಅವರತ್ತ ಸಿಂಹದಂತೆ ಎರಗಿದ ಶ್ರೀಕೃಷ್ಣ ಅವರ ಮೂರು ಅಕ್ಷೋಹಿಣೀ ಸೇನೆಯನ್ನು ಸಂಹರಿಸಿ, ಏಕಲವ್ಯನ ರಥ ಹಾಗೂ ಆಯುಧಗಳನ್ನು ಕತ್ತರಿಸಿ ಹಾಕಿದ. ಶರೀರನಾಶಕವಾದ ಮತ್ತೊಂದು ಬಾಣವನ್ನು ಕೃಷ್ಣ ತನ್ನ ಮೇಲೆ ಪ್ರಯೋಗಿಸುವ ಸನ್ನಾಹದಲ್ಲಿರುವುದನ್ನು ಗಮನಿಸಿದ ಏಕಲವ್ಯ ಭಯದಿಂದ ಅಲ್ಲಿಂದ ಪಲಾಯನ ಮಾಡಿದ. ಏಕಲವ್ಯನಂತಹ ಪರಾಕ್ರಮಿಯೇ ಹಾಗೆ ಹಿಮ್ಮೆಟ್ಟಿದ್ದನ್ನು ಕಂಡು ಭಯಗೊಂಡ ದಂತವಕ್ರ ಮೊದಲಾದವರು ಭಯದಿಂದ ಕೂಡಲೇ ಪಲಾಯನ ಮಾಡಿದರು.

## ರುಗ್ಮಿಯ ಪರಾಭವ

ಕೋಪದಿಂದ ರುಗ್ಮಿಯೊಬ್ಬನೇ ಕೃಷ್ಣನನ್ನು ಎದುರಿಸಿದ. ಅವನ ರಥವನ್ನು ಪುಡಿಗೈದ ಕೃಷ್ಣ ಮತ್ತೊಂದು ಬಾಣದಿಂದ ಅವನ ಬಿಲ್ಲನ್ನು ತುಂಡರಿಸಿದ. ಖಡ್ಗ ಗುರಾಣಿಗಳೊಂದಿಗೆ ರುಗ್ಮಿ ಕೃಷ್ಣನ ರಥವನ್ನೇ ಏರಿ ಬಂದ. ಅವನ ಖಡ್ಗವನ್ನು ಕೃಷ್ಣ ಮುರಿದು ಬೀಳಿಸಿದ. ರುಗ್ಮಿಣಿಯ ಮಾತನ್ನು ಮನ್ನಿಸಿ, ಅವನನ್ನು ಕೊಲ್ಲದೆ ಬಿಟ್ಟ. ಹಾಗೆ ಬಿಡುವಾಗ ಅವನ ತಲೆಯ ಮೇಲೆ ಪಂಚಚೂಡಗಳನ್ನು ಹಾಕಿ ಕಳಿಸಿದ. ರುಗ್ಮಿಣಿಯ ಪ್ರಾರ್ಥನೆ, ಕೃಷ್ಣನ ಒಪ್ಪಿಗೆ ಮೊದಲಾದ ಈ ಕಾರ್ಯಗಳೆಲ್ಲ ಜಗತ್ತಿನ ತಂದೆತಾಯಿಗಳಾದ ಅವರ ಲೋಕವಿಡಂಬನೆ ಮಾತ್ರ ; ಎಂದೂ ಭಿನ್ನಾಭಿಪ್ರಾಯವನ್ನೇ ಹೊಂದಿರದ ಅವರು ಮನುಷ್ಯರಿಗೆ ಧರ್ಮವನ್ನು ಶಿಕ್ಷಿಸುವ ಕಾರಣದಿಂದ ಹಾಗೆ ಮಾಡಿದರು. ಅದಕ್ಕೆಂದೇ ಆ ರೀತಿ ರುಗ್ಮಿಯೊಂದಿಗೆ ಆಟವಾಡಿದರು. ಅನಂತರ ಸೌಭಪತಿ ಸಾಲ್ವ ಕೃಷ್ಣನನ್ನು ಅಡ್ಡಗಟ್ಟಲು ನುಗ್ಗಿದ. ಕೃಷ್ಣನು ಮೃತ್ಯುಕಲ್ಪವಾದ ಬಾಣವೊಂದನ್ನು ಅವನ ವಕ್ಷಃ-ಸ್ಥಳದ ಮೇಲೆ ಬಿಟ್ಟ. ಅದರ ಹೊಡೆತಕ್ಕೆ ಮೈಮರೆತು ನೆಲಕ್ಕೊರಗಿದ ಅವನಿಗೆ ಮತ್ತೆ ಪ್ರಜ್ಞೆ ಬರಲು ಹೆಚ್ಚು ಸಮಯವೇ ಬೇಕಾಯಿತು. ಶಿವನನ್ನು ಮೆಚ್ಚಿಸುವ ಉದ್ದೇಶದಿಂದ ಅವನು ಮತ್ತೆ ತಪಸ್ಸಿಗೆ

ತೆರಳಿದ. ಎಲ್ಲ ರಾಜರ ಬಳಿ ಈ ಭೂಮಿಯ ಮೇಲೆ ಯಾದವರೇ ಇಲ್ಲದಂತೆ ಮಾಡಿಬಿಡುತ್ತೇನೆ ಎಂದು ರಾಜರ ಮಧ್ಯದಲ್ಲಿ ಕೊಚ್ಚಿಕೊಂಡು ತೀವ್ರ ತಪಸ್ಸಿನಲ್ಲಿ ಮಗ್ನನಾದ.

ಶ್ರೀಕೃಷ್ಣನು ಪ್ರಿಯೆಯಾದ ರುಗ್ಮಿಣಿಯೊಂದಿಗೆ ಕೂಡಿಕೊಂಡು ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುತ್ತಾ ಕುಶಸ್ಥಲಿಯನ್ನು ಪ್ರವೇಶಿಸಿದ.

## ಬಲರಾಮನ ವಿವಾಹ

ಈ ಮೊದಲೇ ಬಲರಾಮ ರೇವತಿಯಾಗಿ ಅವತರಿಸಿದ್ದ ವಾರುಣಿಯನ್ನು ಮದುವೆಯಾಗಿದ್ದ. ಅವಳಿಗೆ ಅನುರೂಪನಾದ ಪತಿ ಯಾರೆಂಬುದನ್ನು ತಿಳಿಯಲೆಂದು ಅವಳ ತಂದೆ ರೇವತರಾಜ ಬ್ರಹ್ಮದೇವರ ಬಳಿ ತೆರಳಿದ್ದ. ಬ್ರಹ್ಮದೇವರ ವರದಿಂದಾಗಿ ಅವನಿಗೆ ಹಾಗೆ ಬ್ರಹ್ಮದೇವರ ಸಭೆಗೆ ಹೋಗಲು ಸಾಧ್ಯವಾಗಿತ್ತು. ಅಲ್ಲಿಗೆ ಹೋದಾಗ ಅಲ್ಲಿಯ ಸಭೆಯಲ್ಲಿ ಸಂಗೀತ ನಡೆದಿತ್ತು. ಅದನ್ನು ಕೇಳುತ್ತ ನಿಂತ ಅವನಿಗೆ ಯುಗಗಳೇ ಉರುಳಿದ್ದು ತಿಳಿಯಲಿಲ್ಲ. ಅವರ ಯೋಗ್ಯತೆಗೆ ಮೀರಿದ ಸಂಗೀತವು ಮನುಷ್ಯರನ್ನು ಮೈಮರೆಸುವುದು. ಅದರಿಂದಾಗಿ ಸಂಗೀತ ಮುಗಿಯಲು ಸ್ವಲ್ಪಕಾಲವಷ್ಟೇ ಬೇಕಾಯಿತೆಂದು ತಪ್ಪಾಗಿ ತಿಳಿದ. ಅನಂತರ ಬ್ರಹ್ಮದೇವರಿಂದ ಅಷ್ಟು ಕಾಲದ ವಿವರ ತಿಳಿದಾಗ ಅವನು ಮೂರ್ಛಿತನಾದ. ಬ್ರಹ್ಮದೇವರ ಅನುಗ್ರಹದಿಂದ ಮರಳಿ ಎಚ್ಚೆತ್ತ ಅವನು ತನ್ನ ಮಗಳು ರೇವತಿಗೆ ಯೋಗ್ಯನಾದ ವರನಾರು ಎಂಬುದನ್ನು ತಿಳಿಸಲು ಕೇಳಿಕೊಂಡ. ಅವರು ''ಈಗ ಅವತರಿಸಿರುವ ಬಲರಾಮನೇ ನಿನ್ನ ಮಗಳ ಪತಿ ; ಇವಳನ್ನು ಅವನಿಗೆ ಕೊಡು'' ಎಂದು ತಿಳಿಸಿದರು. ಮಗಳನ್ನು ಜೊತೆಗೇ ಕರೆದುಕೊಂಡು ಬಂದಿದ್ದ ರೇವತರಾಜ ಭೂಲೋಕಕ್ಕೆ ಮರಳಿ ಬಲರಾಮನಿಗೆ ಅವಳನ್ನು ಕೊಟ್ಟು ವಿವಾಹಮಾಡಿ, ತಾನು ತಪಸ್ಸನ್ನು ಆಚರಿಸಿ ಸದ್ಗತಿ ಪಡೆದ. ಪ್ರಾಚೀನಕಾಲದ ರೇವತಿ ಆಗಿನ[೧] ಕಾಲಮಾನಕ್ಕೆ ತಕ್ಕಂತೆ ತುಂಬಾ ಎತ್ತರವಾಗಿದ್ದಳು. ಬಲರಾಮ ತನ್ನ ನೇಗಿಲಿನಿಂದ ಅವಳನ್ನು ತನ್ನ ಎತ್ತರಕ್ಕೆ ಸರಿಹೊಂದುವಂತೆ ಮಾಡಿಕೊಂಡ. ಬಲರಾಮನ ಯಾವ ಇಷ್ಟ ತಾನೇ ಅಪೂರ್ಣವಾಗಿ ಉಳಿಯಲು ಸಾಧ್ಯ ! ಅವಳಲ್ಲಿ ಬಲರಾಮನಿಗೆ ಶಠ ಮತ್ತು ಉಲ್ಮುಕ ಎಂಬ ಇಬ್ಬರು ಪುತ್ರರು ಜನಿಸಿದರು. ಅವರಿಬ್ಬರು ಅರ್ಯಮ ಹಾಗೂ ಅಂಶ ಎಂಬ ಸೂರ್ಯರ ಅವತಾರ.

## ರುಗ್ಮಿಣೀ ಕಲ್ಯಾಣ

ಕೃಷ್ಣನು ಶುಭದಿನವೊಂದರಲ್ಲಿ ರುಗ್ಮಿಣಿಯ ಕೈಹಿಡಿದ. ಆ ದಿನವು ಕುಶಸ್ಥಲಿಯ ನಿವಾಸಿಗಳಿಗೆ ಹಿಂದೆಂದೂ ಆಗದಿದ್ದ ಮಹೋತ್ಸವವೆನ್ನಿಸಿತು. ಆಕಾಶದಲ್ಲಿ ನೆರೆದ ಬ್ರಹ್ಮಾದಿದೇವತೆಗಳೆಲ್ಲರೂ ಲಕ್ಷ್ಮೀಸಮೇತನಾದ ನಾರಾಯಣನನ್ನು ಸ್ತುತಿಸಿದರು. ಮುನಿಶ್ರೇಷ್ಠರೂ, ದೇವಗಂಧರ್ವರೂ

೧. ಪ್ರಾಣಿಗಳ ಎತ್ತರ ಮೊದಲಾದವುಗಳು ಯುಗಕ್ರಮದಲ್ಲಿ ಕಡಿಮೆಯಾಗುತ್ತಾ ಬರುವುವು ಎಂಬುದು ಶಾಸ್ತ್ರಗಳ ಪ್ರತಿಪಾದನೆ. ರೇವತಿಯು ಕೃತಯುಗದ ಕನ್ಯೆ ; ಬಲರಾಮ ದ್ವಾಪರಯುಗದ ವರ. ಅದರಿಂದಾಗಿ ರೇವತಿಯ ಎತ್ತರ ಬಲರಾಮನಿಗಿಂತಾ ತುಂಬಾ ಹೆಚ್ಚಾಗಿದ್ದಿತು. ಕೃತಯುಗದ ಮನುಷ್ಯನ ಎತ್ತರ ೨೮ ಮೊಳ ; ತ್ರೇತಾಯುಗದಲ್ಲಿ ೧೪ ; ದ್ವಾಪರದಲ್ಲಿ ೭ ; ಕಲಿಯುಗದಲ್ಲಿ ೩ ೧/೨ ಎಂಬುದಕ್ಕೆ ಇದು ವಿವರಣೆಯಂತಿದೆ.

ಯಾದವರೊಂದಿಗೆ ಹಾಡಿ ನಲಿದರು. ರಮಾ-ರಮೇಶರ ಆ ವಿವಾಹಮಹೋತ್ಸವದಲ್ಲಿ ಪಾಂಡವರೇ ಮೊದಲಾದ ದೇವಾಂಶಜರಾದ ಎಲ್ಲ ರಾಜರೂ ಆಹೂತರಾಗಿ ಪಾಲ್ಗೊಂಡರು. ಸಮಸ್ತಲೋಕಸುಂದರನಾದ ಕೃಷ್ಣನಿಗೆ ಹಾಗೆ ಸಮಸ್ತಲೋಕಸುಂದರಿಯಾದ ರುಗ್ಮಿಣಿಯೊಂದಿಗೆ ನಡೆದ ವಿವಾಹವು ಎಲ್ಲ ಸಜ್ಜನರ ಮನಸ್ಸಿಗೂ ಅಪಾರ ಹರ್ಷವನ್ನುಂಟುಮಾಡಿತು.

## ಪ್ರದ್ಯುಮ್ನನ ಜನನ

ರುಗ್ಮಿಣಿಯಲ್ಲಿ ಕೃಷ್ಣನಿಗೆ ಮನ್ಮಥನೇ ಮಗನಾಗಿ ಜನಿಸಿದ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ವಿಷ್ಣುವಿನ ನಾಲ್ಕುರೂಪಗಳಲ್ಲಿ ಮೂರನೆಯದಾದ ಪ್ರದ್ಯುಮ್ನ ಎಂಬ ರೂಪದ ಸನ್ನಿಧಾನ ಅವನಲ್ಲಿತ್ತು. ಆದ್ದರಿಂದಲೇ ಅವನಿಗೆ ಪ್ರದ್ಯುಮ್ನ ಎಂದು ಹೆಸರಾಯಿತು. ಈ ಮೊದಲೇ ಅವನು ಕೃಷ್ಣನ ಮನಸ್ಸಿನಿಂದ ಒಮ್ಮೆ ಜನಿಸಿ ಏಕಲವ್ಯನನ್ನು ಜಯಿಸಿದ್ದನಷ್ಟೆ. ಶಂಬರನೆಂಬ ರಾಕ್ಷಸನನ್ನು ಕೊಲ್ಲಿಸುವ ದೃಷ್ಟಿಯಿಂದ ಆ ಮೊದಲೇ ನಾರದರು ಆ ಶಂಬರನಿಗೆ ''ನಿನ್ನ ಮೃತ್ಯು ಈಗ ಕೃಷ್ಣನ ಮಗ ಪ್ರದ್ಯುಮ್ನನಾಗಿ ಜನಿಸಿರುವುದು'' ಎಂದು ತಿಳಿಸಿದ್ದರು. ಮಾಯಾವಿಯಾದ ಶಂಬರನು ತನ್ನ ಮಾಯೆಯ ಪ್ರಭಾವದಿಂದ ಸೂತಿಕಾ-ಗೃಹದಿಂದ ಮಗುವನ್ನು ಕದ್ದೊಯ್ದು ಸಮುದ್ರದಲ್ಲಿ ಬಿಸಾಡಿದ. ಇದನ್ನೆಲ್ಲ ತಿಳಿದಿದ್ದರೂ ಕೃಷ್ಣ ತಿಳಿಯದವನಂತೆ ಸುಮ್ಮನಿದ್ದುಬಿಟ್ಟ. ಸಮುದ್ರದಲ್ಲಿನ ಮೀನೊಂದು ಆ ಮಗುವನ್ನು ನುಂಗಿತು. ಅದನ್ನು ಹಿಡಿದ ಬೆಸ್ತರು ಕುಯ್ಯುತ್ತಿರುವಾಗ ಆ ಮಗುವನ್ನು ಕಂಡು ಅದನ್ನು ಶಂಬರನಿಗೆ ಒಪ್ಪಿಸಿದರು. ಸುರೂಪಿಯಾದ ಅದನ್ನು ಅವನು ತನ್ನ ವಶದಲ್ಲಿದ್ದ ಮನ್ಮಥನ ಪತ್ನಿ ರತಿಯ ಕೈಗೆ ಒಪ್ಪಿಸಿದ. ಹಿಂದೆ ಶಿವನಿಂದ ಮನ್ಮಥನು ಸುಟ್ಟು ಅನಂಗನಾದ ಮೇಲೆ, ಬ್ರಹ್ಮನ ಶಾಪದಿಂದಾಗಿ ರತಿ ಶಂಬರನ ವಶವಾಗಿದ್ದಳು.

## ರತಿಗೆ ಶಾಪ

ಹಿಂದೊಮ್ಮೆ ಪ್ರಾಚೀನಕಲ್ಪದ ಮಹಾಭಾರತವನ್ನು ಹೇಳುತ್ತ ಬ್ರಹ್ಮದೇವರು ''ದ್ರೌಪದಿಗೆ ಐವರು ಪತಿಗಳಿದ್ದರು'' ಎಂದಾಗ, ಅದನ್ನು ಕೇಳಿದ ರತಿ ಗಟ್ಟಿಯಾಗಿ ನಕ್ಕುಬಿಟ್ಟಳು. ಅದಕ್ಕೆಂದೇ ಬ್ರಹ್ಮದೇವರು ''ನೀನು ಅಸುರನ ಸಂಪರ್ಕ ಹೊಂದು'' ಎಂದು ಅವಳನ್ನು ಶಪಿಸಿದರು. ತನ್ನ ಮೂಲರೂಪವನ್ನು ಅಡಗಿಸಿಟ್ಟ ರತಿ ಮತ್ತೊಂದು[೧] ಕೃತಕರೂಪದಿಂದ ಶಂಬರನ ವಶವಾಗಿದ್ದಳು. ಅವಳು ನಿಜರೂಪದಿಂದ ಮಾತ್ರ ಆ ಅಸುರನ ಬಳಿ ಸರ್ವಥಾ ತೆರಳುತ್ತಿರಲಿಲ್ಲ. ಹಾಗೆ ಅಲ್ಲಿರುತ್ತಿದ್ದ ರತಿ ಈ ದಿನ ಮಗುವನ್ನು ಕಾಣುತ್ತಲೇ ತನ್ನ ಪತಿಯೆಂದು ಗುರುತಿಸಿ ಆನಂದ-ಪಟ್ಟಳು. ವಿವಿಧ ರಸಾಯನಗಳಿಂದ ಪತಿಯನ್ನು ಬೆಳೆಸಿದ ಅವಳ ಪ್ರಭಾವದಿಂದಾಗಿ ನಾಲ್ಕೇ ವರ್ಷಗಳಲ್ಲಿ ಪ್ರದ್ಯುಮ್ನ ಯೌವ್ವನವನ್ನು ಪಡೆದ. ಯೌವ್ವನ ಪಡೆದ ಪತಿಯನ್ನು ಕಂಡು ನಾಚತೊಡಗಿದ್ದ ಅವಳ ವರ್ತನೆಗೆ, ಅವಳನ್ನು ತಾಯಿಯೆಂದೇ ತಿಳಿದಿದ್ದ ಪ್ರದ್ಯುಮ್ನ ''ಹೀಗೇಕೆ

೧. ಇದು ಒಂದು ರೀತಿಯಲ್ಲಿ ರಾಮಾಯಣದ ಸೀತಾಕೃತಿಯ ಪ್ರಸಂಗವನ್ನು ಹೋಲುವುದು.

ನನ್ನನ್ನು ಕಂಡರೆ ನಾಚುವಿ'' ಎಂದು ಕೇಳಿದ. ಅವಳು ಅವನ ಹುಟ್ಟು ಅಲ್ಲಿಗೆ ಬರುವಿಕೆ ಮೊದಲಾದ ಎಲ್ಲ ವಿಷಯಗಳನ್ನು ತಿಳಿಸಿದಳು. ಪ್ರದ್ಯುಮ್ನ ರತಿಯನ್ನು ಸತಿಯನ್ನಾಗಿ ಪರಿಗ್ರಹಿಸಿದ. ಅವಳು ಆ ಕೃಷ್ಣಪುತ್ರನಿಗೆ ಅಸುರರ ಎಲ್ಲ ಮಾಯೆಗಳನ್ನು ನಾಶಮಾಡುವ ಪರಶುರಾಮರ ಮಂತ್ರವನ್ನು ತಿಳಿಸಿಕೊಟ್ಟಳು.

## ಶಂಬರಾಸುರನ ವಧೆ

ಅದನ್ನು ತಿಳಿದ ಪ್ರದ್ಯುಮ್ನ ತನ್ನ ಪತ್ನಿಯಮೇಲೆ ಬಲಾತ್ಕಾರ ಮಾಡಿದ ಶಂಬರನನ್ನು ಯುದ್ಧಕ್ಕೆ ಆಹ್ವಾನಿಸಿದ ; ಅವನೊಂದಿಗೆ ತನ್ನೆಲ್ಲ ಶಕ್ತಿಯಿಂದ ಕಾದಿದ. ಖಡ್ಗ ಚರ್ಮಗಳನ್ನು ಹಿಡಿದ ಪ್ರದ್ಯುಮ್ನನನ್ನು ವಿವಿಧ ಅಸ್ತ್ರಗಳಿಂದಲೂ ವೃಕ್ಷಗಳಿಂದಲೂ ಎದುರಿಸಲಾಗದ್ದನ್ನು ಕಂಡ ಶಂಬರ ಕೂಡಲೇ ಅದೃಶ್ಯನಾದ. ಸಹಸ್ರಾರು ರೀತಿಯ ಮಾಯೆಗಳನ್ನು ತೋರಿಸುತ್ತಾ ಕಣ್ಣಿಗೆ ಕಾಣಿಸಿಕೊಳ್ಳದೆ ಇದ್ದು ಬೆಟ್ಟಗಳನ್ನೇ ಮೇಲೆಸೆಯಲಾರಂಭಿಸಿದ ಶಂಬರನನ್ನು ಪ್ರದ್ಯುಮ್ನ ಮಂತ್ರಬಲದಿಂದ ಎದುರಿಸಿದ. ಅವನ ಮಂತ್ರಶಕ್ತಿಯಿಂದಾಗಿ ಶಂಬರನ ಮಾಯೆ ಅಡಗಿತು. ಅವನು ಕಣ್ಣಿಗೆ ಬೀಳುತ್ತಿದ್ದಂತೆಯೇ, ಪ್ರದ್ಯುಮ್ನ ಬೀಸಿದ ಖಡ್ಗಕ್ಕೆ ಅವನ ತಲೆ ತುಂಡಾಗಿ ಕೆಳಗುರುಳಿತು. ಈ ರೀತಿ ಶಂಬರನನ್ನು ಕೊಂದ ಪ್ರದ್ಯುಮ್ನ ಪತ್ನೀಸಮೇತನಾಗಿ, ಮಂತ್ರಬಲದಿಂದ ಗಗನಗಾಮಿಯಾಗಿಯೇ ಕುಶಸ್ಥಲಿಯನ್ನು ಸೇರಿದ. ಜಗವನ್ನು ಅನುಕರಿಸುತ್ತಿದ್ದ ಸರ್ವಜ್ಞರಾದ ಲಕ್ಷ್ಮೀನಾರಾಯಣರಿಗೆ ನಾರದರು ಆ ವಿಷಯವನ್ನೆಲ್ಲ ತಿಳಿಸಿದರು. ಆಗ ತಂದೆ-ತಾಯಿ-ಗಳಿಂದಲೂ ಬಲರಾಮ ಮೊದಲಾದ ಎಲ್ಲ ಯಾದವರಿಂದಲೂ ಆದರದಿಂದ ಲಾಲಿಸಲ್ಪಟ್ಟ ಪ್ರದ್ಯುಮ್ನ ಅಲ್ಲಿ ಸುಖದಿಂದ ವಾಸಿಸಿದ.

## ಶ್ಯಮಂತಕೋಪಾಖ್ಯಾನ

ಆ ವೇಳೆಗೆ ಹಿಂದೆಯೇ ಸೂರ್ಯಮಂಡಲದಲ್ಲಿನ ವಿಷ್ಣುವಿನಿಂದ ಸ್ಯಮಂತಕ ಎಂಬ ರತ್ನವನ್ನು ಪಡೆದಿದ್ದ ಸತ್ರಾಜಿತ್ ಎಂಬ ರಾಜ ಸದಾ ವಿಷ್ಣುಪೂಜಾರತನಾಗಿ ಜೀವನ ಸಾಗಿಸುತ್ತಿದ್ದ. ಸದಾ ವೈಷ್ಣವನೇ ಆಗಿದ್ದರೂ, ಲೋಭವನ್ನು ಮಾತ್ರ ಬಿಡದಿದ್ದ ಅವನ ಸ್ವಭಾವವನ್ನು ಪ್ರಕಟಪಡಿಸುವ ಉದ್ದೇಶದಿಂದ ಕೃಷ್ಣ ಆ ಸ್ಯಮಂತಕಮಣಿಯನ್ನು ತನಗೆ ಕೊಡಲು ಕೇಳಿದ. ಆದರೆ ಅವನು ಅದನ್ನು ಕೊಡಲು ಒಪ್ಪಲಿಲ್ಲ. ಕೆಲವು ದಿನ ಕಳೆದ ಮೇಲೆ ಒಂದು ದಿನ ಪ್ರಸೇನನೆಂಬ ಅವನ ತಮ್ಮ ಆ ಮಣಿಯನ್ನು ಧರಿಸಿಕೊಂಡು ಬೇಟೆಗೆ ಹೋಗಿದ್ದಾಗ ಸಿಂಹವೊಂದರ ಬಾಯಿಗೆ ಆಹುತಿಯಾದ. ವಿಷಯ ತಿಳಿಯದ ಸತ್ರಾಜಿತ್ ''ಕೃಷ್ಣನೇ ತನ್ನ ತಮ್ಮನನ್ನು ಮಣಿಯ ಆಸೆಗಾಗಿ ಕೊಂದಿದ್ದಾನೆ'' ಎಂಬ ಸುದ್ದಿಯನ್ನು ಮೆಲ್ಲನೆ ಎಲ್ಲೆಡೆ ಹರಡಿದ. ಯಾದವರ ಸಮೇತ ಹೊರಟ ಕೃಷ್ಣನು ಪ್ರಸೇನನು ಸಿಂಹದಿಂದ ಹತನಾದದ್ದನ್ನು ಯಾದವರಿಗೆ ತೋರಿಸಿದ. ಅನಂತರ ಮುಂದೆ ಹೋಗುತ್ತ ಕರಡಿಯಿಂದ ಸತ್ತು ಬಿದ್ದ ಆ ಸಿಂಹವನ್ನು ತೋರಿಸಿದ. ಮುಂದೆ ಸಿಕ್ಕಿದ ಜಾಂಬವಂತನ ಗುಹೆಯ ಬಾಗಿಲಲ್ಲಿ ಯಾದವರನ್ನೆಲ್ಲ ಹೊರಗೆ ನಿಲ್ಲಿಸಿ, ತಾನೊಬ್ಬನೇ ಒಳಗೆ ಪ್ರವೇಶಿಸಿ, ಅಲ್ಲಿದ್ದ ಜಾಂಬವಂತನೊಂದಿಗೆ ಯುದ್ಧಕ್ಕೆ ತೊಡಗಿದ.

ಜಾಂಬವಂತ ತನ್ನ ಭಕ್ತನೆಂಬ ಕಾರಣದಿಂದ ಕೃಷ್ಣ ಮೊದಮೊದಲು ಅವನೊಡನೆ ಮೆಲ್ಲನೆ ಹೋರಾಡಿದ. ಕೊನೆಗೆ ಮಾತ್ರ ಕೃಷ್ಣನ ಪೆಟ್ಟುಗಳು ತೀವ್ರವಾದವು. ಕೃಷ್ಣನ ಮುಷ್ಟಿಯ ಹೊಡೆತಕ್ಕೆ ದೇಹವೆಲ್ಲ ನುಜ್ಜುಗುಜ್ಜಾಗಲು ದೊಡ್ಡ ಆಪತ್ತಿಗೆ ಸಿಲುಕಿದ ಜಾಂಬುವಂತ ಮನಸ್ಸಿನಲ್ಲೇ ಶ್ರೀರಾಮನನ್ನು ಶರಣುಹೊಕ್ಕ. ರಾಘವನ ರೂಪ ಸ್ಮರಣೆಗೆ ಬರುತ್ತಿದ್ದಂತೆ ಅದನ್ನು ಕೃಷ್ಣನಲ್ಲಿಯೇ ಕಾಣಲಾರಂಭಿಸಿದ ಜಾಂಬವಂತ ''ಆ ರಾಮನೇ ಈ ಕೃಷ್ಣ'' ಎಂಬುದನ್ನು ಕಂಡುಕೊಂಡು ತನ್ನ ಅವಿವೇಕಕ್ಕೆ ನಾಚಿ ಶರಣಾಗತನಾದ. ಮಣಿಯೊಂದಿಗೆ ತನ್ನ ಮಗಳು ಜಾಂಬವತಿಯನ್ನೂ ಕೃಷ್ಣನಿಗೆ ಅರ್ಪಿಸಿ ಪರಿಪರಿಯಾಗಿ ಸ್ತುತಿಸಿದ. ಶ್ರೀಕೃಷ್ಣನು ತನ್ನ ಚಕ್ರದಿಂದ ಯಾವ ನೋವೂ ಆಗದಂತೆ ಕೊರೆದು ಅವನ ಜೀರ್ಣದೇಹವನ್ನು ಮತ್ತೆ ಯುವಶರೀರವನ್ನಾಗಿಸಿ, ಭಕ್ತನಾದ ಅವನ ಬೇಡಿಕೆಯನ್ನು ಪೂರೈಸಿದ. ಜಾಂಬವತಿಯೊಂದಿಗೆ ಮಣಿಸಮೇತನಾಗಿ ಕೃಷ್ಣ ಗುಹೆಯಿಂದ ಹೊರಬಂದಾಗ ಅಲ್ಲಿ ಜೊತೆಗೆ ಬಂದಿದ್ದ ಯಾದವರಾರೂ ಇರಲಿಲ್ಲ. ಬಹಳ ದಿನಗಳಾದರೂ ಕೃಷ್ಣ ಹೊರಬರದಿದ್ದನ್ನು ಗಮನಿಸಿ ಯಾದವರೆಲ್ಲ ಊರಿಗೆ ಮರಳಿದ್ದರು.

## ಸತ್ಯಭಾಮಾ ವಿವಾಹ

ಊರಿಗೆ ಬಂದ ಕೃಷ್ಣನನ್ನು ಕಂಡ ಯಾದವರಿಗೆಲ್ಲ ಪರಮಾನಂದವಾಯಿತು. ಎಲ್ಲ ಯಾದವರ ಸಮ್ಮುಖದಲ್ಲಿ ಕೃಷ್ಣ ಸ್ಯಮಂತಕಮಣಿಯನ್ನು ಸತ್ರಾಜಿತನಿಗೆ ಒಪ್ಪಿಸಿದ. ತನ್ನ ತಪ್ಪಿನ ಅರಿವಾಗಿ ಸತ್ರಾಜಿತನ ಮುಖ ಕಾಂತಿಹೀನವಾಯಿತು. ಕೀರ್ತಿ ಕಳೆದುಕೊಂಡ ಅವನು ತಾನು ಕೃಷ್ಣನ ಮೇಲೆ ಸುಳ್ಳು ಅಪವಾದವನ್ನು ಹೊರಿಸಿದ್ದಕ್ಕಾಗಿ ಪರಿತಪಿಸಿದ ; ಅವನು ತನ್ನ ಪಾಪ-ಕಳೆದುಕೊಳ್ಳುವ ದೃಷ್ಟಿಯಿಂದ ತನ್ನ ಮಗಳು ಸತ್ಯಭಾಮೆಯನ್ನು ಜೊತೆಗೆ ಮಣಿಯನ್ನು ಕೃಷ್ಣನಿಗೆ ಸಮರ್ಪಿಸಿ, ತನ್ನ ತಪ್ಪನ್ನು ಕ್ಷಮಿಸಲು ಪ್ರಾರ್ಥಿಸುತ್ತ ನಮಸ್ಕರಿಸಿದ. ಮಣಿಯನ್ನು ಸತ್ರಾಜಿತನಿಗೆ ಹಿಂದಿರುಗಿಸಿದ ಕೃಷ್ಣ ಸತ್ಯಭಾಮೆಯನ್ನು ಸ್ವೀಕರಿಸಿದ. ಸತ್ಯಭಾಮೆಯು ಸಹ ಸಾಕ್ಷಾತ್ ಮಹಾಲಕ್ಷ್ಮಿಯೇ. ಮಹಾಲಕ್ಷ್ಮಿಯ ಶ್ರೀ ರೂಪವೇ ರುಗ್ಮಿಣಿ ; ಭೂ ರೂಪವೇ ಸತ್ಯಭಾಮೆ. ಲೋಕದಲ್ಲೆಲ್ಲ ಅತಿ ಸುಂದರಿಯರಾದ ಅವರಿಬ್ಬರೂ ಸಾಕ್ಷಾತ್ ಮಹಾಲಕ್ಷ್ಮಿಯ ಅವತಾರವಾದ ಕಾರಣದಿಂದಲೇ ಕೃಷ್ಣನ ಹೆಚ್ಚಿನ ಪ್ರೀತಿಗೆ ಪಾತ್ರರಾಗಿದ್ದರು. ಅವರು ಶ್ರೀಹರಿಯಿಂದ ನಿತ್ಯ ಅವಿಯೋಗಿಗಳೇ ಆದವರು. ಜಾಂಬವತಿಯಲ್ಲಿ ಕೃಷ್ಣಪುತ್ರನಾಗಿ ಸಾಂಬನೆಂಬ ಹೆಸರಿನಿಂದ ಚತುರ್ಮುಖಬ್ರಹ್ಮನ ಅಂಶದಿಂದ ಕೂಡಿ ಷಣ್ಮುಖನು ಜನಿಸಿದ.

## ಹಂಸಡಿಬಿಕರ ದುಷ್ಟತನ

ಎಣಿಕೆಗೆ ನಿಲುಕದ ಸದ್ಗುಣಗಳ ಖಣಿಯಾದ ಕೃಷ್ಣ ಈ ರೀತಿಯಾಗಿ ಎಲ್ಲ ಜಗತ್ತನ್ನು ಪಾಲಿಸುತ್ತಿದ್ದಾಗ, ಒಮ್ಮೆ ವಿಷ್ಣುಪಾದಾವಲಂಬಿಯಾದ ಜನಾರ್ದನ ಎಂಬ ಒಬ್ಬ ಬ್ರಾಹ್ಮಣ ಕೃಷ್ಣನ ಬಳಿಗೆ ಬಂದ. ಕೃಷ್ಣನಿಂದ ಗೌರವಿಸಲ್ಪಟ್ಟ ಅವನು ನಮ್ರನಾಗಿ ವಿನಂತಿ ಮಾಡಿದ - ''ಸ್ವಾಮಿಯೇ ! ನನ್ನನ್ನು ಕ್ಷಮಿಸು. ಹೆಚ್ಚು ಪಾಪದಿಂದ ತುಂಬಿದ ಮಾತೊಂದನ್ನು ನಾನೀಗ

ಹೇಳಲಿರುವೆನು. ಕೆಟ್ಟವರ ಪರಿಚಾರಕನಾಗಿರುವ ನನ್ನ ಮಾತೂ ಸಹ ಅಂತಹುದೇ ಆಗಿದೆ. ನಿನಗೆ ತಿಳಿಯದ್ದು ಯಾವುದೂ ಇಲ್ಲ. ನಿನ್ನ ಅಪ್ಪಣೆಯಾದರೆ ಅರಿಕೆ ಮಾಡಿಕೊಳ್ಳುವೆ.'' ''ಅವಶ್ಯವಾಗಿ ಹೇಳು'' ಎಂದು ಕೃಷ್ಣ ತಿಳಿಸಿದಾಗ ಹೇಳತೊಡಗಿದ – ''ಸಾಲ್ವರಾಜನಿಗೆ ಶಿವನ ಪ್ರಸಾದದಿಂದ, ಶಿವಭಕ್ತರೇ ಆದ ಇಬ್ಬರು ಮಕ್ಕಳಾದರು ; ತಂದೆಯ ತಪಸ್ಸಿನ ಬಲದಿಂದಲೂ, ತಮ್ಮ ಸ್ವಂತ ತಪಸ್ಸಿನಿಂದಲೂ ಅಜೇಯತ್ವ ಹಾಗೂ ಅವಧ್ಯತ್ವ ವರಗಳನ್ನು ಪಡೆದಿರುವ ಆ ಇಬ್ಬರೂ ಜರಾಸಂಧನ ಶಿಷ್ಯರು ; ಅವರ ತಪಸ್ಸಿಗೆ ಮೆಚ್ಚಿದ ಶಿವನು ಮಹೋದರ ಮತ್ತು ಕುಂಡಧಾರಿ ಎಂಬ ಎರಡು ಭೂತಗಳನ್ನು ಅವರಿಗೆ ನೀಡಿರುವನು ; ಆ ಭೂತಗಳು ಅವಧ್ಯವಲ್ಲದಿದ್ದರೂ ಶಿವನ ವರದಿಂದ ಅಂತಹ ಶಕ್ತಿಯನ್ನು ಹೊಂದಿವೆ ; ಈ ರೀತಿ ಶಿವನ ವರದಿಂದ ಕೊಬ್ಬಿರುವ ಆ ಇಬ್ಬರೂ ಈಗ ರಾಜಸೂಯಯಾಗವನ್ನು ತಂದೆಯ ಮೂಲಕ ಮಾಡಿಸಬಯಸಿರುವರು. ಅವರ ಗುರು ಜರಾಸಂಧ ದೇವಪಕ್ಷದ ರಾಜರನ್ನೆಲ್ಲ ಜಯಿಸುವ ಅವಕಾಶ ಲಭಿಸುವ ಕಾರಣದಿಂದಾಗಿ ಇದಕ್ಕೆ ವಿರೋಧ ಮಾಡುತ್ತಿಲ್ಲ. ವೈದಿಕರೆಲ್ಲ ಈ ರಾಜಸೂಯಯಾಗವನ್ನು ''ವೈಷ್ಣವ'' ಎಂದು ಕರೆದಿರುವುದರಿಂದ, ಶಿವಭಕ್ತನಾದ ಜರಾಸಂಧ ತಾನೇ ಆ ಯಾಗವನ್ನು ಮಾಡಲು ಬಯಸಿಲ್ಲ. ತಂದೆಗೆ ಕೀರ್ತಿಯನ್ನು , ನಿನಗೆ ಸೋಲನ್ನು ಬಯಸುವ ಈ ಇಬ್ಬರೂ ರಾಜಸೂಯಯಾಗಕ್ಕೆ ಸಿದ್ಧರಾಗಿರುವರು. ಅವರೀಗ ನನ್ನ ಮೂಲಕ ಹೀಗೆ ಹೇಳಿ ಕಳುಹಿಸಿರುವರು – ''ಸಮುದ್ರವಾಸಿಯಾಗಿರುವ ನೀನು ಅಲ್ಲಿಯ ವಿಶೇಷ-ರತ್ನಗಳನ್ನು ತೆಗೆದುಕೊಂಡು ನಮ್ಮಲ್ಲಿಗೆ ಬರತಕ್ಕದ್ದು'' ಕೃಷ್ಣ ! ಇಂತಹ ಮಾತನ್ನು ತಿಳಿಸುತ್ತಿರುವ ನನ್ನನ್ನು ನೀನು ದಯಮಾಡಿ ಮನ್ನಿಸು.'' ತನ್ನ ವಿವರಣೆಯನ್ನು ಮುಗಿಸಿ ಬ್ರಾಹ್ಮಣ ಮತ್ತೊಮ್ಮೆ ನಮಸ್ಕರಿಸಿದ. ಅವನ ಸಂದೇಶವನ್ನು ಕೇಳಿದ ಯಾದವರೆಲ್ಲ ಗಟ್ಟಿಯಾಗಿ ನಕ್ಕುಬಿಟ್ಟರು.

## ಸಮರ ಸಾರಿದ ಶ್ರೀಕೃಷ್ಣ

ಕೃಷ್ಣ ಸಾತ್ಯಕಿಗೆ ಮೇಘದಂತಹ ಗಂಭೀರಸ್ವರದಿಂದ ಅಪ್ಪಣೆ ಮಾಡಿದ : ''ಸಾತ್ಯಕಿ ! ನೀನು ಹೋಗಿ ಆ ನೃಪಾಧಮರಿಗೆ ನನ್ನ ಮಾತನ್ನು ತಿಳಿಸು – ಆಯುಧಸಮೇತನಾಗಿ ನಿಮ್ಮಲ್ಲಿಗೆ ಬಂದು ಕಾಣಿಕೆಯೊಪ್ಪಿಸುವೆನು. ನೀವು ಯುದ್ಧ ಬಯಸುವುದಾದಲ್ಲಿ ಪುಷ್ಕರಕ್ಷೇತ್ರದ ಬಳಿಗೆ ಬನ್ನಿ'' ಬ್ರಾಹ್ಮಣನನ್ನು ಕರೆದುಕೊಂಡು ಬಲಶಾಲಿಯಾದ ಸಾತ್ಯಕಿ ಕೂಡಲೇ ಅವರ ಬಳಿಗೆ ಹೋಗಿ ಕೃಷ್ಣನ ಅಪ್ಪಣೆಯನ್ನು ಅವರಿಗೆ ತಿಳಿಸಿ, ಸಾಕಷ್ಟು ಬೈದು, ಹಿಂದಿರುಗಿದ.

ಅದಕ್ಕಿಂತ ಮುಂಚಿತವಾಗಿ ಆ ಸಾಲ್ವನ ಮಕ್ಕಳು, ರುದ್ರಾವತಾರಿಗಳಾದ ದುರ್ವಾಸರೆಂಬ ಬ್ರಾಹ್ಮಣರನ್ನು ಬಹಳವಾಗಿ ಪೀಡಿಸಿದ್ದರು. ಅಲ್ಲದೆ ಮೂರುಸಾವಿರ ಸನ್ಯಾಸಿಗಳಿಂದ ಕೂಡಿದ್ದ ಅವರ ಕೌಪೀನಾದಿ ಎಲ್ಲ ವಸ್ತ್ರಗಳನ್ನು ಕಿತ್ತುಕೊಂಡಿದ್ದರು. ತಮ್ಮದೇ ವರದಿಂದ ಕೊಬ್ಬಿದ್ದ ಅವರನ್ನು ಶಿಕ್ಷಿಸುವ ಶಕ್ತಿ ದುರ್ವಾಸರಿಗೆ ಇರಲಿಲ್ಲ. ಆದ್ದರಿಂದ ಅವರು ಎಲ್ಲ ದುಷ್ಟರನ್ನೂ ನಾಶಮಾಡಬಲ್ಲ ಮಹಾಶಕ್ತಿಯಿಂದ ಕೂಡಿದ್ದ ಕೃಷ್ಣನನ್ನೇ ಮೊರೆಹೊಕ್ಕರು. ಅವರನ್ನೆಲ್ಲ ಆದರದಿಂದ ಬರಮಾಡಿಕೊಂಡ ಕೃಷ್ಣ ಶ್ರೇಷ್ಠವಸ್ತ್ರಗಳನ್ನು ಅವರಿಗೆ ನೀಡಿ ಅವರನ್ನು ಜೊತೆಗೆ ಕರೆದುಕೊಂಡೇ ಆ ಸಾಲ್ವಪುತ್ರರ ವಧೆಗೆ

ಹೊರಟ. ಆ ಅತ್ರಿಪುತ್ರರಾದ ದೂರ್ವಾಸರನ್ನು ಶಿವನ ಅವತಾರವೆಂಬುದನ್ನು ತಿಳಿದುಕೊಂಡಿದ್ದ ಜರಾಸಂಧ, ಅವರಿಗೆ ಅವಮಾನ ಮಾಡಿದ ತಮ್ಮ ಶಿಷ್ಯರಾದ ಆ ಸಾಲ್ವಪುತ್ರರ ಬಗ್ಗೆ ಅಸಮಾಧಾನ ತಾಳಿ, ಅವರ ಸಹಾಯಕ್ಕೆ ಬರುವುದನ್ನು ನಿಲ್ಲಿಸಿದ.

## ಹಂಸಡಿಬಿಕರ ಸೇನೆ

ಮುನೀಶ್ವರರಿಂದ ಕೂಡಿಕೊಂಡು ಕೃಷ್ಣನು ಪುಷ್ಕರದ ಬಳಿ ಬರುವ ವೇಳೆಗೆ, ಹಂಸ-ಡಿಬಿಕರೆಂಬ ಆ ಸಾಲ್ವಪುತ್ರರಿಬ್ಬರೂ ತಮ್ಮ ತಂದೆ ಬ್ರಹ್ಮದತ್ತನೊಂದಿಗೆ ತಾವೂ ಅಲ್ಲಿಗೆ ಬಂದರು. ಅವರೊಂದಿಗೆ ಶಿವನ ಆ ಎರಡು ಭೂತಗಳೂ ಬಂದವು. ಹಿಂದೆ ಬ್ರಹ್ಮದೇವರ ವರದಿಂದ ಅವಧ್ಯತ್ವ, ಅಜೇಯತ್ವ ವರಗಳನ್ನು ಹೊಂದಿ ಹಂಸಡಿಬಿಕರಿಗೆ ಸ್ನೇಹಿತನಾಗಿದ್ದ ವಿಚಕ್ರ ಎಂಬ ರಾಕ್ಷಸನೂ ಸಹ ಅವರನ್ನು ಈಗ ಹಿಂಬಾಲಿಸಿ ಬಂದಿದ್ದ. ಶಿವನಿಂದ ಅಂತಹುದೇ ವರ ಪಡೆದಿದ್ದ ಹಿಡಿಂಬನೆಂಬ ರಾಕ್ಷಸನೂ ಅವರ ಸ್ನೇಹಿತನಾಗಿದ್ದು, ಅವನೂ ಅವರೊಂದಿಗೆ ಬಂದಿದ್ದ. ಹಂಸಡಿಬಿಕರ ಸೈನ್ಯದ ಸಂಖ್ಯೆ ೧೦ ಅಕ್ಷೋಹಿಣೀ, ವಿಚಕ್ರನದು ೬ ಅಕ್ಷೋಹಿಣೀ, ಹಿಡಿಂಬನದು ಒಂದು ಅಕ್ಷೋಹಿಣೀ. ಹೀಗೆ ಒಟ್ಟು ಹದಿನೇಳು ಅಕ್ಷೋಹಿಣೀ ಸೇನೆ ಅವರ ಹಿಂದೆ ಬಂದಿತ್ತು. ಆಗ ಭಯಂಕರ ದ್ವಂದ್ವಯುದ್ಧವು ಪ್ರಾರಂಭವಾಯಿತು.

## ಅಸುರರ ಪರಾಭವ

ಕೃಷ್ಣನು ವಿಚಕ್ರನನ್ನೂ, ಬಲರಾಮ ಉದ್ಧತನಾದ ಹಂಸನನ್ನೂ , ಸಾತ್ಯಕಿ ಡಿಬಿಕನನ್ನೂ, ರೋಹಿಣಿಯ ಮಗನಾದ ಚಂಡಕಗಣಕ್ಕೆ ಸೇರಿದ ಒಬ್ಬ ದೇವತೆಯ ಅವತಾರನಾದ ಗದ ಎಂಬ ಕೃಷ್ಣನ ತಮ್ಮನು ಅವರ ತಂದೆ ಬ್ರಹ್ಮದತ್ತನನ್ನೂ ಎದುರಿಸಿದರು. ಮೂರು ಅಕ್ಷೋಹಿಣೀ ಸಂಖ್ಯೆಯ ಯಾದವಸೇನೆ ಆ ಶಿವನ ಭೂತಗಳನ್ನೂ, ಹಿಡಿಂಬ ರಾಕ್ಷಸನನ್ನೂ ಎದುರಿಸಿತು. ಕೃಷ್ಣನು ಮಹಾ ಶಸ್ತ್ರಾಸ್ತ್ರಗಳನ್ನು ಸುರಿಸುತ್ತಿದ್ದ ವಿಚಕ್ರನನ್ನು ಕ್ಷಣಾರ್ಧದಲ್ಲಿ ತನ್ನ ಬಾಣಗಳಿಂದ ರಥಹೀನನನ್ನಾಗಿಸಿದ ; ಹಾಗೂ ನಿರಾಯುಧನನ್ನಾಗಿಸಿದ. ಅನಂತರ ವೃಕ್ಷಗಳನ್ನು, ಬೆಟ್ಟಗಳನ್ನು ಎಸೆಯಲಾರಂಭಿಸಿದ ಅವನ ಶಿರಸ್ಸನ್ನು ಕೃಷ್ಣ ಚಕ್ರದಿಂದ ಮುಂಡದಿಂದ ಬೇರ್ಪಡಿಸಿದ. ಹರಿಯ ಈ ಕಾರ್ಯ ಬ್ರಹ್ಮಾದಿಗಳನ್ನು ಸಂತೋಷಪಡಿಸಿತು. ಅವರು ಪುಷ್ಪವೃಷ್ಟಿಗರೆದರು. ಅನಂತರ ಕೃಷ್ಣ ಯಾದವರನ್ನು ತಿನ್ನತೊಡಗಿದ್ದ ಆ ಭೂತಗಳನ್ನು ತಡೆಗಟ್ಟಿದ. ಎಲ್ಲ ಯಾದವಸೇನೆಯನ್ನು ಯುದ್ಧದಲ್ಲಿ ಗೆದ್ದಿದ್ದ ಆ ಭೂತಗಳು ಕೃಷ್ಣನ ಭುಜವನ್ನೇರಿ ಅವನ ಸುಂದರವಾದ ಕಿವಿಗಳನ್ನು ಕಚ್ಚಲೆತ್ನಿಸಿದವು ; ಅವನು ಒಮ್ಮೆ ತನ್ನ ಭುಜಗಳನ್ನು ಕುಣಿಸಿದ. ಆ ಕುಣಿತದ ರಭಸಕ್ಕೆ ಭೂತಗಳು ಕೈಲಾಸಕ್ಕೇ ಹೋಗಿಬಿದ್ದವು ; ಬಲಸಾಗರನಾದ ಕೃಷ್ಣನಿಗೆ ಇದಾವ ದೊಡ್ಡ ಕಾರ್ಯ !

## ಹಿಡಿಂಬನ ಪರಾಭವ

ತಮ್ಮ ಸೈನ್ಯವನ್ನು ತಿನ್ನುತ್ತಿದ್ದ ಹಿಡಿಂಬನ ಮೇಲೆ ವಸುದೇವ, ಉಗ್ರಸೇನರು ಬಾಣಗಳನ್ನು ಸುರಿಸುತ್ತ ಏರಿಹೋದರು. ಅವರಿಬ್ಬರ ರಥಗಳನ್ನು ಆಯುಧಗಳನ್ನು ತಿಂದು ಹಾಕಿದ ರಾಕ್ಷಸ,

ಅವರಿಬ್ಬರನ್ನು ಕೈಯಲ್ಲಿ ಹಿಡಿದುಕೊಂಡು ಹೇಳಿದ – ''ನೀವಿಬ್ಬರೂ ಬೇಗ ನನ್ನ ಬಾಯಿಯೊಳಗೆ ಪ್ರವೇಶಿಸಿರಿ''. ಹಂಸನನ್ನು ಎದುರಿಸುತ್ತಿದ್ದ ಬಲರಾಮ ಅದನ್ನು ಗಮನಿಸಿ, ಆ ಯುದ್ಧವನ್ನು ಅಲ್ಲಿಗೆ ನಿಲ್ಲಿಸಿ, ಅವರಿಬ್ಬರ ರಕ್ಷಣೆಗೆ ಧಾವಿಸಿ ಬಂದ. ಬಲರಾಮ ಬಂದದ್ದನ್ನು ಕಂಡ ಹಿಡಿಂಬ ಅವರನ್ನು ಬಿಟ್ಟು, ಬಲರಾಮನನ್ನು ಸಮೀಪಿಸಿ, ಕೋಪದಿಂದ ತನ್ನ ಮುಷ್ಟಿಯಿಂದ ಅವನ ಎದೆಯ ಮೇಲೆ ಗುದ್ದಿದ. ಬಲಶಾಲಿಗಳಾದ ಆ ಇಬ್ಬರು ಮುಷ್ಟಿಗಳಿಂದಲೇ ಕಾದಾಡಿದರು. ಬಹಳ ಹೊತ್ತು ಹೋರಾಡಿದ ಮೇಲೆ ಬಲರಾಮ ಹಿಡಿಂಬನ ಎರಡೂ ಜಂಘೆಗಳನ್ನು ಹಿಡಿದು, ಬಲಾತ್ಕಾರದಿಂದ ಎತ್ತಿ ದೂರಕ್ಕೆ ಎಸೆದ. ಒಂದೂ ಕಾಲು ಯೋಜನದಷ್ಟು ದೂರಬಿದ್ದ ಆ [೧]ಹಿಡಿಂಬ ತಿರುಗಿ ಯುದ್ಧಕ್ಕೆ ಬರದೆ, ತನ್ನ ಸೈನಿಕರನ್ನು ಮಿತ್ರರನ್ನು ಬಿಟ್ಟು ಕಾಡನ್ನು ಸೇರಿಕೊಂಡ. ಅವನ ಅನುಯಾಯಿಗಳಾದ ರಾಕ್ಷಸರನ್ನೆಲ್ಲ ಕೊಂದು ಹಾಕಿ ಬಲರಾಮ ಸಿಂಹನಾದ ಮಾಡಿದ.

ಗದನು ವಯಸ್ಸಾದ ಸಾಲ್ವರಾಜ ಬ್ರಹ್ಮದತ್ತನನ್ನು ಎದುರಿಸಿ ಅವನ ಆಯುಧ ಮತ್ತು ವಾಹನಗಳನ್ನು ನಾಶಪಡಿಸಿದ. ಡಿಬಿಕನೊಂದಿಗೆ ಸಾತ್ಯಕಿ ಇನ್ನೂ ಹೋರಾಡುತ್ತಲೇ ಇದ್ದ. ವಿವಿಧ ಶ್ರೇಷ್ಠ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತ ಆ ಇಬ್ಬರು ಬಹಳ ಹೊತ್ತು ಒಂದೇ ಸಮನೆ ಕಾದಿದರು.

## ಪುಷ್ಕರಕ್ಷೇತ್ರದಲ್ಲಿ ಶ್ರೀಕೃಷ್ಣ

ಸಾತ್ಯಕಿ ಡಿಬಿಕನ ನೂರ ಐದು ಬಿಲ್ಲುಗಳನ್ನು ಕತ್ತರಿಸಿಹಾಕಿದ. ಕತ್ತಿ ಗುರಾಣಿಗಳನ್ನು ತೆಗೆದುಕೊಂಡು ಡಿಬಿಕ ಮತ್ತೆ ನುಗ್ಗಿದ. ಭಯವಿಲ್ಲದ ಸಾತ್ಯಕಿಯು ತಾನೂ ಅದೇ ರೀತಿ ಖಡ್ಗ ಗುರಾಣಿಗಳೊಂದಿಗೆ ಅವನನ್ನು ಎದುರಿಸಿದ. ಮೂವತ್ತೆರಡು ಬಗೆಯ ಖಡ್ಗ ಯುದ್ಧವನ್ನು ಪ್ರದರ್ಶಿಸಿದ ಅವರು ಸಮಾನವಾಗಿ ಕಾದಾಡಿದರು. ಪರಸ್ಪರ ಹೊಂಚುತ್ತಿದ್ದ ಅವರಿಬ್ಬರಲ್ಲಿ ಯಾರಿಗೂ ಅವಕಾಶವೇ ಸಿಕ್ಕಲಿಲ್ಲ. ಕಾದಾಡುವುದು ವ್ಯರ್ಥವೆಂದು ಭಾವಿಸಿದ ಇಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ಬೇರೆಡೆಗೆ ಹೊರಟರು. ಹಂಸನಿಂದ ಕೂಡಿಕೊಂಡ ಡಿಬಿಕ ಕೃಷ್ಣನ ಮೇಲೆಯೇ ಧಾವಿಸಿದ. ಕ್ಷಣಮಾತ್ರದಲ್ಲಿ ಕೃಷ್ಣ ಅವರಿಬ್ಬರನ್ನು ಬಾಣಗಳಿಂದ ನಿರಾಯುಧರನ್ನಾಗಿಸಿ, ಉಳಿದಿದ್ದ ಅವರ ಮುಕ್ಕಾಲು ಭಾಗ ಸೈನ್ಯವನ್ನು ಕೊಂದು ಹಾಕಿದ. ಭಯಗೊಂಡ ಅವರಿಬ್ಬರೂ ಅಲ್ಲಿಂದ ಕಾಲ್ಕಿತ್ತರು. ಸುರರಿಂದ ಸ್ತುತನಾದ ಕೃಷ್ಣ ಆ ರಾತ್ರಿಯನ್ನು ಪುಷ್ಕರದಲ್ಲಿಯೇ ಕಳೆದ.

## ಹಂಸನ ಸಾವು

ಮಾರನೆಯ ದಿನ ಶ್ರೀಕೃಷ್ಣನು ಬಲರಾಮ ಹಾಗೂ ಸೇನೆಯೊಂದಿಗೆ ಕೂಡಿಕೊಂಡು, ಪಲಾಯನಗೈಯ್ಯುತ್ತಿದ್ದ ಹಂಸಡಿಬಿಕರನ್ನು ಹಿಂಬಾಲಿಸಿ ಯಮುನಾತೀರದಲ್ಲಿ ಅವರನ್ನು ಅಡ್ಡಗಟ್ಟಿದ. ಅಳಿದುಳಿದ ಸೇನೆಯೊಂದಿಗೆ ಹಂಸಡಿಬಿಕರು, ಕೋಪದಿಂದ, ಶ್ರೇಷ್ಠ ಬಾಣಗಳನ್ನೇ ಯಾದವರ ಮೇಲೆ ಪ್ರಯೋಗಿಸಲಾರಂಭಿಸಿದರು. ಹಂಸನು ಬಲರಾಮನನ್ನು, ಡಿಬಿಕನು

---

೧. ಈ ಹಿಡಿಂಬಾಸುರನು ಮುಂದೆ ಭೀಮನಿಂದ ಹತನಾದನು.

ಸಾತ್ಯಕಿಯನ್ನು, ಉಳಿದೆಲ್ಲ ಸೇನೆ ಗದನನ್ನು ಮುತ್ತಿತು. ಡಿಬಿಕನು ಸಾತ್ಯಕಿಯ ವಾಹನ ಹಾಗೂ ಆಯುಧಗಳನ್ನೆಲ್ಲ ಕತ್ತರಿಸಿದ. ಗದನ ಪರಿಸ್ಥಿತಿಯೂ ಹಾಗೆಯೇ ಆಯಿತು. ಅವರಿಬ್ಬರೂ ಅಲ್ಲಿಂದ ಹಿಂದಿರುಗಿದರು. ಬೀಗುತ್ತಿದ್ದ ಡಿಬಿಕ ಉಳಿದೆಲ್ಲ ಸೈನ್ಯವನ್ನು ಸೋಲಿಸಿ ಧನುರ್ಧಾರಿಯಾಗಿ ಕೃಷ್ಣನನ್ನೇ ಎದುರಿಸಿ ಹೊರಟ. ಒಂದೇ ಕ್ಷಣದಲ್ಲಿ ಕೃಷ್ಣ ಅವನ ಎಲ್ಲಾ ಸಾಮಗ್ರಿಗಳನ್ನು ನಾಶಪಡಿಸಲು, ಅವನು ಅಲ್ಲಿಂದ ಬಲರಾಮನ ಮೇಲೆ ಹೊರಟ. ಬಲರಾಮ ಅವನನ್ನು ತನ್ನ ಸಾಮರ್ಥ್ಯದಿಂದ ಆಯುಧಹೀನನನ್ನಾಗಿ ಮಾಡಿದ ; ಆ ವೇಳೆಗೆ ಬಿಲ್ಲನ್ನು ತೆಗೆದುಕೊಂಡು ತನ್ನತ್ತ ಧಾವಿಸಿದ ಡಿಬಿಕನನ್ನು ಕಂಡ. ಹಂಸ ಬೇರೊಂದು ಬಿಲ್ಲನ್ನು ತೆಗೆದುಕೊಂಡು ಮತ್ತೆ ಬಲರಾಮನ ಮೇಲೆ ಹೊರಟದ್ದನ್ನು ಕಂಡು ಕೃಷ್ಣ ಅವನನ್ನು ತಡೆದ. ಸಾತ್ಯಕಿ ಬೇರೊಂದು ರಥದಲ್ಲಿ ಕುಳಿತು ವಯಸ್ಸಾದ ಬ್ರಹ್ಮದತ್ತನನ್ನು ಎದುರಿಸಿದ. ಅವನೂ ಸಾತ್ಯಕಿಯ ಕಂಠಕೂಬರದಲ್ಲಿ ಬಾಣವೊಂದನ್ನು ಪ್ರಯೋಗಿಸಿದ. ಅದರಿಂದ ಬಹಳವಾಗಿ ಪೆಟ್ಟುತಿಂದ ಸಾತ್ಯಕಿ ಮೂರ್ಛಿತನಾದ. ಬಳಿಕ ಪ್ರಜ್ಞೆಮರಳಿದ ಬಲಶಾಲಿಯಾದ ಅವನು ಒಂದು ಅರ್ಧಚಂದ್ರಾಕೃತಿಯ ಬಾಣವನ್ನು ಕೈಗೆತ್ತಿಕೊಂಡು, ಅದರಿಂದ ಬಿಳಿಕೂದಲಿನಿಂದ ತುಂಬಿದ್ದ ಅವನ ತಲೆಯನ್ನು ಕತ್ತರಿಸಿದ ; ಹಿಂದೆ ಅಂಬೆ ಬಯಸಿದ್ದ ಆ ಶಿರಸ್ಸು ನೆಲದ ಮೇಲೆ ಬಿದ್ದಿತು.

ಹರ್ಷಗೊಂಡ ಸಾತ್ಯಕಿ ಸಿಂಹನಾದ ಮಾಡುತ್ತ ಕೃಷ್ಣನ ಬಳಿಗೆ ನಡೆದ. ಸೇನಾಸಮೇತನಾಗಿದ್ದ ಡಿಬಿಕನನ್ನು ಬಲರಾಮ ಎದುರಿಸುತ್ತಿದ್ದ. ಕೃಷ್ಣನು ತೀಕ್ಷ್ಣವಾದ ಬಾಣಗಳಿಂದ ಹಂಸನನ್ನು ಹೊಡೆಯುತ್ತ, ಅವನ ಸೈನಿಕರಲ್ಲಿ ಒಬ್ಬನೂ ಉಳಿಯದಂತೆ ಸಂಹರಿಸಿದ. ಅವನೊಬ್ಬನೇ ಮಹಾಸ್ತ್ರಗಳನ್ನು ಬಿಡುತ್ತಿದ್ದ ಕೃಷ್ಣನತ್ತ ನುಗ್ಗಿದ. ಅವೆಲ್ಲವನ್ನು ಕತ್ತರಿಸಿದ ಕೃಷ್ಣ ತನ್ನ ವೈಷ್ಣವಾಸ್ತ್ರವನ್ನು ಕೈಗೆತ್ತಿಕೊಂಡ. ಅದನ್ನು ಕಂಡ ಹಂಸ ರಥದಿಂದ ಭೂಮಿಗೆ ಹಾರಿ, ಭಯದಿಂದ ಓಡುತ್ತಾ ಯಮುನಾನದಿಯಲ್ಲಿ ಬಿದ್ದ. ಅಸ್ತ್ರಪಾಣಿಯಾಗಿಯೇ ಅಲ್ಲಿಗೆ ಬಂದ ಕೃಷ್ಣ ಅವನ ತಲೆಯನ್ನು ತನ್ನ ಕಾಲಿನಿಂದ ಒದ್ದ. ಮೂರ್ಛೆಹೋದ ಅವನು ಅಲ್ಲಿದ್ದ ದೊಡ್ಡಸರ್ಪವೊಂದರ ಬಾಯಿಯಲ್ಲಿ ಬಿದ್ದ. ಹರಿದ್ವೇಷಿಯಾದ ಅವನು ಅದರ ಉದರದಲ್ಲಿಯೇ ದುಃಖಪಡುತ್ತ [೧]ಮನ್ವಂತರದ ಕೊನೆಯಲ್ಲಿ ಪ್ರಾಣಬಿಟ್ಟು ಅಂಧಂತಮಸ್ಸನ್ನೇ ನಿಶ್ಚಯವಾಗಿ ಹೊಂದುವನು.

## ಡಿಬಿಕನ ಸಾವು

ಅಣ್ಣ ಯಮುನೆಯಲ್ಲಿ ಬಿದ್ದುದ್ದನ್ನು ಕಂಡ ಅವನ ತಮ್ಮ ಡಿಬಿಕ ಬಲರಾಮನೊಂದಿಗೆ ಯುದ್ಧ ಮಾಡುವುದನ್ನು ನಿಲ್ಲಿಸಿ, ಅಣ್ಣನನ್ನು ಹುಡುಕಲೆಂದು ನೀರಿನಲ್ಲಿ ಮುಳುಗಿ ಅಲ್ಲೆಲ್ಲೂ ಅವನನ್ನು ಕಾಣದೆ ತನ್ನ ಕಿರುನಾಲಿಗೆಯನ್ನು ಕತ್ತರಿಸಿಕೊಂಡು ಮೃತನಾದ. ತಮಸ್ಸನ್ನು ಹೊಂದಿದ ಅವನು ಅಣ್ಣನಿಗಾಗಿ ಕಾಯುತ್ತ ಅಲ್ಲಿ ದುಃಖವನ್ನು ಅನುಭವಿಸುತ್ತಿರುವನು.

---

೧. ಅವಧ್ಯತ್ವ ವರವಿದ್ದ ಹಂಸನು ತನ್ನ ಉದರದಲ್ಲಿ ಸೇರಿದ್ದರಿಂದ ಆ ಸರ್ಪವು ಸಹ ಹಾಗೆ ದೀರ್ಘಕಾಲ ಸಾಯದೆ ಉಳಿಯಲು ಸಾಧ್ಯವಾಯಿತು ಎಂದು ತಿಳಿಯಬೇಕು.

ಅನಂತರ ಕೃಷ್ಣ ತನ್ನ ಸೇನೆಯೊಂದಿಗೂ, ಬಲರಾಮನೊಂದಿಗೂ ಮುನಿಶ್ರೇಷ್ಠರಿಂದಲೂ ಕೂಡಿಕೊಂಡು, ಬ್ರಹ್ಮರುದ್ರಾದಿಗಳಿಂದ ಸ್ತುತಿಸಲ್ಪಟ್ಟವನಾಗಿ ಕುಶಸ್ಥಲಿಗೆ ಮರಳಿದ ; ತನ್ನ ಪಾದಕಮಲವನ್ನು ಬಯಸುವ ಜನರನ್ನು ಆನಂದಪಡಿಸುತ್ತ ಸ್ವಯಂ ನಿತ್ಯಸುಖಸಾಗರನಾದ ಆ ರಮಾಪತಿ ತನ್ನ ಮನೆಯಲ್ಲಿ ವಾಸಿಸಿದ.

## ಭೀಮಸೇನನ ಭಾಗವತಧರ್ಮ

ದ್ರೋಣರು ಪರಶುರಾಮರಿಂದ ಪಡೆದ ದಿವ್ಯಾಸ್ತ್ರಗಳನ್ನು, ರಾಜಕುಮಾರರು ಅವರಿಂದ ಪಡೆದರು. ಅಸ್ತ್ರನೈಪುಣ್ಯದಲ್ಲಿ ಅರ್ಜುನನೇ ಅವರಲ್ಲೆಲ್ಲ ಶ್ರೇಷ್ಠನೆನ್ನಿಸಿದ. ತನ್ನ ಸಹಜ ಪ್ರತಿಭೆಯಿಂದಲೇ ಎಲ್ಲ ಅಸ್ತ್ರಗಳನ್ನು ಅರ್ಜುನನಿಗಿಂತಲೂ ಚೆನ್ನಾಗಿ ತಿಳಿದಿದ್ದ ಭೀಮಸೇನ, ಅಂತಹ ಅಸ್ತ್ರಯುದ್ಧವನ್ನು ಧರ್ಮವೆಂದು ಎಂದೂ ತಿಳಿಯಲಿಲ್ಲ. ದೇವತೆಗಳನ್ನು ಬೇಡುವುದು ಎಂದೂ ಭಾಗವತಧರ್ಮವೆನ್ನಿಸಲಾರದು. ಜ್ಞಾನ, ಭಕ್ತಿ ಮತ್ತು ಹರಿಪ್ರೀತಿ ಇವುಗಳನ್ನು ಹೊರತು ಬೇರೇನನ್ನೂ ವಿಷ್ಣುವಿನಿಂದ ಸಹ ಬೇಡಕೂಡದು ; ಅಂದಮೇಲೆ ಇತರರಿಂದ ಬೇರೆ ವಸ್ತು-ಗಳನ್ನು ಯಾಚಿಸುವುದು ಧರ್ಮವಲ್ಲವೆಂದು ಹೇಳಬೇಕಾದ್ದೇನಿದೆ ! ಅಸ್ತ್ರವಾದರೋ ಕಾಮ್ಯ-ಫಲವನ್ನು ಕೊಡುವಂತಹುದು ; ಶುದ್ಧಭಾಗವತಧರ್ಮದಲ್ಲಿ ಯಾವಾಗಲೂ ನಿರತನಾಗಿದ್ದ-ರಿಂದಲೇ ಭೀಮಸೇನ ಎಂದೂ ಕಾಮ್ಯಕರ್ಮವನ್ನು ಆಚರಿಸಲಿಲ್ಲ ; ಎಂದೂ ದೇವತೆ-ಗಳನ್ನಾಗಲೀ, ಮನುಷ್ಯರನ್ನಾಗಲೀ ಬೇಡಲಿಲ್ಲ ; ಹರಿಯನ್ನೂ ಕೂಡ ಎಂದೂ ಕಾಮ್ಯಫಲದ ಉದ್ದೇಶದಿಂದ ಬೇಡಲಿಲ್ಲ ; ಏಕಚಕ್ರನಗರದಲ್ಲಿ ಭಿಕ್ಷೆಗೆ ಹೋದಾಗಲೂ ಹುಂಕಾರಮಾತ್ರದಿಂದ ವೈಶ್ಯರಿಂದ ಕಪ್ಪ ಪಡೆದಂತೆ ಪಡೆಯುತ್ತಿದ್ದನೇ ಹೊರತು ಬೇಡಿ ಪಡೆಯುತ್ತಿರಲಿಲ್ಲ ; ವಾಸು-ದೇವನನ್ನು ಹೊರತು ಬೇರಾವ ದೇವತೆಯನ್ನೂ ಅವನು ನಮಸ್ಕರಿಸಲಿಲ್ಲ, ಪೂಜಿಸಲಿಲ್ಲ ; ಹರಿಗೆ ವಿರೋಧವನ್ನು ಎಂದೂ ಅವನು ಮಾಡಲಿಲ್ಲ ; ನಿರಾಯುಧರನ್ನು ಆಯುಧ ಸಮೇತನಾಗಿ ಎಂದೂ ಯುದ್ಧದಲ್ಲಿ ಎದುರಿಸಲಿಲ್ಲ ; ಯುದ್ಧರಂಗದಿಂದ ಎಂದೂ ಹಿಮ್ಮೆಟ್ಟ-ಲಿಲ್ಲ ; ಕಪಟವನ್ನು ಆಚರಿಸಲಿಲ್ಲ ; ಭಗವದ್ದ್ವೇಷಿಗಳ ಪ್ರೇತಕಾರ್ಯಕ್ಕೂ ಭೀಮಸೇನ ಅನುಜ್ಞೆಯನ್ನು ಕೊಡಲಿಲ್ಲ ; ತಾನೂ ಮಾಡಲಿಲ್ಲ ; ಹರಿದ್ವೇಷಿಗಳೊಂದಿಗೆ ಸ್ನೇಹವನ್ನಾಗಲೀ, ಹರಿಭಕ್ತರೊಂದಿಗೆ ದ್ವೇಷವನ್ನಾಗಲೀ ಯಾವ ಕಾಲಕ್ಕೂ ಮಾಡಲಿಲ್ಲ ; ಭಗವಂತನ ನಿಂದೆಯನ್ನು ಪರೋಕ್ಷವಾಗಿ ಮಾಡಿದರೂ ನಾಲಿಗೆಯನ್ನು ಕತ್ತರಿಸುತ್ತಿದ್ದ ; ಭಗವದ್ದ್ವೇಷಿಗಳನ್ನಂತೂ ಸಂಹರಿಸಿಯೇಬಿಡುತ್ತಿದ್ದ. ಧರ್ಮಜ್ಞಾನಗಳಲ್ಲಿ ಎಂದೂ ಸಂಶಯಪಡಲಿಲ್ಲ ; ಎಂತಹ ಆಪತ್ಕಾಲದಲ್ಲೂ ವಿದ್ಯೆಯಿಂದ ಉಪಜೀವನ ನಡೆಸಲಿಲ್ಲ ; ಆದ್ದರಿಂದಲೇ ಅಜಗರ (ನಹುಷ)ನ ಹಾಗೂ ಯಕ್ಷ(ಯಮಧರ್ಮ)ನ ಧಾರ್ಮಿಕ ಪ್ರಶ್ನೆಗಳಿಗೆ ಉತ್ತರಿಸಲಿಲ್ಲ ; ಅಶ್ವತ್ಥಾಮರ ಅಸ್ತ್ರಗಳಿಗೆ ಪ್ರತಿಯಾಗಿ, ಅಸ್ತ್ರಗಳನ್ನು ಆಜ್ಞಾಪಿಸಿ ಕಳುಹಿಸುತ್ತಿದ್ದನೇ ಹೊರತು ಬೇಡಿಕೆಯಿಂದಲ್ಲ. ಅದೃಶ್ಯನಾದ ಅಲಂಬುಸನನ್ನು ಅದೇ ರೀತಿಯಾಗಿಯೇ ಅಸ್ತ್ರಗಳಿಂದ ಭಗ್ನಗೊಳಿಸಿದ. ಅರ್ಜುನನ ಹೊರತು ಅಶ್ವತ್ಥಾಮರಿಗೆ ಸಾಟಿಯಾದ ಬೇರೊಬ್ಬ ಅಸ್ತ್ರವೀರನಿರಲಿಲ್ಲವಷ್ಟೆ !

ಭೀಮನಲ್ಲಿ ಸರ್ವಜ್ಞತ್ವವನ್ನು ತೋರಿಸಲೆಂದೇ ಕೃಷ್ಣನು ಅಶ್ವತ್ಥಾಮರೊಂದಿಗೆ ಅಸ್ತ್ರಯುದ್ಧ ನಡೆಸಲು ಅಪ್ಪಣೆ ಕೊಟ್ಟಿದ್ದ. ಅಲಂಬುಸನ ವಿಷಯದಲ್ಲೂ ಹಾಗೆಯೇ ಕೃಷ್ಣನ ಆಜ್ಞೆಯಿತ್ತು. ದೇವತೆಗಳು ಎದುರಿಗೆ ಬಂದಾಗ ಮತ್ತು ಹಿರಿಯ ಬಂಧುಗಳ ವಿಷಯದಲ್ಲಿ ಮಾತ್ರ ಲೋಕಮರ್ಯಾದೆಯ ರಕ್ಷಣೆಗಾಗಿ ಕೃಷ್ಣ ನಮಸ್ಕರಿಸಲು ಅವನಿಗೆ ಅಪ್ಪಣೆ ಕೊಟ್ಟಿದ್ದ. ಆಗಲೂ ಅಂತರ್ಯಾಮಿಯಾದ ವಿಷ್ಣುವಿಗೆ ನಮಸ್ಕರಿಸುತ್ತಿದ್ದನೇ ಹೊರತು ಆಯಾ ವ್ಯಕ್ತಿಗಳಿಗಲ್ಲ ; ಅಸ್ತ್ರದೇವತೆಗಳನ್ನೂ ಸಹ ಆಜ್ಞೆಯಿಂದ ಪ್ರೇರಿಸುತ್ತಿದ್ದನೇ ಹೊರತು ಬೇಡಿಕೆಯಿಂದಲ್ಲ.

## ದ್ರೌಪದಿಯ ಭಗವನ್ನಿಷ್ಠೆ

ಭೀಮಸೇನನನ್ನು ಅನುಸರಿಸಿ ಆ ರೀತಿ ಭಾಗವತಧರ್ಮದಲ್ಲಿ ದ್ರೌಪದಿ ಮಾತ್ರ ಯಾವಾಗಲೂ ನಿರತಳಾಗಿದ್ದಳು. ಧೃತರಾಷ್ಟ್ರನಿಂದಲೂ ಸಹ ವರವನ್ನು ತನಗೋಸ್ಕರ ಕೇಳಿಕೊಳ್ಳಲಿಲ್ಲ ; ಎಂತಹ ಮಹಾ ಆಪತ್ತಿನಲ್ಲೂ ಕೌರವರನ್ನು ಶಪಿಸಲಿಲ್ಲ ; ಅದೇ ರೀತಿ ಮನಸ್ಸಿನಲ್ಲಾಗಲೀ, ಮಾತಿನಲ್ಲಾಗಲೀ ಎಂದೂ ವಿಷ್ಣುವಿಗೆ ವಿರೋಧವನ್ನೆಸಗಲಿಲ್ಲ.

## ಇತರರೆಲ್ಲರೂ ಭಾಗವತಧರ್ಮ ತಪ್ಪಿದವರು

ಉಳಿದವರೂ ಭಾಗವತರೇ ಆದರೂ ಒಮ್ಮೊಮ್ಮೆ ಭಾಗವತಧರ್ಮವನ್ನು ತಪ್ಪುತ್ತಿದ್ದರು. ಸ್ಯಮಂತಕಮಣಿಯ ಕಾರಣಕ್ಕಾಗಿ ಬಲರಾಮನೂ ಕೃಷ್ಣನ ಬಗ್ಗೆ ಮನಸ್ಸು ಕೆಡಿಸಿಕೊಂಡ. ವಿಪ್ರನ ಶಿಶುರಕ್ಷಣ ಪ್ರಸಂಗದಲ್ಲಿ ಅರ್ಜುನ ಕೃಷ್ಣನನ್ನು ಅವಮಾನಿಸಿದ. ಪ್ರದ್ಯುಮ್ನ, ಉದ್ಧವ, ಸಾಂಬ, ಅನಿರುದ್ಧ ಮೊದಲಾದವರೆಲ್ಲರೂ ಸುಭದ್ರೆಯನ್ನು ಅರ್ಜುನನಿಗೆ ಕೊಡಬೇಕೆಂಬ ಕೃಷ್ಣನ ಸಂಕಲ್ಪವನ್ನು ತಿಳಿದೂ ಅದನ್ನು ತಡೆಯಲು ಪ್ರಯತ್ನಿಸಿದರು. ಸಾತ್ಯಕಿಯು ಒಮ್ಮೊಮ್ಮೆ ಅರ್ಜುನನನ್ನು ಕೃಷ್ಣನಿಗೆ ಸಮನೆಂಬುದಾಗಿ ತಿಳಿಯುತ್ತಿದ್ದ. ಧರ್ಮರಾಜನು ಕೃಷ್ಣನನ್ನು ಮನುಷ್ಯನೆಂದು ಭಾವಿಸಿ, ಜರಾಸಂಧನ ವಧೆಯ ವಿಷಯದಲ್ಲಿ ಕೃಷ್ಣನನ್ನು ಕಳುಹಿಸಲು ಭಯಪಟ್ಟ. ಕೃಷ್ಣನು ಬಂಧಿಸಲ್ಪಡಬಹುದು ಎಂಬ ಶಂಕೆಯಿಂದ ಕೌರವಸಭೆಯ ಮಧ್ಯದಲ್ಲಿ ಕಾಣಿಸಿಕೊಳ್ಳುವುದಕ್ಕೆ ವಿದುರ ಒಪ್ಪಲಿಲ್ಲ. ನಕುಲ ಕಪ್ಪ ನೀಡಲು ಕೃಷ್ಣನಿಗೆ ಹೇಳಿ ಕಳುಹಿಸಿದ. ಸಹದೇವನು ಕುಲಕ್ಷಯಕ್ಕೆ ಕಾರಣವಾದ ಹರಿಯ ರಾಜನೀತಿಯನ್ನು ಮೆಚ್ಚಲಿಲ್ಲ. ದೇವಕೀ ವಸುದೇವಾದಿಗಳು ಹರಿಯನ್ನು ಮನುಷ್ಯನೆಂದೇ ಬಗೆಯುತ್ತಿದ್ದರು. ದ್ರೋಣ, ಕರ್ಣ, ಅಶ್ವತ್ಥಾಮ, ಕೃಪ ಮೊದಲಾದವರು ಕೃಷ್ಣನನ್ನು ಕೊಲ್ಲುವ ವಿಷಯದಲ್ಲಿ ಮನಸ್ಸನ್ನು ಹಾಕಿದರು. ಭೀಷ್ಮರು ಪರಶುರಾಮರ ಮಾತನ್ನು ಕೇಳದೆ, ಅವರೊಂದಿಗೆ ಯುದ್ಧವನ್ನು ಮಾಡಿದರು. ದೇವತೆಗಳಾದ ಶಿವನೇ ಮೊದಲಾದವರು ಸಹ ಒಮ್ಮೊಮ್ಮೆ ಶ್ರೀಹರಿಗೆ ವಿರೋಧವನ್ನು ಮಾಡಿರುವರು. ಇನ್ನು ಋಷಿಗಳು, ಗಂಧರ್ವರು, ಮನುಷ್ಯರು ಮೊದಲಾದ ಇತರರ ಬಗ್ಗೆ ಹೇಳುವುದೇನಿದೆ ! ಜನ್ಮಜನ್ಮಾಂತರಗಳಲ್ಲೂ ಅಜ್ಞಾನದಿಂದಾಗಿ ಅವರು ಶ್ರೀಹರಿಯನ್ನು ಸಾಮಾನ್ಯವಾಗಿಯೇ ತಪ್ಪಾಗಿ ತಿಳಿಯುವರಲ್ಲವೇ?

## ಪರಶುಕ್ಲತ್ರಯರು

ಆದ್ದರಿಂದ ವಾಯುದೇವರು ಮಾತ್ರವೇ ಶುದ್ಧಭಾಗವತಧರ್ಮದಲ್ಲಿ ಯಾವಾಗಲೂ ಇರುವವರು. ಲಕ್ಷ್ಮೀ, ವಾಯು ಮತ್ತು ಸರಸ್ವತಿ ಈ ಮೂವರಿಗೂ ''ಪರಶುಕ್ಲತ್ರಯ''ರೆಂದು ಹೆಸರು. ಈ ಎಲ್ಲ ವಿಷಯವನ್ನು ಜ್ಞಾನನಿಧಿಯಾದ ಶ್ರೀವೇದವ್ಯಾಸರು ಪುರಾಣಗಳಲ್ಲೂ ಭಾರತದಲ್ಲೂ ಅಲ್ಲಲ್ಲಿ ತಿಳಿಸಿರುವರು.

## ಅಸ್ತ್ರವಿದ್ಯೆಯ ಪರೀಕ್ಷೆ

ದ್ರೋಣರು ರಾಜಪುತ್ರರೆಲ್ಲ ಸಕಲಶಸ್ತ್ರಾಸ್ತ್ರಗಳ ಅಭ್ಯಾಸವನ್ನು ಪೂರೈಸಿಯಾದಮೇಲೆ ಅವರನ್ನೆಲ್ಲ ರಂಗಮಧ್ಯದಲ್ಲಿ ಕರೆದು ಪ್ರದರ್ಶಿಸಲು ಏರ್ಪಾಡು ಮಾಡಿದರು ; ಕೆಂಪುಚಂದನ, ಒಳ್ಳೆಯ ಪುಷ್ಪ ವಸ್ತ್ರ ಶಸ್ತ್ರ ಗುಡೋದನ ಮೊದಲಾದುವುಗಳಿಂದ ಪರಶುರಾಮದೇವರನ್ನು ಪೂಜಿಸಿ, ರಾಜಕುಮಾರರಿಗೆ ತಮ್ಮ ಕೌಶಲವನ್ನು ಪ್ರದರ್ಶಿಸಲು ಅನುಮತಿ ನೀಡಿದರು. ಅವರೆಲ್ಲ ಭೀಷ್ಮ, ದ್ರೋಣ, ವಿದುರ, ಗಾಂಧಾರೀ, ಧೃತರಾಷ್ಟ್ರ ಹಾಗೂ ಕುಂತಿ ಮತ್ತು ಇತರರಿಗೆ ನಮಸ್ಕರಿಸಿ ತಮ್ಮ ನೈಪುಣ್ಯವನ್ನು ಪ್ರದರ್ಶಿಸಿದರು. ಉಳಿದವರೆಲ್ಲರು ತಮ್ಮ ಅಸ್ತ್ರವಿದ್ಯೆಯನ್ನು ತೋರಿಸಿಯಾದ ಮೇಲೆ ದ್ರೋಣರಿಂದ ಅಸ್ತ್ರವಿದ್ಯೆ ಕಲಿತಿದ್ದ ಅಶ್ವತ್ಥಾಮರು ಅವರೆಲ್ಲರಿಗಿಂತ ಹೆಚ್ಚು ಮಹಾಸ್ತ್ರವಿದ್ಯೆಗಳನ್ನು ಪ್ರದರ್ಶಿಸಿದರು. ಅವರ ಕೌಶಲವನ್ನು ಮೀರುವ ರೀತಿಯಲ್ಲಿ ಅರ್ಜುನ ದಿವ್ಯಾಸ್ತ್ರವಿದ್ಯೆಗಳನ್ನು ಪ್ರದರ್ಶಿಸಿದ. [೧]ನೋಣದ ಕಾಲಿಗೂ, ಪಕ್ಷಿಯ ಕಣ್ಣಿನ ರೆಪ್ಪೆಗೂ ಮಾತ್ರವೇ ತಗಲುವಂತೆ ಬಾಣ ಹೊಡೆಯುವುದು ಮೊದಲಾದವುಗಳ ಮೂಲಕ ಅವನು ಎಲ್ಲರನ್ನು ಆಶ್ಚರ್ಯಚಕಿತರನ್ನಾಗಿಸಿದ.

## ಕರ್ಣನ ರಂಗಪ್ರವೇಶ

ಪರಶುರಾಮರ ಬಳಿ ಅಸ್ತ್ರವಿದ್ಯೆಯಲ್ಲಿ ಪ್ರಾವೀಣ್ಯ ಪಡೆದ ಕರ್ಣ ಅದೇ ವೇಳೆಗೆ ಅಲ್ಲಿಗೆ ಬಂದು ಅರ್ಜುನನಿಗೂ ಮಿಗಿಲಾದ ಕೈಚಳಕವನ್ನು ತೋರಿಸಿ ಆ ಸಭೆಯಲ್ಲಿ ಎಲ್ಲರ ಮೆಚ್ಚುಗೆಗೆ ಪಾತ್ರನಾದ. ಆಗ ಕರ್ಣನನ್ನು ತನ್ನ ಮಗನೆಂಬುದನ್ನು ಗುರುತಿಸಿದ ಕುಂತಿ, ನಾಚಿಕೆಯಿಂದಾಗಿ ನಿಜವಾದ ವಿಷಯ ತಿಳಿಸಲಿಲ್ಲ. ಕರ್ಣನ ಮೇಲ್ಮೆಯನ್ನು ಸಹಿಸದಾದ ಅರ್ಜುನ ಅವನನ್ನು ಯುದ್ಧಕ್ಕೆ ಆಹ್ವಾನಿಸಿದ. ಕ್ಷತ್ರಿಯನಲ್ಲದವನನ್ನು ಹಾಗೆ ಯುದ್ಧಕ್ಕೆ ಆಹ್ವಾನಿಸುವುದು ಧರ್ಮ-ವಿರುದ್ಧವೆಂಬುದನ್ನು ತಿಳಿದಿದ್ದ ಭೀಮ, ಅರ್ಜುನನನ್ನು ತಡೆದು, ಕರ್ಣನಿಗೆ ಚಾಟಿ-ಯೊಂದನ್ನು ಕೊಟ್ಟ ; ಕ್ಷತ್ರಿಯರಿಗೆ ಉಚಿತವಾದ ಸಂಸ್ಕಾರವನ್ನು ಪಡೆಯದವನು ಕ್ಷತ್ರಿಯ-ಜಾತಿಯಲ್ಲಿಯೇ ಹುಟ್ಟಿದ್ದರೂ ಕ್ಷತ್ರಿಯನೆನ್ನಿಸುವುದಿಲ್ಲ - ವ್ರಾತ್ಯನಾದ ಬ್ರಾಹ್ಮಣಶ್ರೇಷ್ಠ ಹೇಗೋ

೧. ಆ ನೊಣ, ಪಕ್ಷಿ ಮೊದಲಾದವುಗಳು ಕೃತಕನಿರ್ಮಾಣದವೇ ಹೊರತು, ನಿಜವಾದ ಪ್ರಾಣಿಗಳಾಗಿರಲಿಲ್ಲ ಎಂಬ ಮಾಹಿತಿಯೂ ಮೂಲಮಹಾಭಾರತದಲ್ಲಿದೆ ; ಎಂದರೆ ಅಸ್ತ್ರವಿದ್ಯೆಗೋಸ್ಕರವಾಗಿಯೂ ಸಹ ಪ್ರಾಣಹಿಂಸೆ ಮಾಡುವ ಪ್ರವೃತ್ತಿ ಅವರದಾಗಿರಲಿಲ್ಲ ಎಂದರ್ಥ.

ಹಾಗೆ. ಭೀಮನಿಗೆ ಕರ್ಣ ಉತ್ತರ ಕೊಡಲಾಗದ್ದನ್ನು ಕಂಡ ದುರ್ಯೋಧನ ತಂದೆಯ ಅಪ್ಪಣೆ ಪಡೆದು ಕರ್ಣನನ್ನು [೧]ಅಂಗರಾಜ್ಯದ ಅಧಿಪತಿಯಾಗಿ ಅಭಿಷೇಕ ಮಾಡಿದ. ಮಕ್ಕಳ ಬಗ್ಗೆ ಪಕ್ಷಪಾತಿಯಾದ ಧೃತರಾಷ್ಟ್ರ, ದುರ್ಯೋಧನನ ಆ ಕಾರ್ಯಕ್ಕೆ ಸಮ್ಮತಿ ನೀಡಿದ. ಕರ್ಣ ಆ ರೀತಿ ಅಭಿಷೇಕಿಸಲ್ಪಡಲು, ಅಲ್ಲಿಗೆ ಅವನ ತಂದೆ ಅಧಿರಥ ಬಂದ. ಕರ್ಣ ಆ ಸಭೆಯಲ್ಲಿಯೇ ತಂದೆಗೆ ನಮಸ್ಕರಿಸಿದ. ಕರ್ಣನ ಆ ಕಾರ್ಯ ಸಭೆಯಲ್ಲಿಯ ಸಜ್ಜನರೆಲ್ಲರನ್ನೂ ಸಂತೋಷಪಡಿಸಿತು.

## ಭೀಮ-ದುರ್ಯೋಧನರು

ಅನಂತರ ತಮ್ಮ ಅಭ್ಯಾಸವನ್ನು ಪ್ರದರ್ಶಿಸುವ ನೆಪದಲ್ಲಿ ಭೀಮ-ದುರ್ಯೋಧನರು ದೊಡ್ಡ ಗದೆಗಳನ್ನು ಹಿಡಿದು ಒಬ್ಬರ ಮೇಲೊಬ್ಬರು ಎರಗಲು ಸಿದ್ಧರಾದರು. ಆ ಸಮಯದಲ್ಲಿ ದೇವಾಸುರ ಮನುಷ್ಯಾದಿ ಪ್ರಭೇದದ ಈ ಎಲ್ಲ ಜಗತ್ತು ಭೀಮದುರ್ಯೋಧನರ ಪಕ್ಷವನ್ನು ವಹಿಸುವುದರ ಮೂಲಕ ಎರಡಾಗಿ ನಿಂತಿತು. ದೇವತೆಗಳೂ, ಅವರ ಅನುಯಾಯಿಗಳೂ ಭೀಮನ ಕಡೆಗೂ, ಅಸುರರೂ, ಅವರ ಅನುಯಾಯಿಗಳೂ ದುರ್ಯೋಧನನ ಕಡೆಗೂ ಸೇರಿದರು. ''ಜಯ ಭೀಮ ಮಹಾಬಾಹೋ'' ''ಜಯ ದುರ್ಯೋಧನ'' ಎಂಬುದಾಗಿ ಘೋಷಿಸುತ್ತಾ ಹುಂಕಾರ ಘಟ್ಕಾರಗಳನ್ನು ದೇವಾಸುರರು ಮಾಡತೊಡಗಿದರು. ಜಗತ್ತೆಲ್ಲ ಹೀಗೆ ಕ್ಷೋಭೆಗೊಂಡದ್ದನ್ನು ಕಂಡ ದ್ರೋಣರು, ಈ ರೀತಿಯಾಗಿ ಭೀಮ ದುರ್ಯೋಧನರ ಕಾರಣ-ದಿಂದ ಜಗತ್ತು ನಾಶವಾಗುವುದು ಬೇಡ ಎಂಬ ಕಾರಣದಿಂದ ಮಗನಾದ ಅಶ್ವತ್ಥಾಮನನ್ನು ಮಧ್ಯಸ್ಥಿಕೆಗೆ ಕಳುಹಿಸಿದರು. ''ನಿಮ್ಮ ನಿಮ್ಮ ಯೋಗ್ಯತೆಯಲ್ಲಿ ಬೇರಾರೂ ನಿಮಗೆ ಸರಿಯಾಗ-ಲಾರರು'' ಎಂಬುದಾಗಿ ಹೇಳುತ್ತ ಅಶ್ವತ್ಥಾಮರು ಅವರಿಬ್ಬರ ಹೋರಾಟವನ್ನು ನಿಲ್ಲಿಸಿದರು. ಕಾತರರಾಗಿ ಅಲ್ಲಿ ನೆರೆದಿದ್ದ ದೇವಾಸುರರನ್ನು ''ಸಮಯ ಬಂದಾಗ ಅದನ್ನು ಕಾಣುವಿರಂತೆ'' ಎಂದು ಹೇಳಿ ಬ್ರಹ್ಮದೇವರು ದೇವತೆಗಳೊಂದಿಗೆ ಸತ್ಯಲೋಕಕ್ಕೆ ಹೊರಟರು.

ಕರ್ಣನನ್ನು ಕೈಯಲ್ಲಿ ಹಿಡಿದುಕೊಂಡು ದುರ್ಯೋಧನನೂ, ಅರ್ಜುನನನ್ನು ಕೈಯಲ್ಲಿ ಹಿಡಿದುಕೊಂಡು ಭೀಮಸೇನನೂ ತಮ್ಮ ತಮ್ಮ ಗೃಹಗಳಿಗೆ ಹೊರಟರು. ಅರ್ಜುನನಿಂದಲೇ ಕರ್ಣನು ಸಾಯಬೇಕು ಎಂಬುದಾಗಿ ಭೀಮನ ನಿಶ್ಚಯ ; ಅದಕ್ಕೆ ವಿರುದ್ಧವಾಗಿ ಕರ್ಣನಿಂದ ಅರ್ಜುನನು ಸಾಯಬೇಕು ಎಂದು ದುರ್ಯೋಧನ ಕನಸು ಕಾಣುತ್ತಿದ್ದ. ತಮ್ಮ ಉದ್ದೇಶವನ್ನು ಪೂರೈಸಿಕೊಳ್ಳಲು ಕರ್ಣ ದುರ್ಯೋಧನ ಇಬ್ಬರೂ ಬಹಳವಾಗಿ ಪ್ರಯತ್ನಿಸಿದರು. ಫಲ್ಗುನನ

೧. ಅಂಗರಾಜ್ಯವು ಮೂಲತಃ ಅಧಿರಥನದೇ ಆಗಿತ್ತು ; ಅವನನ್ನು ಪರಾಭವಗೊಳಿಸಿ ಜರಾಸಂಧ ಅದನ್ನು ತನ್ನ ವಶಮಾಡಿಕೊಂಡಿದ್ದ. ಭೀಮಸೇನ ಜರಾಸಂಧನನ್ನು ಪರಾಭವಗೊಳಿಸಿ, ಅದರ ಅರ್ಧಭಾಗವನ್ನು ತಮ್ಮ ರಾಜ್ಯಕ್ಕೆ ಸೇರಿಸಿದ್ದ. ಅದನ್ನೇ ಈಗ ದುರ್ಯೋಧನ ಕರ್ಣನಿಗೆ ನೀಡಿದ್ದು. ತನಗೆ ಯಾವ ಹಕ್ಕೂ ಇಲ್ಲದ ಅದನ್ನು ಹೀಗೆ ಕರ್ಣನಿಗೆ ಕೊಡುವ ಮೂಲಕ ಸಲ್ಲದ ಹಿರಿಮೆಯನ್ನು ಹೊಂದಲು ಪ್ರಯತ್ನಿಸಿದ ; ದುರ್ಯೋಧನನನ್ನು ಕೊಂಡಾಡುವ ಜನ ಈ ಹಿನ್ನೆಲೆಯನ್ನು ಗಮನಿಸಿಲ್ಲ. ಕರ್ಣ ಈಗಾಗಿದ್ದು ಅರ್ಧಾಂಗರಾಜ ಮಾತ್ರ ಎಂಬುದನ್ನು ಸಹ ಗಮನಿಸಬೇಕು.

ಕೀರ್ತಿ, ವಿಜಯಗಳಿಗಾಗಿ ಆ ರೀತಿ ಭೀಮಸೇನ ಗಮನ ಹರಿಸಿದ. ಭೀಮನಿಗೋಸ್ಕರ ಕೃಷ್ಣನೂ, ಉಳಿದೆಲ್ಲ ದೇವತೆಗಳೂ ಫಲ್ಗುನನ ಪಕ್ಷಕ್ಕೆ ಸೇರಿದರು. ಹಿಂದೆ ಹನುಮಂತನ ಆಶ್ರಯದಿಂದಾಗಿ, ರಾಮಾದಿಗಳೆಲ್ಲ ಸುಗ್ರೀವನ ಪಕ್ಷವನ್ನೇ ವಹಿಸಿದ್ದರಲ್ಲವೆ ! ಅದಕ್ಕೆಂದೇ ವಾಲಿಯಾಗಿದ್ದಾಗ ಕಲಿತ ಪಾಠದಿಂದಾಗಿ ಇಂದ್ರ ಭೀಮನ ಅನುಜನಾಗಿ ಜನಿಸಿದ. ಭೀಮ ಅರ್ಜುನನನ್ನು ಅನುಗ್ರಹಿಸಿದ. ದುರ್ಯೋಧನನಿಗೋಸ್ಕರ ದೈತ್ಯರೂ ದಾನವರೂ ಕರ್ಣನ ಪಕ್ಷಕ್ಕೆ ಸೇರಿದರು. ಈ ರೀತಿ ಕರ್ಣ-ಫಲ್ಗುನರು ಸಮರವೆಂಬ ಜೂಜಿನಲ್ಲಿ ಪಣದ ವಸ್ತುಗಳಾದರು.

## ದ್ರೋಣರಿಗೆ ಗುರುದಕ್ಷಿಣೆ

ಗುರುದಕ್ಷಿಣೆ ಕೊಡಲು ಸಿದ್ಧರಾಗಿ ನಿಂತ ರಾಜಕುಮಾರರಿಗೆ ದ್ರೋಣರು ''ಪಾಂಚಾಲ ರಾಜನನ್ನು ಹಿಡಿದು ತಂದು ಕೊಡಿ'' ಎಂದು ಹೇಳಿದರು. ಕರ್ಣನಿಂದ ಕೂಡಿಕೊಂಡ ಕೌರವರೂ ಮತ್ತು ಪಾಂಡವರು ದ್ರೋಣರ ಸಮೇತರಾಗಿ ಪಾಂಚಾಲನಗರಕ್ಕೆ ಹೊರಟರು. ತಮ್ಮ ಸಾಮರ್ಥ್ಯವನ್ನು ಗುರುತಿಸಲು ಸಾಧ್ಯವಾಗುವಂತೆ ಮಾಡುವ ಉದ್ದೇಶದಿಂದ ಭೀಮ ದ್ರೋಣರಿಗೆ – ''ವಿಪ್ರೋತ್ತಮ ! ಕೌರವರ ಈ ಗರ್ವ ಸಹಿಸಲಾಗ್ದದಷ್ಟಿದೆ. ಇವರೇ ಮೊದಲು ಹೋಗಲಿ. ದ್ರುಪದನು ಎಂದಿಗೂ ಇವರ ವಶವಾಗುವುದಿಲ್ಲ. ಇವರು ಹಿಂದಿರುಗಿದ ಮೇಲೆ ನಾವು ಹೋಗಿ ದ್ರುಪದನನ್ನು ಹಿಡಿದು ತಂದೊಪ್ಪಿಸುವೆವು. ಇದು ನಿಶ್ಚಿತ'' ಎಂದು ಹೇಳಿ, ಸೋದರರೊಂದಿಗೆ ದ್ರೋಣರ ಬಳಿಯೇ ಉಳಿದ.

## ಕೌರವರ ಸೋಲು

ಕರ್ಣನನ್ನು ಜೊತೆಗೆ ಕರೆದುಕೊಂಡ ಕೌರವರು ಆಯುಧಧಾರಿಗಳಾಗಿ ತ್ವರೆಯಿಂದ ಪಾಂಚಾಲರಾಜನ ಅಂತಃಪುರವನ್ನು ತಲುಪಿದರು. ತನ್ನನ್ನು ಹಿಡಿಯಲು ಬಂದ ಅವರನ್ನೆಲ್ಲ ನೋಡಿದ ದ್ರುಪದ, ಮೂರು ಅಕ್ಷೋಹಿಣೀ ಸೇನೆಯೊಂದಿಗೆ ಅರಮನೆಯಿಂದ ಹೊರಬಂದ. ಆ ಸೈನ್ಯವು ಕೌರವರನ್ನು ಸುತ್ತುಗಟ್ಟಿ, ಬಾಣಗಳ ಮಳೆಗರೆಯಲಾರಂಭಿಸಿತು. ಉದ್ಧತರಾದ ಕೌರವರ ಮೇಲೆ ಉಪ್ಪರಿಗೆಗಳ ಮೇಲಿನಿಂದ ಸ್ತ್ರೀಯರೂ, ಬಾಲಕರೂ ಕಲ್ಲುಗಳನ್ನು ಒನಕೆಗಳನ್ನು ಎಸೆಯುತ್ತ ಬಹಳವಾಗಿ ನೋಯಿಸಿದರು. ಹೆಚ್ಚು ಸುಖದಿಂದ ಬೆಳೆದಿದ್ದ ಕುಮಾರರಿಗೆ ಆ ಪೆಟ್ಟು ಸಹಿಸದಾಯಿತು. ದ್ರುಪದನಿಗೆ ತಪಸ್ಸಿನ ಬಲದಿಂದ ಸೂರ್ಯನಿಂದ ಲಭಿಸಿದ್ದ ವರವೊಂದಿತ್ತು ; ಅದರಂತೆ ಅವನ ಊರಿನಿಂದ ಒಂದು ಯೋಜನ ಸುತ್ತಳತೆಯಲ್ಲಿ ಯಾರೂ ಅವನನ್ನು ಗೆಲ್ಲುವಂತಿರಲಿಲ್ಲ. ಈ ವರದ ಪ್ರಭಾವದಿಂದಾಗಿಯೇ ಸುಖದಿಂದಲೇ ಬೆಳೆದಿದ್ದ ರಾಜಕುಮಾರರು ಬಹಳವಾಗಿ ಪೆಟ್ಟು ತಿಂದು ಅಲ್ಲಿ ನಿಲ್ಲಲಾಗದೆ ಪಾಂಡವರಿದ್ದಲ್ಲಿಗೆ ಓಡಿದರು. ಸ್ತ್ರೀಯರೂ, ಬಾಲರೂ, ವೃದ್ಧರೂ ಅವರನ್ನು ಹಿಂಬಾಲಿಸಿಯೇ ಬಂದರು. ''ಭೀಮ ! ಅರ್ಜುನ !'' ಎಂದು ಕೂಗಿಕೊಳ್ಳುತ್ತಾ ಪಾಂಡವರ ಬಳಿಗೆ ತೆರಳಿ, ಅವರ ರಕ್ಷಣೆಯಲ್ಲಿ ಸೇರಿಕೊಂಡರು.

## ಭೀಮಾರ್ಜುನರಿಂದ ದ್ರುಪದನ ಬಂಧನ

ಅವರು ಪರಾಜಿತರಾದದ್ದನ್ನು ಗಮನಿಸಿದ ಭೀಮಸೇನ ಬಿಲ್ಲುಬಾಣಗಳನ್ನು ತೆಗೆದುಕೊಂಡು ರಥವನ್ನು ಏರಿದ. ಅರ್ಜುನ ಹಾಗೂ ನಕುಲಸಹದೇವರು ಭೀಮನನ್ನು ಹಿಂಬಾಲಿಸಿದರು. ಧರ್ಮರಾಜ ನಿರೀಕ್ಷಕನಾಗಿ ದ್ರೋಣರ ಬಳಿಯೇ ಉಳಿದುಕೊಂಡ. ಧನುರ್ಧಾರಿಯಾಗಿ ಬರುತ್ತಿದ್ದ ಭೀಮನನ್ನು ಕಂಡೊಡನೆಯೇ ಭಯಪಟ್ಟ ಪಾಂಚಾಲವಾಸಿಗಳು ಪಲಾಯನ ಮಾಡುತ್ತ ತಮ್ಮ ಪಟ್ಟಣವನ್ನು ಸೇರಿಕೊಂಡರು. ದ್ರುಪದನು ತನ್ನ ಮಕ್ಕಳು ಹಾಗೂ ಸೇನೆಯೊಂದಿಗೆ ಭೀಮನ ಮೇಲೆ ಯುದ್ಧಕ್ಕೆ ಬಂದ. [೧]ಧಾತೃ ಮತ್ತು ಅರ್ಯಮರ ಆವೇಶದಿಂದ ಕೂಡಿದ, ಯುಧಾಮನ್ಯು ಮತ್ತು ಉತ್ತಮೌಜಸ್ ಎಂಬ ಹೆಸರಿನಿಂದ ಜನಿಸಿದ್ದ ವಿಶ್ವಾವಸು ಮತ್ತು ಪರಾವಸುಗಳು ದ್ರುಪದನಿಗೆ ಚಕ್ರರಕ್ಷಕರಾಗಿ ಜೊತೆಗೂಡಿದರು. ಅವರಿಬ್ಬರೂ ದ್ರುಪದನ ಮಕ್ಕಳು. ಮಿತ್ರಾಂಶದಿಂದ ಕೂಡಿದ್ದ ಸತ್ಯಜಿತ್ ಎಂಬ ವೀರನಾದ ಮತ್ತೊಬ್ಬ ಮಗ ಹಿಂಭಾಗದಿಂದ ದ್ರುಪದನನ್ನು ಅನುಸರಿಸಿದ. ಮುಂಭಾಗದಲ್ಲಿ ಉತ್ತಮ-ರಥದಲ್ಲಿ ಕುಳಿತುಕೊಂಡು ಬಾಣಗಳನ್ನು ಬಿಡುತ್ತ ಶಿಖಂಡಿ ಬಂದ. ತ್ವಷ್ಟೃವಿನ ಆವೇಶದಿಂದ ಕೂಡಿದ ಚಿತ್ರರಥನ ಅಂಶನಾದ ಜನಮೇಜಯ ಶಿಖಂಡಿಯ ಹಿಂದೆ ಹೊರಟ. ಮುಂಭಾಗದಲ್ಲಿ ಬರುತ್ತಿದ್ದ ಅವರಿಬ್ಬರನ್ನು ಭೀಮಸೇನ ವಿರಥರನ್ನಾಗಿಯೂ, ಕವಚ ಹಾಗೂ ಆಯುಧ-ಹೀನರನ್ನಾಗಿಯೂ ಮಾಡಿ, ಆನೆಕುದುರೆಗಳಿಂದ ತುಂಬಿದ್ದ ಅವರ ಸೇನೆಯನ್ನು ಹೊಡೆಯ-ತೊಡಗಿದ. ಅನಂತರ ಮುನ್ನುಗ್ಗಿ ಬಂದ ಯುಧಾಮನ್ಯು ಹಾಗೂ ಉತ್ತಮೌಜಸರನ್ನು ಭೀಮ, ವಿರಥರನ್ನಾಗಿ ಮಾಡಿ ಆಯುಧಗಳನ್ನೂ ಕತ್ತರಿಸಿ ಹಾಕಿದ. ಆ ಸಮಯದಲ್ಲಿ ಕೈಗೆ ಸುಲಭವಾಗಿ ಸಿಕ್ಕಿದ್ದ ದ್ರುಪದನನ್ನು, ಗುರುಗಳಿಗೆ ಅರ್ಜುನ ನೀಡಿದ್ದ ಭಾಷೆಯನ್ನು ಸತ್ಯಮಾಡುವ ಉದ್ದೇಶದಿಂದ, ತಾನು ಹಿಡಿಯದೆ ಬಿಟ್ಟ ; ಕರ್ಣನ ಮಾನಭಂಗ ಮಾಡುವ ಮತ್ತೊಂದು ಉದ್ದೇಶವೂ ಅವರಲ್ಲಿತ್ತು.

ಭೀಮನಿಂದ ಕಳುಹಿಸಲ್ಪಟ್ಟ ಅರ್ಜುನ, ದ್ರುಪದನ ಬಾಣಗಳನ್ನು ಲೆಕ್ಕಿಸದೆ ಅವನ ರಥಕ್ಕೆ ಹಾರಿ, ಬಿಲ್ಲನ್ನು ಕತ್ತರಿಸಿ, ಕ್ಷಣಾರ್ಧದಲ್ಲಿ ಹಿಡಿದು ಹಾಕಿದ. ಸಿಂಹವು ಜಿಂಕೆಯನ್ನು ಎಳೆದು ತರುವಂತೆ ಅರ್ಜುನ ದ್ರುಪದನನ್ನು ಎಳೆದು ತಂದು ತನ್ನ ರಥವನ್ನು ಸೇರಿದ. ಕೋಪಗೊಂಡ ಸೈನ್ಯ ಅರ್ಜುನನನ್ನು ಅಡ್ಡಕಟ್ಟಿದ್ದನ್ನು ಕಂಡ ಭೀಮ, ಅದನ್ನು ಬಾಣಗಳ ಪ್ರಹಾರದಿಂದ ಕೂಡಲೇ ಹೊಡೆದು ಬೀಳಿಸಿದ. ಅತಿ ಹೆಚ್ಚು ಸಂಖ್ಯೆಯಲ್ಲಿ ಬಾಣಗಳನ್ನು ಬಿಡುತ್ತ ತನ್ನನ್ನು ಅಡ್ಡಗಟ್ಟಿದ ಸತ್ಯಜಿತನನ್ನು ಅರ್ಜುನನು ವಿರಥನನ್ನಾಗಿ ಮಾಡಿ, ಬಿಲ್ಲನ್ನು ಕತ್ತರಿಸಿದ. ಆಗಲೂ ಸೈನ್ಯವನ್ನು ಸಂಹರಿಸುವ ಕಾರ್ಯದಲ್ಲಿ ತೊಡಗಿದ್ದ ಭೀಮನನ್ನು ಅರ್ಜುನ ಕೇಳಿಕೊಂಡ – ''ಸಂಬಂಧ-ಯೋಗ್ಯನೂ, ತಂದೆಯ ಸ್ನೇಹಿತನೂ, ತುಂಬಾ ಧಾರ್ಮಿಕನೂ ಆದ ಇವನ ಸೈನ್ಯವನ್ನು ಸಂಪೂರ್ಣವಾಗಿ ಕೊಲ್ಲುವುದು ಬೇಡ. ಗುರುಗಳ ಅಪ್ಪಣೆಯಂತೆ ಇವನನ್ನು ಕರೆದೊಯ್ಯೋಣ''.

೧. ಇಲ್ಲಿ ಧಾತೃ ಎಂಬುದಕ್ಕೆ ಬ್ರಹ್ಮ ಹಾಗೂ ಧಾತೃ ಎಂಬ ಆದಿತ್ಯ ಎರಡು ಅರ್ಥಗಳೂ ವಿವಕ್ಷಿತ.

ಅರ್ಜುನನ ಈ ಮಾತು ದ್ರುಪದನ ಮನಸ್ಸಿನಲ್ಲಿ ಅವನ ಬಗ್ಗೆ ಸ್ನೇಹವನ್ನು ಹುಟ್ಟಿಸಿತು[೧]. ಭೀಮನೂ ಸಹ ಸೈನ್ಯವನ್ನೂ ಅರ್ಜುನನನ್ನೂ ಹಿಂಬಾಲಿಸಿದ. ಭೀಮನ ಕೈಯಿಂದ ಹೇಗೋ ಪಾರಾದ ಆ ಸೈನ್ಯ ಗಾಬರಿಗೊಂಡು ಊರಿನತ್ತ ಓಡಿತು.

## ದ್ರುಪದನ ಬಿಡುಗಡೆ

ಅರ್ಜುನನು ದ್ರುಪದನನ್ನು ದ್ರೋಣರ ಸನ್ನಿಧಿಗೆ ಒಪ್ಪಿಸಿದ. ಆಗ ದ್ರುಪದನನ್ನು ಕುರಿತು ದ್ರೋಣರು ಕೇಳಿದರು - ''ಈಗ ಹೇಳು ! ನಮ್ಮಿಬ್ಬರಿಗೂ ಸ್ನೇಹ ಉಂಟೋ, ಇಲ್ಲವೋ?'' ''ಈಗ ಇದೆ'' ಎಂದು ಮೆಲ್ಲನೆ ದ್ರುಪದ ಉಸುರಿದ. ದ್ರೋಣರು ಮತ್ತೆ ಹೇಳಿದರು - ''ನಿನ್ನೊಂದಿಗೆ ನಾನು ಶಾಶ್ವತವಾದ ಸ್ನೇಹವನ್ನು ಬಯಸುವೆ. ರಾಜನಲ್ಲದವನೊಂದಿಗೆ ನಿನಗೆ ಸ್ನೇಹವಿಲ್ಲವೆಂದು ನೀನು ಅಂದು ನುಡಿದಿದ್ದೆಯಾದ್ದರಿಂದ ನಾನು ಹೀಗೆ ಮಾಡಬೇಕಾಯಿತು. ಯುದ್ಧವು ಬ್ರಾಹ್ಮಣಧರ್ಮವಲ್ಲ ಎಂಬ ಕಾರಣದಿಂದ ನಾನೇ ಆಗ ನಿನ್ನನ್ನು ನಿಗ್ರಹಿಸಲಿಲ್ಲ. ನಿನ್ನ ಸಖ್ಯವನ್ನು ಬಯಸಿದ ನಾನು ನನ್ನ ಶಿಷ್ಯರ ಮೂಲಕ ಈ ಕಾರ್ಯವನ್ನು ಸಾಧಿಸಿದೆ. ನಿನ್ನ ಸಖ್ಯ ಉಳಿಯಬೇಕೆಂಬ ಕಾರಣದಿಂದ ನಿನ್ನ [೨]ಅರ್ಧರಾಜ್ಯವನ್ನು ಮಾತ್ರ ನಾನೀಗ ಕಿತ್ತುಕೊಳ್ಳುವೆ ; ಗಂಗೆಯ ದಕ್ಷಿಣತೀರದ ಪ್ರಾಂತಕ್ಕೆ ನೀನು ರಾಜ ; ಉತ್ತರತೀರದಲ್ಲಿನ ಪ್ರಾಂತಕ್ಕೆ ನಾನು ಅಧಿಪತಿ. ಯಾರೊಬ್ಬರಿಗೆ ರಾಜ್ಯವಿಲ್ಲದಿದ್ದರೂ ನಮ್ಮಿಬ್ಬರಲ್ಲಿ ಸ್ನೇಹ ಉಂಟಾಗಲಾರದು ಅಲ್ಲವೇ ! ಗೆಳೆಯ !'' ಎಂದು ಹೇಳಿ ದ್ರುಪದನನ್ನು ದ್ರೋಣರು ಬಿಡುಗಡೆ ಮಾಡಿದರು ; ಅವನಿಂದ ಅರ್ಧರಾಜ್ಯವನ್ನು ಪಡೆದುಕೊಂಡು, ಶಿಷ್ಯರೊಂದಿಗೆ ಹಸ್ತಿನಾಪುರಕ್ಕೆ ಮರಳಿದರು. ಬ್ರಾಹ್ಮಣ್ಯಕ್ಕೆ ಲೋಪವಾದೀತೆಂಬ ಭಯದಿಂದ ಅವರು ತಾವೇ ಧನುಸ್ಸನ್ನು ಹಿಡಿಯಲಿಲ್ಲ. ಮುಂದೆ ಭೀಮನ ಭಯದಿಂದ ಧಾರ್ತರಾಷ್ಟ್ರರು ಬಂದು ಎರಡೂಕಾಲುಗಳನ್ನು ಹಿಡಿದು ನಮಸ್ಕರಿಸಿ ರಕ್ಷಿಸಲು ತಮ್ಮನ್ನು ಪ್ರಾರ್ಥಿಸಿಕೊಂಡ ಕಾರಣದಿಂದ ಪುತ್ರಸಮೇತರಾಗಿ ಕುರುಕ್ಷೇತ್ರಯುದ್ಧದಲ್ಲಿ ಹೋರಾಡಿದರು. ಹೀಗೆ ಅವರು ಅನಂತರ ಕ್ಷಾತ್ರಧರ್ಮವನ್ನು ಅನುಸರಿಸಲು ಮುಖ್ಯವಾಗಿ ಶ್ರೀಹರಿಯ ಇಚ್ಛೆಯೇ ಕಾರಣವಾಯಿತು.

## ದ್ರುಪದನ ಯಜ್ಞ - ಧೃಷ್ಟದ್ಯುಮ್ನನ ಜನನ

ತನಗೊದಗಿದ ಅವಮಾನಕ್ಕಾಗಿ ಹಗಲಿರುಳೂ ಪರಿತಪಿಸತೊಡಗಿದ ದ್ರುಪದ, ಭೀಮಾ-ರ್ಜುನರ ಬಲವನ್ನು ಕಂಡು, ಪಾಂಡವರನ್ನು ಆಶ್ರಯಿಸಲು ಬಯಸಿದ. ''ಸಂಬಂಧಿ'' ಎಂಬ ಅರ್ಜುನನ ಮಾತನ್ನು ಸತ್ಯಮಾಡುವ ಇಚ್ಛೆಯಿಂದಲೂ, ಅರ್ಜುನನಲ್ಲಿಯ ದಯಾಗುಣವನ್ನು

---

೧. ದ್ರುಪದನಿಗೆ ಅರ್ಜುನನ ಬಗ್ಗೆ ಈ ರೀತಿಯಾದ ಸ್ನೇಹವು ಉದಿಸಲೆಂಬ ಕಾರಣದಿಂದಲೇ ದ್ರುಪದನು ಸೆರೆಸಿಕ್ಕ ಬಳಿಕವೂ ಸಹ ಭೀಮ ಅವನ ಸೈನ್ಯವನ್ನು ಹೊಡೆದಟ್ಟುತ್ತಿದ್ದ ಎಂಬುದು ತಿಳಿಯುವುದು.

೨. ದ್ರೋಣರು ಹಾಗೆ ಪಡೆದುಕೊಂಡ ಅರ್ಧರಾಜ್ಯವನ್ನು ತಮ್ಮ ಗುರುಗಳಾದ ಶ್ರೀಪರಶುರಾಮದೇವರ ಆದರ್ಶವನ್ನು ಪಾಲಿಸುತ್ತ ಅರ್ಹರಾದ ವಿಪ್ರರಿಗೆ ದಾನಮಾಡಿದರು ಎಂಬ ವಿವರ ಮಹಾಭಾರತದಲ್ಲಿದೆ.

ಕಂಡು ಅವನಿಗೆ ಕೊಡಲೇಬೇಕೆನ್ನುವ ಕಾರಣದಿಂದಲೂ, ಮಗಳೊಬ್ಬಳನ್ನು ಪಡೆಯಲಿಚ್ಛಿಸಿದ. ದ್ರೋಣರನ್ನು ಕೊಲ್ಲುವ ಮಗನೊಬ್ಬನನ್ನು ಪಡೆಯುವ ಆಸೆಯೂ ಅದರೊಂದಿಗೇ ಮೂಡಿತು ; ಯಾಜ ಮತ್ತು ಉಪಯಾಜ ಎಂಬ ಇಬ್ಬರು ಬ್ರಾಹ್ಮಣರ ಬಳಿಗೆ ತೆರಳಿದ ; ಅವರಿಗೆ ಅರ್ಬುದ-ಸಂಖ್ಯೆಯ ಗೋವುಗಳನ್ನು ಅರ್ಪಿಸಿ, ಅವರನ್ನು ಕರೆತಂದು ಯಾಗವೊಂದನ್ನು ನಡೆಸಿದ. ಹವಿಸ್ಸನ್ನು ಸ್ವೀಕರಿಸಲು ಕರೆದಾಗ ದ್ರುಪದನ ಪತ್ನಿಯು ಅಹಂಕಾರದಿಂದ ಬರಲು ವಿಳಂಬ ಮಾಡಲು ''ಇವಳಿಂದೇನು'' ಎಂಬುದಾಗಿ ಅವಳನ್ನು ಕಡೆಗಣಿಸಿ ಆ ಯಾಜೋಪಯಾಜರು ದ್ರುಪದನ ಹೆಂಡತಿ ಸೇವಿಸಬೇಕಾಗಿದ್ದ ಹವಿಸ್ಸನ್ನು ಅಗ್ನಿಯಲ್ಲಿಯೇ ಹೋಮಿಸಿ ಬಿಟ್ಟರು. ಆ ರೀತಿ ಎರಡು ವೈಷ್ಣವಮಂತ್ರಗಳಿಂದ ಆ ಹವಿಸ್ಸನ್ನು ಹೋಮಿಸುತ್ತಲೇ ನಿಗಿನಿಗಿ ಕೆಂಡವನ್ನು ಹೋಲುವ ಅಗ್ನಿಕುಂಡದ ಮಧ್ಯದಿಂದ, ಕಿರೀಟಕುಂಡಲಗಳನ್ನು, ಬಂಗಾರದ ಮಾಲೆಯನ್ನು ಧರಿಸಿದ, ಖಡ್ಗವನ್ನು ಕೈಯಲ್ಲಿ ಹಿಡಿದ ಒಬ್ಬನು ಸೂರ್ಯವರ್ಣದ ರಥದೊಂದಿಗೆ ಮೇಲೆದ್ದು ದ್ರುಪದನ ಬಳಿ ಬಂದ ; ಥಳಥಳಿಸುವ ಕಾಂತಿಯ ಅವನಿಗೆ ''ಧೃಷ್ಟದ್ಯುಮ್ನ'' ಎಂದೇ ಹೆಸರಾಯಿತು.

## ದ್ರೌಪದಿಯ ಜನನ

ಅವನ ನಂತರ ಸಾಕ್ಷಾತ್ ಭಾರತೀದೇವಿಯು ಆ ಯಜ್ಞವೇದಿಯಿಂದ ಜನಿಸಿ ಬಂದಳು. ಎಲ್ಲವನ್ನು ಭರಿಸುವ ಕಾರಣದಿಂದ ವಾಯುದೇವರಿಗೆ ಭರತ ಎಂದು ಹೆಸರು. ಆ ವಾಯುವಿನ ಅರಸಿಗೆ ''ಭಾರತೀ'' ಎಂದು ಹೆಸರು. ಅವಳು ವೇದರೂಪಳಾದ ಸರಸ್ವತಿಯೇ. 'ಶಂ' ಎಂಬ ರೂಪದ ವಾಯುವನ್ನು ಆಶ್ರಯಿಸಿರುವುದರಿಂದ ಅವಳಿಗೆ 'ಶ್ರೀ' ಎಂದೂ ಹೆಸರು. ಆ ರೀತಿ ಜನಿಸಿದ ಅವಳಲ್ಲಿ ಶಚೀ, ಶ್ಯಾಮಲಾ ಹಾಗೂ ಉಷೆಯರ ಆವೇಶವೂ ಇದ್ದಿತು. ಆ ಮೂವರು ಕ್ರಮವಾಗಿ ಇಂದ್ರ, ಯಮ ಹಾಗೂ ಅಶ್ವಿನೀದೇವತೆಗಳ ಸಂಶ್ರಯದಿಂದಾಗಿ ಪ್ರತಿಯೊಬ್ಬರೂ ''ಶ್ರೀ'' ಎಂಬ ಹೆಸರಿನಿಂದ ಕೂಡಿದ್ದವರು. ಆ ಕನ್ಯೆಗೆ ವರ್ಣದಿಂದಾಗಿಯೂ, ಸ್ತ್ರೀಯರಲ್ಲೆಲ್ಲ ಶ್ರೇಷ್ಠಳಾಗಿದ್ದ ಕಾರಣದಿಂದಲೂ, 'ಕೃಷ್ಣಾ' ಎಂದೇ ಹೆಸರಾಯಿತು ; ಉತ್ಕೃಷ್ಟ ಆನಂದವನ್ನು ಉಂಟುಮಾಡುವ ಮತ್ತೊಂದು ಗುಣವೂ ಸಹ ಅವಳಿಗೆ ಆ ಹೆಸರು ಬರಲು ಕಾರಣವಾಯಿತು. ಹುಟ್ಟುವಾಗಲೇ ಸರ್ವಜ್ಞಳೂ, ಸರ್ವಾಭರಣಭೂಷಿತೆಯೂ, ಯೌವ್ವನಯುಕ್ತಳೂ, ಸರ್ವ-ಲಕ್ಷಣಸಂಪನ್ನಳೂ ಆಗಿದ್ದ ಆ ತ್ರಿಲೋಕಸುಂದರಿಗೆ ಮುಪ್ಪಿಲ್ಲದವಳೂ ಆಗಿದ್ದಳು ; ಉಮಾ-ದೇವಿಯ ವಿಶೇಷ ಆವೇಶವೂ ಅವಳಲ್ಲಿದ್ದಿತು.

## ದ್ರೌಪದಿಯ ಅವತಾರ ರಹಸ್ಯ

ಹಿಂದೊಮ್ಮೆ ಉಮಾ ಮತ್ತು ಆ ಇತರ ದೇವಿಯರು ತಮ್ಮ ಪತಿಗಳೊಂದಿಗೆ ಕೂಡಿಕೊಂಡು ಬ್ರಹ್ಮದೇವರ ಮುಂದೆ ಸಲ್ಲದ ವಿಲಾಸವನ್ನು ತೋರಿಸಿದ್ದರು. ಆಗ ಬ್ರಹ್ಮದೇವರು ''ಮನುಷ್ಯರಾಗಿ ಹುಟ್ಟಿರಿ ; ಅಲ್ಲಿ ಪರರ ವಶರಾಗಿರಿ'' ಎಂಬುದಾಗಿ ಅವರನ್ನು ಶಪಿಸಿದರು. ಈ ರೀತಿ ಶಪಿಸಲ್ಪಟ್ಟ

ಆ ಸುರಸ್ತ್ರೀಯರು ಚೆನ್ನಾಗಿ ವಿಚಾರ ಮಾಡಿ, ಭಾರತೀದೇವಿಯ ಬಳಿಗೆ ಹೋಗಿ, ಎಲ್ಲವನ್ನು ಅರಿಕೆ ಮಾಡಿಕೊಂಡು, ಸಾವಿರ ವರ್ಷಗಳ ಕಾಲ ಸೇವಿಸಿ, ನುಡಿದರು : ''ದೇವಿ ! ನಾವು ಮನುಷ್ಯರಾಗಿ ಹುಟ್ಟಿ ಪರಪುರುಷರ ವಶರಾಗಬೇಕಾಗಿದೆ. ಆಗಲೂ ನಾವು ಮಾರುತನ ಹೊರತು ಇತರರನ್ನೆಂದೂ ಸ್ಪರ್ಶಿಸಬಯಸೆವು ; ಈ ಮೊದಲೇ ಬೇರೊಂದು ಪ್ರಸಂಗದಲ್ಲಿ ಬ್ರಹ್ಮದೇವರಿಂದ ಶಪಿಸಲ್ಪಟ್ಟಿರುವೆವು. ನಾವೆಲ್ಲ ಒಂದೇ ದೇಹದಲ್ಲಿ ಸೇರಿಕೊಂಡು ಬ್ರಹ್ಮದೇವರನ್ನು ವಂಚಿಸಹೊರಟಿದ್ದೆವು. ಉದ್ಧತರಾಗಿ ಮೂರುಸಲ ಆ ರೀತಿ ಮಾಡಿದ ನಮ್ಮನ್ನು ''ಮೂರು ಸಲ ನನ್ನನ್ನು ವಂಚಿಸಬಂದ ನೀವೆಲ್ಲ ಒಂದೇ ಶರೀರದಲ್ಲಿದ್ದುಕೊಂಡು ಮೂರುಜನ್ಮ ಮನುಷ್ಯರಾಗಿ ಹುಟ್ಟಿರಿ'' ಎಂದು ಶಪಿಸಿದ್ದರು. ಆದ್ದರಿಂದ ಹೀಗೆ ಎರಡು ಶಾಪಗಳಿಂದಾಗಿ ಒಟ್ಟು ನಾಲ್ಕು ಜನ್ಮಗಳಲ್ಲಿ ನಿನ್ನೊಂದಿಗೆ ಸೇರಿ ಆ ರೀತಿ ಹುಟ್ಟಲು ನಾವು ಇಚ್ಛಿಸುವೆವು. ನಿನ್ನನ್ನು ಮಾರುತನ ಹೊರತು ಬೇರಾರೂ ಸ್ಪರ್ಶಿಸಲಾರರು ಎಂಬುದು ಶ್ರೀಹರಿಯ ಅನಾದಿನಿತ್ಯವಾದ ನಿಯಮ. ನಿಮ್ಮೊಂದಿಗೆ ಏಕದೇಹದಲ್ಲಿ ನೆಲೆಸುವ ನಮ್ಮನ್ನು ಮಾರುತನ ಹೊರತು ಬೇರಾರೂ ಹೊಂದಲಾರರು.'' ಈ ರೀತಿ ಪ್ರಾರ್ಥಿಸಲ್ಪಟ್ಟ ಭಾರತೀದೇವಿ ''ಆಗಲಿ'' ಎಂದು ಹೇಳಿ, ಪಾರ್ವತ್ಯಾದಿ ಸುರಸ್ತ್ರೀಯರಿಂದ ಕೂಡಿಕೊಂಡು 'ವಿಪ್ರಕನ್ಯಾ' ಎಂಬ ಹೆಸರಿನಿಂದ ಜನಿಸಿದಳು. ಆ ಜನ್ಮದಲ್ಲಿ ಪಾರ್ವತೀ ಮೊದಲಾದ ನಾಲ್ವರು ಶಿವನನ್ನು ಕುರಿತು ಘೋರವಾದ ತಪಸ್ಸನ್ನು ಆಚರಿಸಿದರು. ಭಾರತೀದೇವಿಯು ಕರ್ಮೈಕ್ಯಕ್ಕೋಸ್ಕರ ಧೃತವ್ರತೆಯಾಗಿ ರುದ್ರದೇಹಸ್ಥಿತನಾದ ಶ್ರೀಹರಿಯನ್ನು ತಪಸ್ಸಿನಿಂದ ಸಂತೋಷಪಡಿಸಿದಳು. ಅವಳಿಗೆ ರುದ್ರದೇಹಸ್ಥಿತನಾದ ಶ್ರೀಹರಿಯು ತನ್ನ ಪತಿಯೊಂದಿಗೆ (ಸಕಲಜನ್ಮಗಳಲ್ಲಿ) ವಿಷ್ಣುವಿನ ಅನಂತತೋಷಣರೂಪವರವನ್ನು ನೀಡಿದ. ಮನುಷ್ಯಜನ್ಮಗಳಲ್ಲೂ ಸಹ ತಮ್ಮ ಪತಿಯೊಂದಿಗೆ ಸಂಯೋಗರೂಪವರವನ್ನು ಶಿವ ಉಳಿದವರಿಗೆ ನೀಡಿದ. ಆಗಲೇ ಆ ದೇಹವನ್ನು ಬಿಟ್ಟ ಅವರೆಲ್ಲರೂ ಪುನಃ ದೇಹೈಕ್ಯವನ್ನು ಹೊಂದಿದವರಾಗಿ 'ಇಂದ್ರಸೇನಾ' ಎಂಬ ಹೆಸರಿನಿಂದ ನಳದಮಯಂತಿಯರ ಮಗಳಾಗಿ ಜನಿಸಿದರು.

## ನಳನಂದಿನೀ

ಆ ಸಮಯದಲ್ಲಿ ತಪಸ್ಸಿನಲ್ಲಿ ನಿರತನಾದ ಮುದ್ಗಲ ಎಂಬ ಒಬ್ಬ ಮುನಿ ಕಥೆಯ ಮಧ್ಯೆ ''ಬ್ರಹ್ಮ ಮಗಳನ್ನು ಮೋಹಿಸಿದ'' ಎಂಬುದಾಗಿ ಕೇಳಿದಾಗ ಅಪಹಾಸ್ಯ ಮಾಡಿದ. ಆಗ ಬ್ರಹ್ಮ-ದೇವರು ''ಎಲವೋ ದುರಭಿಮಾನಿ ! ಭಾರತೀ ಮೊದಲಾದ ಐವರು ದೇವಿಯರನ್ನು ಅನರ್ಥ-ಪ್ರಾಪ್ತಿಗಾಗಿ ಹೊಂದು'' ಎಂದು ಶಪಿಸಿದರು. ತನ್ನ ತಪ್ಪಿನ ಅರಿವಾದ ಮುದ್ಗಲ ತಪಸ್ಸು ಮಾಡಿ ಬ್ರಹ್ಮದೇವರಲ್ಲಿ ಕ್ಷಮೆಯಾಚಿಸಿ ಬೇಡಿಕೊಂಡ. ವಿಶಾಪ ನೀಡುತ್ತ ಬ್ರಹ್ಮದೇವರು ನುಡಿದರು - ''ಆ ದೇವಿಯರನ್ನು ನೀನು ಹೊಂದದಂತಾಗಲಿ ; ನಿನ್ನ ಶರೀರದಲ್ಲಿದ್ದು ವಾಯುದೇವರು ಹೊಂದುವರು. ಆ ಸಮಯದಲ್ಲಿ ಮೂರ್ಛಾವಸ್ಥೆಯಲ್ಲಿರುವ ನೀನು ಅದಾವುದನ್ನೂ ತಿಳಿಯಲಾರೆ. ಆದ್ದರಿಂದ ನಿನಗೆ ಪಾಪವು ತಟ್ಟದು.'' ವಾಯುದೇವರು ಮುದ್ಗಲನಲ್ಲಿ ಪ್ರವೇಶಿಸಿ ಇಂದ್ರಸೇನೆಯೊಂದಿಗೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಅವಳೊಂದಿಗೆ ದೀರ್ಘಕಾಲದವರೆಗೆ

ಕ್ರೀಡಿಸಿದರು. ಅನಂತರ ಮುದ್ಗಲನನ್ನು ಎಚ್ಚರಿಸಿ, ತಾವು ಆ ದೇಹವನ್ನು ಬಿಟ್ಟು ತಮ್ಮ ನಿಕೇತನಕ್ಕೆ ತೆರಳಿದರು. ಅನಂತರ ಆ ಮುದ್ಗಲ ಬೇರೊಂದು ಸ್ಥಳಕ್ಕೆ ಹೋಗಿ ತಪಸ್ಸಿನಲ್ಲಿ ನಿರತನಾದ.

## ಪಂಚಪತಿತ್ವವರದ ಹಿನ್ನೆಲೆ

ಗಂಡನಿಂದ ದೂರಾದ ಇಂದ್ರಸೇನೆಯು ಘೋರತಪಸ್ಸಿನಲ್ಲಿ ಮಗ್ನಳಾದಳು. ಅವಳ ದೇಹದಲ್ಲಿದ್ದ ಭಾರತಿಯು ಶಂಕರನಲ್ಲಿಯ ವಿಷ್ಣುವನ್ನು, ಮೊದಲಿನಂತೆ ಕರ್ಮೈಕ್ಯಕ್ಕೋಸ್ಕರ ತಪಸ್ಸಿನಿಂದ ಸಂತೋಷಪಡಿಸಿದಳು. ಪಾರ್ವತೀ ಮೊದಲಾದ ಇತರರು ರುದ್ರದೇವರನ್ನು ಕುರಿತು ಹಿಂದಿನಂತೆಯೇ ತಪಸ್ಸನ್ನಾಚರಿಸಿದರು. ಶಿವನೂ, ಅವನ ದೇಹದಲ್ಲಿದ್ದ ಕೇಶವನೂ ಪ್ರತ್ಯಕ್ಷರಾಗಲು, ಒಂದೇ ದೇಹದಲ್ಲಿದ್ದ ಐವರೂ ಪ್ರತ್ಯೇಕ ಪ್ರತ್ಯೇಕವಾಗಿ ಪತಿಪ್ರಾಪ್ತಿಗಾಗಿ ಪ್ರಾರ್ಥಿಸಿದರು ; ಆದ್ದರಿಂದ ಒಟ್ಟು ಐದು ಸಲ ''ಪತಿಂ ದೇಹಿ'' ಎಂಬ ಮಾತು ಬಾಯಿಂದ ಹೊರಟಿತು. ಶಿವದೇಹಸ್ಥನಾದ ವಿಷ್ಣುವು ಭಾರತಿಗೂ, ಶಿವನು ಉಳಿದ ನಾಲ್ವರಿಗೂ ನಾಲ್ವರು, ಒಟ್ಟಾಗಿ ಐವರು ಪತಿಗಳಾಗುವಂತೆ ವರವನ್ನು ಕೊಟ್ಟರು. ದೇವತೆಗಳ ಅವತಾರಕ್ಕಾಗಿ ವರ ಕೊಡುತ್ತಿದ್ದಂತೆಯೇ, ಒಂದೇ ದೇಹದಲ್ಲಿ ಹಾಲು-ನೀರಿನಂತೆ ಚಿದ್ಯೋಗದಿಂದಾಗಿ ತಾವು ಐದುಜನ ಸ್ತ್ರೀಯರು ಎಂಬುದನ್ನು (ಭಾರತಿಯ ಹೊರತು ಇತರರು) ತಿಳಿಯಲಾರದೆ ಹೋದರು. ಅವರೆಲ್ಲ ''ಪತಿಯನ್ನು ಬೇಗ ಪಡೆಯುವೆ'' ಎಂಬ ವಿಷ್ಣು ಹಾಗೂ ಶಂಕರ ಹೇಳಿದ ನಾಲ್ವರು (ಒಟ್ಟು ಐವರು) ಆಗುವರು ಎಂಬ ಮಾತನ್ನು ಕೇಳಿ ಅಳತೊಡಗಿದರು ; ತನಗೊಬ್ಬಳಿಗೇ ಐದು ಜನ ಪತಿಗಳಾಗುವರು ಎಂದು ಭಾವಿಸಿ ಅಳಲಾರಂಭಿಸಿದ ಇಂದ್ರಸೇನೆಯ ಬಳಿಗೆ ಮಹೇಂದ್ರ ಬಂದು ''ಏತಕ್ಕೆ ಅಳುವಿ?'' ಎಂದು ಅವಳನ್ನು ಕೇಳಿದ ; ಅವಳು ವಟುರೂಪದಲ್ಲಿದ್ದ ಶಂಕರನನ್ನು ತೋರಿಸಿ ''ವರ ಬೇಡಿದಾಗ, ಇವನು ನನಗೆ ಐವರು ಪತಿಗಳಾಗಲಿ ಎಂದು ವರ ನೀಡಿರುವನು'' ಎಂದು ದೂರಿದಳು. ಆ ವಟುವನ್ನು ಶಿವನೆಂದು ತಿಳಿಯದ ಇಂದ್ರನು ''ಎಲೈ ಕೇಡುಬುದ್ಧಿಯವನೇ ! ನನ್ನಿಂದ ಪಾಲಿಸಲ್ಪಡುತ್ತಿರುವ ಭುವನತ್ರಯಕ್ಕೆ ಸೇರಿದ ಈ ಹೆಂಗಸನ್ನು ನೀನು ಹೀಗೇಕೆ ವೃಥಾ ಶಪಿಸಿರುವಿ?'' ಎಂದು ಜೋರಾಗಿ ಕೇಳಿದ. ಆಗ ಶಿವನು ''ನೀನೂ ಭೂಮಿಯಲ್ಲಿ ಜನಿಸು ! ಮನುಷ್ಯನಾಗಿ ಹುಟ್ಟಿ ನೀನು ಇವಳ ಪತಿಯಾಗು. ಇವಳೂ ನಿನ್ನನ್ನೇ ವರಿಸುವಳು. ನನ್ನನ್ನು ಅವಮಾನಿಸಿದ ಕಾರಣಕ್ಕಾಗಿ ಈ ಬೆಟ್ಟದ ಕೆಳಗೆ ಬಿದ್ದಿರುವ ನಿನ್ನಂತಹ ದೇವತೆಗಳನ್ನು ನೋಡು'' ಎಂದು ಹೇಳಿದ. ಕೂಡಲೇ ಆ ಪರ್ವತವನ್ನು ಇಂದ್ರ ಮೇಲೆತ್ತಿ ನೋಡಲು, ಅಲ್ಲಿ ಹಿಂದಿನ ಮನ್ವಂತರಗಳಲ್ಲಿ ಇಂದ್ರರಾಗಿದ್ದ ವಾಯು, ಧರ್ಮ, ನಾಸತ್ಯದಸ್ರರೆಂಬ ನಾಲ್ವರು ದೇವತೆಗಳು ತಾವು ಮನುಷ್ಯರಾಗಿ ಅವತಾರ ಮಾಡುವ ವಿಷಯವಾಗಿ ರಹಸ್ಯದಲ್ಲಿ ಮಂತ್ರಾಲೋಚನೆ ನಡೆಸುತ್ತಿದ್ದುದನ್ನು ಕಂಡ. ಅನಂತರ ವರದನೂ, ಶ್ರೇಷ್ಠನೂ ಆದ ವಿಷ್ಣುವನ್ನು ಶರಣುಹೊಕ್ಕ ಇಂದ್ರನು, ಆ ವಿಷ್ಣುವಿನ ಪ್ರಸಾದದಿಂದಾಗಿ ನರಾಂಶದಿಂದ ಕೂಡಿಕೊಂಡು ಭೂಮಿಯಲ್ಲಿ ಹುಟ್ಟಿದ.

## ಬ್ರಹ್ಮಶಾಪ

"ನನ್ನನ್ನು ಅವಮಾನಿಸಿರುವಿ ಹಾಗೂ ಮಾರುತಾದಿ ದೇವತೆಗಳು ನಿನ್ನನ್ನು ಅವಜ್ಞೆ ಮಾಡಿದ್ದ-ರಿಂದಾಗಿ ಅಲ್ಲಿ ಬಿದ್ದಿರುವರು ಎಂಬುದಾಗಿ ನೀನು ಸುಳ್ಳು ಕಾರಣವನ್ನು ನೀಡಿರುವಿ" ಎಂದು ಶಿವನನ್ನು ಕುರಿತು ನುಡಿದ ಬ್ರಹ್ಮದೇವರು, "ನೀನು ಸಹ ಬೇಗನೇ ಮನುಷ್ಯರಲ್ಲಿ ಹುಟ್ಟಿ ಯಾರಿಗೆ ಸುಳ್ಳು ಹೇಳಿದೆಯೋ ಅಂತಹ ಮನುಷ್ಯದೇಹದ ಇಂದ್ರನಿಂದ ಸೋಲನ್ನು ಹೊಂದುವಿ. ಅಲ್ಲದೇ ಈ ದೇವಿಯರು ನನ್ನಿಂದ ಶಪಿಸಲ್ಪಟ್ಟವರೆಂಬುದನ್ನು ತಿಳಿಯದೆ, ಪತಿಪ್ರಾಪ್ತಿಯ ವರವನ್ನು ನೀನು ಕೊಟ್ಟಿದ್ದೀಯೇ. ಅದಕ್ಕಾಗಿ ನಿನ್ನ ಸತಿಯನ್ನು ನೀನು ಆಗ ಹೊಂದಲಾರೆ. ಅನಂತರ ಭಾರತೀದೇಹದಿಂದ ಹೊರಬಂದ ನಿನ್ನ ಪತ್ನಿಯನ್ನು ನಿನ್ನ ಲೋಕದಲ್ಲಿ ಹೊಂದುವಿ. ಹೀಗೆ ನಿನ್ನ ವಿಷಯದಲ್ಲಿ ಈ ನಿನ್ನ ವರ ಸುಳ್ಳಾಗಲಿ. ಇವಳು ದ್ರೌಪದೀ ಎಂಬ ಹೆಸರಿನಿಂದ ಪಂಚದೇವೀಶರೀರಳಾಗಿ ಜನಿಸುವಳು. ಯಾರ ವಿಷಯದಲ್ಲಿ ನೀನು ಸುಳ್ಳಾಡಿದೆಯೋ ಅಂತಹ ವಾಯು ಮೊದಲಾದ ಎಲ್ಲರೂ ಅವಳ ಪತಿಗಳಾಗುವರು. ಭಾರತಿಯು ಪಾರ್ವತೀ-ಸಂಯುತಳೆಂಬುದಾಗಿ ವ್ಯವಹರಿಸಲ್ಪಡುವಳು ಮಾತ್ರ. ಈ ಮಾರುತಾದಿಗಳೆಲ್ಲಾ ದೇವ-ಕಾರ್ಯಾರ್ಥಗೌರವದಿಂದ ಮಾತ್ರ ಹುಟ್ಟಿರುವರು ಹಾಗೆಂದು ಶ್ರುತಿಯೇ ಇರುವುದರಿಂದ, ಅವರ ಅವತಾರಕ್ಕೆ ನಿನ್ನ ಅವಜ್ಞೆ ಕಾರಣವಲ್ಲ. ಅನಂತರ ನೀನು ಮನುಷ್ಯರಲ್ಲಿ ದೀರ್ಘಕಾಲ ವಾಸಿಸುವಿ." ಎಂದು ಶಪಿಸಿ ಬ್ರಹ್ಮದೇವರು ಹೊರಟುಹೋದರು. ಆ ಶಿವನೇ[೧] ಅಶ್ವತ್ಥಾಮರಾದರು. ಪಂಚದೇವೀತನುವಾದ ಇವಳು 'ದ್ರೌಪದೀ' ಎಂಬ ಹೆಸರಿನಿಂದ ಹುಟ್ಟಿದಳು. ಈಗ ಹೇಳಿದ ವಿಷಯವೂ, ಮೊದಲೇ ಹೇಳಿರುವ ಎಲ್ಲ ವಿಷಯಗಳು ವೇದಗಳಲ್ಲೂ, ಪುರಾಣಗಳಲ್ಲೂ ಹಾಗೂ ಭಾರತದಲ್ಲೂ ನಿರೂಪಿತವಾಗಿವೆ.

ಹೀಗೆ ಅವರಿಬ್ಬರೂ ಜನಿಸಿ ಬರಲು ಎಲ್ಲ ಪಾಂಚಾಲರೂ ಬಹಳವಾಗಿ ಸಂತೋಷಪಟ್ಟರು. ಅಯೋನಿಜರಾದ್ದರಿಂದ ಇವರಿಬ್ಬರಿಗೆ ಮಾನುಷಾನ್ನದ ಉಪಭೋಗದಿಂದ, ಮನುಷ್ಯರೊಡನೆ ಒಡನಾಟದಿಂದ ಉಂಟಾಗುವಂತಹ ಮಾನುಷಭಾವ ಹೆಚ್ಚಾಗಿ ಉಂಟಾಗಲಿಲ್ಲ. ಅನಂತರ ಬಂದ ದ್ರುಪದಪತ್ನಿಯು ಯಾಜೋಪಯಾಜರನ್ನು ಅವರಿಬ್ಬರಿಗೂ ತನ್ನಲ್ಲಿ ಮಾತೃಸ್ನೇಹ ಉಂಟಾಗಲೆಂದು ಬೇಡಿಕೊಂಡಳು. ಅವರು ಅದಕ್ಕೆ ಸಮ್ಮತಿಸಿದರು.

## ದ್ರೋಣರ ಶಿಷ್ಯನಾದ ಧೃಷ್ಟದ್ಯುಮ್ನ

ಧೃಷ್ಟದ್ಯುಮ್ನನು ದ್ರೋಣರ ಬಳಿ ಅಸ್ತ್ರವಿದ್ಯಾಭ್ಯಾಸಕ್ಕಾಗಿ ತೆರಳಿದ ; ತನ್ನನ್ನು ಕೊಲ್ಲಲೆಂದೇ ಅವನು ಜನಿಸಿರುವನೆಂಬುದನ್ನು ತಿಳಿದಿದ್ದರೂ, ದ್ರೋಣಾಚಾರ್ಯರು ಕೀರ್ತಿಗೋಸ್ಕರ[೨]

---

೧. ಅಶ್ವತ್ಥಾಮರು ಆಜೀವಬ್ರಹ್ಮಚಾರಿಯಾಗಿಯೇ ಉಳಿಯಲು ಈ ಶಾಪವು ಕಾರಣವಾಯಿತು ಎಂದು ತಿಳಿಯಬೇಕು.

೨. ಧೃಷ್ಟದ್ಯುಮ್ನ ತನ್ನನ್ನು ಕೊಲ್ಲಲೆಂದೇ ಹುಟ್ಟಿಬಂದವನು ಎಂಬ ವಿಷಯ ದ್ರೋಣರ ಕಿವಿಗೂ ಬಿದ್ದಿತ್ತು. ಆದರೂ ಶಿಷ್ಯವೃತ್ತಿಯನ್ನು ಬಯಸಿ ಬಂದ ಅವನಿಗೆ ಅವರು ಅಸ್ತ್ರೋಪದೇಶ ಮಾಡಲು ನಿರಾಕರಿಸಲಿಲ್ಲ. ಅದಕ್ಕೆ ಅವನ

ಅವನಿಗೆ ಅಸ್ತ್ರಗಳನ್ನು ಉಪದೇಶಿಸಿದರು. ದ್ರೋಣರ ಬಳಿಯಿದ್ದ ಪರಶುರಾಮರ ದಿವ್ಯಾಸ್ತ್ರಗಳು ದೇವತೆಗಳಲ್ಲೂ ದೊರೆಯದ ಅಸ್ತ್ರಗಳು ಎಂಬ ಲೋಭದಿಂದ ಧೃಷ್ಟದ್ಯುಮ್ನನು ಅವರ ಬಳಿ ಅಸ್ತ್ರಗಳ ಉಪದೇಶ ಪಡೆದ.

## ಪಾಂಡವರಿಗೆ ರಾಜ್ಯಪ್ರಾಪ್ತಿ

ಭೀಮಾರ್ಜುನರು ದ್ರುಪದನನ್ನು ಸೆರೆಹಿಡಿದದ್ದನ್ನು ಕೇಳಿ ಕೃಷ್ಣನು ಪಾಂಡವರಲ್ಲಿರುವ ತನ್ನ ಅತುಲಪ್ರೀತಿಯನ್ನು ಲೋಕದಲ್ಲಿ ತಿಳಿಯಪಡಿಸಲೋಸ್ಕರ, ಶೂರರಾಜನ ತಮ್ಮನ ಮಗಳ ಮಗನಾದ ಕೃತವರ್ಮನನ್ನು ಪಾಂಡವರ ಬಳಿಗೆ ಕಳುಹಿಸಿದ. ಪಾಂಡವರನ್ನು ಸನ್ಮಾನಿಸಿದ ಕೃತವರ್ಮನು, ಕೃಷ್ಣನ ಮೇಲಿನ ಭಕ್ತಿಯಿಂದಾಗಿಯೂ, [೧]ಸೋದರರನೆಂಬ ಕಾರಣದಿಂದಾಗಿಯೂ ಅವರಿಂದ ತಾನು ಸಹ ಸನ್ಮಾನಿತನಾಗಿ ಹಿಂದಿರುಗಿದ.

ಆ ಮೊದಲೇ ಕೃಷ್ಣನಿಂದ ಬಹಳವಾಗಿ ಪರಾಜಿತರಾಗಿದ್ದ ದೇವಪಕ್ಷದ ರಾಜರು, ಭೀಮಾರ್ಜುನರ ಬಲವನ್ನು , ವಿಶೇಷತಃ ಕೃಷ್ಣನಿಗೆ ಅವರಲ್ಲಿದ್ದ ಸ್ನೇಹವನ್ನು ಕಂಡು , ಅಂದಿನಿಂದ ಜರಾಸಂಧನನ್ನು ತೊರೆದು ಪಾಂಡವರನ್ನು ಆಶ್ರಯಿಸಲಾರಂಭಿಸಿದರು. ಅವರೆಲ್ಲರು ಆ ಮೊದಲು ಭಯದಿಂದಾಗಿ ಮಾತ್ರವೇ ಜರಾಸಂಧನ ವಶದಲ್ಲಿದ್ದರೇ ಹೊರತು, ಸ್ನೇಹ-ಭಾವದಿಂದಲ್ಲ. ಆದ್ದರಿಂದಲೇ ಪಾಂಡವರ ಹಾಗೂ ಕೃಷ್ಣನ ಬಲವನ್ನು ತಿಳಿದು, ಜನ್ಮಾಂತರದ ಅಭ್ಯಾಸಬಲದಿಂದಾಗಿ, ಕೃಷ್ಣ ಹಾಗೂ ಪಾಂಡವರಲ್ಲಿ ಸ್ನೇಹವುಳ್ಳವರಾಗಿ, ಜರಾಸಂಧನ ಭಯವನ್ನು ಬಿಟ್ಟು ಅವರನ್ನೇ ಆಶ್ರಯಿಸಿದರು. ಕೃಷ್ಣನಿಂದ ಬಹಳವಾಗಿ ಅವನು ಸೋತದ್ದನ್ನು ಕಂಡರೂ, ಅಸುರಪಕ್ಷ ಮಾತ್ರ ತಮ್ಮ ಪೂರ್ವಸಂಸ್ಕಾರಬಲದಿಂದಾಗಿ ಜರಾಸಂಧನನ್ನು ತೊರೆಯಲೇ ಇಲ್ಲ. ಸಂಸ್ಕಾರ ತುಂಬಾ ಬಲವಾದುದಲ್ಲವೇ ! ಯಾವುದೋ ಕಾರಣದಿಂದ ಬೇರೆಯವರನ್ನು ಆಶ್ರಯಿಸಬೇಕಾಗಿಬಂದರೂ ದೇವತೆಗಳು ಮಾತ್ರ ಶ್ರೀಹರಿಯಲ್ಲೂ ಇತರ-ದೇವತೆಗಳಲ್ಲೂ ಆಂತರಿಕವಾದ ಸ್ನೇಹವನ್ನು ಸರ್ವಥಾ ತೊರೆಯುವುದಿಲ್ಲ.

ಬಹಳವಾಗಿ ಭೀಮಾರ್ಜುನರ ಬಲವನ್ನು ಕಂಡ ಕಾರಣದಿಂದಲೂ, ಸ್ವಭಾವತಃ ದೇವತೆ-ಯಾದ್ದರಿಂದಲೂ, ಧರ್ಮರಾಜನು ಹಿರಿಯನೆಂಬ ಕಾರಣದಿಂದಲೂ, ಧೃತರಾಷ್ಟ್ರನು ಸಂತೋಷ-

---

ಗುರು ಎನಿಸಿಕೊಳ್ಳುವ ಕೀರ್ತಿಯ ಬಯಕೆ ಒಂದೆಡೆಯಾದರೆ, ಅಸ್ತ್ರೋಪದೇಶ ಮಾಡಿದ ಪುಣ್ಯ ಬರುವುದು ಎಂಬ ಬಯಕೆ ಮತ್ತೊಂದು ಕಾರಣವಾಗಿತ್ತು. ಇದು ದೈವೀಸಂಪತ್ತಿನ ರೀತಿ ; ಆದರೆ ದೇವಕಿಯ ಎಂಟನೆಯ ಮಗು ತನಗೆ ಮೃತ್ಯು ಎಂದು ತಿಳಿದ ಕಂಸ ದೇವಕಿಯನ್ನೇ ಕೊಲ್ಲಹೊರಟಿದ್ದ; ವಸುದೇವ ಕೇಳಿಕೊಂಡ ಮೇಲೆ ಅವಳನ್ನು ಕೊಲ್ಲದೇ ಬಿಟ್ಟರೂ ಅವರ ಮೊದಲ ಆರುಮಕ್ಕಳನ್ನೂ ಕೊಂದುಹಾಕಿದ ; ಇದು ಆಸುರೀಸಂಪತ್ತಿನ ರೀತಿ. ನೇರವಾಗಿ ತನ್ನನ್ನೇ ಕೊಲ್ಲುವವನನ್ನೂ ಆದರದಿಂದ ಕಂಡ ದ್ರೋಣರೆಲ್ಲಿ! ಎಂಟನೆಯ ಮಗ ತನ್ನನ್ನು ಕೊಲ್ಲುವನೆಂಬ ಕಾರಣದಿಂದ ತಾನೇ ಅವಳ ಮಕ್ಕಳನ್ನು ಕೊಂದ ಕಂಸನೆಲ್ಲಿ ! ಒಂದೇ ಕಾರ್ಯದ ಬಗ್ಗೆ ವಿಭಿನ್ನಸ್ವಭಾವದ ಜನರು ತಮ್ಮತಮ್ಮ ಯೋಗ್ಯತೆಗೆ ತಕ್ಕಂತೆ ಹೇಗೆ ವಿಭಿನ್ನರೀತಿಯಲ್ಲಿ ಪ್ರತಿಕ್ರಿಯಿಸುವರು ಎಂಬುದಕ್ಕೂ ಇದು ನಿದರ್ಶನ.

೧. ಪಾಂಡವರು ಶೂರರಾಜನ ಪುತ್ರಿಯಾದ ಕುಂತಿಯ ಮಕ್ಕಳು ; ಕೃತವರ್ಮ ಶೂರರಾಜನ ತಮ್ಮನ ಮಗಳ ಮಗ. ಆದ್ದರಿಂದ ಪಾಂಡವರು ಅವನಿಗೆ ಸೋದರರು ಎಂಬುದು ಸಮಂಜಸವೆನ್ನಿಸುವುದು.

ದಿಂದಲೇ ಅವನನ್ನು ಯೌವರಾಜ್ಯದಲ್ಲಿ ಅಭಿಷೇಕ ಮಾಡಿದ. ಅನಂತರ ಭೀಮಾರ್ಜುನರು ಎಲ್ಲ ದಿಕ್ಕುಗಳಲ್ಲಿಯ ರಾಜರನ್ನು ಗೆದ್ದು ಅವರೆಲ್ಲರೂ ಧೃತರಾಷ್ಟ್ರನಿಗೆ ಕಪ್ಪ ನೀಡುವಂತೆ ಮಾಡಿದರು. ಧೃತರಾಷ್ಟ್ರನೂ ಅವರ ಬಗ್ಗೆ ಪ್ರೀತಿ ತಳೆದ. ಪೌರರೂ, ಜಾನಪದರೂ, ಭೀಷ್ಮ , ದ್ರೋಣ ಮೊದಲಾಗಿ ಇತರ ಎಲ್ಲರೂ ಅವರ ಅತಿಮಾನುಷಕರ್ಮದಿಂದಾಗಿ ಅವರಲ್ಲಿ ಸುಪ್ರೀತರಾದರು.

## ಕಣಿಕನೀತಿ

ಹೀಗೆ ಅಪಾರಗುಣವಂತರಾದ ಪಾಂಡವರು ಕೃಷ್ಣಯುಕ್ತರಾಗಿ, ಮಹತ್ವಪೂರ್ಣವಾದ ಶುಭಕಾರ್ಯಗಳನ್ನು ಎಡೆಬಿಡದೆ ಮಾಡುತ್ತಿದ್ದಾಗ, ಗುರುದೇವತಾದಿ ಸಜ್ಜನರ ವಿಷಯದಲ್ಲಿ, ಸಾಟಿಯಿಲ್ಲದ ಅತಿ ಕೆಟ್ಟದಾದ ನಾಸ್ತಿಕ್ಯನೀತಿಯನ್ನು ಕೌರವರು ಕೈಗೊಂಡರು. ದೈತ್ಯಗುರುಗಳಾದ [೧]ಶುಕ್ರಾಚಾರ್ಯರ ಶಿಷ್ಯನಾದ ಕಲಿಂಗ ಎಂಬ ಅಸುರನ ಅಂಶನಾಗಿದ್ದ ಒಬ್ಬ ಬ್ರಾಹ್ಮಣನು ಶಕುನಿಗೆ ಗುರುವಾಗಿದ್ದ. ಶಕುನಿಯ ಮಾತಿನಿಂದ ಅವನು ಅತ್ಯಂತ ಕುತ್ಸಿತವಾದ ನೀತಿ-ಯೊಂದನ್ನು ಧೃತರಾಷ್ಟ್ರನ ಮಕ್ಕಳಿಗೆ ರಹಸ್ಯವಾಗಿ ಸಮಗ್ರವಾಗಿ ಉಪದೇಶಿಸಿದ. ಅದರಂತೆ ಕಪಟತನವೇ ಶ್ರೇಷ್ಠವಾದ ನೀತಿ ; ದೇವತೆಗಳನ್ನು ಪೂಜಿಸುವುದು ಸರಿಯಲ್ಲ ; ಸ್ವಾರ್ಥಕ್ಕಾಗಿ ಜಗತ್ತನ್ನು ವಂಚಿಸಲು ಮಾತ್ರವೇ ಧರ್ಮಾದಿಕಾರ್ಯಗಳನ್ನು ಆಪದ್ಧರ್ಮವೆಂಬಂತೆ ಅನು-ಸರಿಸುವವನೇ ಎಲ್ಲ ಸುರದೈತ್ಯಸಂಘದಲ್ಲಿ ಶ್ರೇಷ್ಠ – ಇದೇ ಮೊದಲಾದ ಕುತ್ಸಿತತಮವಾದ ವಿದ್ಯೆಯನ್ನು ಧೃತರಾಷ್ಟ್ರ ಮೊದಲಾದ ಹಿರಿಯರಿಗೆ ತಿಳಿಯದಂತೆ ದುರ್ಯೋಧನಾದಿಗಳು ಕಲಿತರು. ಅವರ ಸ್ವಭಾವಕ್ಕೆ ಅನುಗುಣವಾದ್ದರಿಂದ ಅದು ಅವರಿಗೆ ಬಹಳ ಹಿಡಿಸಿತು ಸಹ ; ಅದನ್ನು ಅವರು ತಮ್ಮ ಬುದ್ಧಿಬಲದಿಂದ ಇನ್ನೂ ಹೆಚ್ಚಾಗಿ ಬೆಳೆಸಿಕೊಂಡರು.

## ದುರ್ಯೋಧನನ ದುರಾಲೋಚನೆ

ಸಂಪೂರ್ಣ ದುಷ್ಟಬುದ್ಧಿಯವನಾದ ಧೃತರಾಷ್ಟ್ರಪುತ್ರ ದುರ್ಯೋಧನನು, ಅಪಾರವಾದ ಸಂಪತ್ತನ್ನು, ವಿಜಯವನ್ನು ಪಾಂಡವರಲ್ಲಿ ಕಾಣುತ್ತ ಹಗಲಿರುಳೂ ಮನಸ್ಸಿನಲ್ಲಿ ಕುದಿಯ ತೊಡಗಿದ ; ಶಕುನಿಯೊಂದಿಗೆ ತಂದೆಯ ಬಳಿಗೆ ಹೋಗಿ ನುಡಿದ – ''ಜ್ಯೇಷ್ಠನಾದ ನಿನ್ನ ಸ್ವಂತಪುತ್ರರಾದ ನಾವೆಲ್ಲ ನಿನ್ನಿಂದಲೇ ರಾಜ್ಯಕ್ಕೆ ಅರ್ಹರೆಂದು ಪರಿಗಣಿಸಲ್ಪಡಲಿಲ್ಲ. ಬೇರೆಯವರಿಂದ ನಿನ್ನ ತಮ್ಮನ ಪತ್ನಿಯಲ್ಲಿ ಜನಿಸಿದ ವ್ಯಕ್ತಿಗಳೆಲ್ಲ ನಿನ್ನಿಂದಲೇ ರಾಜ್ಯಾಧಿಕಾರವನ್ನು ಹೊಂದಿರುವರು. ಧರ್ಮರಾಜ ನಿನ್ನಿಂದಾಗಿಯೂ, ತಮ್ಮಂದಿರ ಬಲದಿಂದಾಗಿಯೂ ಮಹತ್ತರವಾದ ರಾಜ್ಯವನ್ನು ಪಡೆದಿರುವನು. ನಾವಾದರೋ ನಮ್ಮ ಮಕ್ಕಳ ಸಮೇತ ಕುಂತೀಪುತ್ರನಾದ ಧರ್ಮರಾಜನಿಗೂ, ಅನಂತರ ಅವನ ವಂಶಕ್ಕೂ ದಾಸರಾಗಿ ಹೋಗುವೆವು.

---

೧. ಬೃಹಸ್ಪತ್ಯಾಚಾರ್ಯರು ದೇವಗುರುಗಳಾದರೆ, ಶುಕ್ರಾಚಾರ್ಯರು ದೈತ್ಯಗುರುಗಳು. ಶುಕ್ರಾಚಾರ್ಯರ ಶಿಷ್ಯನಾದ ಕಣಿಕನಿಂದ ದುರ್ಯೋಧನಾದಿಗಳಿಗೆ ತಲುಪಿದ್ದು ದೈತ್ಯನೀತಿಯೇ ಹೊರತು ದೇವನೀತಿಯಲ್ಲ. ಸ್ವಭಾವತಃ ದೈತ್ಯರಾದ ಅವರಿಗೆ ಅದು ರುಚಿಸಿದ್ದು ಸಹಜವೇ ಆಗಿದ್ದಿತು.

ನನಗೋಸ್ಕರವಾಗಿ ನನಗೇನೂ ದುಃಖವಿಲ್ಲ, ಆದರೆ ನಮ್ಮ ಕಾರಣದಿಂದಾಗಿ ಬಹಳವಾಗಿ ಲೋಕದಲ್ಲಿ ಹರಡಿರುವ ನಿನ್ನ ಕೀರ್ತಿಗೆ ಕಳಂಕ ಉಂಟಾಗುತ್ತಿದೆ ಎಂಬ ಕಾರಣಕ್ಕಾಗಿ ನಮಗೆ ತುಂಬಾ ನೋವಾಗಿದೆ. ಆದ್ದರಿಂದ ನಾವೆಲ್ಲ ಸಾಯಲು ಬಯಸಿರುವೆವು. ನಮಗೆ ಅನುಮತಿ ನೀಡು.'' ಈ ರೀತಿಯಾದ ಅವನ ಮಾತನ್ನು ಕೇಳಿ ಧೃತರಾಷ್ಟ್ರ ನುಡಿದ : ''ನಿನ್ನ ಈ ಮನೋಭಾವ ಯುಕ್ತವಾದುದಲ್ಲ. ಗುಣದಿಂದ ಉತ್ತಮರೂ, ತಮ್ಮ ಬಲದಿಂದ ಪ್ರಗತಿ ಹೊಂದಿರುವವರೂ ಆದ ಪಾಂಡುತನಯರಲ್ಲಿ ಯಾರು ತಾನೆ ಪ್ರೀತಿಯನ್ನು ಹೊಂದಲಾರರು? ಅವರು ತಮ್ಮ ಬಾಹು-ಬಲದಿಂದ ಎಲ್ಲ ರಾಜರ ಸಂಪತ್ತನ್ನೂ ನನ್ನಲ್ಲಿ ಸೆಳೆದು ತರುತ್ತಿರುವರು. ನಿನ್ನನ್ನೇನೂ ಅವರು ಅಡ್ಡಿಪಡಿಸುತ್ತಿಲ್ಲವಲ್ಲ ! ಆದ್ದರಿಂದ ಮಗು ! ಕುಲದ ಒಳಿತಿಗಾಗಿ ನೀನು ಶಾಂತಿ ಸಮಾಧಾನ-ದಿಂದಿರು. ಬಲಶಾಲಿಗಳೊಂದಿಗೆ ವೈರವು ಎಂದೂ ನಿಮ್ಮ ಶ್ರೇಯಸ್ಸಿಗೆ ಕಾರಣವಾಗಲಾರದು.'' ಹೀಗೆ ತಂದೆಯು ಹೇಳಿದರೂ, ಶಕುನಿಯ ಪ್ರಚೋದನೆಯನ್ನನುಸರಿಸಿ, ದುರ್ಯೋಧನ ಮತ್ತೆ ನುಡಿದ – ''ನೀನು ಪಾಂಡವರನ್ನು ಹಸ್ತಿನಾವತಿಯಿಂದ ಬೇರೆಡೆಗೆ ಕಳುಹಿಸದಿದ್ದಲ್ಲಿ, ನಾವೆಲ್ಲ ಸಾಯುವುದನ್ನು ಕಂಡು, ಪಾಂಡವರೊಂದಿಗೆ ಸಂತೋಷದಿಂದಿರು.'' ಇದನ್ನು ಕೇಳಿದ ಧೃತರಾಷ್ಟ್ರನು, ದೈವೇಚ್ಛೆಯಿಂದಲೇ, ಮಗನ ವಿಚಾರಧಾರೆಗಳತ್ತ ಸೆಳೆಯಲ್ಪಟ್ಟವನಾಗಿ, ಮಗನಿಗೆ ಹೇಳಿದ : ''ಬಲಿಷ್ಠರಾದ ಪಾಂಡವರನ್ನು ಊರಿನಿಂದ ಹೊರಡಿಸುವುದು ನಿನಗೆ ಎಂದಿಗೂ ಸಾಧ್ಯವಾಗಲಾರದು.''

ತಂದೆಯ ಈ ಮಾತಿಗೆ ಶಕುನಿಯತ್ತ ನೋಡುತ್ತ ದುರ್ಯೋಧನ ಹೇಳತೊಡಗಿದ – ''ಅದಕ್ಕೆ ನಾನೊಂದು ಉಪಾಯವನ್ನು ಯೋಜಿಸಿರುವೆ ; ಅದನ್ನು ನೀನು ಕೇಳಿಸಿಕೋ. ಇವರು ಪಟ್ಟಣವನ್ನು ಪ್ರವೇಶಿಸಿ ಹದಿಮೂರು ವರ್ಷಗಳಾದವು. ಆಗಲೇ ನಾನು ಈ ವಿಚಾರವನ್ನು ಮಾಡಿದ್ದೆ. ಅಶ್ವತ್ಥಾಮರಿಗೆ ಸಮನಾದ ಬಲಶಾಲಿಯೂ, ಪ್ರತಾಪಿಯೂ ಬೇರೊಬ್ಬರಿಲ್ಲ. ನಾನು ಅವರನ್ನು ಬಗೆಬಗೆಯ ಶ್ರೇಷ್ಠ ಉಪಾಯಗಳಿಂದ ಅವನ ಸೋದರಮಾವ ಕೃಪನೊಂದಿಗೆ ವಶಮಾಡಿಕೊಂಡಿರುವೆನು. ಅವನ ತಂದೆ ದ್ರೋಣರು ಮಗನ ಜೊತೆಯೇ ಇರುವವರು. ಭೀಷ್ಮರೂ ದ್ರೋಣನನ್ನು ಅನುಸರಿಸುವವರೇ. ಇದೇ ರೀತಿಯಾಗಿ ಸೈನಿಕರ ಗುಂಪುಗಳೆಲ್ಲವೂ ದಾನಮಾನಗಳಿಂದಾಗಿ ನನ್ನ ವಶವೇ ಆಗಿವೆ. ಅಸ್ತ್ರದಲ್ಲೂ, ಬಲದಲ್ಲೂ ಅರ್ಜುನನಿಗಿಂತ ಮಿಗಿಲಾಗಿರುವ ಈ ಕರ್ಣನೂ ನನ್ನ ವಶನೇ. ಮಂತ್ರಬಲದಿಂದ ಭೀಮನನ್ನು ನಾನೇ ಜಯಿಸುವೆ. ದೇವತೆಗಳಿಗೂ ಸುಲಭವಲ್ಲದ ೩೦೦೦ ಮಂತ್ರಗಳನ್ನು ದುರ್ವಾಸರಿಂದ ನಾನು ಸಂಪಾದಿಸಿಕೊಂಡಿರುವೆ. ಬೇರೆಡೆಗೆ ಪ್ರಯೋಗಿಸಿದಲ್ಲಿ ಅವು ತಮ್ಮ ಸಾಮರ್ಥ್ಯವನ್ನು ಕಳೆದುಕೊಳ್ಳುವವು ಎಂಬ ಕಾರಣದಿಂದ ಭೀಮನ ಹೊರತು ಬೇರೆಡೆ ಅವುಗಳನ್ನು ನಾನು ಪ್ರಯೋಗಿಸುತ್ತಿಲ್ಲ. ಅವು ಬಲಕೊಡಬಲ್ಲವು ; ವಿಜಯಕೊಡಬಲ್ಲವು. ಬೆಂಕಿ, ನೀರು ಮೊದಲಾದುವುಗಳ ಸ್ತಂಭನವನ್ನು ಸಹ ಅವುಗಳಿಂದ ಮಾಡಬಹುದು. ಸಕಲದೇವತೆಗಳ ಸಮೂಹವನ್ನು ಎದುರಿಸುವ ಸಾಮರ್ಥ್ಯವೂ ಅವಕ್ಕೆ ಉಂಟು. ಮಳೆ ಮೊದಲಾದ ಬೇಕೆನಿಸುವ

ಯಾವ ಕಾರ್ಯವನ್ನೂ ಅವು ನೆರವೇರಿಸುವವು. ಬೇರೆಡೆ ಬಳಸದ ಆ ಮಂತ್ರಗಳಿಂದ ನಾನು ಭೀಮನನ್ನು ಗೆಲ್ಲುವೆ. ಇವರಲ್ಲಿ ನೀನು ಪ್ರೀತಿಯನ್ನೇ ತೋರಿಸಬಯಸುವೆಯಾದರೆ, ಅದಕ್ಕೂ ನಾನು ಅಡ್ಡಿಮಾಡಲಾರೆ. ಅವರು ವಾರಣಾವತದಲ್ಲಿ ನೆಲೆಸಲಿ. ಅದೇ ಅವರ ರಾಷ್ಟ್ರವಾಗಲಿ. ನನಗೆ ನಿನಗೋಸ್ಕರ ಹಸ್ತಿನಾಪುರವಿರಲಿ. ಈ ರೀತಿಯಾಗಿ ನಿನ್ನ ಮಕ್ಕಳನ್ನು ಕಾಪಾಡುವುದರಿಂದ ನಿನಗೂ ಕೀರ್ತಿ ಬರುವುದು. ಹಾಗಿಲ್ಲದೆ ಬೇರೆಯವರ ಮಕ್ಕಳನ್ನೇ ನೆಚ್ಚಿಕೊಂಡರೆ ನಿನ್ನ ಕೀರ್ತಿ ಉಳಿಯಲಾರದು. ಬಲ ಹೆಚ್ಚಿದಾಗ ಅವರು ನಿನಗೆ ವಿರೋಧವನ್ನು ಮಾಡಿಯಾರು. ಸ್ವಾರ್ಥ-ಸಾಧನೆಗಾಗಿ ಮಾತ್ರವೇ ಅವರು ನಿನ್ನನ್ನು ಅನುಸರಿಸುತ್ತಿರುವರು. ಅವರಿಗೆ ಯಾವಾಗಲೂ ಹಿತೈಷಿಯಾಗಿರುವವನು ವಿದುರನೊಬ್ಬನು ಮಾತ್ರ. ಆದ್ದರಿಂದಲೇ ಅವನು ನನಗೆ ಶತ್ರು-ವಾಗಿರುವನು. ಅವನ ವಿಚಾರಬಲದಿಂದಾಗಿಯೇ ಪಟ್ಟಣಿಗರು, ಜಾನಪದರು, ನನ್ನನ್ನು ಸದಾ ದ್ವೇಷಿಸುತ್ತಿರುವರು ; ಅವರಲ್ಲಿ ಅತ್ಯಂತ ದೃಢವಾದ ಸೌಹಾರ್ದವನ್ನು ಹೊಂದಿರುವರು. ಈ ಪಾಂಡವರು ದೂರ ಕಳುಹಿಸಲ್ಪಟ್ಟರೆ ಆಶ್ರಯ ತಪ್ಪಿ ದುರ್ಬಲರಾಗುವ ಇವರೆಲ್ಲರೂ ನನ್ನನ್ನೇ ಆಶ್ರಯಿಸುವರು. ಅವರು ಹತ್ತಿರ ಇರುವಾಗ ಭೀಷ್ಮಾದಿಗಳೂ ಅವರೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಲಾರರು. ಅವರ ಆ ವಿಶ್ವಾಸ ಅವರು ದೂರ ಹೋದರೆ ಅಳಿದುಹೋಗುವುದು. ಇವರು ಪಟ್ಟಣದಲ್ಲಿಯೇ ನಮ್ಮೊಂದಿಗೆ ಉಳಿದುಕೊಂಡರೆ ಕುಲನಾಶಕ್ಕೆ ಕಾರಣವಾಗುವ ಒಡಕೂ ಉಂಟಾಗುವುದು. ಆದ್ದರಿಂದ ಅವರನ್ನು ಉಪಾಯಬಲದಿಂದ ಇಲ್ಲಿಂದ ವಾರಣಾವತಕ್ಕೆ ಕಳುಹಿಸಿಕೊಡಬೇಕು. ಅದಕ್ಕೂ ನಾನು ಉಪಾಯವೊಂದನ್ನು ಹೂಡಿರುವೆನು. ವಿಷ್ಣುವು ಜಯಂತ ಎಂಬ ಹೆಸರಿನಿಂದ ಶಂಭುವಿನೊಂದಿಗೆ ಆ ಊರಿನಲ್ಲಿ ನೆಲೆಸಿರುವನು. ಅಲ್ಲಿ ವೈಭವ-ಪೂರ್ಣವಾದ ಉತ್ಸವವೊಂದು ನಡೆಯಲಿದೆ. ಕೃಷ್ಣನಲ್ಲಿ ಅತ್ಯಂತ ಭಕ್ತರಾಗಿರುವ ಈ ಪಾಂಡವರು, ನೀನು ಹೇಳಿದಲ್ಲಿ ಕೂಡಲೇ ಆ ಉತ್ಸವಕ್ಕೆ ಹೊರಡುವರು. ಮಧ್ಯಸ್ಥರಂತೆ ವರ್ತಿಸುತ್ತ ನನಗೆ ಸೇರಿದ ಜನರು ಪಾಂಡವರ ಮುಂದೆ ಆ ಉತ್ಸವದ ಅನೇಕ ಮಹತ್ವಗಳನ್ನು ವರ್ಣಿಸಿರುವರು. ಅದರಿಂದಾಗಿ ಅಂತಹ ಶ್ರೇಷ್ಠ ಪಟ್ಟಣವನ್ನು ಕಾಣಲು ಹೊರಡಬೇಕೆಂಬ ಆಸೆ ಈಗಾಗಲೇ ಪಾಂಡವರಲ್ಲಿ ಉಂಟಾಗಿರುವುದು.''

## ವಾರಣಾವತಕ್ಕೆ ಪಾಂಡವರು

ಮಗನ ಈ ಮಾತಿಗೆ ಸಮ್ಮತಿಸಿದ ಧೃತರಾಷ್ಟ್ರ, ಪಾಂಡವರು ಬಂದಾಗ ಅವರಿಗೆ ಹಾಗೆಂದೇ ಹೇಳಿದ ; ಅವನ ಮನಸ್ಸನ್ನು ಚೆನ್ನಾಗಿ ಅರ್ಥ ಮಾಡಿಕೊಂಡ ಅವರು ತಂದೆ ಎಂಬ ಕಾರಣದಿಂದ, ಲೋಕದಲ್ಲಿ ನೀತಿಯನ್ನು ಉಳಿಸಲು ಕುಂತಿಯೊಂದಿಗೆ ಹೊರಟು ನಿಂತರು. ಭೀಮನು ತಾವು ಅಲ್ಲಿ ಭಿಕ್ಷಾಟನೆ ಮಾಡಬೇಕಾದೀತು ಎಂಬುದನ್ನು ಚೆನ್ನಾಗಿ ತಿಳಿದು, ಸ್ವಧರ್ಮ ಎಂದೂ ತ್ಯಾಜ್ಯವಲ್ಲ ಎಂಬುದಕ್ಕಾಗಿ, ಅಣ್ಣನಿಗೆ ಹೀಗೆಂದ – ''ನಾವು ಇಲ್ಲಿಂದ ಹೊರಡುವುದು ಬೇಡ. ಇದು ನಮ್ಮ ಸ್ವಧರ್ಮವಷ್ಟೆ! ಸ್ವಧರ್ಮದಲ್ಲಿ ನಿರತರಾದ ನಮ್ಮನ್ನು ಅವರು ಬಲಾತ್ಕಾರದಿಂದ ಹೊರಡಿಸಬಯಸಿದಲ್ಲಿ , ನಾವು ಯುದ್ಧವನ್ನೇ ಮಾಡೋಣ.

ಕಳ್ಳರನ್ನು ಕೊಲ್ಲುವುದು ಅಧರ್ಮವೇನೂ ಅಲ್ಲವಷ್ಟೆ!'' ಭೀಮನ ಈ ಮಾತಿಗೆ ಧರ್ಮರಾಜ ''ಗುರುಗಳೊಂದಿಗೆ ಹೋರಾಡಿದರೆ ನಮಗೆ ಅಪಕೀರ್ತಿ ಬರುವುದು ; ಕೀರ್ತಿ ಅಳಿಯುವುದು'' ಎಂಬ ಆತಂಕವನ್ನು ವ್ಯಕ್ತಪಡಿಸಿದ. ತನ್ನ ಸ್ವಧರ್ಮವನ್ನು ತಿಳಿಸಿಹೇಳಿದ ಭೀಮ ಅಣ್ಣನನ್ನು ಅನುಸರಿಸುವುದು ಕರ್ತವ್ಯ ಎಂಬ ಮತ್ತೊಂದು ಕಾರಣದಿಂದ, ಹೇಗೆ ಮಾಡಿದರೂ ದೋಷ ತಪ್ಪಿದ್ದಲ್ಲವಾದ್ದರಿಂದ, ಸ್ವಧರ್ಮವನ್ನು ಹಿರಿಯರಿಗೆ ತಿಳಿಸಬೇಕೇ ಹೊರತು, ಆಗ್ರಹಪಡಿಸ-ಕೂಡದು ಎಂಬುದನ್ನು ತೋರಿಸಿ, ಅವನನ್ನು ಅನುಸರಿಸಿದ.

ಭೀಮನಿಗೆ ಕೀರ್ತಿಯನ್ನು ಕೊಡಲೆಂದು, ಸ್ವಧರ್ಮ ಬಿಡುವ ಪ್ರಸಂಗದಲ್ಲಿ ಅಣ್ಣನ ಮಾತಿನಿಂದ ದೋಷವನ್ನು ದೂರಮಾಡಲೆಂದು, ಹೀಗೆ ಭೀಮಸೇನನಿಗೆ ಉಭಯವಿಧ-ದೋಷಗಳನ್ನು ಪರಿಹರಿಸಲೆಂದೇ ಭಗವಂತನು ಧರ್ಮರಾಜನನ್ನು ಅಣ್ಣನನ್ನಾಗಿಸಿ, ಭೀಮನನ್ನು ತಮ್ಮನನ್ನಾಗಿಸಿದ್ದ. ದುರ್ಯೋಧನಾದಿಗಳು ವಧಾರ್ಹರೆನ್ನಿಸಿದಾಗ, ವಧೆಯ ಹೊರತು ಬೇರಾವುದೂ ಸ್ವಧರ್ಮವೆನ್ನಿಸಲಾರದು. ಅದರಂತೆ ಆಗಲೇ ಅವರನ್ನೆಲ್ಲ ಕೊಂದುಬಿಟ್ಟರೆ, ದುರ್ಯೋಧನಾದಿಗಳ ಎಲ್ಲ ದೋಷಗಳೂ ಪ್ರಕಟವಾಗದೇ ಹೋಗುವವು. ಈ ಎರಡು ಕಾರಣಕ್ಕೋಸ್ಕರ ಭೀಮನನ್ನು ತಮ್ಮನನ್ನಾಗಿಯೂ, ಯುಧಿಷ್ಠಿರನನ್ನು ಅಣ್ಣನನ್ನಾಗಿಯೂ ಶ್ರೀಹರಿಯು ಹುಟ್ಟಿಸಿದ್ದ.

## ಅರಗಿನ ಮನೆ

ವಿದುರನು ಅಂತ್ಯಜಭಾಷೆಯಿಂದ ಧರ್ಮರಾಜನನ್ನು ಕುರಿತು 'ವಿಷ, ಬೆಂಕಿ ಮೊದಲಾದ ಭಯಗಳಿಂದಾಗಿ ಎಚ್ಚರದಿಂದಿರಿ' ಎಂದು ತಿಳಿಸಿದ[1] ; ಅದಕ್ಕೆ ಸಮ್ಮತಿಸೂಚಕವಾದ ಉತ್ತರವನ್ನು ಕೊಟ್ಟು, ಯುಧಿಷ್ಠಿರ ತಾಯಿ ಹಾಗೂ ತಮ್ಮಂದಿರೊಂದಿಗೆ ವಾರಣವತಕ್ಕೆ ಹೊರಟ. ಅವರನ್ನು ಕೊಲ್ಲಿಸಲೆಂದೇ ದುರ್ಯೋಧನನು ತ್ವರೆಯಿಂದ ಚಿನ್ನರನ್ನಗಳ ಲೇಪದ ಅರಗಿನ ಮನೆಯೊಂದನ್ನು ಕಟ್ಟಿಸಿ, ಗಂಗೆಯ ಮೂಲಕ ತನ್ನ ಪುರೋಚನ ಎಂಬ ಮಂತ್ರಿಯನ್ನು ಅಲ್ಲಿಗೆ ಕಳುಹಿಸಿಕೊಟ್ಟಿದ್ದ. ಹಿಂದೆ [2]ಪ್ರಹಸ್ತನಾಗಿದ್ದ ಆ ಅತ್ಯಂತ ಪಾಪಿಯಾದ ಪುರೋಚನ ಪಾಂಡು-

೧. ವಿದುರ ಎಲ್ಲರಿಗೂ ತಿಳಿಯುವಂತೆಯೇ ಅರಗಿನಮನೆಯ ವಿಷಯವನ್ನು ಹೇಳಬಹುದಿತ್ತು. ಆದರೆ, ಅದರಿಂದ ಆ ಪ್ರಸಂಗ ತಪ್ಪುತ್ತಿದ್ದರೂ, ಅಂತಹ ಮತ್ತೊಂದು ಯೋಜನೆಯನ್ನು ಕೌರವರು ಹುಡುಕುತ್ತಿದ್ದರು. ಅದು ವಿದುರನ ಅರಿವಿಗೆ ಬರದೆ ಹೋಗುವ ಸಂಭವವೂ ಇರುತ್ತಿತ್ತು. ಆದರಿಂದಾಗಿ ವಿದುರ ಪ್ರಸ್ತುತವಾದ ಅರಗಿನಮನೆಯ ಯೋಜನೆಯನ್ನು ವಿಫಲಗೊಳಿಸಲೆಂದು ಅದನ್ನು ರಹಸ್ಯವಾಗಿ ಯುಧಿಷ್ಠಿರನಿಗೆ ಮಾತ್ರ ತಿಳಿಸಿದ. ಇದು ವಿದುರನ ಅಸಾಧಾರಣವಾದ ಕೌಶಲಕ್ಕೆ ನಿದರ್ಶನ. ಇದು ಪ್ರಸಕ್ತವಾದ ಆಪತ್ತಿನಿಂದ ಪರಿಹಾರ ಕಾಣುವುದೇ ನಿಜವಾದ ಕೌಶಲ ಹೊರತು ಮತ್ತೊಂದು ಆಪತ್ತಿಗೆ ಸಿಲುಕಿ ಹಾಕಿಕೊಳ್ಳುವುದಲ್ಲ ಎಂಬ ನೀತಿಗೂ ಕಾರಣವಾಗುವುದು.

೨. ಪ್ರಹಸ್ತನು ರಾವಣನ ಮಂತ್ರಿಗಳಲ್ಲೊಬ್ಬನಾಗಿದ್ದ ವಿವರ ರಾಮಾಯಣದಲ್ಲಿದೆ. ಅವನು ಯುದ್ಧದಲ್ಲಿ ವಿಭೀಷಣ ಹಾಗೂ ನೀಲರ ಶಕ್ತ್ಯಾಯುಧ ಹಾಗೂ ಶಿಲೆಯ ಹೊಡೆತಕ್ಕೆ ಸಿಕ್ಕಿ ಹತನಾಗಿದ್ದ ಎಂಬ ವಿವರ ರಾಮಾಯಣ ಹಾಗೂ ಮಹಾಭಾರತಗಳಿಂದ ತಿಳಿಯುವುದು ; ಎರಡು ಜನ್ಮಗಳಲ್ಲೂ ಮಹಾದುಷ್ಟರ ಮಂತ್ರಿಯೇ ಆಗಿದ್ದ ಅವನು, ಸ್ವರೂಪತಃ ದುಷ್ಟಪ್ರವೃತ್ತಿಯವನಾಗಿದ್ದ ಎಂದು ತಿಳಿಯುವುದು.

ಪುತ್ರರನ್ನು ಸೇರಿಕೊಂಡು, ಮಂತ್ರಿಯಾದ. ಅವರನ್ನು ನಂಬಿಸಲೆಂದು 'ದುರ್ಯೋಧನ- ನನ್ನು ಬಿಟ್ಟು ನಿಮ್ಮ ಬಳಿ ಬಂದಿರುವೆ' ಎಂಬ ಕಪಟದ ಮಾತನ್ನಾಡಿದ. ''ದಿವ್ಯವಾದ ಈ ಮನೆಯನ್ನು ನಾನು ನಿಮಗೋಸ್ಕರ ನಿರ್ಮಿಸಿರುವೆ. ಆ ಪಾಪಿ ದುರ್ಯೋಧನನನ್ನು ಓಲೈಸಲು ನನ್ನಿಂದಾಗುತ್ತಿಲ್ಲ. ಧರ್ಮನಿಷ್ಠೆಯಿಂದ ಕೂಡಿರುವ ನಿಮ್ಮೊಡನೆಯೇ ನಾನು ಇನ್ನು ಮುಂದೆ ನೆಲೆಸುವೆ'' ಎಂದ ; ಅವನ ಮಾತಿಗೆ ಪಾಂಡವರು ''ತುಂಬಾ ಒಳ್ಳೆಯದು'' ಎಂದು ನುಡಿದರು. ಕೊಬ್ಬಿನಿಂದ ನಿರ್ಮಿತವಾಗಿದ್ದ ಅದನ್ನು ನೋಡುತ್ತಲೇ, ಅದು ಅರಗಿನ ಮನೆಯೆಂಬುದನ್ನು ಗ್ರಹಿಸಿದ ಧರ್ಮರಾಜ, ವಾಯುಪುತ್ರನಾದ ಭೀಮನಿಗೆ 'ಆ ಪುರೋಚನ ಅತ್ಯಂತ ದುಷ್ಟ ' ಎಂಬುದನ್ನು ತಿಳಿಸಿದ. ''ಭೀಮ ! ಈ ಪಾಪಿ ನಮ್ಮನ್ನು ಕೊಲ್ಲಲು ಬಯಸಿರುವನು. ಸದಾ ಜಾಗರೂಕನಾಗಿರು'' ಎಂದು ಕೇಳಿಕೊಂಡ. ತನ್ನ ನೀತಿಬಲದಿಂದ ಎಲ್ಲ ಸಮಾಚಾರವನ್ನು ತನ್ನ ಚಾರರ ಮೂಲಕ ತಿಳಿದಿದ್ದ ವಿದುರ, ಒಬ್ಬ ಸುರಂಗ ತೋಡುವವನನ್ನು ''ಧರ್ಮರಾಜನಿಗೆ ನನ್ನ ವಾಕ್ಯವನ್ನು ತಿಳಿಸಿ. ಹಿಂದೆ ಹೇಳಿದಂತೆ ದೂರಕ್ಕೆ ಹೋಗುವ ಸುರಂಗವೊಂದನ್ನು ಕೂಡಲೇ ನಿರ್ಮಿಸು'' ಎಂದು ಅಪ್ಪಣೆ ಮಾಡಿದ. ಅವನು ಸುತ್ತು-ಗೋಡೆಯನ್ನು ನಿರ್ಮಿಸುವ ನೆಪದಿಂದ ಸುರಂಗವೊಂದನ್ನು ನಿರ್ಮಿಸಿ, ಅದರ ಬಾಗಿಲನ್ನು ಮುಚ್ಚಿ ತನ್ನ ಮನೆಗೆ ತೆರಳಿದ.

ಪರಸ್ಪರ ಒಬ್ಬರನ್ನೊಬ್ಬರು ಕೊಲ್ಲುವ ಹವಣಿಕೆಯಲ್ಲಿಯೇ ಭೀಮ–ಪುರೋಚನರು ಅರ್ಧ ವರ್ಷ ಕಳೆದರು. ಪುರೋಚನನ ಅಕ್ಕ ತನ್ನ ಐವರು ಮಕ್ಕಳೊಂದಿಗೆ ಆ ವೇಳೆಗೆ ಅಲ್ಲಿಗೆ ಬಂದುದನ್ನು ಗಮನಿಸಿ, ಇದೇ ಸರಿಯಾದ ಸಮಯವೆಂದು ಯೋಚಿಸಿ ಭೀಮಸೇನನು, ಗಾಢನಿದ್ರೆಯಲ್ಲಿದ್ದ ಸೋದರರನ್ನು, ತಾಯಿಯನ್ನು ಮೊದಲು ಬಿಲದಲ್ಲಿ ಸುರಕ್ಷಿತವಾಗಿ ಇರಿಸಿ, ದುಷ್ಟ ಪುರೋಚನ, ಅವನ ಅಕ್ಕನನ್ನು ಅವಳ ಮಕ್ಕಳೊಂದಿಗೆ ಅರಗಿನಮನೆಸಮೇತ ಸುಟ್ಟುಹಾಕಿದ. ಅವಳೂ ಸಹ ವಿಷಪ್ರಯೋಗದಿಂದ ಅವರನ್ನು ಕೊಲ್ಲಲೆಂದೇ ಅಲ್ಲಿಗೆ ಬಂದಿದ್ದವಳು. ಮೊದಲೇ ಎಲ್ಲವನ್ನು ತಿಂದು ಹಾಕಿದ ಭೀಮಸೇನನಿಂದಾಗಿ ಅವಳ ಆಟ ನಡೆಯಲಿಲ್ಲ. ಮಕ್ಕಳೊಂದಿಗೆ ತಾನು ಅದಿತಿಯಾಗಬೇಕೆಂಬ ಬಯಕೆಯಿಂದ ಅವಳು ತನ್ನ ಮಕ್ಕಳೊಂದಿಗೆ ಶಿವನನ್ನು ಕುರಿತು ಒಂದು ವರ್ಷಕಾಲ ತಪಸ್ಸನ್ನಾಚರಿಸಿದ್ದಳು. ಅದಕ್ಕೆ ''ಈ ಜನ್ಮದಲ್ಲಿ ಮಕ್ಕಳೊಂದಿಗೆ ಸೇರಿ ನೀನು ಒಟ್ಟಾಗಿ ಸಾಯದಿದ್ದಲ್ಲಿ ಮಾತ್ರ ಅದು ಸಾಧ್ಯವಾಗಲಿ'' ಎಂಬುದಾಗಿ ಶಿವ ವರ ನೀಡಿದ್ದ. ಇದನ್ನೆಲ್ಲಾ ತಿಳಿದಿದ್ದ ಭೀಮಸೇನ ಮಕ್ಕಳಸಮೇತವಾಗಿ ದುಷ್ಟಬುದ್ಧಿಯಾದ ಅವಳನ್ನೂ ಪುರೋಚನನನ್ನು ಕೊಂದು, ಭಯದಿಂದಾಗಿ ದೀನರಾಗಿದ್ದ ಸೋದರರನ್ನು, ತಾಯಿಯನ್ನೂ ಕರೆದುಕೊಂಡು ಬಿಲದ ಮೂಲಕ ಸಾಗಿದ.

ಪುರೋಚನನ ವಧೆಯನ್ನು ತಿಳಿದು ಭೀಷ್ಮ ಮೊದಲಾದವರೊಂದಿಗೆ ಕೂಡಿಕೊಂಡು ದುರ್ಯೋಧನಾದಿಗಳು ಯುದ್ಧಕ್ಕೆ ಬಂದಲ್ಲಿ ತಮಗೆ ಏನಾಗುವುದೋ ಎಂಬ ಭಯ ಭೀಮನನ್ನು ಹೊರತು ಉಳಿದೆಲ್ಲ ಪಾಂಡುಪುತ್ರರನ್ನು ಆವರಿಸಿತ್ತು. ಭೀಮನು ಭಯರಹಿತ-

ನಾದರೂ, ತನ್ನ ಮೂಲಕ ಗುರುಗಳೊಂದಿಗೆ ಹೋರಾಟ ನಡೆಯುವುದು ಬೇಡವಾದ್ದರಿಂದ, ಧರ್ಮರಾಜನ ಮಾತಿನಿಂದಾಗಿ ಅವನನ್ನು ಅನುಸರಿಸಿದ ; ಆ ರಾತ್ರಿಯಲ್ಲಿ ಅವರನ್ನೆಲ್ಲ ಹೊತ್ತುಕೊಂಡೇ ಗಂಗಾನದಿಯ ಬಳಿಗೆ ತಲುಪಿದ. ಅಲ್ಲಿ ವಿದುರನು ಏರ್ಪಡಿಸಿದ್ದ ದೋಣಿಯ ಮೂಲಕ ಗಂಗೆಯನ್ನು ಅವರೆಲ್ಲ ದಾಟಿದರು. ಬೆಸ್ತರು ಹೇಳಿದ ವಿದುರನ ಮಾತುಗಳಿಂದಾಗಿ ವಿಶ್ವಾಸ ಹೊಂದಿ ಭೀಮನ ಬೆನ್ನ ಮೇಲೆ ಕುಳಿತು ಪ್ರಯಾಣ ಮುಂದುವರೆಸಿದ ಅವರೆಲ್ಲ ಕಾಡನ್ನು ಸೇರಿಕೊಂಡರು.

ಇತ್ತ ವಾರಣವತದಲ್ಲಿ ಸೂರ್ಯ ಉದಿಸಿದ ಮೇಲೆ, ಕರಕಲಾಗಿದ್ದ ಏಳು ಶವಗಳನ್ನು ಕಂಡು ಪಟ್ಟಣವಾಸಿಗಳು ಗೋಳಿಟ್ಟರು – "ಅಯ್ಯೋ ! ಈ ರೀತಿ ದುರ್ಯೋಧನನು ಪುರೋಚನನ ಮೂಲಕ ಧರ್ಮಿಷ್ಠರಾದ ಪಾಂಡವರನ್ನು ಸುಡಿಸಿಬಿಟ್ಟ. ದೈವವಶಾತ್ ಆ ಪಾಪಿಯೂ ಸುಟ್ಟುಹೋಗಿರುವನು. ಸಜ್ಜನರಿಗೆ ಕೇಡು ಬಗೆದ ಯಾವನು ತಾನೇ ಸುಖಿಯಾದಾನು?" ಪಟ್ಟಣಿಗರ ಮುಖಾಂತರವೇ ಎಲ್ಲವನ್ನು ಕೇಳಿ ತುಂಬಾ ದುಃಖಗೊಂಡ ಧೃತರಾಷ್ಟ್ರ, ಭೀಷ್ಮರೇ ಮೊದಲಾದವರು "ಅಯ್ಯೋ" ಎಂದು ದುಃಖಿಸಿದರು. ದುರ್ಯೋಧನ ಮೊದಲಾದವರೂ ಹಾಗೂ ವಿದುರ ಸುಮ್ಮನೆ ದುಃಖಪಟ್ಟಂತೆ ನಟಿಸಿದರು[೧]. ಎಲ್ಲರೂ ಅವರಿಗೆ ಅಂತ್ಯಕ್ರಿಯೆ ಮೊದಲಾದವುಗಳನ್ನು ನಡೆಸಿದರು.

## ಹಿಡಿಂಬ ವಧೆ

ಅವರೆಲ್ಲರನ್ನೂ ಹೊತ್ತು ನಡೆದ ಭೀಮನು ಹಿಡಿಂಬ ಎಂಬ ರಾಕ್ಷಸನಿದ್ದ ಕಾಡನ್ನು ಸೇರಿದ. ಬಾಯಾರಿದ ಅವರು ಕೇಳಿಕೊಂಡಾಗ ಅವನು ದೂರದಿಂದ ಉತ್ತರೀಯದಲ್ಲಿ ಕಮಲಪತ್ರದಲ್ಲಿ ನೀರನ್ನು ಹಿಡಿದು ತಂದು ಅವರೆಲ್ಲ ನಿದ್ರಿಸುತ್ತಿದ್ದುದನ್ನು ಕಂಡ. ಅವರೆಲ್ಲರ ರಕ್ಷಣೆಗೆಂದು ತಾನು ಮಾತ್ರ ಎಚ್ಚೆತ್ತೇ ಕುಳಿತ. ಆ ವೇಳೆಗೆ ತನ್ನ ಅಣ್ಣ ಹಿಡಿಂಬನಿಂದ ಕಳುಹಿಸಲ್ಪಟ್ಟ ಹಿಡಿಂಬೀ ಎಂಬ ರಾಕ್ಷಸಿಯು, ಸುಂದರರೂಪ ತಳೆದು ಅಲ್ಲಿಗೆ ಬಂದು ಸಕಲಶುಭಲಕ್ಷಣಗಳೇ ಮೂರ್ತಿವೆತ್ತಂತಿದ್ದ ಭೀಮನನ್ನು ಕಂಡಳು. ಅವಳು ಶಚಿಯಿಂದ ಭಿನ್ನಳಾದ [೨]ಅಮರಾವತಿಯ ಅಭಿಮಾನಿ-ದೇವತೆಯಾದ ಒಬ್ಬ ಇಂದ್ರಪತ್ನಿ ; ಶಚಿಯ ಮೇಲೆ ಅಸೂಯೆಪಟ್ಟ ಫಲವಾಗಿ ಶಚಿಯ ಶಾಪದಿಂದ ಹಾಗೆ ರಾಕ್ಷಸಯೋನಿಯಲ್ಲಿ ಜನಿಸಿ ಬಂದಿದ್ದಳು. ವಾಯುದೇವರ ಅವತಾರನಾದ ಭೀಮನನ್ನು ಪತಿಯಾಗಿ ಪಡೆಯುವ ಮೂಲಕ ತನ್ನ ನಿಜರೂಪವನ್ನು ಪಡೆಯಲೋಸ್ಕರ ಅವನನ್ನು ಬೇಡಿಕೊಂಡಳು. ಸುಂದರ ಶರೀರದ ಅವಳನ್ನು ಕುರಿತು ಭೀಮ: "ಅಣ್ಣನಿಗಿಂತ ಮುಂಚೆ ನಾನು ಮದುವೆಯಾಗಲಾರೆ ; ಅದು ಧರ್ಮವಾಗದು" ಎಂದ. ವಾಯುಪತ್ನಿಯಾದ

---

೧. ದುರ್ಯೋಧನಾದಿಗಳು ಹಾಗೆ ನಟಿಸಲು ಅವರಿಗೆ ಪಾಂಡವರ ಸಾವು ಹರ್ಷಕ್ಕೆ ಕಾರಣವಾಗಿದ್ದಂತೆ, ವಿದುರನಿಗೆ ಪಾಂಡವರು ನಿಜಕ್ಕೂ ಸತ್ತಿಲ್ಲ ಎಂಬ ವಾಸ್ತವಸಂಗತಿ ಕಾರಣವಾಗಿತ್ತು ಎಂಬುದು ವಿಶೇಷ.

೨. ಲಂಕಿಣಿಯು ಹೇಗೆ ಲಂಕೆಗೆ ಅಭಿಮಾನಿದೇವತೆಯೋ ಹಾಗೆ ಇವಳು ಅಮರಾವತಿಗೆ ಅಭಿಮಾನಿ-ದೇವತೆಯಾದವಳು ಎಂದು ತಿಳಿಯಬೇಕು.

ಭಾರತೀದೇವಿಯ ಆವೇಶದಿಂದ ಕೂಡಿದ ಅವಳು ಕಾಮಪೀಡಿತಳಾಗಿ ಮತ್ತೆ ಮತ್ತೆ ತನ್ನನ್ನು ಸ್ವೀಕರಿಸಲು ಬೇಡಿಕೊಂಡಿದ್ದಳು. ಅವಳ ತೀವ್ರ ತಪಸ್ಸಿಗೆ ಪ್ರಸನ್ನಳಾದ ಭಾರತೀದೇವಿಯು ಅವಳಲ್ಲಿ ತನ್ನ ಆವೇಶವನ್ನೂ, ತನ್ನ ಪತಿಯೊಂದಿಗೆ ಸಂಗಮದಿಂದ ಶಾಪವಿಮುಕ್ತಿಯನ್ನೂ ವರವಾಗಿ ಅನುಗ್ರಹಿಸಿದ್ದರಿಂದ ಅವಳು ಭೀಮಸೇನನ ಬಳಿ ಆ ರೀತಿ ಪ್ರಾರ್ಥಿಸಿಕೊಂಡಳು. ತನ್ನ ಸ್ವರೂಪಜ್ಞಾನವನ್ನು ತೋರಿಸುವ ಉದ್ದೇಶದಿಂದ ಅವಳು, "ಸಕಲ ಜಗತ್ತಿನ ಗುರುವಾದ ವ್ಯಾಸರೂಪಿಯಾದ ಇಂದಿರೇಶನಾದ ಶ್ರೀಹರಿಯು ನಾಡಿದ್ದೇ ಇಲ್ಲಿಗೆ ಬಂದು ನನ್ನನ್ನು ನಿನಗೆ ನೀಡುವನು ; ಆಗ ನನ್ನ ಬಯಕೆಯನ್ನು ನೀನು ಈಡೇರಿಸುವೆ" ಎಂದು ನುಡಿದಳು.

ಅದೇ ವೇಳೆಗೆ ಕೋಪಗೊಂಡ ಹಿಡಿಂಬನು, ಭೀಮನನ್ನು ಹಾಗೂ ಅವಳನ್ನು ಸಂಹರಿಸಲೆಂದು ನುಗ್ಗಿ ಬಂದ. ಅವನು ಆ ಮೊದಲು ತನ್ನ ತಂಗಿ ಹಿಡಿಂಬಿಯನ್ನು ಅವರನ್ನೆಲ್ಲ ತಿನ್ನಲೆಂದು ಕರೆತರಲು ಕಳುಹಿಸಿದ್ದ. ಹಿಡಿಂಬಿಯು ಭೀಮನನ್ನೇ ಶರಣು ಹೊಂದಲು, ತಾಯಿಯನ್ನು, ಸೋದರರನ್ನು ನೋಡಿಕೊಳ್ಳುವ ಕಾರ್ಯಕ್ಕೆ ಅವಳನ್ನು ನಿಯಮಿಸಿ ಭೀಮಸೇನ, ಸಹೋದರರಿಗೆ ನಿದ್ರಾಭಂಗವಾದೀತೆಂಬ ಭಯದಿಂದ ಆ ರಾಕ್ಷಸನನ್ನು ಬಹಳ ದೂರಕ್ಕೆ ಎಳೆದುಕೊಂಡು ಹೋಗಿ, ಅವನೊಂದಿಗೆ ಹೋರಾಟಕ್ಕೆ ತೊಡಗಿದ. ಮುಷ್ಟಿಗಳಿಂದಲೂ, ವೃಕ್ಷಗಳಿಂದಲೂ, ಕಲ್ಲುಗಳಿಂದಲೂ, ಬೆಟ್ಟಗಳಿಂದಲೂ ಹೋರಾಡಿದ ಅವರ ದೊಡ್ಡ ಶಬ್ದದಿಂದಾಗಿ ಅವರೆಲ್ಲರು ಎಚ್ಚೆತ್ತರು. ಅಲ್ಲಿಗೆ ಧಾವಿಸಿದ ಅವರೆಲ್ಲ ತನ್ನ ಬಗ್ಗೆ ಆತಂಕಪಡುವುದನ್ನು ಗಮನಿಸಿದ ಭೀಮಸೇನ ಆ ರಾಕ್ಷಸನ ಎದೆಯ ಮೇಲೆ ಗುದ್ದಿದ. ಶಿವನ ವರದಿಂದ ಎಲ್ಲರಿಂದಲೂ ಅಜೇಯನಾಗಿದ್ದರೂ, ಆ ರಾಕ್ಷಸನು, ಆ ಭೀಮನ ಬಾಹುಬಲದ ಹೊಡೆತದಿಂದಾಗಿ ಭೂಮಿಯ ಮೇಲೆ ಬಿದ್ದು ಧಾರಾಕಾರವಾಗಿ ರಕ್ತವನ್ನು ಸುರಿಸುತ್ತ ಮರಣ ಹೊಂದಿದ ; ಕ್ರಮವಾಗಿ ನಿತ್ಯವಾದ ಅಂಧಂತಮಸ್ಸನ್ನೂ ಸೇರಿದ.

## ಹಿಡಿಂಬೆಯ ವಿವಾಹ

ಆ ರಾಕ್ಷಸನನ್ನು ಕೊಂದು ಸೋದರರೊಂದಿಗೆ ಹೊರಟ ಭೀಮನನ್ನು, ತಾನೂ ಹಿಂಬಾಲಿಸುತ್ತ ಹಿಡಿಂಬಿಯು ಕುಂತಿಯನ್ನು , ಯುಧಿಷ್ಠಿರನನ್ನು ಭೀಮನು ತನ್ನನ್ನು ಸ್ವೀಕರಿಸಲು ಒಪ್ಪಿಸುವಂತೆ ಪ್ರಾರ್ಥಿಸಿಕೊಂಡಳು. ಅವರಿಬ್ಬರು ಹೇಳಿದಾಗಲೂ ಭೀಮನು ಒಪ್ಪದಿರಲು, ಎಲ್ಲ ಶ್ರೇಷ್ಠಗುಣಗಳಿಂದ ತುಂಬಿದವನೂ, ಅನಂತಸುಖಸಾಗರನೂ, ವಿದ್ಯಾರಶ್ಮಿಯುಕ್ತನೂ, ಸರ್ವೋತ್ತಮನೂ ಆದ ವ್ಯಾಸರೂಪೀ ಶ್ರೀಹರಿಯು ಕಾಣಿಸಿಕೊಂಡ. ಅವರನ್ನು ಕಾಣುತ್ತಿದ್ದಂತೆಯೇ ತಾಯಿಯೊಂದಿಗೆ ಎಲ್ಲ ಪಾಂಡವರು ಹರ್ಷಿಸುತ್ತ, ಬ್ರಹ್ಮನಿಗೂ ಗುರುವಾದ ಅವರನ್ನು ಬಹಳವಾಗಿ ಪೂಜಿಸಿದರು. ಅತ್ಯಂತ ಹೆಚ್ಚಿನ ಪ್ರೀತಿಯಿಂದಾಗಿ ಅರಳಿದ ಕಣ್ಣುಗಳಿಂದ ಕೂಡಿದ ಶ್ರೀವ್ಯಾಸರು ಅವರನ್ನು ಸಂತೋಷಪಡಿಸಿದರು. ಭಕ್ತಿಯಿಂದ ಪಾಂಡವರು ತಲೆಬಾಗುತ್ತಿದ್ದಂತೆ ಹಿಡಿಂಬಿಯೂ ಅವರನ್ನು ನಮಸ್ಕರಿಸಿ ಕೇಳಿಕೊಂಡಳು. ವ್ಯಾಸರು ಭೀಮನನ್ನು ಕುರಿತು ಹೇಳಿದರು - "ಅಮರಾವತಿಯ ಸಂಪತ್ತಿಗೆ ಅಭಿಮಾನಿದೇವತೆಯಾದ ಈ ಯುವತಿಯನ್ನು ನೀನು ಪರಿಗ್ರಹಿಸು ;

ಮಗುವೊಂದು ಜನಿಸಿದ ಕೂಡಲೇ ಇವಳು ಅವನೊಂದಿಗೆ ಹೊರಟು ಹೋಗಲಿ.'' ಅನಂತ-ಗುಣಪೂರ್ಣರಾದ ಶ್ರೀವೇದವ್ಯಾಸರು ಹೀಗೆ ಹೇಳುತ್ತಿದ್ದಂತೆಯೇ 'ಆಗಲಿ' ಎಂದೊಪ್ಪಿದ ಭೀಮ ಹಾಗೆಯೇ ಮಾಡಿದ[೧].

## ಘಟೋತ್ಕಚನ ಜನನ

ಉದಯಕಾಲದಲ್ಲಿಯೇ ಹಿಡಿಂಬಿ ಭೀಮನನ್ನು ತನ್ನ ಭುಜದ ಮೇಲೆ ಕುಳ್ಳಿರಿಸಿಕೊಂಡು ದೇವತೆಗಳು ಸಂಚರಿಸುವ ಲೋಕಗಳಿಗೆ ಕರೆದೊಯ್ಯುತ್ತಿದ್ದಳು. ನಂದನಾದಿ ವನಗಳಲ್ಲಿ ಅವನೊಂದಿಗೆ ವಿಹರಿಸಿ ಸಾಯಂಕಾಲದ ವೇಳೆಗೆ ಕುಂತಿ ಹಾಗೂ ಪಾಂಡವರ ಬಳಿ ಹಿಂದಿರುಗುತ್ತಿದ್ದಳು. ಹೀಗೆ ಆರು ತಿಂಗಳುಗಳು ಕಳೆಯಲು ಅವರಿಗೆ ಅತ್ಯಂತ ಬಲವೀರ್ಯೋ-ಪೇತನಾದ ಪುತ್ರನೊಬ್ಬ ಜನಿಸಿದ. ಶಿವನ ಆವೇಶದಿಂದ ಕೂಡಿದ ನಿರ್ಋತಿ ಎಂಬ ದಿಕ್ಪಾಲಕ 'ಘಟೋತ್ಕಚ' ಎಂಬ ಹೆಸರಿನಿಂದ ಅವತರಿಸಿದ. ಮೊದಲಿಗೆ ಘಟದಂತಹ ಶಿರಸ್ಸು ಕಾಣಿಸಿಕೊಂಡು, ಅನಂತರ ಎವೆಯಿಕ್ಕುವಷ್ಟರಲ್ಲಿ ಕೂದಲುಗಳು ಬೆಳೆದಿದ್ದರಿಂದ ಅವನಿಗೆ ಆ ಹೆಸರು ಬಂದಿತು. ಮಗನು ಹುಟ್ಟಿದ ತಕ್ಷಣ ಭೀಮ ಅವನೊಂದಿಗೆ ಹೊರಟು ಹೋಗುವಂತೆ ಅವಳಿಗೆ ಅಪ್ಪಣೆ ಮಾಡಿದ. ನೆನೆಸಿಕೊಂಡಾಗ ತಾವಿಬ್ಬರು ಕಾಣಿಸಿಕೊಳ್ಳುವುದಾಗಿ ಅವರಿಗೆ ವಚನವಿತ್ತು ಅವಳು ಮಗನೊಂದಿಗೆ ದೇವಲೋಕಕ್ಕೆ ತೆರಳಿದಳು.

## ಏಕಚಕ್ರಾನಗರದಲ್ಲಿ ಪಾಂಡವರು

ಶಿವನ ವರದಿಂದ ಅಜೇಯನೂ, ಅವಧ್ಯನೂ ಆಗಿದ್ದ ಬಕನೆಂಬ ರಾಕ್ಷಸನ ವಧೆಗಾಗಿ, ಅಕ್ಷಯವೂ ಪೂರ್ಣವೂ ಆದ ಶ್ರೇಷ್ಠ ಸುಖದ ರಾಶಿಯಾದ ವೇದವ್ಯಾಸರು ಪಾಂಡವರೊಂದಿಗೆ ಏಕಚಕ್ರಾನಗರಕ್ಕೆ ಹೊರಟರು ; ''ಇವರು ನನ್ನ ಶಿಷ್ಯರು'' ಎಂಬುದಾಗಿ ಹೇಳಿ, ವಿಪ್ರಕುಮಾರ-ರೂಪದಲ್ಲಿದ್ದ ಪಾಂಡವರನ್ನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇರಿಸಿ, ''ಮತ್ತೆ ಬರುವೆ'' ಎಂಬುದಾಗಿ ಅವರಿಗೆ ತಿಳಿಸಿ ಅಲ್ಲಿಂದ ಹೊರಟು ಹೋದರು. ಅವರೆಲ್ಲರೂ ವೇದಗಳನ್ನು ಉಚ್ಚರಿಸುತ್ತಾ ಅಲ್ಲಿ ವಾಸಿಸಲಾರಂಭಿಸಿದರು. ಅವರೆಲ್ಲರೂ ಭಿಕ್ಷಾಟನೆ ಮಾಡುತ್ತಿರುವಾಗ ಭೀಮ ಒಬ್ಬ ಕುಂಬಾರ ಮಾಡಿಕೊಟ್ಟ ಮನೆಯಷ್ಟು ದೊಡ್ಡದಾದ ಪಾತ್ರೆಯೊಂದನ್ನು ತೆಗೆದುಕೊಂಡು, ವೈಶ್ಯರ ಮನೆಗಳಲ್ಲಿ ಮಾತ್ರ ಹುಂಕಾರದಿಂದ ಭಿಕ್ಷೆ ಪಡೆಯುತ್ತಿದ್ದ. ಅವನ ಈ

---

೧. ಹೀಗೆ ತನ್ನ ಗುರುಗಳಾದ ಶ್ರೀವೇದವ್ಯಾಸರು ನೀಡಿದ ಆದೇಶವನ್ನು ಶ್ರೀಭೀಮಸೇನ ಕೂಡಲೇ ಪಾಲಿಸಿದ. ಆದರೆ ತಮ್ಮ ಗುರುವಾದ ಶ್ರೀಪರಶುರಾಮರು ನೀಡಿದ ಆದೇಶವನ್ನು ಭೀಷ್ಮರು ಪಾಲಿಸದೆ ಯುದ್ಧವನ್ನೇ ಆಯ್ದುಕೊಂಡರು. ಭೀಮ ಮೇಲ್ನೋಟಕ್ಕೆ ರಾಕ್ಷಸಿಯಾಗಿದ್ದ ಸ್ತ್ರೀಯನ್ನು ಶ್ರೀವ್ಯಾಸರ ಆದೇಶವನ್ನು ಮನ್ನಿಸಿ ಸ್ವೀಕರಿಸಿದ. ಆದರೆ ಸ್ವರೂಪದಲ್ಲಿ ತನ್ನ ಪತ್ನಿಯೇ ಆಗಿದ್ದ , ತಾವೇ ಗೆದ್ದುತಂದಿದ್ದ ರಾಜಪುತ್ರಿಯಾದ ಅಂಬೆಯನ್ನು ಭೀಷ್ಮರು ಸ್ವೀಕರಿಸದೆ ಆದೇಶವನ್ನು ಧಿಕ್ಕರಿಸಿದರು. ಹೆಸರಿಗೆ ಭೀಷ್ಮರು ಕುರುಕುಲಪಿತಾಮಹ-ರಾದ ಹಿರಿಯರು ; ಭೀಮಸೇನ ವರಸೆಯಲ್ಲಿ ಅವರ ಮೊಮ್ಮಗ. ಆದರೆ ಮೊಮ್ಮಗನ ಎತ್ತರಕ್ಕೆ ತಾತ ಏರಲಾಗಲಿಲ್ಲ ಎಂಬಲ್ಲಿ ತಾರತಮ್ಯತತ್ತ್ವ ಅಡಗಿದೆ.

ಕಾರ್ಯದಿಂದ ತಮ್ಮ ಇರುವಿಕೆ ಬಯಲಾಗಬಹುದೆಂಬ ಶಂಕೆಯಿಂದ ಧರ್ಮರಾಜ - "ಸ್ಥೂಲವಾದ ಮನೆಯನ್ನು ಭೂಮಿಯ ಸಮೇತವಾಗಿ ಒಂದೇ ಕೈಯಿಂದ ಮೇಲೆತ್ತಿ ಬೆಂಕಿಯ ಬಾಯಿಂದ ಕುಂಬಾರನೊಬ್ಬನನ್ನು ರಕ್ಷಿಸಿದಿ ; ಅದಕ್ಕಾಗಿ ಆ ಕುಂಬಾರ ಮಾಡಿಕೊಟ್ಟ ಪಾತ್ರೆಯನ್ನು ಹಿಡಿದುಕೊಂಡು ಹುಂಕಾರದಿಂದ ಭಿಕ್ಷಾಟನೆ ಮಾಡುತ್ತಿರುವಿ. ನಿನ್ನ ಈ ರೀತಿಯ ಧರ್ಮದಿಂದಾಗಿ, ದುರ್ಯೋಧನನ ಕಡೆಯವರಿಗೆ ನಮ್ಮ ಸುಳಿವು ಸಿಕ್ಕೀತೆಂದು ನನಗೆ ಭಯವಾಗಿದೆ. ಆದ್ದರಿಂದ ನೀನು ತಾಯಿಯೊಂದಿಗೆ ಮನೆಯಲ್ಲಿಯೇ ಉಳಿದು, ಅರ್ಜುನಾದಿಗಳು ತರುವ ಅನ್ನವನ್ನು ಭೋಜನ ಮಾಡು. ನೀನು ಮಾತ್ರ ಭಿಕ್ಷೆಗೆ ಹೋಗಬೇಡ" ಎಂದು ಹೇಳಿದ. ಧರ್ಮರಾಜನ ಮಾತಿಗೆ ಒಪ್ಪಿಕೊಂಡು ಭೀಮ ಹಾಗೆಯೇ ಮಾಡಲಾರಂಭಿಸಿದ. ಉಳಿದವರು ತಮ್ಮ ಧರ್ಮವನ್ನು ಪಾಲಿಸಲೆಂದು ಸುಮ್ಮನೆ ಭಿಕ್ಷಾಟನೆ ಮಾಡುತ್ತಿದ್ದರು.

## ಬಕಾಸುರನ ದೌರ್ಜನ್ಯ

ಒಮ್ಮೆ ಇತರ ನಾಲ್ವರು ಭಿಕ್ಷಾಟನೆಗೆ ತೆರಳಿದ್ದಾಗ ಭೀಮ ತಾಯಿಯೊಂದಿಗೆ ಮನೆಯಲ್ಲಿಯೇ ಉಳಿದಿದ್ದ. ಆಗ ತಾವು ವಾಸಿಸುತ್ತಿದ್ದ ಮನೆಯ ಬ್ರಾಹ್ಮಣನು ಪತ್ನೀಸಮೇತನಾಗಿ ಅಳುತ್ತಿರುವುದನ್ನು ಕೇಳಿ ಭೀಮ, ಹೆಂಗಸರು ಮಕ್ಕಳು ಇರುವ ಮನೆಯಲ್ಲಿ ತಾನೇ ತೆರಳಿದರೆ ಶಿಶುಲಾಲನಾದಿಗಳಲ್ಲಿ ತೊಡಗಿರುವ ಅವರು ನಾಚಿಕೊಳ್ಳಬಹುದು ಎಂಬ ಕಾರಣದಿಂದ ತಾನು ಹೋಗದೆ, ತಾಯಿಗೆ ಹೇಳಿದ - "ಅಮ್ಮ, ಏತಕ್ಕಾಗಿ ಈ ಬ್ರಾಹ್ಮಣಕುಟುಂಬ ಅಳುತ್ತಿದೆ? ಎಂಬುದನ್ನು ತಿಳಿದು ಬಾ, ಅಗತ್ಯವಾದುದನ್ನು ಮಾಡುವೆ." ಕುಂತಿಯು ತ್ವರೆಯಿಂದ ಧಾವಿಸಿದಳು ; ಮರೆಯಲ್ಲಿದ್ದುಕೊಂಡೇ ಆ ಮನೆಯಲ್ಲಿ ನಡೆಯುತ್ತಿದ್ದ ಮಾತುಗಳನ್ನು ಕೇಳಿಸಿ-ಕೊಳ್ಳತೊಡಗಿದಳು. ಬ್ರಾಹ್ಮಣ ತನ್ನ ಹೆಂಡತಿಗೆ ಹೇಳುತ್ತಿದ್ದ - "ಆ ಬಕನಿಗೆ ಒಬ್ಬ ಪುರುಷ, ಗಾಡಿ, ಎರಡು ಎತ್ತುಗಳಿಂದ ಕೂಡಿದ ಪರ್ವತಪ್ರಾಯವಾದ ಭಕ್ಷ್ಯಭೋಜ್ಯರೂಪವಾದ ಕರವನ್ನು ಈ ದಿನ ಕೊಡಲೇ ಬೇಕಾಗಿದೆ. ಇತರ ಸಿದ್ಧತೆಗಳಾಗಿದ್ದರೂ ಪುರುಷನೊಬ್ಬ ಮಾತ್ರ ದೊರೆಯದಾಗಿರುವನು. ಕಪ್ಪ ಕೊಡದಿದ್ದಲ್ಲಿ ನಮ್ಮ ಸಮಸ್ತವೂ ನಾಶವಾಗುವುದು. ಬೇರೆಡೆಗೆ ತೆರಳೋಣ ಎಂದು ನಾನು ಆಗಲೇ ತಿಳಿಸಿದ್ದೆ. ಆದರೆ ಪ್ರಿಯೆ ! ಅದು ನಿನ್ನ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಸಾಯಲು ಈಗ ನಾನೇ ರಾಕ್ಷಸನ ಬಾಯಿಗೆ ಬೀಳುವೆನು." "ತಾವು ಬೇಡ ; ನಾನೇ ಹೋಗುವೆ. ನಿಮಗೋಸ್ಕರ ದೇಹತ್ಯಾಗ ಮಾಡುವುದರಿಂದ ಪತಿವ್ರತಾಸ್ತ್ರೀಯರು ಪಡೆಯುವ ಲೋಕ ನನಗೆ ಲಭಿಸುವುದು. ಇಲ್ಲವಾದಲ್ಲಿ ನನಗೆ ಅಧೋಗತಿ ತಪ್ಪದು" ಎಂಬುದಾಗಿ ಅವನ ಹೆಂಡತಿ ಅವನನ್ನು ತಡೆದಳು. ಇನ್ನೂ ಮದುವೆಯಾಗದಿದ್ದ ಅವರ ಮಗಳು "ನೀವು ಬೇಡ ; ನಾನು ಹೋಗುವೆ. ಕನ್ಯೆಯಿಂದ ಏನು ತಾನೇ ಪ್ರಯೋಜನ?" ಎಂದು ನುಡಿದಳು. ಅವಳ ಮಾತನ್ನು ಧಿಕ್ಕರಿಸಿ, ಬ್ರಾಹ್ಮಣ ಹೇಳಿದ - "ಕನ್ಯೆ ಎರಡು ಕುಲ-ಗಳನ್ನು ಉದ್ಧರಿಸುವವಳು ಎಂದು ಶಾಸ್ತ್ರಗಳು ಹೇಳಿವೆ. ಹೆಂಡತಿ ಗೆಳತಿಯಿದ್ದಂತೆ ; ಹಾಗೂ ಮಗನಂತೂ ತಾನೇ ಎಂಬುದಾಗಿ ವೇದ ಹೇಳಿದೆ. ಆದ್ದರಿಂದ ನನ್ನ ಬದುಕಿಗಾಗಿ ಈ ಯಾರನ್ನೂ

ಆ ನರಭಕ್ಷಕನಿಗೆ ಒಪ್ಪಿಸಲಾರೆ.'' ಹೀಗೆ ಎಲ್ಲರು ಒಟ್ಟಾಗಿ ಅಳುತ್ತಿರುವಾಗ ಅವರ ಮಗು ತನ್ನ ಕೈಲಿದ್ದ ಹುಲ್ಲುಕಡ್ಡಿಯೊಂದನ್ನು ಅವರಿಗೆ ತೋರಿಸಿ, ''ಇದರಿಂದ ಆ ರಾಕ್ಷಸನನ್ನು ನಾನು ಕೊಂದೇ ಬಿಡುವೆನು'' ಎಂದಿತು.

## ಕುಂತಿಯ ಪ್ರವೇಶ

ಆ ಶುಭನುಡಿಯನ್ನು ಕೇಳುತ್ತಲೇ, ಕುಂತಿ ಒಳಕ್ಕೆ ಕಾಲಿರಿಸಿದಳು. ಅವಳು ವಿಚಾರಿಸಲಾಗಿ ಆ ಬ್ರಾಹ್ಮಣನು ದೇವತೆಗಳೂ ಸಹಿಸಲಾಗದ ಬಕನ ವೀರ್ಯವನ್ನು ಬಲವನ್ನು ಪ್ರತಿ ಹದಿಮೂರು ವರ್ಷಗಳಿಗೊಮ್ಮೆ ಪ್ರತಿಯೊಬ್ಬರೂ ಅವನಿಗೆ ಆ ರೀತಿ ಕರ ಒಪ್ಪಿಸಬೇಕಾದ ಅನಿವಾರ್ಯತೆಯನ್ನು ವಿವರಿಸಿದ. ಆ ಬಕನು ರಾವಣನ ಸೋದರಮಾವ. ರಾಮಾಯಣ-ಕಾಲದಲ್ಲಿ ರಾಮನ ಬಾಣಗಳಿಗೆ ಬಹಳವಾಗಿ ಅಂಜಿ ಬಿಲದಲ್ಲಿ ಸೇರಿಕೊಂಡಿದ್ದ ಅವನು ರಾಜರನ್ನೆಲ್ಲ ತನ್ನ ವಶಮಾಡಿಕೊಂಡು, ಅಂಜಿಸಿ ಅವರಿಂದ ಕಪ್ಪವನ್ನು ಪಡೆಯುತ್ತಿದ್ದ. ಎಲ್ಲ ವಿಷಯವನ್ನು ಕೇಳಿದ ಕುಂತಿ ಹರ್ಷಪಟ್ಟಳು. ಹೀಗೆ ಬಲಾಢ್ಯನಾದ ಅವನನ್ನು ಕೊಂದು ಭೀಮನು ಕೀರ್ತಿಯನ್ನು, ಹೆಚ್ಚಿನ ಧರ್ಮವನ್ನು ಹೊಂದುವನು. ಅದರಿಂದ ತಾವೆಲ್ಲ ಪುಣ್ಯ-ಭಾಗಿಗಳಾಗುವೆವು ಎಂಬ ವಿಚಾರವೇ ಅವಳ ಆ ಸಂತೋಷಕ್ಕೆ ಕಾರಣವಾಯಿತು. ಹೀಗೆ ವಿಚಾರ ಮಾಡಿದ ಕುಂತಿ ಆ ಬ್ರಾಹ್ಮಣನನ್ನು ಸಮಾಧಾನಪಡಿಸುತ್ತ ನುಡಿದಳು - ''ವಿಪ್ರೋ-ತ್ತಮ ! ನನಗೆ ಐವರು ಪುತ್ರರಿರುವರು. ಅವರಲ್ಲಿ ಒಬ್ಬನು ಈ ರಾಕ್ಷಸನ ಬಾಯಿಗೆ ತೆರಳಲಿ'' ; ಅದಕ್ಕೆ ಒಪ್ಪದ ಬ್ರಾಹ್ಮಣ - ''ನಿನ್ನ ಮಗನನ್ನು ಕೊಲ್ಲಿಸುವ ಪಾಪಕ್ಕೆ ನಾನು ಗುರಿಯಾಗಲಾರೆ. ಅಬ್ಬಾ! ನಿನ್ನ ಮನಸ್ಸು ಅದೆಷ್ಟು ಗಟ್ಟಿ!'' ಎಂದು ನುಡಿಯಲು, ಕುಂತಿ ಅವನಿಗೆ ಧೈರ್ಯ ಹೇಳಿದಳು - ''ದಿಕ್ಪಾಲಕರೂ ಎದುರಿಸಲಾಗದ ಒಂದು ಶ್ರೇಷ್ಠ ವಿದ್ಯೆ ನನ್ನ ಮಗನಲ್ಲಿದೆ. ಹಿರಿಯರು ಹೇಳಿದರೂ ಸಹ[೧] ಅವನು ಅದನ್ನು ಪ್ರಯೋಗಿಸುವುದಿಲ್ಲ. ಆದರೂ ಅವನನ್ನು ಸುರರಾಗಲೀ ಅಸುರರಾಗಲೀ ಗೆಲ್ಲಲಾರರು , ಕೊಲ್ಲಲಾರರು.'' ಹೀಗೆ ಹೇಳಿ ಭೀಮನ ಬಳಿಗೆ ಬಂದು, ಅವನಿಗೆ ಎಲ್ಲ ವಿಷಯವನ್ನು ತಿಳಿಸಿದಳು. ತನಗೆ ಒದಗಿದ ಮಹಾ ಸ್ವಧರ್ಮವನ್ನು ಕೇಳಿ ಭೀಮ ಹರ್ಷದಿಂದ ಉಬ್ಬಿಹೋದ. ಬಹಳವಾಗಿ ಕಣ್ಣಗಲಿಸಿ ನಲಿಯುತ್ತಿದ್ದ ಅವನನ್ನು ಗಮನಿಸಿ, ಯುಧಿಷ್ಠಿರ ಉಳಿದವರೊಂದಿಗೆ ಕೂಡಿಕೊಂಡು ತಾಯಿಯನ್ನು, ''ಅಮ್ಮ ! ಅದೇಕೆ ಇವನು ಇಷ್ಟು ಸಂತೋಷಪಡುತ್ತಿರುವನು?'' ಎಂದು ಪ್ರಶ್ನಿಸಿದ. ಕುಂತಿಯು ಅವರಿಗೆ ಎಲ್ಲ ವಿಷಯವನ್ನು ವಿವರಿಸಿದಳು. ''ಅಮ್ಮ ! ಇದು ಸರಿಯಲ್ಲ ! ಯಾರ ಬಲವನ್ನೇ ನಾವೆಲ್ಲ ಆಶ್ರಯಿಸಿ ಬದುಕಿರುವೆವೋ ಅಂತಹ ಭೀಮನನ್ನೇ ನೀನು ಕೊಲ್ಲಿಸಹೊರಟಿರುವಿ. ಅವನ

---

೧. ಹಾಗೆ ಅಂತಹ ವಿದ್ಯೆಯನ್ನು ಭೀಮಸೇನ ದೊಡ್ಡವರು ಹೇಳಿದರೂ ಸಹ ಪ್ರಯೋಗಿಸದೇ ಇರಲು ಅವನಿಗೆ ಅದರ ಅಗತ್ಯ ಇಲ್ಲದ್ದು ಮುಖ್ಯಕಾರಣ ಎಂದು ತಿಳಿಯಬೇಕು. ಆ ವಿದ್ಯೆಯನ್ನು ಉಪಯೋಗಿಸದೆ, ಎಲ್ಲ ಆಪತ್ತುಗಳನ್ನು ಮೆಟ್ಟಿ ನಿಲ್ಲಬಲ್ಲ ಅಸಾಧಾರಣ ಸ್ವಾಭಾವಿಕ ಸಾಮರ್ಥ್ಯ ಭೀಮನಿಗಿದ್ದುದು ಇದರಿಂದ ತಿಳಿಯುವುದು.

ಬಾಹುಬಲದ ಆಸರೆಯಿಂದಲೇ ನಾವು ರಾಜ್ಯವನ್ನು ಪಡೆಯಬೇಕಿದೆ. ಎಲ್ಲ ಶತ್ರುಗಳನ್ನು ಕೊಲ್ಲುವ ನಮ್ಮ ಸ್ವಧರ್ಮ ಉಳಿಯುವುದು ಸಹ ಅವನಿಂದಲೇ. ಅಮ್ಮ ಹೇಳು ! ನೀನು ಅದೆಂತಹ ಯೋಚನೆಯಿಂದ ಅಂತಹ ಈ ಭೀಮನನ್ನು ರಾಕ್ಷಸನ ಬಾಯಿಗೆ ಕಳುಹಿಸುತ್ತಿ-ರುವೆ ! '' ಎಂದು ಉದ್ವಿಗ್ನನಾದ ಯುಧಿಷ್ಠಿರನನ್ನು, ಅಪಾರಧೈರ್ಯದ ಕುಂತಿ, ''ಮಗೂ ! ಎಲ್ಲ ದೇವತೆಗಳೂ, ರಾಕ್ಷಸರೂ ಒಟ್ಟಾದರೂ ಇವನನ್ನು ಕೊಲ್ಲಲಾರರು. ಹುಟ್ಟಿದ ಹೊಸತರಲ್ಲೇ ಇವನಿಂದ ಶತಶೃಂಗಪರ್ವತ ಚೂರುಚೂರಾಯಿತು. ಮನುಷ್ಯರೂಪದಲ್ಲಿ ಅವತರಿಸಿ ಬಂದಿರುವ ಸ್ವಯಂ ವಾಯುದೇವನೇ ಇವನು. ಇವನನ್ನು ಕೊಲ್ಲಬಲ್ಲವನು ಈ ಜಗತ್ತಿನಲ್ಲೇ ಇಲ್ಲ'' ಎಂದು ಸಮಾಧಾನಪಡಿಸಿದಳು ; ಧರ್ಮರಾಜ ಸಮ್ಮತಿಸಿದ.

## ಬಕಾಸುರನ ವಧೆ

ಮಾರನೆಯ ದಿನ ಗಾಡಿಯಲ್ಲಿ ಭೋಜ್ಯಪದಾರ್ಥಗಳನ್ನು ತುಂಬಿಕೊಂಡು, ಭೀಮ ತ್ವರೆಯಿಂದ ಬಕವನದ ಸಮೀಪಕ್ಕೆ ತೆರಳಿ, ನರಭಕ್ಷಕನಾದ ಅವನು ಮುಟ್ಟುವುದಕ್ಕಿಂತ ಮುಂಚಿತವಾಗಿಯೇ ಪಾಯಸ, ಭಕ್ಷ್ಯಭೋಜ್ಯಗಳು, ಹಾಲಿನ ಕೊಡ ಮೊದಲಾದವುಗಳಿಂದ ತುಂಬಿದ್ದ ಪರ್ವತಪ್ರಾಯವಾದ ಆ ಅನ್ನದ ರಾಶಿಯನ್ನು ತಿನ್ನಲು ಬಯಸಿದ. ಆ ರೀತಿ ಭೀಮನು ಅನ್ನದ ರಾಶಿಯನ್ನು ತಿನ್ನಲು ತೊಡಗಿದಾಗ, ಬಕನು ಒಂದು ವೃಕ್ಷವನ್ನು ಕಿತ್ತಿಕೊಂಡು ಓಡಿಬಂದು ಅದರಿಂದ ಅವನನ್ನು ಹೊಡೆದ. ಅವನ ಹೊಡೆತಗಳನ್ನು ಎಡಗೈಯಿಂದಲೇ ತಪ್ಪಿಸಿಕೊಳ್ಳುತ್ತ ಭೀಮನು, ಎಲ್ಲಾ ಭಕ್ಷ್ಯಭೋಜ್ಯಗಳನ್ನು ತಿಂದು ಪೂರೈಸಿದ ; ತ್ವರೆಯಿಂದ ನೀರನ್ನು ಕುಡಿದು, ಆಚಮನವನ್ನು ಮಾಡಿ, ದೊಡ್ಡದೊಡ್ಡ ವೃಕ್ಷ ಬೆಟ್ಟಗಳಿಂದ ಯುದ್ಧ ಮಾಡಲಾರಂಭಿಸಿದ. ಬಹಳ ಬೆಟ್ಟಗಳಿಂದ ಆ ಬಕನಿಂದ ಹೊಡೆಯಲ್ಪಟ್ಟ ಭೀಮ ಅವನನ್ನು ಹಿಡಿದು, ಭೂಮಿಯ ಮೇಲೆ ಹೊಸಕಿದ ; ಅವನ ಒಂದು ಕಾಲಿನ ಮೇಲೆ ತನ್ನ ಕಾಲನ್ನಿರಿಸಿ, ಇನ್ನೊಂದು ಕಾಲನ್ನು ಎರಡು ಕೈಗಳಿಂದ ಹಿಡಿದು ಅವನನ್ನು ಸೀಳಿ ಹಾಕಿದ. ಹೀಗೆ ಸತ್ತ ವಿಷ್ಣುದ್ವೇಷಿಯಾದ ಆ ಪಾಪಿ ಬಕ ಮತ್ತೆ ಹಿಂತಿರುಗಲಾಗದ ಘೋರತಮಸ್ಸನ್ನೇ ಸೇರಿದ. ಜರಾಸಂಧನಿಗೂ, ನರಕಾಸುರನಿಗೂ, ರಾಜನಾದ ಭರತನಿಗೂ ವಶವಾಗದಿದ್ದ ಜಗತ್ತಿಗೆ ಮೃತ್ಯುವಂತಿದ್ದ ಆ ರಾಕ್ಷಸನನ್ನು ಕೊಂದು, ಅಕ್ಷಯಬಲನಾದ ಭೀಮಸೇನ ಅವನ ಶರೀರವನ್ನು ಪಟ್ಟಣದ ಮಹಾದ್ವಾರದ ಬಳಿ ನಿಲ್ಲಿಸಿದ ; ಸ್ನಾನ ಮಾಡಿ, ತನ್ನ ಸೋದರರನ್ನು ಸೇರಿಕೊಂಡ. ಅವನ ಕಾರ್ಯವನ್ನು ಕೇಳಿ, ಅವರೂ, ಕುಂತಿಯೂ ಬಹಳವಾಗಿ ಸಂತೋಷಿಸಿದರು. ಪೌರರು, ರಾಕ್ಷಸನ ಶರೀರವನ್ನು ಕಂಡ ತಕ್ಷಣ ಅತ್ಯಂತ ಭಯಗೊಂಡವರಾಗಿ, ಕ್ರಮವಾಗಿ ಯುಕ್ತಿಗಳಿಂದ ಅವನು ಸತ್ತಿರುವನು ಎಂಬುದನ್ನು ಕಂಡುಕೊಂಡರು ; ಆ ಬ್ರಾಹ್ಮಣನ ಮಾತಿನಿಂದಾಗಿ ಅವನು ಭೀಮಸೇನನಿಂದ ಹತನಾದನೆಂಬುದನ್ನು ತಿಳಿದು ಬಹಳವಾಗಿ ಆನಂದಿಸಿದರು. ಅನ್ನರೂಪದ ಕಾಣಿಕೆಯನ್ನು ಭೀಮನಿಗೆ ಅರ್ಪಿಸಿದರು. ಭೀಮ ಅದನ್ನೆಲ್ಲ ನರಸಿಂಹರೂಪಿಯಾದ ಶ್ರೀಹರಿಗೆ ಸಮರ್ಪಿಸಿದ.

## ಪಾಂಚಾಲದತ್ತ ಪಾಂಡವರು

ಅನಂತರ ವೇದವ್ಯಾಸರೂಪಿಯಾದ ವಿಷ್ಣುವಿನ ಮಾತಿನಿಂದ ಸಂತೋಷದಿಂದ ಪಾಂಡವರು ಮುಂದೆ ಹೊರಟರು. ಜಗತ್ತಿಗೆಲ್ಲ ಗುರುವಾದ ವ್ಯಾಸರೂಪಿಯಾದ ರಮೆಯರಸ ದ್ರೌಪದಿಯ ಹುಟ್ಟು ಮೊದಲಾದ ವಿವರಗಳನ್ನು ತಿಳಿಸಿ, 'ಅಲ್ಲಿಗೆ ನೀವು ತೆರಳಿರಿ' ಎಂದು ಪ್ರೇರೇಪಿಸಿದ. ಅವರನ್ನು ಬ್ರಾಹ್ಮಣರೆಂದೇ ತಿಳಿದಿದ್ದ ಇತರ ಬ್ರಾಹ್ಮಣಶ್ರೇಷ್ಠರು ಕೂಡ "ಅಲ್ಲಿ ಮೃಷ್ಟಾನ್ನಭೋಜನ ದೊರೆಯುವುದು ಬನ್ನಿ" ಎಂದು ಹೇಳಿದರು.

ಪಾಂಡವರು ಅರಗಿನ ಮನೆಯಲ್ಲಿ ದಗ್ಧರಾದರೆಂಬ ವಾರ್ತೆಯನ್ನು ಕೇಳಿ ಮೊದಲು ತುಂಬಾ ದುಃಖಪಟ್ಟ ದ್ರುಪದರಾಜ, ಅನಂತರ ಯಾಜೋಪಯಾಜರ ಮುಖದಿಂದ ಹೊರಬಂದ ಮಂತ್ರ ಎಂದೂ ಸುಳ್ಳಾಗಲಾರದು ಎಂಬ ಕಾರಣದಿಂದ ಅವರು ಬದುಕಿದ್ದಾರೆಂದೇ ನಂಬಿದ. ಪಾಂಡವರೆಲ್ಲ ಎಲ್ಲೋ ವೇಷ ಮರೆಸಿಕೊಂಡು ವಾಸಿಸುತ್ತಿರಬೇಕು ಎಂದು ಊಹಿಸಿದ ಅವನು ಅರ್ಜುನನ ನಿಮಿತ್ತ ತನ್ನ ಮಗಳ ಸ್ವಯಂವರದ ವಿಷಯವನ್ನು ಘೋಷಿಸಿದ. ಶಿವನ ವರದಿಂದ ಅರ್ಜುನನ ಹೊರತು ಬೇರಾರೂ ಕಟ್ಟಲಾಗದ ಒಂದು ಧನುಸ್ಸನ್ನು ಸಿದ್ಧಪಡಿಸಿಕೊಂಡ.

ಅದೇ ಕಾಲದಲ್ಲಿ ವಸುದೇವಸುತನಾದ ಕೃಷ್ಣ ತನ್ನ ಪರಿಪೂರ್ಣಜ್ಞಾನದಿಂದ ಎಲ್ಲವನ್ನೂ ತಿಳಿದಿದ್ದರೂ, ಪಾಂಡವರು ಮೃತರಾದರೆಂಬ ವಾರ್ತೆಯನ್ನು ಕೇಳಿ, [೧]ಕುಲ್ಯನಿಮಿತ್ತದಿಂದ ಬಲರಾಮನೊಂದಿಗೆ ಹೊರಟ ; ಹಸ್ತಿನಾವತಿಯನ್ನು ಸೇರಿ ಕೌರವರನ್ನು ವಂಚಿಸಲೆಂದು, ಅದಕ್ಕನುಸಾರವಾದ ಮಾತುಗಳನ್ನಾಡಿ, ತನಗೆ ಅಪ್ರಿಯವೆಂಬಂತೆ, ಪೂರ್ಣಸುಖಿಯಾದ ಅವನು ವರ್ತಿಸಿ ದ್ವಾರಾವತಿಗೆ ಮರಳಿದ.

## ಸತ್ರಾಜಿತನ ಸಾವು

ಈ ಮಧ್ಯದಲ್ಲಿ, ಅಕ್ರೂರನು ಹೇಳಿಕೊಟ್ಟ ಮಾತಿನಂತೆ ಕೃತವರ್ಮನು ತನ್ನ ತಮ್ಮ ಶತಧನ್ವನನ್ನು ಕುರಿತು ಹೀಗೆಂದ – "ಈ ಸತ್ರಾಜಿತ್ ಮೊದಲು ಮಣಿಯೊಂದಿಗೆ ಮಗಳನ್ನು ಸಹ ನಮಗೆ ಕೊಡುವುದಾಗಿ ಮಾತು ಕೊಟ್ಟಿದ್ದ ; ಈಗ ನಮ್ಮನ್ನೆಲ್ಲ ಅವಮಾನಿಸಿ ಮಗಳನ್ನು ಕೃಷ್ಣನಿಗೆ ಕೊಟ್ಟುಬಿಟ್ಟ. ಆ ಪಾಪಿಯನ್ನು ರಾತ್ರಿ ಕೊಂದು ರತ್ನವನ್ನು ತೆಗೆದುಕೊಂಡು ನಮ್ಮ ಬಳಿಗೆ ಬಾ. ಕೃಷ್ಣನೊಂದಿಗೆ ವಿರೋಧ ಉಂಟಾದಲ್ಲಿ ಅಕ್ರೂರನೊಂದಿಗೆ ನಿನ್ನ ಸಹಾಯಕ್ಕೆ ನಾನು ಬರುವೆನು." ಹಿಂದಿನ ಜನ್ಮದಲ್ಲಿ ದೈತ್ಯನಾಗಿದ್ದ ಆ ದುರ್ಬುದ್ಧಿಯ ಶತಧನ್ವನು, ಹಾಗೆಯೇ ಮಾಡಿಬಿಟ್ಟ. ಆನಂದಜ್ಞಾನಪೂರ್ಣೆಯಾದ ಸತ್ಯಭಾಮೆ ಲೋಕವಿಡಂಬನೆಗಾಗಿ, ಸತ್ರಾಜಿತನ ದೇಹವನ್ನು ತೈಲದಲ್ಲಿ ಇರಿಸಿ ಪತಿಯ ಬಳಿಗೆ ಹೊರಟಳು. ಸತ್ಯಭಾಮೆಯ ಮಾತನ್ನು ಕೇಳಿ ತನ್ನ ಪಟ್ಟಣಕ್ಕೆ ಬರುತ್ತಿದ್ದಂತೆಯೇ ಶ್ರೀಕೃಷ್ಣ ಪಾಂಚಾಲರಾಜನ ಭಟರು ತಿಳಿಸಿದ ದ್ರೌಪದೀಸ್ವಯಂವರ

---

೧. ಕುಲ್ಯ ಎಂದರೆ ಮೃತರಿಗಾಗಿ ನೀಡುವ ತರ್ಪಣ ಮೊದಲಾದ ಕಾರ್ಯ ಎಂದರ್ಥ.

ಮಹೋತ್ಸವದ ವಾರ್ತೆಯನ್ನು ಕೇಳಿ, ಯಾದವಶ್ರೇಷ್ಠರೊಂದಿಗೂ, ಬಲರಾಮನೊಂದಿಗೂ ಕೂಡಿ ಅವನ ಪಟ್ಟಣಕ್ಕೆ ಹೊರಟ.

## ಚಿತ್ರರಥನ ಕಥೆ

ಹರಿಭಕ್ತವಂದ್ಯನಾದ ಭೀಮನೂ ಕೂಡ ಶಿವನ ವರದಿಂದ ರಕ್ಷಿತನಾದ ಆ ಬಕನನ್ನು ಹುಲ್ಲುಕಡ್ಡಿಯಂತೆ ನಾಶ ಮಾಡಿ, ಸ್ವಲ್ಪ ದಿನಗಳ ಕಾಲ ಅಲ್ಲಿದ್ದು ಅನಂತರ ವೇದವ್ಯಾಸರೂಪದ ಶ್ರೀಹರಿಯ ಅಪ್ಪಣೆಯಂತೆ ತನ್ನವರೊಂದಿಗೆ ಹೊರಟ. 'ಇದು ಅತ್ಯಂತ ಮಂಗಳಕರ ಪ್ರಸಂಗ ; ಬೇಗ ಪಾಂಚಾಲನಗರವನ್ನು ಸೇರಿಕೊಂಡರೆ, ಅಲ್ಲಿ ಪರಮಭೋಜನ ದೊರೆಯುವುದು' ಎಂದು ಅಲ್ಲಲ್ಲಿ ಕೇಳಿಬರುತ್ತಿದ್ದ ಬ್ರಾಹ್ಮಣರ ಮಾತುಗಳನ್ನು ಕೇಳಿಸಿಕೊಳ್ಳುತ್ತಲೇ ಅವರು ಉತ್ತರ-ದಿಕ್ಕಿನಲ್ಲಿ ಪ್ರಯಾಣ ಬೆಳೆಸಿದರು. ಆ ಆರು ಜನರ ಮಧ್ಯದಲ್ಲಿ ಪುಷ್ಟವಾದ ನೀಳ ತೋಳುಗಳು, ವಿಶಾಲವಾದ ವಕ್ಷಸ್ಥಳ ಮೊದಲಾದ ಪುರುಷತ್ವದ ಸಕಲ ಲಕ್ಷಣಗಳಿಂದ ಕೂಡಿದ್ದ ಭೀಮಸೇನ-ನನ್ನು ನೋಡಿ, ಬ್ರಾಹ್ಮಣರು ''ಇವನೇ ದ್ರೌಪದಿಯನ್ನು ಪಡೆಯುವನು'' ಎಂಬುದಾಗಿ ಮಾತನಾಡಿಕೊಳ್ಳುತ್ತಿದ್ದರು. ಹಗಲಿರುಳೂ ಹಾದಿ ನಡೆಯುತ್ತಾ ಅವರು ಒಮ್ಮೆ ಗಂಗಾನದಿಯ ತೀರದಲ್ಲಿ ಸಾಗುತ್ತಿದ್ದರು. ಎಲ್ಲರನ್ನೂ ರಕ್ಷಿಸುವ ದೃಷ್ಟಿಯಿಂದ ಭೀಮ ಹಿಂಭಾಗದಲ್ಲಿ ನಡೆದು ಬರುತ್ತಿದ್ದ. ಮುಂಭಾಗದಲ್ಲಿ ಅರ್ಜುನನೂ, ಮಧ್ಯದಲ್ಲಿ ಇತರರೂ ಸಾಗಿದರು.

ಪಂಜು ಹಿಡಿದು ಅರ್ಧರಾತ್ರಿಯ ಸಮಯದಲ್ಲಿ ಅರ್ಜುನ ಗಂಗೆಯನ್ನು ಸಮೀಪಿಸು-ತ್ತಿದ್ದಂತೆಯೇ, ನೀರಿನ ಮಧ್ಯದಲ್ಲಿದ್ದ ಚಿತ್ರರಥನು, ಬ್ರಾಹ್ಮಣರು ಜೊತೆಗಿಲ್ಲದಿದ್ದ ಅವರನ್ನು ಕ್ಷತ್ರಿಯರೆಂಬುದಾಗಿ ತಿಳಿದು, ಎದುರಿಸಲು ಧಾವಿಸಿದ. ''ಮನುಷ್ಯಸಂಚಾರಕ್ಕೆ ಯೋಗ್ಯವಲ್ಲದ ಈ ಕಾಲದಲ್ಲಿ ಈ ನದಿಯ ನೀರಿನ ಬಳಿ ಬಂದಿರುವ ನಿಮ್ಮನ್ನು ಕೊಲ್ಲುವೆ'' ಈ ರೀತಿ ಹೇಳಿದ ಅವನಿಗೆ ಇಂದ್ರಪುತ್ರ ಅರ್ಜುನ ಉತ್ತರಿಸಿದ – ''ಗಂಧರ್ವ ! ಅಸ್ತ್ರಬಲ್ಲ ನಮಗೆ ನಿನ್ನ ಭಯವಿಲ್ಲ. ನಿನ್ನ ಅಪಾರ ಬಲವು ಅಸ್ತ್ರ ತಿಳಿದ ನಮ್ಮ ಮುಂದೆ ನೊರೆಯಂತೆ ವ್ಯರ್ಥವೇ ಸರಿ.'' ಅರ್ಜುನನ ಈ ಮಾತುಗಳನ್ನು ಕೇಳಿದ ಇಂದ್ರಭೃತ್ಯನಾದ ಚಿತ್ರರಥ ಉತ್ತಮರಥದಲ್ಲಿ ಕುಳಿತು, ಬಾಣಗಳನ್ನು ಸುರಿಸುತ್ತ ಅವನನ್ನು ಆಕ್ರಮಿಸಿದ. ಆಗ ಅರ್ಜುನನು ಆಗ್ನೇಯಾಸ್ತ್ರದಿಂದ ಅಭಿಮಂತ್ರಿಸಿ ತನ್ನ ಕೈಯ್ಯಲ್ಲಿದ್ದ ಪಂಜನ್ನು ಅವನ ಮೇಲೆಸೆಯಲು, ಚಿತ್ರರಥನ ರಥ ಸುಟ್ಟುಬೂದಿಯಾಯಿತು. ಅರ್ಜುನನು ಅಗ್ನಿಯ ಮಧ್ಯೆ ಸಿಕ್ಕಿಕೊಂಡಿದ್ದ ಇಂದ್ರಭೃತ್ಯನಾದ ಆ ಚಿತ್ರರಥನ ತಲೆಕೂದಲನ್ನು ಹಿಡಿದು ಎಳೆದಾಡಿದ. ಅರ್ಜುನನ ಆಕ್ರಮಣವನ್ನು ತಡೆಯದಾದ ಗಂಧರ್ವ, ಧರ್ಮರಾಜನನ್ನು ಶರಣುಹೊಂದಿದ್ದರಿಂದ ಅರ್ಜುನ ತನ್ನ ಅಸ್ತ್ರವನ್ನು ಉಪಸಂಹರಿಸಿದ. ಚರ್ಮ ಸುಟ್ಟು ಬಣ್ಣ ಕಪ್ಪಾದ್ದರಿಂದ ''ಅಂಗಾರವರ್ಣ'' ಎಂಬ ಹೆಸರೇ ಆ ಗಂಧರ್ವನಿಗೆ ಬಂದಿತು ; ಆ ಮೊದಲಿಗೆ ಅತ್ಯಂತ ಕೆಂಪು ಶರೀರದಿಂದ ಕೂಡಿ ಬಂಗಾರದಂತೆ ಆ ಗಂಧರ್ವ ಹೊಳೆಯುತ್ತಿದ್ದ.

ಅರ್ಜುನನ ಗೆಳೆತನವನ್ನು ಬಯಸಿದ ಚಿತ್ರರಥ ಆ ಅದ್ಭುತ ಮಹಾಸ್ತ್ರವನ್ನು ತನಗೆ ಉಪದೇಶಿಸಲು ಕೇಳಿಕೊಂಡ. ಅವನಿಗೂ ಆಗ್ನೇಯಾಸ್ತ್ರ ತಿಳಿದಿತ್ತಾದರೂ, ಇಂತಹ ಅಸ್ತ್ರ ಅವನಿಗೆ

ತಿಳಿದಿರಲಿಲ್ಲ. ವಿದ್ಯೆಗಳೆಲ್ಲ ಇಂದ್ರಾವತಾರನಾದ ಅರ್ಜುನನಲ್ಲಿ ಅತ್ಯಂತ ಹೆಚ್ಚಿನ ಅಭ್ಯಾಸದಿಂದಾಗಿ ಪರಿಪಕ್ವವಾಗಿದ್ದವು. ಪ್ರತಿಯಾಗಿ ಗಂಧರ್ವ 'ಅದೃಶ್ಯವಿದ್ಯೆ'ಯನ್ನು ಉಪದೇಶಿಸಲು ಮುಂದಾದಾಗ, ಅರ್ಜುನ ಅದನ್ನು ಕಾಲಾಂತರದಲ್ಲಿ ಪಡೆದುಕೊಳ್ಳುವುದಾಗಿ ತಿಳಿಸಿದ. ತನ್ನ ವಿದ್ಯೆಯು ಅಧಿಕವಾದ್ದರಿಂದ, ಅದಕ್ಕೆ ಪ್ರತಿಯಾಗಿ ಅದೃಶ್ಯವಿದ್ಯೆಯನ್ನು ಪಡೆಯುವುದರಿಂದ ಅದಕ್ಕೆ ಅದರ ಸಾಮ್ಯವುಂಟಾಗುವುದನ್ನು ಬಯಸದ ಅರ್ಜುನ ಆಗಲೇ ಅದನ್ನು [೧]ವಿನಿಮಯದ ಮೂಲಕ ಸ್ವೀಕರಿಸಲು ನಿರಾಕರಿಸಿದ. ಅರ್ಜುನನೊಂದಿಗೆ ಬಹಳ ರೀತಿಯ ಸಲ್ಲಾಪಗಳಲ್ಲಿ ತೊಡಗಿದ ಚಿತ್ರರಥ ಧೌಮ್ಯಮಹರ್ಷಿಗಳನ್ನು ಪುರೋಹಿತರನ್ನಾಗಿ ಮಾಡಿಕೊಳ್ಳಲು ತಿಳಿಸಿದ. 'ನಿನಗೆ ದಿವ್ಯಾಶ್ವಗಳನ್ನು ಕೊಡುವೆನು' ಎಂದು ಅರ್ಜುನನಿಗೆ ಹೇಳಿ, ಆ ಚಿತ್ರರಥ ಆಕಾಶಕ್ಕೆ ಹಾರಿದ. ಪಾಂಡವರು ತಮ್ಮ ಪ್ರಯಾಣವನ್ನು ಮುಂದುವರೆಸಿದರು.

## ದ್ರೌಪದೀ ಸ್ವಯಂವರ

ಉತ್ತಮಜ್ಞಾನಿಯಾದ ಧೌಮ್ಯರನ್ನು ತಮ್ಮ ಪುರೋಹಿತರನ್ನಾಗಿ ಮಾಡಿಕೊಂಡು ಪಾಂಡವರು, ಬ್ರಾಹ್ಮಣವೇಷದಲ್ಲಿಯೇ ಪಾಂಚಾಲನಗರವನ್ನು ಪ್ರವೇಶಿಸಿದರು ; ಅಲ್ಲಿ ಅಲಂಕೃತರಾಗಿ ನೆರೆದಿದ್ದ ರಾಜರ ಗುಂಪನ್ನು ಕಂಡರು. ಸಭೆಯಲ್ಲಿ ನೆರೆದಿದ್ದ ರಾಜಮಂಡಲವನ್ನು ನೋಡಿ ತನ್ನ ತಂಗಿ ದ್ರೌಪದಿಯನ್ನು ಕರೆದುಕೊಂಡು ಬಂದ ಹೊಳೆಯುವ ದೇಹದ ಧೃಷ್ಟದ್ಯುಮ್ನ ಅವರ ಮಧ್ಯದಲ್ಲಿ ನಿಂತು, ಕುಲ, ವೀರ್ಯ, ಸಂಪತ್ತುಗಳಿಂದ ಕೂಡಿದ ಎಲ್ಲ ರಾಜರನ್ನು ಉದ್ದೇಶಿಸಿ, ಐದು ಬಾಣಗಳಿಂದ ಕೂಡಿದ ಬಿಲ್ಲನ್ನು ಸಭೆಯ ಮುಂದಿರಿಸಿ, ಮೇಘಗಂಭೀರ ಧ್ವನಿಯಿಂದ ನುಡಿದ – ''ಕ್ಷತ್ರಿಯವೀರರೇ ! ವೃಕ್ಷದ ಮೇಲಿರುವ ಮತ್ಸ್ಯದ ಪ್ರತಿಬಿಂಬವನ್ನು ನೀರಿನಲ್ಲಿ ನೋಡುತ್ತ, ಈ ಬಾಣಗಳಿಂದ ಯಾವನು ಅದನ್ನು ಹೊಡೆದು ಬೀಳಿಸುವನೋ ಅವನನ್ನು ದ್ರೌಪದಿಯು ವರಿಸುವಳು.'' ಧೃಷ್ಟದ್ಯುಮ್ನನ ಮಾತು ಮುಗಿಯುತ್ತಿದ್ದಂತೆಯೇ ಎಲ್ಲ ರಾಜಪುತ್ರರೂ ಹುರುಪಿನಿಂದ ಮೇಲೆದ್ದರು. ಏಳುವ ರಭಸಕ್ಕೆ ಅವರ ಕರ್ಣಕುಂಡಲಗಳು ತೂಗಾಡುತ್ತಿದ್ದವು. ಚೆನ್ನಾಗಿ ಅಲಂಕಾರ ಮಾಡಿಕೊಂಡಿದ್ದ ಅವರೆಲ್ಲ ತಮ್ಮ ಅಸ್ತ್ರಬಲವನ್ನು ತೋರಿಸುವ ಹುಮ್ಮಸ್ಸಿನಲ್ಲಿ ಮೇಲಾಟ ನಡೆಸಿದ್ದರು. ಧನುಸ್ಸನ್ನೊಮ್ಮೆ ಆಮೂಲಾಗ್ರವಾಗಿ ನೋಡಿಯೇ ಕೆಲವರು ''ಇದು ನನಗೆ ಆಗದ ಕಾರ್ಯ'' ಎಂದು ಹಿಂದಿರುಗಿದರು. ಮತ್ತೆ ಕೆಲವರು ಅದನ್ನು ಅಲುಗಾಡಿಸಿ ಅದು ತಮಗೆ ನೀಗದ್ದೆಂದು ತಿಳಿದು ಮರಳಿದರು.

---

೧. ಪರಸ್ಪರ ಸಮಾನಮೌಲ್ಯದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ವಿವೇಕ ; ಹಾಗಲ್ಲದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ಸಮಂಜಸವೆನಿಸದು. ಪ್ರಸ್ತುತ ಅರ್ಜುನನ ಆ ಅಪೂರ್ವ ಆಗ್ನೇಯಾಸ್ತ್ರದ ವಿದ್ಯೆಯು ಗಂಧರ್ವ ಪ್ರತಿಯಾಗಿ ನೀಡುವ ಅದೃಶ್ಯವಿದ್ಯೆಗಿಂತ ಮಿಗಿಲಾಗಿತ್ತು. ಆದ್ದರಿಂದಲೇ ಅರ್ಜುನ ಅದನ್ನು ವಿನಿಮಯ ಮಾಡಿಕೊಳ್ಳಲು ಬಯಸಲಿಲ್ಲ; ಆಗಲೇ ಆ ವಿದ್ಯೆ ಪಡೆದಿದ್ದಲ್ಲಿ ವಿನಿಮಯವೆನ್ನಿಸಿಕೊಳ್ಳುವ ಸಂಭವವಿರುತ್ತಿತ್ತು ; ಹಾಗಾಗದಿರಲಿ ಎಂದೇ ಅರ್ಜುನ ಅದನ್ನು ಮುಂದೆ ಕಾಲಬಂದಾಗ ಪಡೆದುಕೊಳ್ಳುವೆ ಎಂದು ತಿಳಿಸಿದ ಎಂಬುದು ಇಲ್ಲಿಯ ಒಟ್ಟು ಭಾವ.

ಮಹಾಪ್ರತಾಪಿಯಾದ ಶಿಶುಪಾಲನು ಧನುಸ್ಸನ್ನು ತೆಗೆದುಕೊಂಡು ಅದನ್ನು ಕಟ್ಟುವ ಯತ್ನದಲ್ಲಿ ತೊಡಗಿದ. ಉದ್ದಿನಕಾಳಿನಷ್ಟು ಮಾತ್ರವೇ ಅಂತರ ಉಳಿದಿದ್ದಾಗ ಸೆಟೆದು ನಿಂತ ಆ ಧನುಸ್ಸಿನ ತುದಿ ಶಿಶುಪಾಲನಿಗೆ ಅಪ್ಪಳಿಸಿತು. ಅದಕ್ಕೆ ಅರ್ಜುನನ ಹೊರತು ಬೇರಾರಿಗೂ ಅದು ಅಸಾಧ್ಯವೆಂಬ ಶಿವನ ವರವೇ ಕಾರಣವಾಗಿತ್ತು. ವೃದ್ಧನಾಗಿದ್ದರೂ ಶಲ್ಯರಾಜ ತನ್ನ ಸಾಮರ್ಥ್ಯ-ವನ್ನು ತೋರಿಸಲೆಂದು ಅಲ್ಲಿಗೆ ತೆರಳಿ ಶಿಶುಪಾಲನಿಗಿಂತ ಹೆಚ್ಚು ಯಶಸ್ವಿಯಾದ ; ಹೆಸರು-ಕಾಳಿನಷ್ಟು ಅಂತರವಿರುವಾಗ, ಜಾರಿದ ಧನುಸ್ಸಿನ ತುದಿಯಿಂದ ಹೊಡೆತ ತಿಂದ. ಅದು ತನಗೆ ಆಗದ ಕಾರ್ಯ ಎಂಬುದನ್ನು ಅರಿತು ಶಲ್ಯ ಹಿಂದಿರುಗಿದ. ಇದರಿಂದ ಇತರ ರಾಜರೆಲ್ಲಾ ಮತ್ತಷ್ಟು ಖಿನ್ನರಾಗುವಂತಾಯಿತು. ಬಲವೀರ್ಯಗಳಿಂದ ಬೀಗುತ್ತಿದ್ದ ಜರಾಸಂಧ, ಅಸಡ್ಡೆ-ಯಿಂದಲೇ ಬಂದು ಧನುಸ್ಸನ್ನು ಕೈಗೆತ್ತಿಕೊಂಡು ಬಗ್ಗಿಸಿದ. ಸಾಸುವೆಕಾಳಿನಷ್ಟು ಅಂತರವಿರುವಾಗ ಜಾರಿದ ತುದಿ ಜೋರಾಗಿ ಅವನನ್ನು ಅಪ್ಪಳಿಸಿತು ; ಮೊಳಕಾಲುಗಳನ್ನು ಭದ್ರವಾಗಿ ಊರಿ ಹೇಗೋ ಉರುಳುವುದನ್ನು ತಪ್ಪಿಸಿಕೊಂಡ ; ಜರಾಸಂಧನಿಗಾದ ಆ ಪಾಡಿಗೂ ಶಿವನ ವರವೇ ಕಾರಣವಾಗಿತ್ತು. ಮೇಲೆದ್ದ ಜರಾಸಂಧ ರಾಜರಿಗೆ ತನ್ನ ಮುಖವನ್ನು ತೋರಿಸದೆ ತನ್ನ ದೇಶಕ್ಕೆ ಹೊರಟು ಹೋದ. ಅಲ್ಲಿಗೆ ರಾಜರ ಸರದಿಯೆಲ್ಲಾ ಮುಗಿದಂತೆಯೇ ಆಯಿತು. ಆಗ ದುರ್ಯೋಧನನಿಗೋಸ್ಕರ ಆ ಸಾಹಸಕ್ಕೆ ಕೈಹಾಕಬಯಸಿದ ಕರ್ಣನು ಧನುಸ್ಸಿನತ್ತ ಸಾಗಿದ. ಪರಶುರಾಮರ ಬಳಿ ಕಲಿತ ವಿದ್ಯೆಯ ಪ್ರಭಾವದಿಂದ ಕರ್ಣ ಉಳಿದೆಲ್ಲರಿಗಿಂತ ಹೆಚ್ಚಿನ ಸಾಧನೆಯನ್ನೇ ಮಾಡಿದ. ಆದರೆ ಒಂದು ಕೂದಲೆಳೆಯಷ್ಟು ಅಂತರವಿದ್ದಾಗ ಧನುಸ್ಸಿನ ಹೊಡೆತ ತಿಂದು ಅವನು ತನ್ನ ಸ್ಥಳಕ್ಕೆ ಮರಳಿದ.

## ಅರ್ಜುನನಿಂದ ಮತ್ಸ್ಯಯಂತ್ರಭೇದನ

ಕರ್ಣನೂ ಹಿಂದಿರುಗಿದ ಮೇಲೆ, ಬ್ರಾಹ್ಮಣರ ಸಭೆಯಲ್ಲಿ ಕುಳಿತಿದ್ದ ಸೂರ್ಯಚಂದ್ರರಂತೆ ಕಂಗೊಳಿಸುತ್ತಿದ್ದ ಭೀಮಾರ್ಜುನರು ಮೇಲೆದ್ದರು. ಅದನ್ನು ಕಂಡು ಭಯಗೊಂಡ ಬ್ರಾಹ್ಮಣರು ತಡೆಯುತ್ತಿದ್ದರೂ ಅವರು ಲೆಕ್ಕಿಸದೆ ಮುಂದೆ ಸಾಗಿದರು. ಕೆಲವು ಬ್ರಾಹ್ಮಣರು ಮಾತ್ರ ದೇವತೆಗಳಂತೆ ಕಂಗೊಳಿಸುವ ಇವರಿಗೆ ಈ ಕಾರ್ಯ ಅಸಾಧ್ಯವೇನಲ್ಲ ಎಂಬುದಾಗಿ ನುಡಿದರು. ಕೃಷ್ಣನ ಮುಖಕಮಲವನ್ನು ನೋಡಿ ಉತ್ತಮ ಪರಾಕ್ರಮಿಗಳಾದ ಅವರೀರ್ವರೂ ಬಿಲ್ಲಿನ ಬಳಿಗೆ ಬಂದರು. ಅಲ್ಲಿಗೆ ಬಂದ ಮೇಲೆ ಅರ್ಜುನನು ಪ್ರೀತಿಯ ಅಣ್ಣನಾದ ಭೀಮನ ಅಪ್ಪಣೆಯನ್ನು ಪಡೆದುಕೊಂಡು, ಕೃಷ್ಣನನ್ನು ಮನಸ್ಸಿನಲ್ಲಿಯೇ ನಮಸ್ಕರಿಸಿ ಯಾವ ಶ್ರಮವೂ ಇಲ್ಲದೇ ಧನುಸ್ಸನ್ನು ಬಾಗಿಸಿ ಕಟ್ಟಿ ಆ ಬಾಣಗಳಿಂದ ಮತ್ಸ್ಯವನ್ನು ಭೇದಿಸಿದ. ದ್ರುಪದಪುತ್ರಿಯು [೧]ಕಮಲಪುಷ್ಪಗಳ ಮಾಲೆಯನ್ನು ಅವನ ಕೊರಳಿಗೆ ಹಾಕಿದಳು. ಅವಳನ್ನು ತಮ್ಮ ಮಧ್ಯ-ದಲ್ಲಿರಿಸಿಕೊಂಡ ಭೀಮಾರ್ಜುನರು ಕೃಷ್ಣನಿಗೆ ನಮಸ್ಕರಿಸಿ ಹಿಂದಿರುಗಿದರು. ಈ ಘಟನೆ

೧. ಈ ಮಾಲೆಯು ಈ ಮುನ್ನವೇ ತಿಳಿಸಿರುವಂತೆ(ಪುಟ ೯) ಶಿವನು ಅಂಬೆಗೆ ನೀಡಿದ್ದ ಮಾಲೆ ; ಅದನ್ನು ಧರಿಸಿದವನು ಭೀಷ್ಮರನ್ನು ವಧಿಸುವನು ಎಂಬುದು ಅದಕ್ಕಿದ್ದ ವರ.

ತಿಳಿದಿರಲಿಲ್ಲ. ವಿದ್ಯೆಗಳೆಲ್ಲ ಇಂದ್ರಾವತಾರನಾದ ಅರ್ಜುನನಲ್ಲಿ ಅತ್ಯಂತ ಹೆಚ್ಚಿನ ಅಭ್ಯಾಸದಿಂದಾಗಿ ಪರಿಪಕ್ವವಾಗಿದ್ದವು. ಪ್ರತಿಯಾಗಿ ಗಂಧರ್ವ 'ಅದೃಶ್ಯವಿದ್ಯೆ'ಯನ್ನು ಉಪದೇಶಿಸಲು ಮುಂದಾದಾಗ, ಅರ್ಜುನ ಅದನ್ನು ಕಾಲಾಂತರದಲ್ಲಿ ಪಡೆದುಕೊಳ್ಳುವುದಾಗಿ ತಿಳಿಸಿದ. ತನ್ನ ವಿದ್ಯೆಯು ಅಧಿಕವಾದ್ದರಿಂದ, ಅದಕ್ಕೆ ಪ್ರತಿಯಾಗಿ ಅದೃಶ್ಯವಿದ್ಯೆಯನ್ನು ಪಡೆಯುವುದರಿಂದ ಅದಕ್ಕೆ ಅದರ ಸಾಮ್ಯವುಂಟಾಗುವುದನ್ನು ಬಯಸದ ಅರ್ಜುನ ಆಗಲೇ ಅದನ್ನು [೧]ವಿನಿಮಯದ ಮೂಲಕ ಸ್ವೀಕರಿಸಲು ನಿರಾಕರಿಸಿದ. ಅರ್ಜುನನೊಂದಿಗೆ ಬಹಳ ರೀತಿಯ ಸಲ್ಲಾಪಗಳಲ್ಲಿ ತೊಡಗಿದ ಚಿತ್ರರಥ ಧೌಮ್ಯಮಹರ್ಷಿಗಳನ್ನು ಪುರೋಹಿತರನ್ನಾಗಿ ಮಾಡಿಕೊಳ್ಳಲು ತಿಳಿಸಿದ. 'ನಿನಗೆ ದಿವ್ಯಾಶ್ವಗಳನ್ನು ಕೊಡುವೆನು' ಎಂದು ಅರ್ಜುನನಿಗೆ ಹೇಳಿ, ಆ ಚಿತ್ರರಥ ಆಕಾಶಕ್ಕೆ ಹಾರಿದ. ಪಾಂಡವರು ತಮ್ಮ ಪ್ರಯಾಣವನ್ನು ಮುಂದುವರೆಸಿದರು.

## ದ್ರೌಪದೀ ಸ್ವಯಂವರ

ಉತ್ತಮಜ್ಞಾನಿಯಾದ ಧೌಮ್ಯರನ್ನು ತಮ್ಮ ಪುರೋಹಿತರನ್ನಾಗಿ ಮಾಡಿಕೊಂಡು ಪಾಂಡವರು, ಬ್ರಾಹ್ಮಣವೇಷದಲ್ಲಿಯೇ ಪಾಂಚಾಲನಗರವನ್ನು ಪ್ರವೇಶಿಸಿದರು ; ಅಲ್ಲಿ ಅಲಂಕೃತರಾಗಿ ನೆರೆದಿದ್ದ ರಾಜರ ಗುಂಪನ್ನು ಕಂಡರು. ಸಭೆಯಲ್ಲಿ ನೆರೆದಿದ್ದ ರಾಜಮಂಡಲವನ್ನು ನೋಡಿ ತನ್ನ ತಂಗಿ ದ್ರೌಪದಿಯನ್ನು ಕರೆದುಕೊಂಡು ಬಂದ ಹೊಳೆಯುವ ದೇಹದ ಧೃಷ್ಟದ್ಯುಮ್ನ ಅವರ ಮಧ್ಯದಲ್ಲಿ ನಿಂತು, ಕುಲ, ವೀರ್ಯ, ಸಂಪತ್ತುಗಳಿಂದ ಕೂಡಿದ ಎಲ್ಲ ರಾಜರನ್ನು ಉದ್ದೇಶಿಸಿ, ಐದು ಬಾಣಗಳಿಂದ ಕೂಡಿದ ಬಿಲ್ಲನ್ನು ಸಭೆಯ ಮುಂದಿರಿಸಿ, ಮೇಘಗಂಭೀರ ಧ್ವನಿಯಿಂದ ನುಡಿದ – ''ಕ್ಷತ್ರಿಯವೀರರೇ ! ವೃಕ್ಷದ ಮೇಲಿರುವ ಮತ್ಸ್ಯದ ಪ್ರತಿಬಿಂಬವನ್ನು ನೀರಿನಲ್ಲಿ ನೋಡುತ್ತ, ಈ ಬಾಣಗಳಿಂದ ಯಾವನು ಅದನ್ನು ಹೊಡೆದು ಬೀಳಿಸುವನೋ ಅವನನ್ನು ದ್ರೌಪದಿಯು ವರಿಸುವಳು.'' ಧೃಷ್ಟದ್ಯುಮ್ನನ ಮಾತು ಮುಗಿಯುತ್ತಿದ್ದಂತೆಯೇ ಎಲ್ಲ ರಾಜಪುತ್ರರೂ ಹುರುಪಿನಿಂದ ಮೇಲೆದ್ದರು. ಏಳುವ ರಭಸಕ್ಕೆ ಅವರ ಕರ್ಣಕುಂಡಲಗಳು ತೂಗಾಡುತ್ತಿದ್ದವು. ಚೆನ್ನಾಗಿ ಅಲಂಕಾರ ಮಾಡಿಕೊಂಡಿದ್ದ ಅವರೆಲ್ಲ ತಮ್ಮ ಅಸ್ತ್ರಬಲವನ್ನು ತೋರಿಸುವ ಹುಮ್ಮಸ್ಸಿನಲ್ಲಿ ಮೇಲಾಟ ನಡೆಸಿದ್ದರು. ಧನುಸ್ಸನ್ನೊಮ್ಮೆ ಆಮೂಲಾಗ್ರವಾಗಿ ನೋಡಿಯೇ ಕೆಲವರು ''ಇದು ನನಗೆ ಆಗದ ಕಾರ್ಯ'' ಎಂದು ಹಿಂದಿರುಗಿದರು. ಮತ್ತೆ ಕೆಲವರು ಅದನ್ನು ಅಲುಗಾಡಿಸಿ ಅದು ತಮಗೆ ನೀಗದ್ದೆಂದು ತಿಳಿದು ಮರಳಿದರು.

---

೧. ಪರಸ್ಪರ ಸಮಾನಮೌಲ್ಯದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ವಿವೇಕ ; ಹಾಗಲ್ಲದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ಸಮಂಜಸವೆನಿಸದು. ಪ್ರಸ್ತುತ ಅರ್ಜುನನ ಆ ಅಪೂರ್ವ ಆಗ್ನೇಯಾಸ್ತ್ರದ ವಿದ್ಯೆಯು ಗಂಧರ್ವ ಪ್ರತಿಯಾಗಿ ನೀಡುವ ಅದೃಶ್ಯವಿದ್ಯೆಗಿಂತ ಮಿಗಿಲಾಗಿತ್ತು. ಆದ್ದರಿಂದಲೇ ಅರ್ಜುನ ಅದನ್ನು ವಿನಿಮಯ ಮಾಡಿಕೊಳ್ಳಲು ಬಯಸಲಿಲ್ಲ; ಆಗಲೇ ಆ ವಿದ್ಯೆ ಪಡೆದಿದ್ದಲ್ಲಿ ವಿನಿಮಯವೆನ್ನಿಸಿಕೊಳ್ಳುವ ಸಂಭವವಿರುತ್ತಿತ್ತು ; ಹಾಗಾಗದಿರಲಿ ಎಂದೇ ಅರ್ಜುನ ಅದನ್ನು ಮುಂದೆ ಕಾಲಬಂದಾಗ ಪಡೆದುಕೊಳ್ಳುವೆ ಎಂದು ತಿಳಿಸಿದ ಎಂಬುದು ಇಲ್ಲಿಯ ಒಟ್ಟು ಭಾವ.

ಮಹಾಪ್ರತಾಪಿಯಾದ ಶಿಶುಪಾಲನು ಧನುಸ್ಸನ್ನು ತೆಗೆದುಕೊಂಡು ಅದನ್ನು ಕಟ್ಟುವ ಯತ್ನದಲ್ಲಿ ತೊಡಗಿದ. ಉದ್ದಿನಕಾಳಿನಷ್ಟು ಮಾತ್ರವೇ ಅಂತರ ಉಳಿದಿದ್ದಾಗ ಸೆಟೆದು ನಿಂತ ಆ ಧನುಸ್ಸಿನ ತುದಿ ಶಿಶುಪಾಲನಿಗೆ ಅಪ್ಪಳಿಸಿತು. ಅದಕ್ಕೆ ಅರ್ಜುನನ ಹೊರತು ಬೇರಾರಿಗೂ ಅದು ಅಸಾಧ್ಯವೆಂಬ ಶಿವನ ವರವೇ ಕಾರಣವಾಗಿತ್ತು. ವೃದ್ಧನಾಗಿದ್ದರೂ ಶಲ್ಯರಾಜ ತನ್ನ ಸಾಮರ್ಥ್ಯ-ವನ್ನು ತೋರಿಸಲೆಂದು ಅಲ್ಲಿಗೆ ತೆರಳಿ ಶಿಶುಪಾಲನಿಗಿಂತ ಹೆಚ್ಚು ಯಶಸ್ವಿಯಾದ ; ಹೆಸರು-ಕಾಳಿನಷ್ಟು ಅಂತರವಿರುವಾಗ, ಜಾರಿದ ಧನುಸ್ಸಿನ ತುದಿಯಿಂದ ಹೊಡೆತ ತಿಂದ. ಅದು ತನಗೆ ಆಗದ ಕಾರ್ಯ ಎಂಬುದನ್ನು ಅರಿತು ಶಲ್ಯ ಹಿಂದಿರುಗಿದ. ಇದರಿಂದ ಇತರ ರಾಜರೆಲ್ಲಾ ಮತ್ತಷ್ಟು ಖಿನ್ನರಾಗುವಂತಾಯಿತು. ಬಲವೀರ್ಯಗಳಿಂದ ಬೀಗುತ್ತಿದ್ದ ಜರಾಸಂಧ, ಅಸಡ್ಡೆ-ಯಿಂದಲೇ ಬಂದು ಧನುಸ್ಸನ್ನು ಕೈಗೆತ್ತಿಕೊಂಡು ಬಗ್ಗಿಸಿದ. ಸಾಸುವೆಕಾಳಿನಷ್ಟು ಅಂತರವಿರುವಾಗ ಜಾರಿದ ತುದಿ ಜೋರಾಗಿ ಅವನನ್ನು ಅಪ್ಪಳಿಸಿತು ; ಮೊಳಕಾಲುಗಳನ್ನು ಭದ್ರವಾಗಿ ಊರಿ ಹೇಗೋ ಉರುಳುವುದನ್ನು ತಪ್ಪಿಸಿಕೊಂಡ ; ಜರಾಸಂಧನಿಗಾದ ಆ ಪಾಡಿಗೂ ಶಿವನ ವರವೇ ಕಾರಣವಾಗಿತ್ತು. ಮೇಲೆದ್ದ ಜರಾಸಂಧ ರಾಜರಿಗೆ ತನ್ನ ಮುಖವನ್ನು ತೋರಿಸದೆ ತನ್ನ ದೇಶಕ್ಕೆ ಹೊರಟು ಹೋದ. ಅಲ್ಲಿಗೆ ರಾಜರ ಸರದಿಯೆಲ್ಲಾ ಮುಗಿದಂತೆಯೇ ಆಯಿತು. ಆಗ ದುರ್ಯೋಧನನಿಗೋಸ್ಕರ ಆ ಸಾಹಸಕ್ಕೆ ಕೈಹಾಕಬಯಸಿದ ಕರ್ಣನು ಧನುಸ್ಸಿನತ್ತ ಸಾಗಿದ. ಪರಶುರಾಮರ ಬಳಿ ಕಲಿತ ವಿದ್ಯೆಯ ಪ್ರಭಾವದಿಂದ ಕರ್ಣ ಉಳಿದೆಲ್ಲರಿಗಿಂತ ಹೆಚ್ಚಿನ ಸಾಧನೆಯನ್ನೇ ಮಾಡಿದ. ಆದರೆ ಒಂದು ಕೂದಲೆಳೆಯಷ್ಟು ಅಂತರವಿದ್ದಾಗ ಧನುಸ್ಸಿನ ಹೊಡೆತ ತಿಂದು ಅವನು ತನ್ನ ಸ್ಥಳಕ್ಕೆ ಮರಳಿದ.

## ಅರ್ಜುನನಿಂದ ಮತ್ಸ್ಯಯಂತ್ರಭೇದನ

ಕರ್ಣನೂ ಹಿಂದಿರುಗಿದ ಮೇಲೆ, ಬ್ರಾಹ್ಮಣರ ಸಭೆಯಲ್ಲಿ ಕುಳಿತಿದ್ದ ಸೂರ್ಯಚಂದ್ರರಂತೆ ಕಂಗೊಳಿಸುತ್ತಿದ್ದ ಭೀಮಾರ್ಜುನರು ಮೇಲೆದ್ದರು. ಅದನ್ನು ಕಂಡು ಭಯಗೊಂಡ ಬ್ರಾಹ್ಮಣರು ತಡೆಯುತ್ತಿದ್ದರೂ ಅವರು ಲೆಕ್ಕಿಸದೆ ಮುಂದೆ ಸಾಗಿದರು. ಕೆಲವು ಬ್ರಾಹ್ಮಣರು ಮಾತ್ರ ದೇವತೆಗಳಂತೆ ಕಂಗೊಳಿಸುವ ಇವರಿಗೆ ಈ ಕಾರ್ಯ ಅಸಾಧ್ಯವೇನಲ್ಲ ಎಂಬುದಾಗಿ ನುಡಿದರು. ಕೃಷ್ಣನ ಮುಖಕಮಲವನ್ನು ನೋಡಿ ಉತ್ತಮ ಪರಾಕ್ರಮಿಗಳಾದ ಅವರೀರ್ವರೂ ಬಿಲ್ಲಿನ ಬಳಿಗೆ ಬಂದರು. ಅಲ್ಲಿಗೆ ಬಂದ ಮೇಲೆ ಅರ್ಜುನನು ಪ್ರೀತಿಯ ಅಣ್ಣನಾದ ಭೀಮನ ಅಪ್ಪಣೆಯನ್ನು ಪಡೆದುಕೊಂಡು, ಕೃಷ್ಣನನ್ನು ಮನಸ್ಸಿನಲ್ಲಿಯೇ ನಮಸ್ಕರಿಸಿ ಯಾವ ಶ್ರಮವೂ ಇಲ್ಲದೇ ಧನುಸ್ಸನ್ನು ಬಾಗಿಸಿ ಕಟ್ಟಿ ಆ ಬಾಣಗಳಿಂದ ಮತ್ಸ್ಯವನ್ನು ಭೇದಿಸಿದ. ದ್ರುಪದಪುತ್ರಿಯು [೧]ಕಮಲಪುಷ್ಪಗಳ ಮಾಲೆಯನ್ನು ಅವನ ಕೊರಳಿಗೆ ಹಾಕಿದಳು. ಅವಳನ್ನು ತಮ್ಮ ಮಧ್ಯ-ದಲ್ಲಿರಿಸಿಕೊಂಡ ಭೀಮಾರ್ಜುನರು ಕೃಷ್ಣನಿಗೆ ನಮಸ್ಕರಿಸಿ ಹಿಂದಿರುಗಿದರು. ಈ ಘಟನೆ

---

೧. ಈ ಮಾಲೆಯು ಈ ಮುನ್ನವೇ ತಿಳಿಸಿರುವಂತೆ(ಪುಟ ೯) ಶಿವನು ಅಂಬೆಗೆ ನೀಡಿದ್ದ ಮಾಲೆ ; ಅದನ್ನು ಧರಿಸಿದವನು ಭೀಷ್ಮರನ್ನು ವಧಿಸುವನು ಎಂಬುದು ಅದಕ್ಕಿದ್ದ ವರ.

ರಾಜರನ್ನೆಲ್ಲ ದಿಗ್ಭ್ರಾಂತರನ್ನಾಗಿಸಿತು. ಅವರೆಲ್ಲ ಕೋಪದಿಂದ ಉರಿಯುತ್ತ ಅವರಿಬ್ಬರ ಮೇಲೆರಗಿದರು. ''ನೋಡಲು ಮಾತ್ರವೇ ನಾವು ಸ್ವಯಂವರಕ್ಕೆ ಹೋಗುತ್ತಿರುವುದು. ಕನ್ಯೆ-ಯನ್ನು ಬಯಸಿ ಅಲ್ಲ. ಯಾದವರಾರೂ ಬಿಲ್ಲನ್ನು ಮುಟ್ಟಕೂಡದು'' ಎಂಬ ಕೃಷ್ಣನ ಅಪ್ಪಣೆ-ಯಿಂದಾಗಿ, ಯಾದವರಾರೂ ಆ ಸ್ಪರ್ಧೆಯಲ್ಲಿ ಪಾಲ್ಗೊಳ್ಳಲು ಬಯಸಿರಲಿಲ್ಲ.

## ಭೀಮಾರ್ಜುನರ ಪರಾಕ್ರಮ

ತನ್ನ ಮೇಲೆ ನುಗ್ಗಿ ಬಂದ ರಾಜರ ಗುಂಪನ್ನು ಕಂಡು ಭೀಮಸೇನ ಬಹುಯೋಜನ ಎತ್ತರದ ವೃಕ್ಷವೊಂದನ್ನು ಕಿತ್ತಿ, ಅವರನ್ನೆಲ್ಲ ಎದುರಿಸಿ ನಿಂತ. ಭೀಮನ ಆ ಕಾರ್ಯವನ್ನು ಕಂಡ ರಾಜರೆಲ್ಲ ದಿಕ್ಕೆಟ್ಟು ಓಡಲಾರಂಭಿಸಿದರು. ''ಇವನೇ ಭೀಮ, ಅಲ್ಲಿರುವುದು ಅರ್ಜುನ, ಇವರೆಲ್ಲ ಇತರ ಪಾಂಡವರು'' ಎಂಬುದಾಗಿ ಕೃಷ್ಣ ಆ ಸಮಯದಲ್ಲಿ ಬಲರಾಮನಿಗೆ ತೋರಿಸಿದ. ಬಲರಾಮನಿಗೆ ಆ ಮಾತು ತುಂಬಾ ಸಂತೋಷವನ್ನುಂಟುಮಾಡಿತು. ಸಾತ್ಯಕಿಯಂತೂ ಹರ್ಷೋದ್ರಿಕ್ತನಾಗಿ ಖಡ್ಗವನ್ನು ಒರೆಯಿಂದ ಹೊರಗೆಳೆದು ಕುಣಿದಾಡಿದ. ಈ ವಿಷಯ ಉಳಿದೆಲ್ಲ ಯಾದವರಿಗೂ ತುಂಬಾ ತೃಪ್ತಿಕೊಟ್ಟಿತು. ಭೀಮನಿಗೆ ಹೆದರಿ ಓಡಿದ ದುರ್ಯೋಧನಾದಿ ಸಕಲರಾಜರನ್ನು ಕಂಡ ಕರ್ಣ ಅರ್ಜುನನ ಮೇಲೆ ನುಗ್ಗಿದ. ಶಲ್ಯರಾಜ ಭೀಮನನ್ನು ಎದುರಿಸಿದ. ಬ್ರಾಹ್ಮಣರೆಲ್ಲ ಕೋಪದಿಂದ ದಂಡ, ವಸ್ತ್ರ, ದರ್ಭೆ, ಕೃಷ್ಣಾಜಿನಗಳನ್ನು ಎಸೆಯಲಾರಂಭಿಸಿದರು. ''ಕ್ಷತ್ರಿಯರಿಂದ ಮಹಾ ಅನರ್ಥ ಉಂಟಾಗದಿರಲಿ'' ಎಂದು ದ್ರುಪದ ಕೃಷ್ಣನನ್ನು , ಬ್ರಾಹ್ಮಣರನ್ನು ಪ್ರಾರ್ಥಿಸತೊಡಗಿದ. ಶಲ್ಯನನ್ನು ಕಾಣುತ್ತಲೇ ಭೀಮಸೇನ ವೃಕ್ಷವನ್ನು ಕೆಳಗಿರಿಸಿ, ಅವನನ್ನು ಹಿಡಿದು, ಎರಡೂ ಕೈಗಳಿಂದ ರಭಸದಿಂದ ಮೇಲೆತ್ತಿ ಆಕಾಶಕ್ಕೆ ತೂರಿದ ; ಬಂಧುವೆಂಬುದನ್ನು ಗಮನಿಸಿ ಬೀಳುತ್ತಿದ್ದ ಅವನನ್ನು ಹಿಡಿದು ಮೆಲ್ಲನೆ ಕೆಳಗಿಳಿಸಿದ. ಭೀಮನ ಸಾಮರ್ಥ್ಯವನ್ನು ಅರ್ಥಮಾಡಿಕೊಂಡ ಶಲ್ಯ ತನ್ನ ರಾಜಧಾನಿಗೆ ಹಿಂದಿರುಗಿದ. ಪಾರ್ಥನೂ ಸಹ ಆ ಧನುಸ್ಸಿನಿಂದ ಕರ್ಣನನ್ನು ಎದುರಿಸಿದ. ಬಹಳ ಹೊತ್ತು ಹೋರಾಟ ನಡೆಸಿ ವ್ಯಥೆಪಟ್ಟ ಕರ್ಣನು ಅರ್ಜುನನನ್ನು ಪ್ರಶ್ನಿಸಿದ – ''ಅಯ್ಯಾ ! ನೀನೇನು ಅರ್ಜುನನೋ, ಇಂದ್ರನೋ ಅಥವಾ ವಿಪ್ರರ ತಪಃಶಕ್ತಿಯೇ ಮೂರ್ತಿಮತ್ತಾಗಿ ಬಂದವನೋ ! ಬೇರಾರೂ ನನ್ನ ಮುಂದೆ ಹೀಗೆ ನಿಲ್ಲಲಾರರು.'' ''ನಾನು ಯಾರಾದರೇನಂತೆ ! ಶಕ್ತಿ ಇದ್ದರೆ ಬಾಣಗಳನ್ನು ಬಿಡು. ಇಲ್ಲವಾದರೆ ಹೊರಟು ಹೋಗು'' ಎಂದು ಅರ್ಜುನ ಉತ್ತರಿಸಲು, ''ನಾನು ವಿಪ್ರರೊಡನೆ ಕಾದಲಾರೆ'' ಎಂದು ನುಡಿದು ಕರ್ಣ ದುರ್ಯೋಧನಾದಿಗಳ ಜೊತೆ ಹಸ್ತಿನಾಪುರವನ್ನು ಸೇರಿಕೊಂಡ.

## ದ್ರುಪದನ ಪರೀಕ್ಷೆ

ದ್ರೌಪದಿಯನ್ನು ಕರೆದುಕೊಂಡು ಅರ್ಜುನನೊಂದಿಗೆ ಭೀಮ ಹೊರಟ. ಮುಂಭಾಗದಲ್ಲಿ ನಕುಲ ಸಹದೇವರೊಂದಿಗೆ ಧರ್ಮರಾಜ, ಹಿಂಭಾಗದಲ್ಲಿ ಭೀಮಾರ್ಜುನರು – ಹೀಗೆ ಅವರೆಲ್ಲ ತಾವು ಇಳಿದುಕೊಂಡಿದ್ದ ಕುಂಬಾರನ ಮನೆಯನ್ನು ಸೇರಿದರು. ''ಭಿಕ್ಷೆ'' ಎಂಬ ಅವರ

ಮಾತನ್ನು ಕೇಳಿದ ಕುಂತಿಯು ''ನೀವೆಲ್ಲರೂ ಒಟ್ಟಾಗಿ ಅನುಭವಿಸಿ'' ಎಂದು ನುಡಿದು ಬಿಟ್ಟಳು. ತಪ್ಪಿಯೂ ಸುಳ್ಳಾಡದ ಅವಳ ಬಾಯಿಂದ ಬಂದ ಇಂತಹ ಮಾತು ಅವರನ್ನೆಲ್ಲ ಚಿಂತೆಗೀಡುಮಾಡಿತು. ಆ ವೇಳೆಗೆ ಅಲ್ಲಿಗೆ ಸೌಹಾರ್ದದಿಂದ ಕೃಷ್ಣ ಆಗಮಿಸಿದ. ಅವರೊಂದಿಗೆ ಮಾತನಾಡಿದ ಅವನು ಸಕಲಯಾದವರೊಂದಿಗೆ ತನ್ನ ಪಟ್ಟಣಕ್ಕೆ ತೆರಳಿದ.

ಅವರ ವಿಷಯವನ್ನು ತಿಳಿದು ಬರಲೆಂದು ಆ ರಾತ್ರಿ ದ್ರುಪದ ತನ್ನ ಮಗ ಧೃಷ್ಟದ್ಯುಮ್ನನನ್ನು ಕಳುಹಿಸಿಕೊಟ್ಟ. ಅವನು ಅಡಗಿಕೊಂಡೇ ಅವರ ಚಟುವಟಿಕೆಗಳನ್ನು ಗಮನಿಸಿದ. ಅವರೆಲ್ಲ ಭಿಕ್ಷಾನ್ನವನ್ನು ಉಣ್ಣುವುದನ್ನು, ತನ್ನ ತಂಗಿ ಅಲ್ಲಿ ತೃಪ್ತಿಯಿಂದಿರುವುದನ್ನು, ಮೇಘಗಂಭೀರ-ಸ್ವರದಲ್ಲಿ ಯುದ್ಧವಾರ್ತೆಯನ್ನು ಅವರು ಮಾತನಾಡಿಕೊಳ್ಳುತ್ತಿದ್ದುದನ್ನು ಗಮನಿಸಿದ ಅವನು ''ಇವರೆಲ್ಲ ಕ್ಷತ್ರಿಯಶ್ರೇಷ್ಠರೇ ಇರಬೇಕು'' ಎಂಬುದಾಗಿ ತೀರ್ಮಾನಿಸಿಕೊಂಡ. ಬೆಳಗಿನಜಾವ ದ್ರುಪದನ ಪುರೋಹಿತನು ಅಲ್ಲಿಗೆ ಬರಲು, ಜ್ಞಾನಿಯಾದ ಭೀಮಸೇನ ಅವನನ್ನು ಶಾಸ್ತ್ರೋಕ್ತ-ವಾಗಿ ಬರಮಾಡಿಕೊಂಡ. ತಾಯಿ ಕುಂತಿಯೊಂದಿಗೆ ಅವರನ್ನೆಲ್ಲ ಕರೆದುಕೊಂಡು ಅವನು ರಾಜನ ಮನೆಗೆ ಹೊರಟ. ಬಂದ ಅವರನ್ನು, ತನ್ನ ಮಗಳನ್ನು ಆದರಿಸಿ, ದ್ರುಪದರಾಜ, ಬ್ರಾಹ್ಮಣರೇ ಮೊದಲಾದವರಿಗೆ ಉಚಿತವಾದ ಪದಾರ್ಥಗಳಿಂದ ತುಂಬಿದ್ದ ನಾಲ್ಕು ಮನೆಗಳನ್ನು ತೋರಿಸಿ, ಅವರ ಆಯ್ಕೆಗೆ ಬಿಟ್ಟ. ಆಯುಧಾದಿಗಳಿಂದ ತುಂಬಿದ ಕ್ಷತ್ರಿಯೋಚಿತವಾದ ಮನೆಯನ್ನೇ ಅವರು ಆಯ್ದುಕೊಂಡರು.

ಅವರ ನಡೆ, ನುಡಿ, ವೀರ್ಯ, ಶೌರ್ಯ, ಪ್ರಾಗಲ್ಭ್ಯ ಮೊದಲಾದ ಗುಣಗಳಿಂದಾಗಿ ಅವರು ರಾಜಪುತ್ರರೆಂಬುದನ್ನು ದ್ರುಪದನು ಖಚಿತಪಡಿಸಿಕೊಂಡ. ಧರ್ಮರಾಜನ ಬಳಿಗೆ ಹೋಗಿ ''ನರಶ್ರೇಷ್ಠ ! ನಿಜವಾಗಿ ಹೇಳು, ನೀನು ಯಾರು?'' ಎಂದು ಕೇಳಿದ. ಮಂದ-ಹಾಸದಿಂದ ಧರ್ಮರಾಜ ಉತ್ತರಿಸಿದ – ''ರಾಜ ! ಅದೆಲ್ಲ ಈಗೇಕೆ ! ವರ್ಣದ ವಿಷಯದಲ್ಲಿ ನೀನೇನೂ ಆಗ ಕರಾರು ಹಾಕಿರಲಿಲ್ಲವಷ್ಟೆ? ನಿನ್ನ ಮಗಳಿಗೆ ಲಕ್ಷ್ಯವೇಧದ ಪಣವನ್ನು ನೀನಾಗ ರಾಜಸಭೆಯಲ್ಲಿ ಘೋಷಿಸಿದೆ ; ಅದನ್ನು ನನ್ನ ತಮ್ಮ ಪೂರೈಸಿದ ; ಅಲ್ಲವೇ?'' ಕುಂತಿಯೂ ಅದಕ್ಕೆ ದನಿಗೂಡಿಸಿದ್ದನ್ನು ಕಂಡ ದ್ರುಪದ ಮತ್ತೊಮ್ಮೆ ನಿಜಾಂಶ ತಿಳಿಸಲು ಪ್ರಾರ್ಥಿಸಿದ. ಆಗ ಅವರಿಬ್ಬರೂ ನಿಜಸಂಗತಿಯನ್ನು ವಿವರವಾಗಿ ತಿಳಿಸಲು, ಸಂತೋಷದಿಂದ ಉಬ್ಬಿಹೋದ ದ್ರುಪದ ನುಡಿದ – ''ನಾನಿಂದು ಕೃತಾರ್ಥನಾದೆ ; ಈ ಪ್ರಯತ್ನವನ್ನೆಲ್ಲ ನಾನು ಮಾಡಿದ್ದು ಅರ್ಜುನನಿಗಾಗಿ ! ಆದರೆ ನೀನೇ ಆಗಲಿ, ಅರ್ಜುನನೇ ಆಗಲಿ, ಅಥವಾ ನಿಮ್ಮಲ್ಲಿ ಬೇರೆ ಯಾರೇ ಆಗಲಿ ನನ್ನ ಮಗಳ ಕೈಹಿಡಿಯಬಹುದು.'' ಧರ್ಮರಾಜ ನುಡಿದ – ''ನಾವೆಲ್ಲರು ನಿನ್ನ ಮಗಳ ಕೈಹಿಡಿಯಬೇಕೆಂಬುದೇ ನನ್ನ ಮನಸ್ಸಿನ ವಿಚಾರ. ಇದಕ್ಕೆ ಆಧಾರ ನನಗೆ ತಿಳಿಯದಾದರೂ, ಎಂದೂ ಧರ್ಮ ತಪ್ಪದ ನನ್ನ ಮನಸ್ಸೇ ಇದಕ್ಕೆ ಪ್ರಮಾಣ.'' ಧರ್ಮಜನ ಈ ಮಾತನ್ನು ದ್ರುಪದ ಒಪ್ಪಲಿಲ್ಲ. ಅವನ ಮಗನಿಗೂ ಅದು ರುಚಿಸಲಿಲ್ಲ. ಆ ಸಮಯಕ್ಕೆ ಅಲ್ಲಿಗೆ ಭಗವಾನ್ ಶ್ರೀವೇದವ್ಯಾಸರು ಆಗಮಿಸಿದರು.

## ವೇದವ್ಯಾಸರ ಅನುಗ್ರಹ

ವೇದವ್ಯಾಸರನ್ನು ಕಂಡ ಎಲ್ಲರೂ ಅವರನ್ನು ನಮಸ್ಕಾರಾದಿಗಳಿಂದ ಸತ್ಕರಿಸಿದರು. ಆಸನದಲ್ಲಿ ಮಂಡಿಸಿದ ಅವರ ಅಪ್ಪಣೆಯಂತೆ ಅವರ ಬಳಿಯಲ್ಲಿಯೇ ಕುಳಿತುಕೊಂಡರು. ವೇದವ್ಯಾಸರು ದ್ರುಪದರಾಜನಿಗೆ ಆದೇಶವಿತ್ತರು – ''ಇವರೆಲ್ಲ ಹಿಂದೆ ಇಂದ್ರರಾಗಿದ್ದ ಧರ್ಮ, ವಾಯು, ಇಂದ್ರ ಹಾಗೂ ಅಶ್ವಿನೀದೇವತೆಗಳು. ಇವರೆಲ್ಲರಿಗೂ ನಿನ್ನ ಈ ಮಗಳನ್ನು ಧಾರೆ ಎರೆದು ಕೊಡು. ಇವರೆಲ್ಲರ ಪತ್ನಿಯರು ಒಂದೇ ದೇಹದಲ್ಲಿ ಸೇರಿ ನಿನ್ನ ಮಗಳಾಗಿ ಜನಿಸಿರುವರು. ಆದ್ದರಿಂದ ಇದರಲ್ಲಿ ಯಾವ ದೋಷವೂ ಇಲ್ಲ'' ವ್ಯಾಸರ ಈ ಮಾತಿಗೂ ದ್ರುಪದನು ಒಪ್ಪುವ ಲಕ್ಷಣಗಳು ಕಾಣದಿರುವುದನ್ನು ಕಂಡು, ವ್ಯಾಸರು ಮತ್ತೆ ಮುಂದುವರೆಸಿದರು – ''ಇಗೋ ನಿನಗೆ ದಿವ್ಯದೃಷ್ಟಿಯನ್ನಿತ್ತಿರುವೆನು. ಪಾಂಡುತನಯರೆಲ್ಲ ದೇವತೆಗಳೆಂಬುದನ್ನೂ , ನಿನ್ನ ಮಗಳಲ್ಲಿ ಅವರೆಲ್ಲರ ಪತ್ನಿಯರು ಇರುವುದನ್ನು ನೀನೇ ಕಣ್ಣಾರೆ ನೋಡು.'' ವ್ಯಾಸರ ಮಾತು ಮುಗಿಯುತ್ತಿದ್ದಂತೆಯೇ, ಅವರಿಂದ ದಿವ್ಯದೃಷ್ಟಿ ಪಡೆದ ದ್ರುಪದರಾಜ, ವ್ಯಾಸರ ಅನುಗ್ರಹದಿಂದ, ಅವರು ತಿಳಿಸಿದಂತೆಯೇ ಪಾಂಡವರೆಲ್ಲ ದೇವತೆಗಳೆಂಬುದನ್ನು , ತನ್ನ ಮಗಳಲ್ಲಿ ಅವರೆಲ್ಲರ ಪತ್ನಿಯರು ಪ್ರತ್ಯೇಕವಾಗಿ ಇರುವುದನ್ನು ಕಂಡು ಆಶ್ಚರ್ಯದಿಂದ ಪುಲಕಿತನಾದ. ವ್ಯಾಸರ ಮಾತನ್ನು ಆ ಮೊದಲು ನಂಬದಿದ್ದ ಅವನು ತನ್ನ ಅಪರಾಧಕ್ಕೆ ಬಹಳವಾಗಿ ಅಂಜಿದ ; ಅವರ ಚರಣಾರವಿಂದಗಳ ಮೇಲೆ ತಲೆಯಿಟ್ಟು ತನ್ನ ತಪ್ಪನ್ನು ಮನ್ನಿಸಲು ಬೇಡಿಕೊಂಡ. ಕರುಣಾಮಯರಾದ ವ್ಯಾಸರು 'ಆಗಲಿ' ಎಂದರು. ದ್ರುಪದನು ನೆರವೇರಿಸಿದ ಕನ್ಯಾದಾನಕಾರ್ಯವನ್ನು ಧೌಮ್ಯರೊಂದಿಗೆ ಕೂಡಿ ಸ್ವಯಂ ವೇದವ್ಯಾಸರೇ ನಡೆಸಿಕೊಟ್ಟರು. ಅದೆಲ್ಲ ಪಾಂಚಾಲವಾಸಿಗಳಿಗೆ ತುಂಬಾ ಹಿರಿಯ ಮಹೋತ್ಸವ-ವಾಯಿತು ; ತನ್ನ ಮಕ್ಕಳೊಂದಿಗೂ, ಪಟ್ಟಣಿಗರೊಂದಿಗೂ , ದೇಶದವರೊಂದಿಗೂ ಕೂಡಿ ದ್ರುಪದನು ಆನಂದಿಸಿದ ; ತನ್ನ ಮಗಳಾದ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿದ ಜನಕರಾಜನ ಧನ್ಯತೆಯನ್ನು ದ್ರುಪದನ ಧನ್ಯತೆ ನೆನಪಿಸುತ್ತಿತ್ತು.

## ದ್ರೌಪದೀ ಕಲ್ಯಾಣ

ಪಾಂಡವರು ವಿವಾಹ ಮಾಡಿಕೊಂಡ ವಾರ್ತೆಯನ್ನು ಕೇಳುತ್ತಿದ್ದಂತೆಯೇ ಸಂತೋಷಗೊಂಡ ಕೃಷ್ಣ , ಬಲರಾಮ ಹಾಗೂ ಯಾದವರೊಂದಿಗೆ ಅಪಾರ ಪಾರಿತೋಷಿಕಗಳೊಂದಿಗೆ ಅಲ್ಲಿಗೆ ಆಗಮಿಸಿ, ಪಾಂಡವರನ್ನು , ಕುಂತಿಯನ್ನು ಅಭಿನಂದಿಸಿದ. ಕೃಷ್ಣನನ್ನು ಕಂಡ ಪಾಂಡವರ ಹರ್ಷಕ್ಕಂತೂ ಮೇರೆಯೇ ಇರಲಿಲ್ಲ. ದ್ರೌಪದಿಗೆ ಸಂಸಾರಕ್ಕೆ ಉಚಿತವಾದ ಎಲ್ಲ ಪಾತ್ರೆಗಳನ್ನು ಕಾಣಿಕೆಯಾಗಿತ್ತ ಕೃಷ್ಣ ಪಾಂಡವರಿಗೂ ಅನೇಕ ರೀತಿಯ ರತ್ನಾಭರಣಗಳನ್ನು ನೀಡಿ ಹರಸಿದ ; ಕುಂತಿಗೂ ಉಚಿತವಾದ ಉಡುಗೊರೆಯನ್ನು ನೀಡಿದ. ವ್ಯಾಸರೂಪಿಯಾದ ಶ್ರೀಹರಿಯ ಹರಕೆಯೂ ಅವರೆಲ್ಲರಿಗೆ ಲಭಿಸಿತು. ದ್ರುಪದನೂ ಕೂಡ ಹೇರಳವಾಗಿ ಭೂಷಣಗಳನ್ನು, ರಥ, ಕುದುರೆ, ಆನೆಗಳನ್ನು, ದಾಸದಾಸಿಯರನ್ನು ಅಪಾರಸಂಖ್ಯೆಯಲ್ಲಿ ಕಾಣಿಕೆಯಾಗಿ ಒಪ್ಪಿಸಿದ. ಅನೇಕ ತಿಂಗಳುಗಳ ಕಾಲ ಬಲರಾಮನೊಡನೆ ಪಾಂಡವರೊಂದಿಗೆ ವಾಸಿಸಿದ ಕೃಷ್ಣ ಮತ್ತೆ ದ್ವಾರಕೆಗೆ

ಮರಳಿದ. ವ್ಯಾಸರೂ ಅಂತರ್ಧಾನರಾದರು. ಹೀಗೆ ಅವರು ಅಲ್ಲಿ ನೆಲೆಸಿ ಒಂದು ವರ್ಷ ಕಳೆಯಿತು.

## ಕೌರವರ ಪರಾಭವ

ಆಗೊಮ್ಮೆ ದ್ರುಪದರಾಜನನ್ನು ಸಂಹರಿಸುವ ಹವಣಿಕೆಯಿಂದ ದುರ್ಯೋಧನನು ಶಕುನಿ, ಕರ್ಣ, ಜಯದ್ರಥ, ಭೂರಿಶ್ರವಸ್ ಮೊದಲಾದವರೊಂದಿಗೆ ಆನೆ ಕುದುರೆಗಳಿಂದ ತುಂಬಿದ್ದ ಅಪಾರ ಸೈನ್ಯವನ್ನು ತೆಗೆದುಕೊಂಡು ಪಾಂಚಾಲನಗರವನ್ನು ಮುತ್ತಿದ. ತನ್ನ ಪಟ್ಟಣ ಧಾಳಿಗೆ ತುತ್ತಾದುದನ್ನು ಕಂಡು ದ್ರುಪದ ತನ್ನ ಮಕ್ಕಳು ಹಾಗೂ ಸೇನೆಯೊಂದಿಗೆ ತಾನೂ ಯುದ್ಧಕ್ಕೆ ಸಿದ್ಧನಾದ. ಆಗ ನಡೆದ ಘೋರ ಕದನದಲ್ಲಿ ದ್ರುಪದರಾಜನ ಚಿತ್ರ ಹಾಗೂ ಚಿತ್ರಕೇತು ಎಂಬ ಇಬ್ಬರು ಮಕ್ಕಳು ಮಡಿದರು. ದ್ರುಪದನ ಸೈನ್ಯ ಕಂಗೆಟ್ಟು ಓಡತೊಡಗಿತು. ಇದನ್ನೆಲ್ಲ ಕಂಡ ಪಾಂಡವರು ರಥವನ್ನು ಏರಿ, ಆಯುಧಧಾರಿಗಳಾಗಿ ದುರ್ಯೋಧನಾದಿಗಳನ್ನು ಎದುರಿಸಿದರು. ಆಗ ನಡೆದ ಯುದ್ಧದಲ್ಲಿ ಭೂರಿಶ್ರವಸ್ ಹಾಗೂ ಕರ್ಣ ಇಬ್ಬರೂ ಸೇರಿಕೊಂಡು ಅರ್ಜುನನ ರಥವನ್ನು ನಾಶಮಾಡಿದರು. ಇದನ್ನು ಗಮನಿಸಿದ ಭೀಮಸೇನ ಪರ್ವತಪ್ರಾಯವಾದ ಮರವೊಂದನ್ನು ಕಿತ್ತಿ, ಮೇಲೆತ್ತಿದ. ಅದನ್ನು ಎತ್ತಿಕೊಂಡು ತಮ್ಮತ್ತ ಭೀಮ ನುಗ್ಗುತ್ತಿರುವುದನ್ನು ಕಂಡು, ಭೀತರಾದ ದುರ್ಯೋಧನ, ಕರ್ಣ, ಭೂರಿಶ್ರವಸ್, ಶಕುನಿ, ಜಯದ್ರಥ ಮೊದಲಾದ ಎಲ್ಲರೂ ಪಲಾಯನ ಮಾಡಿ ತಮ್ಮ ಪಟ್ಟಣವನ್ನು ಸೇರಿಕೊಂಡರು.

ಇದನ್ನೆಲ್ಲ ತಿಳಿದಿದ್ದ ವಿದುರ, ಧೃತರಾಷ್ಟ್ರನ ಬಳಿ ಮೆಲ್ಲನೆ ಉಸುರಿದ – ''ರಾಜ ! ನಿನ್ನ ಮಕ್ಕಳು ಅಭ್ಯುದಯವನ್ನು ಹೊಂದುತ್ತಿರುವರು...'' ; ವಿದುರನ ಆ ಮಾತನ್ನು, ತನ್ನ ಮಕ್ಕಳಾದ ದುರ್ಯೋಧನಾದಿಗಳೇ ದ್ರೌಪದಿಯನ್ನು ಪಡೆದು ಬಂದಿರುವರೆಂದು ತಪ್ಪಾಗಿ ಅರ್ಥಮಾಡಿ-ಕೊಂಡ ಧೃತರಾಷ್ಟ್ರ ಆನಂದದಿಂದ ವಿದುರನಿಗೆ ವಸ್ತ್ರಭೂಷಣಗಳನ್ನು ಕಾಣಿಕೆಯಾಗಿತ್ತ. ''ಅವರು ಪಾಂಡವರು'' ಎಂಬುದಾಗಿ ತನ್ನ ಮಾತನ್ನು ಪೂರ್ಣಗೊಳಿಸಿದ ವಿದುರನ ಮಾತು ಕಳವಳ-ವನ್ನುಂಟುಮಾಡಿದರೂ ಅದನ್ನು ತೋರಗೊಡದೆ ಧೃತರಾಷ್ಟ್ರ ''ಹಾಗಿದ್ದರೆ ಇನ್ನೂ ಸಂತೋಷ ! ಪಾಂಡವರು ಆಗ ಮೃತರಾಗಲಿಲ್ಲವೆ ! ಅವರ ಎಲ್ಲ ವಿಷಯಗಳನ್ನು ವಿವರವಾಗಿ ತಿಳಿಸು'' ಎಂದು ಕೇಳಿಕೊಂಡ. ಹಿಡಿಂಬವಧೆ, ಬಕವಧೆ ಮೊದಲಾದ ಎಲ್ಲ ವಿವರಗಳನ್ನೂ, ಅರ್ಜುನ ಮತ್ಸ್ಯಯಂತ್ರ ಭೇದಿಸಿದ್ದನ್ನೂ ವಿದುರ ವಿವರವಾಗಿ ವರ್ಣಿಸಿದ. ಇದನ್ನೆಲ್ಲ ಕೇಳಿದ ಭೀಷ್ಮ ಮೊದಲಾದ ಇತರರಿಗೂ ಅಪಾರ ಆನಂದವಾಯಿತು. ಹೀಗೆ ಮತ್ತೊಂದು ವರ್ಷ ಕಳೆಯಿತು.

## ಹಸ್ತಿನಾಪುರಕ್ಕೆ ಪಾಂಡವರು

ಕೃಷ್ಣ ಬಂದು ಪಾಂಡವರಿಗೆ ಹೇರಳ ರತ್ನಾಭರಣಗಳನ್ನಿತ್ತು ಹೋದ ವಾರ್ತೆಯನ್ನು ಕೇಳಿಯಂತೂ, ದುರ್ಯೋಧನಾದಿಗಳ ಮನಸ್ಸು ಕುದಿದುಹೋಯಿತು. ಕರ್ಣ ಮೊದಲಾ-ದವರೊಂದಿಗೆ ಅವರೆಲ್ಲ ಗುಪ್ತನೆಲೆಯನ್ನು ಸೇರಿ, ಮತ್ತೆ ಪಾಂಡವರ ಮೇಲೆ ಯುದ್ಧಕ್ಕೆ ಅಣಿಯಾದರು. ಇದನ್ನೆಲ್ಲ ತಿಳಿದ ವಿದುರ, ಧೃತರಾಷ್ಟ್ರ ಹಾಗೂ ಭೀಷ್ಮಾದಿ ಹಿರಿಯರ ಮುಂದೆ

ದೃಢವಾಗಿ ಹೇಳಿದ - ''ಈ ಪಾಪಿಷ್ಠರೆಲ್ಲ ಪಾಂಡವರ ಮೇಲೆ ಯುದ್ಧಕ್ಕೆ ಹೊರಟು ಪ್ರಾಣ ಕಳೆದುಕೊಳ್ಳುತ್ತಿರುವರು. ಭೀಮಾರ್ಜುನರನ್ನು ಎದುರಿಸಬಲ್ಲವರು ದೇವತೆಗಳಲ್ಲೂ ಇಲ್ಲ. ಅವರೆಲ್ಲ ಈಗ ಸಾಕಷ್ಟು ದೊಡ್ಡವರೂ ಆಗಿರುವರು. ಅವರ ಇರುವಿಕೆಯನ್ನು ತಿಳಿದು ಒಂದು ವರ್ಷವಾಗುತ್ತ ಬಂದಿದ್ದರೂ, ನೀನು ಈ ರೀತಿ ಉಪೇಕ್ಷೆಯಿಂದಿರುವುದು ತರವಲ್ಲ. ಅವರನ್ನೆಲ್ಲ ಇಲ್ಲಿಗೆ ಕರೆಸಿ, ಅರ್ಧರಾಜ್ಯವನ್ನು ಮತ್ತೆ ಅವರಿಗೆ ಒಪ್ಪಿಸು. ಹೀಗೆ ಮಾಡುವುದು ನಿನ್ನ ಕುಲಕ್ಕೂ ಒಳ್ಳೆಯದು. ಧರ್ಮಕ್ಕೂ ಸಮ್ಮತ. ಇಲ್ಲದಿದ್ದಲ್ಲಿ ಆ ಎರಡೂ ನಿನ್ನ ಪಾಲಿಗೆ ಇಲ್ಲವಾಗುವವು.'' ವಿದುರನ ಈ ಮಾತಿಗೆ ಭೀಷ್ಮದ್ರೋಣರೂ ಕೃಪರೂ ತಮ್ಮ ಸಮ್ಮತಿಯನ್ನು ಸೂಚಿಸಲು, ಧೃತರಾಷ್ಟ್ರ ಹೇಳಿದ - ''ವಿದುರ ! ನೀನೇ ಹೋಗಿ ಅವರನ್ನು ಕರೆದು ತಾ.'' ವೇಗದ ರಥದಲ್ಲಿ ಕುಳಿತು ವಿದುರ ಪಾಂಚಾಲಕ್ಕೆ ತೆರಳಿದ. ಅವನನ್ನು ಕಂಡು ಪಾಂಡವರಿಗೆಲ್ಲ ಸಂತೋಷವಾಯಿತು. ಅದೇ ವೇಳೆಗೆ ಅಲ್ಲಿಗೆ ಬಂದ ಕೃಷ್ಣ ಹಾಗೂ ವ್ಯಾಸರು, ಪಾಂಡವರನ್ನು , ಕುಂತಿಯನ್ನು , ದ್ರೌಪದಿಯನ್ನು ಕರೆದುಕೊಂಡು ವಿದುರನೊಂದಿಗೆ ಹಸ್ತಿನಾಪುರಕ್ಕೆ ಹೊರಟರು. ಪಾಂಡವರ ಬರುವಿಕೆ ಪಟ್ಟಣಿಗರ ಪಾಲಿಗೆ ಆನಂದದ ಹೊಳೆಯನ್ನೇ ಹರಿಸಿತು. ಭೀಷ್ಮಾದಿಗಳಿಗಾದ ಆನಂದಕ್ಕೂ ಸೀಮೆ ಇರಲಿಲ್ಲ. ಅವರನ್ನೆಲ್ಲ ಸಂಭ್ರಮದಿಂದ ಸ್ವಾಗತಿಸಿ, ಧೃತರಾಷ್ಟ್ರನ ಮೂಲಕ ಮನೆಗೆ ಕರೆತಂದರು. ದುರ್ಯೋಧನನ ಪತ್ನಿಯರೊಂದಿಗೆ ಗಾಂಧಾರಿಯು ದ್ರೌಪದಿಯನ್ನು ಆದರದಿಂದ ಬರಮಾಡಿಕೊಂಡಳು. ಹೀಗೆಯೇ ಕೆಲವು ಕಾಲ ಕಳೆಯುತ್ತಿರಲು, ದ್ರೌಪದಿ-ಯನ್ನು ಕುರಿತಾದ ತನ್ನ ಮಗನ ಕೆಟ್ಟ ನಡತೆಯಿಂದ ಭೀಮನಿಂದುಂಟಾಗಬಹುದಾದ ಭಯ-ವನ್ನು ಊಹಿಸಿದ ಗಾಂಧಾರಿ ಕುಂತಿಗೆ ಹೇಳಿದಳು - ''ಅಮ್ಮಾ ! ಕುಂತಿ ! ನೀನು ನಿನ್ನ ಸೊಸೆ-ಯೊಂದಿಗೆ ನಿನ್ನ ಮನೆಗೇ ತೆರಳು. ನನ್ನ ಮಗನ ದುರ್ನಡತೆಯಿಂದ ಭೀಮ ಕೆರಳಬಹುದಾದ ಭಯ ನನ್ನನ್ನು ಆವರಿಸಿದೆ ; ಅತ್ಯಧಿಕ ಸುಂದರಿಯಾದ ದ್ರೌಪದೀ ಮೂರುಲೋಕದಲ್ಲೂ ಶ್ರೇಷ್ಠಳೆನ್ನಿಸುವ ಮಹಿಳೆ ಎಂಬುದೇ ಇದಕ್ಕೆ ಮುಖ್ಯಕಾರಣ.'' ಅದರಂತೆ ಕುಂತಿ, ತನ್ನ ಮಕ್ಕಳು ಹಾಗೂ ಸೊಸೆಯೊಂದಿಗೆ ಹಿಂದೆ ಪಾಂಡುರಾಜನು ವಾಸವಾಗಿದ್ದ ಮನೆಗೇ ತೆರಳಿದಳು.

## ಪಾಂಡವರ ದಾಂಪತ್ಯ

ಈ ರೀತಿ ಪಾಂಡವರು ಅಲ್ಲಿ ಮತ್ತೆ ಐದು ವರ್ಷಗಳನ್ನು ಸುಖದಿಂದ ಕಳೆದರು. ನಾಲ್ಕು ರೂಪಗಳನ್ನು ಹೊಂದಿದ್ದ ದ್ರೌಪದಿಯು ಅವರೊಂದಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಕ್ರೀಡಿಸಿದಳು. ದೇಹಾಭಿಮಾನಿನಿಯ ಭೇದದಿಂದ ಅವಳು ಪ್ರತಿದಿನವೂ ಕನ್ಯೆಯೇ ಆಗುತ್ತಿದ್ದಳು. ಪ್ರತಿದಿನವೂ ಅಭಿಮಾನಿಯ ವ್ಯಕ್ತಿಯಿಂದಾಗಿ ಜನ್ಮವೂ, ನಾಶದಿಂದಾಗಿ ನಾಶವೂ ಸಂಭವಿಸುತ್ತಿತ್ತು. ಆಯಾ ಪತಿಗಳೊಂದಿಗೆ ಸೇರುವಾಗ ಆಯಾ ಸ್ತ್ರೀಯ ಸಾನ್ನಿಧ್ಯ ಮಾತ್ರವೇ ದ್ರೌಪದಿಯ ದೇಹದಲ್ಲಿ ವ್ಯಕ್ತವಾಗುತ್ತಿದ್ದಿತು. ಆದರೆ ಭಾರತಿಯ ವ್ಯಕ್ತಿತ್ವ ಮಾತ್ರ ಯಾವಾಗಲೂ ದ್ರೌಪದಿಯ ದೇಹ-ದಲ್ಲಿರುತ್ತಿದ್ದುದರಿಂದ, ಭೀಮನ ಹೊರತು ಉಳಿದ ನಾಲ್ವರು ಪಾಂಡುಪುತ್ರರಲ್ಲಿ ವಾಯುವಿನ ಆವೇಶವೂ ಇದ್ದೇ ಇರುತ್ತಿತ್ತು. ವಾಯು ಮಾತ್ರ ಉಳಿದವರನ್ನೆಲ್ಲ ಎಚ್ಚರವಿಲ್ಲದಂತೆ ಮಾಡಿ

ಭಾರತಿಯ ಜೊತೆ ತಾನಿರುತ್ತಿದ್ದ. ಅದರಿಂದಾಗಿ ದ್ರೌಪದಿಯು ಪ್ರತಿದಿನವೂ ಶುದ್ಧಳಾಗಿಯೇ ಇರುತ್ತಿದ್ದಳು. ಉಳಿದವರೂ ಪ್ರತಿದಿನ ಹುಟ್ಟಿ ಸತ್ತಂತೆ ಆಗುತ್ತಿದ್ದುದರಿಂದ ಕನ್ಯಾಭಾವವೇ ಅಲ್ಲಿ ಯಾವಾಗಲೂ ಇರುತ್ತಿತ್ತು. ಬೇರೆಯವರ ವಶದಲ್ಲಿ ಆ ದೇಹ ಇರುತ್ತಿದ್ದುದರಿಂದ ಅದು ಸುಪ್ತಾವಸ್ಥೆಯಲ್ಲ. ಹರಿಯ ಸ್ಮರಣೆ ಇರುತ್ತಿದ್ದುದರಿಂದ ಅದು ಮೂರ್ಛಾವಸ್ಥೆಯೂ ಅಲ್ಲ. ಆವೇಶದಂತೆಯೂ ಇರಲಿಲ್ಲವಾಗಿ ಅದು ಮೃತಿಪ್ರಾಯವೇ ಆಗಿತ್ತು. ಹೀಗೆ ಪ್ರತಿದಿನವೂ ಹೊಸಹುಟ್ಟಿನಿಂದಾಗಿ ಅವಳು ಕನ್ಯೆಯೇ ಆಗಿರುತ್ತಿದ್ದಳು. ವಾಯು ಮಾತ್ರ ಯಾವಾಗಲೂ ಭಾರತಿಯೊಂದಿಗೆ ರಮಿಸುತ್ತಿದ್ದುದು ವಿಶೇಷವಾದ ಅಂಶವಾಗಿತ್ತು. ಮನುಷ್ಯರ ಭೋಗದ ರೀತಿಯೇ ಬೇರೆ ; ದೇವತೆಗಳ ಭೋಗದ ರೀತಿಯೇ ಬೇರೆ. ಆದ್ದರಿಂದ ಈ ಬಗ್ಗೆ ಯಾವ ಶಂಕೆಗೂ ಅವಕಾಶವಿಲ್ಲ. ಈ ಎಲ್ಲ ಸಮಯದಲ್ಲೂ ಪಾಂಡವರೊಂದಿಗೆ ಕೃಷ್ಣ ವ್ಯಾಸರು ಇರುತ್ತಿದ್ದರು. ಅದಕ್ಕೆ ಪಾಂಡವರಲ್ಲಿ ಅವರಿಗಿದ್ದ ಅಪಾರ ಪ್ರೀತಿಯೇ ಕಾರಣ. ಅದರಿಂದಾಗಿ ಪಾಂಡವರ ಸಮಯ ಹರ್ಷದ ಹೊನಲೇ ಆಗಿತ್ತು.

## ದುರ್ಯೋಧನನ ಮದುವೆ

ಪಾಂಡವರು ವನದಲ್ಲಿದ್ದಾಗ ಕಾಶೀರಾಜನ ಮಗಳ ಸ್ವಯಂವರಕ್ಕಾಗಿ ಖ್ಯಾತನಾಮರಾದ ರಾಜರ ದೊಡ್ಡ ಗುಂಪೇ ಸೇರಿತ್ತು. ತನ್ನ ಬಲದಿಂದ ಸೊಕ್ಕಿದ್ದ ದುರ್ಯೋಧನನು ಸ್ವಯಂವರಕ್ಕೆ ಇದ್ದ ಕನ್ಯೆಯನ್ನು ಬಲಾತ್ಕಾರವಾಗಿ ಎತ್ತಿಕೊಂಡು ಬಂದ. ನೆರೆದ ರಾಜರಲ್ಲಿ ಜರಾಸಂಧನ ಹೆಸರನ್ನು ಮೊದಲು ಉಲ್ಲೇಖಿಸಿದ್ದನ್ನು ನೋಡಿ ಕೆರಳಿದ ದುರ್ಯೋಧನ ಅಂತಹ ಅಕಾರ್ಯಕ್ಕೆ ಕೈ ಹಾಕಿದ್ದ. ದುರ್ಯೋಧನನ ಆ ಕಾರ್ಯದಿಂದ ಕ್ರುದ್ಧರಾದ ರಾಜರೆಲ್ಲ ಎದುರಿಸಿ ಬರಲು, ಅವರನ್ನೆಲ್ಲ ಕರ್ಣ ಹಾಗೂ ತನ್ನ ತಮ್ಮಂದಿರೊಂದಿಗೆ ಕೂಡಿ ದುರ್ಯೋಧನ ಸೋಲಿಸಿದ. ಅವರೆಲ್ಲ ಬೇರೆ ಧನುಸ್ಸುಗಳೊಂದಿಗೆ ಮತ್ತೆ ಸಿದ್ಧರಾಗಿ ಬರುತ್ತಿದ್ದುದನ್ನು ಕಂಡ ಕರ್ಣನು ದುರ್ಯೋಧನನಿಗೆ – "ನೀನು ಹೋಗಿ ತಮ್ಮಂದಿರೊಂದಿಗೆ ಪಟ್ಟಣವನ್ನು ಸೇರಿಕೋ. ಅಲ್ಲಿ ಭೀಷ್ಮಾದಿಗಳ ಬೆಂಬಲವೂ ನಿನಗೆ ದೊರೆಯುವುದರಿಂದ, ಇವರಾರೂ ನಿನ್ನನ್ನು ಎದುರಿಸಲಾರರು. ನಾನೊಬ್ಬನೇ ಇವರನ್ನೆಲ್ಲ ಎದುರಿಸುತ್ತೇನೆ. ಒಂದು ವೇಳೆ ಇವರೆಲ್ಲ ನನ್ನನ್ನು ಸೋಲಿಸಿದರೂ ನಿನ್ನ ಕೀರ್ತಿಗೆ ಕುಂದಿಲ್ಲ. ಹಾಗಿಲ್ಲದೆ ನಿಮ್ಮಲ್ಲಿ ಯಾರನ್ನಾದರೂ ಹಿಡಿದು ಹಾಕಿದಲ್ಲಿ ನಿನಗೆ ಅಪಕೀರ್ತಿ ತಪ್ಪದು. ಈ ಜರಾಸಂಧನೊಂದಿಗೆ ಕಾದುವುದು ಭೀಷ್ಮಾದಿಗಳಿಗೂ ಸಾಧ್ಯವಾಗದ ಮಾತು. ಬಾಹ್ಲೀಕನಂತಹ ಬಲಶಾಲಿಯಾದ ರಾಜನೂ ಇವನ ಕೈಗೆ ಸಿಕ್ಕಿರುವನು. ರಾಜನಲ್ಲ ಎಂಬ ಕಾರಣದಿಂದ ಭೀಷ್ಮರನ್ನು ಈ ಮೊದಲು ಇವನು ಎದುರಿಸಿ ಹೋಗಿಲ್ಲ. ಯಾವಾಗಲೂ ತಾನೇ ಜಯಿಸಬೇಕೆಂಬ ಆಸೆಯ ಈ ಜರಾಸಂಧ ಅಷ್ಟು ಜನರನ್ನು ಗೆಲ್ಲುವುದು ಆದೀತೋ ಇಲ್ಲವೋ ಎಂಬ ಶಂಕೆಯಿಂದಾಗಿ ಅಲ್ಲಿಗೆ ಬೆನ್ನಟ್ಟಿ ಬರಲಾರ ; ಅಶ್ವತ್ಥಾಮರನ್ನು ರುದ್ರಾವತಾರ ಎಂದು ತಿಳಿದಿರುವುದರಿಂದ ಶಿವಭಕ್ತನಾದ ಇವನು ಅವರೊಂದಿಗೆ ಕಾದಲು ಬಯಸುವುದೂ ಇಲ್ಲ." ವಿಚಾರ ಮಾಡಿ ಕರ್ಣನ ಮಾತಿನಲ್ಲಿಯ ತಥ್ಯವನ್ನು ಗಮನಿಸಿ ದುರ್ಯೋಧನ ಹಸ್ತಿನಾಪುರವನ್ನು ಸೇರಿಕೊಂಡ.

# ಕರ್ಣನ ಪರಾಕ್ರಮ

ಅವರೊಂದಿಗೆ ಹೋರಾಟ ನಡೆಸಿದ ಕರ್ಣ ಎಲ್ಲರನ್ನು ಗೆದ್ದುಬಿಟ್ಟ. ಕರ್ಣನನ್ನು ಅಷ್ಟಾಗಿ ಲೆಕ್ಕಕ್ಕೆ ತಾರದ ಜರಾಸಂಧ ರಾಜರನ್ನೆಲ್ಲ ಒಬ್ಬೊಬ್ಬರನ್ನಾಗಿಯೇ ಅವನ ಮೇಲೆ ಯುದ್ಧಕ್ಕೆ ಕಳಿಸಿದ್ದು ಇದಕ್ಕೆ ಕಾರಣವಾಯಿತು. ಎಲ್ಲ ರಾಜರೂ ಸೋತದ್ದನ್ನು ಕಂಡು ಜರಾಸಂಧ ರಥದಲ್ಲಿ ಕುಳಿತು ತಾನೇ ನುಗ್ಗಿಬಂದ. ಪರಶುರಾಮರ ವರದ ಬಲದಿಂದಾಗಿ ಜರಾಸಂಧನನ್ನು ಕರ್ಣನು, ವಿರಥನನ್ನಾಗಿಯೂ, ವಿಶಸ್ತ್ರನನ್ನಾಗಿಯೂ ಮಾಡಿದ. ಅನಂತರ ಅವರಿಬ್ಬರಲ್ಲಿ ಮುಷ್ಟಿಯುದ್ಧ ನಡೆಯಿತು. ಜರೆಯು ಕೂಡಿಸಿದ್ದ ಸಂಧಿಯಲ್ಲೇ ಕರ್ಣನ ಪೆಟ್ಟುಗಳು ಬೀಳತೊಡಗಿದ್ದನ್ನು ಕಂಡ ಜರಾಸಂಧ ಸಂತೋಷಪಟ್ಟ- "ಬಲರಾಮನಿಗೂ ತಿಳಿಯದಿದ್ದ ನನ್ನ ಈ ಗುಟ್ಟು ನಿನಗೆ ತಿಳಿದಿದೆ ; ನೀನು ನನ್ನ ಭೃತ್ಯನಾಗು ; ಯುದ್ಧದಲ್ಲಿ ತುಂಬಾ ಚತುರನಾಗಿರುವ ನಿನ್ನನ್ನು ನಾನು ಕೊಲ್ಲು-ವುದಿಲ್ಲ. ನಿನ್ನ ತಂದೆಯಿಂದ ನಾನು ಈ ಮೊದಲು ಬಾಹುಬಲದಿಂದ ಗೆದ್ದುಕೊಂಡಿದ್ದ ಅಂಗ-ರಾಜ್ಯವನ್ನು ನೀನೇ ತೆಗೆದುಕೋ. ನಾನು ಹೇಳಿದಂತೆ ನಡೆಯುತ್ತ ಇರಬೇಕು." ಜರಾಸಂಧನ ಮಾತನ್ನು ಕರ್ಣ ಒಪ್ಪಿಕೊಂಡುಬಿಟ್ಟ. ಈ ಮೊದಲು ಭೀಮಸೇನ ಜರಾಸಂಧನನ್ನು ಸೋಲಿಸಿ ಕಿತ್ತುಕೊಂಡಿದ್ದ ಅಂಗರಾಜ್ಯದ ಒಂದು ಭಾಗವನ್ನು ಧೃತರಾಷ್ಟ್ರನಿಗೆ ಒಪ್ಪಿಸಿದ್ದ. ಅದನ್ನೇ ದುರ್ಯೋಧನ ಕರ್ಣನಿಗೆ ಕೊಟ್ಟಿದ್ದ. ಈಗ [೧]ಉಳಿದ ಅಂಗರಾಜ್ಯವೂ ಜರಾಸಂಧನ ಮೈತ್ರಿ-ಯಿಂದ ಕರ್ಣನಿಗೆ ದೊರೆಯಿತು.

ಕರ್ಣನು ಹಸ್ತಿನಾವತಿಗೆ ತೆರಳಿದ. ಅವನನ್ನು ಕಂಡ ಧೃತರಾಷ್ಟ್ರಪುತ್ರರು ಬಹಳ ಸಂತೋಷಪಟ್ಟು ಕೃಷ್ಣನೂ ಸಹ ಕರ್ಣನಿಗೆ ಸಮನಲ್ಲ ಎಂದು ಭಾವಿಸಿದರು. ಕಾಶೀರಾಜನ ಮಗಳನ್ನು ದುರ್ಯೋಧನ ವಿವಾಹವಾದ. ಅವಳು ಭೂಮಿಗಿಳಿದು ಬಂದಿದ್ದ ಕಲಿಪತ್ನಿಯಾದ ಅಲಕ್ಷ್ಮಿಯೇ ಆಗಿದ್ದಳು ; ಅವಳಲ್ಲಿ [೨]ಪಾರ್ವತಿಯ ಆವೇಶವೂ ಇತ್ತು. ಅವಳಲ್ಲಿ ಅವನಿಗೆ ಲಕ್ಷಣನೆಂಬ ಹೆಸರಿನ ಮಗನಾಗಿ ಅಕ್ಷನು[೩] ಜನಿಸಿದ. [೪]ಷಣ್ಮುಖನ ಪತ್ನಿಯೇ ಲಕ್ಷಣೆ ಎಂಬ

---

೧. ಮೊದಲು ಅರ್ಧಾಂಗರಾಜನಾಗಿದ್ದ ಕರ್ಣ ಇದರಿಂದಾಗಿ ಪೂರ್ಣಾಂಗರಾಜನಾಗುವಂತಾಯಿತು ಎಂಬುದು ವಿಶೇಷ. ಅದು ಮೂಲತಃ ಕರ್ಣನ ಸಾಕುತಂದೆಯಾದ ಅಧಿರಥನಿಗೆ ಸೇರಿದ ರಾಜ್ಯ ಎಂಬ ವಿವರವೂ ಈಗಾಗಲೇ ಬಂದಿದೆ. ಹೀಗೆ ತನ್ನ ಹಕ್ಕಿನ ರಾಜ್ಯವನ್ನೇ ಪಡೆದರೂ ಕರ್ಣ ಹಂಗಿನ ರಾಜ್ಯ ಪಡೆದಂತೆ ಪರಾವಲಂಬಿಯಾದದ್ದು ಮಾತ್ರ ವಿಧಿವಿಲಾಸ.

೨. ಪಾರ್ವತಿಯ ಆವೇಶದಿಂದಾಗಿ ದುರ್ಯೋಧನನ ಪತ್ನಿಯು ರೂಪವತಿ ಎನ್ನಿಸಿಕೊಳ್ಳಲು ಸಾಧ್ಯವಾಗಿತ್ತು. ಅಸುರಸ್ತ್ರೀಯರಿಗೂ ಸಹ ಹೀಗೆ ವರ ಆವೇಶ ಮೊದಲಾದ ಕಾರಣಗಳಿಂದ ಸುರೂಪವು ಲಭಿಸುವುದುಂಟು ; ಆದರೆ ಅದು ಅವರ ಸಹಜಸಿರಿಮೆ ಎನ್ನಿಸದು ಎಂಬ ವಿಶೇಷಾಂಶವನ್ನು ಗಮನಿಸಬೇಕು.

೩. ಅಕ್ಷನು ರಾಮಾಯಣಕಾಲದಲ್ಲಿ ರಾವಣನಿಗೆ ಮಗನಾಗಿ ಜನಿಸಿದ್ದವನು. ಇಲ್ಲಿ ದುರ್ಯೋಧನನಿಗೆ ಪುತ್ರನಾದ. ರಾವಣ ರಾಮಾಯಣದ ಮಹಾಖಳನಾಯಕನಾದರೆ ದುರ್ಯೋಧನ ಮಹಾಭಾರತದ ಮಹಾಖಳನಾಯಕ. ಹೀಗೆ ಎರಡು ಜನ್ಮಗಳಲ್ಲೂ ಅವನು ಮಹಾದುಷ್ಟರ ಪುತ್ರನೇ ಆಗಿದ್ದ ಸ್ವತಃ ತಾಮಸಜೀವ.

೪. ಷಣ್ಮುಖ ಕಾಮನ ಅವತಾರ ; ಷಣ್ಮುಖನ ಪತ್ನಿ ಎಂದರೆ ರತಿ ; ಎಂದರೆ ಲಕ್ಷಣೆಯು ರತಿಯ ಅವತಾರ ಎಂದಾಗುವುದು.

ಹೆಸರಿನಿಂದ ಮಗಳಾಗಿ ಹುಟ್ಟಿದಳು. ಅವಳು ತುಂಬಾ ರೂಪಸಿಯೂ, ಗುಣಶೀಲೆಯೂ ಆಗಿದ್ದಳು. ದುರ್ಯೋಧನನ ತಮ್ಮಂದಿರೂ ಸಹ ತಮಗೆ ಅನುರೂಪರಾದ ಪತ್ನಿಯರನ್ನು ಹೊಂದಿದರು. ಅನಂತರವೂ ದುರ್ಯೋಧನ ಅನೇಕರನ್ನು ಮದುವೆಯಾದ. ಹಿಂದೆ '[೧]ಸುರಾಂತಕ'ನಾಗಿದ್ದವನು ದುಃಶಾಸನನಿಗೆ ಮಗನಾಗಿ ಹುಟ್ಟಿದ.

## ಭೀಮನ ಪರಾಕ್ರಮ

ಕೌರವರು ಪಾಂಡವರ ಬಲವನ್ನೂ ಸಂಪತ್ತನ್ನೂ ಕಂಡು ಕುದಿಯುತ್ತಲೇ ಇದ್ದರು ; ಆ ವೇಳೆಗೆ ಕಲಿಂಗರಾಜನ ಮಗಳ ಸ್ವಯಂವರದ ವಾರ್ತೆ ಬರಲು ಅವರೆಲ್ಲ ಅಲ್ಲಿಗೆ ಹೊರಟರು. ಸುವಜ್ರ ಎಂಬ ಹೆಸರಿನ ಕಲಿಂಗರಾಜನ ರುದ್ರವರದಿಂದಾಗಿ ಅಜೇಯನೆನ್ನಿಸಿದ್ದ. ಅವನ ಕನ್ಯೆಯನ್ನು ದುರ್ಯೋಧನ ಬಲಾತ್ಕಾರದಿಂದ ಹಿಡಿದ. ಶಿವನ ವರ ಹಾಗೂ ಜರಾಸಂಧನ ಸಹಾಯದಿಂದಾಗಿ ಸುವಜ್ರನು ದುರ್ಯೋಧನನನ್ನು ಸೋಲಿಸಿ ಸೆರೆಹಿಡಿದ. ಅರ್ಜುನನ ಮೇಲಿನ ಸ್ಪರ್ಧೆಯಿಂದಾಗಿ ಬಂದಿದ್ದ ಕರ್ಣ ಈ ಬಾರಿ ಸೋತು ಪಲಾಯನ ಮಾಡಿದ. ತಮ್ಮಂದಿರೆಲ್ಲರೊಂದಿಗೆ ದುರ್ಯೋಧನ ಸೆರೆಸಿಕ್ಕ ವಾರ್ತೆ ಕೇಳಿ ಭೀಷ್ಮ, ವಿದುರ, ಧೃತರಾಷ್ಟ್ರ, ಧರ್ಮರಾಜ ಇವರೆಲ್ಲ ಅವರ ಬಿಡುಗಡೆಗಾಗಿ ಭೀಮನನ್ನು ಕಳುಹಿಸಿಕೊಟ್ಟರು. ಭೀಮನು ಜರಾಸಂಧ ಮೊದಲಾದ ಎಲ್ಲ ರಾಜರನ್ನು ಗೆದ್ದು, ಸುವಜ್ರನನ್ನು ಕೊಂದುಹಾಕಿ, ದುರ್ಯೋಧನಾದಿಗಳನ್ನೆಲ್ಲ ಬಿಡುಗಡೆ ಮಾಡಿಸಿದ ; ಕರ್ಣನೊಂದಿಗೆ ಕೂಡಿಕೊಂಡು ಆ ದುರ್ಯೋಧನಾದಿಗಳು ಜೀವಚ್ಛವಗಳಂತೆ ಪಟ್ಟಣವನ್ನು ಪ್ರವೇಶಿಸಿದರು.

## ಪಾಂಡವರಿಗೆ ಅರ್ಧರಾಜ್ಯ

ದಿನೇ ದಿನೇ ಪಾಂಡವರಿಗೂ ತನ್ನ ಪುತ್ರರಿಗೂ ವೈರ ಹೆಚ್ಚುತ್ತಿರುವುದನ್ನು ಗಮನಿಸಿದ ಧೃತರಾಷ್ಟ್ರನು ಧರ್ಮರಾಜನಿಗೆ ಹೇಳಿದ – "ನೀನು ನಿನ್ನ ತಮ್ಮಂದಿರೊಂದಿಗೆ ಇಂದ್ರ ನಿರ್ಮಿಸಿದ ಪಟ್ಟಣಕ್ಕೆ ಹೋಗಿ ಅಲ್ಲಿ ನಿನ್ನ ಪಾಲಿನ ಅರ್ಧರಾಜ್ಯವನ್ನು ಪಾಲಿಸು. ಅರ್ಧರಾಜ್ಯ-ಕೋಶವನ್ನು ನೀನು ತೆಗೆದುಕೊ. ಹಿಂದೆ ಬ್ರಹ್ಮಾದಿದೇವತೆಗಳಿಂದ ಅಭಿಷಿಕ್ತನಾದ ಇಂದ್ರ ಬಹುಕಾಲ ರಾಜ್ಯವಾಳಿದ್ದ ಸ್ಥಳವದು. ಇಂದ್ರನಿಗೆ ಸಮನಾದ ನಿನಗೆ ಅದು ಉಚಿತವೂ ಆಗಿದೆ." ಅದಕ್ಕೆ ಧರ್ಮರಾಜನು ಸಮ್ಮತಿಸಲು, ಧೃತರಾಷ್ಟ್ರ ಧರ್ಮರಾಜನಿಗೆ ಪಟ್ಟಾಭಿಷೇಕವನ್ನು ನಡೆಸಿದ. ಆಗ ವೇದವ್ಯಾಸರು ಮೊದಲಿಗೆ ದ್ರೌಪದಿಯೊಂದಿಗೆ ಧರ್ಮರಾಜನನ್ನು "ಶ್ರೇಷ್ಠ ಚಕ್ರವರ್ತಿಯಾಗಿ, ಅಶ್ವಮೇಧ ರಾಜಸೂಯಾದಿ ಎಲ್ಲ ಯಾಗಗಳನ್ನು ಮಾಡುತ್ತ, ಧರ್ಮ-ಶೀಲನಾಗಿ ಬಾಳು" ಎಂದು ಹರಸಿ ಅಭಿಷೇಕಿಸಿದರು. ಅನಂತರ ಅದೇ ರೀತಿ ಕೃಷ್ಣನೂ ಅಭಿಷೇಕಿಸಿದ. ಇದೇ ರೀತಿ ಯುವರಾಜಪದವಿಯಲ್ಲಿ ದ್ರೌಪದೀಸಹಿತವಾಗಿ ಭೀಮನನ್ನು

೧. ಈ ಸುರಾಂತಕ ರಾಮಾಯಣದಲ್ಲಿ ರಾವಣನ ಪುತ್ರರಲ್ಲಿ ಒಬ್ಬನು ; ಹೆಸರಿಗೆ ತಕ್ಕಂತೆ ಸುರವಿರೋಧಿಯಾಗಿದ್ದ ಅವನು ಅಲ್ಲಿ ಹನುಮಂತನಿಂದ ಹತನಾಗಿದ್ದ.

ಅವರು ಅಭಿಷೇಕ ಮಾಡಿದರು. ಅನಂತರ ಉಳಿದ ಬ್ರಾಹ್ಮಣಶ್ರೇಷ್ಠರೂ ಅವರನ್ನು ಹರಸಿ, ಅಭಿಷೇಕ ಮಾಡಿದರು. ಈ ಅಭಿಷೇಕದ ಸಂಭ್ರಮ ಸಜ್ಜನರಿಗೆ ಆನಂದದ ವಿಷಯವಾಗಿತ್ತು.

## ಇಂದ್ರಪ್ರಸ್ಥಕ್ಕೆ ಪಾಂಡವರು

ಏಳು ದಿನಗಳ ಕಾಲ ನಡೆದ ಆ ಅಭಿಷೇಕಸಂಭ್ರಮದ ಅನಂತರ ಶ್ರೀಕೃಷ್ಣ ಹಾಗೂ ಶ್ರೀವೇದವ್ಯಾಸರು ಕುಂತಿಯೊಂದಿಗೆ ಕೂಡಿ ಪಾಂಡವರೆಲ್ಲ ಪತ್ನೀಸಮೇತರಾಗಿ ಇಂದ್ರಪ್ರಸ್ಥಕ್ಕೆ ಹೊರಟುನಿಂತರು. ತನ್ನ ಮಾತಿನಂತೆ ಅರ್ಧರಾಜ್ಯಕೋಶಗಳನ್ನು ಧೃತರಾಷ್ಟ್ರನು ಪಾಂಡವರಿಗೆ ನೀಡಿದ. "ಈ ಪಾಪಿಯಾದ ದುರ್ಯೋಧನ ಗುಣಾಢ್ಯರಾದ ಅವರನ್ನು ನಮ್ಮಿಂದ ದೂರಮಾಡುತ್ತಿರುವನು. ಭೀಮನ ಪ್ರತಾಪದಿಂದಲೇ ಕಲಿಂಗರಾಜನ ಸೆರೆಯಿಂದ ಪಾರಾಗಿ ಅವನ ಮಗಳನ್ನು ಮದುವೆಯಾದ ದುರ್ಯೋಧನನು ಅವನನ್ನೇ ದ್ವೇಷಿಸುತ್ತಿರುವುದು ನಾಚಿಕೆಗೇಡಿನ ಸಂಗತಿ. ಬಲಾಢ್ಯರಾದ ಪಾಂಡವರನ್ನು ಕಂಡರೆ ಇವನಿಗೆ ಎಂದಿಗೂ ಹೀಗೆಯೇ. ನಾವೆಲ್ಲ ಗುಣಾಢ್ಯರಾದ ಪಾಂಡವರೊಂದಿಗೇ ತೆರಳೋಣ" ಎಂಬುದಾಗಿ ನುಡಿಯುತ್ತ ನಗರ-ವಾಸಿಗಳೆಲ್ಲರೂ ಪಾಂಡವರ ಹಿಂದೆಯೇ ಹೊರಟರು. "ಪಾಂಡವರನ್ನು ಹಿಂಬಾಲಿಸಬೇಡಿ ; ಹಾಗೆ ಹೊರಟವರ ಐಶ್ವರ್ಯವನ್ನೆಲ್ಲ ಮುಟ್ಟುಗೋಲು ಹಾಕಿಕೊಳ್ಳುವೆವು" ಎಂಬ ಭೇರೀ-ತಾಡನದ ಮೂಲಕ ದುರ್ಯೋಧನ ಸಾರಿದ ; ಆದರೂ, "ಆ ಪಾಪಿ ಏನೇ ಮಾಡಿಕೊಳ್ಳಲಿ, ನಾವು ಮಾತ್ರ ಪಾಂಡವರನ್ನು ಬಿಟ್ಟಿರಲಾರೆವು. ಸಜ್ಜನರ ಸಂಗ ಇಲ್ಲಿಯೂ ಸುಖಕರ ; ಪರದಲ್ಲೂ ಮುಕ್ತಿದಾಯಕ. ದುಷ್ಟರ ಸಂಗದ ಫಲ ಮಾತ್ರ ಇದಕ್ಕೆ ವಿರುದ್ಧವಾದದ್ದು. ಆದ್ದರಿಂದ ನಾವೆಲ್ಲ ಪಾಂಡವರೊಂದಿಗೆ ಇಂದ್ರಪ್ರಸ್ಥಕ್ಕೇ ತೆರಳೋಣ" ಎಂದು ಧೈರ್ಯದಿಂದ ಅವರು ಪಾಂಡವರ ಹಿಂದೆಯೇ ಸಾಗಿದರು, ಆಗ ಅವರನ್ನು ಉದ್ದೇಶಿಸಿ ಧರ್ಮರಾಜ ನುಡಿದ - "ನಿಮಗೆ ನನ್ನಲ್ಲಿ ಪ್ರೀತಿ ಇರುವುದಾದರೆ ನೀವೆಲ್ಲ ನನ್ನ ತಂದೆಯ ಆಳ್ವಿಕೆಯಲ್ಲಿಯೇ ಇರತಕ್ಕದ್ದು. ನೀವೆಲ್ಲ ನಮ್ಮನ್ನು ಹಿಂಬಾಲಿಸಿ ಬರುವುದರಿಂದ ಅವರ ಕೀರ್ತಿಗೆ ಕಳಂಕ ತಟ್ಟುವುದು." ಹೀಗೆ ಪಾಂಡವರಿಂದ ತಡೆಯಲ್ಪಟ್ಟ ಅವರೆಲ್ಲರೂ ಬಹಳ ಕಷ್ಟದಿಂದ ಅಲ್ಲಿಯೇ ಉಳಿಯು-ವಂತಾಯಿತು ; ಆದರೆ ಅವರ ಮನಸ್ಸು ಮಾತ್ರ ಪಾಂಡವರನ್ನೇ ಹಿಂಬಾಲಿಸಿತ್ತು.

ಇಂದ್ರಪ್ರಸ್ಥವನ್ನು ತಲುಪಿದ ಮೇಲೆ, ಕೃಷ್ಣ ವ್ಯಾಸರು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆದರು. ಕೂಡಲೇ ಆಗಮಿಸಿದ ಅವನು "ಪಾಂಡವರಿಗಾಗಿ ಈ ಪಟ್ಟಣವನ್ನು ರತ್ನಖಚಿತವನ್ನಾಗಿ ಮಾಡಿ ಇಂದ್ರನಗರಿಯಂತೆ ಸಿದ್ಧಪಡಿಸು" ಎಂಬುದಾಗಿ ಅವರಿಬ್ಬರಿಂದ ಆಜ್ಞಪ್ತನಾಗಿ ಹಾಗೆಯೇ ಮಾಡಿದ. ಅಷ್ಟಾಗಿ ಜನರು ನೆಲೆಸಿರದಿದ್ದ ಆ ಊರು ಬೇರೆದೇಶದ ಜನಗಳಿಂದ ಕೆಲವೇ ದಿನಗಳಲ್ಲಿ ತುಂಬಿಹೋಯಿತು. ಅವರ ಗುಣಗಳಿಂದ ಆಕರ್ಷಿತರಾದ ಬೇರೆದೇಶದ ಜನರು ಸಹ ಅಲ್ಲಿಗೆ ವಲಸೆ ಬಂದು ನೆಲೆಸತೊಡಗಿದರು. ಪಾಂಡವರಂತಹ ಸಜ್ಜನರ ಸಹವಾಸದೊಂದಿಗೆ ಶ್ರೀಕೃಷ್ಣನ ಪಾದಸಂದರ್ಶನದ ಅವಕಾಶ ಲಭಿಸುವುದು ಎಂಬುದು ಅವರೆಲ್ಲ ಹಾಗೆ ಅಲ್ಲಿಗೆ ಬಂದು ನೆಲೆಸಲು ಮತ್ತೊಂದು ಕಾರಣವಾಯಿತು.

ತನ್ನ ತಮ್ಮನಾದ ಪಾಂಡುರಾಜನ ಮಕ್ಕಳನ್ನು ದೂರ ಕಳುಹಿಸಿದ ಧೃತರಾಷ್ಟ್ರನು ದುರ್ಯೋಧನನನ್ನು ರಾಜನನ್ನಾಗಿಯೂ, ದುಃಶಾಸನನನ್ನು ಯುವರಾಜನನ್ನಾಗಿಯೂ ಅಭಿಷೇಕಿಸಿದ[1] ; ಆದರೂ ಬಯಕೆ ಹಿಂಗದ ಅವನು ತನ್ನನ್ನು ಧನ್ಯನೆಂದು ಭಾವಿಸಿಕೊಂಡ.

ಪಾಂಡವರು ಇಂದ್ರಪ್ರಸ್ಥದಲ್ಲಿ ಕೃಷ್ಣ ವ್ಯಾಸರ ಮುಖದಿಂದ ಅಖಿಲತತ್ತ್ವದ ನಿರ್ಣಯವನ್ನು ಕೇಳುತ್ತಲೇ, ಧರ್ಮದಿಂದ ಭೂಮಿಯನ್ನು ಪಾಲಿಸುತ್ತಾ ಸುಖಿಸಿದರು.

## ಪಾಂಡವರ ರಾಜ್ಯಭಾರ

ಇಂದ್ರಪ್ರಸ್ಥದಲ್ಲಿ ಪಾಂಡವರ ರಾಜ್ಯಭಾರ ಪ್ರಾರಂಭವಾಯಿತು. ಯಜ್ಞ, ದಾನ, ಜನರಿಗೆ ಸತ್ಕಾರ ಹಾಗೂ ದೇವತೆಗಳಿಗೆ ಪೂಜೆ, ಯೋಗಕ್ಷೇಮ ವಿಚಾರ, ಋಷಿಪೂಜೆ ಇವೆಲ್ಲ ಧರ್ಮರಾಜನ ಕಾರ್ಯವಾದವು. ಧರ್ಮಶಿಕ್ಷಣ, ಪರತತ್ತ್ವದ ಉಪದೇಶ, ರಾಷ್ಟ್ರರಕ್ಷಣೆ ಮೊದಲಾದ ಕಾರ್ಯ ಭೀಮನದಾಯಿತು. ಸ್ತ್ರೀಯರಿಗೆ ಧರ್ಮೋಪದೇಶ, ಭೃತ್ಯ ಹಾಗೂ ಕೋಶಗಳ ನಿರ್ವಹಣೆ, ಅಂತಃಪುರದ ಜನರ ಮೇಲ್ವಿಚಾರಣೆ, ಭಾಗವತಧರ್ಮದ ಉಪದೇಶ-ಗಳನ್ನೆಲ್ಲ ದ್ರೌಪದಿ ನೋಡಿಕೊಳ್ಳತೊಡಗಿದಳು. ಬೇರೇ ರಾಷ್ಟ್ರಗಳ ಮೇಲೆ ದಂಡೆತ್ತಿ ಗೆಲ್ಲುವುದು ಅರ್ಜುನನ ಮುಖ್ಯಕರ್ತವ್ಯವಾಯಿತು. ಅವನಿಗೆ ಬಗ್ಗದ ಜರಾಸಂಧ ಕೀಚಕಾದಿಗಳನ್ನು ಮಾತ್ರ ಭೀಮನೇ ನಿಗ್ರಹಿಸುತ್ತಿದ್ದ. ಹೀಗೆ ಭೀಮಾರ್ಜುನರ ಬಲದಿಂದ ಸಕಲರಾಜರು ಪರಾಜಿತರಾಗಲು, ಅವರೆಲ್ಲ ಯುದ್ಧದ ಹವ್ಯಾಸವನ್ನೇ ತೊರೆದುಬಿಟ್ಟರು. ಭೀಮಶಾಸನದ ಪ್ರಭಾವದಿಂದ ಸಾಮಾನ್ಯವಾಗಿ ಜನರೆಲ್ಲ ಧರ್ಮನಿಷ್ಠರಾಗಿಯೇ ಇರತೊಡಗಿದರು. ನೌಕರವರ್ಗಕ್ಕೆ ವೇತನ-ವನ್ನು ಹಂಚುವ ಜವಾಬ್ದಾರಿ ನಕುಲನದಾಗಿತ್ತು. ಇತರ ರಾಜರೊಂದಿಗೆ ಸಂಧಾನ, ಭೇದ ಮೊದಲಾದವುಗಳು ಹಾಗೂ ಧರ್ಮರಾಜನ ಹಿಂದೆ ಖಡ್ಗಧಾರಿಯಾಗಿ ಅಂಗರಕ್ಷಣೆಯ ಹೊಣೆ ಸಹದೇವನದಾಯಿತು. ಧೃಷ್ಟದ್ಯುಮ್ನ ಪಾಂಡವರ ಮೇಲಿನ ವಿಶ್ವಾಸದಿಂದ ಸೇನಾಪತಿಯ ಕಾರ್ಯವನ್ನು ವಹಿಸಿಕೊಂಡ. ವಿಶೇಷವಾಗಿ ಭೀಮನ ಸಹವಾಸ ಅವನಿಗೆ ತುಂಬಾ ಹಿಡಿಸಿತ್ತು[2]. ಭೀಮಸೇನನ ಮುಖ್ಯರಕ್ಷಣೆಯಲ್ಲಿ ಆ ರಾಷ್ಟ್ರ ವೈಷ್ಣವಮಯವಾಯಿತು. ಅಲ್ಲಿ ಬಡವರಾಗಲಿ, ಧರ್ಮತೊರೆದವರಾಗಲಿ ಇರಲೇ ಇಲ್ಲ. ಧರ್ಮಕಾರ್ಯದ ಆಚರಣೆ-ಯಲ್ಲಿ ಯಾರೊಬ್ಬನಿಗೂ ಅಡಚಣೆ ಉಂಟಾಗುತ್ತಿರಲಿಲ್ಲ. ತಂದೆ ಇರುವಾಗ ಮಗ ಸಾಯು-ವುದು, ಯೋಗ್ಯ ವಯಸ್ಸಿನಲ್ಲಿ ಗಂಡ ಹೆಂಡತಿಯನ್ನಾಗಲೀ, ಹೆಂಡತಿ ಗಂಡನನ್ನಾಗಲೀ ಕಳೆದು-

---

೧. ಪಾಂಡವರಿಗೆ ಪಟ್ಟಾಭಿಷೇಕ ಮಾಡಿದ್ದು ಅನಂತನೇತ್ರನಾದ ವ್ಯಾಸಕೃಷ್ಣರೂಪದ ಸಾಕ್ಷಾತ್ ಶ್ರೀಹರಿ ; ಆದರೆ ದುರ್ಯೋಧನನಿಗೆ ಅಭಿಷೇಕಮಾಡಿದ್ದು ಹುಟ್ಟುಕುರುಡನಾದ ಧೃತರಾಷ್ಟ್ರ ಎಂಬಲ್ಲಿ ಇರುವ ಅಂತರ ಮುಂದೆ ಅವರ ಜೀವನದ ವಿಭಿನ್ನ ಬಗೆಯ ಫಲಶ್ರುತಿಗೂ ಕಾರಣವಾಯಿತು.

೨. ಇದಕ್ಕೆ ಕಾರಣ ಸ್ಪಷ್ಟ; ಭೀಮ ವಾಯುವಾದರೆ ಧೃಷ್ಟದ್ಯುಮ್ನ ಅಗ್ನಿಯ ಅವತಾರ. ವಾಯುವಿನ ಸಹಕಾರ-ವಿಲ್ಲದೆ ಅಗ್ನಿ ಉರಿಯುವುದಾದರೂ ಎಂತು ! ಅದಕ್ಕೆಂದೇ ಅವನಿಗೆ ಭೀಮನ ಒಡನಾಟ ಪ್ರಿಯವಾಯಿತು ಎಂದರ್ಥ.

ಕೊಳ್ಳುವುದು ಉಂಟಾಗುತ್ತಿರಲಿಲ್ಲ. ದಾನ ಮೊದಲಾದುವುಗಳನ್ನು ಪಡೆಯಲು ಸಾಮಾನ್ಯವಾಗಿ ಜನರೆಲ್ಲ ಧರ್ಮರಾಜನನ್ನೇ ಆಶ್ರಯಿಸುತ್ತಿದ್ದರು. [೧]ಧರ್ಮನಿಷ್ಠುರನಾದ ಭೀಮನಿಂದ ಅಂತಹ ಕಾರ್ಯಸಿದ್ಧಿ ಸುಲಭದ ಮಾತಾಗಿರಲಿಲ್ಲ. ಗಂಧರ್ವ, ವಿದ್ಯಾಧರ ಮೊದಲಾದವರೂ ಇಂದ್ರಸಭೆಗೆ ಹೋಗುವಂತೆ, ಪಾಂಡವರ ಸಭೆಗೆ ಕೃಷ್ಣನನ್ನು ಅರ್ಚಿಸಲು ಧಾವಿಸುತ್ತಿದ್ದರು. ಒಟ್ಟಿನಲ್ಲಿ ಕೃತಯುಗದ ಧರ್ಮಗಳು ಅದಕ್ಕಿಂತ ಹೆಚ್ಚಾಗಿ ಪಾಂಡವರ ಆಳ್ವಿಕೆಯಲ್ಲಿ ನೆಲೆಸಿದವು ; ರತ್ನ ಬಂಗಾರಗಳ ರಾಶಿ, ಸಸ್ಯಸಂಪತ್ತಿ ಅಗಾಧವಾಗಿ ಕಂಡುಬರುತ್ತಿದ್ದವು.

## ಕಾಳೀ ಸ್ವಯಂವರ - ಭೀಮ ಪರಾಕ್ರಮ

ಮೂಲರೂಪದಲ್ಲಿಯೂ ತನ್ನ [೨]ಪತ್ನಿಯೇ ಆಗಿದ್ದ ಶಿಶುಪಾಲನ ಮಗಳು ದೇವಕಿಯನ್ನು ಧರ್ಮರಾಜ ವಿವಾಹವಾದ. ಅವಳ ಸೋದರ ಸೂರ್ಯನ ಅಂಶದಿಂದ ಕೂಡಿದ ಅನುಹ್ಲಾದ-ನಾದ ಧೃಷ್ಟಕೇತು[೩]. ಯಮನ ಲೇಖಕನಾದ ಚಿತ್ರಗುಪ್ತ ಸುಹೋತ್ರ ಎಂಬ ಹೆಸರಿನಿಂದ ಯುಧಿಷ್ಠಿರನಿಗೆ ಮಗನಾಗಿ ಹುಟ್ಟಿದ.

ಅನ್ಯದೇವತೆಗಳ ಆವೇಶಾದಿಗಳಿಲ್ಲದೆ ಕೇವಲ ಭಾರತಿಯು ಕಾಳೀ ಎಂಬ ಹೆಸರಿನಿಂದ ಕಾಶೀರಾಜನ ಮಗಳಾಗಿ ಜನಿಸಿದ್ದಳು. ಅವಳ ಸ್ವಯಂವರಕ್ಕೆ ಕಾಶೀರಾಜನು ವಿವಿಧದೇಶದ ರಾಜರನ್ನೆಲ್ಲ ಆಹ್ವಾನಿಸಿದ್ದ. ನಾನಾದೇಶದ ರಾಜರಿಂದ ಕಿಕ್ಕಿರಿದಿದ್ದ ಸಭೆಯಲ್ಲಿ ಕಾಳಿ ಭೀಮಸೇನನ ಕೊರಳಲ್ಲಿ ಮಾಲೆ ಹಾಕಿದಳು. ಕೋಪಗೊಂಡ ಜರಾಸಂಧಾದಿ ರಾಜರನ್ನೆಲ್ಲ ಶಿವನನ್ನು ಸರ್ವೋತ್ತಮನೆಂದು ಘೋಷಿಸುತ್ತ ವಿಷ್ಣುಭಕ್ತರ ಮೇಲೆ ಆಕ್ರಮಣ ನಡೆಸಿದರು. ಮೊದಲಿಗೆ ಶ್ರುತಿವಾಕ್ಯಗಳಿಂದಲೇ ಭೀಮ ಅವರನ್ನೆಲ್ಲ ವಾಗ್ಯುದ್ಧದಲ್ಲಿ ಸೋಲಿಸಿದ ; ವೇದಗಳು ನಿರ್ದೋಷವೆಂಬುದನ್ನು ಸಾಧಿಸಿ, ಅಪ್ರತಿಹತವಾದ ಯುಕ್ತಿಗಳನ್ನು ಪ್ರಯೋಗಿಸಿದ : "ಶೈವ-ಶಾಸ್ತ್ರಗಳಲ್ಲೂ ವೇದಗಳ ಪ್ರಾಮಾಣ್ಯ ಉಕ್ತವಾಗಿದೆಯಲ್ಲದೇ ಶಾಕ್ತೇಯ, ಸ್ಕಾಂದ, ಸೌರ ಮೊದಲಾದ ಮತಗಳ ನಿಂದೆಯೂ ಕಂಡುಬರುವುದು. ಅಲ್ಲದೆ ವೇದಗಳು ವಿಷ್ಣುಪ್ರತಿಪಾದಕ ಎಂಬ ಅಂಶವೂ ಶೈವಶಾಸ್ತ್ರದಿಂದಲೇ ತಿಳಿದುಬರುವುದು[೪]. ವಿಷ್ಣುಸರ್ವೋತ್ತಮತ್ವವನ್ನು ಸಹ

---

೧. ಯುಧಿಷ್ಠಿರ ಮೃದುಸ್ವಭಾವದವನಾದ್ದರಿಂದ ಕೆಲವೊಮ್ಮೆ ಕೇವಲ ಕರುಣೆಯಿಂದ ಧರ್ಮಸಮ್ಮತವಲ್ಲದ ಬೇಡಿಕೆಗಳನ್ನೂ ಈಡೇರಿಸುತ್ತಿದ್ದ ಎಂಬುದು ಮುಂದೆ ಧೃತರಾಷ್ಟ್ರನು ತನ್ನ ಮಕ್ಕಳ ಶ್ರಾದ್ಧಕ್ಕೆಂದು ಧನ ಕೇಳಿದಾಗ ಕೊಡುವ ಪ್ರಸಂಗದಿಂದ ಸ್ಫುಟಪಡುವುದು. ಆದರೆ, ಶುದ್ಧಧರ್ಮರತನಾದ ಭೀಮಸೇನ ಅಂತಹ ಬೇಡಿಕೆಗಳನ್ನು ಈಡೇರಿಸುತ್ತಿರಲಿಲ್ಲ. ಇದೂ ಸಹ ಆ ಪ್ರಸಂಗದಲ್ಲಿಯೇ ಸ್ಫುಟಪಡುವ ವಿವರ. ಇದರಿಂದಾಗಿ ಸಾಮಾನ್ಯವಾಗಿ ಹೆಚ್ಚಿನ ಜನರು ಯುಧಿಷ್ಠಿರನನ್ನೇ ತಮ್ಮ ಕಾರ್ಯಸಿದ್ಧಿಗಾಗಿ ಸಂಪರ್ಕಿಸುತ್ತಿದ್ದರು ಎಂದು ಭಾವ.

೨. ಧರ್ಮರಾಜ ಯಮ ; ಯಮನ ಪತ್ನಿ ಎಂದರೆ ಶ್ಯಾಮಲೆ ಎಂದರೆ ಶಿಶುಪಾಲನ ಪುತ್ರಿಯಾದ ದೇವಕಿ ಎಂಬುವಳು, ಯಮಧರ್ಮನ ಪತ್ನಿಯಾದ ಶ್ಯಾಮಲೆಯ ಅವತಾರ ಎಂದರ್ಥ.

೩.. ಅನುಹ್ಲಾದ ಪ್ರಹ್ಲಾದನ ಸೋದರರಲ್ಲೊಬ್ಬನು ಎಂಬ ವಿವರ ಶ್ರೀಮದ್ಭಾಗವತಮಹಾಪುರಾಣದಲ್ಲಿ ಬಂದಿದೆ.

೪. ವೇದಗಳು ಶಿವಸರ್ವೋತ್ತಮತ್ವಪರವಲ್ಲ ಎಂಬುದು ಶೈವರು ಅವುಗಳನ್ನು ಪ್ರಮಾಣವೆಂದು ಅಂಗೀಕರಿಸದಿರುವುದರಿಂದಲೇ ಸಿದ್ಧವಾಗುವುದು. ವೇದಗಳಲ್ಲಿ ಹಾಗೆ ಶಿವಪಾರಮ್ಯ ಪ್ರತಿಪಾದಕವಾಕ್ಯಗಳು

ಶೈವಶಾಸ್ತ್ರಗಳಲ್ಲಿಯೇ ಕಾಣಬಹುದು. ಆದರೆ ಶಿವಾದಿಗಳ ವಿಷ್ಣೂತ್ತಮತ್ವವು ವೇದಗಳಲ್ಲೆಲ್ಲೂ ಕಂಡುಬರುವುದಿಲ್ಲ. ಬೌದ್ಧರು, ಚಾರ್ವಾಕರು ಮುಂತಾದವರು ಸಹ ವಿಷ್ಣುವಿನ ಹಿರಿಮೆಯನ್ನು ಕೆಲವೊಮ್ಮೆ ಒಪ್ಪಿಕೊಳ್ಳುತ್ತಾರೆ[೧]. ಹೀಗೆ ಯಾವುದೇ [೨]ಶಾಸ್ತ್ರವನ್ನು ಅವಲೋಕಿಸಿದರೂ, ಅಲ್ಲಿ ವಿಷ್ಣುಸರ್ವೋತ್ತಮತ್ವವೇ ಕಂಡು ಬರುವುದು. ಆದ್ದರಿಂದ ವಿಷ್ಣುವೇ ಮುಕ್ತಿಯನ್ನು ನೀಡು-ವಂತಹ ಸರ್ವೋತ್ತಮ ದೇವತೆ. ಇನ್ನು ಆ ಎಲ್ಲ ಶಾಸ್ತ್ರಗಳಲ್ಲೂ ಪರಸ್ಪರ ವಿರೋಧ ಕಂಡು-ಬರುವುದರಿಂದ ಅವುಗಳಿಂದ ಎಂದೂ ತತ್ತ್ವನಿಶ್ಚಯವಾಗಲಾರದು. ಎಲೈ ರಾಜರೇ ! ನೀವೆಲ್ಲ ವಿಷ್ಣುಪಾದಾವಲಂಬಿಯಾದ ನನ್ನ ಬಾಹುಬಲವನ್ನು ಕಣ್ಣಾರೆ ಕಾಣಬಹುದು. ಹಿಂದೊಮ್ಮೆ ಹಸ್ತಿನಾವತಿಯಲ್ಲಿ ನಾನೊಮ್ಮೆ ವಿಷ್ಣುಪೂಜೆಯಲ್ಲಿ ತೊಡಗಿದ್ದಾಗ, ಅದಕ್ಕೆ ವಿಘ್ನವಾಗಿ ಹರಿದು ಬಂದ ಗಂಗೆಯನ್ನು ನಾನು ತಳ್ಳಿದೆ. ಆಗ ಅವಳು ಬಹು ದೂರಕ್ಕೆ ಸಾಗಿಹೋದಳು. ಆಗ ವ್ಯಾಘ್ರರೂಪವನ್ನು ಧರಿಸಿ ಶಿವ, ಹಸುವಿನ ರೂಪದ ಉಮಾದೇವಿಯ ಮೇಲೆ ಕೊಲ್ಲುವಂತೆ

---

ಕಂಡುಬರುತ್ತಿದ್ದಲ್ಲಿ ಶೈವರು ಅವುಗಳನ್ನು ಆಧಾರವೆಂದು ಸ್ವೀಕರಿಸಿ ತಾವೂ ಸಹ ವೈದಿಕರು ಎಂದು ಹೇಳಿ-ಕೊಳ್ಳುತ್ತಿದ್ದರು. ಆದರೆ ವಸ್ತುಸ್ಥಿತಿ ಹಾಗಿಲ್ಲ. ಶೈವರು ಸಾಮಾನ್ಯವಾಗಿಯೇ ವೇದವಿರೋಧಿಗಳು ಎಂಬುದು ಲೋಕಪ್ರಸಿದ್ಧವಾದ ವಿಚಾರ. ಅನಂತರದ ಕಾಲದಲ್ಲಿ ವೇದಗಳ ಪ್ರಾಮಾಣ್ಯಗಳನ್ನು ನಿರಾಕರಿಸಲು ಅಸಮರ್ಥರಾದ ಒಂದು ಶೈವರ ಗುಂಪು ವೇದಗಳಲ್ಲಿ ಆಪಾತತಃ ಕಂಡುಬರುವ 'ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ' ಮೊದಲಾದ ವಾಕ್ಯಗಳನ್ನು ಉಲ್ಲೇಖಿಸಿ, ವೇದಗಳು ತಮ್ಮ ಮತಕ್ಕೆ ಅನುಗುಣವಾಗಿವೆ ಎಂಬ ವಾದವನ್ನು ಮುಂದಿಡತೊಡಗಿದರು. ಆದರೆ ಇಂದೂ ಸಹ ಬಹುಸಂಖ್ಯಾಕ ಶೈವರು ಅವೈದಿಕರು ಎಂಬುದು ಸುಪ್ರಸಿದ್ಧ. ಇದು ವೇದವು ಶಿವಸರ್ವೋತ್ತಮತ್ವಪರವಲ್ಲವೆಂಬುದಕ್ಕೆ ಮೇಲ್ನೋಟಕ್ಕೆ ಕಾಣುವ ಆಧಾರ ಎಂಬ ವಿವರಗಳನ್ನು ಶ್ರೀವಾದಿರಾಜಸ್ವಾಮಿಗಳು ತಮ್ಮ ಮಹಾಭಾರತತಾತ್ಪರ್ಯನಿರ್ಣಯದ ಭಾವಪ್ರಕಾಶಿಕೆಯಲ್ಲಿ ನಿರೂಪಿಸಿರುವರು.

೧. ಬೌದ್ಧರು ಬುದ್ಧನನ್ನು ವಿಷ್ಣುವಿನ ದಶಾವತಾರಗಳಲ್ಲಿ ಒಂದು ಎಂದು ಭಾವಿಸಿ ಆ ಕಾರಣದಿಂದಲೇ ತಮ್ಮ ಮತವು ಶ್ರೇಷ್ಠ ಎಂದು ಹೇಳಿಕೊಳ್ಳುವರು. ಇದು ಅವರು ವಿಷ್ಣುಸರ್ವೋತ್ತಮತ್ವವನ್ನು ಅಂಗೀಕರಿಸಿರುವುದಕ್ಕೆ ನಿದರ್ಶನ. ಅದರಂತೆ ಚಾರ್ವಾಕರು ದೇವಗುರು ಬೃಹಸ್ಪತ್ಯಾಚಾರ್ಯರನ್ನು ತಮ್ಮ ಮತದ ಮೂಲಪ್ರತಿಪಾದಕರೆಂದು ಭಾವಿಸುವರು. ಆದರೆ ಬೃಹಸ್ಪತ್ಯಾಚಾರ್ಯರು ದೇವಗುರುಗಳಾಗಿದ್ದು ದೇವತೆಗಳೆಲ್ಲಾ ವಿಷ್ಣುವಿನ ಆರಾಧಕ-ರಾಗಿರುವುದರಿಂದ ಅವರೂ ಸಹ ವಿಷ್ಣುಸರ್ವೋತ್ತಮತ್ವವನ್ನು ಒಪ್ಪಿಕೊಂಡಂತಾಗುವುದು.

೨. ಅನಂತರದ ಕಾಲದಲ್ಲಿ ಭಾಸ ಮೊದಲಾದ ನಾಟಕಕಾರರು ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಮಹಾಭಾರತ, ರಾಮಾಯಣಾದಿಗಳನ್ನು ಆಧರಿಸಿಯೇ ಕೃತಿಗಳನ್ನು ರಚಿಸಿರುವುದು ಅವರ ಕಾಲದಲ್ಲಿದ್ದ ವೈಷ್ಣವಮತದ ಪ್ರಾಚುರ್ಯಕ್ಕೆ ನಿದರ್ಶನ. 'ವಾಸುದೇವಾರ್ಜುನಾಭ್ಯಾಂ ವುನ್' ಎಂಬ ಪಾಣಿನಿ ಸೂತ್ರವು ವಾಸುದೇವನ ಸರ್ವೋತ್ತಮತ್ವಕ್ಕೆ ಪೋಷಕವಾದುದು. ಪ್ರಖ್ಯಾತ ಶೈವನಾದ ಭಟ್ಟೋಜಿದೀಕ್ಷಿತನ ಸುಪ್ರಸಿದ್ಧ ಕೃತಿ 'ಸಿದ್ಧಾಂತ ಕೌಮುದಿ'ಯು ಹೆಚ್ಚಿನ ಪ್ರಸಂಗಗಳಲ್ಲಿ ನೀಡುವ ಉದಾಹರಣ ವಾಕ್ಯಗಳು ಸಾಮಾನ್ಯವಾಗಿ ವಿಷ್ಣುಸರ್ವೋತ್ತಮತ್ವಕ್ಕೆ ಪೋಷಕ. ಕಾಳಿದಾಸನ ರಘುವಂಶದಲ್ಲೂ ಸಹ ರಾಮಾವತಾರಕ್ಕಾಗಿ ಶ್ರೀಹರಿಯನ್ನು ಪ್ರಾರ್ಥಿಸುವ ಸಮಯದಲ್ಲಿ ಸರ್ವೋತ್ತಮತ್ವವನ್ನು ಸಾರುವ ಸ್ತೋತ್ರವೇ ಕಂಡುಬರುವುದು. ಹೀಗೆ ವಿದ್ಯಮಾನ ವೈಷ್ಣವೇತರಸಾಹಿತ್ಯದಲ್ಲೂ ವಿಷ್ಣುಸರ್ವೋತ್ತಮತ್ವಕ್ಕೆ ಪೋಷಕವೆನಿಸುವ ವಿವರಗಳು ತುಂಬಿವೆ ಎಂಬುದು ಗಮನಾರ್ಹ. ಈ ನಿಟ್ಟಿನಲ್ಲಿ ಶ್ರೀಭೀಮಸೇನನ ವಾದಸರಣಿ ಅತ್ಯಂತ ಪ್ರಾಮಾಣಿಕ ಎಂಬುದು ಮನದಟ್ಟಾಗುವುದು.

ಆಕ್ರಮಣ ಮಾಡುತ್ತ ನನ್ನ ಮುಂದೆ ಕಾಣಿಸಿಕೊಂಡ. ಆಗ ನನ್ನೊಂದಿಗೆ ನಡೆದ ಯುದ್ಧದಲ್ಲಿ ನನ್ನ ಗದೆಯ ಹೊಡೆತಕ್ಕೆ ಅವನು ಲಿಂಗದೊಳಗೆ ಸೇರಿಕೊಂಡ. ಆ ಲಿಂಗ ವ್ಯಾಘ್ರೇಶ್ವರ ಎಂದು ಪ್ರಸಿದ್ಧವಾಯಿತು. ಇದೇ ರೀತಿ ಹಿಮವತ್ಪರ್ವತದ ಮೇಲೆ ಗೋಮತೀನದಿಯ ತೀರದಲ್ಲಿ ನಡೆದ ಮತ್ತೊಂದು ಹೋರಾಟದಲ್ಲೂ, ಶಿವ ನನ್ನಿಂದ ಪರಾಜಿತನಾದ. ಅದೂ ಈಗ ಶಾರ್ದೂಲ-ಲಿಂಗವೆನ್ನಿಸಿದೆ. ವಿಷ್ಣುಪಾದವನ್ನು ಅವಲಂಬಿಸಿದ ನನ್ನ ಬಲವೇ ಹೀಗಿರುವಾಗ, ಇನ್ನು ನನ್ನ ಸ್ವಾಮಿಯಾದ ವಿಷ್ಣುವಿನ ಹಿರಿಮೆಯ ಬಗ್ಗೆ ಹೇಳುವುದೇನಿದೆ ! ಕ್ಷತ್ರಿಯರಿಗೆ ಬಲ ಹಾಗೂ ಬ್ರಾಹ್ಮಣರಿಗೆ ಜ್ಞಾನಗಳೇ ಅವರ ಹಿರಿಮೆಯ ಕುರುಹುಗಳೆಂಬುದು ಶಾಸ್ತ್ರ ತಿಳಿಸಿದ ಮಾತು. ವಿಪ್ರರೂಪಿಯಾದ ಶಿವ [1]ಕೇದಾರದಲ್ಲಿ ನನ್ನಿಂದ ಸೋತು ಲಿಂಗದಲ್ಲಿ ಅಡಗಿಕೊಂಡು, ಲಜ್ಜೆ-ಗೊಳಗಾಗಿ "ವೈದಿಕರು ಅಲ್ಲಿಗೆ ಬಾರದಿರಲಿ" ಎಂದು ಶಾಪವಿತ್ತ. ಹೀಗೆ ಪ್ರತ್ಯಕ್ಷಸಿದ್ಧವಾಗಿರುವ ವಿಷ್ಣುಬಲದಲ್ಲಿ ನಂಬಿಕೆಯಿಲ್ಲದವರು, ಎದುರಿಸಿ ಬಂದರೆ ಅವರಿಗೆ ನನ್ನ ಸ್ವಾಗತ." ಭೀಮನ ಈ ಮಾತುಗಳಿಗೆ ಉತ್ತರ ನೀಡಲಾರದೆ ಎದುರಿಸಿ ಬಂದ ಅವರನ್ನೆಲ್ಲ ಭೀಮ ಬಾಣದ ಪೆಟ್ಟಿನಿಂದ ಹಿಂದಕ್ಕೆ ಅಟ್ಟಿದ. ಗದೆಯಿಂದ ಜರಾಸಂಧನನ್ನು ಅಪ್ಪಳಿಸಿದ ಹಾಗೂ ಅವನನ್ನು ಬಾಹುಗಳಿಂದ ಎತ್ತಿ ಗಂಗೆಯಲ್ಲಿ ಬಿಸಾಡಿದ. ನಾಚಿಕೆಯಿಂದ ತಲೆ ತಗ್ಗಿಸಿದ ಜರಾಸಂಧನು ರಾಜರನ್ನು ಕರೆದು-ಕೊಂಡು ಮಗಧದೇಶಕ್ಕೆ ಪಲಾಯನಗೈದ. ಕಾಶೀರಾಜನಿಂದ ಸಮ್ಮಾನಿತನಾದ ಭೀಮಸೇನ ಕಾಳಿ-ಯೊಂದಿಗೆ ರಥಾರೂಢನಾಗಿ ಇಂದ್ರಪ್ರಸ್ಥಕ್ಕೆ ತೆರಳಿದ. ತ್ರಿಲೋಕಸುಂದರಿಯಾದ ಅವಳಲ್ಲಿ ಭೀಮ-ನಿಗೆ 'ಶರ್ವತ್ರಾತ' ಎಂಬ ಪುತ್ರನೊಬ್ಬ ಜನಿಸಿದ ; ಅವನು 'ಸಮಾನ' ಎಂಬ ವಾಯುವಿನ ಅಂಶ.

## ಶತಧನ್ವನ ವಧೆ

ದ್ವಾರಾವತಿಗೆ ಕೃಷ್ಣ ಬರುತ್ತಿದ್ದಂತೆಯೇ ಸತ್ಯಭಾಮೆಯ ತಂದೆಯನ್ನು ಸಂಹರಿಸಿದ ಶತಧನ್ವನನ್ನು ಕೊಲ್ಲಲು ನಿರ್ಧರಿಸಿದ. ವಿಷಯ ತಿಳಿದ ಶತಧನ್ವನು ಅಕ್ರೂರ ಕೃತವರ್ಮರನ್ನು ತನಗೆ ಸಹಾಯ ಮಾಡಲು ಕೇಳಿಕೊಂಡ. "ನಾವೆಂದೂ ಮನಸ್ಸಿನಲ್ಲೂ ಆ ಲೋಕೇಶ್ವರನಾದ ಕೃಷ್ಣನನ್ನು ವಿರೋಧಿಸಲು ಬಯಸೆವು." ಎಂದು ಅವರಿಬ್ಬರೂ ನುಡಿಯಲು, ಬೇರೆ ದಾರಿ ಕಾಣದ ಶತಧನ್ವ ಒಂದು ಹೆಣ್ಣುಕುದುರೆಯನ್ನೇರಿ ಪಲಾಯನ ಮಾಡಿದ. ಕೃಷ್ಣ-ಬಲರಾಮರು ರಥವೇರಿ ಅವನನ್ನು ಬೆಂಬತ್ತಿ ನಡೆದರು. ಇಡೀ ದಿನ ನೂರು ಯೋಜನಗಳಷ್ಟು ದೂರವನ್ನು

---

೧. ಹೀಗೆ ಸ್ವತಃ ಶಿವನೇ ಶಾಪ ನೀಡಿರುವುದರಿಂದ ವೈದಿಕರಿಗೆ ವೈಷ್ಣವರಿಗೆ ಕೇದಾರಯಾತ್ರೆಯು ವಿಹಿತವಲ್ಲ ಎಂಬುದಾಗಿ ಪ್ರಸಿದ್ಧಿ ಬಂದಿದೆ. ಕೇದಾರಯಾತ್ರೆ ನಿಷಿದ್ಧವಾದರೂ ಅದರ ಸ್ಮರಣೆ ಮಾತ್ರ ನಿಷಿದ್ಧವಲ್ಲ ಎಂಬುದು ಗಮನಾರ್ಹ :

ಕಾಶೀಕೇದಾರಮಾಯಾಕರಿಗಿರಿಮಧುರಾದ್ವಾರಕಾವೇಂಕಟಾದ್ರಿ-
ಶ್ರೀಮುಷ್ಣಕ್ಷೇತ್ರಪೂರ್ವತ್ರಿಭುವನವಿಲಸತ್ಪುಣ್ಯಭೂಮೀನಿವಾಸಃ।
ಗುಲ್ಮಾದಿವ್ಯಾಧಿಹರ್ತಾ ಗುರುಗುಣನಿಲಯೋ ಭೂತವೇತಾಲಭೇದೀ
ಭೂಯಾಚ್ಛ್ರೀಪಾದರಾಜೋ ನಿಖಿಲಶುಭತತಿಪ್ರಾಪ್ತಯೇ ಸಂತತಂ ನಃ॥

-ಶ್ರೀವ್ಯಾಸರಾಜರ ಶ್ರೀಶ್ರೀಪಾದರಾಜಪಂಚರತ್ನಮಾಲಿಕಾ(೫)

ಬಿಡುವಿಲ್ಲದೆ ಕ್ರಮಿಸಿದ ಅವನ ಕುದುರೆ ಅಸು ನೀಗಿತು. ಬರಿಗಾಲಲ್ಲೇ ಶತಧನ್ವ ಓಡಲಾ-ರಂಭಿಸಿದ. ಕೃಷ್ಣನು ರಥವನ್ನು ಬಿಟ್ಟು ತಾನೂ ಬರಿಗಾಲಲ್ಲೇ ಶತಧನ್ವನನ್ನು ಹಿಂಬಾಲಿಸಿ, ಹಿಡಿದು ಅವನ ಶಿರಸ್ಸನ್ನು ಮುಂಡದಿಂದ ಬೇರ್ಪಡಿಸಿದ. ಶತಧನ್ವ ಆ ಮೊದಲೇ ಮಣಿಯನ್ನು ಅಕ್ರೂರನಿಗೆ ಕೊಟ್ಟು ಬಂದದ್ದನ್ನು ಕೃಷ್ಣ ತಿಳಿದಿದ್ದರೂ, ತಿಳಿಯದವನಂತೆ ಶತಧನ್ವನನ್ನು ಪರೀಕ್ಷಿಸಿದಂತೆ ಮಾಡಿ, ಬಲರಾಮನನ್ನು ಕುರಿತು ''ಇವನ ಬಳಿ ಮಣಿ ಇಲ್ಲ'' ಎಂದ ; ಅದನ್ನು ನಂಬದ ಬಲರಾಮನು ಮುನಿಸಿಕೊಂಡವನಾಗಿ ವಿದೇಹದೇಶಕ್ಕೆ ಹೊರಟು ಐದು ವರ್ಷಗಳ ಕಾಲ ಅಲ್ಲಿಯೇ ನೆಲೆಸಿದ.

## ಬಲರಾಮನ ಬಳಿ ದುರ್ಯೋಧನನ ಗದಾಭ್ಯಾಸ

ಕೃಷ್ಣನನ್ನೆಂದೂ ಪಾಂಡವರಿಂದ ದೂರಮಾಡಲು ಸಾಧ್ಯವಾಗದೆಂಬುದನ್ನು ಮನಗಂಡಿದ್ದ ದುರ್ಯೋಧನನು ಹೇಗಾದರೂ ಮಾಡಿ ಬಲರಾಮನನ್ನು ತನ್ನ ಕಡೆಗೆ ಎಳೆದುಕೊಳ್ಳಲು ಹೊಂಚುಹಾಕುತ್ತಿದ್ದ. ಬಲರಾಮ ಈ ರೀತಿ ಏಕಾಂಗಿಯಾಗಿ ವಿದೇಹದಲ್ಲಿರುವ ವಾರ್ತೆ ಕಿವಿಗೆ ಬೀಳುತ್ತಲೇ ಅಲ್ಲಿಗೆ ಧಾವಿಸಿ, ಅವನ ಶಿಷ್ಯತ್ವ ವಹಿಸಿ ಗದಾಯುದ್ಧವನ್ನು ಕಲಿತ. ಕೃಷ್ಣನಿಲ್ಲದ ಆ ಸಮಯವನ್ನು ಗಮನಿಸಿದ ಅವನು ಬಲರಾಮನನ್ನು ಸುಭದ್ರೆಯನ್ನು ತನಗೇ ವಿವಾಹ ಮಾಡಿಕೊಡುವುದಾಗಿ ಅವನಿಂದ ಬೇಡಿ ಆ ರೀತಿಯ ವಚನವನ್ನು ಪಡೆದುಕೊಂಡ. ಅಣ್ಣನಾದ ಬಲರಾಮನ ಮಾತನ್ನು ಕೃಷ್ಣ ಮೀರಿ ನಡೆಯಲಾರ ಎಂಬುದೇ ಅವನ ವಿಚಾರವಾಗಿತ್ತು. ಬಲರಾಮನು ತನ್ನ ನೇಗಿಲ ಚಿಹ್ನೆಯಿಂದ ಒಪ್ಪುತ್ತಿದ್ದ ಬಲಗೈಯನ್ನು ಅವನ ಕೈಮೇಲೆ ಇರಿಸಿ 'ಆಗಲಿ' ಎಂದು ವಚನವಿತ್ತ. ಸುಭದ್ರೆಯ ಅಪಾರ ಸೌಂದರ್ಯದ ಆಕರ್ಷಣೆಯೊಂದಿಗೆ ಕೃಷ್ಣ-ಬಲರಾಮರಿಬ್ಬರೂ ತಂಗಿಯ ಕಾರಣದಿಂದಾಗಿ ತನ್ನ ವಶರಾಗಬಹುದೆಂಬ ದುರಾಸೆ ದುರ್ಯೋಧನನದಾಗಿತ್ತು.

ಸುಭದ್ರೆಯು ವಸುದೇವ ಹಾಗೂ ದೇವಕಿಯರ ಮಗಳು ; ರೋಹಿಣಿಯು ಅವಳನ್ನು ತನ್ನ ಮಗಳನ್ನಾಗಿ ಸ್ವೀಕರಿಸಿ ಬೆಳೆಸಿದ್ದಳು. ರಾಮಾಯಣಕಾಲದಲ್ಲಿ ಸೀತೆಯನ್ನು ಭಕ್ತಿಯಿಂದ ಹಗಲಿರುಳೂ ಸೇವಿಸುತ್ತಿದ್ದ ತ್ರಿಜಟೆ ಎಂಬ ರಾಕ್ಷಸಿಯೇ, ಆ ಪುಣ್ಯದಿಂದಾಗಿ ಕೃಷ್ಣನ ಪ್ರೀತಿಯ ತಂಗಿಯಾಗಿ ಜನಿಸಿದ್ದಳು. ಉಮಾದೇವಿಯ ಆವೇಶದಿಂದಾಗಿ ಸೌಂದರ್ಯದ ರಾಶಿಯೆನ್ನಿಸಿದ ಅವಳಿಗೆ 'ಸುಭದ್ರೆ[೧]' ಎಂದೇ ಹೆಸರಾಯಿತು.

೧. ಅಶೋಕವನದಲ್ಲಿದ್ದ ಸೀತಾಕೃತಿಯನ್ನು ಇತರ ರಾಕ್ಷಸಿಯರು ಪರಿಪರಿಯಾಗಿ ನೋಯಿಸುತ್ತಿದ್ದರೆ ಈ ತ್ರಿಜಟೆಯೊಬ್ಬಳು ಮಾತ್ರ ಭಕ್ತಿಯಿಂದ ಸೇವಿಸಿ ಹಿತವಚನದಿಂದ ಸಾಂತ್ವನಪಡಿಸುತ್ತಿದ್ದಳು ಎಂಬ ಉಲ್ಲೇಖ ರಾಮಾಯಣದಲ್ಲಿದೆ. ಅದರ ಫಲವಾಗಿ ಅವಳಿಗೆ ಇಂತಹ ಉತ್ತಮಜನ್ಮ ಪ್ರಾಪ್ತವಾಯಿತು. ಶ್ರೀರಾಮರೂಪದ ಹರಿಯ ಸೇವೆಯ ಫಲವಾಗಿ ಅವನ ಸೋದರಿ ಎನಿಸುವ ಭಾಗ್ಯ, ಸೀತೆಯ ಸೇವೆಯ ಫಲವಾಗಿ ಸೀತೆಯ ಅವತಾರರಾದ ರುಗ್ಮಿಣಿ-ಸತ್ಯಭಾಮೆಯರ ನಾದಿನಿ ಎನ್ನಿಸುವ ಭಾಗ್ಯ ಹಾಗೂ ಸೀತಾಕೃತಿಯಲ್ಲಿದ್ದ ಇಂದ್ರದೇವರ ಸೇವೆಯ ಫಲವಾಗಿ ಇಂದ್ರಾವತಾರನಾದ ಅರ್ಜುನನ ಪತ್ನಿಯಾಗುವ ಭಾಗ್ಯ ಅವಳಿಗೆ ಲಭಿಸಿದವು ಎಂದು ತಿಳಿಯಬೇಕು. ಅದರೊಂದಿಗೆ ಅವಳ ಮಗ ಅಭಿಮನ್ಯುವು ವೀರಾಗ್ರಣಿ ಎನ್ನಿಸು-

ಇಷ್ಟು ಕೆಲಸವನ್ನು ಮಾಡಿಕೊಂಡ ದುರ್ಯೋಧನ ಹಸ್ತಿನಾವತಿಗೆ ಮರಳಿದ. ಭಯದಿಂದಾಗಿ ಬೇರೆಡೆ ನೆಲೆಸಿದ್ದ ಅಕ್ರೂರ ಹಾಗೂ ಕೃತವರ್ಮರನ್ನು , ಹಾಗೆಯೇ ಬಲರಾಮನನ್ನು ಕರೆಸಿದ ಕೃಷ್ಣನು ಯಾದವರೆಲ್ಲರ ಎದುರಿನಲ್ಲಿ ಅಕ್ರೂರನಿಗೆ ಹೇಳಿದ – "ಅಕ್ರೂರ ! ಆ ಮಣಿ ನಿನ್ನಲ್ಲಿದೆ, ಅದನ್ನೀಗ ತೋರಿಸು" ಭಯಪಟ್ಟ ಅಕ್ರೂರ ಕೂಡಲೇ ಆ ಮಣಿಯನ್ನು ತಂದು ತೋರಿಸಿದ. ಬಲರಾಮ, ಉಗ್ರಸೇನ ಮತ್ತು ಜಾಂಬವತೀ [೧]ಇವರೆಲ್ಲ ಆ ಮಣಿಯ ಬಗ್ಗೆ ಆಸೆ ಹೊಂದಿರುವುದನ್ನು ತಿಳಿದಿದ್ದ ಕೃಷ್ಣ ಮತ್ತೆ ಅಕ್ರೂರನಿಗೆ ತಿಳಿಸಿದ. "ಈ ಮಣಿ ನಿನ್ನಲ್ಲಿಯೇ ಇರಲಿ, ಯಜ್ಞ ಹಾಗೂ ದಾನಶೀಲನಾದ ನಿನ್ನನ್ನು ಬಿಟ್ಟು ಅದು ಬೇರೆಡೆ ಇರುವುದು ತರವಲ್ಲ." ಕೃಷ್ಣನ ಬಗ್ಗೆ ತಪ್ಪಾಗಿ ತಿಳಿದದ್ದಕ್ಕೆ ಬಲರಾಮ ಬಹಳ ಪಶ್ಚಾತ್ತಾಪಪಟ್ಟ. ಮಣಿಯನ್ನು ಪಡೆದ ಅಕ್ರೂರನು ಯಜ್ಞಕರ್ಮಗಳಲ್ಲಿಯೇ ಅನವರತವೂ ನಿರತನಾದ ; ಕೃಷ್ಣನು ಪಾಂಡವರ ಬಳಿಗೆ ಹೊರಟ.

## ಶ್ರೀಕೃಷ್ಣನ ವಿವಾಹಗಳು

ಅನೇಕ ತಿಂಗಳುಗಳು ಇಂದ್ರಪ್ರಸ್ಥದಲ್ಲಿ ವಾಸಿಸಿದ ಕೃಷ್ಣ ಒಮ್ಮೆ ಅರ್ಜುನನೊಂದಿಗೆ ಬೇಟೆಗೆಂದು ಹೊರಟ. ಅನೇಕ ರೀತಿಯ ಮೃಗಗಳನ್ನು ಸಂಹರಿಸುತ್ತ ಓಡಾಡುತ್ತಿರುವಾಗ ಯಮುನಾತೀರದಲ್ಲಿ ಯಮುನೆಯ ತಂಗಿಯಾದ ಕಾಳಿಂದಿಯನ್ನು ಕೃಷ್ಣ ಕಂಡ. ಸೂರ್ಯನ ಮಗಳಾದ ಅವಳು ಕೃಷ್ಣನ ಮಡದಿಯಾಗಬೇಕೆಂಬ ಬಯಕೆಯಿಂದ ತಪೋನಿರತಳಾಗಿದ್ದಳು. ಅರ್ಜುನನು ಅವಳನ್ನು ಪ್ರಶ್ನಿಸಿದಾಗ ತನ್ನೆಲ್ಲ ವಿವರಗಳನ್ನು ಅವಳು ತಿಳಿಸಲು, ಕೃಷ್ಣ ಅವಳನ್ನು ತನ್ನ ಪತ್ನಿಯನ್ನಾಗಿ ಸ್ವೀಕರಿಸಿದ. ಅನಂತರ ಕೃಷ್ಣನು ನಗ್ನಜಿತ್ ರಾಜನ ಮನೆಗೆ ಹೋಗಿ ಅಲ್ಲಿ ನಡೆದಿದ್ದ ಸ್ವಯಂವರ ಮಹೋತ್ಸವದಲ್ಲಿ ಶಿವನ ವರದಿಂದಾಗಿ ಅಜೇಯರೆನ್ನಿಸಿದ ಗೂಳಿಗಳ ರೂಪದ ಏಳುಜನ ರಾಕ್ಷಸರನ್ನು ನಿಗ್ರಹಿಸಿದ. ಆ ರಾಜನ ಪುತ್ರಿಯಾದ ನೀಲಾದೇವಿಯು ಕೃಷ್ಣನ ಪತ್ನಿಯಾದಳು. ಈ ಹಿಂದೆಯೇ ಗೋಪಕನ್ಯೆಯಾಗಿ ಜನಿಸಿದ್ದ ನೀಲಾದೇವಿಯೂ ಇವಳೇ. ಎರಡು ರೂಪದಲ್ಲಿ ಹುಟ್ಟಿದ್ದ ಇವಳು ತನ್ನ ಆ ಮೊದಲ ರೂಪವನ್ನು ಈ ರೂಪದಲ್ಲಿ ಪ್ರವೇಶ ಮಾಡಿಸಿ, ಅನಂತರ ಒಂದೇ ರೂಪದಿಂದ ಇರತೊಡಗಿದಳು. ತಂದೆಯ ತಂಗಿಯ ಮಗಳಾದ

---

ವಂತಾಯಿತು. ಅರ್ಜುನನು ಗೀತಾಮೃತ ಪಾನಮಾಡಿದ ಭಾಗ್ಯಶಾಲಿಯಾದರೆ, ಅಭಿಮನ್ಯುವಿನ ಪುತ್ರ ಪರೀಕ್ಷಿತ್‌ರಾಜನು ಶ್ರೀಮದ್ಭಾಗವತವನ್ನು ಶ್ರವಣಮಾಡಿದ ಮಹನೀಯನೆನ್ನಿಸಿದ ; ಅವನ ಮಗ ಜನಮೇಜಯರಾಜನು ಮಹಾಭಾರತವನ್ನು ಶ್ರವಣಮಾಡಿದ ಪುಣ್ಯಶಾಲಿ ಎನ್ನಿಸಿದ. ಹೀಗೆ ತ್ರಿಜಟೆಯ ಸೇವೆ ಚಿತ್ರವಿಚಿತ್ರವಾದ ಫಲವನ್ನು ನೀಡಿತು.

೧. ಮೇಲ್ನೋಟಕ್ಕೆ ಸತ್ಯಭಾಮೆಯೂ ಅದನ್ನು ಬಯಸಿದ್ದಳೆಂಬಂತೆ ತೋರುವುದು. ಆದರೆ ವಸ್ತುಸ್ಥಿತಿ ಹಾಗಲ್ಲ. ಸೂರ್ಯನಿಂದ ಅದನ್ನು ಪಡೆದುಕೊಂಡಿದ್ದು ಅವಳ ತಂದೆ ಸತ್ರಾಜಿತರಾಜ. ಅದರಿಂದಾಗಿ ಅದನ್ನು ಇರಿಸಿಕೊಳ್ಳುವ ಹಕ್ಕು ಅವಳದೇ ಹೊರತು ಇತರರದಲ್ಲ ಎಂಬ ಕಾರಣದಿಂದ ಈ ಮಾತು ಬಂದಿದೆಯೇ ಹೊರತು ಸತ್ಯಭಾಮಾದೇವಿಗೆ ಆ ಮಣಿಯನ್ನು ಹೊಂದುವ ಅಪೇಕ್ಷೆ ಸರ್ವಥಾ ಇರಲಿಲ್ಲ ಎಂದು ತಿಳಿಯಬೇಕು.

ಮಿತ್ರವಿಂದೆಯೂ ಸಹ ರಾಜರ ಮಧ್ಯದಲ್ಲಿ ಕೃಷ್ಣನ ಕೊರಳಿಗೆ ಮಾಲೆ ಹಾಕಿ, ಅವನ ಪತ್ನಿಯಾದಳು. ವಿಂದ ಮತ್ತು ಅನುವಿಂದ ಎಂಬ ಅವಳ ಸಹೋದರರು, ಅವಳನ್ನು ದುರ್ಯೋಧನನಿಗೆ ಕೊಡಬೇಕೆಂಬ ತಮ್ಮ ಬಯಕೆ ವಿಫಲವಾದುದಕ್ಕಾಗಿ ಕೃಷ್ಣನನ್ನು ದ್ವೇಷಿಸತೊಡಗಿದರು. ಕೃಷ್ಣನು ಅವರ ಸಹಾಯಕ್ಕೆ ಬಂದ ಎಲ್ಲ ರಾಜರನ್ನು ಸಹ ಸೋಲಿಸಿ, ಅವಳೊಂದಿಗೆ ಹೊರಟ. ತಂದೆಯ ತಂಗಿಯ ಮತ್ತೊಬ್ಬ ಮಗಳಾದ ಭದ್ರಾದೇವಿಯನ್ನು ಕೃಷ್ಣನು ಪರಿಗ್ರಹಿಸಿದ. ಅವಳ ಸಹೋದರರಾದ ಐವರು ಕೇಕಯರು ತಾವೇ ಸ್ವತಃ ಕೃಷ್ಣನಿಗೆ ಅವಳನ್ನು ಒಪ್ಪಿಸಿದರು. ಆ ಐವರೂ ವಿಶ್ವೇದೇವತೆಗಳ ಅವತಾರ. ಅವರು ಕೃಷ್ಣ ಹಾಗೂ ಪಾಂಡವರಲ್ಲಿ ತುಂಬಾ ಭಕ್ತಿಯನ್ನು ಹೊಂದಿದ್ದರು ; ಅವಳ ತಂದೆ ಶೈಬ್ಯ ಎಂಬವನು ಋಭು ಎಂಬ ದೇವತೆಯ ಅವತಾರನಾಗಿದ್ದ ಸುಜೀವಿ.

## ಲಕ್ಷಣಾ ಸ್ವಯಂವರ

ಲಕ್ಷಣಾದೇವಿಯ ಸ್ವಯಂವರವೂ ಸಹ ದ್ರೌಪದೀಸ್ವಯಂವರದಂತೆ ಲಕ್ಷ್ಯವೇಧದ ಪಣವನ್ನೇ ಹೊಂದಿತ್ತು. ಮದ್ರದೇಶಕ್ಕೆ ಸೇರಿದ್ದ ಅವಳ ತಂದೆ ಸ್ವಯಂವರಕ್ಕಾಗಿ ಶಿವನಿಂದ ಪಿನಾಕಧನುಸ್ಸನ್ನೇ ಪಡೆದುಕೊಂಡಿದ್ದ. ಗುರಿಯು ಮಾತ್ರ ಕಾಣದಂತೆ ಮುಚ್ಚಲ್ಪಟ್ಟಿದ್ದ ಅದಕ್ಕೆ ದ್ವಾರ ಮೇಲ್ಭಾಗದಲ್ಲಿ ಇತ್ತು. ತುಂಡು ಬಾಣದಿಂದ ಆ ಗುರಿಯನ್ನು ಹೊಡೆಯಬೇಕಿತ್ತು. ಆದ್ದರಿಂದಾಗಿ ಅದು ದ್ರೌಪದೀ ಸ್ವಯಂವರದ ಪಣಕ್ಕಿಂತ ತುಂಬಾ ಕಠಿಣರೀತಿಯದೇ ಆಗಿ, ಅಶಕ್ಯವೆನ್ನಿಸಿತ್ತು. ಜರಾಸಂಧಾದಿ ಎಲ್ಲ ರಾಜರ ಗುಂಪೂ ಮತ್ತೆ ಅಲ್ಲಿಗೆ ಆಸೆಯಿಂದ ಧಾವಿಸಿ ಬಂದಿತು. ಪಾಂಡವರೂ ಅಲ್ಲಿಗೆ ಬಂದಿದ್ದರಾದರೂ, ಅವರ ಉದ್ದೇಶ ಸ್ವಯಂವರದ ವೀಕ್ಷಣೆ ಮಾತ್ರವೇ ಆಗಿತ್ತು. ಕರ್ಣನೊಂದಿಗೆ ದುರ್ಯೋಧನಾದಿಗಳೂ ಅಲ್ಲಿಗೆ ಬಂದು ಸೇರಿದರು. ಧನುಸ್ಸನ್ನು ಕಟ್ಟುವ ಯತ್ನದಲ್ಲಿ ಅದರ ಹೊಡೆತದಿಂದ ಅನೇಕರು ಕೆಳಕ್ಕೆ ಉರುಳಿದರು. ಅದನ್ನು ಅಲುಗಾಡಿಸಲೂ ಸಹ ಕೆಲವರ ಶಕ್ತಿ ಸಾಲದಾಯಿತು. ದುರ್ಯೋಧನ, ಜರಾಸಂಧ ಮತ್ತು ಕರ್ಣ ಈ ಮೂವರು ಧನುಸ್ಸು ಕಟ್ಟುವ ಮಟ್ಟಿಗೆ ಯಶಸ್ವಿಯಾದರೂ ಲಕ್ಷ್ಯದ ತಲೆ ಬುಡ ಯಾವುದೂ ಅವರಿಗೆ ತಿಳಿಯಲೇ ಇಲ್ಲ. ಅರ್ಜುನ ತನ್ನ ಸಾಮರ್ಥ್ಯವನ್ನು ತಿಳಿಯಪಡಿಸುವ ಉದ್ದೇಶದಿಂದ ಮಾತ್ರ ಬಿಲ್ಲನ್ನು ಕಟ್ಟಿದ ; ಲಕ್ಷ್ಯವನ್ನು ಸಹ ಗುರುತಿಸಿ ತೋರಿಸಿದ. ಆದರೆ ತನಗೆ ಅಪೇಕ್ಷೆ ಇಲ್ಲವೆಂಬ ಕಾರಣದಿಂದ ಬಾಣವನ್ನು ಹೂಡಲೇ ಇಲ್ಲ. ಕೃಷ್ಣನಿಗೇ ಅವಳು ಮೀಸಲು ಎಂದು ತಿಳಿದು ಅರ್ಜುನ ಹಾಗೆ ಮಾಡಿದ. ಭೀಮ ಮಾತ್ರ ಲಕ್ಷ್ಯದತ್ತ ಯಾವ ರೀತಿಯಿಂದಲೂ ಗಮನವನ್ನೇ ಹರಿಸಲಿಲ್ಲ. ಪರಮಾತ್ಮನಿಗೆ ಯೋಗ್ಯವಾದ ವಸ್ತುವಿನತ್ತ ದೃಷ್ಟಿ ಹಾಯಿಸುವುದೂ ಸಹ ಅಪರಾಧವಾದೀತೆಂಬುದೇ ಅವನ ಶುದ್ಧಮನಸ್ಸಿನ ವಿಚಾರವಾಗಿತ್ತು. ಕೃಷ್ಣನು ಲೀಲಾ-ಜಾಲವಾಗಿ ಧನುಸ್ಸನ್ನು ಹೆದೆಯೇರಿಸಿ, ತುಂಡು ಬಾಣದಿಂದ ಲಕ್ಷ್ಯವನ್ನು ಭೇದಿಸಿದ. ಅಚಿಂತ್ಯ-ಶಕ್ತಿಯ ಪರಮಾತ್ಮನೇ ಆದ ಅವನಿಗೆ ಇದಾವ ಲೆಕ್ಕ ! ದೇವದುಂಧುಭಿಗಳು ಮೊಳಗಿದವು. ಗಗನದಿಂದ ಪುಷ್ಪವೃಷ್ಟಿ ಸುರಿಯಿತು. ಬ್ರಹ್ಮಾದಿದೇವತೆಗಳೆಲ್ಲ ಪರಮಾತ್ಮನ ಈ ಮದುವೆ-

ಯಾಟದ ಸಂಭ್ರಮವನ್ನು ಹಾಡಿ ಹೊಗಳಿದರು. ರಾಜಕುಮಾರಿ ಲಕ್ಷಣೆಯು ಕೃಷ್ಣನ ಕೊರಳಲ್ಲಿ ಮಾಲೆಯನ್ನು ಹಾಕಿ, ಪಕ್ಕದಲ್ಲಿ ನಿಂತಳು. ದುಷ್ಟಬುದ್ಧಿಯ ರಾಜರೆಲ್ಲ ಸಮುದ್ರವನ್ನು ಬತ್ತಿಸಲು ಯತ್ನಿಸುವಂತೆ ಆಯುಧಗಳನ್ನು ತೆಗೆದುಕೊಂಡು ಕೃಷ್ಣನನ್ನು ಎದುರಿಸುವ ಸಾಹಸಕ್ಕೆ ಮತ್ತೆ ಇಳಿದರು. ಸರ್ವಶಕ್ತಿಯಾದ ಪರಮಾತ್ಮನಿಗೆ ಅವರನ್ನೆಲ್ಲ ಹಿಮ್ಮೆಟ್ಟಿಸಲು ಎಷ್ಟು ಸಮಯ ತಾನೇ ಬೇಕಾದೀತು ! ಕ್ಷಣಮಾತ್ರದಲ್ಲಿ ಜರಾಸಂಧಾದಿಗಳೆಲ್ಲ ಅಲ್ಲಿಂದ ಪಲಾಯನಗೈದರು. ಭೀಮಾ-ರ್ಜುನರೊಂದಿಗೆ ಲಕ್ಷಣೆಯ ಸಮೇತವಾಗಿ ಕೃಷ್ಣನು ತನ್ನ ಪಟ್ಟಣಕ್ಕೆ ಮರಳಿದ.

ಈ ಎಂಟು ಜನರೇ ಶ್ರೀಕೃಷ್ಣನ ಅಷ್ಟಮಹಾಮಹಿಷಿಯರು ; ಪ್ರತಿಯೊಬ್ಬರೂ ಲೋಕ-ಸುಂದರಿಯರು, ಕೃಷ್ಣನಿಗೆ ಪ್ರಿಯರಾದವರು. ಚೇತನಪ್ರಕೃತಿಯಾದ ಮಹಾಲಕ್ಷ್ಮಿಯೇ ರುಗ್ಮಿಣಿ ಮತ್ತು ಸತ್ಯಭಾಮೆಯೆಂಬ ಹೆಸರಿನ ಎರಡು ರೂಪಗಳಿಂದ ಅವತರಿಸಿದ್ದಳು. ಉಳಿದವರೆಲ್ಲ ಈ ಲಕ್ಷ್ಮಿಯ ಆವೇಶದಿಂದ ಕೂಡಿದವರು ; ಅವರಲ್ಲಿ ಜಾಂಬವತೀ ಮುಖ್ಯಳಾದವಳು ; ಅವಳು ಬಲರಾಮನಷ್ಟೇ ಕೃಷ್ಣನಿಗೆ ಪ್ರಿಯಳಾಗಿದ್ದಳು. ಉಳಿದವರೆಲ್ಲ ಅವಳಿಗಿಂತ ಸ್ವಲ್ಪ ಕಡಿಮೆ-ಯಾದವರು. ಲಕ್ಷ್ಮಿಯ ಆವೇಶ ತುಂಬಾ ಹೆಚ್ಚಾಗಿ ಅವರಲ್ಲಿ ಅಭಿವ್ಯಕ್ತವಾದಾಗ, ಅವರಲ್ಲಿ ಕೃಷ್ಣ ಅತಿಶಯವಾದ ಪ್ರೀತಿಯನ್ನು ತೋರಿಸುತ್ತಿದ್ದ. ರಮೆಯ ಸನ್ನಿಧಾನ ಕಡಿಮೆಯಾದಾಗ ಅವರೆಲ್ಲ ಪ್ರದ್ಯುಮ್ನನಿಗಿಂತ ಇಪ್ಪತ್ತುಗುಣ ಹಿರಿಯರೆನ್ನಿಸುತ್ತಿದ್ದರು. ಅವರೆಲ್ಲ ಅನಾದಿಕಾಲದಿಂದಲೂ ಕೃಷ್ಣನ ಹೊರತು ಇತರರ ಪತ್ನಿಯರೆನ್ನಿಸುವುದಿಲ್ಲ. ಅವರೆಲ್ಲರೊಂದಿಗೆ ಕೂಡಿಕೊಂಡು ಕೃಷ್ಣ ದ್ವಾರಾವತಿಯಲ್ಲಿ ಕ್ರೀಡಿಸಿದ.

## ಧನ್ಯಾಶ್ಚರ್ಯಾಖ್ಯಾನ

ಒಮ್ಮೆ ಎಲ್ಲ ರಾಜರೂ ಕೃಷ್ಣನನ್ನು ನೋಡುವ ನಿಮಿತ್ತ ರೈವತಪರ್ವತದಲ್ಲಿ ನೆರೆದರು. ದುರ್ಯೋಧನಾದಿಗಳೂ ಮತ್ತು ಪಾಂಡವರೂ ಸಹ ಬಂದಿದ್ದರು. ರೈವತಪರ್ವತದ ಮೇಲೆ ರುಗ್ಮಿಣಿಯೊಂದಿಗೆ ಕಾಣಿಸಿಕೊಂಡ ಕೃಷ್ಣ , ದಿವ್ಯಾಸನದ ಮೇಲೆ ಮಂಡಿಸಿದ. ಎಲ್ಲ ರಾಜರೂ ಅವನಿಗೆ ನಮಸ್ಕಾರವನ್ನು ಸಮರ್ಪಿಸಿದರು. ಆ ಸಮಯದಲ್ಲಿ ಆಕಾಶಮಾರ್ಗವಾಗಿ ಕಾಣಿಸಿ-ಕೊಂಡ ನಾರದರು, ಕೃಷ್ಣನನ್ನು ಕುರಿತು, ''ಪ್ರಭು ! ನೀನೇ ಸರ್ವೋತ್ತಮ, ನಿನಗೆ ಸದೃಶ-ನಾದವನು ಯಾರೂ ಇಲ್ಲ'' ಎಂಬ ಅರ್ಥದಲ್ಲಿ ''ಆಶ್ಚರ್ಯ ! ಧನ್ಯ !'' ಎಂಬ ಎರಡು ಮಾತುಗಳನ್ನು ಉಚ್ಚರಿಸಿದರು. ಕೃಷ್ಣನು ಆ ಮಾತಿಗೆ ''ದಕ್ಷಿಣಾ ಸಮೇತನಾಗಿ'' ಎಂಬುದನ್ನು ಸೇರಿಸಿದ. ಕುತೂಹಲಗೊಂಡ ರಾಜಸಮೂಹ ಅದನ್ನು ವಿವರಿಸಲು ಪ್ರಾರ್ಥಿಸಿಕೊಳ್ಳಲು, ಕೃಷ್ಣನ ಅಪ್ಪಣೆಯಂತೆ ನಾರದರು ನುಡಿದರು : ''ಗಂಗೆಯಲ್ಲಿ ದೊಡ್ಡ ಕೂರ್ಮವೊಂದನ್ನು ಕಂಡು - ''ನೀನು ದೊಡ್ಡವನು, ನಿನಗಿಂತ ಅಧಿಕರಿಲ್ಲ'' ಎಂದೆ''. ಅದಕ್ಕೆ ಆ ಕೂರ್ಮವು, ತನಗಿಂತ ಗಂಗೆಯೇ ದೊಡ್ಡವಳು ಎಂದಿತು. ಗಂಗೆಯು ವರುಣನನ್ನು, ವರುಣನು ತನ್ನಂತಹ ದೇವತೆಗಳನ್ನು ಧರಿಸಿರುವ ಪೃಥಿವಿಯನ್ನು, ಅವಳು ತನಗೆ ಹೆಚ್ಚು ರಕ್ಷಣೆ ಕೊಟ್ಟ ಪರ್ವತ ಎಂಬ ಹೆಸರಿನ ಗರುಡ ಶೇಷ ರುದ್ರರನ್ನು, ಅವರೆಲ್ಲ ಬ್ರಹ್ಮದೇವರನ್ನು, ಅವರು ವಿಷ್ಣುಪತ್ನಿಯಾದ

ಪ್ರಕೃತಿಯನ್ನು , ಧನ್ಯ, ಆಶ್ಚರ್ಯ ಎಂದು ತಿಳಿಸಿದರು. ಬಹುರೂಪಳಾದ ಮಹಾಲಕ್ಷ್ಮಿಯು ''ನಾನು 'ಜ್ಞ' ಎಂಬ ನಾರಾಯಣನಿಂದ ಯುಕ್ತಳಾದಾಗ ಮಾತ್ರ, ಯಜ್ಞಕ್ರಿಯಾಭಿಮಾನಿನಿ-ಯಾಗಿ, ಅವನ ಸನ್ನಿಧಾನದಿಂದಾಗಿ 'ಯಜ್ಞಾ' ಎಂಬ ಹೆಸರನ್ನು ಹೊಂದುವೆನು. ಅವನಿಂದ ಆವಿಷ್ಟಳಾಗಿ ಅವನ ತೊಡೆಯ ಮೇಲೆ ಕುಳಿತ ಯಜ್ಞನಾಮಕಳಾದ ಅವಳು ನನಗಿಂತ ಶ್ರೀಹರಿಯು ಅತ್ಯಂತ ಉತ್ತಮನು ; ಅವನಿಗೆ ಸಮನಾದವನೇ ಇಲ್ಲ; ಇನ್ನು ಮಿಗಿಲಾದವನು ಎಲ್ಲಿದ್ದಾನು? ಎಲೈ ನಾರದಮುನಿಯೇ ! ಇದು ಸತ್ಯವಾದದು ; ಸರ್ವಥಾ ಅಸತ್ಯವಲ್ಲ'' ಎಂದು ತಿಳಿಸಿದಳು.

## ಕೃಷ್ಣನ ಸರ್ವೋತ್ತಮತ್ವ

ಹೀಗೆ ಹೇಳಲ್ಪಟ್ಟ ನಾನು ವಿಷ್ಣುವಿನ ಅವತಾರಗಳಲ್ಲಿ ಯಾವುದೇ ವಿಶೇಷವೂ ಇಲ್ಲ ಎಂಬ ಕಾರಣದಿಂದ, ಈ ಕೃಷ್ಣನನ್ನು 'ನೀನು ಸರ್ವೋತ್ತಮ' ಎಂದು ನುಡಿದೆ ; ಅದಕ್ಕೆ ಕೃಷ್ಣನು, ''ನಾನು ಲಕ್ಷ್ಮಿಗಿಂತಲೂ ಯಾವಾಗಲೂ ಉತ್ತಮನು ಮಾತ್ರವೇ ಅಲ್ಲ, ನನ್ನ ವಾಮಾರ್ಧ-ರೂಪಳಾಗಿ ನಾನು ಬಲಭಾಗದಲ್ಲಿರುವ ಕಾರಣದಿಂದಾಗಿ ದಕ್ಷಿಣಾ ಎಂಬ ಹೆಸರನ್ನು ಹೊಂದಿರುವ ಅವಳು ದಕ್ಷಿಣಾಮಾನಿನಿಯಾಗಿ ನನ್ನ ಅರ್ಧಭಾಗದಲ್ಲಿ ಬಹುರೂಪಳಾಗಿರುವಳು. ನನ್ನ ವಾಮಾರ್ಧವು ಅವಳಲ್ಲಿ ಪ್ರವಿಷ್ಟವಾಗಿರುವುದರಿಂದ ನನಗೆ 'ಅರ್ಧನಾರಾಯಣ' ಎಂದೂ ಹೆಸರಿದೆ. ಈ ವಿಶೇಷ ದೆಸೆಯಲ್ಲೂ ಸಹ ನಾನು ಉತ್ತಮನೂ, ಪೂರ್ಣನೂ ಆಗಿರುವೆನು. ನನಗೆ ಸಮರೂ, ಉತ್ತಮರೂ ಸರ್ವಥಾ ಇಲ್ಲ'' ಎಂಬರ್ಥದಲ್ಲಿ ''ದಕ್ಷಿಣಾಭಿಃ ಸಹ'' ಎಂದು ನುಡಿದ. ದಕ್ಷಿಣೆ ಉಳಿದೆಲ್ಲಕ್ಕಿಂತಲೂ ಶ್ರೇಷ್ಠ. ಅದಕ್ಕಿಂತಲೂ ಶ್ರೇಷ್ಠನೇ ಪರಮಾತ್ಮ ಎಂಬುದೇ ಇಲ್ಲಿಯ ಮುಖ್ಯವಾದ ಅರ್ಥ. ಆ ದಕ್ಷಿಣೆಯೇ ರುಗ್ಮಿಣಿಯು, ಯಜ್ಞನಾಮಕ ಪರಮಾತ್ಮನೇ ಕೃಷ್ಣನು. ಈ ಕೃಷ್ಣನ ಸಾಮರ್ಥ್ಯವನ್ನು ನೀವೆಲ್ಲ ತಿಳಿದೇ ಇರುವಿರಿ. ಯುದ್ಧದಲ್ಲಿ ತನ್ನ ಸಾಮರ್ಥ್ಯವನ್ನು ನೋಡಬಯಸಿದ ಕುಂತಿಗೆ ಹಿಂದೊಮ್ಮೆ ಕೃಷ್ಣ , ಪಾಂಡವರು, ಕೌರವರು, ಭೀಷ್ಮ, ದ್ರೋಣ, ಅಶ್ವತ್ಥಾಮ, ಕೃಪ, ಕರ್ಣ ಮೊದಲಾದ ಎಲ್ಲ ರಾಜರನ್ನು ಒಟ್ಟಾಗಿಯೇ ಕ್ಷಣಾರ್ಧದಲ್ಲಿ ನಿರಾಯುಧರನ್ನಾಗಿ ಮಾಡಿ ತೋರಿಸಿದ್ದ. ''ಕೃಷ್ಣನನ್ನು ಎದುರಿಸೆನು'' ಎಂಬುದಾಗಿ ಭೀಮನ ವ್ರತವಿರುವುದರಿಂದ ಅವನು ಕೃಷ್ಣನನ್ನು ನಮಸ್ಕರಿಸಿ ಅವನ ರಥದ ಚಕ್ರವನ್ನು ಮಾತ್ರ ಹಿಡಿದ. ಅದನ್ನು ಕೃಷ್ಣ ಕ್ಷಣಾರ್ಧದಲ್ಲಿ ಬಿಡಿಸಿಕೊಂಡ ; ಹೀಗೆ ಅವರೆಲ್ಲ ಪರಾಜಿತರಾದರು. ಆಗ ಎಲ್ಲರೂ ವಿಸ್ಮಯದಿಂದ ಕೃಷ್ಣನಿಗೆ ನಮಸ್ಕರಿಸಿದರು. ಕುಂತಿಯೂ ಪ್ರಣಾಮ ಸಲ್ಲಿಸಿದಳು. ಇಂತಹ ಅದ್ಭುತಗಳನ್ನು ಕೃಷ್ಣನಲ್ಲಿ ಸಹಸ್ರಸಂಖ್ಯೆಯಲ್ಲಿ ನೀವೆಲ್ಲ ಕಂಡಿರುವಿರಿ. ಆದ್ದರಿಂದಲೇ ಇವನು ಅದ್ಭುತ, ಉತ್ತಮ'' ಎಂದು ಅವರು ವಿವರಿಸಿದರು. ಆಗ ಎಲ್ಲರೂ ಕೃಷ್ಣನಿಗೆ ಸಾಷ್ಟಾಂಗವೆರಗಿದರು. ವಾಯುವಿನ ಅಪ್ಪಣೆಯಂತೆ ವಾಯುಶಿಷ್ಯರಾದ ಆ ನಾರದರು 'ಅದೆಲ್ಲವೂ ಸತ್ಯ' ಎಂದು ನುಡಿದು ಕೃಷ್ಣರುಗ್ಮಿಣಿಯರನ್ನು ಪೂಜಿಸಿ, ರುಗ್ಮಿಣಿಯ ಕೈಯಲ್ಲಿ ಪಾರಿಜಾತದ ಪುಷ್ಪವೊಂದನ್ನು ಸಮರ್ಪಿಸಿ, ಬ್ರಹ್ಮಲೋಕಕ್ಕೆ ತೆರಳಿದರು.

## ಪಾರಿಜಾತ ಪ್ರಸಂಗ

ರುಗ್ಮಿಣಿ ಹಾಗೂ ಸತ್ಯಭಾಮೆಯರು ಸಾಕ್ಷಾತ್ ಮಹಾಲಕ್ಷ್ಮಿಯ ಅವತಾರ ; ಶ್ರೀಹರಿಯ ಕೃಷ್ಣರಾಮಾದಿರೂಪಗಳು ಹೇಗೋ ಹಾಗೆ ; ಅವರಲ್ಲಿ ಲವಲೇಶ ಬೇಧವೂ ಇಲ್ಲ. ಆದರೂ ಸತ್ಯಭಾಮೆಯು ಸ್ತ್ರೀಸ್ವಭಾವವನ್ನು ಪ್ರಕಟಪಡಿಸುವ ಉದ್ದೇಶದಿಂದ ಕೋಪಗೊಂಡವಳಂತೆ ನಟಿಸಿದಳು. ಸಭೆಗೆ ತನ್ನನ್ನು ಬಿಟ್ಟು ರುಗ್ಮಿಣಿಯನ್ನು ಕರೆದೊಯ್ದದ್ದು, ನಾರದ ಋಷಿ ಅವಳನ್ನು ಸ್ತುತಿಸಿದ್ದು, ಜೊತೆಗೆ ಅದ್ಭುತಪುಷ್ಪವನ್ನು ಕೊಟ್ಟಿದ್ದು ಅವಳ ಕೋಪಾಭಿನಯಕ್ಕೆ ಕಾರಣ-ವಾಗಿದ್ದವು. ಕೋಪತಪ್ತಳಂತೆ ಕಾಣುತ್ತಿದ್ದ ಅವಳ ಜೊತೆ ಕೃಷ್ಣ ಕಾಮಿಪುರುಷನಂತೆ ವರ್ತಿಸುತ್ತ ಸಮಾಧಾನಪಡಿಸಿ – ''ಚಿಂತಿಸದಿರು ! ನಿನಗೆ ಪಾರಿಜಾತ ವೃಕ್ಷವನ್ನೇ ತಂದುಕೊಡುವೆ'' ಎಂದು ವಚನವಿತ್ತ. ಆ ವೇಳೆಗೆ ಅಲ್ಲಿಗೆ ದೇವತೆಗಳ ಸಮೇತನಾಗಿ ಇಂದ್ರನು ಆಗಮಿಸಿದ ; ಅವನನ್ನು ಯುದ್ಧದಲ್ಲಿ ನರಕಾಸುರ ಸೋಲಿಸಿದ್ದಲ್ಲದೆ, ಅವನ ತಾಯಿಯಾದ ಅದಿತಿಯ ಕರ್ಣಕುಂಡಲ-ಗಳನ್ನು ಸಹ ಅಪಹರಿಸಿದ್ದ. ಇಂದ್ರನ ಪ್ರೇರಣೆಯಂತೆ ಬದರಿಯಿಂದ ಮುನಿಗಳೂ ತಂಡ-ತಂಡವಾಗಿ ಕೃಷ್ಣನ ಬಳಿಗೆ ಬಂದರು. ಅವರೆಲ್ಲ ವೇದಮಂತ್ರಗಳಿಂದ ಕೃಷ್ಣನನ್ನು ಸ್ತುತಿಸಿ, ನರಕಾ-ಸುರನನ್ನು ಸಂಹರಿಸಲು ಕೃಷ್ಣನನ್ನು ಪ್ರಾರ್ಥಿಸಿಕೊಂಡರು. ಹೀಗೆ ಇಂದ್ರನಿಂದಲೂ, ದೇವತೆ-ಗಳಿಂದಲೂ, ಮುನಿಗಳಿಂದಲೂ ಪ್ರಾರ್ಥಿಸಲ್ಪಟ್ಟ ಕೃಷ್ಣನು ಪಕ್ಷಿರಾಜನಾದ ಗರುಡನನ್ನು ಸ್ಮರಿಸಲು, ಅವನು ಆದರದಿಂದ ಬಳಿ ಸಾರಿ ನಮಸ್ಕರಿಸಿ, ಮುಂದುಗಡೆ ನಿಂತುಕೊಂಡ. ಸತ್ಯ-ಭಾಮೆಯೊಂದಿಗೆ ಅವನನ್ನು ಏರಿದ ಕೃಷ್ಣ ವಾಯವ್ಯ ದಿಕ್ಕಿನಲ್ಲಿ ನರಕಾಸುರನ ವಧೆಗೆಂದು ಹೊರಟ. ಆ ಸಮಯದಲ್ಲಿ ಸತ್ಯಭಾಮೆಯು ಲೋಕಶಿಕ್ಷಣಕ್ಕಾಗಿ ಭೀಮದ್ವಾದಶೀವ್ರತವನ್ನು ಮಾಡಿ, ಕೃಷ್ಣನ ಪ್ರೀತಿಗಾಗಿ ಕೋಟಿಧಾರಾ ಜಲವನ್ನು ಧರಿಸಿದಳು. ಸ್ವಲ್ಪದೂರ ಕೃಷ್ಣನನ್ನು ಹಿಂಬಾಲಿಸಿದ ಇಂದ್ರನು ಅವನ ಅಪ್ಪಣೆಯಂತೆ ತನ್ನ ಲೋಕಕ್ಕೆ ಮರಳಿದ.

## ನರಕಾಸುರನ ವಧೆ

ನರಕಾಸುರನು ಬ್ರಹ್ಮದೇವರ ''ಶಸ್ತ್ರ ಹಿಡಿದಿರುವವರೆಗೆ ನೀನೆಂದೂ ಸೋಲಲಾರೆ '' ಎಂಬ ವರದಿಂದ ಅವಧ್ಯನಾಗಿ ಅಜೇಯನೂ ಆಗಿದ್ದ. ಅವನ ಮಂತ್ರಿಗಳಿಗೂ ಅಂತಹುದೇ ವರವನ್ನು ಕೊಟ್ಟಿದ್ದ ಬ್ರಹ್ಮದೇವರು, ವರಾಹ ಹಾಗೂ ಭೂದೇವಿಯರ ಮಗನಾದ ಆ ನರಕನಿಗೆ ಅವರನ್ನೆಲ್ಲ ಗೆಲ್ಲುವ ವರವನ್ನೂ ಕೊಟ್ಟಿದ್ದರು. ಅದರೊಂದಿಗೆ ದುರ್ಗಮವಾದ ಪ್ರಾಗ್ಜ್ಯೋತಿಷ ಎಂಬ ಪುರವನ್ನೂ ಸಹ ಅವನಿಗೆ ಕೊಟ್ಟಿದ್ದರು. ಹೊರಗೆ ಗಿರಿದುರ್ಗವೂ, ಅದರ ಒಳಗೆ ಪಾನೀಯದುರ್ಗವೂ, ಅದರಲ್ಲಿ ಮುರನ ಪಾಶದುರ್ಗವೂ ಇದ್ದವು. ಆ ಮುರನ ಪಾಶಗಳ ಸಂಖ್ಯೆ ಆರುಸಾವಿರ ; ಅವು ಕತ್ತಿಯ ಅಲಗಿನಂತೆ ಭಯಂಕರವಾಗಿದ್ದವು. ಆರಾಧಿತರಾದ ಬ್ರಹ್ಮದೇವರು ಆ ದುರ್ಗಗಳನ್ನೆಂದೂ ಭೇದಿಸದಂತೆಯೂ, ದಾಟದಂತೆಯೂ ಅವನಿಗೆ ವರ-ವಿತ್ತಿದ್ದರು. ಪೀಠ, ಮುರ, ನಿಕುಂಭ, ಹಯಗ್ರೀವ ಮತ್ತು ಪಂಚಜನರೆಂಬ ಅವನ ಮಂತ್ರಿ-ಗಳನ್ನು ಲೋಕಪಾಲರೆಂದೂ, ತನ್ನನ್ನು ಬ್ರಹ್ಮನೆಂದೂ ಕರೆದುಕೊಳ್ಳುತ್ತ ನರಕನು ರಾಜ್ಯಭಾರ

ನಡೆಸುತ್ತಿದ್ದ. ನರಕನನ್ನು ಕೊಲ್ಲಲು ಬಂದ ಕೃಷ್ಣನು ಗಿರಿದುರ್ಗವನ್ನು ಗದೆಯಿಂದ ಪುಡಿಮಾಡಿ ಹಾಕಿದ. ವಾಯವ್ಯಾಸ್ತ್ರದಿಂದ ಜಲದುರ್ಗವನ್ನು ಒಣಗಿಸಿದ ; ಖಡ್ಗದಿಂದ ಮುರನ ಪಾಶಗಳನ್ನೆಲ್ಲ ಕತ್ತರಿಸಿಹಾಕಿದ. ಅನಂತರ ಅವನ ಮಂತ್ರಿಗಳೆಲ್ಲ ಬೆಟ್ಟ ಶಸ್ತ್ರಹಾಗೂ ಅಸ್ತ್ರಗಳ ಮಳೆಯನ್ನೇ ಕರೆಯುತ್ತ ಕೃಷ್ಣನನ್ನು ಮುತ್ತಿದರು. ಕೃಷ್ಣನು ಅವರೆಲ್ಲರ ಶಿರಸ್ಸುಗಳನ್ನು ಚಕ್ರದಿಂದ ಕತ್ತರಿಸಿ-ಹಾಕಿದ. ಶಿವನ ವರದಿಂದ ಮಹಾಪರಾಕ್ರಮಿಗಳೂ, ಅವಧ್ಯರೂ ಎನ್ನಿಸಿದ ಅವರ ಏಳು ಮಕ್ಕಳೂ ಕೃಷ್ಣನಿಂದ ತಮ್ಮ ಪಿತೃಗಳ ಗತಿಯನ್ನೇ ಹೊಂದಿದರು. ಮೂವತ್ತೈದು ಮಂತ್ರಿ-ಪುತ್ರರನ್ನು ಸಹ ಸಂಹರಿಸಿ ಕೃಷ್ಣ ನರಕನ ಮೇಲೆಯೇ ನುಗ್ಗಿದ.

ಕೃಷ್ಣ ಬಂದ ವಾರ್ತೆಯನ್ನು ಕೇಳಿದ ನರಕಾಸುರ ಮೂವತ್ತು ಅಕ್ಷೋಹಿಣೀ ಸಂಖ್ಯೆಯ ಸೇನೆಯೊಂದಿಗೆ ಕೃಷ್ಣನನ್ನು ಎದುರಿಸಿ ಬಂದ. ಸೇನೆಯ ಮುಕ್ಕಾಲು ಭಾಗವೆಲ್ಲ ಗರುಡನ ರೆಕ್ಕೆಯ ಗಾಳಿಯಿಂದಲೇ ನಾಶವಾಯಿತು. ಉಳಿದ ಕಾಲು ಭಾಗ ಕೃಷ್ಣನ ಬಾಣಗಳಿಗೆ ಸಿಕ್ಕಿ, ಮೃತಪಟ್ಟಿತು. ಮಂತ್ರಾಸ್ತ್ರಗಳಿಂದ ನರಕಾಸುರನು ಕೃಷ್ಣನನ್ನು ಎದುರಿಸಿದ. ಕೃಷ್ಣ ಅವನನ್ನು ಬಾಣಗಳ ಪ್ರವಾಹದಿಂದ ನೋಯಿಸಿದ. ಆಗ ನರಕಾಸುರನು ತಾನು ಬ್ರಹ್ಮನಿಂದ ಪಡೆದುಕೊಂಡಿದ್ದ ಶತಘ್ನೀ ಎಂಬ ಆಯುಧವನ್ನು ಕೃಷ್ಣನ ಮೇಲೆ ಪ್ರಯೋಗಿಸಿದ. ಸಕಲ ಜಗದೀಶ್ವರ-ನಾದ ಕೃಷ್ಣನಿಗೆ ಅದಾವ ಲೆಕ್ಕ ! ಅದನ್ನು ನುಂಗಿಹಾಕಿದ ಕೃಷ್ಣ , ಸ್ವಲ್ಪ ಶ್ರಮಪಟ್ಟ ನಾಟಕವನ್ನು ಆಡಿದ. ಬ್ರಹ್ಮನ ಅನೇಕ ವರಗಳನ್ನು ಸುಳ್ಳಾಗಿಸಿದ್ದ ಪರಮಾತ್ಮ , ಅವನ ಮಾತಿಗೆ ಸ್ವಲ್ಪವಾದರೂ ಬೆಲೆ ಬರಲಿ ಎಂಬ ಉದ್ದೇಶದಿಂದ ಮಾತ್ರ ಆ ರೀತಿ ಅಭಿನಯಿಸಿದ. ಆಗ ಕೊಬ್ಬಿದ ನರಕನನ್ನು ನೋಡಿ ಸತ್ಯಭಾಮೆಯೇ ಶಾರ್ಙ್ಗಧನುಸ್ಸನ್ನು ಕೈಗೆತ್ತಿಕೊಂಡು ಕ್ಷಣಾರ್ಧದಲ್ಲಿಯೇ ಅವನನ್ನು ನಿರಾಯುಧ ಹಾಗೂ ವಿರಥನನ್ನಾಗಿ ಮಾಡಿಬಿಟ್ಟಳು. ಪ್ರಜ್ಞೆ ಮರಳಿದಂತೆ ಮೇಲೆದ್ದ ಕೃಷ್ಣ ತನ್ನ ಪತ್ನಿಯನ್ನು ಆಲಿಂಗಿಸಿಕೊಂಡು, ಬೇರೊಂದು ರಥವನ್ನೇರಿ ಮತ್ತೆ ಶಸ್ತ್ರಾಸ್ತ್ರಗಳೊಂದಿಗೆ ಸಿದ್ಧನಾಗಿ ಬರುತ್ತಿದ್ದ ನರಕನ ಕತ್ತನ್ನು ಚಕ್ರದಿಂದ ಕತ್ತರಿಸಿ ಹಾಕಿದ. ಕೃಷ್ಣನನ್ನು ದ್ವೇಷಿಸಿದ ಫಲವಾಗಿ ಆ ನರಕಾಸುರನು ತನ್ನ ಮಂತ್ರಿಗಳು ಹಾಗೂ ಅವರ ಪುತ್ರರೊಂದಿಗೆ ಅಂಧಂತಮಸ್ಸನ್ನೇ ಸೇರಿದ. ನರಕಾಸುರನಲ್ಲಿ ಆವಿಷ್ಟನಾಗಿದ್ದ ವಾಯು ಕೃಷ್ಣನಲ್ಲಿ ಸೇರಿದ. ಸತ್ಯಭಾಮೆಯೊಂದಿಗೆ ಕೃಷ್ಣನು ನರಕಾಸುರನ ಅಂತಃಪುರವನ್ನು ಪ್ರವೇಶಿಸಿದ.

## ಕೃಷ್ಣನ ಹದಿನಾರುಸಾವಿರದ ನೂರು ಭಾವಿಪತ್ನಿಯರು

ಪಂಚಭೂತಗಳಲ್ಲಿ ಕಡೆಯವಳೂ, ಮೂಲಪ್ರಕೃತಿಯಾದ ಮಹಾಲಕ್ಷ್ಮಿಯ ವಿಶೇಷ ಆವೇಶವನ್ನು ಹೊಂದಿದವಳೂ, ವರಾಹರೂಪಿಯಾದ ಶ್ರೀಹರಿಯ ಪತ್ನಿಯೂ, ನರಕಾಸುರನ ತಾಯಿಯೂ ಆದ ಭೂದೇವಿಯು ಕೃಷ್ಣನ ಪಾದಕಮಲಗಳಲ್ಲಿ ಅದಿತಿಯ ಕುಂಡಲಗಳನ್ನು ಸಮರ್ಪಿಸಿ, ತನ್ನ ಮೊಮ್ಮಗ ಭಗದತ್ತನನ್ನು ರಕ್ಷಿಸಲು ಕೇಳಿಕೊಂಡಳು. ಕೃಷ್ಣನು ಆ ಭಗದತ್ತನಿಗೇ ರಾಜ್ಯವನ್ನು ಒಪ್ಪಿಸಿ, ಪಟ್ಟಾಭಿಷೇಕ ಮಾಡಿದ. ಹೀಗೆ ಭಗದತ್ತನು ಸಕಲ ಕಿರಾತರಾಜ್ಯಕ್ಕೂ ಅಧಿ-ಪತಿಯಾದ. ಶಿವನು ಕುಬೇರನಿಗೆ ನೀಡಿದ್ದ ಸುಪ್ರತೀಕವೆಂಬ ಆನೆಯನ್ನು ನರಕಾಸುರನು

## ಪಾರಿಜಾತ ಪ್ರಸಂಗ

ರುಗ್ಮಿಣಿ ಹಾಗೂ ಸತ್ಯಭಾಮೆಯರು ಸಾಕ್ಷಾತ್ ಮಹಾಲಕ್ಷ್ಮಿಯ ಅವತಾರ ; ಶ್ರೀಹರಿಯ ಕೃಷ್ಣರಾಮಾದಿರೂಪಗಳು ಹೇಗೋ ಹಾಗೆ ; ಅವರಲ್ಲಿ ಲವಲೇಶ ಬೇಧವೂ ಇಲ್ಲ. ಆದರೂ ಸತ್ಯಭಾಮೆಯು ಸ್ತ್ರೀಸ್ವಭಾವವನ್ನು ಪ್ರಕಟಪಡಿಸುವ ಉದ್ದೇಶದಿಂದ ಕೋಪಗೊಂಡವಳಂತೆ ನಟಿಸಿದಳು. ಸಭೆಗೆ ತನ್ನನ್ನು ಬಿಟ್ಟು ರುಗ್ಮಿಣಿಯನ್ನು ಕರೆದೊಯ್ದದ್ದು, ನಾರದ ಋಷಿ ಅವಳನ್ನು ಸ್ತುತಿಸಿದ್ದು, ಜೊತೆಗೆ ಅದ್ಭುತಪುಷ್ಪವನ್ನು ಕೊಟ್ಟಿದ್ದು ಅವಳ ಕೋಪಾಭಿನಯಕ್ಕೆ ಕಾರಣ-ವಾಗಿದ್ದವು. ಕೋಪತಪ್ತಳಂತೆ ಕಾಣುತ್ತಿದ್ದ ಅವಳ ಜೊತೆ ಕೃಷ್ಣ ಕಾಮಿಪುರುಷನಂತೆ ವರ್ತಿಸುತ್ತ ಸಮಾಧಾನಪಡಿಸಿ – ''ಚಿಂತಿಸದಿರು ! ನಿನಗೆ ಪಾರಿಜಾತ ವೃಕ್ಷವನ್ನೇ ತಂದುಕೊಡುವೆ'' ಎಂದು ವಚನವಿತ್ತ. ಆ ವೇಳೆಗೆ ಅಲ್ಲಿಗೆ ದೇವತೆಗಳ ಸಮೇತನಾಗಿ ಇಂದ್ರನು ಆಗಮಿಸಿದ ; ಅವನನ್ನು ಯುದ್ಧದಲ್ಲಿ ನರಕಾಸುರ ಸೋಲಿಸಿದ್ದಲ್ಲದೆ, ಅವನ ತಾಯಿಯಾದ ಅದಿತಿಯ ಕರ್ಣಕುಂಡಲ-ಗಳನ್ನು ಸಹ ಅಪಹರಿಸಿದ್ದ. ಇಂದ್ರನ ಪ್ರೇರಣೆಯಂತೆ ಬದರಿಯಿಂದ ಮುನಿಗಳೂ ತಂಡ-ತಂಡವಾಗಿ ಕೃಷ್ಣನ ಬಳಿಗೆ ಬಂದರು. ಅವರೆಲ್ಲ ವೇದಮಂತ್ರಗಳಿಂದ ಕೃಷ್ಣನನ್ನು ಸ್ತುತಿಸಿ, ನರಕಾ-ಸುರನನ್ನು ಸಂಹರಿಸಲು ಕೃಷ್ಣನನ್ನು ಪ್ರಾರ್ಥಿಸಿಕೊಂಡರು. ಹೀಗೆ ಇಂದ್ರನಿಂದಲೂ, ದೇವತೆ-ಗಳಿಂದಲೂ, ಮುನಿಗಳಿಂದಲೂ ಪ್ರಾರ್ಥಿಸಲ್ಪಟ್ಟ ಕೃಷ್ಣನು ಪಕ್ಷಿರಾಜನಾದ ಗರುಡನನ್ನು ಸ್ಮರಿಸಲು, ಅವನು ಆದರದಿಂದ ಬಳಿ ಸಾರಿ ನಮಸ್ಕರಿಸಿ, ಮುಂದುಗಡೆ ನಿಂತುಕೊಂಡ. ಸತ್ಯ-ಭಾಮೆಯೊಂದಿಗೆ ಅವನನ್ನು ಏರಿದ ಕೃಷ್ಣ ವಾಯವ್ಯ ದಿಕ್ಕಿನಲ್ಲಿ ನರಕಾಸುರನ ವಧೆಗೆಂದು ಹೊರಟ. ಆ ಸಮಯದಲ್ಲಿ ಸತ್ಯಭಾಮೆಯು ಲೋಕಶಿಕ್ಷಣಕ್ಕಾಗಿ ಭೀಮದ್ವಾದಶೀವ್ರತವನ್ನು ಮಾಡಿ, ಕೃಷ್ಣನ ಪ್ರೀತಿಗಾಗಿ ಕೋಟಿಧಾರಾ ಜಲವನ್ನು ಧರಿಸಿದಳು. ಸ್ವಲ್ಪದೂರ ಕೃಷ್ಣನನ್ನು ಹಿಂಬಾಲಿಸಿದ ಇಂದ್ರನು ಅವನ ಅಪ್ಪಣೆಯಂತೆ ತನ್ನ ಲೋಕಕ್ಕೆ ಮರಳಿದ.

## ನರಕಾಸುರನ ವಧೆ

ನರಕಾಸುರನು ಬ್ರಹ್ಮದೇವರ ''ಶಸ್ತ್ರ ಹಿಡಿದಿರುವವರೆಗೆ ನೀನೆಂದೂ ಸೋಲಲಾರೆ '' ಎಂಬ ವರದಿಂದ ಅವಧ್ಯನಾಗಿ ಅಜೇಯನೂ ಆಗಿದ್ದ. ಅವನ ಮಂತ್ರಿಗಳಿಗೂ ಅಂತಹುದೇ ವರವನ್ನು ಕೊಟ್ಟಿದ್ದ ಬ್ರಹ್ಮದೇವರು, ವರಾಹ ಹಾಗೂ ಭೂದೇವಿಯರ ಮಗನಾದ ಆ ನರಕನಿಗೆ ಅವರನ್ನೆಲ್ಲ ಗೆಲ್ಲುವ ವರವನ್ನೂ ಕೊಟ್ಟಿದ್ದರು. ಅದರೊಂದಿಗೆ ದುರ್ಗಮವಾದ ಪ್ರಾಗ್ಜ್ಯೋತಿಷ ಎಂಬ ಪುರವನ್ನೂ ಸಹ ಅವನಿಗೆ ಕೊಟ್ಟಿದ್ದರು. ಹೊರಗೆ ಗಿರಿದುರ್ಗವೂ, ಅದರ ಒಳಗೆ ಪಾನೀಯದುರ್ಗವೂ, ಅದರಲ್ಲಿ ಮುರನ ಪಾಶದುರ್ಗವೂ ಇದ್ದವು. ಆ ಮುರನ ಪಾಶಗಳ ಸಂಖ್ಯೆ ಆರುಸಾವಿರ ; ಅವು ಕತ್ತಿಯ ಅಲಗಿನಂತೆ ಭಯಂಕರವಾಗಿದ್ದವು. ಆರಾಧಿತರಾದ ಬ್ರಹ್ಮದೇವರು ಆ ದುರ್ಗಗಳನ್ನೆಂದೂ ಭೇದಿಸದಂತೆಯೂ, ದಾಟದಂತೆಯೂ ಅವನಿಗೆ ವರ-ವಿತ್ತಿದ್ದರು. ಪೀಠ, ಮುರ, ನಿಕುಂಭ, ಹಯಗ್ರೀವ ಮತ್ತು ಪಂಚಜನರೆಂಬ ಅವನ ಮಂತ್ರಿ-ಗಳನ್ನು ಲೋಕಪಾಲರೆಂದೂ, ತನ್ನನ್ನು ಬ್ರಹ್ಮನೆಂದೂ ಕರೆದುಕೊಳ್ಳುತ್ತ ನರಕನು ರಾಜ್ಯಭಾರ

ನಡೆಸುತ್ತಿದ್ದ. ನರಕನನ್ನು ಕೊಲ್ಲಲು ಬಂದ ಕೃಷ್ಣನು ಗಿರಿದುರ್ಗವನ್ನು ಗದೆಯಿಂದ ಪುಡಿಮಾಡಿ ಹಾಕಿದ. ವಾಯವ್ಯಾಸ್ತ್ರದಿಂದ ಜಲದುರ್ಗವನ್ನು ಒಣಗಿಸಿದ ; ಖಡ್ಗದಿಂದ ಮುರನ ಪಾಶಗಳನ್ನೆಲ್ಲ ಕತ್ತರಿಸಿಹಾಕಿದ. ಅನಂತರ ಅವನ ಮಂತ್ರಿಗಳೆಲ್ಲ ಬೆಟ್ಟ, ಶಸ್ತ್ರ ಹಾಗೂ ಅಸ್ತ್ರಗಳ ಮಳೆಯನ್ನೇ ಕರೆಯುತ್ತ ಕೃಷ್ಣನನ್ನು ಮುತ್ತಿದರು. ಕೃಷ್ಣನು ಅವರೆಲ್ಲರ ಶಿರಸ್ಸುಗಳನ್ನು ಚಕ್ರದಿಂದ ಕತ್ತರಿಸಿ-ಹಾಕಿದ. ಶಿವನ ವರದಿಂದ ಮಹಾಪರಾಕ್ರಮಿಗಳೂ, ಅವಧ್ಯರೂ ಎನ್ನಿಸಿದ ಅವರ ಏಳು ಮಕ್ಕಳೂ ಕೃಷ್ಣನಿಂದ ತಮ್ಮ ಪಿತೃಗಳ ಗತಿಯನ್ನೇ ಹೊಂದಿದರು. ಮೂವತ್ತೈದು ಮಂತ್ರಿ-ಪುತ್ರರನ್ನು ಸಹ ಸಂಹರಿಸಿ ಕೃಷ್ಣ ನರಕನ ಮೇಲೆಯೇ ನುಗ್ಗಿದ.

ಕೃಷ್ಣ ಬಂದ ವಾರ್ತೆಯನ್ನು ಕೇಳಿದ ನರಕಾಸುರ ಮೂವತ್ತು ಅಕ್ಷೋಹಿಣೀ ಸಂಖ್ಯೆಯ ಸೇನೆಯೊಂದಿಗೆ ಕೃಷ್ಣನನ್ನು ಎದುರಿಸಿ ಬಂದ. ಸೇನೆಯ ಮುಕ್ಕಾಲು ಭಾಗವೆಲ್ಲ ಗರುಡನ ರೆಕ್ಕೆಯ ಗಾಳಿಯಿಂದಲೇ ನಾಶವಾಯಿತು. ಉಳಿದ ಕಾಲು ಭಾಗ ಕೃಷ್ಣನ ಬಾಣಗಳಿಗೆ ಸಿಕ್ಕಿ, ಮೃತಪಟ್ಟಿತು. ಮಂತ್ರಾಸ್ತ್ರಗಳಿಂದ ನರಕಾಸುರನು ಕೃಷ್ಣನನ್ನು ಎದುರಿಸಿದ. ಕೃಷ್ಣ ಅವನನ್ನು ಬಾಣಗಳ ಪ್ರವಾಹದಿಂದ ನೋಯಿಸಿದ. ಆಗ ನರಕಾಸುರನು ತಾನು ಬ್ರಹ್ಮನಿಂದ ಪಡೆದುಕೊಂಡಿದ್ದ ಶತಘ್ನೀ ಎಂಬ ಆಯುಧವನ್ನು ಕೃಷ್ಣನ ಮೇಲೆ ಪ್ರಯೋಗಿಸಿದ. ಸಕಲ ಜಗದೀಶ್ವರ-ನಾದ ಕೃಷ್ಣನಿಗೆ ಅದಾವ ಲೆಕ್ಕ ! ಅದನ್ನು ನುಂಗಿಹಾಕಿದ ಕೃಷ್ಣ, ಸ್ವಲ್ಪ ಶ್ರಮಪಟ್ಟ ನಾಟಕವನ್ನು ಆಡಿದ. ಬ್ರಹ್ಮನ ಅನೇಕ ವರಗಳನ್ನು ಸುಳ್ಳಾಗಿಸಿದ್ದ ಪರಮಾತ್ಮ, ಅವನ ಮಾತಿಗೆ ಸ್ವಲ್ಪವಾದರೂ ಬೆಲೆ ಬರಲಿ ಎಂಬ ಉದ್ದೇಶದಿಂದ ಮಾತ್ರ ಆ ರೀತಿ ಅಭಿನಯಿಸಿದ. ಆಗ ಕೊಬ್ಬಿದ ನರಕನನ್ನು ನೋಡಿ ಸತ್ಯಭಾಮೆಯೇ ಶಾರ್ಙ್ಗಧನುಸ್ಸನ್ನು ಕೈಗೆತ್ತಿಕೊಂಡು ಕ್ಷಣಾರ್ಧದಲ್ಲಿಯೇ ಅವನನ್ನು ನಿರಾಯುಧ ಹಾಗೂ ವಿರಥನನ್ನಾಗಿ ಮಾಡಿಬಿಟ್ಟಳು. ಪ್ರಜ್ಞೆ ಮರಳಿದಂತೆ ಮೇಲೆದ್ದ ಕೃಷ್ಣ ತನ್ನ ಪತ್ನಿಯನ್ನು ಆಲಿಂಗಿಸಿಕೊಂಡು, ಬೇರೊಂದು ರಥವನ್ನೇರಿ ಮತ್ತೆ ಶಸ್ತ್ರಾಸ್ತ್ರಗಳೊಂದಿಗೆ ಸಿದ್ಧನಾಗಿ ಬರುತ್ತಿದ್ದ ನರಕನ ಕತ್ತನ್ನು ಚಕ್ರದಿಂದ ಕತ್ತರಿಸಿ ಹಾಕಿದ. ಕೃಷ್ಣನನ್ನು ದ್ವೇಷಿಸಿದ ಫಲವಾಗಿ ಆ ನರಕಾಸುರನು ತನ್ನ ಮಂತ್ರಿಗಳು ಹಾಗೂ ಅವರ ಪುತ್ರರೊಂದಿಗೆ ಅಂಧಂತಮಸ್ಸನ್ನೇ ಸೇರಿದ. ನರಕಾಸುರನಲ್ಲಿ ಆವಿಷ್ಟನಾಗಿದ್ದ ವಾಯು ಕೃಷ್ಣನಲ್ಲಿ ಸೇರಿದ. ಸತ್ಯಭಾಮೆಯೊಂದಿಗೆ ಕೃಷ್ಣನು ನರಕಾಸುರನ ಅಂತಃಪುರವನ್ನು ಪ್ರವೇಶಿಸಿದ.

## ಕೃಷ್ಣನ ಹದಿನಾರುಸಾವಿರದ ನೂರು ಭಾವಿಪತ್ನಿಯರು

ಪಂಚಭೂತಗಳಲ್ಲಿ ಕಡೆಯವಳೂ, ಮೂಲಪ್ರಕೃತಿಯಾದ ಮಹಾಲಕ್ಷ್ಮಿಯ ವಿಶೇಷ ಆವೇಶವನ್ನು ಹೊಂದಿದವಳೂ, ವರಾಹರೂಪಿಯಾದ ಶ್ರೀಹರಿಯ ಪತ್ನಿಯೂ, ನರಕಾಸುರನ ತಾಯಿಯೂ ಆದ ಭೂದೇವಿಯು ಕೃಷ್ಣನ ಪಾದಕಮಲಗಳಲ್ಲಿ ಅದಿತಿಯ ಕುಂಡಲಗಳನ್ನು ಸಮರ್ಪಿಸಿ, ತನ್ನ ಮೊಮ್ಮಗ ಭಗದತ್ತನನ್ನು ರಕ್ಷಿಸಲು ಕೇಳಿಕೊಂಡಳು. ಕೃಷ್ಣನು ಆ ಭಗದತ್ತನಿಗೇ ರಾಜ್ಯವನ್ನು ಒಪ್ಪಿಸಿ, ಪಟ್ಟಾಭಿಷೇಕ ಮಾಡಿದ. ಹೀಗೆ ಭಗದತ್ತನು ಸಕಲ ಕಿರಾತರಾಜ್ಯಕ್ಕೂ ಅಧಿ-ಪತಿಯಾದ. ಶಿವನು ಕುಬೇರನಿಗೆ ನೀಡಿದ್ದ ಸುಪ್ರತೀಕವೆಂಬ ಆನೆಯನ್ನು ನರಕಾಸುರನು

ಬಲಾತ್ಕಾರದಿಂದ ಕಿತ್ತುಕೊಂಡಿದ್ದ. ಅದನ್ನು ಮರಳಿ ಪಡೆಯಲೆಂದೇ ಕುಬೇರನು ಭಗದತ್ತನಾಗಿ ಹುಟ್ಟಿಬಂದಿದ್ದನಷ್ಟೆ! ಕೃಷ್ಣನು ಸುಪ್ರತೀಕವನ್ನು ಭಗದತ್ತನಿಗೆ ಅನುಗ್ರಹಿಸಿದ. ಆ ಆನೆಯೊಂದನ್ನು ಮಾತ್ರ ಅಲ್ಲಿ ಬಿಡುವುದರ ಮೂಲಕ ಭಗದತ್ತನನ್ನೂ , ಭೂಮಿಯನ್ನೂ ಅನುಗ್ರಹಿಸಿದ ಕೃಷ್ಣ ಅಲ್ಲಿದ್ದ ಕ್ಷೀರಸಾಗರದಲ್ಲಿ ಜನಿಸಿ ಬಂದಿದ್ದ ನಾಲ್ಕುದಂತಗಳ ಆರು ಸಾವಿರ ಆನೆಗಳನ್ನು ದ್ವಾರಾವತಿಗೆ ಕಳುಹಿಸಿದ ; ದೇವತೆಗಳು, ಗಂಧರ್ವರು, ನಾಗರು ಹಾಗೂ ಅನೇಕ ರಾಜರನ್ನು ಗೆದ್ದು ನರಕನು ಕಿತ್ತುತಂದಿದ್ದ ಇನ್ನೂರು ಯೋಜನದಷ್ಟಿದ್ದ ಬಂಗಾರ ಹಾಗೂ ರತ್ನಗಳ ಉನ್ನತರಾಶಿಗಳನ್ನೂ ಸಹ ದ್ವಾರಾವತಿಗೆ ಕಳುಹಿಸಿದ. ಮಹಾವೀರ್ಯರಾದ ನೈರ್ಋತ ಎಂಬ ರಾಕ್ಷಸರನ್ನು ನರಕನು ನಿರ್ಋತಿಯನ್ನು ಸೋಲಿಸಿ ತಂದಿಟ್ಟುಕೊಂಡಿದ್ದ ; ಆ ರಾಕ್ಷಸರ ಮೂಲಕವೇ ಕೃಷ್ಣ ಆ ರತ್ನದ ರಾಶಿಯನ್ನೂ, ಆನೆಗಳನ್ನೂ ದ್ವಾರಾವತಿಗೆ ಸಾಗಿಸಿದ.

ರಾಜರನ್ನು ಯುದ್ಧದಲ್ಲಿ ಸೋಲಿಸಿ, ಹದಿನಾರುಸಾವಿರದ ನೂರು ಜನ ರಾಜಕುಮಾರಿಯರನ್ನು ನರಕಾಸುರ ತನ್ನ ಅಂತಃಪುರದಲ್ಲಿ ಬಂದಿಗಳನ್ನಾಗಿ ಇರಿಸಿದ್ದ ; ಅಪಾರ ಸುಂದರಿಯರೂ, ಗುಣವತಿಯರೂ ಆದ ಅವರೆಲ್ಲ ವ್ರತವನ್ನು ಕೈಕೊಂಡಿದ್ದ ಕಾರಣ, ನರಕಾಸುರ ಅವರನ್ನು ಬಲಾತ್ಕಾರ ಪಡಿಸುವ ಗೋಜಿಗೆ ಹೋಗಿರಲಿಲ್ಲ ; ಅದರಿಂದಾಗಿ ಅವರೆಲ್ಲ ಕನ್ಯೆಯರೇ ಆಗಿದ್ದರು. ಅವರಲ್ಲಿ ಕೆಲವರು ದೇವಗಂಧರ್ವಕನ್ಯೆಯರೂ ಇದ್ದರು. ತ್ವಷ್ಟೃಪುತ್ರಿಯಾದ ಕಶೇರು ಎಂಬವಳು ಅವರಲ್ಲಿ ಮುಖ್ಯಳು. ಅವರೆಲ್ಲ ಮೊದಲಿಗೆ ಅಗ್ನಿಯ ಪುತ್ರರಾಗಿದ್ದು ಕೃಷ್ಣನ ಪತ್ನಿಯರಾಗಬೇಕೆಂಬ ಹಂಬಲದಿಂದ ಸ್ತ್ರೀತ್ವಪ್ರಾಪ್ತಿಗಾಗಿ ಘೋರವಾದ ತಪಸ್ಸನ್ನು ಆಚರಿಸಿದ್ದರು. ಅವರ ತಪಸ್ಸಿಗೆ ಮೆಚ್ಚಿದ ವಾಯುದೇವರು ಅವರಿಗೆ ಆ ರೀತಿಯ ವರವನ್ನಿತ್ತರು. ಸ್ತ್ರೀಯರಾದ ಅವರೆಲ್ಲ ಬದರಿಗೆ ಹೋಗಿ, ಅಲ್ಲಿ ನಾರಾಯಣನನ್ನು ಸೇವಿಸುತ್ತ, ಅಪ್ಸರತ್ವವನ್ನು ಹೊಂದಿ ರಾಜಪುತ್ರಿಯರಾಗಿ ಹುಟ್ಟಿದ್ದರು. ಕೆಲವರು ಸ್ವರ್ಗದಲ್ಲಿ ಜನಿಸಿದ್ದರು. ಕೃಷ್ಣ ಬಂದ ವಾರ್ತೆಯನ್ನು ಕೇಳುತ್ತಲೇ ಅವರೇ ಅಲ್ಲಿಗೆ ಬಂದು ತಮ್ಮನ್ನು ಸ್ವೀಕರಿಸಲು ಗುಣಪೂರ್ಣನಾದ ಆ ಭಗವಂತನನ್ನು ಪ್ರಾರ್ಥಿಸಿಕೊಂಡರು. ಸ್ವರೂಪದಲ್ಲಿ ಆಜಾನದೇವತೆಗಳಿಗೆ ಎಲ್ಲ ದೃಷ್ಟಿಗಳಿಂದಲೂ ಸಮಾನರಾದ ಅವರು, ಮಹಾಲಕ್ಷ್ಮಿಯ ಆವೇಶದಿಂದಾಗಿ ಅವರಿಗಿಂತ ಗುಣದಲ್ಲಿ ಹೆಚ್ಚಿನವರೇ ಎನ್ನಿಸುವರು. ಅವರನ್ನೆಲ್ಲ ಮೇನೆಗಳಲ್ಲಿ ಕೂಡಿಸಿ ಕೃಷ್ಣ ದ್ವಾರಾವತಿಗೆ ಕಳುಹಿಸಿಕೊಟ್ಟ. ಇಂದ್ರನಿಗೆ ಸೇರಿದ ಎರಡುನೂರು ಯೋಜನ ವಿಸ್ತೀರ್ಣದ ರತ್ನಪರ್ವತವನ್ನೂ, ಸದಾ ಅಮೃತವನ್ನು ಸುರಿಸುವ ಜಲೇಶ್ವರನಾದ ವರುಣನ ಛತ್ರವನ್ನೂ ಎರಡೂ ಕೈಗಳಿಂದ ಎತ್ತಿ ಕೃಷ್ಣ ಗರುಡನ ಮೇಲೆ ಇರಿಸಿ, ಸತ್ಯಭಾಮಾಸಮೇತನಾಗಿ ಅವನ ಮೇಲೆ ತಾನೂ ಕುಳಿತ. ಶ್ರಮವಿಲ್ಲದೆ ಗರುಡನು ಸ್ವರ್ಗಲೋಕವನ್ನು ತಲುಪಿದ. ಸಕಲ ಲೋಕಪಾಲಕರಿಂದ ಹಿಂಬಾಲಿಸಲ್ಪಟ್ಟ ಕೃಷ್ಣನೂ ಇಂದ್ರನ ಮನೆಯನ್ನು ಪ್ರವೇಶಿಸಿದ. ಪರಮಸಂತೋಷದಿಂದ ಶಚಿಯೊಂದಿಗೆ ಇಂದ್ರ ಸತ್ಯಭಾಮೆಯನ್ನೂ ಕೃಷ್ಣನನ್ನೂ ಪರಿಪರಿಯಿಂದ ಪೂಜಿಸಿದ. ಎಲ್ಲ ದೇವತೆಗಳಿಂದಲೂ, ಮುನಿಗಳಿಂದಲೂ ಪೂಜಿಸಲ್ಪಟ್ಟ ಕೃಷ್ಣನು ಅದಿತಿಗೆ ಅವಳ

ಕುಂಡಲಗಳನ್ನು ಒಪ್ಪಿಸಿದ. ಅಸುರಾವೇಶದಿಂದಾಗಿ ಸತ್ಯಭಾಮಾ, ಕೃಷ್ಣರನ್ನು ಜಗತ್ತಿನ ತಾಯಿ-ತಂದೆಗಳೆಂದು ತಿಳಿಯದ ಅದಿತಿ, ತನ್ನ ಮಗನನ್ನು ಹರಸುವಂತೆ ಕೃಷ್ಣನನ್ನು ಹರಸಿದಳು.

## ಪಾರಿಜಾತಾಪಹರಣ

ಅನಂತರ ಕೃಷ್ಣನು ಸತ್ಯಭಾಮೆಯೊಂದಿಗೆ ನಂದನವೆಂಬ ಇಂದ್ರನ ಉದ್ಯಾನವನ್ನು ಪ್ರವೇಶಿಸಿದ. ಸಕಲಜಗತ್ತಿನ ಒಡೆಯನೂ, ಎಣೆಯಿರದ ಶಕ್ತಿವಂತನೂ, ಜಗದೇಕಸುಂದರನೂ ಆದ ಕೃಷ್ಣನು ಕೋಟ್ಯಂತರ ಪೂರ್ಣಚಂದ್ರರನ್ನು ಮೀರಿಸುವ ಕಾಂತಿಯ, ಬಂಗಾರದ ಮೈ-ಬಣ್ಣದ ಸತ್ಯಭಾಮೆಯೊಂದಿಗೆ ಕ್ರೀಡಿಸಿದ. ಆ ನಂದನವನದಲ್ಲಿ ಎಲ್ಲ ಋತುಗಳ ವೈಭವವೂ ಯಾವಾಗಲೂ ವ್ಯಕ್ತವಾಗುತ್ತಿತ್ತು. ರತ್ನ ಸುವರ್ಣಗಳಿಂದೊಪ್ಪುವ ಮರಗಳೇ ಅಲ್ಲಿ ತುಂಬಿದ್ದವು. ಪೂರ್ಣಚಂದ್ರನು ಅಲ್ಲಿ ಯಾವಾಗಲೂ ಕಂಗೊಳಿಸುತ್ತಿದ್ದುದು ಅದರ ಮತ್ತೊಂದು ವಿಶಿಷ್ಟತೆ. ಹಿತವಾದ ತಂಗಾಳಿ ಎಲ್ಲೆಡೆಯೂ ಪಸರಿಸಿತ್ತು. ನಿರ್ದೋಷವಾದ ಜ್ಞಾನವನ್ನೇ ದೇಹವಾಗಿ ಹೊಂದಿದ ಸತ್ಯಭಾಮೆ ಅಲ್ಲಿದ್ದ ಪಾರಿಜಾತ ವೃಕ್ಷವನ್ನು ಕಂಡಳು. ಅಮೃತಮಥನಕಾಲದಲ್ಲಿ ಉದ್ಭವಿಸಿ ಬಂದಿದ್ದ ಆ ವೃಕ್ಷವು ರತ್ನಕಾಂಚನಗಳಿಂದ ತುಂಬಿತ್ತು. ದುಃಖವನ್ನು ಪರಿಹರಿಸುವ ಸಾಮರ್ಥ್ಯದೊಂದಿಗೆ ಎಲ್ಲ ಬಯಕೆಗಳನ್ನು ಪೂರೈಸುವ ಶಕ್ತಿಯನ್ನು ಅದು ಹೊಂದಿತ್ತು. ಕಪೋಲದಲ್ಲಿ ಪ್ರತಿಫಲಿಸುತ್ತಿದ್ದ ತೂಗುವ ಕುಂಡಲಗಳಿಂದ ಕೂಡಿದ ಚಂಚಲನೇತ್ರೆಯೂ, ಮಂದಹಾಸದ ಬೆಳಕಿನಿಂದ ಹೊಳೆಯುವ ಮುಖಕಮಲೆಯೂ ಆದ ಸತ್ಯಭಾಮೆ ಅದನ್ನು ನೋಡುತ್ತಿದ್ದಂತೆಯೇ, ದೇವದೇವನಾದ ಕೃಷ್ಣನನ್ನು ಕೇಳಿಕೊಂಡಳು – ''ಓ ಜಗತ್ತಿನ ದೇವ ! ಚಿಂತನೆಗೆ ಎಟುಕದ ಪೌರುಷದ ರಾಶಿಯೇ ! ಈ ವೃಕ್ಷವನ್ನು ನಮ್ಮ ಮನೆಯ ಅಂಗಳದಲ್ಲಿ ಇರಿಸುವ ಕೃಪೆಮಾಡು.'' ಸತ್ಯಭಾಮೆಯನ್ನು ಆಲಿಂಗಿಸಿಕೊಂಡ ಕೃಷ್ಣ ಆ ವೃಕ್ಷವನ್ನು ಕಿತ್ತಿ ಮೇಲೆತ್ತಿಕೊಂಡು, ಸತ್ಯಭಾಮೆಯೊಂದಿಗೆ ಪಕ್ಷಿರಾಜನ ಹೆಗಲೇರಿದ.

ಈ ವಾರ್ತೆ ಕಿವಿಗೆ ಬೀಳುತ್ತಲೇ ಶಚೀದೇವಿಯು ಕಳವಳಗೊಂಡು ತನ್ನ ಪತಿಯನ್ನು ಪ್ರೇರೇಪಿಸಿದಳು. ದೇವತೆಗಳನ್ನೆಲ್ಲ ಜೊತೆಮಾಡಿಕೊಂಡು ಆ ದೇವರಾಜನಾದ ಇಂದ್ರನು ದೇವದೇವನಾದ ಕೃಷ್ಣನನ್ನು ವಿರೋಧಿಸಿ ಹೊರಟ. ಅಸುರಾವೇಶದಿಂದ ಕೂಡಿ, ವಿಷ್ಣುವಿನ ಮುಂದೆಯೇ ತಮ್ಮ ಪೌರುಷ ತೋರಿಸಬಂದ ಅವರೆಲ್ಲರ ಮೇಲೆ ಸತ್ಯಭಾಮೆಯು ಶಾರ್ಙ್ಗ-ಧನುಸ್ಸನ್ನು ಕೈಗೆತ್ತಿಕೊಂಡು ಬಾಣಗಳನ್ನು ಸುರಿಸತೊಡಗಿದಳು. ವೈಶ್ರವಣನ ಆಯುಧಗಳೆಲ್ಲ ಕಳಚಿಬಿದ್ದವು. ಗರುಡನು ವರುಣರಾಜನನ್ನು ಸಮುದ್ರಕ್ಕೆ ಎಸೆದ ; ಪ್ರಧಾನವಾಯುವಿನ ಪುತ್ರನಾದ ಕೋಣಾಧಿಪವಾಯುವನ್ನು, ಅಗ್ನಿ ಯಮಾದಿಗಳನ್ನು ಶಾರ್ಙ್ಗದಿಂದ ಹೊರಬಂದ ಕೃಷ್ಣನ ಬಾಣಗಳು ಎಚ್ಚರಿಸಿದವು. ಅವುಗಳ ಹೊಡೆತಕ್ಕೆ ಅವರ ಅಸುರಾವೇಶ ಇಳಿಯತೊಡಗಿತ್ತು. ಕೃಷ್ಣನು ಪರಮಾತ್ಮನೆಂಬುದನ್ನು ತಿಳಿದುಕೊಂಡ ಅವರೆಲ್ಲ ಮೆಲ್ಲನೆ ಯುದ್ಧಕ್ಕೆ ಕೈಮುಗಿದು ದೂರ ಸರಿದರು. ಇಂದ್ರನಿಗಾಗಿ ಹೋರಾಡಬಂದ ಶಿವನನ್ನು ಶಾರ್ಙ್ಗದ ಬಾಣಗಳು ಹಿಮ್ಮೆಟ್ಟಿಸಿ-ದವು. ಬಾಣಗಳಿಂದ ಹೊಡೆಯಲ್ಪಟ್ಟಿದ್ದ ಅವನನ್ನು ಗರುಡನು ವಾಹನಸಮೇತನಾಗಿ ದೂರಕ್ಕೆ

ತಳ್ಳಿಬಿಟ್ಟ. ಶಿವನೂ ಕೃಷ್ಣನಿಂದ ಓಡಿಸಲ್ಪಟ್ಟದ್ದನ್ನು ಕಂಡು ಇಂದ್ರನು ವಜ್ರಾಯುಧವನ್ನೇ ಕೃಷ್ಣನ ಮೇಲೆ ಪ್ರಯೋಗಿಸಲು, ಅದನ್ನು ಕೃಷ್ಣ ನಗುತ್ತ ಎಡಗೈಯಿಂದ ಹಿಡಿದುಬಿಟ್ಟ. ಇಂದ್ರನು ಸೋತು ಹಿಮ್ಮೆಟ್ಟಿದ್ದನ್ನು ಕಂಡು, ಜಗದೇಕಸುಂದರಿಯಾದ ಸತ್ಯಭಾಮೆಯು ಅಪಹಾಸ್ಯಮಾಡಿ ನಕ್ಕಳು. ಲೋಕಮಾತೆಗೆ ಇಂದ್ರನು ಅರಿಕೆ ಮಾಡಿಕೊಂಡ – ''ಜಗದಂಬೆಯಾದ ನಿನಗೆ ನಮ್ಮ ಹುಡುಗತನವನ್ನು ತೋರಿಸುತ್ತಿರುವೆವು.'' ದೇವತೆಗಳಿಂದ ಕೂಡಿಕೊಂಡು ಇಂದ್ರನು ಕೃಷ್ಣನಿಗೆ ಶರಣಾಗಿ, ತಮ್ಮ ತಪ್ಪನ್ನು ಮನ್ನಿಸಲು ಬೇಡಿಕೊಂಡ. ಮಣಿಪರ್ವತದ ಶಿಖರವನ್ನು ಕೃಷ್ಣನಿಗೆ ಒಪ್ಪಿಸಿದ. ಅಲ್ಲದೆ ಅರ್ಜುನನನ್ನು ರಕ್ಷಿಸಿ ಅನುಗ್ರಹಿಸಲು ಬೇಡಿದ. ''ನಾನು ಭೂಮಿಯ ಮೇಲೆ ಈ ರೂಪದಿಂದ ಕಾಣಿಸಿಕೊಳ್ಳುತ್ತ ಇರುವವರೆಗೂ ಅರ್ಜುನನನ್ನು ಯಾರೂ ಗೆಲ್ಲಲಾರರು.'' ಎಂದು ಕೃಷ್ಣನು ಇಂದ್ರನಿಗೆ ಆಶ್ವಾಸನೆಯಿತ್ತ. ಅರ್ಜುನನಿಗಾಗಿ ಈ ರೀತಿಯ ವರವನ್ನು ಪಡೆದ ಇಂದ್ರ ಕೃಷ್ಣನಿಗೆ ಮತ್ತೆ ಮತ್ತೆ ನಮಸ್ಕರಿಸಿದ ; ಅವನು ಪ್ರಸನ್ನದೃಷ್ಟಿಯಿಂದ ಅನುಗ್ರಹಿಸಿದ್ದನ್ನು ಕಂಡು ಸಂತೋಷದಿಂದ ಮನೆಗೆ ಹಿಂದಿರುಗಿದ. ಇಂದ್ರನನ್ನು ಕಳುಹಿಸಿಕೊಟ್ಟು, ದ್ವಾರಾವತಿಗೆ ಮರಳಿದ ಕೃಷ್ಣನು ವಿಶೇಷವಾಗಿ ಸಂತೋಷಿಸಿದಂತೆ ತನ್ನನ್ನು ತೋರಿಸಿಕೊಂಡ. ಸದಾ ಆನಂದಪೂರ್ಣನಾದ ಆ ಭಗವಂತನಿಗೆ ಮತ್ತೆ ಮತ್ತೆ ಈ ರೀತಿಯ ಆನಂದ ವಿಶೇಷದ ಪ್ರಕಟಣೆ ಲೋಕದೃಷ್ಟಿಯಿಂದ ಮಾತ್ರ. ಇಲ್ಲದಿದ್ದಲ್ಲಿ ಸದಾಸುಖಿಯಾದ ಅವನಿಗೆ ವಿಶೇಷ ಸುಖದ ಮಾತು ಹೇಗೆ ಒಪ್ಪೀತು !

## ಕೃಷ್ಣನ ಹದಿನಾರುಸಾವಿರದ ನೂರು ವಿವಾಹಗಳು

ದ್ವಾರಾವತಿಯನ್ನು ಪ್ರವೇಶಿಸಿದ ಕೃಷ್ಣನನ್ನು ಕಂಡ ಯಾದವರೆಲ್ಲ ಹರ್ಷನಿರ್ಭರರಾಗಿ ಅವನನ್ನು ಪೂಜಿಸಿದರು. ಅಂತಃಪುರವನ್ನು ಸಮೀಪಿಸಿದ ಕೃಷ್ಣನು ಸತ್ಯಭಾಮೆಯ ಮನೆಯ ಅಂಗಳದಲ್ಲಿ ಪಾರಿಜಾತವೃಕ್ಷವನ್ನು ನೆಟ್ಟ; ರತ್ನಪರ್ವತದ ಶಿಖರವನ್ನು ಸಹ ಅಲ್ಲಿಯೇ ಇರಿಸಿದ. ರತ್ನಗಳನ್ನೆಲ್ಲ ಯಾದವರಿಗೆ ಯಥೇಚ್ಛವಾಗಿ ಹಂಚಿದ ; ಆ ಎಲ್ಲ ಹದಿನಾರುಸಾವಿರದ ನೂರು ಜನರನ್ನು ಮದುವೆಯಾಗಿ, ಅವರಲ್ಲೆಲ್ಲ ಪ್ರತ್ಯೇಕವಾಗಿಯೇ ಬಹುರೂಪಗಳನ್ನು ಧರಿಸಿ, ಸಂತೋಷಪಡಿಸಿದ. ಪ್ರತಿಯೊಬ್ಬರಲ್ಲೂ ಹತ್ತು ಜನ ಪುತ್ರರನ್ನು, ಒಬ್ಬಳು ಪುತ್ರಿಯನ್ನು ಕೃಷ್ಣ ಪಡೆದ. ಅವರಲ್ಲೆಲ್ಲ ಪ್ರದ್ಯುಮ್ನ, ಸಾಂಬ, ಭಾನು ಮತ್ತು ಚಾರುದೇಷ್ಣ ಈ ನಾಲ್ವರೂ ಗುಣಾಧಿಕರೆನ್ನಿಸಿದರು. ಅದಿತಿಯ ಮಗನೂ, ವಿವಸ್ವಾನ್‌ನ ತಮ್ಮನೂ ಆದ ಭಾನು ಅದೇ ಹೆಸರಿನಿಂದ ಸತ್ಯಭಾಮೆಯ ಮಗನಾಗಿ ಹುಟ್ಟಿದ. ರುಗ್ಮಿಣಿಯ ಮಗನಾದ ಚಾರುದೇಷ್ಣನು ವಿಘ್ನೇಶನಾದ ವಿನಾಯಕನ ಅವತಾರ. ಉಳಿದೆಲ್ಲ ಕೃಷ್ಣನ ಮಕ್ಕಳೂ ಮತ್ತು ಎಲ್ಲ ದ್ವಾರಕಾವಾಸಿಗಳೂ ಒಂದಿಲ್ಲೊಂದು ದೇವತೆಯ ಅವತಾರವೇ ಆಗಿದ್ದರು.

## ಪ್ರದ್ಯುಮ್ನ - ಸಾಂಬರ ದಿಗ್ವಿಜಯ

ಹೀಗೆ ಕೃಷ್ಣನು ದ್ವಾರಕೆಯಲ್ಲಿ ವಾಸಿಸುತ್ತಿದ್ದಾಗ, ಒಮ್ಮೆ ಪ್ರದ್ಯುಮ್ನ ಸಾಂಬನನ್ನು ಜೊತೆಮಾಡಿಕೊಂಡು ನಾಗಲೋಕಕ್ಕೆ ತೆರಳಿದ. ಅವನಾರು ಎಂಬುದನ್ನು ತಿಳಿಯದೆ ಯುದ್ಧಕ್ಕೆ ಬಂದ

ನಾಗಲೋಕದವರೆಲ್ಲ ಈ ಇಬ್ಬರಿಂದ ಸೋಲನ್ನು ಕಾಣಬೇಕಾಯಿತು. ನಾಗರಾಜನಾದ ವಾಸುಕಿಗೂ ಸಹ ಇವರ ಬಾಣಗಳ ಮುಂದೆ ನಿಲ್ಲಲಾಗಲಿಲ್ಲ. ರತ್ನಗಳನ್ನೆಲ್ಲ ವಶಪಡಿಸಿಕೊಂಡ ಇವರಿಗೆ ಅವರೆಲ್ಲ ಶರಣಾದರು. ಸಾಂಬನೊಂದಿಗೆ ಮುಂದೆ ಹೊರಟ ಪ್ರದ್ಯುಮ್ನ ಅಡ್ಡ ಬಂದ ಮಾಯಾವಿ ಮಯನನ್ನೂ ಸಹ ಸೋಲಿಸಿದ. ಮಯನೂ ಇವರನ್ನು ಪೂಜಿಸಿ ಗೌರವಿಸಿದ. ಗಗನಗಾಮಿಯಾದ ರಥದಲ್ಲಿ ಮುಂದುವರೆದ ಅವರ ಪಯಣ ಸ್ವರ್ಗದತ್ತ ಸಾಗಿತು. ಜಯಂತನನ್ನು ಸೋಲಿಸಿ, ಕೃಷ್ಣನು ಪಾರಿಜಾತವನ್ನು ಕೊಂಡೊಯ್ದ ಸ್ಥಳದಲ್ಲಿಯೇ , ಪ್ರದ್ಯುಮ್ನ ನನ್ನು ಜಯಂತನ ತಮ್ಮ ಋಷಭ ಜಿದ್ದಿನಿಂದ ಎದುರಿಸಿ ಬಂದ. ಅವನನ್ನು ಸಾಂಬನು ಶಸ್ತ್ರ ಳಿಂದ ಸೋಲಿಸಿದ. ಜಯಂತ ಋಷಭರ ಅಸ್ತ್ರಗಳಿಂದ ಪ್ರದ್ಯುಮ್ನ ಸಾಂಬರ ರಥಗಳು ಉರಿದು ಬೂದಿಯಾದವು. ಅವರಿಬ್ಬರೂ ಜಯಂತ ಋಷಭರನ್ನು ಬಾಣಗಳನ್ನು ಪ್ರಯೋಗಿಸಿ ಓಡಿಸಿದರು. ಆಗ ಇಂದ್ರ, ಪ್ರದ್ಯುಮ್ನ ಸಾಂಬರನ್ನು ಬಹಳವಾಗಿ ಗೌರವಿಸಿ ಬೀಳ್ಕೊಟ್ಟ. ರತಿ ಕಲಿಸಿಕೊಟ್ಟ ವಿದ್ಯೆಯ ಪ್ರಭಾವದಿಂದ ಆಕಾಶಮಾರ್ಗವಾಗಿಯೇ ಪ್ರದ್ಯುಮ್ನ ಸಾಂಬನೊಂದಿಗೆ ದ್ವಾರಾವತಿಗೆ ಮರಳಿದ.

## ಕೃಷ್ಣನ ದಾಂಪತ್ಯದ ವೈಭವ

ಆ ವೇಳೆಗೆ ಅನೇಕ ಸಾವಿರ ಸ್ತ್ರೀಯರಲ್ಲಿ ಕೃಷ್ಣ ಹೇಗೆ ವರ್ತಿಸುವನು ಎಂಬುದನ್ನು ತಿಳಿಯ-ಬಯಸಿದ ನಾರದರು ದ್ವಾರಾವತಿಗೆ ಬಂದರು. ಹದಿನಾರುಸಾವಿರದ ನೂರೆಂಟು ಮನೆ-ಗಳಲ್ಲೂ ಅಷ್ಟೇ ರೂಪಗಳಿಂದ ಕ್ರೀಡಿಸುತ್ತಿದ್ದ ಕೃಷ್ಣನನ್ನು ಕಂಡು ಅವರು ವಿಸ್ಮಯದಿಂದ ಪುಲಕ-ಗೊಂಡರು. ಕೃಷ್ಣನಿಗೆ ನಮಸ್ಕರಿಸಿದ ಅವರು ಅಲ್ಲಿಂದ ಇಂದ್ರಪ್ರಸ್ಥವನ್ನು ಸೇರಿದರು ; ಪಾಂಡವರು ಅವರನ್ನು ಬಹಳವಾಗಿ ಗೌರವಿಸಿದರು.

ಅನ್ಯದೇವಿಯರನ್ನು ಶರೀರದಲ್ಲಿ ಸುಪ್ತಿಗೊಳಪಡಿಸಿ, ಆ ದೇಹದಲ್ಲಿದ್ದ ಭಾರತಿಯ ಪೂರ್ಣ-ಭೋಗಾರ್ಥವಾಗಿಯೂ, ಕ್ರಮವಾಗಿ ದ್ರೌಪದಿಯನ್ನು ಭೀಮನ ಪತ್ನಿಯನ್ನಾಗಿ ಮಾತ್ರ ಮಾಡುವ ಉದ್ದೇಶದಿಂದಲೂ, ಬ್ರಹ್ಮದೇವರ ಆಜ್ಞೆಯಂತೆ ಆ ನಾರದರು ಪಾಂಡವರಿಗೆ ಹೇಳಿದರು – ''ಸುಂದ-ಉಪಸುಂದರೆಂಬ ಇಬ್ಬರು ದೈತ್ಯಸಹೋದರರು ಬ್ರಹ್ಮನ ವರದಿಂದಾಗಿ ಬೇರಾರಿಂದಲೂ ಸಾಯುವಂತಿರಲಿಲ್ಲ. ಅವರಿಬ್ಬರು ತಿಲೋತ್ತಮೆಗಾಗಿ ಪರಸ್ಪರ ಹೋರಾಡಿ ಪ್ರಾಣ ಕಳೆದು ಕೊಂಡರು. ಆ ತಿಲೋತ್ತಮೆಯು ಆ ಕಾರ್ಯಕ್ಕೆಂದೇ ಬ್ರಹ್ಮದೇವರಿಂದ ಸೃಷ್ಟಿಸಲ್ಪಟ್ಟಿದ್ದಳು. ಆದ್ದರಿಂದ ದ್ರೌಪದಿಯು ಕ್ರಮವಾಗಿ ಒಬ್ಬೊಬ್ಬರ ಬಳಿ ಒಂದೊಂದು ವರ್ಷ ಇರತಕ್ಕದ್ದು. ಬೇರೆಯವರ ಜೊತೆ ಇರುವ ಅವಳನ್ನು ನೋಡಿದವರು, ಒಂದು ವರ್ಷಕಾಲ ತೀರ್ಥಯಾತ್ರೆ ಯನ್ನು ಕೈಗೊಳ್ಳತಕ್ಕದ್ದು'' ಪಾಂಡವರು ಅನಂತರ ಹಾಗೆಯೇ ನಡೆದುಕೊಂಡರು.

## ಅರ್ಜುನನ ತೀರ್ಥಯಾತ್ರೆ

ಒಮ್ಮೆ ಧರ್ಮರಾಜ ಮತ್ತು ದ್ರೌಪದಿ ಇಬ್ಬರೂ ಶಸ್ತ್ರಾಗಾರದಲ್ಲಿದ್ದರು. ಬ್ರಾಹ್ಮಣನೊಬ್ಬನ ಗೋವಿನ ರಕ್ಷಣೆಗಾಗಿ ಶಸ್ತ್ರಗಳನ್ನು ತೆಗೆದುಕೊಳ್ಳಲೆಂದು ಅಲ್ಲಿಗೆ ಬಂದ ಅರ್ಜುನ, ಅವರಿ-

ಬ್ಬರನ್ನು ಕಂಡ. ಶಸ್ತ್ರಗಳನ್ನು ತೆಗೆದುಕೊಂಡು ಹೋಗಿ ಅವನು ಚೋರರನ್ನು ನಿಗ್ರಹಿಸಿ ಗೋವುಗಳನ್ನು ಬಿಡಿಸಿ ಆ ಬ್ರಾಹ್ಮಣನಿಗೆ ತಂದಿತ್ತ ; ಬಳಿಕ, ಒಪ್ಪಂದದಂತೆ ಒಂದು ವರ್ಷ ಕಾಲದ ತೀರ್ಥಯಾತ್ರೆಗೆಂದು ಹೊರಟ. ಧರ್ಮರಾಜಾದಿಗಳು ಸ್ನೇಹದಿಂದಾಗಿ ಎಷ್ಟೇ ತಡೆದರೂ, ಅರ್ಜುನ ಸತ್ಯಪರಿಪಾಲನೆಯಿಂದ ಹಿಮ್ಮೆಟ್ಟಲು ಇಷ್ಟಪಡಲಿಲ್ಲ. ಹೀಗೆ ಹೊರಟ ಅರ್ಜುನ ಒಮ್ಮೆ ಗಂಗಾನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ, ನಾಗಕನ್ಯೆಯಾದ ಉಲೂಪಿಯು ಅವನನ್ನು ಸರ್ಪ-ಲೋಕಕ್ಕೆ ಕರೆದೊಯ್ದಳು. ಗರುಡನಿಂದಾಗಿ ಗಂಡನನ್ನು ಕಳೆದುಕೊಂಡಿದ್ದ ಅವಳಲ್ಲಿ ಸಂತತಿಯನ್ನು ಪಡೆಯುವ ಬಯಕೆಯಿಂದ, ಅವಳ ತಂದೆ ಅರ್ಜುನನನ್ನು ಬಹಳವಾಗಿ ಪ್ರಾರ್ಥಿಸಿದ. ತೀರ್ಥಯಾತ್ರೆಯ ಒಂದು ವರ್ಷದ ಅವಧಿಯಲ್ಲಿ ಬ್ರಹ್ಮಚಾರಿಯಾಗಿರಬೇಕೆಂಬ ನಿಯಮವು ಸಹ ಸೇರಿದ್ದರೂ, ಆ ರಾಜನ ಮನಸ್ಸನ್ನು ಕರಗಿಸುವ ಪ್ರಾರ್ಥನೆಗೆ ಒಪ್ಪದಿರಲು ಅರ್ಜುನನಿಗೆ ಸಾಧ್ಯ- ವಾಗಲಿಲ್ಲ. ಹಾಗೆ ಅರ್ಜುನನಿಂದ ಆ ನಾಗಕನ್ಯೆಯಲ್ಲಿ ಗಂಡುಮಗುವೊಂದು ಜನಿಸಿತು. ವರುಣಾವೇಶದಿಂದ ಕೂಡಿ, ಕುಜನೇ ಹಾಗೆ ಅವತರಿಸಿದ್ದ ; ಇರಾವಂತ ಎಂಬುದು ಅವನ ಹೆಸರು. ತಂದೆಯ ಗುಣಗಳೂ, ತಾಯಿಯ ಜಾತಿಯೂ ಮಗುವಿಗೆ ಉಂಟಾಗುವ ನಿಯಮ ದಿಂದಾಗಿ, ನಾಗರೂಪದವನಾದ ಆ ಇರಾವಂತ ಅರ್ಜುನನಂತೆ ತುಂಬಾ ಬಲಾಢ್ಯನೂ, ಅಸ್ತ್ರವೇತ್ತನೂ, ಒಳ್ಳೆಯ ಧಾರ್ಮಿಕನೂ, ಮಾಯೆ ಬಲ್ಲವನೂ ಆದ ; ಅವನ ಆ ಎಲ್ಲ ಗುಣಗಳಿಗೆ ಅರ್ಜುನನ ಮೊದಲ ಮಗನೆಂಬ ಮತ್ತೊಂದು ಕಾರಣವೂ ಸೇರಿತ್ತು.

## ಬಭ್ರುವಾಹನನ ಜನನ

ತೀರ್ಥಯಾತ್ರೆಯನ್ನು ಮುಂದುವರೆಸುತ್ತ ಅರ್ಜುನ ಪಾಂಡ್ಯದೇಶವನ್ನು ತಲುಪಿದ. ತಾಯಿಯೊಂದಿಗೆ ಬಿಡಲ್ಪಟ್ಟ ಇರಾವಂತನು ದೇವಲೋಕದಲ್ಲಿ ದೇವತೆಗಳ ಆದರಕ್ಕೆ ಪಾತ್ರನಾಗಿ ಬೆಳೆದ. ಅಪರೋಕ್ಷಜ್ಞಾನಿಯಾದ ಅರ್ಜುನನಿಗೆ ಈ ರೀತಿಯ ವ್ರತಭಂಗದಿಂದ ದೋಷವೇನೂ ತಟ್ಟಲಿಲ್ಲ. ತನಗಿಂತ ಉತ್ತಮರಿಗೆ ಮಾಡುವ ಅಪಚಾರದ ಹೊರತು, ಮತ್ತಾವುದೂ ಜ್ಞಾನಿ-ಯಾದವನಿಗೆ ದೋಷವೆನ್ನಿಸುವುದಿಲ್ಲ ಎಂಬುದು ಶಾಸ್ತ್ರನಿರ್ಣಯವಾಗಿದೆ. ಅವನಲ್ಲಿಯ ಹೆಚ್ಚು ಸ್ನೇಹದಿಂದಾಗಿ ಅರ್ಜುನನ ಆ ತಪ್ಪನ್ನು ಧರ್ಮರಾಜ ಮತ್ತು ಭೀಮ ಇಬ್ಬರೂ ಮನ್ನಿಸಿದರು. ವರ್ಷವು ಕಳೆಯುತ್ತಾ ಬಂದಿತ್ತು. ಪಾಂಡ್ಯದೇಶದ ರಾಜ ವೀರಸೇನನೂ ಕೂಡ ಪುತ್ರಿಕಾ-ಧರ್ಮದಿಂದ ತನ್ನ ಮಗಳು ಚಿತ್ರಾಂಗದೆಯನ್ನು ಅರ್ಜುನನಿಗೆ ಧಾರೆ ಎರೆದ. ವೀರಸೇನರಾಜ ತ್ವಷ್ಟೃವಿನ ಅಂಶ. ಆ ಚಿತ್ರಾಂಗದೆ ಸಾಕ್ಷಾತ್ ಶಚೀದೇವಿ. ರಾಮಾಯಣಕಾಲದಲ್ಲಿ ವಾಲಿಪತ್ನಿ ತಾರೆಯಾಗಿದ್ದಾಗ ಅವಳು ಸುಗ್ರೀವನನ್ನು ಕೂಡಿದ್ದರ ಫಲವಾಗಿ ಸ್ವರ್ಗ ಸೇರುವ ಅರ್ಹತೆಯಿಲ್ಲದೆ ಅಂತರಿಕ್ಷದಲ್ಲಿಯೇ ನೆಲೆಸಿದ್ದು, ಈಗ ಇಲ್ಲಿ ಈ ರೀತಿ ಹುಟ್ಟಿ ಬಂದಿದ್ದಳು. ಆ ಕಾರಣದಿಂದಾಗಿಯೇ ಅವಳಿಗೆ ಅರ್ಜುನನ ಹೆಚ್ಚು ಸಾಮೀಪ್ಯ ಈ ಜನ್ಮದಲ್ಲಿ ದೊರೆಯ-ದಂತಾಯಿತು. ಅವಳಲ್ಲಿ ಜಯಂತನೇ, ಕಾಮನ ಆವೇಶದಿಂದ ಕೂಡಿ ಬಭ್ರುವಾಹನ ಎಂಬ ಹೆಸರಿನಿಂದ ಜನಿಸಿದ ; ಅವನೂ ವೀರನೇ ಆದ.

## ಕನ್ಯಾತೀರ್ಥದಲ್ಲಿ ಅಪ್ಸರೆಯರ ಉದ್ಧಾರ

ತೀರ್ಥಯಾತ್ರೆಯನ್ನು ಮುಂದುವರಿಸಿದ ಅರ್ಜುನ ಪ್ರಭಾಸಕ್ಷೇತ್ರದಲ್ಲಿ ಮೊಸಳೆಯ ರೂಪದಲ್ಲಿದ್ದ ಅಪ್ಸರೆಯರನ್ನು ಶಾಪಮುಕ್ತರನ್ನಾಗಿ ಮಾಡಿ ಉದ್ಧರಿಸಿದ. ಬ್ರಾಹ್ಮಣನೊಬ್ಬನನ್ನು ಅವಮಾನಿಸಿದ ಫಲವಾಗಿ ಆ ಐವರು ಅಪ್ಸರೆಯರು ಶಾಪಕ್ಕೊಳಗಾಗಿ ಆ ಕೆಟ್ಟ ಯೋನಿಯಲ್ಲಿ ಕನ್ಯಾತೀರ್ಥದಲ್ಲಿ ಜನಿಸಿದ್ದರು. ಅವರಿಂದ ಪ್ರಸನ್ನಗೊಳಿಸಲ್ಪಟ್ಟ ಆ ಬ್ರಾಹ್ಮಣ 'ಒಬ್ಬನೇ ನಿಮ್ಮೆಲ್ಲರನ್ನು ತೀರಕ್ಕೆಳೆದಾಗ ನಿಮ್ಮ ಶಾಪ ಪರಿಹಾರವಾಗಿ ನಿಜರೂಪ ಲಭಿಸುವುದು' ಎಂಬುದಾಗಿ ಶಾಪಕ್ಕೆ ಪರಿಹಾರವನ್ನು ಸೂಚಿಸಿದ್ದ. ಸರೋವರದಲ್ಲಿ ತನ್ನ ಕಾಲನ್ನು ಹಿಡಿದ ಆ [೧]ಐದು ಮೊಸಳೆಗಳನ್ನು ಅರ್ಜುನ ಒಟ್ಟಾಗಿಯೇ ತೀರಕ್ಕೆ ಎಳೆದು ಹಾಕಿದ್ದರಿಂದ, ಅವರಿಗೆ ಶಾಪಮುಕ್ತಿ ದೊರೆಯಿತು.

## ಯತಿವೇಷದಲ್ಲಿ ಅರ್ಜುನ

ಅರ್ಜುನ ಆ ರೀತಿ ಪ್ರಭಾಸಕ್ಕೆ ಬರುವ ವೇಳೆಗಾಗಲೇ ಬಲರಾಮನು ಸುಭದ್ರೆಯನ್ನು ದುರ್ಯೋಧನನಿಗೆ ಕೊಡುವ ಸನ್ನಾಹದಲ್ಲಿದ್ದ ವಾರ್ತೆ ಅವನ ಕಿವಿಗೆ ಬಿತ್ತು. ಸ್ವಲ್ಪ ವಿಚಾರ ಮಾಡಿ ಅರ್ಜುನ ಯತಿವೇಷವನ್ನು ಧರಿಸಿಕೊಂಡು ದ್ವಾರಾವತಿಯತ್ತ ಹೊರಟ. ಊರ ಬಳಿಗೆ ಅರ್ಜುನ ಆ ರೀತಿ ಬಂದು ನೆಲೆಸಿದ್ದುದನ್ನು ಸತ್ಯಭಾಮೆಯೊಂದಿಗೆ ಹಾಸಿಗೆಯ ಮೇಲೆ ಪವಡಿಸಿದ್ದ ಕೃಷ್ಣನು ಕಂಡು ಗಟ್ಟಿಯಾಗಿ ನಕ್ಕುಬಿಟ್ಟ. ಎಲ್ಲವನ್ನೂ ತಿಳಿದಿದ್ದರೂ ಸತ್ಯಭಾಮೆಯು ಲೀಲೆಗಾಗಿ ಅದಕ್ಕೆ ಕಾರಣವನ್ನು ಕೇಳಲು, ಕೃಷ್ಣನೂ ಲೀಲೆಗೆಂದೇ ಉತ್ತರಿಸಿ, ಆ ವಿಷಯ ತಿಳಿಸಿದ. ಇಬ್ಬರೂ ಭೋಜರು, ವೃಷ್ಣಿಗಳು ಮತ್ತು ಅಂಧಕರಿಗೆಲ್ಲ ಕ್ರೀಡಾಭೂಮಿಯೆನ್ನಿಸಿದ್ದ ರೈವತಪರ್ವತದ ಬಳಿ ಬಂದು ಅಲ್ಲಿ ಅರ್ಜುನನನ್ನು ಕಂಡು, ರಹಸ್ಯವಾಗಿ, ಅವನಿಗೆ ತನ್ನ ತಂಗಿ ಸುಭದ್ರೆಯನ್ನು ಕೊಡುವುದಾಗಿ ವಾಗ್ದಾನ ಮಾಡಿ, ಮತ್ತೆ ಯಾದವರ ಬಳಿಗೆ ತೆರಳಿದ. ಬಂಧುಗಳಿಂದ ಕೂಡಿದ ಬಲರಾಮನು ಪರ್ವತದಲ್ಲಿ ಯತಿವೇಷದ ಅರ್ಜುನನನ್ನು ಕಂಡು, ಅವನನ್ನು ನಿಜವಾದ ಯತಿಯೆಂದೇ ತಿಳಿದು ನಮಸ್ಕರಿಸಿ ಪೂಜಿಸಿದ. ''ನೀನು ಗುಣಜ್ಯೇಷ್ಠ ''ಎಂಬುದಾಗಿ ಹೇಳುತ್ತಾ ಅರ್ಜುನನೂ ಸಹ ಬಲರಾಮನಿಗೆ ನಮಸ್ಕಾರ ಮಾಡಿದ. ಅವನು ಎಲ್ಲವನ್ನೂ ತಿಳಿದವನೂ, ವಾಚಾಳಿಯೂ ಎಂಬುದನ್ನು ಕಂಡು ಬಲರಾಮ, ಚಾತುರ್ಮಾಸ್ಯಕಾಲದಲ್ಲಿ ಕನ್ಯಾಗೃಹದಲ್ಲಿ ಅವನು ವಾಸಿಸಲು ಯೋಗ್ಯವಾದ ಸಿದ್ಧತೆಗಳನ್ನು ಮಾಡಲು, ಕೃಷ್ಣನಿಗೆ ಹೇಳಿದ. ಕೃಷ್ಣನು ಮಾತ್ರ ''ಇದು ಸರಿಯಲ್ಲ; ಯುವಕನೂ, ಬಲಾಢ್ಯನೂ, ಸುಂದರಾಂಗನೂ, ಅತ್ಯಂತ ವಾಗ್ಮಿಯೂ ಆಗಿರುವ ಇವನು ಕನ್ಯಾಗಾರದಲ್ಲಿರುವುದು ಉಚಿತವೆನ್ನಿಸದು'' ಎಂಬುದಾಗಿ ಎಚ್ಚರಿಸಿದ.

---

೧. ಇದು ಒಂದು ರೀತಿಯಲ್ಲಿ ಗಜೇಂದ್ರಮೋಕ್ಷದ ಪ್ರಸಂಗದಲ್ಲಿ ಮೊಸಳೆಗೆ ಸದ್ಗತಿ ಲಭಿಸಿದ ವಿವರವನ್ನು ಹೋಲುವುದು. ಆ ಮೊಸಳೆಯ ಉದ್ಧಾರಕ್ಕೆ ಗಜೇಂದ್ರನ ಪಾದ ಹಿಡಿದದ್ದು ಕಾರಣವಾದರೆ, ಇಲ್ಲಿ ಈ ಮೊಸಳೆಗಳ ಉದ್ಧಾರಕ್ಕೆ ದೇವೇಂದ್ರನ ಅವತಾರನಾದ ಅರ್ಜುನನ ಪಾದವನ್ನು ಹಿಡಿದದ್ದು ಕಾರಣವಾಯಿತು. ಇದರಿಂದ ಭಗವದ್ಭಕ್ತರ ಪಾದವನ್ನು ದೃಢವಾಗಿ ನಂಬುವುದು ಸಹ ಪಾಪಗಳ ಬಿಡುಗಡೆಗೆ ಶ್ರೇಷ್ಠಸಾಧನ ಎಂಬ ತತ್ತ್ವ ನಿರೂಪಿತವಾಗುವುದು.

ಜಗದೊಡೆಯನಿಗೆ ಬಲರಾಮ ವಿವರಣೆಯಿತ್ತ - ''ವಿದ್ಯಾವಂತನಾದ ಇವನಲ್ಲಿ ಅಂತಹ ಶಂಕೆ ತರವಲ್ಲ'' ಕೃಷ್ಣನು ಮತ್ತೆ ''ನನ್ನ ದೃಷ್ಟಿಯಲ್ಲಂತೂ ಇದು ಸರಿ ಕಾಣುವುದಿಲ್ಲ, ಆದರೆ ನಿನ್ನ ಮಾತು ನಮ್ಮೆಲ್ಲರಿಗೂ ಮಾನ್ಯವಾದ್ದರಿಂದ, ಹಾಗೆಯೇ ಆಗಲಿ.'' ಎಂದು ಹೇಳಿ, ಕನ್ಯಾ-ಗಾರದಲ್ಲಿಯೇ ಅರ್ಜುನನನ್ನು ಇಳಿಸಿದ ; ಹಾಗೂ ತಂಗಿ ಸುಭದ್ರೆಗೆ ಆ ಯತಿಯನ್ನು ಎಚ್ಚರಿಕೆ ಯಿಂದ ಉಪಚರಿಸುವಂತೆ ಆದೇಶವಿತ್ತ. ಸುಭದ್ರೆ ಅದೇ ರೀತಿ ನಡೆದುಕೊಂಡಳು. ವಿವಿಧ-ರೀತಿಯ ಭಗವತ್ಕಥೆಗಳ ಸಲ್ಲಾಪಗಳಲ್ಲಿಯೇ ಯತಿರೂಪದ ಅರ್ಜುನನ ಚಾತುರ್ಮಾಸ್ಯವು ಅಲ್ಲಿ ಕಳೆಯಿತು. ಕೃಷ್ಣನ ಮಾತಿನ ಮೇಲೆ ಅವನಿಗೆ ಸ್ವಲ್ಪವೂ ಸಂಶಯ ಇರಲಿಲ್ಲ. ಅರ್ಜುನನ ಬೇಡಿಕೆಯಂತೆ ''ಸುಭದ್ರೆಯನ್ನು ನಿನಗೆ ಕೊಡುವೆನು'' ಎಂಬುದಾಗಿ ಕೃಷ್ಣ ವಚನವಿತ್ತಿದ್ದ ಸಂಗತಿಯು ವಸುದೇವ, ದೇವಕಿ, ವಿಪೃಥು ಮತ್ತು ಸಾತ್ಯಕಿ ಇವರ ಹೊರತು ಬೇರಾರಿಗೂ ತಿಳಿದಿರಲಿಲ್ಲ. ಅಸ್ತ್ರ ಶಸ್ತ್ರಗಳಲ್ಲೂ, ತತ್ತ್ವವಿದ್ಯೆಗಳಲ್ಲೂ ಸಾತ್ಯಕಿಯು ವಾಸುದೇವ ಮತ್ತು ಅರ್ಜುನರ ಶಿಷ್ಯನಾಗಿದ್ದರಿಂದ, ಅವನಿಗೆ ಕೃಷ್ಣ ಆ ವಿಷಯವನ್ನು ತಿಳಿಸಿದ್ದ. ತನ್ನ ಶಿಷ್ಯನಾದ್ದರಿಂದ ವಿಪೃಥುವಿಗೂ ಅದನ್ನು ಹೇಳಿದ್ದ. ಉದ್ಧವ, ಆಹುಕ, ಹಾರ್ದಿಕ್ಯ ಮೊದಲಾದ ಇತರ-ರೆಲ್ಲರೂ, ಪಾಂಡುಪುತ್ರರು ಕೃಷ್ಣನಿಗೆ ಅತ್ಯಂತಪ್ರಿಯರು ಎಂಬುದನ್ನು ಚೆನ್ನಾಗಿಯೇ ತಿಳಿದಿದ್ದರೂ, ಬಲರಾಮನ ಅಪ್ಪಣೆಯಿಂದಾಗಿ , ಸುಭದ್ರೆಯನ್ನು ಅರ್ಜುನನಿಗೆ ಕೊಡುವ ಮನಸ್ಸನ್ನು ಹೊಂದಿರಲಿಲ್ಲ. ಅಸುರಾವೇಶದಿಂದಾಗಿ ಶ್ರೀಹರಿಗೆ ಅಪ್ರೀತಿಕರವಾದ ಆ ವಿಷಯದಲ್ಲಿ , ಬಲರಾಮಪ್ರೀತ್ಯರ್ಥವಾಗಿ ಅವರೆಲ್ಲ ದುರ್ಯೋಧನನಿಗೆ ಸುಭದ್ರೆಯನ್ನು ನೀಡುವ ವಿಚಾರ-ದಲ್ಲಿ ಮನಸ್ಸು ಹಾಕಿದ್ದರು. ಅದಕ್ಕೆಂದೇ ಕೃಷ್ಣ ಅವರನ್ನೆಲ್ಲ ವಂಚಿಸಿದ. ಹಾಗೆ ವಂಚಿತರಾದ-ವರಲ್ಲಿ ಪ್ರದ್ಯುಮ್ನ, ಸಾಂಬ ಮೊದಲಾದವರೂ ಸೇರಿದ್ದರು.

## ಸುಭದ್ರಾ ಕಲ್ಯಾಣ

ಒಮ್ಮೆ ಬಲರಾಮನೊಂದಿಗೆ ಉಳಿದೆಲ್ಲ ಯಾದವರೂ ತೀರ್ಥಸ್ನಾನಕ್ಕಾಗಿ ಮಹೋತ್ಸವ-ಗಳು ಎಡೆಬಿಡದೆ ನಡೆದಿದ್ದ 'ಪಿಂಡೋದ್ಧಾರ' ಎಂಬ ಕ್ಷೇತ್ರಕ್ಕೆ ಹೊರಟರು. ಆ ಸಮಯದಲ್ಲಿ ಸುಭದ್ರೆಯು ಯತಿರೂಪದ ಅರ್ಜುನನನ್ನು ''ಪೂಜ್ಯರೇ ! ತಮ್ಮ ಸಂಚಾರಕಾಲದಲ್ಲಿ ನಮ್ಮ ಪ್ರಿಯಬಂಧುಗಳಾದ ಪಾಂಡವರನ್ನೂ, ಕುಂತಿಯನ್ನೂ, ದ್ರೌಪದಿಯನ್ನೂ, ತಾವೇನಾದರು ಕಂಡಿದ್ದುಂಟೇ?'' ಎಂದು ಪ್ರಶ್ನಿಸಿದಳು. ನಿರ್ವಿಕಾರಚಿತ್ತದಿಂದ ಅರ್ಜುನ ಉತ್ತರಿಸಿದ - ''ಹೌದು.'' ''ಪೂಜ್ಯರೇ ! ಇಂದ್ರಸೂನುವಾದ ಅರ್ಜುನ ತೀರ್ಥಯಾತ್ರೆಗೆ ಹೊರಟಿದ್ದಾನೆಂದು ಬ್ರಾಹ್ಮಣರ ಮೂಲಕ ನಾನು ಕೇಳಿರುವೆನು ;ಅವನನ್ನೇನಾದರೂ ತಾವು ಕಂಡಿರಾ ?'' ಸುಭದ್ರೆ ಮತ್ತೆ ಕೇಳಿದಳು. ''ಹೌದು'' ಎಂಬ ಅರ್ಜುನನ ಮಾತಿಗೆ ''ಎಲ್ಲಿ ?'' ಎಂದು ಕಾತರದಿಂದ ಸುಭದ್ರೆ ಕೇಳಲು, ಅರ್ಜುನ ಮಂದಹಾಸದಿಂದ ನುಡಿದ ''ಇಲ್ಲಿಯೇ''. ''ಎಲ್ಲಿ? ಎಲ್ಲಿ?'' ಎಂದು ಅವಳು ಮತ್ತೆ ಮತ್ತೆ ಪ್ರಶ್ನಿಸಲು, ಅರ್ಜುನ ''ಓ ಹೆಣ್ಣೇ ! ಅವನೇ ನಾನು'' ಎಂದು ನುಡಿದು ಮುಗುಳ್ನಕ್ಕ. ಅರಳಿದ ಕಣ್ಣುಗಳಿಂದ ಅರ್ಜುನನನ್ನು ದಿಟ್ಟಿಸಿದ ಅವಳು ಆನಂದದಿಂದ ಪುಲಕಿತ-

ಳಾಗಿ, ಲಜ್ಜೆಯಿಂದಾಗಿ ಏನನ್ನೂ ಹೇಳಲಾರದಾದಳು. ಕಾಮಪೀಡಿತನಾದ ಅರ್ಜುನ "ನಮ್ಮ ವಿವಾಹಕ್ಕೆ ಇದೇ ಸರಿಯಾದ ಸಮಯ" ಎಂದು ನುಡಿಯಲು, ಸುಭದ್ರೆ - "ಕೃಷ್ಣನ ಮಾತನ್ನು ಮೀರಿ ನಡೆಯುವುದು ತರವಲ್ಲ. ಅವನು ನನ್ನ ತಂದೆ ತಾಯಿಗಳ ಮೂಲಕ ಧಾರೆ ಎರೆಯುವ, ಬಂಧುಗಳಿಂದ ಕೂಡಿದ ಉತ್ಸವದಲ್ಲಿ ನೀನು ನನ್ನ ಕೈಹಿಡಿಯಬೇಕು" ಎಂದು ಕೇಳಿಕೊಂಡಳು.[೧] ಅರ್ಜುನ ಕೃಷ್ಣನನ್ನು ಧ್ಯಾನಿಸಿದ. ಕೂಡಲೇ ವಸುದೇವ ದೇವಕಿಯರೊಂದಿಗೆ ಕೃಷ್ಣ ಅಲ್ಲಿಗೆ ಆಗಮಿಸಿದ. ಅರ್ಜುನನಿಂದ ಸ್ಮರಿಸಲ್ಪಟ್ಟ ಇಂದ್ರನೂ ಸಹ ಶಚಿ ಹಾಗೂ ಮುನಿಶ್ರೇಷ್ಠರೊಂದಿಗೆ ಅಲ್ಲಿಗೆ ಬಂದ. ರಾತ್ರಿಯಲ್ಲಿ ಕೃಷ್ಣ ಇಂದ್ರನೊಂದಿಗೆ ಅವರಿಬ್ಬರ ವಿವಾಹವನ್ನು ವಿಧ್ಯುಕ್ತವಾಗಿ ನಡೆಸಿದ. ಬೇರಾರಿಗೂ ತಿಳಿಯದಂತೆ ನಡೆದ ಆ ಮಹೋತ್ಸವದಲ್ಲಿ ವಸುದೇವ ದೇವಕಿಯರೊಂದಿಗೆ ಸಾತ್ಯಕಿ ಹಾಗೂ ಮುನಿಶ್ರೇಷ್ಠರು ಪಾಲ್ಗೊಂಡರು. ಅರ್ಜುನನಿಗಾಗಿ ತನ್ನ ರಥವನ್ನು ಕೊಟ್ಟು ಕೃಷ್ಣ ಆ ರಾತ್ರಿಯಲ್ಲಿ ಅಲ್ಲಿಂದ ತೆರಳಿದ. ಇಂದ್ರನೂ ಸಹ ತನ್ನವರೊಂದಿಗೆ ಹೊರಟು-ಹೋದ.

## ಅರ್ಜುನನ ಪರಾಕ್ರಮ

ಅರ್ಜುನ ಪತ್ನೀಸಮೇತನಾಗಿ ರಥವನ್ನೇರಿ ಅಲ್ಲಿಂದ ಹೊರಟ. ಎಲ್ಲ ರೀತಿಯ ಆಯುಧ-ಗಳಿಂದ ತುಂಬಿದ್ದ ಆ ರಥದಲ್ಲಿ ಧನುರ್ಧಾರಿಯಾದ ಅರ್ಜುನ ಸಾಗಿಬರುವುದನ್ನು ಕಂಡು ದ್ವಾರಾವತಿಯೆಲ್ಲ ಕೋಲಾಹಲದಿಂದ ತುಂಬಿಹೋಯಿತು. "ಅಯ್ಯೋ ! ಏನಿದು ! ಈ ಸನ್ಯಾಸಿ(ತ್ರಿದಂಡಿ)ಯು ಧನುರ್ಧಾರಿಯಾಗಿ ಕನ್ಯೆಯನ್ನು ಅಪಹರಿಸುತ್ತಿರುವನಲ್ಲಾ!" ಎಂಬ ಕೂಗು ಎಲ್ಲೆಡೆಯೂ ಕೇಳಲಾರಂಭಿಸಿತು. ಅನಂತರ ಕವಚವನ್ನು ಧರಿಸಿಕೊಂಡು, ಇಂದ್ರ-ದತ್ತವಾದ ದಿವ್ಯ ಕುಂಡಲಗಳನ್ನೂ, ವಸ್ತ್ರಗಳನ್ನೂ, ದಿವ್ಯರತ್ನಗಳನ್ನೂ, ವಿಭೂಷಣಗಳನ್ನೂ ಹೊಂದಿದ್ದ ಅವನನ್ನು ಪುರರಕ್ಷಣೆಯ ಸೇನೆ ತಡೆಯಿತು. ಅಂಗೈಗಳಿಗೂ ಬೆರಳುಗಳಿಗೂ ಕವಚಗಳನ್ನು ಧರಿಸಿದ್ದ ಅರ್ಜುನ ಆ ಸಮಯದಲ್ಲಿ ಧನುಸ್ಸನ್ನು ತೆಗೆದುಕೊಂಡು ಬಾಣಗಳಿಂದ ಅಂತರಿಕ್ಷವನ್ನು ದಿಕ್ಕು ವಿದಿಕ್ಕುಗಳನ್ನು ತನ್ನ ಅಭ್ಯಾಸ ಹಾಗೂ ವಿದ್ಯೆಗಳ ಬಲದಿಂದಾಗಿ ತುಂಬಿಸಿ ಬಿಟ್ಟ. ಈ ಸಮಯಕ್ಕೆಂದೇ ಕೃಷ್ಣನಿಂದ ಶಿಕ್ಷಣ ಪಡೆದಿದ್ದ ಸುಭದ್ರೆ ಸಾರಥ್ಯವನ್ನು ಸಮರ್ಥ-ರೀತಿಯಲ್ಲಿ ನಿರ್ವಹಿಸಿದಳು[೨]. ಆ ಸಮಯದಲ್ಲಿ ತನ್ನನ್ನು ಅಡ್ಡಗಟ್ಟಿದ ಯಾರಿಗೂ ಗಾಯ-

---

೧. ಇಂದ್ರಾವತಾರನಾದ ಅರ್ಜುನ ಆ ಒಂದು ಕ್ಷಣದಲ್ಲಿ ಗಾಂಧರ್ವವಿವಾಹಕ್ಕೆ ಮನಸ್ಸು ಮಾಡಿದರೂ, ಕೃಷ್ಣನ ತಂಗಿ ಎಂಬ ಹಿರಿಮೆಯ ಸುಭದ್ರೆ ಅದಕ್ಕೆ ಒಪ್ಪದೆ ಕೃಷ್ಣನ ಆಣತಿಯಂತೆ ತಂದೆತಾಯಿಯರಿಂದ ಧಾರೆಯೆರೆಯಲ್ಪಡುವ ವಿವಾಹವನ್ನು ಬಯಸಿದ್ದು ಗಮನಾರ್ಹ. ಇಂತಹ ಸಂಯಮ ವಿವೇಕಗಳು ಅವಳಿಗೆ ಬರಲು ಭಗವಂತನಾದ ಶ್ರೀಕೃಷ್ಣನ ತಂಗಿ ಎನ್ನಿಸಿದ ಭಾಗ್ಯ ಕಾರಣವಾಯಿತು ಎಂದು ತಿಳಿಯಬೇಕು. ಇದರಿಂದ "ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋऽಭಿಜಾಯತೇ । ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್॥" ಎಂಬ ಗೀತೆಯ ಮಾತಿನ ಮಹತ್ತ್ವ ತಿಳಿಯುವುದು.

೨. ಸ್ತ್ರೀಯರು ಹೀಗೆ ತಮ್ಮ ಗಂಡಂದಿರ ರಥಗಳಿಗೆ ಸಾರಥ್ಯವನ್ನು ವಹಿಸುವುದು ಹೊಸತೇನಲ್ಲ. ದಶರಥನಿಗೆ ಕೈಕೇಯಿ ಸಾರಥಿಯಾಗಿದ್ದ ಪ್ರಸಂಗ ರಾಮಾಯಣದಲ್ಲಿದೆ. ಶ್ರೀಕೃಷ್ಣನಿಗೆ ಸತ್ಯಭಾಮಾದೇವಿ ಸಾರಥಿಯಾದ

ವಾಗದ ರೀತಿಯಲ್ಲಿ ಅರ್ಜುನ ಹೋರಾಟ ನಡೆಸಿದ. ಅರ್ಜುನ ತನ್ನ ಮಹಾಸ್ತ್ರಗಳ ಕೌಶಲ-ದಿಂದಾಗಿ ಅವರೆಲ್ಲರ ಮನಸ್ಸಿನಲ್ಲಿ ಭೀತಿಯನ್ನು ಮಾತ್ರ ಹುಟ್ಟಿಸಿದ. ಪಟ್ಟಣದಿಂದ ಹೊರ-ಬರುತ್ತಿದ್ದಂತೆಯೇ ಬಲರಾಮನಿಂದ ನಗರರಕ್ಷಣೆಗಾಗಿ ನಿಯಮಿಸಲ್ಪಟ್ಟ ವಿಪೃಥು ಅವನನ್ನು ಕಂಡ. ಬಲರಾಮನಿಗೆ ಸಂತೋಷವುಂಟುಮಾಡುವ ರೀತಿಯಲ್ಲಿ ನಟನೆಯನ್ನು ಮಾತ್ರ ಮಾಡಿದ ; ಅವನು ಕೃಷ್ಣನ ಅಪ್ಪಣೆಯಂತೆ ಅರ್ಜುನನನ್ನು ನಿಜಕ್ಕೂ ತಡೆಯುವ ಯತ್ನಕ್ಕೆ ತೊಡಗಲೇ ಇಲ್ಲ. ಸೌಮ್ಯ ಎಂಬ ಒಬ್ಬ ಮರುತ್ ಕೃಷ್ಣನ ಸೇವೆಗಾಗಿ ಆ ರೀತಿ ವಿಪೃಥುವಾಗಿ ಜನಿಸಿ ಬಂದಿದ್ದ. ಆ ಯಾದವನಿಗೂ ಸಹ ಮೈಯಲ್ಲಿ ಗಾಯವಾಗದ ರೀತಿಯಲ್ಲೇ ಅರ್ಜುನ ಬಾಣಗಳನ್ನು ಹೊಡೆದು, ನಿರಾಯುಧನನ್ನಾಗಿಯೂ, ವಿರಥನನ್ನಾಗಿಯೂ ಮಾಡಿದ. ಅವನ ಸೇನೆಯನ್ನು ಸಹ ಕೊಲ್ಲಲಿಲ್ಲ. ಅಷ್ಟು ತೀಕ್ಷ್ಣವಾದ ಬಾಣಗಳನ್ನು ಚರ್ಮಕ್ಕೂ ನೋವಾಗದ ರೀತಿಯಲ್ಲಿ ಪ್ರಯೋಗಿಸುತ್ತಿದ್ದ ಅರ್ಜುನನ ಕೌಶಲ ವಿಪೃಥುವಿಗೆ ಆಶ್ಚರ್ಯದೊಂದಿಗೆ ಸಂತೋಷವನ್ನು ಉಂಟುಮಾಡಿದವು. ಸಮೀಪಕ್ಕೆ ಹೋಗಿ ಯುದ್ಧ ಮಾಡುವವನಂತೆ ನಟಿಸು-ತ್ತಲೇ ವಿಪೃಥು ಅರ್ಜುನನಿಗೆ ಕೃಷ್ಣನ ಆಣತಿಯನ್ನು ವಿವರಿಸಿದ. ಅನಂತರ ಪರಾಜಿತ-ನಾದವನಂತೆ ಹಿಂದಕ್ಕೆ ಬಂದು, ತ್ವರೆಯಿಂದ ಹೊರಟು ಬಲರಾಮನಿಗೆ ಎಲ್ಲ ವಿಷಯವನ್ನು ತಿಳಿಸಿದ. ಕೋಪಗೊಂಡ ಬಲರಾಮನು ಪ್ರದ್ಯುಮ್ನ ಸಾಂಬ ಮೊದಲಾದವರೊಂದಿಗೆ ಅರ್ಜುನ ನನ್ನು ಕೊಲ್ಲುವ ಬಯಕೆಯಿಂದ ದ್ವಾರಾವತಿಗೆ ಧಾವಿಸಿದ. ವಿಪೃಥುವಿನ ಮೂಲಕ ತಾನೂ ಎಲ್ಲವನ್ನೂ ಕೇಳಿದ ಕೃಷ್ಣ , ಸುಧರ್ಮ ಎಂಬ ಸಭೆಗೆ ಮನಸ್ಸು ಬೇಸರಗೊಂಡವನಂತೆ ತಲೆ ತಗ್ಗಿಸಿಕೊಂಡೇ ಬಂದ. ಸಭೆಯಲ್ಲಿ ಪ್ರದ್ಯುಮ್ನಾದಿಗಳೆಲ್ಲ ಆರ್ಭಟಿಸುತ್ತಾ ನುಡಿದರು – "ನಾವೆಲ್ಲ ಹೋಗಿ ಆ ಕಪಟಸನ್ಯಾಸಿಯನ್ನು ಕೊಂದು ಸುಭದ್ರೆಯನ್ನು ಕೂಡಲೇ ಹಿಂದಕ್ಕೆ ಕರೆತರೋಣ." ಬಲರಾಮ ಅವರಿಗೆಲ್ಲ ಕೃಷ್ಣನ ಅಪ್ಪಣೆಯನ್ನು ಪಡೆದುಕೊಂಡೇ ಹೋಗುವುದು ಉಚಿತ ; ಸ್ವೇಚ್ಛೆಯಿಂದ ಸರ್ವಥಾ ಹೋಗಕೂಡದು ಎಂದು ಎಚ್ಚರಿಸಿದ. "ಕೃಷ್ಣನ ಅಭಿಪ್ರಾಯವನ್ನು ಮೊದಲೇ ತಿಳಿಯಬೇಕು. ಅವನಿಗೆ ವಿರೋಧ ಮಾಡಿದಲ್ಲಿ ನಿಮಗೆಂದೂ ಯಶಸ್ಸು ದೊರೆಯದು." ಬಲರಾಮನ ಈ ಮಾತನ್ನು ಕೇಳಿ ಎಲ್ಲರೂ ಕೃಷ್ಣನ ಬಳಿಗೆ ಬಂದು ನಮಸ್ಕರಿಸಿ, ಅವನನ್ನು ಕೇಳಿಕೊಂಡರು.

## ಕೃಷ್ಣನ ಸಾಂತ್ವನ

ಅಮಿತಪರಾಕ್ರಮಿಯಾದ ವಾಸುದೇವ ಗಂಭೀರ ಸ್ವರದಿಂದ ನುಡಿದ – "ನೀವೆಲ್ಲ ನನ್ನ ಮಾತನ್ನು ಕೇಳಿರಿ. ಆ ಕಪಟಸನ್ಯಾಸಿಯು ಕನ್ಯಾಗೃಹದಲ್ಲಿರುವುದು ಯೋಗ್ಯವಲ್ಲವೆಂದು ನಾನು ಆಗಲೇ ಹೇಳಿದ್ದೆ. ಆದರೆ ನಮ್ಮ ಅಣ್ಣ ನನ್ನ ಮಾತನ್ನು ಸ್ವೀಕರಿಸಲಿಲ್ಲ. ಬಹುದೋಷಗಳನ್ನು

---

ವಿವರ ಈಗಾಗಲೇ ಬಂದಿದೆ. ಕ್ಷತ್ರಿಯಕನ್ಯೆಯರು ಸ್ವತಃ ಯುದ್ಧದಲ್ಲೂ ನಿಪುಣರಾಗಿದ್ದುದು ಇತಿಹಾಸದಲ್ಲಿ ಕಂಡಿದೆ. ಈ ಪ್ರಸಂಗವನ್ನು ಮುಂಚಿತವಾಗಿಯೇ ತಿಳಿದು ಅದಕ್ಕಾಗಿ ಸುಭದ್ರೆಯನ್ನು ಅಣಿಗೊಳಿಸಿದ ಶ್ರೀಕೃಷ್ಣನ ಹಿರಿಮೆ ಮಾತ್ರ ಅತ್ಯದ್ಭುತವಾದುದು.

ಹೇಳುತ್ತಲೇ ನಾನಾದರೋ ಅಣ್ಣನ ಮಾತನ್ನು ಮೀರಕೂಡದೆಂಬ ಭಾವನೆಯಿಂದ ಕನ್ಯಾ-ಗೃಹದಲ್ಲಿ ಆ ಕಪಟಿಯ ವಾಸಕ್ಕೆ ಏರ್ಪಾಟು ಮಾಡಬೇಕಾಯಿತು. ಇದೆಲ್ಲ ಕಳೆದ ಮಾತಾ-ಯಿತು. ಈಗಲಾದರೋ ನಿಮ್ಮೆಲ್ಲರ ಎದುರೆ ಅವನು ಕನ್ಯೆಯನ್ನು ಅಪಹರಿಸಿರುವನು. ಅವನು ಪಾರ್ಥನೆಂದೇ ವಿಪೃಥುವಿನಿಂದ ನಮಗೆ ಗೊತ್ತಾಗಿದೆ. ಕನ್ಯೆಯನ್ನಾದರೋ ನಾವು ಹೇಗೂ ಧಾರೆ ಎರೆಯಲೇಬೇಕು. ಅರ್ಜುನನಿಗೆ ಸಮನಾದ ವರ ನಮಗೆ ಬೇರಾವನೂ ದೊರೆಯನು. ಪಾರ್ಥನಾದರೋ ಕುರುಕುಲಸಂಜಾತನೇ. ಅವನು ವೇದವ್ಯಾಸರ ಮೊಮ್ಮಗ. ಸಾಲದ್ದಕ್ಕೆ ನಮಗೆ ಸೋದರತ್ತೆಯ ಮಗನೂ ಆಗಿರುವನು. ವೀರಶ್ರೇಷ್ಠನೂ, ಗುಣಪೂರ್ಣನೂ ಆಗಿರುವ ಅವನನ್ನು ನಿಜವಾಗಿ ನಾವೇ ಕೇಳಿಕೊಳ್ಳಬೇಕಿತ್ತು. ಇಂದ್ರಪುತ್ರನಾದ ಅವನು ಈಗ ತಾನಾಗಿಯೇ ಅವಳನ್ನು ಕರೆದೊಯ್ದಿರುವನು, ಎಂದಮೇಲೆ ಇಲ್ಲಿ ನಡೆದಿರುವ ಅಚಾತುರ್ಯವಾದರೂ ಏನು? ಅವನನ್ನು ಬೆಂಬತ್ತಿ ನೀವೇನಾದರೂ ಸೋತಲ್ಲಿ ಆಗ ನಿಮ್ಮೆಲ್ಲರಿಗೆ ಅಪಕೀರ್ತಿ ತಪ್ಪಿದ್ದಲ್ಲ. ಒಂದು ವೇಳೆ ನೀವೇ ಗೆದ್ದು ಕನ್ಯೆಯನ್ನು ಹಿಂದಕ್ಕೆ ತಂದರೂ, ಒಬ್ಬನ ಜೊತೆಗೆ ಹೋದವಳು ಎಂಬ ಕಾರಣದಿಂದ ಬೇರಾರೂ ಅವಳನ್ನು ಮದುವೆಯಾಗಲಾರರು. ಆದ್ದರಿಂದ, ನೀವೀಗ ಹೊರಡುವುದು ನನಗೇನೋ ಸರಿಕಾಣುತ್ತಿಲ್ಲ.'' ಎಂದು ನುಡಿದು ಸುಮ್ಮನಾದ.

ಕೃಷ್ಣನ ಮಾತನ್ನು ಕೇಳಿದ ಬಲರಾಮ ನುಡಿದ – ''ನೀವು ಹೋಗಬೇಡಿ, ಇವನ ಮನಸ್ಸು ನನಗೆ ಅರ್ಥವಾಯಿತು. ಈತನಂತೆ ನಡೆಯುವುದು ಈಗ ನಮ್ಮ ಗೆಲುವಿಗೂ, ಕ್ಷೇಮಕ್ಕೂ, ಶಾಂತಿಗೂ, ಪರಲೋಕದಲ್ಲಿ ಮಾತ್ರವಲ್ಲದೇ ಮುಂದೆ ಮುಕ್ತಿಗೂ ಸಾಧನವಾಗುವುದು.'' ಇತ್ತ ಅರ್ಜುನನು ಕೃಷ್ಣನ ಅನುಗ್ರಹದಿಂದಾಗಿ ಹೋದೆಡೆಯಲ್ಲೆಲ್ಲಾ ಗೆಲುವನ್ನೇ ಕಾಣುತ್ತ ಮುಂದೆ ಸಾಗಿದ ; ಅದೇ ರಥದಲ್ಲಿಯೇ ಪತ್ನೀಸಮೇತನಾಗಿ ಸೋದರರ ರಕ್ಷಣೆ ಹೊಂದಿದ್ದ ಇಂದ್ರ-ಪ್ರಸ್ಥವನ್ನು ಸೇರಿಕೊಂಡ. ಅತ್ಯಂತ ಸಂತೋಷದಿಂದ ಪಾಂಡವರೆಲ್ಲ ಅವನನ್ನು ಸ್ವಾಗತಿಸಿದರು. ಅರ್ಜುನ ತನ್ನೆಲ್ಲ ವಿಷಯವನ್ನು ಅವರಿಗೆ ತಿಳಿಸಿದ. ತನ್ನ ಮಾತಿನಿಂದ ಯಾದವರೆಲ್ಲ ಶಾಂತರಾದ ಮೇಲೆ ಕೃಷ್ಣನು ಬಲರಾಮನೊಂದಿಗೆ ಕೂಡಿಕೊಂಡು, ಗಾಡಿಗಳಲ್ಲಿ ರತ್ನಗಳನ್ನು ತುಂಬಿಸಿಕೊಂಡು ಇಂದ್ರಪ್ರಸ್ಥವನ್ನು ಸೇರಿ, ಪಾಂಡವರಿಂದ ಪೂಜಿತನಾದ. ಬಲರಾಮನೊಂದಿಗೆ ತಾನು, ಆ ಎಲ್ಲಾ ಭೂಷಣಾದಿಗಳನ್ನು ಅವರಿಗೂ, ತನ್ನ ತಂಗಿಗೂ ಕಾಣಿಕೆಯನ್ನಾಗಿ ನೀಡಿದ. ಕೆಲವು ತಿಂಗಳು ಕಾಲ ಅಲ್ಲಿಯೇ ಇದ್ದ ಬಲರಾಮ ದ್ವಾರಾವತಿಗೆ ಮರಳಿದ. ಕೃಷ್ಣನು ಅನೇಕ ವರ್ಷಗಳ ಕಾಲ ಪಾಂಡವರಿಂದ ಪೂಜಿತನಾಗಿ ತನ್ನ ಹೆಚ್ಚಿನ ಪ್ರೀತಿಯನ್ನು ಅವರ ಮೇಲೆ ತೋರಿಸುತ್ತ ಅಲ್ಲಿಯೇ ಉಳಿದ.

## ಪಾಂಡವರ ಮಕ್ಕಳು

ಗಂಧರ್ವಮುಖ್ಯರಾದ ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ ಮತ್ತು ಬಲ ಎಂಬ ಐವರಿಂದ ಆವಿಷ್ಟರಾಗಿ, ಐದು ಜನ ವಿಶ್ವೇದೇವತೆಗಳು ದ್ರೌಪದಿಯ ಪುತ್ರರಾಗಿ ಜನಿಸಿದರು. ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶ್ರುತಾನೀಕ ಮತ್ತು ಶ್ರುತಕ್ರಿಯ ಎಂಬ ಹೆಸರಿನ ಆ

ಐವರು ಕ್ರಮವಾಗಿ ಧರ್ಮರಾಜ, ಭೀಮಸೇನ, ಅರ್ಜುನ, ನಕುಲ ಹಾಗೂ ಸಹದೇವರ ಮಕ್ಕಳು. ಅಭಿಮನ್ಯು ಅವರಲ್ಲಿ ಪ್ರತಿವಿಂಧ್ಯ ಮತ್ತು ಶ್ರುತಸೋಮರಿಗಿಂತ ಕಿರಿಯ ; ಅರ್ಜುನನಿಂದ ಸುಭದ್ರೆಯಲ್ಲಿ ಜನಿಸಿದ ಅವನು ಹೆಚ್ಚಾಗಿ ಚಂದ್ರಾಂಶದಿಂದ ಕೂಡಿದ ಬುಧನ ಅವತಾರ. ಅವನಲ್ಲಿ ಕೃಷ್ಣನ ಉತ್ತಮ ಸನ್ನಿಧಾನದೊಂದಿಗೆ ಧರ್ಮ, ವಾಯು, ಶಕ್ರ ಮತ್ತು ಅಶ್ವಿನೀದೇವತೆಗಳ ಅಂಶವೂ ಇದ್ದವು. ಅವರೆಲ್ಲರೂ ಮಹಾಪರಾಕ್ರಮಿಗಳೂ, ಸುಂದರ-ಕಾಯರೂ, ಸರ್ವಶಾಸ್ತ್ರಪಾರಂಗತರೂ ಆಗಿದ್ದರು. ವಿಶೇಷವಾಗಿ ವಿಷ್ಣುಭಕ್ತರೂ ಆಗಿದ್ದ ಆ ಮಕ್ಕಳಿಂದ ಪಾಂಡವರೆಲ್ಲ ಬಹಳವಾಗಿ ಸಂತೋಷ ಹೊಂದಿದರು. ಅಭಿಮನ್ಯು ಆ ಎಲ್ಲರಲ್ಲೂ ಎಲ್ಲ ಗುಣಗಳಿಂದಲೂ ಮಿಗಿಲೆನ್ನಿಸಿದ್ದ.

## ಖಾಂಡವವನ ದಹನ

ಒಮ್ಮೆ ಕೃಷ್ಣ ಮತ್ತು ಅರ್ಜುನರು, ಸತ್ಯಭಾಮೆ ಹಾಗೂ ಸುಭದ್ರೆಯರನ್ನು ಕರೆದುಕೊಂಡು ಪರಿಚಾರಕರೊಂದಿಗೆ ವಿನೋದಾರ್ಥವಾಗಿ ಖಾಂಡವವನಕ್ಕೆ ರಥದಲ್ಲಿ ಹೊರಟರು. ಆ ಸಮಯದಲ್ಲಿ ಅವರನ್ನು ಗಂಧರ್ವರು ಸ್ತುತಿಸುತ್ತಿದ್ದರು. ತಂಗಾಳಿಯಿಂದ ಕೂಡಿದ್ದ ವನ-ದಲ್ಲೂ , ಹೂಗೊಂಚಲುಗಳಿಂದ ಕಂಗೊಳಿಸುತ್ತಿದ್ದ ಯಮುನಾನದಿಯ ನೀರಿನಲ್ಲೂ ಅವರಿಬ್ಬರೂ ಪತ್ನಿಯರೊಂದಿಗೆ ಯಥೇಷ್ಟವಾಗಿ ಕ್ರೀಡಿಸಿದರು. ಅಗ್ನಿಯು ಬ್ರಾಹ್ಮಣನೊಬ್ಬನ ವೇಷವನ್ನು ಧರಿಸಿಕೊಂಡು ಅವರಲ್ಲಿಗೆ ಬಂದು ಆಹಾರ ನೀಡುವಂತೆ ಪ್ರಾರ್ಥಿಸಿಕೊಂಡ. ಕೃಷ್ಣನ ಅನುಮತಿಯಂತೆ ಅರ್ಜುನನು ''ಹೇಳು, ನಿನಗೆ ಎಂತಹ ಆಹಾರ ಬೇಕು ?'' ಎಂದು ಕೇಳಿದ ; ಅವನು ''ನಾನು ಅಗ್ನಿ ; ದೇವತೆಗಳ ಹವಿರ್ವಿಶೇಷಗಳನ್ನು ಕೊಂಡೊಯ್ಯುವ ಕಾರ್ಯಕ್ಕಾಗಿ ಪ್ರಯಾಜ ಮತ್ತು ಅನುಯಾಜ ಎಂಬ ಆಹುತಿಗಳನ್ನು ವೇತನವನ್ನಾಗಿ ಕೊಡುವಂತೆ ನಾನು ಅವರನ್ನು ಕೇಳಿಕೊಂಡೆ ; ನಿನಗೆ ಶಕ್ತಿ ಕುಂದಲಿ ಎಂದು ಶಪಿಸಿ, ಅವರು ಅವುಗಳನ್ನು ಕೊಡ-ಲೊಪ್ಪಿದರು. ಬ್ರಹ್ಮದೇವರ ಬಳಿಗೆ ಹೋಗಿ ನಾನು ನಮಸ್ಕರಿಸಿ ''ನನ್ನ ಬಲ ಮತ್ತೆ ನನಗೆ ಹೇಗೆ ದೊರೆಯುವುದು?'' ಎಂದು ಕೇಳಿಕೊಳ್ಳಲು, ಅವರು, ''ಖಾಂಡವವನವನ್ನು ಭಕ್ಷಿಸಿದರೆ ನಿನ್ನ ಬಲ ನಿನಗೆ ಮರಳಿ ಲಭಿಸುವುದು'' ಎಂದು ಹೇಳಿದರು. ಆದರೆ ಈ ಖಾಂಡವವನವು ಇಂದ್ರನಿಗೆ ಸೇರಿರುವುದರಿಂದ, ನಾನು ತಿನ್ನ ಹೊರಟಾಗಲೆಲ್ಲ ಅವನು ಮಳೆ ಸುರಿಸಿ ನನ್ನ ಕಾರ್ಯಕ್ಕೆ ಅಡ್ಡಿಯಾಗುತ್ತಿರುವನು. ಆದ್ದರಿಂದ ನನಗೆ ಇದನ್ನು ಕೊಡಲು ನಿಮ್ಮನ್ನು ಬೇಡುತ್ತಿರುವೆನು.'' ಎಂದು ವಿವರವಾಗಿ ತಿಳಿಸಿದ. ''ನನಗೆ ರಥ ಹಾಗೂ ಧನುಸ್ಸುಗಳನ್ನು ತಂದು ಕೊಟ್ಟಲ್ಲಿ ಇಂದ್ರನನ್ನು ಎದುರಿಸುವೆ'' ಎಂದು ಅರ್ಜುನನು ಅಗ್ನಿಗೆ ವಚನವಿತ್ತ.

ನರಾವೇಶದಿಂದಾಗಿಯೂ, ಅನ್ನದಾನವನ್ನು ಕೊಡಲು ವಚನ ಕೊಟ್ಟಿದ್ದ ಕಾರಣದಿಂದಲೂ, ಕೃಷ್ಣಪ್ರೇರಣೆಯಿಂದಾಗಿಯೂ ತಾನೇ ಇಂದ್ರನಾದರೂ, ಅರ್ಜುನ ಅವನನ್ನು ಎದುರಿಸುವ ನಿರ್ಧಾರವನ್ನು ಮಾಡಿದ. ಅಗ್ನಿಯೂ ಸಹ, ಪಾರ್ಥನೇ ಆದ ಇಂದ್ರನು, ತನ್ನ ಮಾತನ್ನು ತಾನೇ ವಿರೋಧಿಸಲಾರ ಎಂಬ ಕಾರಣದಿಂದಲೇ ಇಂದ್ರನೊಂದಿಗೆ ವಿರೋಧ ಉಂಟಾಗದಿರಲೆಂದು,

ಪಾರ್ಥನನ್ನು ಬೇಡಿದ. ವಿಷ್ಣುವಿನ ಪ್ರೇರಣೆಯಿಲ್ಲದೆ ಪಾರ್ಥ ಇಂದ್ರನನ್ನು ವಿರೋಧಿಸಲು ಒಪ್ಪಲಾರನೆಂಬ ಕಾರಣದಿಂದಲೂ, ಕೃಷ್ಣನ ಸಹಾಯವಿಲ್ಲದೆ ಅರ್ಜುನ ಆ ಕಾರ್ಯದಲ್ಲಿ ಸಮರ್ಥನಾಗಲಾರ ಎಂಬ ಕಾರಣದಿಂದಲೂ, ಅಗ್ನಿ ಕೃಷ್ಣನಿಂದಲೂ ಅನುಮತಿಯನ್ನು ಪಡೆದ. ಅಗ್ನಿಯು ಅರ್ಜುನನ ಮಾತನ್ನು ಕೇಳಿ ಬದರಿಗೆ ಹೋಗಿ ನಾರಾಯಣನ ಬಳಿಯಿಂದ ಚಕ್ರವನ್ನು ತೆಗೆದುಕೊಂಡು ಬಂದು ಕೃಷ್ಣನಿಗೆ ಅರ್ಪಿಸಿದ. ಗೋಮಂತಪರ್ವತದಲ್ಲಿ ಕೃಷ್ಣನ ಬಳಿಗೆ ಆ ಮೊದಲೇ ಆ ಚಕ್ರವು ಬಂದಿದ್ದರೂ, ಭಕ್ತಿಯಿಂದಾಗಿ ಅಗ್ನಿ ಮತ್ತೆ ಅದನ್ನು ತಂದು ಕೃಷ್ಣನಿಗೆ ಅರ್ಪಿಸಿದ. ವಿಷ್ಣುವಿನ ಚಕ್ರ ಬಹುರೂಪವನ್ನು ಹೊಂದಿದ್ದರೂ, ಆ ಮೊದಲು ಗೋಮಂತದಲ್ಲಿ ಬಂದದ್ದೂ ಮತ್ತು ಈಗ ಅಗ್ನಿ ತಂದುಕೊಟ್ಟದ್ದೂ ಎರಡೂ ಒಂದೇ ಆಗಿದ್ದವು. ಬ್ರಹ್ಮದೇವರ ಗಾಂಡೀವಧನುಸ್ಸನ್ನು ತಂದು ಅಗ್ನಿಯು ಅರ್ಜುನನಿಗೆ ಕೊಟ್ಟ. ಆ ಗಾಂಡೀವ ಮೂಲತಃ ಬ್ರಹ್ಮದೇವರದು. ಅದರಿಂದಲೇ ಅವರು ಎಲ್ಲರನ್ನೂ ನಿಯಮನ ಮಾಡುವರು. ಅದರ ಒಂದಂಶವನ್ನು ಅವರು ಶಿವನಿಗೂ, ಇಂದ್ರನಿಗೂ, ಚಂದ್ರ ಹಾಗೂ ವರುಣರಿಗೂ ಕೊಟ್ಟಿದ್ದರು. ಅದರ ಪ್ರಭಾವದಿಂದಲೇ ಅವರು ಬ್ರಹ್ಮದೇವರ ವರದಿಂದ ಮೂರುಲೋಕ-ಗಳನ್ನು ಕ್ರಮವಾಗಿ ಗೆದ್ದದ್ದು. [೧]ಒಂದುಲಕ್ಷ ಭಾರದಿಂದಾಗಿ ಬೇರಾರೂ ಧರಿಸಲಾಗದ ಅದು ನಿಯಮೇನ ಜಯಪ್ರದವೂ ಆಗಿತ್ತು. ಶುಭ್ರವಾದ ಅಶ್ವಗಳಿಂದ ಕೂಡಿದ ದಿವ್ಯ ರಥವನ್ನೂ , ಎರಡು ಅಕ್ಷಯ ಬತ್ತಳಿಕೆಗಳನ್ನೂ, ಹನೂಮದಂಕದ ರಾಮನ ಧ್ವಜವನ್ನೂ, ವರುಣನಿಂದ ತಂದು ಅಗ್ನಿ ಅರ್ಜುನನಿಗೆ ಕೊಟ್ಟ. ಅಗ್ನಿ ಅರ್ಜುನನಿಗೆ ಕೊಟ್ಟ ಪ್ರತಿಯೊಂದೂ ವಸ್ತುವೂ ದಿವ್ಯವೂ, ಅಭೇದ್ಯವೂ ಆಗಿತ್ತು. ಗಾಂಡೀವಧನುಸ್ಸಿನ ಹೆದೆಯು ಮಿಂಚಿನಂತಹ ಪ್ರಭೆಯನ್ನು ಹೊಂದಿತ್ತು. ಧ್ವಜದಲ್ಲಿದ್ದ ಜಯರೂಪಿಯಾದ ಹನುಮಂತನಿಂದಾಗಿ ವಿಶೇಷವಾಗಿ ಅವೆಲ್ಲ ಅಜೇಯವೆನ್ನಿಸಿದ್ದವು. ಕೃಷ್ಣನ ಅನುಗ್ರಹದಿಂದಾಗಿ ಆ ಗಾಂಡೀವವನ್ನು ಧರಿಸುವ ಶಕ್ತಿ ಅರ್ಜುನನಿಗೆ ಉಂಟಾಯಿತು. ಹಿಂದೆ ಹೇಳಿದ ಶಿವಾದಿದೇವತೆಗಳು ಬ್ರಹ್ಮನ ವರದಿಂದಾಗಿ ಅದನ್ನು ಎತ್ತಬಲ್ಲ ಸಾಮರ್ಥ್ಯವನ್ನು ಹೊಂದಿದ್ದರು. ಅಂತಹ ವರ ಬ್ರಹ್ಮದೇವರಿಂದ ಇಂದ್ರ-ನಿಗೂ ಲಭಿಸಿತ್ತು. ಇಂದ್ರನೇ ಅರ್ಜುನನೆಂಬ ಮತ್ತೊಂದು ಕಾರಣದಿಂದಲೂ ಅರ್ಜುನನಿಗೆ ಅದನ್ನು ಬಳಸಲು ಸಾಧ್ಯವಾಯಿತು.

## ಅರ್ಜುನನ ಪರಾಕ್ರಮ

ಅರ್ಜುನನು ಗಾಂಡೀವದಿಂದ ಬಾಣಗಳನ್ನು ಸುರಿಸುತ್ತ ಒಂದು ಶರಶಾಲೆಯನ್ನೇ ನಿರ್ಮಿಸಿದ. ಹನ್ನೆರಡುಯೋಜನ ವಿಸ್ತೀರ್ಣದ ಒಂದು ಪುರವನ್ನೇ ಅವನು ಆಗ ನಿರ್ಮಿಸಿದ. ಉರಿಯುವ ಜ್ವಾಲೆಗಳಿಂದ ಕೂಡಿದ ಅಗ್ನಿ ನಿರಾತಂಕವಾಗಿ ವನವನ್ನು ಭಕ್ಷಿಸತೊಡಗಿದ. ತನ್ನ ವನವು ಅಗ್ನಿಯ ಪಾಲಾಗುತ್ತಿರುವುದನ್ನು ಕಂಡು ಕೋಪಗೊಂಡ ಇಂದ್ರ ರಥಚಕ್ರದ ಅಚ್ಚಿನಂತಹ ನೀರಿನ ಧಾರೆಗಳಿಂದ ಆ ಅಗ್ನಿಯನ್ನು ಆರಿಸಲು ಯತ್ನಿಸಿದ. ತಮ್ಮ ಅಸ್ತ್ರಗಳಿಂದ ಆ

೧. ಒಂದು ಭಾರ = ೨೨೦ ಗ್ರಾಂಗಳು.

ಜಲಧಾರೆಯನ್ನು ತಡೆದ ಕೃಷ್ಣಾರ್ಜುನರು ದೇವತೆಗಳೊಂದಿಗೆ ದಂಡೆತ್ತಿ ಬಂದ ಇಂದ್ರನನ್ನು ಎದುರಿಸಿದರು. ಇಂದ್ರ ಸೋತುಹೋದ. ಅರ್ಜುನರೂಪದ ತನ್ನ ಬಲವನ್ನೂ, ಅಲ್ಲಿದ್ದ ಕೃಷ್ಣನ ಅಪಾರ ಒಲುಮೆಯನ್ನೂ ಕಂಡ ಇಂದ್ರನು ಸಂತೋಷಿಸಿ, ಮಳೆಯನ್ನೂ ಮೋಡಗಳನ್ನೂ ಹಿಂದಕ್ಕೆ ತೆಗೆದುಕೊಂಡ ; ಇಂದ್ರ, ಕೃಷ್ಣನನ್ನು ಭಕ್ತಿಯಿಂದ ನಮಸ್ಕರಿಸಿ, ಅರ್ಜುನನನ್ನು ಆಲಿಂಗಿಸಿಕೊಂಡ. ಇಂದ್ರನೊಂದಿಗೆ ಬಂದಿದ್ದ ಉಪೇಂದ್ರನು ಕೃಷ್ಣನನ್ನು ಆಲಿಂಗಿಸಿಕೊಂಡ. ಉಪೇಂದ್ರ ಆ ಮೊದಲು ವಿನೋದದಿಂದ ನಿಂತಿದ್ದನೇ ಹೊರತು, ಯುದ್ಧದಲ್ಲಿ ಭಾಗವಹಿಸಿರಲಿಲ್ಲ. ಬ್ರಹ್ಮ ಹಾಗೂ ಶಿವ ಇಬ್ಬರೂ ಅಲ್ಲಿಗೆ ಬಂದು ಕೃಷ್ಣನಿಗೆ ನಮಸ್ಕರಿಸಿ, ಅರ್ಜುನನಿಗೂ "[೧]ಕೃಷ್ಣ" ಎಂದೇ ನಾಮಕರಣ ಮಾಡಿದರು. ಅದಕ್ಕೆ ಕಾರಣ ಅರ್ಜುನನಲ್ಲಿದ್ದ 'ಶಿಕ್ಷಾಪ್ರಕರ್ಷ'ವೇ ಆಗಿದ್ದಿತು. ಎಲ್ಲ ದೇವತೆಗಳೂ ತಮ್ಮ ತಮ್ಮ ಅಸ್ತ್ರಗಳನ್ನು ಕೊಡುವುದಾಗಿ ಅರ್ಜುನನಿಗೆ ವಚನವನ್ನಿತ್ತರು. ಅನಂತರ ಆ ಎಲ್ಲ ದೇವತೆಗಳು ಕೃಷ್ಣನ ಅಪ್ಪಣೆಯನ್ನು ಪಡೆದು ಹಿಂದಿರುಗಿದರು. ಅರ್ಜುನನಿಗೆ ಕೀರ್ತಿ ಕೊಡುವ ದೃಷ್ಟಿಯಿಂದ ಕೇವಲ ಪ್ರೀತಿಯಿಂದ ಮಾತ್ರವೇ ಯುದ್ಧ ಮಾಡಿದ ಇಂದ್ರನೂ ಸಹ ತನ್ನವರೊಂದಿಗೆ ಸ್ವರ್ಗಲೋಕಕ್ಕೆ ತೆರಳಿದ.

## ಉಳಿದ ಮಯ ಮೊದಲಾದ ಆರುಜನರು

ಆ ವನದಲ್ಲಿದ್ದ ದೈತ್ಯರು, ನಾಗಗಳು, ಪಿಶಾಚಿಗಳು, ಯಕ್ಷರು ಮೊದಲಾದವರೆಲ್ಲ ಆ ಸಮಯದಲ್ಲಿ ಕೃಷ್ಣಾರ್ಜುನರಿಂದ ಕೊಲ್ಲಲ್ಪಟ್ಟರು. ನಾಲ್ಕುಪಕ್ಷಿಗಳು, ಅಶ್ವಸೇನ ಮತ್ತು ಮಯ ಇವರು ಮಾತ್ರವೇ ಆ ಅಗ್ನಿಯಿಂದ ಪಾರಾದವರು. "ಅಯಮಗ್ನೇ ಜರಿತಾ" ಇತ್ಯಾದಿ ವೇದಮಂತ್ರಗಳಿಂದ ಅಗ್ನಿಯನ್ನು ಸ್ತುತಿಸಿ, ಆ ನಾಲ್ಕುಪಕ್ಷಿಗಳು ಉಳಿದುಕೊಂಡವು. ತಕ್ಷಕನ ಮಗನಾದ ಅಶ್ವಸೇನ ಉಳಿದ ರೀತಿ ಬೇರೆಯದಾಗಿತ್ತು. ಅವನ ತಾಯಿ ಅವನನ್ನು ಹಿಂದುಮುಂದಾಗಿ ನುಂಗಿ, ಅಂತರಿಕ್ಷಕ್ಕೆ ಹಾರಲು, ಅರ್ಜುನ ಅವಳ ಕತ್ತನ್ನು ಕತ್ತರಿಸಿದ. ತಾಯಿಯ ಕತ್ತಿನೊಂದಿಗೆ ಅಶ್ವಸೇನನ ಬಾಲವೂ ತುಂಡಾಗಿಹೋಯಿತು ; ಇದರಿಂದಾಗಿ ಅವನು ಬದುಕಿಕೊಂಡ. ಒಂದುಕಡೆ ತಾಯಿಯ ವಿಯೋಗ ; ಮತ್ತೊಂದೆಡೆ ತುಂಡಾದ ಬಾಲ – ಇವುಗಳಿಂದಾಗಿ ರೋಷಗೊಂಡ ಅಶ್ವಸೇನ ಪಾರ್ಥನನ್ನು ಕೊಲ್ಲಲೆಂದು ಕರ್ಣನ ಬತ್ತಳಿಕೆಯೊಳಗೆ ಸೇರಿಕೊಂಡ. ಕೃಷ್ಣನ ಚಕ್ರಕ್ಕೆ ತುತ್ತಾಗುವುದನ್ನು ತಪ್ಪಿಸಿಕೊಳ್ಳಲು ಮಯ, ಅರ್ಜುನನನ್ನು ಶರಣು ಹೊಕ್ಕು ಪ್ರಾಣ ಉಳಿಸಿಕೊಂಡ. ಆ ಅತಿಮಾಯಾವಿಯಾದ ಮಯನನ್ನು ಪಾಂಡವರಿಗೋಸ್ಕರವಾಗಿಯೂ, ತನ್ನ ಭಕ್ತನೆಂಬ ಕಾರಣದಿಂದಲೂ ಕೃಷ್ಣ ಕೊಲ್ಲಲಿಲ್ಲ. "ಕೃಷ್ಣನಿಗೆ ನನ್ನ ಮೇಲೆ ಕೋಪ ಇರುವುದು ನಾನು ದೇವಶತ್ರು ಎಂಬ ಕಾರಣದಿಂದ. ಆದ್ದರಿಂದ ನಾನೀಗ ಅರ್ಜುನರೂಪದ ಇಂದ್ರನನ್ನು ಶರಣು ಹೊಕ್ಕರೆ, ಕೃಷ್ಣ ನನ್ನನ್ನು ಅನುಗ್ರಹಿಸುವನು"

---

೧. ಅರ್ಜುನನ ದಶನಾಮಗಳಲ್ಲಿ ಈ 'ಕೃಷ್ಣ' ಎಂಬುದೂ ಒಂದಾಗಿದೆ :
ಅರ್ಜುನಃ ಫಲ್ಗುನಃ ಕೃಷ್ಣಃ ಕಿರೀಟೀ ಶ್ವೇತವಾಹನಃ ।
ಭೀಭತ್ಸುರ್ವಿಜಯಃ ಪಾರ್ಥಃ ಸವ್ಯಸಾಚೀ ಧನಂಜಯಃ ॥ – ಮಹಾಭಾರತ/ವಿರಾಟಪರ್ವ/೪೩./೨೧

ಎಂಬ ಯೋಚನೆ, ಮಯನನ್ನು ಅರ್ಜುನನಿಗೆ ಹಾಗೆ ಶರಣು ಹೊಂದುವಂತೆ ಮಾಡಿತು. ಪ್ರಾಣ ಉಳಿಸಿದ ಉಪಕಾರಕ್ಕೆ ತನಗೆ ಪ್ರತ್ಯುಪಕಾರ ಮಾಡಲು ಹಾತೊರೆದ ಅವನಿಗೆ ಅರ್ಜುನ "ಕೃಷ್ಣನ ಅನುಗ್ರಹದಿಂದಲೇ ನೀನು ಜೀವದಿಂದ ಉಳಿಯಲು ಸಾಧ್ಯವಾಯಿತು. ಆದ್ದರಿಂದ ಅವನನ್ನೇ ಕೇಳು." ಎಂದು ಹೇಳಿ ಕೃಷ್ಣನ ಬಳಿಗೇ ಕಳುಹಿಸಿದ. ಧರ್ಮರಾಜನಿಗೆ ಅತ್ಯಂತ ವಿಚಿತ್ರವಾದ ಸಭೆಯೊಂದನ್ನು ನಿರ್ಮಿಸುವ ಕಾರ್ಯವನ್ನು ಕೃಷ್ಣ ಅವನಿಗೆ ವಿಧಿಸಿದ. ಮಯ ಸಂತೋಷದಿಂದ ಅದನ್ನು ಒಪ್ಪಿದ. ಅಗ್ನಿಯ ಪ್ರಾರ್ಥನೆಯಂತೆ ಯಾವೊಂದು ಪ್ರಾಣಿಯೂ ತಪ್ಪಿಸಿಕೊಳ್ಳದಂತೆ ಏರ್ಪಾಟು ಮಾಡಿದ. ಅವರಿಬ್ಬರೂ ಅಲ್ಲಿಂದ ಹೊರಟರು. ಅವರಿಂದ ವಿಷಯ ತಿಳಿದ ಪಾಂಡವರು ಬಹಳವಾಗಿ ಸಂತೋಷಿಸಿದರು[೧].



೧. ಮಹಾಭಾರತದ ಆದಿಪರ್ವಕ್ಕೆ ಪೂರಕವಾದ ಶ್ರೀಕೃಷ್ಣಕಥೆಗೆ ಸಂಬಂಧಿಸಿದ ಹರಿವಂಶ, ಶ್ರೀಮದ್ಭಾಗವತ ಮಹಾಪುರಾಣ, ವಿಷ್ಣುಪುರಾಣ ಮೊದಲಾದ ಇತರ ಸಕಲ ಆಕರಗಳನ್ನು ಒಳಗೊಂಡಿರುವ ಅಪೂರ್ವವಾದ ನಿರೂಪಣೆ ಮಹಾಭಾರತತಾತ್ಪರ್ಯನಿರ್ಣಯದ್ದು. ಮಹಾಭಾರತದ ನಿರೂಪಣಾಪರಂಪರೆಯಲ್ಲಿಯೇ ಹೀಗೆ ಸಮಗ್ರ ಅಳವಡಿಕೆಯಿಂದ ಕೂಡಿರುವ ಏಕಮಾತ್ರ ಕೃತಿ ಇದಾಗಿದೆ ಎಂಬುದನ್ನು ಜಿಜ್ಞಾಸುಗಳು ಗಮನಿಸಬೇಕು.

# ಸಭಾ ಪರ್ವ

## ಕೃಷ್ಣ ಮಾಡಿದ ದಿನಾಶ್ವಮೇಧ

ಶ್ರೀಕೃಷ್ಣನ ಅಪ್ಪಣೆಯಂತೆ ಮಯ ಸಮಸ್ತ ಕೌತುಕಗಳ ನೆಲೆ ಎನ್ನಿಸಿದ ಅಪೂರ್ವವಾದ ಸಭೆಯನ್ನು ನಿರ್ಮಿಸಿ ಧರ್ಮರಾಜನಿಗೆ ಒಪ್ಪಿಸಿದ. ಸಭೆಯ ಕೆಲಸ ಮುಗಿಸಿದ ಮಯ, ಭೀಮನಿಗೆ ಒಂದು ಗದೆಯನ್ನು ಕಾಣಿಕೆಗಾಗಿ ಅರ್ಪಿಸಿ ಹೊರಟ. ವಾಯು ಧರಿಸಿದ ಆ ಗದೆಯನ್ನು ಮಾಂಧಾತರಾಜ ವಾಯುದೇವರನ್ನು ಮೆಚ್ಚಿಸಿ ತಾನು ಪಡೆದುಕೊಂಡಿದ್ದ. ಆ ಗದೆ ಈಗ ಮತ್ತೆ ಭೀಮನ ಕೈ ಸೇರಿತು. ಮತ್ತೆ ಎರಡು ವರ್ಷಗಳ ಕಾಲ ಪಾಂಡವರೊಂದಿಗೆ ವಾಸಿಸಿ, ಕೃಷ್ಣ ಅಲ್ಲಿಂದ ಹೊರಟ ; ಅವನ ವಿಯೋಗವನ್ನು ಸಹಿಸದಾದ ಪಾಂಡವರು ಬಹಳ ಕಷ್ಟದಿಂದ ಅವನನ್ನು ಬೀಳ್ಕೊಟ್ಟರು. ದ್ವಾರಾವತಿಗೆ ಹಿಂದಿರುಗಿದ ಕೃಷ್ಣ ಒಮ್ಮೆ ಸೂರ್ಯಗ್ರಹಣದ ಸಮಯದಲ್ಲಿ ಪತ್ನೀಪುತ್ರರು ಹಾಗೂ ಬಂಧುಗಳೊಂದಿಗೆ ಕೂಡಿಕೊಂಡು ಸ್ಯಮಂತಪಂಚಕ-ಕ್ಷೇತ್ರಕ್ಕೆ ಹೊರಟ. ಪತ್ನೀಪುತ್ರರು ಹಾಗೂ ತಾಯಿಯ ಜೊತೆಗೆ ಪಾಂಡವರು ಹಾಗೂ ಇತರ ಅನೇಕ ರಾಜರೂ ಅಲ್ಲಿ ನೆರೆದರು. ಆ ರಾಜರ ಗುಂಪಿನಲ್ಲಿ ಶ್ರೀಹರಿಗೆ ಪ್ರಿಯರಾದವರು ಮಾತ್ರವಲ್ಲದೆ ಅಪ್ರಿಯರೂ ಸೇರಿದ್ದರು. ನಂದಗೋಪನೂ ಸಹ ಪತ್ನಿಯೊಂದಿಗೂ ಗೋಪ-ಗೋಪಿಯರೊಂದಿಗೂ ಅಲ್ಲಿಗೆ ಬಂದು ಸೇರಿದ. ಮುನಿಶ್ರೇಷ್ಠರೂ ಆ ಸಮಾರಂಭದಲ್ಲಿ ಪಾಲ್ಗೊಂಡರು. ಅಲ್ಲಿ ವೇದವ್ಯಾಸ, ಕೃಷ್ಣ ಹಾಗೂ ಪರಶುರಾಮ ಎಂಬ ಶ್ರೀಹರಿಯ ಮೂರು ರೂಪಗಳನ್ನು ಕಾಣುವ ಭಾಗ್ಯ ಪಡೆದ ವಿಷ್ಣುಭಕ್ತರಿಗೆ ಅದು ನಿಜಕ್ಕೂ ಮಹಾ ಪರ್ವಕಾಲವೇ ಆಯಿತು. ಪರಶುರಾಮನಿರ್ಮಿತ ತೀರ್ಥಗಳಲ್ಲಿ ಸೂರ್ಯಗ್ರಹಣಕಾಲದಲ್ಲಿ ಸ್ನಾನ ಮಾಡಿದ ಅವರೆಲ್ಲ ಕೃತಕೃತ್ಯರೇ ಆದರು. ಮೂರುರೂಪದಿಂದ ಗ್ರಹಣಕಾಲದಲ್ಲಿ ತನ್ನವರನ್ನು ಅನು-ಗ್ರಹಿಸಿದ ಕೃಷ್ಣ ವಸುದೇವನಿಂದ ಅನೇಕವಿಧವಾದ ಯಾಗಗಳನ್ನು ಮಾಡಿಸಿ, ಯಥೇಚ್ಛವಾಗಿ ದಕ್ಷಿಣೆಗಳನ್ನು ಕೊಡಿಸಿದ. ಪಾಂಡವರನ್ನು ಜೊತೆಗೆ ಕರೆದುಕೊಂಡು ಕೃಷ್ಣ ಅನಂತರ ದ್ವಾರಕೆಗೆ ಹೊರಟ. ಅಲ್ಲಿ ಒಂದೇ ದಿನದಲ್ಲಿ ಮಾಡುವ ಮಹಾಶ್ವಮೇಧಯಾಗವನ್ನು ನಡೆಸಿದ. ಹರಿಯ ರಥದಲ್ಲಿ ಭೀಮಾರ್ಜುನರೊಂದಿಗೆ ಹೊರಟ ಕೃಷ್ಣಪುತ್ರರು ಆ ಕುದುರೆಯನ್ನು ದಿನದ ಕಾಲು-ಭಾಗದ ಅವಧಿಯಲ್ಲಿ ಭೂಮಂಡಲವನ್ನೆಲ್ಲ ಸುತ್ತಿಸಿ ಕರೆತಂದರು. ಕ್ಷಣಮಾತ್ರದಲ್ಲಿಯೇ ಭೀಮಾದಿಗಳಿಂದ ಜರಾಸಂಧ ಮೊದಲಾದ ಸಕಲ ರಾಜರು ಪರಾಜಯವನ್ನು ಕಾಣಬೇಕಾ ಯಿತು. ದಿನಾಶ್ವಮೇಧಕ್ಕಾಗಿ ಕೃಷ್ಣನಿಂದಲೇ ನಿರ್ಮಿಸಲ್ಪಟ್ಟಿದ್ದ ಆ ಕುದುರೆ ಒಂದು ದಿನದಲ್ಲಿ ಒಂದುಲಕ್ಷ ಯೋಜನದಷ್ಟು ದೂರವನ್ನು ಕ್ರಮಿಸುವ ಸಾಮರ್ಥ್ಯವನ್ನು ಹೊಂದಿತ್ತು. ವೇದ ವ್ಯಾಸರ ಮೂಲಕ ಕೃಷ್ಣನಿಗೆ ಯಾಗದ ದೀಕ್ಷೆ ನಡೆಯಿತು.

## ವಿಪ್ರಪುತ್ರ ಪ್ರಸಂಗ

ಆ ವೇಳೆಗೆ ಕೈಯಲ್ಲಿ ಹುಲ್ಲುಕಡ್ಡಿಯೊಂದನ್ನು ಹಿಡಿದುಕೊಂಡು ಯಜ್ಞಭೂಮಿಗೆ ಬಂದ ಬ್ರಾಹ್ಮಣನೊಬ್ಬನು ಗಟ್ಟಿಯಾಗಿ ರೋದಿಸತೊಡಗಿದ. ''ನನ್ನ ಮಕ್ಕಳು ಹುಟ್ಟುತ್ತಲೇ ಕಾಣೆ-

ಯಾಗುತ್ತಿರುವರು'' ಎಂಬ ಅವನ ದೂರನ್ನು ಕೇಳಿ ಅರ್ಜುನ ''ನಿನ್ನ ಮಕ್ಕಳನ್ನು ನಾನು ರಕ್ಷಿಸುವೆ'' ಎಂದು ಮೇಲೆದ್ದ. ಅದಕ್ಕೆ ಆ ಬ್ರಾಹ್ಮಣ - ''ಕೃಷ್ಣ-ಬಲರಾಮಾದಿಗಳೇ ಆ ಮಕ್ಕಳನ್ನು ರಕ್ಷಿಸಿಲ್ಲ. ಇನ್ನು ನಿನಗೆಲ್ಲಿ ಅಂತಹ ಶಕ್ತಿ ಬಂದೀತು?'' ಎಂದು ಪ್ರಶ್ನಿಸಲು, ಅಸುರಾ-ವೇಶದಿಂದಾಗಿ ಮನಸ್ಸು ಕೆಡಿಸಿಕೊಂಡ ಅರ್ಜುನನು ಗರ್ವದಿಂದ ಹೇಳಿಕೊಂಡ - ''ಎಲೈ ವಿಪ್ರ ! ನನ್ನ ಪರಾಕ್ರಮವನ್ನು ನೀನು ಅರಿಯೆ. ನಾನು ಕೃಷ್ಣಾದಿಗಳಂತಲ್ಲ. ಖಾಂಡವವನದಲ್ಲಿ ನಾನು ದೇವತೆಗಳನ್ನೇ ಜಯಿಸಿರುವೆ ; ನಿವಾತಕವಚರೆಂಬ ರಾಕ್ಷಸರನ್ನು ಸಹ ನಾನು ಮುಂದೆ ಗೆಲ್ಲಲಿರುವೆ.'' ಹೀಗೆ ಹೇಳಿದ ಅರ್ಜುನ ಕೃಷ್ಣನಿಗೆ - ''ನಾನು ಹೊರಡುವೆನು '' ಎನ್ನಲು, ಕೃಷ್ಣ ''ಇದು ನಿನ್ನಿಂದ ಸಾಧ್ಯವೇ ? '' ಎಂದು ಪ್ರಶ್ನಿಸಿದ ; ನಾಚಿಕೆಯಿಂದ ತಲೆತಗ್ಗಿಸಿದ ಅರ್ಜುನನಿಗೆ ಕೃಷ್ಣ ''ಸರಿ ! ಹಾಗಿದ್ದರೆ ಹೋಗು'' ಎಂದ. ಅರ್ಜುನನು ತಾನು ವಿಫಲನಾದಲ್ಲಿ ಅಗ್ನಿಯನ್ನು ಪ್ರವೇಶಿಸುವುದಾಗಿ ಪ್ರತಿಜ್ಞೆ ಮಾಡಿ ಎಲ್ಲ ಯಾದವರನ್ನು ಕರೆದುಕೊಂಡು ಹೊರಟೇ ಬಿಟ್ಟ. ಅವರ ಕೀರ್ತಿಯನ್ನು ಉಳಿಸಲೆಂದು ಶ್ರೀಕೃಷ್ಣನು, ಬಲರಾಮ, ಪ್ರದ್ಯುಮ್ನ ಮತ್ತು ಅನಿರುದ್ಧ ಈ ಮೂವರನ್ನು ಮಾತ್ರ ಅವನ ಸಹಾಯಕ್ಕೆ ಕಳುಹಿಸಲಿಲ್ಲ. ಕೃಷ್ಣನಿಗೆ ಬಲರಾಮ ತುಂಬಾ ಪ್ರಿಯನಾಗಿದ್ದ. ಅನಂತರ ಪ್ರದ್ಯುಮ್ನನೂ, ಅವನ ಮಗ ಅನಿರುದ್ಧನೂ ಕೃಷ್ಣನಿಗೆ ಪ್ರೀತಿಪಾತ್ರ-ರಾಗಿದ್ದರು. ಅನಿರುದ್ಧ ಪ್ರದ್ಯುಮ್ನನಿಗೆ ರುಗ್ಮವತೀ ಎಂಬ ರುಗ್ಮಿಪುತ್ರಿಯಲ್ಲಿ ಜನಿಸಿದ್ದವನು. ರುಗ್ಮಿಯ ಮಗಳಾದ ರತಿಯ ಅವತಾರವಾದ ಅವಳನ್ನು ಪ್ರದ್ಯುಮ್ನ ಸ್ವಯಂವರದಲ್ಲಿ ಗೆದ್ದು ತಂದು ಮದುವೆಯಾಗಿದ್ದ. ಅನಿರುದ್ಧನಾದರೂ ಆ ಹೆಸರಿನ ಮನ್ಮಥಪುತ್ರನೇ ಆಗಿದ್ದ. ಅವನಲ್ಲಿ ಅನಿರುದ್ಧ ಎಂಬ ವಿಷ್ಣುರೂಪದ ಆವೇಶವೂ ಇತ್ತು. ಅದರಿಂದಾಗಿ ಅವನು ಬಲಶಾಲಿಯೂ, ರೂಪವಂತನೂ, ಅಸ್ತ್ರಪಾರಂಗತನೂ ಆಗಿದ್ದ. ಈ ಎಲ್ಲ ಕಾರಣಗಳಿಂದಾಗಿ ಆ ಮೂವರನ್ನು ಮಾತ್ರ ಕೃಷ್ಣನು ಅರ್ಜುನನ ಜೊತೆ ಕಳುಹಿಸಿಕೊಡಲಿಲ್ಲ.

## ಕೃಷ್ಣನ ಮಹಿಮೆ

ಅಲ್ಲಿಂದ ಉತ್ಸಾಹದಿಂದ ಹೊರಟ ಅರ್ಜುನ ಬ್ರಾಹ್ಮಣಪತ್ನಿಯ ಪ್ರಸವಕಾಲದಲ್ಲಿ ಅಸ್ತ್ರಗಳಿಂದ ದಿಗ್ಬಂಧನವನ್ನು ಮಾಡಿ ಕಾಯತೊಡಗಿದ. ಆದರೂ ಹುಟ್ಟಿದ ಮಗು ಮರೆಯಾಗುವುದು ಮಾತ್ರ ತಪ್ಪಲಿಲ್ಲ. ಬ್ರಾಹ್ಮಣ ಅರ್ಜುನನನ್ನು ನಿಂದಿಸಿದ. ಖಿನ್ನನಾದ ಅರ್ಜುನ ಯಾದವರೊಂದಿಗೆ ಕೃಷ್ಣನ ಬಳಿಗೆ ಹೊರಟ. ಅಗ್ನಿಪ್ರವೇಶಕ್ಕೆ ಸಿದ್ಧನಾಗುತ್ತಿದ್ದ ಅವನನ್ನು ತಡೆದ ಕೃಷ್ಣ ಅವನನ್ನೂ ಆ ಬ್ರಾಹ್ಮಣ-ನನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಉತ್ತರದಿಕ್ಕಿಗೆ ಹೊರಟ. ಕ್ಷಣಮಾತ್ರದಲ್ಲಿಯೇ ಸಪ್ತಸಾಗರ-ಗಳನ್ನೂ ಆ ರಥ ದಾಟಿತು. ಕೃಷ್ಣನ ಮೇಲಿನ ಗೌರವದಿಂದ ಸಾಗರಗಳೂ, ಪರ್ವತಗಳೂ ತಾವಾಗಿಯೇ ದಾರಿಕೊಟ್ಟವು[೧]. ಅನಂತರ ಕೃಷ್ಣ ಅಂಧಂತಮಸ್ಸನ್ನು ಚಕ್ರದಿಂದ ಸೀಳಿ, ಘನೋದಕ-ವನ್ನು ದಾಟಿ, ಅಲ್ಲಿ ತನ್ನ ಧಾಮವನ್ನು ಕಂಡ ; ಪಾರ್ಥನನ್ನೂ, ವಿಪ್ರನನ್ನೂ ರಥದಲ್ಲಿಯೇ ಕೂಡಿಸಿ

---

೧. ಶ್ರೀರಾಮರೂಪದ ಶ್ರೀಹರಿಗೆ ಸಮುದ್ರ ದಾರಿ ನೀಡಿದ ರಾಮಾಯಣದ ಉಲ್ಲೇಖ ಸುಪ್ರಸಿದ್ಧ. ಕೃಷ್ಣರೂಪದಲ್ಲೂ ಸಪ್ತಸಾಗರಗಳೂ ಹೀಗೆ ದಾರಿ ನೀಡಿದ್ದು ಗಮನಿಸಬೇಕಾದ ಅಪೂರ್ವ ಸಂಗತಿ.

ತಾನು ಕೆಳಗಿಳಿದು ತನ್ನ ಅಷ್ಟಬಾಹುಗಳಿಂದ ಕೂಡಿ ಸಕಲರತ್ನಗಳಿಂದ ನಿರ್ಮಿತವಾಗಿದ್ದ ದಿವ್ಯ ಭೂಷಣಗಳಿಂದ ಒಪ್ಪುತ್ತಿದ್ದ ತನ್ನ ಮೂಲರೂಪದಲ್ಲಿ ಸೇರಿದ. ಆ ರೂಪವು ಸಾವಿರ ಹೆಡೆಗಳ ಶೇಷನ ವಿಶಾಲದೇಹದಲ್ಲಿ ಲಕ್ಷ್ಮೀಸಮೇತವಾಗಿ ಕುಳಿತ ಭಂಗಿಯಲ್ಲಿತ್ತು. ಅನಂತಸೂರ್ಯರನ್ನು ಮೀರುವ ಕಾಂತಿಯಿಂದಲೂ, ಮಿಂಚಿನಂತೆ ಹೊಳೆಯುವ ವಸ್ತ್ರದಿಂದಲೂ ಕೂಡಿದ್ದ ಅದನ್ನು ಮುಕ್ತರಾದ ಬ್ರಹ್ಮಾದಿಗಳು ಸದಾ ಸ್ತುತಿಸುತ್ತಿದ್ದರು. ಮುಹೂರ್ತಕಾಲ ಮೂಲರೂಪದಲ್ಲಿ ಒಂದಾಗಿ ನಿಂತ ಕೃಷ್ಣ ಅನಂತರ ಬ್ರಾಹ್ಮಣನ ಪುತ್ರರನ್ನು ಕರೆದುಕೊಂಡು ಹೊರಗೆ ಕಾಣಿಸಿಕೊಂಡ. ಸುನಂದ, ನಂದ ಮೊದಲಾದ ವಿಷ್ಣುಪಾರ್ಷದರೇ ಆ ರೀತಿ ಬ್ರಾಹ್ಮಣನ ಪುತ್ರರಾಗಿ ಭೂಮಿಯ ಮೇಲೆ ಹುಟ್ಟಿದ್ದರು. ಅರ್ಜುನನ ಗರ್ವವನ್ನು ಪರಿಹರಿಸುವ ಉದ್ದೇಶದಿಂದಲೇ ಈ ವಿಪ್ರಪುತ್ರಪ್ರಕರಣ ವನ್ನು ಕೃಷ್ಣ ಯೋಜಿಸಿದ್ದ ; ಅರ್ಜುನನ ಮೇಲೆ ತನಗಿದ್ದ ಅಪಾರಪ್ರೀತಿಯಿಂದಾಗಿಯೇ ಈ ರೀತಿ ಅವನನ್ನು ಎಚ್ಚರಿಸಿದ್ದು. ಲಕ್ಷ ಸೂರ್ಯರ ಕಾಂತಿಗಿಂತ ಮಿಗಿಲಾಗಿದ್ದ ತನ್ನ ಅಪ್ರಾಕೃತ ಸದನದಿಂದ ಹೊರಬಂದ ಕೃಷ್ಣನು ರಥವನ್ನು ಏರಿ ಪಾರ್ಥ ಹಾಗೂ ವಿಪ್ರರೊಂದಿಗೆ ಹೊರಟ ; ಬ್ರಾಹ್ಮಣನಿಗೆ ಅವನ ಮಕ್ಕಳನ್ನು ಒಪ್ಪಿಸಿದ.

## ದಂತವಕ್ರನ ವಧೆ

ಯಜ್ಞದೀಕ್ಷೆಯಲ್ಲಿದ್ದಾಗ ಆ ರೀತಿ ಸೀಮೋಲ್ಲಂಘನ ಮಾಡಿದ್ದಕ್ಕಾಗಿ ಕೃಷ್ಣ ಪ್ರಾಯಶ್ಚಿತ್ತವನ್ನು ಮಾಡಿಕೊಂಡ[೧]. ಜನರಿಗೆ ತಿಳುವಳಿಕೆ ಕೊಡುವುದೇ ಕೃಷ್ಣನ ಆ ಕಾರ್ಯದ ಉದ್ದೇಶವಾಗಿತ್ತು. ಆ ರೀತಿ ಕೃಷ್ಣ ಹೋಗಿಬರಲು ತೆಗೆದುಕೊಂಡ ಸಮಯ [೨]ಒಂದೂವರೆ ಮುಹೂರ್ತ ಮಾತ್ರ ಆಗಿತ್ತು. ಯಜ್ಞಕ್ಕೆ ಬಂದ, ಸದಾ ತನ್ನ ಪರಿಚಾರಕರೇ ಆದ ಬ್ರಹ್ಮರುದ್ರಾದಿಗಳನ್ನು ಆ ಸಮಯದಲ್ಲಿ ಆದರಿಸಿ, ಬ್ರಾಹ್ಮಣರನ್ನು ಗೌರವಿಸಿದ. ಯಾಗ ಮುಗಿದ ಮೇಲೆ ಪತ್ನೀ ಹಾಗೂ ಬಂಧುಗಳೊಂದಿಗೆ ಕೃಷ್ಣನು ಅವಭೃಥಸ್ನಾನವನ್ನು ಪೂರೈಸಿದ. ಹಾಗೆ ಅವಭೃಥಸ್ನಾನ ಮುಗಿಸಿಕೊಂಡು ಬರುವಾಗ ತನ್ನನ್ನು ಅಡ್ಡಗಟ್ಟಿದ ದಂತವಕ್ರನನ್ನು, ಅವನೊಂದಿಗಿದ್ದ ವಿಡೂರಥನನ್ನು ಕೃಷ್ಣ ಗದೆಯಿಂದ ಹೊಡೆದು ಕೊಂದು ಹಾಕಿದ. ದೈತ್ಯನಾದ ವಿಡೂರಥನು ತಮಸ್ಸಿಗೆ ತೆರಳಿದ.

---

೧. ಯಜ್ಞ, ಪೂಜೆ, ವ್ರತ ಮೊದಲಾದವುಗಳಲ್ಲಿ ದೀಕ್ಷಿತರಾದವರು ಆ ಸ್ಥಳವನ್ನು ತೊರೆದು ಬೇರೆಡೆಗೆ ತೆರಳುವಂತಿಲ್ಲ. ವಿಶೇಷ ಕಾರಣಗಳಿಂದ ತೆರಳುವುದು ಅನಿವಾರ್ಯವಾದಾಗ ಅದಕ್ಕೆ ವಿಹಿತರೀತಿಯಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇಬೇಕು ಎಂಬುದು ಶಾಸ್ತ್ರವಿಧಿ. ಸ್ವತಃ ಸರ್ವಯಜ್ಞಭೋಕ್ತೃವಾದ ಶ್ರೀಕೃಷ್ಣನಿಗೆ ಇದು ಅನ್ವಯಿಸುವಂತಹುದಲ್ಲ. ಆದರೂ ಲೋಕಶಿಕ್ಷಣಕ್ಕಾಗಿ ಶ್ರೀಕೃಷ್ಣ ಹಾಗೆ ಪ್ರಾಯಶ್ಚಿತ್ತವನ್ನು ಆಚರಿಸಿಕೊಂಡ ಎಂದು ತಿಳಿಯಬೇಕು.

೨. ಒಂದು ಮುಹೂರ್ತ ಎಂದರೆ ಎರಡು ಘಳಿಗೆಗಳು ; ಒಂದು ಘಳಿಗೆ ಎಂದರೆ ೨೪ ನಿಮಿಷ ; ಒಟ್ಟು ಶ್ರೀಕೃಷ್ಣ ತೆಗೆದುಕೊಂಡ ಸಮಯ ಕೇವಲ ೭೨ ನಿಮಿಷಗಳು ಮಾತ್ರ. ಶ್ರೀಹನುಮಂತ ಐವತ್ತುಸಾವಿರ ಯೋಜನ ದೂರದ ಸಂಜೀವನವನ್ನು ಅಲ್ಲಿಗೆ ಹೋಗಿ ತರಲು ತೆಗೆದುಕೊಂಡ ಅವಧಿ ಕೇವಲ ಒಂದು ಕ್ಷಣ ಎಂಬುದು ಸುಪ್ರಸಿದ್ಧ. ಜೀವೋತ್ತಮನಾದ ಅವನ ಮಹಿಮೆಯೇ ಹಾಗಿರುವಾಗ ಸರ್ವೋತ್ತಮನಾದ ಶ್ರೀಹರಿಯ ಮಹಿಮೆಯು ಹೀಗಿರುವುದು ಅಚ್ಚರಿಯ ಸಂಗತಿಯೇನಲ್ಲ.

ದಂತವಕ್ರನಲ್ಲಿದ್ದ ಹರಿಪಾರ್ಷದನಾದ ವಿಜಯನು ಕೃಷ್ಣನಲ್ಲಿಯೇ ಸೇರಿಕೊಂಡ. ಕೃಷ್ಣ ಭೂಲೋಕದಿಂದ ಹೊರಟು ಸ್ವಲೋಕವನ್ನು ಸೇರಿದ ಮೇಲೆ, ಅವನು ತನ್ನ ದ್ವಾರಪಾಲಕರೂಪದೊಂದಿಗೆ ಐಕ್ಯ ಹೊಂದುವನು.

## ಭೂಗೋಳದ ವಿವರ

ದ್ವಾರಕೆಗೆ ಹಿಂದಿರುಗಿದ ಮೇಲೆ ಕೃಷ್ಣನನ್ನು ಅರ್ಜುನ : ''ನಾವು ನೋಡಿದ ಇದೆಲ್ಲ ಏನು?'' ಎಂದು ಪ್ರಶ್ನಿಸಲು, ಕೃಷ್ಣ ಅವನಿಗೆ ಎಲ್ಲವನ್ನೂ ವಿವರವಾಗಿ ತಿಳಿಸಿದ –''ಈ ದ್ವೀಪ ಹಾಗೂ ಸಾಗರ ಎರಡೂ, ಲಕ್ಷಯೋಜನ ವಿಸ್ತಾರವನ್ನು ಹೊಂದಿವೆ. ಉಳಿದೆಲ್ಲ ದ್ವೀಪ-ಸಾಗರಗಳು ಕ್ರಮವಾಗಿ ಇವುಗಳಿಗಿಂತ ಎರಡರಷ್ಟು ವಿಶಾಲವಾದುವು. ಕೊನೆಯಲ್ಲಿನ ಒಂದೂವರೆಯಷ್ಟು ಪ್ರದೇಶ ಚಿನ್ನದ್ದಾಗಿದ್ದು ವಜ್ರದ ಲೇಪನವನ್ನು ಹೊಂದಿದೆ. ಇವೆಲ್ಲಕ್ಕೂ ಒಟ್ಟಾಗಿ 'ಲೋಕ' ಎಂದು ಹೆಸರು. ತಮಸ್ಸಿನ ವಿಸ್ತಾರ ಇದರ ಎರಡರಷ್ಟು; ಮಿಥ್ಯಾಜ್ಞಾನದಲ್ಲಿಯೇ ನಿರತರಾದ ಜನ ಈ ಅಂಧಂತಮಸ್ಸಿನಲ್ಲಿ ಬೀಳುವರು. ಅದರ ಎರಡರಷ್ಟು ವಿಸ್ತೀರ್ಣ ಘನೋದಕದ್ದು. ಅದರ ಕೊನೆಯಲ್ಲಿ ನನ್ನ ಮಂದಿರವಿದೆ. ನೀನು ಕಂಡ ಆ ಸ್ಥಳದಲ್ಲಿ ನಾನು ಮುಕ್ತರಿಂದಲೂ ಅಜಾದಿಗಳಿಂದಲೂ ಸ್ತುತಿಸಲ್ಪಡುತ್ತ ಯಾವಾಗಲೂ ಸನ್ನಿಹಿತನಾಗಿರುವೆನು. ಲೋಕಾಲೋಕಪ್ರದೇಶ ಐವತ್ತುಲಕ್ಷದ ಐವತ್ತು ಸಾವಿರ ಯೋಜನಗಳ ವ್ಯಾಪ್ತಿಯನ್ನು ಹೊಂದಿದೆ ; ಅದರ ಗಣನೆಯೂ ಹಾಗೆಯೇ. ಮೇರುಪರ್ವತದ ನಾಲ್ಕು ದಿಕ್ಕುಗಳಿಗೂ ಇಪ್ಪತ್ತೈದುಕೋಟಿ ಯೋಜನ ದೂರದಲ್ಲಿ ಮೇಲೂ ಕೆಳಗೂ ಬ್ರಹ್ಮಾಂಡವಿದೆ. ಕ್ರಮವಾಗಿ ಹತ್ತುಪಟ್ಟು ಮಿಗಿಲಾದ ನೀರು, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ ಎಂಬ ತತ್ತ್ವಗಳಿಂದಲೂ, ಸತ್ವಾದಿ ಮೂರು ಗುಣಗಳಿಂದಲೂ ಇದೆಲ್ಲ ಆವೃತವಾಗಿವೆ. ಅವುಗಳ ಮೇಲೂ ಸಹ ನಾನೇ ವ್ಯಾಪಿಸಿರುವೆನು. ನಾನು ಸರ್ವಗ, ಅನಂತ, ಅನಂತರೂಪ, ಸ್ವಗತಭೇದರಹಿತ, ಅನಂತಶೀರ್ಷ, ಅನಂತಾಕ್ಷ, ಅನಂತಪಾದ, ಅನಂತಕರ, ಅನಂತೋರು, ಅನಂತಗುಣಮಾಹಾತ್ಮ್ಯ, ಚಿದಾನಂದಶರೀರ ; ನೀನು ಮತ್ತಿತರ ಎಲ್ಲರೂ ಸಹ ಎಂದೂ ಸಹ ನನ್ನ ಅಧೀನರು. ನಿಮ್ಮೆಲ್ಲರ ಬಲ, ವಿಜಯ ಮೊದಲಾದ ಎಲ್ಲ ಗುಣಗಳೂ ನನ್ನ ಅನುಗ್ರಹದಿಂದಲೇ. ಆದ್ದರಿಂದ ನನ್ನ ಬಗ್ಗೆ ನಿನಗೆ ಆಶ್ಚರ್ಯವೂ ಬೇಡ, ನಿನ್ನ ಬಗ್ಗೆ ನಿನಗೆ ಗರ್ವವೂ ಬೇಡ. ನನ್ನಲ್ಲೇ ಮನಸ್ಸನ್ನಿರಿಸು, ನನ್ನ ಭಕ್ತನಾಗು ; ನನಗೋಸ್ಕರವೇ ಯಜ್ಞ ಮಾಡು, ನನ್ನನ್ನೇ ನಮಸ್ಕರಿಸು, ಆಗ ನೀನು ನನ್ನನ್ನೇ ಪಡೆಯುವಿ. ಇದು ಖಂಡಿತ. ನೀನು ನನಗೆ ಪ್ರಿಯ.'' ಕೃಷ್ಣನ ಮಾತುಗಳನ್ನು ಕೇಳುತ್ತಿದ್ದಂತೆಯೇ ಸಾಷ್ಟಾಂಗವೆರಗಿದ ಅರ್ಜುನ ತನ್ನನ್ನು ಕ್ಷಮಿಸುವಂತೆ ಬೇಡಿಕೊಂಡ. ಅನಂತರ ಕೆಲವು ತಿಂಗಳು- ಗಳನ್ನು ದ್ವಾರಕೆಯಲ್ಲೇ ಕಳೆದು ಪಾಂಡವರು ಇಂದ್ರಪ್ರಸ್ಥಕ್ಕೆ ಮರಳಿದರು.

## ಮಯಸಭೆಯಲ್ಲಿ ಯುಧಿಷ್ಠಿರ

ಒಮ್ಮೆ ಶ್ರೇಷ್ಠ ಸಭಾಮಂದಿರದಲ್ಲಿ ಧರ್ಮರಾಜ ಮಂಡಿಸಿದ್ದಾಗ ಅಲ್ಲಿಗೆ ನಾರದಮಹರ್ಷಿಗಳು ಆಗಮಿಸಿದರು. ಅವರಿಂದ ದೇವತೆಗಳ ಸಭೆಗಳ ವರ್ಣನೆಗಳನ್ನು ವಿವರವಾಗಿ

ಕೇಳಿ ತಿಳಿದ ಧರ್ಮರಾಜ ಹೀಗೆ ಪ್ರಶ್ನಿಸಿದ - "ನೀವು ಅಂತರಿಕ್ಷವನ್ನು ಲಕ್ಷಯೋಜನ ಉನ್ನತ ಎಂಬುದಾಗಿ ತಿಳಿಸಿದಿರಿ. ಅದರ ಮೇಲೆ ಅರ್ಧಕೋಟಿ ಯೋಜನದ ಮೇಲೆ ದೇವವಿಮಾನಗಳಿಂದ ತುಂಬಿದ ಸ್ವರ್ಗಲೋಕ ; ಭುವರ್ಲೋಕ ಮತ್ತು ಸ್ವರ್ಗಲೋಕಗಳು ಕೋಟಿಲೋಕಗಳಷ್ಟು ವಿಸ್ತಾರವಾಗಿವೆ. ಮಹರ್ಲೋಕ, ಜನೋಲೋಕ ಹಾಗೂ ತಪೋಲೋಕಗಳು ಕ್ರಮವಾಗಿ ಒಂದೂವರೆ ಯೋಜನಗಳಷ್ಟು ಉನ್ನತವಾದವುಗಳು. ಒಟ್ಟಾಗಿ ಇವೆಲ್ಲವೂ ಸೇರಿದರೆ ಐವತ್ತು ಕೋಟಿ ಯೋಜನ ವಿಸ್ತಾರವಾಗುವುದು. ಬ್ರಹ್ಮದೇವರು ರಾರಾಜಿಸುವ ಸತ್ಯಲೋಕವು ಇವೆಲ್ಲವುಗಳ ಎರಡು ಪಟ್ಟು ವಿಸ್ತಾರವಾದುದು. ಅದರ ಎರಡುಪಟ್ಟು ವಿಸ್ತಾರವಾದುದು ಸನಾತನವಾದ ವಿಷ್ಣುಲೋಕ. ಇವುಗಳಲ್ಲಿ ಮೇಲಿನವು ಕ್ರಮವಾಗಿ ಕೆಳಗಿನವುಗಳಿಗಿಂತ ಆನಂದದಲ್ಲಿ ನೂರು ಪಟ್ಟು ಮಿಗಿಲಾದವುಗಳು. ವಿಷ್ಣುಲೋಕಗಳು ಅಸಂಖ್ಯಜನರಿಂದ ಬಹಳವಾಗಿ ತುಂಬಿದ್ದರೂ, ಅವನ ಇಚ್ಛೆಯಿಂದಾಗಿ ಸದಾ ಅವಕಾಶವನ್ನು ಹೊಂದಿರುವವುಗಳಾಗಿಯೇ ಇರುವವೇ ಹೊರತು ಎಂದೂ ಪೂರ್ಣವಾಗಿ ತುಂಬಿದವು ಎನ್ನಿಸುವುದೇ ಇಲ್ಲ. ಅವುಗಳಲ್ಲಿ ಸರ್ವವಿಧದ ಕಾಮನೆಗಳು ಈಡೇರಿದ, ಆನಂದದಿಂದ ತುಂಬಿದ ದಿವ್ಯ ಸ್ತ್ರೀಪುರುಷರು ಶೋಭಿಸುತ್ತಿರುವರು. ಅದರಂತೆ ಕೆಳಗಿನ ಏಳುಲೋಕಗಳೂ ಸಹ ದಿವ್ಯ ರತ್ನಗಳಿಂದ ತುಂಬಿರುವಂತಹವು. ಕೆಳಭಾಗದಲ್ಲಿ ಮಹಾ ಬಲಶಾಲಿಯಾದ ಶೇಷದೇವರಿಂದ ಧರಿಸಲ್ಪಟ್ಟಿವೆ. ಸಪ್ತದ್ವೀಪಗಳಲ್ಲಿನ ಪುರುಷರು ಹಾಗೂ ಸ್ತ್ರೀಯರು ಬಯಸಿದ ಭೋಗಗಳಿಂದ ಕೂಡಿರುವವರು. ಅವರೆಲ್ಲ ಅನೇಕ ಸಾವಿರವರ್ಷಗಳ ಕಾಲ ಜೀವಿಸುವವರು ; ಎಲ್ಲರೂ ಸುಂದರರೂಪವುಳ್ಳವರು. ಈ ಎಲ್ಲ ಲೋಕಗಳಿಗೂ ಧಾರಣಪೋಷಣಕರ್ತೃವಾದವನು ಶ್ರೀಮನ್ನಾರಾಯಣ ; ವಿಷ್ಣುಲೋಕದಲ್ಲಿರುವ ಅವನನ್ನು ಸಕಲಮುಕ್ತರು ಸದಾ ಆರಾಧಿಸುವರು. ಎಲ್ಲ ದೇವತೆಗಳೂ ಸಹ ಬ್ರಹ್ಮದೇವರಿಗೆ ಸೇವಕರು. ವೇದಗಳು ಶ್ರೀಹರಿಯನ್ನು ಪ್ರತಿಪಾದಿಸುವಂತಹವುಗಳು. ಇಂದ್ರಸಭೆಯಲ್ಲಿ ಮುನಿಗಳು ಹಾಗೂ ಹರಿಶ್ಚಂದ್ರರಾಜನು ಇರುವರು.

## ದಿಕ್ಪಾಲಕರ ಸಭೆಗಳು

ಇಂದ್ರಸಭೆಯಲ್ಲಿ, ನಮ್ಮ ತಂದೆಯಾದ ಪಾಂಡು ಹಾಗೂ ಮತ್ತಿತರ ಅನೇಕ ರಾಜರು ಯಮನ ಸಭೆಯಲ್ಲಿ ಇರುವುದಾಗಿ ಹೇಳಿದಿರಿ ; ಅಲ್ಲಿ ಯಮನಿಂದ ಶ್ರೀರಾಮರೂಪದ ಶ್ರೀಹರಿಯು ಆರಾಧಿಸಲ್ಪಡುವನು. ಇಂದ್ರಸಭೆಯಲ್ಲಿ ವಾಮನರೂಪಿಯಾದ ಜನಾರ್ದನನು ಆರಾಧಿತನಾಗಿರುವನು. ಶ್ರೀಹರಿಯ ಸಕಲ ಪ್ರಾದುರ್ಭಾವಗಳು ಸದಾ ಬ್ರಹ್ಮದೇವರಿಂದ ಉಪಾಸಿತವಾಗಿವೆ. ವರುಣನ ಅನುಚರರು ನಾಗಗಳು; ಅಲ್ಲಿ ಮತ್ಸ್ಯರೂಪದ ಶ್ರೀಹರಿಯು ಪೂಜಿಸಲ್ಪಡುವನು. ಗಂಧರ್ವರು ಕುಬೇರನ ಪ್ರಜೆಗಳು ; ಅಲ್ಲಿ ಕಲ್ಕಿರೂಪದ ಶ್ರೀಹರಿಯು ಪೂಜಿಸಲ್ಪಡುವನು. ಶಿವನ ಭೃತ್ಯರು ಉಗ್ರವಾದ ಭೂತಗಳು ; ನರಸಿಂಹರೂಪದ ಶ್ರೀಹರಿಯು ಶಿವನಿಂದ ಆರಾಧಿಸಲ್ಪಡುವನು. ಇವೇ ಮೊದಲಾಗಿ ನೀವು ನನಗೆ ತಿಳಿಸಿದಿರಿ. ದೇವಲೋಕದ ಪ್ರದೇಶಗಳೆಲ್ಲಾ ಸಕಲ ಬಗೆಯ ರತ್ನಗಳಿಂದ ತುಂಬಿರುವವು ಎಂದೂ ಹೇಳಿದಿರಿ. ಇದರ ಬಗ್ಗೆ

ನನಗೊಂದು ಸಂದೇಹ ಉಂಟಾಗಿದೆ. ರಾಜನಾದ [೧]ಹರಿಶ್ಚಂದ್ರನು ಮಾತ್ರ ಇಂದ್ರಸಭೆಯಲ್ಲಿರಲು ಕಾರಣವೇನು? ನಮ್ಮ ತಂದೆ ಪಾಂಡುರಾಜನಿಗೇಕೆ ಅದು ಸಾಧ್ಯವಾಗಿಲ್ಲ? ದಯವಿಟ್ಟು ತಿಳಿಸಬೇಕು.'' ಹರಿಶ್ಚಂದ್ರನ ಆ ಉನ್ನತಿಗೆ ಅವನು ರಾಜಸೂಯ ಮಾಡಿದ್ದುದೇ ಕಾರಣವೆಂದು ತಿಳಿಸಿದ ಅವರು ''ಅದಕ್ಕೆಂದೇ ಪಾಂಡುರಾಜ ನಿನಗೆ ಈ ಮಾತುಗಳನ್ನು ತಿಳಿಸಲು ಹೇಳಿರುವನು - ''ನನ್ನ ಹಿರಿಯ ಮಗ ಯುಧಿಷ್ಠಿರ ತನ್ನ ತಮ್ಮಂದಿರೊಂದಿಗೆ ಕೂಡಿಕೊಂಡು, ವಾಸುದೇವನ ರಕ್ಷಣೆಯಲ್ಲಿ ರಾಜಸೂಯಯಾಗವನ್ನು ಮಾಡಲಿ. ಅವನಿಗೆ ಆಗದ್ದು ಯಾವುದಿದೆ?'' ಎಂದು ಹೇಳಿದರು.

## ರಾಜಸೂಯಯಾಗದ ಸಿದ್ಧತೆ

ಇದನ್ನು ಕೇಳಿದ ಧರ್ಮರಾಜನು ತಮ್ಮಂದಿರೊಂದಿಗೆ ಕೂಡಿಕೊಂಡು, ರಾಜಸೂಯ ಯಾಗವನ್ನು ನಡೆಸುವ ಬಗ್ಗೆ ಮಂತ್ರಾಲೋಚನೆ ನಡೆಸಿದ. ''ಇದನ್ನು ಅಗತ್ಯವಾಗಿ ಮಾಡಲೇಬೇಕು'' ಎಂಬುದಾಗಿ ಸೋದರರೆಲ್ಲರೂ ನುಡಿದದ್ದನ್ನು ಕೇಳಿ, ಕೂಡಲೇ ಅವನು ಕೃಷ್ಣನನ್ನು ಕರೆತರಲು ತನ್ನ ಸಾರಥಿಯನ್ನು ಕಳುಹಿಸಿದ. ಅದೇ ವೇಳೆಗೆ ಕೃಷ್ಣಪತ್ನಿಯರ ತಂದೆ ಹಾಗೂ ಸಹೋದರರು ಕಳುಹಿಸಿದ್ದ ದೂತನೊಬ್ಬನು ಸಹ ಕೃಷ್ಣನ ಸನ್ನಿಧಿಗೆ ಬಂದು ವಿಜ್ಞಾಪಿಸಿಕೊಂಡ - ''ವಿವಾಹದಿಂದಾಗಿ ನಿನ್ನ ಬಂಧುಗಳೆನ್ನಿಸಿರುವ ಅವರೆಲ್ಲರೂ ಜರಾಸಂಧನಿಂದ ಪರಾಜಿತರಾಗಿ, ಅವನಿಂದ ಪರ್ವತವೊಂದರಲ್ಲಿ ಬಂದಿಗಳಾಗಿರುವರು. ನೀನಿರುವಾಗಲೇ ಆ ಜರಾಸಂಧ ಇಪ್ಪತ್ತೆರಡುಸಾವಿರದ ಎಂಟುನೂರು ರಾಜರನ್ನು ಬಲಿಯನ್ನಾಗಿ ಅರ್ಪಿಸಿ ಉಗ್ರರೂಪಿಯಾದ ಶಿವನನ್ನು ಕುರಿತ ಯಾಗವೊಂದನ್ನು ನಡೆಸುವ ಸನ್ನಾಹದಲ್ಲಿರುವನು. ಪ್ರಭುವೇ ! ಆ ಅವೈದಿಕಯಾಗವನ್ನು, ಧರ್ಮರಕ್ಷಣೆಗಾಗಿ ನೀನು ನಡೆಯದಂತೆ ನೋಡಿಕೊಳ್ಳಬೇಕು.'' ಅದೇ ವೇಳೆಗೆ ಧರ್ಮರಾಜನ ಸಾರಥಿಯೂ ಬರಲು ಅವನ ಮಾತನ್ನೂ ಕೇಳಿದ ಕೃಷ್ಣನು ಪಾಂಡವರ ಬಳಿಗೆ ಆಗಮಿಸಿದ.

## ರಾಜಸೂಯಯಾಗದ ಹಿನ್ನೆಲೆ

ಪಾಂಡವರಿಂದ ಪರಮಾದರದಿಂದ ಸ್ವಾಗತಿಸಲ್ಪಟ್ಟ ಅವನು ಯಾಗದ ವಿಷಯವಾಗಿ ಧರ್ಮರಾಜ ಕೇಳಿಕೊಂಡಾಗ, ಲೋಕಕ್ಕೆ ಹಿತಕಾರಕವಾದ ಮಾತನ್ನು ನುಡಿದ - ''ಬ್ರಹ್ಮಪದಕ್ಕೆ ಯೋಗ್ಯನಾದವನು ಈ ರಾಜಸೂಯವನ್ನು ಮಾಡಿದರೆ, ಬ್ರಹ್ಮಪದವಿಯನ್ನೇ ಪಡೆಯುವನು ; ಇತರರು ಇದನ್ನು ಮಾಡಿದಲ್ಲಿ , ಅವರು ಮುಕ್ತಿಯಲ್ಲೂ ಸಹ ಹಿರಿಮೆಯನ್ನು ಹೊಂದು-

---

೧. ಹರಿಶ್ಚಂದ್ರ ಒಬ್ಬ ಸೂರ್ಯವಂಶದ ರಾಜ ಎಂಬುದು ಪ್ರಸಿದ್ಧ. ಅದರಂತೆ ಪಾಂಡುರಾಜನು ಚಂದ್ರವಂಶದ ವಿಖ್ಯಾತ ರಾಜ. ಹೀಗೆ ಇಬ್ಬರೂ ರಾಜರಾಗಿದ್ದಾಗ ಹರಿಶ್ಚಂದ್ರ ಇಂದ್ರಸಭೆಯಲ್ಲಿ ನೆಲೆಸಿ, ತನ್ನ ತಂದೆ ಪಾಂಡುರಾಜ ಮಾತ್ರ ಯಮಸಭೆಯಲ್ಲಿ ನೆಲೆಸಲು ಕಾರಣವೇನು ಎಂಬುದು ಯುಧಿಷ್ಠಿರನ ಆತಂಕ. ಇಂದ್ರಸಭೆ ಯಮಸಭೆಗಿಂತ ಮಿಗಿಲು. ಲೋಕಸಭೆ ವಿಧಾನಸಭೆಗಿಂತ ಹೇಗೋ ಹಾಗೆ. ಸಾಮಾನ್ಯವಾಗಿ ರಾಜರು ಅಲಂಕರಿಸುವುದು ಯಮಸಭೆಯನ್ನು ಎಂಬುದು ಮತ್ತೊಂದು ವಿಶೇಷ.

ವಂತಾಗುವರು. ಮುಕ್ತಿಗಿಂತ ಮುಂಚಿತವಾಗಿಯೂ ಇದು ಅವರಿಗೆ ತಮ್ಮ ಗುಂಪಿನವರಲ್ಲಿ ಹಿರಿಮೆ ಹೊಂದಲು ಕಾರಣವಾಗುವುದು. ಆದ್ದರಿಂದಲೇ ತ್ರಿಶಂಕುಪುತ್ರನಾದ ಹರಿಶ್ಚಂದ್ರನು ಇತರ ರಾಜರನ್ನೆಲ್ಲ ಮೀರಿಸಿರುವನು. ದೇವಾಂಶಸಂಭೂತನೇ ಆದರೂ ನಿನ್ನ ತಂದೆ ರಾಜ-ಸೂಯಯಾಗದ ನೆರವಿಲ್ಲದೆ ಹರಿಶ್ಚಂದ್ರನನ್ನು ಮೀರಿಸಲಾರ. ಮರುದ್ಗಣೋತ್ತಮನಾದ ನಿನ್ನ ತಂದೆ ಹಿಂದೊಮ್ಮೆ ತಪಸ್ಸು ಮಾಡುತ್ತಿದ್ದಾಗ, ಬಳಿಗೆ ಇಂದ್ರನು ಬಂದಾಗ ಎದ್ದು ನಿಲ್ಲಲಿಲ್ಲ[೧]. ಅದರಿಂದಾಗಿ ಇಂದ್ರ "ಮನುಷ್ಯನಾಗಿ ಹುಟ್ಟಿ, ಅನಂತರ ದೇವಲೋಕಕ್ಕೆ ಬರುವೆಯಾದರೂ ನಿನ್ನ ಮೂಲರೂಪವನ್ನು ಸೇರಲು ನಿನ್ನಿಂದ ಸಾಧ್ಯವಾಗುವುದಿಲ್ಲ; ಆಗ ಹರಿಶ್ಚಂದ್ರ ನಿನಗಿಂತ ಶ್ರೇಷ್ಠನೆನ್ನಿಸುವನು" ಎಂದು ನುಡಿಯಲು, ಅವನು ತನ್ನ ಅಪಚಾರವನ್ನು ಮನ್ನಿಸಲು ಬೇಡಿಕೊಂಡ. ಅದಕ್ಕೆ ಇಂದ್ರ "ನೀನು ರಾಜಸೂಯಯಾಗ ಮಾಡುವುದರಿಂದ ಹರಿಶ್ಚಂದ್ರ-ನಿಗಿಂತ ಶ್ರೇಷ್ಠನೆನ್ನಿಸುವುದಲ್ಲದೆ, ನಿನ್ನ ಮೂಲರೂಪವನ್ನು ಪಡೆಯುವಿ" ಎಂದು ಅನುಗ್ರಹಿಸಿದ. ಆದ್ದರಿಂದ ಯುಧಿಷ್ಠಿರ ! ಈ ಶ್ರೇಷ್ಠಯಾಗವನ್ನು ನೀನು ಅಗತ್ಯವಾಗಿ ಮಾಡಲೇಬೇಕು. ನಿಮ್ಮ ಯೋಗ್ಯತೆಗೆ ಉಚಿತವಾದುದ್ದೆಲ್ಲವೂ ಸಹ ನಿಮಗೆ ಇದರಿಂದ ಲಭಿಸುವುದು." ಈ ರೀತಿಯಾಗಿ ಕೃಷ್ಣ ಆ ಕ್ರತುವಿನ ಮಹಿಮೆಯನ್ನು ವರ್ಣಿಸಿದ. ವೃಕೋದರನಲ್ಲಿ ಬ್ರಹ್ಮಪದವಿಯ ಅರ್ಹತೆ ಸಂಪೂರ್ಣವಾಗಿ ಇದ್ದುದರಿಂದ, ಅದರ ಎಲ್ಲ ಫಲವನ್ನೂ ಅವನಿಗೇ ಕೊಡಿಸುವ ಉದ್ದೇಶ-ದಿಂದಲೇ ವಾಯುವಾಹನನಾದ ಅವನು ತನ್ನ ಮಾತನ್ನು ಮುಂದುವರಿಸಿದ – "ಆದರೆ ಜರಾಸಂಧ ಬದುಕಿರುವಾಗ ನಿನ್ನ ರಾಜಸೂಯಯಾಗ ಹೇಗೆ ನಡೆದೀತು ! ಬಲರಾಮ-ನಿಂದಲೂ ಸಾಯದಿರುವ ಅವನನ್ನು ಸಂಹರಿಸುವ ಸಮರ್ಥ ಯಾರು? ಬ್ರಹ್ಮ ಹಾಗೂ ಶಿವನ ವರದಿಂದ ಎಲ್ಲ ಲೋಕವನ್ನು ಜಯಿಸುವ ಅವನು ಬದುಕಿರುವವರೆಗೆ ಈ ಶ್ರೇಷ್ಠಯಾಗ ನಡೆಯಲಾರದು." ಕೃಷ್ಣನ ಮಾತಿಗೆ ಧರ್ಮರಾಜ ಹತಾಶನಾಗಿ ನುಡಿದ – "ಪ್ರಭು ! ಯಾಗದ ವಿಚಾರ ನನ್ನ ಮನಸ್ಸಿನಿಂದ ದೂರಾಯಿತು. ಇದರ ಸಹವಾಸ ನನಗೆ ಬೇಡ. ಆಗಿರುವ ಎಲ್ಲ ರಾಜರೂ ಚಕ್ರವರ್ತಿಗಳೇನೂ ಆದವರಲ್ಲ. ಚಕ್ರವರ್ತಿಯಾದ ರಾಜರಿದ್ದಾಗ ಈ ಜರಾಸಂಧನಂತಹ ಶತ್ರುಗಳೂ ಇರಲಿಲ್ಲ."

---

೧. ಇದು ಒಂದು ರೀತಿಯಲ್ಲಿ ಅಗಸ್ತ್ಯರು ಬಂದಾಗ ಅವರನ್ನು ಆದರಿಸದ ಇಂದ್ರದ್ಯುಮ್ನರಾಜನ ಕಥೆಯನ್ನು ಹೋಲುವುದು. ಈ ಎರಡೂ ಪ್ರಸಂಗಗಳಲ್ಲೂ ಇಂದ್ರದ್ಯುಮ್ನ ಹಾಗೂ ಪರಾವಹ ಮರುತ್ ಇಬ್ಬರೂ ಅಸಂಪ್ರಜ್ಞಾತಸಮಾಧಿಸ್ಥಿತಿಯಲ್ಲಿ ಇದ್ದವರಾಗಿರಲಿಲ್ಲ. ಅದರಿಂದಾಗಿಯೇ ಅವರಿಗೆ ಶಾಪಕ್ಕೊಳಗಾಗುವ ಪ್ರಸಂಗ ಒದಗಿತು. ಅಪರೋಕ್ಷಜ್ಞಾನಿಗಳಿಗೆ ಸ್ವೋತ್ತಮ ಅಪಚಾರದ ಹೊರತು ಇತರ ಯಾವ ದೋಷಗಳೂ ತಟ್ಟವು ಎಂಬುದು ಶಾಸ್ತ್ರದ ನಿರ್ಣಯ. ಅದಕ್ಕೆ ಇಂತಹ ಪ್ರಸಂಗಗಳು ನಿದರ್ಶನ ಎಂದು ತಿಳಿಯಬೇಕು. ವಾಸ್ತವವಾಗಿ ಅಸಂಪ್ರಜ್ಞಾತಸ್ಥಿತಿಯಲ್ಲೇ ಇರುವವರಿಗೆ ಇದರ ದೋಷ ತಟ್ಟದು ಎಂಬುದು ವಿಶೇಷ : 'ತಸ್ಯ ಕಾರ್ಯಂ ನ ವಿದ್ಯತೇ'(ಗೀತಾ). ಶಮೀಕರ ಪ್ರಸಂಗ ಅವರು ವಾಸ್ತವವಾಗಿ ಅಸಂಪ್ರಜ್ಞಾತಸ್ಥಿತಿಯಲ್ಲಿಯೇ ಇದ್ದಾಗ ನಡೆಯಿತು. ಅದರಿಂದಾಗಿ ದೋಷ ಅವರದಾಗದೆ ಅದನ್ನು ಗಮನಿಸದ ಪರೀಕ್ಷಿತ್ ರಾಜನದಾಯಿತು ಎಂಬುದು ವಿಶೇಷ ಪ್ರಮೇಯ.

## ಭೀಮಸೇನನ ದಿವ್ಯಜ್ಞಾನ

ಧರ್ಮರಾಜನ ನಿರ್ಧಾರವನ್ನು ವಿರೋಧಿಸುತ್ತ, ವಾಯುಪುತ್ರನಾದ ಭೀಮಸೇನ ದೃಢವಾಗಿ ಹೇಳಿದ – ''ಬ್ರಹ್ಮಪದವಿಯಾದರೂ ಸರಿಯೇ, ಅದನ್ನು ಪ್ರಯತ್ನದಿಂದ ಸಾಧಿಸಲೇಬೇಕು. ಸ್ವರೂಪಯೋಗ್ಯತೆ, ಶ್ರೀಹರಿಯ ಅನುಗ್ರಹ ಮತ್ತು ಮಹಾಪ್ರಯತ್ನ ಈ ಮೂರೂ ಇಲ್ಲದ ಜನರು ಮಾತ್ರ ಉನ್ನತಿಯನ್ನು ಸರ್ವಥಾ ಕಾಣಲಾರರು. ಆದರೆ ಅದಕ್ಕೆ ಅಗತ್ಯವಾದ ಅಂತಹ ಅರ್ಹತೆ ನನ್ನಲ್ಲಿದೆ. ಈ ಕೃಷ್ಣನ ಅನುಗ್ರಹ ನಮಗಿರುವಷ್ಟು ಬೇರಾರಿಗೆ ತಾನೆ ಇದೆ ? ನಾವೀಗ ಪ್ರಯತ್ನವೊಂದನ್ನು ಮಾತ್ರ ಮುಂದಿಟ್ಟು ಉನ್ನತಿಯನ್ನು ಗಳಿಸೋಣ.'' ಈ ರೀತಿ ಯಜ್ಞದ ಮಹಾಕಾರಣನಾಗಿ ವೃಕೋದರ ಸಿದ್ಧನಾದದ್ದನ್ನು ಕಂಡು ಕೃಷ್ಣ – ''ಸಜ್ಜನರನ್ನು ವಿರೋಧಿಸುವವರಿಗೆಲ್ಲ ಆಶ್ರಯವಾಗಿ ಆ ಜರಾಸಂಧನೊಬ್ಬ ಮಾತ್ರ ಈಗ ಉಳಿದುಕೊಂಡಿರುವನು. ಕಲಿಯನ್ನು ಬಿಟ್ಟರೆ ಇತರ ದುಷ್ಟರಲ್ಲಿ ಇವನದೇ ಪ್ರಾಬಲ್ಯ. ಅದೇ ರೀತಿ ಸಜ್ಜನರ ಗುಣಗಳೆಲ್ಲ ಯಾವನಿಂದ ಉಳಿಯಬಲ್ಲವೋ ಅವನೇ ಸಜ್ಜನರಿಗೆ ಆಶ್ರಯ-ವೆನ್ನಿಸುವನು. ಅಂತಹವನು ಯಾರೆಂಬುದನ್ನು ವಿಚಾರ ಮಾಡಿ ಕಳುಹಿಸಿಕೊಡಬೇಕು. ಅವನಿಂದ ಜರಾಸಂಧನು ಹತನಾದಲ್ಲಿ, ಸಜ್ಜನರದೇ ಜಯ. ಇಲ್ಲವಾದಲ್ಲಿ ದುಷ್ಟರಿಗೇ ಆ ಅವಕಾಶ. ಜರಾಸಂಧನನ್ನು ಕೊಲ್ಲುವವನು ನಿಸ್ಸಂಶಯವಾಗಿ ಬ್ರಹ್ಮಪಟ್ಟವನ್ನೇ ಹೊಂದುವನು. ಅವನಿಂದಲೇ ಧರ್ಮವು ಉಳಿಯುವುದು ; ಆ ಜರಾಸಂಧನು ಶೈವರ ನಾಯಕನಾಗಿರುವು-ದರಿಂದ ಅವನನ್ನು ಕೊಲ್ಲುವವನು ಜಗತ್ತನ್ನೇ ವೈಷ್ಣವವನ್ನಾಗಿಸುವ ಕೀರ್ತಿಗೂ ಪಾತ್ರನಾಗು-ವನು.'' ಕೃಷ್ಣನ ಅರ್ಥಗರ್ಭಿತವಾದ ಈ ಮಾತಿನ ಮರ್ಮವನ್ನರಿಯದ ಧರ್ಮರಾಜ ಮತ್ತೆ ಭಯಪಡುತ್ತ ''ನನಗೆ ಈ ಯಾಗದ ಗೊಡವೆಯೇ ಬೇಡ '' ಎಂದ. ಆಗ ಭೀಮಸೇನ ''ನಾನು ಜರಾಸಂಧನನ್ನು ಯುದ್ಧದಲ್ಲಿ ನಿಶ್ಚಿತವಾಗಿ ಕೊಲ್ಲುವೆ'' ಎಂದೇ ದೃಢವಾಗಿ ನುಡಿದ. ಕೃಷ್ಣನು ಭೀಮನ ಮಾತನ್ನು ಅನುಮೋದಿಸುತ್ತಾ – ''ನಾನು, ಭೀಮ ಮತ್ತು ಅರ್ಜುನ ಈ ಮೂವರೂ ಈ ಮಾಗಧನನ್ನು ಕೊಲ್ಲಲು ಹೊರಡುವೆವು. ಆ ಜರಾಸಂಧನು ಭೀಮನಿಂದ ಹತನಾದಾಗ, ನಿನಗೆ ರಾಜಸೂಯಯಾಗ ಸಾಧ್ಯವಾಗುವುದು. ಜಗತ್ತೆಲ್ಲ ಖಂಡಿತವಾಗಿ ನಿನ್ನ ವಶವೇ ಆಗುವುದು.'' ಮಥುರೆಯ ಪ್ರಾಂತವನ್ನು ತೊರೆದು ಕೃಷ್ಣ ಬೇರೆಡೆ ನೆಲೆಸಿದ್ದ ಕಾರಣ ದಿಂದ ಇನ್ನೂ ಭಯಪಡುತ್ತಲೇ ಧರ್ಮರಾಜ ವಿಜ್ಞಾಪಿಸಿದ – ''ಅವನ ಭಯದಿಂದ ನೀವೇ ಮಥುರೆಯನ್ನು ಬಿಟ್ಟು ಸಮುದ್ರದ ಮಧ್ಯೆ ಸೇರಿರುವಾಗ, ನನಗೆ ಭಯವಾಗದಿರುತ್ತದೆಯೆ? ಈ ಭೀಮಾರ್ಜುನರು ನನಗೆ ಕಣ್ಣುಗಳಿದ್ದಂತೆ ; ನೀನಾದರೂ ನನಗೆ ಮನಸ್ಸೇ ಇದ್ದಂತೆ. ನಿಮ್ಮೆಲ್ಲರನ್ನೂ ಬಿಟ್ಟು ನಾನು ಮನುಷ್ಯ ಎನ್ನಿಸಲಾರೆ. ಆದ್ದರಿಂದ ಪ್ರಾಣಕ್ಕಿಂತ ಹೆಚ್ಚಾಗಿರುವ ನಿಮ್ಮನ್ನು ಸ್ವಾರ್ಥಕ್ಕಾಗಿ ಪ್ರಬಲಶತ್ರುವಿನ ಬಳಿಗೆ ಕಳುಹಿಸಿಕೊಡಲಾರೆ.''

## ಭೀಮ ನೀಡಿದ ಭರವಸೆ

ಶತ್ರುಕಾನನಕ್ಕೆ ದಾವಾಗ್ನಿಯಂತಿದ್ದ ಭೀಮಸೇನ ಧರ್ಮರಾಜನಿಗೆ ವಿವೇಕ ಹೇಳಿದ – ''ರಮಾಬ್ರಹ್ಮಾದಿದೇವತೆಗಳೆಲ್ಲ ಈ ಕೃಷ್ಣನಿಂದಲೇ ಅಭ್ಯುದಯ ಕಂಡಿರುವರು. ಸುರಾಸುರರು,

ಉರಗ ಮೊದಲಾದ ಎಲ್ಲವುಗಳ ಬಲವೂ ಇವನ ಅಧೀನದಲ್ಲಿದೆ. ಅಂತಹ ಈ ಕೇಶವನಿಗೆ ಆ ಜರಾಸಂಧ ಯಾವ ಲೆಕ್ಕ ? ಹರಿಭಕ್ತನಾಗಿರುವ ನನ್ನ ಬಲವೂ ಸಹ ಇತರರಿಗೆ ಮಣಿಯು-ವಂತಹುದಲ್ಲ. ಈ ಕೃಷ್ಣನೇ ಸರ್ವಶಕ್ತ. ಕೃಷ್ಣನ ವರದಿಂದಾಗಿ ಅರ್ಜುನನೂ ಸಹ ಅಜೇಯನೇ ಆಗಿರುವನು. ಆದ್ದರಿಂದ, ನಾವು ಮೂವರೂ ಜರಾಸಂಧನನ್ನು ಎದುರಿಸಿ ಹೋಗುವೆವು. ಕೃಷ್ಣನ ಮುಂದೆಯೇ ನಾನು ಅವನನ್ನು ಸಂಹರಿಸುವೆ, ಸಂಶಯ ಬೇಡ.'' ಕೃಷ್ಣನೂ ಧರ್ಮ-ರಾಜನಿಗೆ – ''ನಾವು ಮೂವರೂ ಸೇರಿ ಅವನ ಗತಿಯನ್ನು ಮುಗಿಸುವೆವು. ಖಂಡಿತ-ವಾಗಿಯೂ ಭೀಮಸೇನ ಅವನನ್ನು ಕೊಲ್ಲುವನು. ನಿನಗೆ ಸ್ವಲ್ಪವೂ ಭಯ ಬೇಡ. ಆ ಜರಾಸಂಧ ಶಿವಭಕ್ತರಲ್ಲಿ ಹಿರಿಯ. ಅವನು ನನ್ನ ಭಕ್ತಶ್ರೇಷ್ಠನಿಂದ ಕೊಲ್ಲಲ್ಪಡುವುದೇ ನನ್ನ ಘನತೆಗೆ ಉಚಿತವೆಂಬ ನ್ಯಾಯದಿಂದ ಮಾತ್ರವೇ ನಾನು ಜರಾಸಂಧನನ್ನು ಕೊಲ್ಲದೆ ಬಿಟ್ಟಿರುವೆ. ಆದ್ದರಿಂದ ನನ್ನ ಸಾಮರ್ಥ್ಯದಲ್ಲಿ ನೀನು ಸಂದೇಹಪಡಬೇಕಿಲ್ಲ. ಶತ್ರುವನ್ನು ಕೊಂದು ಬರುವ ನಿನ್ನ ತಮ್ಮಂದಿರನ್ನು ನಿನಗೆ ತೋರಿಸುವೆ'' ಎಂದು ಆಶ್ವಾಸನೆ ನೀಡಿದ. ಕೃಷ್ಣನ ಸಾಮರ್ಥ್ಯದ ಹಿರಿಮೆಯನ್ನು ಮನಸ್ಸಿನಲ್ಲೇ ವಿಚಾರ ಮಾಡಿದ ಧರ್ಮರಾಜ, ಅವರನ್ನೆಲ್ಲ ಕಳುಹಿಸಲು ಒಪ್ಪಿದ. ಆ ಮೂವರೂ ಅಲ್ಲಿಂದ ಹೊರಟರು.

## ಜರಾಸಂಧನ ಲಿಂಗಭಂಗ

ಮಗಧದೇಶವನ್ನು ಸೇರಿದ ಅವರು, ಜರಾಸಂಧನಿಂದ ಶಿವಲಿಂಗವೆಂಬ ಭಾವನೆಯಿಂದ ವಸ್ತ್ರಭೂಷಣಾದಿಗಳಿಂದ ಪೂಜೆಗೊಳ್ಳುತ್ತಿದ್ದ ಬೆಟ್ಟವೊಂದರ ಬಳಿಗೆ ಹೋದರು ; ಅದನ್ನು ಜರಾಸಂಧ ತಲೆಬಾಗಿ ವಂದಿಸುತ್ತಿದ್ದ. ತಮ್ಮ ಬಾಹುಗಳಿಂದ ಆ ಪರ್ವತವನ್ನು ಅವರು ಉರುಳಿಸಿಬಿಟ್ಟರು. ಜರಾಸಂಧನ ತಲೆ ಉರುಳಿಸುವ ಅವರ ಕಾರ್ಯಕ್ಕೆ ಅದು ಪೂರ್ವ-ಪೀಠಿಕೆಯಾಗಿತ್ತು. ಮಹಾದ್ವಾರವನ್ನು ಬಿಟ್ಟು ಅಡ್ಡದಾರಿಯಿಂದ ಊರನ್ನು ಪ್ರವೇಶಿಸಿ ಅವರೆಲ್ಲ ಮಾಷ ಎಂಬ ಅಸುರನ ಸಾಳದಿಂದ ಮಾಡಲ್ಪಟ್ಟಿದ್ದ , ಜರಾಸಂಧನ ಕೀರ್ತಿಶಾಸ್ತ್ರದಂತೆ ಇದ್ದ ಮೂರು ಭೇರಿಗಳನ್ನು ತಮ್ಮ ಮುಷ್ಟಿಪ್ರಹಾರದಿಂದ ಭಗ್ನಗೊಳಿಸಿದರು. ಅಂಗಡಿಯಲ್ಲಿ ಅನೇಕ-ವಿಧ ಹಾರಗಳನ್ನು, ಗಂಧವನ್ನು ಬಲಾತ್ಕಾರದಿಂದ ಕಿತ್ತುಕೊಂಡು ಧರಿಸಿಕೊಂಡರು.

## ಜರಾಸಂಧನ ದುರಾಗ್ರಹ

ಅವರು ಅಮಾರ್ಗದಿಂದಲೇ ಜರಾಸಂಧನ ಮನೆಯನ್ನು ಸೇರಿ, ''ಭೋಃ'' ಎಂದು ಕರೆಯುತ್ತ ಜರಾಸಂಧನನ್ನು ಸಮೀಪಿಸಿದರು. ಬ್ರಾಹ್ಮಣವೇಷದ ಅವರನ್ನು ಪರೀಕ್ಷಿಸಿ ನೋಡಿದ ಜರಾಸಂಧ, ದೀರ್ಘಬಾಹುಗಳು ಹಾಗೂ ಹೆದೆಯಿಂದ ಜಡ್ಡುಗಟ್ಟಿದ ತೋಳುಗಳಿಂದ ಕೂಡಿದ್ದ ಅವರನ್ನು ಕ್ಷತ್ರಿಯರೇ ಇರಬೇಕೆಂದು ಊಹಿಸುತ್ತ – ''ನೀವೆಲ್ಲ ಯಾರು? ಏತಕ್ಕೋಸ್ಕರ ಇಲ್ಲಿಗೆ ಬಂದಿದ್ದೀರಿ ? ಅದೇತಕ್ಕೆ ನನ್ನ ಪರ್ವತಲಿಂಗವನ್ನು ಭೇದಿಸಿದಿರಿ? ಬ್ರಾಹ್ಮಣವೇಷದ ನೀವು ನನ್ನ ಪಟ್ಟಣದಲ್ಲಿ ಅನ್ಯಾಯವೆಸಗಿದುದಕ್ಕೆ ಕಾರಣವೇನು?'' ಎಂದು ಪ್ರಶ್ನಿಸಿದ. ಅದಕ್ಕೆಲ್ಲ ಕೃಷ್ಣನು ''ಶತ್ರುವಿಗೆ ವಿರೋಧ ಮಾಡುವುದು ಧರ್ಮವೇ ಅಲ್ಲವೇ?'' ಎಂದು ಉತ್ತರಿಸಲು;

ಅವನು ಮತ್ತೆ ಕೇಳಿದ – ''ನಾನೇನು ಬ್ರಾಹ್ಮಣರ ಶತ್ರುವಲ್ಲ ; ನಿಮಗೆ ನನ್ನ ಶತ್ರುತ್ವ ಎಲ್ಲಿ-ಯದು?'' ಕೃಷ್ಣ ವಿವರಿಸಿದ – ''ನಾನು ನಿನ್ನ ಶತ್ರು ವಾಸುದೇವ ; ಇವರು ಭೀಮಾರ್ಜುನರು. ನಮ್ಮ ಬಂಧುಗಳನ್ನೆಲ್ಲ ರಾಕ್ಷಸಧರ್ಮದಂತೆ ನೀನು ರುದ್ರಯಾಗದಲ್ಲಿ ಬಲಿ ಕೊಡುವ ಅವೈದಿಕಕಾರ್ಯಕ್ಕೆ ಎಳೆಸಿರುವೆ. ಅದಕ್ಕೆಂದೆ ನಿನ್ನನ್ನು ಮಟ್ಟಹಾಕಲು ನಾವೀಗ ಬಂದಿರುವೆವು. ಅವರನ್ನೆಲ್ಲ ಬಿಡುಗಡೆ ಮಾಡುವುದಾದಲ್ಲಿ ನಿನ್ನ ಗೋಜಿಗೆ ನಾವು ಬರುವುದಿಲ್ಲ, ಇಲ್ಲವಾದಲ್ಲಿ ಪ್ರಾಣ ಕಳೆದುಕೊಳ್ಳುವಿ[೧].'' ಇದನ್ನು ಕೇಳಿ ಕೋಪದಿಂದ ಉರಿದೆದ್ದ ಜರಾಸಂಧ – ''ಶಿವ-ಯಾಗದಲ್ಲಿ ಬಲಿಕೊಡಲೆಂದು ಹಿಡಿದಿಟ್ಟಿರುವ ಅವರನ್ನು ನಾನೆಂದಿಗೂ ಬಿಡಲಾರೆ. ನೀವೆಲ್ಲ ಸೈನ್ಯಸಮೇತವಾಗಿ ಬಂದರೂ ಸರಿ, ನಿರಾಯುಧರಾಗಿ ಸಾಯುಧರಾಗಿ ಬಂದರೂ ಸರಿ, ನಿಮ್ಮ ಆಯ್ಕೆಯ ಆಯುಧದಿಂದ ಬಂದರೂ ಆದೀತು ; ನಾನು ಎದುರಿಸಲು ಸಿದ್ಧ. ನೀವು ಬಯಸಿದಲ್ಲಿ ನಿಮ್ಮೆಲ್ಲರೊಂದಿಗೆ ನಾನೊಬ್ಬನೇ ಕಾದಾಡುವೆ ; ಸೈನ್ಯ ತೆಗೆದುಕೊಂಡು ಬಂದಲ್ಲಿ ಸಹ ಹೋರಾಡಲು ನಾನು ಸಿದ್ಧ.''

## ಜರಾಸಂಧನ ಆಯ್ಕೆಯಾದ ಭೀಮ

ಕೃಷ್ಣ ಮಂದಹಾಸದಿಂದ ನುಡಿದ – ''ಆ ಆಯ್ಕೆಯನ್ನು ನಾವು ನಿನ್ನ ಪಾಲಿಗೇ ಬಿಟ್ಟಿರುವೆವು. ನಮ್ಮಲ್ಲಿ ಯಾರನ್ನಾದರೂ ಒಬ್ಬರನ್ನು ನೀನು ಇಷ್ಟಬಂದ ರೀತಿಯಲ್ಲಿ ಎದುರಿಸಬಹುದು. ಬಯಸಿದಲ್ಲಿ ಸೈನ್ಯಸಮೇತನಾಗಿ ಬಂದರೂ ಅದಕ್ಕೆ ನಮ್ಮ ಆಕ್ಷೇಪವಿಲ್ಲ, ನಿರಾಯುಧನಾಗಿಯೇ ಆಗಲಿ ಅಥವಾ ಯಾವುದೇ ನಿನಗೆ ಇಷ್ಟವಾದ ಆಯುಧದೊಂದಿಗೇ ಆಗಲಿ, ನೀನು ಹೋರಾಟ ನಡೆಸಬಹುದು.'' ಭೀಮನ ಕೀರ್ತಿಯನ್ನು ಬೆಳಗಿಸಲೆಂಬ ಉದ್ದೇಶದಿಂದಲೇ ಈ ಎಲ್ಲ ಮಾತುಗಳನ್ನು ಶ್ರೀಕೃಷ್ಣ ನುಡಿದದ್ದು ; ತನ್ನ ಶತ್ರುವನ್ನು ಕೊಲ್ಲಿಸುವ ಮೂಲಕ ಭೀಮನಲ್ಲಿ ಅಸಾಧಾರಣ ಅನುಗ್ರಹವನ್ನು ಮಾಡುವ ಉದ್ದೇಶ ಕೃಷ್ಣನದಾಗಿತ್ತು. ಶತ್ರುವನ್ನು ತೃಣದಂತೆ ಅಸಡ್ಡೆ ಮಾಡಲೆಂದೇ ಅವರೆಲ್ಲ ಹಾಗೆ ನಿರಾಯುಧರಾಗಿ ಬಂದಿದ್ದರು. ಆಯುಧ ಧರಿಸದ ಕ್ಷತ್ರಿಯವೇಷ ನಿಷಿದ್ಧವೆಂಬ ಕಾರಣದಿಂದ ಬ್ರಾಹ್ಮಣವೇಷವನ್ನು ಧರಿಸಿ ಬಂದಿದ್ದರು. ಜರಾಸಂಧನು ಸೈನ್ಯಸಮೇತನಾಗಿ ತನ್ನ ಮನೆಯಲ್ಲೇ ಇರುವಾಗ ಅವರು ನಿರ್ಭಯರಾಗಿ ಪ್ರವೇಶಿಸಿದ್ದು ಸಹ ಅವನ ಬಲವನ್ನು ನಗಣ್ಯ ಎಂದು ತೋರಿಸಲೆಂದೇ. ನಿರಾಯುಧನಾದ ಭೀಮನನ್ನು ಜರಾಸಂಧ ಎದುರಿಸುವಂತಾಗುವ ಮೂಲಕ ಭೀಮನ ಹಿರಿಮೆ ಜಗತ್ತಿಗೆ ಪ್ರಕಟಗೊಳ್ಳಲೆಂಬುದು ಶ್ರೀಕೃಷ್ಣನ ಆಶಯವಾಗಿತ್ತು. ಕೃಷ್ಣ ಅರ್ಜುನನನ್ನು ಕರೆತಂದದ್ದೂ ಸಹ

೧. ಒಂದುರೀತಿಯಲ್ಲಿ ಇದು ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸದಿದ್ದಲ್ಲಿ ನಿನ್ನ ಅವಸಾನ ಖಚಿತ ಎಂಬ ರಾಮಾಯಣದಲ್ಲಿ ಹನುಮಂತ ರಾವಣನಿಗೆ ನೀಡಿದ ಹಿತೋಕ್ತಿಯನ್ನು ಜ್ಞಾಪಿಸುವಂತಿದೆ. ಅಲ್ಲಿ ಬಂದಿ-ಯಾಗಿದ್ದು ಸೀತಾಕೃತಿಯಾದರೆ, ಇಲ್ಲಿ ಬಂಧಿತರಾದವರು ಶ್ರೀಕೃಷ್ಣನ ಪತ್ನಿಯರ ಬಂಧುವರ್ಗದವರು. ಅಲ್ಲಿ ಎಚ್ಚರಿಸಿದ್ದು ಹನುಮಂತನಾದರೆ, ಇಲ್ಲಿ ಎಚ್ಚರಿಸುತ್ತಿರುವುದು ಸರ್ವೋತ್ತಮನಾದ ಶ್ರೀಕೃಷ್ಣ. ಅಲ್ಲಿ ರಾವಣ ಹನುಮಂತನ ಹಿತೋಕ್ತಿಯನ್ನು ಲೆಕ್ಕಿಸದೆ ಗತಪ್ರಾಣನಾದಂತೆ, ಇಲ್ಲಿ ಶ್ರೀಕೃಷ್ಣನ ಹಿತೋಕ್ತಿಯನ್ನು ಲೆಕ್ಕಿಸದ ಜರಾಸಂಧ ಗತಪ್ರಾಣನಾಗುವನು ಎಂಬುದು ವಿಶೇಷ.

ಅರ್ಜುನನಿಗೆ ಭೀಮನು ಅವನಿಗಿಂತ ಮಿಗಿಲಾದವನು ಎಂಬುದು ಅರಿವಿಗೆ ಬರಲಿ ಎಂಬ ಕಾರಣದಿಂದಲೇ. ಜರಾಸಂಧ ಅರ್ಜುನನನ್ನು ಆಯ್ದುಕೊಳ್ಳದೆ 'ಇವನು ಇನ್ನೂ ಬಾಲಕ, ಇವನೊಂದಿಗೆ ಯುದ್ಧ ಮಾಡಲಾರೆ' ಎಂದುಬಿಟ್ಟ. ಆಗ ಅರ್ಜುನನಿಗೆ ಐವತ್ತೈದು ವರ್ಷ. ಆದರೂ ಅವನು ಬಲಿಷ್ಠನಲ್ಲವೆಂಬ ಕಾರಣದಿಂದ ಬಾಲನೆಂದೇ ಜರಾಸಂಧ ತೆಗಳಿದ. ಅರ್ಜುನನೂ ಸಹ ಅವನೇನು ಬಾಹುಗಳಿಂದ ಹೋರಾಡುವನೋ, ಧನುಸ್ಸನ್ನು ಆಯ್ದು- ಕೊಳ್ಳುವನೋ ಎಂಬ ಶಂಕೆಯಿಂದ, ''ಪರೀಕ್ಷೆ ನಡೆಯಲಿ ; ನನ್ನನ್ನು ಎದುರಿಸಿ ಬಾ'' ಎಂದು ಆಹ್ವಾನಿಸುವ ಕೆಚ್ಚೆದೆಯನ್ನು ತೋರಲಿಲ್ಲ. ಇದರಿಂದ ಅರ್ಜುನನಿಗಿಂತಲೂ ಭೀಮನು ಬಲಾಢ್ಯ ಎಂಬುದು ಲೋಕಕ್ಕೆ ವಿದಿತವಾಗುವುದು ಎಂಬುದು ಕೃಷ್ಣನ ಆಶಯವಾಗಿತ್ತು. ಕೃಷ್ಣನ ಬಲದ ರುಚಿಯನ್ನು ಹತ್ತಾರುಬಾರಿ ಅನುಭವಿಸಿ, ದುಃಖಪಟ್ಟಿದ್ದ ಜರಾಸಂಧ, ಭಯದಿಂದಾಗಿ ಕೃಷ್ಣನನ್ನು ಆಯ್ದುಕೊಳ್ಳಬಯಸದೆ, ''ಇವನು ಗೊಲ್ಲ ; ಗೊಲ್ಲನೊಂದಿಗೆ ನಾನು ಕಾದಲಾರೆ'' ಎಂದು ಜಾರಿಕೊಂಡ[೧]. ಕೃಷ್ಣನು ನಿಶ್ಚಯವಾಗಿಯೂ ತನ್ನನ್ನು ಕೊಲ್ಲುತ್ತಾನೆಂಬ ಭಯ ಅವನನ್ನು ಚೆನ್ನಾಗಿ ಆವರಿಸಿತ್ತು. ಅರ್ಜುನನನ್ನು ಆರಿಸಿಕೊಂಡಲ್ಲಿ, ಒಂದು ವೇಳೆ ತಾನೇ ಗೆದ್ದರೂ, ಕೃಷ್ಣ ಭೀಮರ ಕೈಯಲ್ಲಿ ಮೃತ್ಯು ತಪ್ಪಿದ್ದಲ್ಲ. ಅಲ್ಲದೆ ದುರ್ಬಲನನ್ನು ಆರಿಸಿ ಹೋರಾಡಿದರೆ ತನ್ನ ಕೀರ್ತಿಗೂ ಕಳಂಕ, ಗೆದ್ದರೂ ಕೀರ್ತಿ ಹೆಚ್ಚದು. ಹೀಗೆ ಯೋಚಿಸಿ ಅವನನ್ನು ಜರಾಸಂಧ ಆಯ್ದುಕೊಳ್ಳಲಿಲ್ಲ. ಒಂದು ವೇಳೆ ಬದುಕಿದರೂ ಬದುಕಬಹುದೆಂಬ ಆಸೆಯಿಂದ ಭೀಮನನ್ನು ಆರಿಸಿಕೊಂಡ. ಸೋತರೂ, ಭೀಮನಂತಹವನಿಂದ ಸೋತಲ್ಲಿ ತನ್ನ ಕೀರ್ತಿ ಕುಂದದು ಎಂಬುದೇ ಅವನ ವಿಚಾರವಾಗಿತ್ತು. ಹೀಗೆ ಆರಿಸಿಕೊಂಡಾದ ಮೇಲೆ, ಅವನು 'ಸಹದೇವ' ಎಂಬ ತನ್ನ ಮಗನಿಗೆ ರಾಜ್ಯಾಭಿಷೇಕ ಮಾಡಿ ಯುದ್ಧಕ್ಕೆ ಸಿದ್ಧನಾದ ; ಆ ಸಹದೇವನು ಪತ್ರತಾಪ ಎಂಬ ರುದ್ರನ ಅವತಾರ.

## ಜರಾಸಂಧ ವಧೆ

ಭೀಮನ ಬಾಹುಬಲ ಅಪಾರವೆಂದು ತಿಳಿದಿದ್ದ ಜರಾಸಂಧ ತಾನು ಗದಾವಿದ್ಯೆಯಲ್ಲಿ ಹೆಚ್ಚು ನಿಪುಣನೆಂಬ ಭಾವನೆಯಿಂದ, ಮಲ್ಲಯುದ್ಧವನ್ನು ಬಿಟ್ಟು ಗದಾಯುದ್ಧವನ್ನೇ ಆರಿಸಿಕೊಂಡ. ಊರ ಹೊರಗಿನ ಯುದ್ಧಭೂಮಿಯಲ್ಲಿ ಭೀಮ-ಜರಾಸಂಧರ ಯುದ್ಧ ಆರಂಭವಾಯಿತು. ಕೃಷ್ಣಾರ್ಜುನರು ಪ್ರೇಕ್ಷಕವರ್ಗದಲ್ಲಿ ಸೇರಿದರು. ಮೊದಲಿಗೆ ಭೀಮಸೇನನು ಜರಾಸಂಧ ಮಂಡಿಸಿದ ಶಿವೋತ್ತಮತ್ವ ವಾದವನ್ನು ವಿಷ್ಣೂತ್ತಮತ್ವ ವಾದದೊಂದಿಗೆ ಖಂಡಿಸಿ, ವಾಗ್ಯುದ್ಧ- ದಲ್ಲಿ ಅವನನ್ನು ಸೋಲಿಸಿದ. ಅನಂತರ ಗದಾಯುದ್ಧ ಆರಂಭವಾಯಿತು. ಚಿತ್ರವಿಚಿತ್ರವಾದ ಯುದ್ಧಕೌಶಲವನ್ನು ತೋರಿಸಿದ ಅವರಿಬ್ಬರೂ ಒಬ್ಬರ ಎದೆಯ ಮೇಲೆ ಮತ್ತೊಬ್ಬರು ಗದೆ-

---

೧. ಜರಾಸಂಧ ಈ ಮುನ್ನ ಹದಿನೆಂಟು ಬಾರಿ ಕೃಷ್ಣನನ್ನು ಎದುರಿಸಿ ಸರ್ವವಿಧದಿಂದಲೂ ಪರಾಭವಗೊಂಡು ಬಂದಿರುವ ವಿವರ ಈಗಾಗಲೇ ಸ್ಪಷ್ಟ. ಆದ್ದರಿಂದ ಅವನು ಈಗ ಈ ಕಾರಣವನ್ನು ನೀಡುತ್ತಿರುವುದು ತನ್ನ ಭಯವನ್ನು ಮುಚ್ಚಿಟ್ಟುಕೊಳ್ಳುವ ಕುತಂತ್ರದಿಂದಾಗಿ ಮಾತ್ರ ಎಂದು ತಿಳಿಯಬೇಕು.

ಗಳನ್ನು ಅಪ್ಪಳಿಸಿದರು. ಬಂಡೆಗೆ ತಾಕಿದ ಮಣ್ಣುಹೆಂಟೆಗಳಂತೆ ಆ ಎರಡೂ ಗದೆಗಳು ಪುಡಿಯಾಗಿ ಭೂಮಿಗೆ ಬಿದ್ದವು[೧]. ಅನಂತರ, ಮುಷ್ಟಿಗಳಿಂದಲೇ ಅವರು ಹೋರಾಡತೊಡಗಿದರು. ಕೇಶವ-ಕೈಟಭರ ಯುದ್ಧವನ್ನೇ ಜ್ಞಾಪಿಸುತ್ತಿದ್ದ ಅವರ ಹೋರಾಟಕ್ಕೆ ಭೂಮಿ ನಡುಗಿತು ; ಬೆಟ್ಟಗಳು ಉರುಳಿದವು ; ಕುಲಪರ್ವತಗಳೂ ಅಲುಗಾಡಿಹೋದವು ; ಎಲ್ಲ ಸಮುದ್ರಗಳು ಉಲ್ಲೋಲಕಲ್ಲೋಲಗೊಂಡವು ; ಬ್ರಹ್ಮಾದಿ ಎಲ್ಲ ದೇವತೆಗಳೂ, ಎಲ್ಲ ರಾಕ್ಷಸರೂ ಆಕಾಶದಲ್ಲಿ ನೆರೆದರು ; ಭೀಮನ ಗೆಲುವನ್ನು ಸುರರೂ, ಜರಾಸಂಧನ ಗೆಲುವನ್ನು ಅಸುರರೂ ಹಾರೈಸತೊಡಗಿದರು. ''ಹದಿನೈದು ದಿವಸಗಳವರೆಗೆ ಹೋರಾಟದಲ್ಲಿ ಸೋಲು ಉಂಟಾಗದು'' ಎಂದು ಬ್ರಹ್ಮದೇವರು ಜರಾಸಂಧನಿಗಿತ್ತಿದ್ದ ವರವನ್ನು ಮನ್ನಿಸಿ, ಭೀಮನು ಆ ಬಳಿಕ ಕೃಷ್ಣನ ಅಪ್ಪಣೆಯಂತೆ ಅವನನ್ನು ಕೊಲ್ಲಲು ಸಂಕಲ್ಪಿಸಿ, ಕೃಷ್ಣನನ್ನು ನಮಸ್ಕರಿಸಿ ಅರ್ಜುನನನ್ನು ಆಲಿಂಗಿಸಿಕೊಂಡು, ಸಿಂಹ ಆನೆಯನ್ನು ಹಿಡಿಯುವಂತೆ, ಜರಾಸಂಧನ ತಲೆಯನ್ನು ಹಿಡಿದ. ಬೆನ್ನ ಮೇಲೆ ಮೊಳಕಾಲನ್ನೂರಿ, ಸೊಂಟವನ್ನು ಮುರಿದ ; ಅವನು ಸಾಯುವಾಗ ಅವನ ದೇಹವನ್ನು ಹುಟ್ಟಿದ ಸಮಯದಲ್ಲಿದ್ದಂತೆ ಎರಡಾಗಿ ಸೀಳಿಹಾಕಿದ. ಮರ್ಮಸ್ಥಾನದಲ್ಲಿ ಹೊಡೆದು ಶತ್ರುವನ್ನು ಕೊಲ್ಲುವುದರಿಂದ, ತನ್ನ ಬಲದ ಹಿರಿಮೆ ವ್ಯಕ್ತವಾಗುವುದಿಲ್ಲ ಎಂಬ ಕಾರಣದಿಂದ ಭೀಮ ಯಾವಾಗಲೂ ಶತ್ರುಗಳನ್ನು ಮರ್ಮಸ್ಥಾನಗಳಲ್ಲಿ ಹೊಡೆಯುತ್ತಿರಲಿಲ್ಲ. ಈಗಲೂ ಹಾಗೆ ಮರ್ಮಸ್ಥಾನದಲ್ಲಿ ಹೊಡೆಯದೆ ಜರಾಸಂಧನನ್ನು ಸಂಹರಿಸಿದ. ಜರಾಸಂಧನನ್ನು ಮುರಿದು ಹಾಕುವಾಗ ಬ್ರಹ್ಮಾಂಡವೇ ಸ್ಫೋಟಗೊಂಡಂತಹ ಶಬ್ದ ಉಂಟಾಗಿ, ಜಗತ್ತೆಲ್ಲ ಭಯದಿಂದ ಕಂಪಿಸಿತು. ಕೃಷ್ಣನ ಶತ್ರುವನ್ನು ಆ ರೀತಿ ಸಂಹರಿಸಿದ ಭೀಮ ಅದನ್ನು ಪೂಜೆಯೆಂದು ಕೃಷ್ಣನಿಗೆ ಸಮರ್ಪಿಸಿದ. ಭೀಮ ಸಲ್ಲಿಸುವ ಆ ಪೂಜೆಯನ್ನು ಪ್ರತ್ಯಕ್ಷವಾಗಿ ಸ್ವೀಕರಿಸಲೆಂದೇ ಕೃಷ್ಣ ಹಾಗೆ ಅವನ ಜೊತೆ ತಾನೂ ಬಂದಿದ್ದ. ಪೂಜೆಯನ್ನು ಸ್ವೀಕರಿಸಿ ಕೃಷ್ಣನು ಪ್ರೀತಿಯಿಂದ ಅವನನ್ನು ಆಲಿಂಗಿಸಿಕೊಂಡ. ಅರ್ಜುನನು ಭೀಮನಿಗೆ ನಮಸ್ಕರಿಸಿ ಅಭಿವಂದನೆಗಳನ್ನು ಸಲ್ಲಿಸಿದ.

## ಸಹದೇವನ ಸಜ್ಜನಿಕೆ

ಅಪಾರ ಆನಂದದಿಂದ ಬ್ರಹ್ಮಾದಿಗಳೆಲ್ಲ ತಮ್ಮ ತಮ್ಮ ಲೋಕಕ್ಕೆ ತೆರಳಿದರು. ಕೃಷ್ಣರಕ್ಷಿತನಾದ ಭೀಮನ ಮೇಲೆ ಶಿವನ ವರ ನಡೆಯದ್ದನ್ನು ಕಂಡು ದುಃಖಪಡುತ್ತ ದೈತ್ಯರೂ ಅಲ್ಲಿಂದ ಹೊರಟರು. ಜರಾಸಂಧನ ಮಗ ಸಹದೇವ ಅವರಿಗೆ ಶರಣಾಗತನಾಗಿ, ಭೀಮನಿಗೆ ಒಂದು ರಥವನ್ನು

೧. ಇಲ್ಲಿ ಪುಡಿಯಾದದ್ದು ಭೀಮಸೇನನ ಸ್ವಂತ ಗದೆಯಲ್ಲ, ಜರಾಸಂಧ ಅವನಿಗೆ ನೀಡಿದ್ದ ಗದೆ ಮಾತ್ರ. ಶ್ರೀಕೃಷ್ಣ ಭೀಮ ಹಾಗೂ ಅರ್ಜುನ – ಈ ಮೂವರೂ ಶಸ್ತ್ರ ಹಿಡಿಯದೆ ಬ್ರಾಹ್ಮಣವೇಷದಲ್ಲಿ ಬಂದಿದ್ದರು ಎಂಬ ವಿವರ ಈಗಾಗಲೇ ಬಂದಿದೆ. ಭೀಮಸೇನನಂತೆ ಅವನ ಗದೆಯೂ ಸಹ ಅಭೇದ್ಯವಾದದ್ದು ಹಾಗೂ ಅಮೋಘವಾದದ್ದು ಎಂಬ ಪ್ರಮೇಯ ತಿಳಿದಿರಬೇಕು. ಅಸುರರ ಆಕ್ರಮಣವೂ ಸಹ ಹೀಗೆಯೇ ವಾಯುದೇವರ ಮೇಲೆ ನಡೆದಾಗ ಬಂಡೆಯ ಮೇಲೆ ಅಪ್ಪಳಿಸುವ ಮಣ್ಣಹೆಂಟೆಗಳಂತೆ ನಾಶವಾಗುವರು ಎಂಬ ಕಾರಣಕ್ಕಾಗಿ 'ಅಖಣಾಶ್ಮಸಮ' ಎಂಬ ಹೆಸರು ಮುಖ್ಯಪ್ರಾಣನಿಗೆ ಬಂದಿದೆ ಎಂಬ ಛಾಂದೋಗ್ಯೋಪನಿಷತ್ತಿನ ವಿವರವನ್ನು ಇಲ್ಲಿ ಸ್ಮರಿಸಿ- ಕೊಳ್ಳಬಹುದು.

ಸಮರ್ಪಿಸಿದ. ಅದು ಮೂಲತಃ ವಾಸುದೇವನ ರಥವೇ ಆಗಿದ್ದು, ಅದನ್ನು ಇಂದ್ರನ ಮೂಲಕ ವಸುಚಕ್ರವರ್ತಿ ಪಡೆದುಕೊಂಡಿದ್ದ. ಜರಾಸಂಧನು ವಸುವಂಶದವನಾದ್ದರಿಂದ ಅವನಿಗೆ ಆ ರಥವು ದೊರೆತಿತ್ತು. ಭೀಮ ಶ್ರೀಹರಿಯ ಆ ರಥವನ್ನು ಮತ್ತೆ ಶ್ರೀಹರಿಯಾದ ಕೃಷ್ಣನಿಗೇ ಸಮರ್ಪಿಸಿದ ; ಕೃಷ್ಣನು ಗರುಡನನ್ನು ಸ್ಮರಿಸಲು, ಅವನು ಬಂದು ರಥದ ಧ್ವಜವನ್ನು ಅಲಂಕರಿಸಿದ. ಭೀಮಾರ್ಜುನರೊಂದಿಗೆ ಕೃಷ್ಣ ರಥವನ್ನೇರಿದ. ಸಹದೇವ ಜೊತೆಗೆ ತನ್ನ ತಂಗಿಯನ್ನೂ ಭೀಮನಿಗೆ ಭಕ್ತಿಯಿಂದ ಅರ್ಪಿಸಿದ. ತನ್ನ ತಮ್ಮ ಸಹದೇವನಿಗೆಂದು ಭೀಮ ಆ ಕನ್ಯೆಯನ್ನು ಸ್ವೀಕರಿಸಿದ[೧]. ಮೊದಲೇ ಶಲ್ಯ ತನ್ನ ಮಗಳನ್ನು ನಕುಲನಿಗೆ ಕೊಟ್ಟು ಮದುವೆ ಮಾಡಿದ್ದ. ಆ ನಕುಲಪತ್ನೀ ಮತ್ತು ಈ ಸಹದೇವಪತ್ನೀ ಇಬ್ಬರೂ ಉಷೆಯ ಅವತಾರವೇ. ಇವರನ್ನು ಮದುವೆಯಾದ ಮೇಲೆ ನಕುಲ-ಸಹದೇವರು ದ್ರೌಪದಿಯನ್ನು ಅತ್ತಿಗೆಯಂತೆ ಮಾತ್ರವೇ ಕಾಣುತ್ತ, ಇವರೊಂದಿಗೆ ದಾಂಪತ್ಯ ನಡೆಸಿದರು. ಹೇರಳವಾದ ರತ್ನಗಳನ್ನು ಸಹದೇವನು ಕೃಷ್ಣಾದಿಗಳಿಗೆ ಅರ್ಪಿಸಿ, ಅವರ ಸಮ್ಮತಿ ಪಡೆದುಕೊಂಡು, ಅವರ ಅಪ್ಪಣೆಯಂತೆಯೇ ಪಿತೃಕಾರ್ಯವನ್ನು ಮಾಡಿ, ಬಂಧಿತರಾದ ರಾಜರನ್ನೆಲ್ಲ ಬಿಡುಗಡೆ ಮಾಡಿದ. ಕೃಷ್ಣನು ಭೀಮಾರ್ಜುನರೊಂದಿಗೆ ಇಂದ್ರಪ್ರಸ್ಥಕ್ಕೆ ಹೊರಟ. ವಿಷ್ಣುದ್ವೇಷಿಯಾದ ಜರಾಸಂಧ ಕ್ರಮವಾಗಿ ಅಂಧಂತಮಸ್ಸನ್ನೇ ಸೇರಿದ.

## ಕರ್ಮಫಲದ ಬಗ್ಗೆ ಬೆಳಕು

ಒಂದೇ ರಥದಲ್ಲಿ ಕುಳಿತು ಕೃಷ್ಣ ಮತ್ತು ಭೀಮಾರ್ಜುನರು ಇಂದ್ರಪ್ರಸ್ಥಕ್ಕೆ ಮರಳಿದರು. ಅವರ ಶಂಖಧ್ವನಿಗಳನ್ನು ಕೇಳುತ್ತಲೇ ವಿಷಯ ಅರಿತ ಧರ್ಮರಾಜ ಆನಂದದಿಂದ ಉಬ್ಬಿಹೋದ[೨].

ಆ ಬಳಿಕ ಅಲ್ಲಿಗೆ ದಯಮಾಡಿಸಿದ ವೇದವ್ಯಾಸರು ರಾಜಸೂಯಯಾಗಕ್ಕೆ ಸಕಲಸಾಧನಗಳನ್ನು ಸಿದ್ಧಪಡಿಸಿಕೊಳ್ಳಲು ಪಾಂಡವರಿಗೆ ಅಪ್ಪಣೆ ಮಾಡಿದರು[೩]. ಬ್ರಹ್ಮನ ಹೊರತು ಬೇರಾರೂ

---

೧. ಇಲ್ಲಿ ಶ್ರೀಭೀಮಸೇನನ ವೈರಾಗ್ಯ ಹಾಗೂ ದಿವ್ಯಜ್ಞಾನ ಸ್ಫುಟಪಡುವುದು. ಸಹದೇವ ತಾನಾಗಿ ಧಾರೆ ಎರೆಯ ಬಂದ ಅವನ ತಂಗಿಯನ್ನು ಸ್ವೀಕರಿಸದೇ ಇದ್ದದ್ದು ವೈರಾಗ್ಯಕ್ಕೆ ದ್ಯೋತಕವಾದರೆ, ಅವಳು ಸ್ವರೂಪದಲ್ಲಿ ಉಷೆಯ ಅವತಾರಳಾಗಿ ಅಶ್ವಿನೀದೇವತೆಗಳ ಪತ್ನಿಯಾದ್ದರಿಂದ ಸಹದೇವನು ಅವಳನ್ನು ವರಿಸುವುದು ಉಚಿತ ಎಂಬಲ್ಲಿ ದಿವ್ಯಜ್ಞಾನ ಗೋಚರಿಸುವುದು. ಭೀಮಸೇನನ ಈ ಪ್ರಸಂಗ ಮುಂದೆ ವಿರಾಟರಾಜ ತನಗೆ ಸಮರ್ಪಿಸಿದ ಉತ್ತರೆಯನ್ನು ಅರ್ಜುನ ತಾನು ಸ್ವೀಕರಿಸದೆ ತನ್ನ ಪುತ್ರ ಅಭಿಮನ್ಯುವಿನ ಪತ್ನಿಯನ್ನಾಗಿ ಸ್ವೀಕರಿಸುವುದಕ್ಕೆ ಪ್ರೇರಕವಾಗುತ್ತದೆ.

೨. ಯುಧಿಷ್ಠಿರ, ಶ್ರೀಕೃಷ್ಣ ಮೊದಲಾದವರ ಶಂಖಧ್ವನಿಗಳನ್ನು ಪ್ರತ್ಯೇಕವಾಗಿ ಗುರುತಿಸುವ ಮೂಲಕ ತನ್ನ ವಿವೇಕವನ್ನು ಮೆರೆದ. ಇದು ಜಡಜಡಗಳಲ್ಲಿನ ಭೇದಕ್ಕೂ ನಿದರ್ಶನ ; ಎಂದರೆ ಶಂಖಗಳ ಧ್ವನಿಯೂ ಸಹ ಒಂದೇ ತೆರನಾಗಿರದೆ ಇತರ ಶಂಖಗಳ ಧ್ವನಿಗಳಿಗಿಂತ ಭಿನ್ನವಾಗಿರುವುದು ಎಂದಾಗುವುದು. ಇಂದೂ ಸಹ ವಾದ್ಯಗಳ ಧ್ವನಿಗಳು ಬೇರೆಬೇರೆಯಾಗುವುದು ಪ್ರತಿಯೊಬ್ಬ ಮನುಷ್ಯನ ಧ್ವನಿಯಲ್ಲಿಯೂ ಪ್ರತ್ಯೇಕವಾದ ತನ್ತನವಿರುವುದು ಎಲ್ಲರ ಅನುಭವಕ್ಕೂ ಬಂದಿರುವ ವಿಚಾರ. ಪಂಚಭೇದಗಳಲ್ಲಿ ಈ ಜಡ-ಜಡಭೇದವೂ ಒಂದಾಗಿದೆ. ಇದನ್ನು ಆವಿಷ್ಕರಿಸಿದ ಹಿರಿಮೆ ಶ್ರೀಮನ್ಮಧ್ವಾಚಾರ್ಯರದು.

೩. ಜರಾಸಂಧವಧೆ ಬಲಕಾರ್ಯವಾಗಿತ್ತು. ಅದಕ್ಕಾಗಿ ಬಲಕಾರ್ಯರೂಪವಾದ ಶ್ರೀಕೃಷ್ಣರೂಪದಿಂದ ಶ್ರೀಹರಿ ಭೀಮಾದಿಗಳ ಜೊತೆಗಿದ್ದ. ಯಾಗದ ವಿಧಿವಿಧಾನಗಳು ಜ್ಞಾನಕಾರ್ಯ ; ಅದಕ್ಕಾಗಿ ಜ್ಞಾನಕಾರ್ಯದ

ಮಾಡಿರದ ರಾಜಸೂಯಯಾಗಸಮೇತನಾದ ಶ್ರೇಷ್ಠ ಅಶ್ವಮೇಧವನ್ನೇ ಮಾಡುವಂತೆ ಅವರು ತಿಳಿಸಿದರು. ಅಂತಹ ಯಾಗವನ್ನು ಮಾಡಿದವನು ಉಳಿದೆಲ್ಲ ಗುಣಗಳಿಂದ ಬ್ರಹ್ಮನಿಗೆ ಸಮನಾಗಿದ್ದರೆ ಪರಮೇಷ್ಠಿಪದವನ್ನೇ ಹೊಂದುವನು. ಆ ಯೋಗ್ಯತೆ ಹೊಂದಿದ್ದ ಭೀಮನಿಗೇ ಆ ಯಾಗದ ಹೆಚ್ಚಿನ ಫಲವನ್ನು ಕೊಡುವ ಉದ್ದೇಶ ವೇದವ್ಯಾಸರಿಗಿತ್ತು. ಯಾವುದೇ ಒಂದು ಕಾರ್ಯದ ಮುಖ್ಯಫಲವನ್ನು ಅದಕ್ಕೆ ಮುಖ್ಯಕಾರಣನಾದವನೇ ಹೊಂದುವನು ಎಂಬುದು ಶಾಸ್ತ್ರಗಳ ನಿರ್ಣಯ. ಉಳಿದವರಿಗೆ ದೊರೆಯುವ ಫಲ ಅವರವರ ಯೋಗ್ಯತೆಗೆ ತಕ್ಕಂತೆ ಮಾತ್ರ. ಕರ್ಮಫಲದ ಸಂಬಂಧವನ್ನು ಹೊಂದಿರದ ಭಗವಂತ ಮಾತ್ರ ಇದಕ್ಕೆ ಅಪವಾದ. ಅದೇ ರೀತಿ ಪಾಪಕಾರ್ಯದಲ್ಲೂ ಪ್ರೇರಣಾದಿರೂಪಗಳಿಂದ ದೇವತೆಗಳ ಪಾತ್ರವಿದ್ದರೂ, ಅವರು ಸಾಮಾನ್ಯವಾಗಿ ಅದರ ಫಲಕ್ಕೆ ಭಾಗಿಗಳಾಗುವುದಿಲ್ಲ. ಅದೇ ರೀತಿ ಪುಣ್ಯಫಲದ ಭಾಗವು ದೈತ್ಯರಿಗೂ ದೊರೆಯುವುದಿಲ್ಲ. ಮನುಷ್ಯರು ಮಾತ್ರವೇ ಎರಡಕ್ಕೂ ಭಾಗಿಗಳಾಗುವರು.

ಪ್ರಕೃತ ರಾಜಸೂಯಯಾಗಪ್ರಸಂಗದಲ್ಲಿ ಎಲ್ಲ ರೀತಿಯಿಂದಲೂ ಭೀಮನೇ ಮುಖ್ಯಕಾರಣನಾಗಿದ್ದ. ಜರಾಸಂಧನ ಸಂಹಾರದಿಂದಲೂ, ಕರ್ಣ, ಕೀಚಕಾದಿಗಳನ್ನು ದಿಗ್ವಿಜಯಸಮಯದಲ್ಲಿ ಜಯಿಸಿದ್ದರಿಂದಾಗಿಯೂ ಈ ಮಾತು ಸ್ಪಷ್ಟಪಡುವುದು. ಅವರನ್ನೆಲ್ಲ ಗೆಲ್ಲಲು ಉಳಿದ ಯಾರಿಗೆ ತಾನೇ ಸಾಧ್ಯವಿತ್ತು ? ಅರ್ಜುನ ಮತ್ತು ಧರ್ಮರಾಜರು ಅನಂತರ ಕ್ರಮವಾಗಿ ಇದರ ಫಲಕ್ಕೆ ಭಾಗಿಗಳು. ಆದ್ದರಿಂದಲೇ ಭೀಮನಿಗೆ ಬ್ರಹ್ಮಪದವನ್ನು ದೊರಕಿಸಿಕೊಡುವ ಉದ್ದೇಶದಿಂದ ವೇದವ್ಯಾಸರು ಆ ಮಹಾಕ್ರತುವನ್ನು ಉಪದೇಶಿಸಿ, ದಿಗ್ವಿಜಯಕ್ಕೆ ತೆರಳಲು ಆದೇಶವನ್ನಿತ್ತರು.

## ದಿಗ್ವಿಜಯದ ಆರಂಭ

ಅರ್ಜುನ ತನಗೆ ಶ್ರೇಷ್ಠವಾದ ಧನುಸ್ಸು, ರಥ ಮತ್ತು ಧ್ವಜಗಳಿರುವುದರಿಂದ ತನಗೊಬ್ಬನಿಗೇ ಆ ದಿಗ್ವಿಜಯದ ಕಾರ್ಯವನ್ನು ಒಪ್ಪಿಸಲು ವೇದವ್ಯಾಸರಲ್ಲಿ ವಿಜ್ಞಾಪಿಸಿಕೊಳ್ಳಲು ಅವರು ಹೇಳಿದರು – ''ನಿನಗೆ ಈ ರೀತಿ ಎಲ್ಲ ಸಾಧನಗಳ ಸೌಕರ್ಯ ಇರುವುದೇನೋ ನಿಜ ; ನೀನು ಮಹಾಬಲಶಾಲಿ ಎಂಬುದರಲ್ಲಿ ಸಹ ಸಂಶಯವಿಲ್ಲ ; ಆದರೂ ಕೀಚಕ ಮೊದಲಾದವರು ಭೀಮನ ಹೊರತು ಮತ್ತಾರಿಗೂ ಮಣಿಯರು ; ನೀನು ಕರ್ಣನಿಗಿಂತಲೂ ಹೆಚ್ಚು ಬಲಶಾಲಿಯಾದರೂ, ಈಗ ಅವನೂ ನಿನ್ನ ವಶವಾಗಲಾರ ; ನಿನ್ನ ಮೇಲೆ ಸ್ಪರ್ಧೆಯಿಂದಿರುವ ಅವನೀಗ ಸತ್ತರೂ ಕಾಣಿಕೆ ಒಪ್ಪಿಸಲಾರ. ಕವಚಕುಂಡಲಗಳನ್ನು ಹೊಂದಿರುವ ಅವನನ್ನು ಸಂಹರಿಸಲು ನಿನ್ನಿಂದೀಗ ಸಾಧ್ಯವಿಲ್ಲ. ಯುದ್ಧದಲ್ಲಿ ಭೀಮನಿಗೆ ಸೋಲುವ ಕರ್ಣನು ಜೀವಂತ ಸೆರೆ ಸಿಗುವ ಭಯದಿಂದಾಗಿ, ಪ್ರಾಣಭಯದಿಂದಾಗಿ ಭೀಮನಿಗೆ ಕಪ್ಪವನ್ನು ಕೊಟ್ಟೇ

ರೂಪವಾದ ಶ್ರೀವೇದವ್ಯಾಸರೂಪದಿಂದ ಅವರಲ್ಲಿಗೆ ಆಗಮಿಸಿದ ಎಂದು ತಿಳಿಯಬೇಕು : ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ । ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ ॥ (ಮ.ಭಾ.ತಾ.ನಿ. ೨/೨೪)

ಕೊಡುವನು. ಶಿವನ ವರದಿಂದ ಅಜೇಯರಾಗಿರುವ ಕೀಚಕ ಹಾಗೂ ಪೌಂಡ್ರಕರೂ ಭೀಮನಿಗೆ ವಶವಾಗುವರು. ಅವಧ್ಯನಾದ ಶಿಶುಪಾಲನೂ ಭೀಮನಿಗೆ ವಿರೋಧ ಮಾಡಲಾರ. ಜರಾಸಂಧನ ವಧೆಯಿಂದ ಇವರಿಗೆಲ್ಲ ಈಗ ಭೀಮನ ವಿಷಯದಲ್ಲಿ ಮಹಾಭಯವು ಉಂಟಾಗಿದೆ. ಆದ್ದರಿಂದ ಯುದ್ಧದಲ್ಲಿ ಸೋತೋ ಅಥವಾ ಆ ಮುನ್ನವೋ ಅವರು ಕಪ್ಪ ಒಪ್ಪಿಸುವುದು ನಿಶ್ಚಯ[೧].

ನೀನು ಮಾತ್ರ ಕುಬೇರನಿಂದ ಪಾಲಿತವಾದ ಉತ್ತರದಿಕ್ಕಿಗೆ ಪ್ರಯಾಣ ಬೆಳೆಸಿ, ಏಳು ದ್ವೀಪಗಳನ್ನೂ, ಅಲ್ಲಿ ನೆಲೆಸಿರುವ ನಾಗರು, ದೈತ್ಯರು ಮೊದಲಾದವರನ್ನೂ ಜಯಿಸಿ ಬೇಗನೆ ಇಲ್ಲಿಗೆ ಹಿಂದಿರುಗು. ಆಕಾಶದಲ್ಲಿ ಚಲಿಸಬಲ್ಲ ದಿವ್ಯರಥವೂ, ದಿವ್ಯಾಸ್ತ್ರಗಳೂ, ದಿವ್ಯಧನುಸ್ಸೂ ನಿನಗಿರುವುದರಿಂದ ಇದು ನಿನಗೆ ಸುಲಭದ ಕೆಲಸ. ಅಲ್ಲಿಯ ಬಾಣ ಮೊದಲಾದ ಶಿವನ ವರದಿಂದ ಕೊಬ್ಬಿರುವ ಇತರರನ್ನು ಮಾತ್ರ ಭೀಮನೇ ಸೋಲಿಸುವನು. ಇತರ ದೇವತೆಗಳೆಲ್ಲರೂ ಭೀಮನಿಗೆ ನನ್ನ ಅಪ್ಪಣೆಯಂತೆ ಕಾಣಿಕೆ ಅರ್ಪಿಸುವರು. ನಕುಲ-ಸಹದೇವರು ಕ್ರಮವಾಗಿ ಪಶ್ಚಿಮ ಹಾಗೂ ದಕ್ಷಿಣ ದಿಕ್ಕುಗಳಿಗೆ ತೆರಳಲಿ. ಯಜ್ಞದಲ್ಲಿ ಪಾಲ್ಗೊಳ್ಳುವ ಕೀರ್ತಿ, ಧರ್ಮಗಳು ಅವರಿಗೂ ದೊರೆಯುವಂತಾಗಲಿ.'' ಈ ರೀತಿಯಾಗಿ ವೇದವ್ಯಾಸರಿಂದ ಹೇಳಲ್ಪಟ್ಟ ಅವರೆಲ್ಲ ಅದೇ ರೀತಿಯಾಗಿ ದಿಗ್ವಿಜಯಕ್ಕೆ ತೆರಳಿದರು.

## ಭೀಮನ ಅಪೂರ್ವವಾದ ಪೂರ್ವದಿಗ್ವಿಜಯ

ವೃಕೋದರ ರಾಜರನ್ನು ಗೆಲ್ಲುತ್ತಾ ವಿರಾಟನನ್ನು ಮುತ್ತಿದ. ಕೀಚಕನೂ ಸಹ ಭೀಮನಿಗೆ ಸುಲಭವಾಗಿ ಸೋತ ; ವಿರಾಟ ಕಪ್ಪವನ್ನು ಒಪ್ಪಿಸಿದ. ಅನಂತರ, ಇತರ ರಾಜರನ್ನು ಗೆಲ್ಲುತ್ತ ಹೊರಟ ಭೀಮ ಚೇದಿದೇಶವನ್ನು ಸೇರಿದ. ತಾಯಿಯ ಮಾತಿನಿಂದಾಗಿಯೂ, ಮನಸ್ಸನ್ನು ಮುತ್ತಿದ್ದ ಭೀಮನ ಭಯದಿಂದಾಗಿಯೂ ಶಿಶುಪಾಲನು ಭೀಮನನ್ನು ಗೌರವದಿಂದ ಎದುರು-ಗೊಂಡು ಮನೆಗೆ ಕರೆದೊಯ್ದ. ಸೋದರತ್ತೆಯ ಮನೆಯಲ್ಲಿ ಕೆಲವು ದಿನಗಳ ಕಾಲ ಸುಖದಿಂದ ವಾಸಿಸಿದ ಭೀಮಸೇನ, ಅಪಾರ ಕಾಣಿಕೆಗಳನ್ನು ಪಡೆದುಕೊಂಡು, ಪೂರ್ವದಿಕ್ಕಿನಲ್ಲಿ ಮುಂದುವರೆದ. ಪೌಂಡ್ರಕ ಮೊದಲಾದ ಎಲ್ಲ ರಾಜರನ್ನೂ ನಿರಾಯಾಸವಾಗಿ ಗೆದ್ದ ಭೀಮಸೇನ, ಕರ್ಣನನ್ನು ವಿರಥನನ್ನಾಗಿಸಿದ. ಅವರೆಲ್ಲರಿಂದ ಕಪ್ಪವನ್ನು ಪಡೆದುಕೊಂಡು ಹಿಮವತ್ಪರ್ವತ-ಶಿಖರದಲ್ಲಿ ಇಂದ್ರಾದಿದೇವತೆಗಳನ್ನೂ ಸಹ ಗೆದ್ದ. ಆಗ ವಿಷಯ ತಿಳಿದಿದ್ದ ಅವರೆಲ್ಲ ವಿನೋದಕ್ಕಾಗಿಯೇ ಯುದ್ಧಮಾಡಿದರು. ಅವರೂ ಸಂತೋಷದಿಂದ ಅಪಾರರತ್ನಗಳನ್ನು ಭೀಮನಿಗೆ ಒಪ್ಪಿಸಿದರು. ವಿನೋದದಿಂದಲೇ ಎದುರಿಸಿದ ಶೇಷಗರುಡರನ್ನು ಬಾಹುಬಲ-ದಿಂದಲೇ ಗೆದ್ದ ಭೀಮಸೇನ, ಅವರಿಂದಲೂ ರತ್ನಾಭರಣಗಳನ್ನು ಪಡೆದ. ಅವರಿಬ್ಬರೂ

---

೧. ಸೋತ ಬಳಿಕವೋ ಅಥವಾ ಆ ಮುನ್ನವೋ ಎಂಬುದಕ್ಕೆ ಕೆಲವರು ಸೋತ ಬಳಿಕ ಇನ್ನು ಕೆಲವರು ಸೋಲುವ ಮುನ್ನ ಎಂದು ಅರ್ಥ ; ಇದಕ್ಕೆ ವ್ಯವಸ್ಥಿತವಿಕಲ್ಪ ಎನ್ನುವರು. ಇದರಿಂದ ವೇದವ್ಯಾಸರಿಗೆ ಆ ವಿಷಯದ ಬಗ್ಗೆ ಸಂಶಯವನ್ನು ಶಂಕಿಸಬೇಕಿಲ್ಲ.

ಭೀಮನನ್ನು ಪ್ರೀತಿಯಿಂದ ಆಲಿಂಗಿಸಿಕೊಂಡರು. ಅಲ್ಲಿಂದ ಸಮುದ್ರದಲ್ಲಿ[೧] ಈಜುತ್ತಾ ಸಾಗಿದ ಭೀಮಸೇನನು, ಬಾಣಾಸುರನ ಪಟ್ಟಣಕ್ಕೆ ಹೋಗಿ ಅಲ್ಲಿ ಆನೆಯ ರೂಪದಿಂದ ಎದುರಿಸಿದ ಶಿವನನ್ನೂ ಸಹ ಲೀಲಾಜಾಲವಾಗಿ ಸೋಲಿಸಿದ. ಶಿವನು ಕೇಳಬಯಸಿದಾಗ ಭೀಮ ತಾನು ಸಿಂಹವ್ಯಾಘ್ರಾದಿರೂಪದ ಶೇಷಗರುಡಾದಿದೇವತೆಗಳನ್ನು ಮೊದಲ್ಗೊಂಡು ದಿಗ್ವಿಜಯದ ಎಲ್ಲ ವಾರ್ತೆಯನ್ನು ತಿಳಿಸಿ, ಅವನನ್ನು ಆನಂದಪಡಿಸಿದ. ಶಿವನು ಬಲಿಯ ಮಗ ಬಾಣನಿಂದ ಹೇರಳವಾಗಿ ರತ್ನರಾಶಿಗಳ ಕಾಣಿಕೆಯನ್ನು ಕೊಡಿಸಿದ. ಇವೆಲ್ಲವುಗಳೊಂದಿಗೆ ಭೀಮಸೇನ ಇಂದ್ರಪ್ರಸ್ಥಕ್ಕೆ ಮರಳಿದ. ಆ ಅಪಾರ ಸಂಪತ್ತನ್ನು ಯಾದವಕೃಷ್ಣ, ವಾಸಿಷ್ಠಕೃಷ್ಣರ ಮುಂದಿರಿಸಿ ನಮಸ್ಕರಿಸಿದ. ಯುಧಿಷ್ಠಿರನಿಗೂ ನಮಸ್ಕರಿಸಿ, ಅವರೆಲ್ಲರಿಗೆ ತನ್ನ ದಿಗ್ವಿಜಯದ ವಿವರಗಳನ್ನು ಹೇಳಿ ಸಂತೋಷಪಡಿಸಿದ. ಕೀಚಕ, ಏಕಲವ್ಯ, ಪೌಂಡ್ರಕ, ಕರ್ಣ ಮೊದಲಾದವರನ್ನು ಸೋಲಿಸಿದ ರೀತಿಯನ್ನು, ಸಿಂಹಾದಿ ರೂಪದ ದೇವತೆಗಳು ಪರಾಭವಗೊಂಡದ್ದನ್ನು ಅವನ ಮುಖದಿಂದ ಕೇಳಿ ಅವರೆಲ್ಲ ಬಹಳವಾಗಿ ಹರ್ಷಿಸಿದರು. ಭೀಮ ಅನಂತರ ವ್ಯಾಸರ ಅಪ್ಪಣೆ-ಯಂತೆ ಯಜ್ಞದ ಸಿದ್ಧತೆಯಲ್ಲಿ ತೊಡಗಿದ. ವ್ಯಾಸರು ಅವನಿಗೆ ''ಯಾರನ್ನು ಜಯಿಸುವುದರಿಂದ ಈ ಯಾಗ ಪೂರ್ಣವಾಗುವುದೋ ಅಂತಹವರನ್ನೆಲ್ಲ ನೀನು ಗೆದ್ದಿರುವೆ. ಈ ಮೊದಲು ಇಂತಹ ಸರ್ವಜಯವನ್ನು ಸಾಧಿಸಿದ್ದವರು ಬ್ರಹ್ಮದೇವರು ಮಾತ್ರ[೨]. ಈಗ ನೀನು ಎರಡನೆಯವ-ನಾಗಿರುವಿ'' ಎಂದು ಯಜ್ಞಕಾರ್ಯದ ಸಿದ್ಧತೆಗೆ ಅಪ್ಪಣೆಮಾಡಿದರು.

## ಸಹದೇವನ ದಕ್ಷಿಣದಿಗ್ವಿಜಯ

ಅದೇ ವೇಳೆಗೆ ಇತರ ದಿಕ್ಕುಗಳನ್ನು ಜಯಿಸಿ, ಉಳಿದ ಪಾಂಡವರೂ ಹಿಂದಿರುಗಿದರು. ಸಹದೇವ ದಕ್ಷಿಣದಿಕ್ಕನ್ನು ಗೆದ್ದು ರತ್ನಗಳನ್ನು ತಂದ. ಅಲ್ಲಿ ಅವನೊಂದಿಗೆ ಪರಾಕ್ರಮಿಯಾದ ರುಗ್ಮಿ ಯುದ್ಧಮಾಡಲಿಲ್ಲ. ಆ ರುಗ್ಮಿಯು ಕೃಷ್ಣನಿಂದ ಸೋತಮೇಲೆ ಶಿವನನ್ನು ಕುರಿತು ತಪಸ್ಸು ಮಾಡಿ ಒಂದು ಅಮೋಘವಾದ ಧನುಸ್ಸನ್ನು ಪಡೆದುಕೊಂಡಿದ್ದ. ಅದನ್ನು ಕೊಡುವಾಗ ಶಿವ ''ಕೃಷ್ಣನನ್ನು ಬಿಟ್ಟು ಉಳಿದೆಲ್ಲರನ್ನು ನೀನು ಇದರಿಂದ ಜಯಿಸಬಲ್ಲೆ. ಆದರೆ ಕೃಷ್ಣನ ಕಾರ್ಯಕ್ಕೆ ವಿರೋಧ ಮಾಡಿದಲ್ಲಿ ಮಾತ್ರ ಇದು ಮತ್ತೆ ನನ್ನ ಬಳಿಗೆ ಹಿಂದಿರುಗುವುದು.'' ಎಂದು ಹೇಳಿದ್ದ. ಆದ್ದರಿಂದ ಕೃಷ್ಣನ ಅಧ್ಯಕ್ಷತೆಯಲ್ಲಿ ನಡೆದ ಈ ರಾಜಸೂಯಕಾರ್ಯಕ್ಕೆ ವಿಘ್ನ ಮಾಡಿದರೆ, ತನ್ನ ಧನುಸ್ಸು ಕೈತಪ್ಪುವುದೆಂಬ ಭಯದಿಂದ ಅವನು ಸಹದೇವನೊಂದಿಗೆ ಯುದ್ಧಮಾಡಲಿಲ್ಲ. ತಂಗಿ

---

೧. ಹನುಮದ್ರೂಪದಂತೆ ಈ ಭೀಮರೂಪದಲ್ಲೂ ಸಮುದ್ರವನ್ನು ದಾಟಿದ ಅಪೂರ್ವ ದಾಖಲೆ ಶ್ರೀವಾಯು-ದೇವರದು ಎಂಬುದನ್ನು ಗಮನಿಸಬೇಕು ; ಅಲ್ಲಿ ಹಾರಿ ದಾಟಿದರೆ, ಇಲ್ಲಿ ಈಜಿ ದಾಟಿದ ಎಂಬುದು ವಿಶೇಷ.

೨. ವರುಣ ಹಾಗೂ ಹರಿಶ್ಚಂದ್ರರೂ ಸಹ ರಾಜಸೂಯಯಾಗ ಮಾಡಿದವರೇ ಆದರೂ ಅವರ ಕಾಲದಲ್ಲಿ ಜರಾಸಂಧ, ಶಿಶುಪಾಲ, ಕೀಚಕನಂತಹ ಮಹಾಪರಾಕ್ರಮಿಗಳಾದ ಪ್ರತಿವೀರರು ಇರಲಿಲ್ಲ. ಆದ್ದರಿಂದ ಭೀಮಸೇನನ ಸರ್ವಜಯದಂತೆ ಅವರ ಜಯ ಇರಲಿಲ್ಲ. ಭಾವಿ ಬ್ರಹ್ಮನಾದ ಭೀಮಸೇನನ ಸರ್ವಜಯ ಮಾತ್ರ ಬ್ರಹ್ಮದೇವರ ಜಯದಂತೆ ನಿಜ ಅರ್ಥದಲ್ಲಿ ಸರ್ವಜಯವಾಗಿದ್ದಿತು ಎಂದು ತಿಳಿಯಬೇಕು.

ರುಗ್ಮಿಣಿಯ ಮೇಲಿನ ಮಮತೆಯಿಂದಲೂ, ಕೃಷ್ಣನು ಯಜ್ಞದ ಮುಖ್ಯಸ್ಥನಾಗಿದ್ದರಿಂದಲೂ, ಭೀಮಾರ್ಜುನರ ಬಲದ ಭಯದಿಂದಾಗಿಯೂ ಅವನಿಗೆ ಕಾಣಿಕೆಯನ್ನು ಒಪ್ಪಿಸಿದ. ಉಳಿದ ರಾಜರನ್ನು ಸಹದೇವ ತನ್ನ ಪರಾಕ್ರಮದಿಂದ ಗೆದ್ದ. ನೆನೆಸಿದ ಕೂಡಲೇ ಮುಂದೆ ಕಾಣಿಸಿಕೊಂಡ [೧]ಘಟೋತ್ಕಚನನ್ನು ಲಂಕೆಗೆ ಕಳುಹಿಸಿ, ವಿಭೀಷಣನಿಂದ ಕಪ್ಪವನ್ನು ತರಿಸಿಕೊಂಡ. ಹಿಂದೆ ರಾಮನು ಹೇಳಿದ್ದ ಈ ವಿಷಯವನ್ನೆಲ್ಲ ವಿಭೀಷಣ ಜ್ಞಾಪಿಸಿಕೊಂಡು, ಕೃಷ್ಣನಾರೆಂಬುದನ್ನು ಭೀಮಾರ್ಜುನರ ಬಲವನ್ನೂ ವಿಚಾರಮಾಡಿ, ಅವರೆಲ್ಲ ದೇವತೆಗಳೆಂಬುದನ್ನು ಮನಗಂಡು, ಕಾಣಿಕೆಯನ್ನು ಕಳುಹಿಸಿಕೊಟ್ಟ. ಹಾಗೆ ಲಂಕೆಯಿಂದ ಘಟೋತ್ಕಚ ತಂದ ರತ್ನರಾಶಿ '[೨]ಮಹೌಘ' ಸಂಖ್ಯೆಯದಾಗಿತ್ತು. ಅಲ್ಲಿಂದ ಸಹದೇವ ಇಂದ್ರಪ್ರಸ್ಥಕ್ಕೆ ಮರಳಿದ.

ಪಶ್ಚಿಮದೇಶದಲ್ಲಿದ್ದ ಎಲ್ಲ ರಾಜರನ್ನು ಗೆದ್ದ ನಕುಲನೂ ಸಹ ರತ್ನರಾಶಿಗಳೊಂದಿಗೆ ಹಿಂದಿರುಗಿದ. ಅವನ ಮಾತುಲನಾದ ಶ್ರೀಕೃಷ್ಣ[೩] ಮಾತ್ರ ಪ್ರೀತಿಯಿಂದಲೇ ಕಪ್ಪ ನೀಡಿದ್ದ.

## ಅರ್ಜುನನ ಉತ್ತರದಿಗ್ವಿಜಯ

ಹನುಮದ್ಧ್ವಜದಿಂದ ಕೂಡಿದ್ದ ರಥವನ್ನು ಏರಿ ಹೊರಟ ಗಾಂಡೀವಿಯಾದ ಅರ್ಜುನನು, ಉತ್ತರದಿಕ್ಕಿನಲ್ಲಿ ಸಾಗುತ್ತಿದ್ದಂತೆಯೇ ಪಾರ್ವತೇಯ ಮತ್ತು ತ್ರೈಗರ್ತರೆಂಬ ದುಷ್ಟ ರಾಜರು ಒಟ್ಟಾಗಿ ಅವನನ್ನು ಮುತ್ತಿದರು. ಅವರಿಬ್ಬರನ್ನೂ ಒಟ್ಟಾಗಿಯೇ ಸೋಲಿಸಿದ ಅರ್ಜುನ ಮುಂದೆ ಸಾಗಿದ. ಮಹಾಬಲಶಾಲಿಯದ ಭಗದತ್ತ, ಅರ್ಜುನನನ್ನು ಧೈರ್ಯದಿಂದ ಎದುರಿಸಿ, ಹೋರಾಟ ನಡೆಸಿದ. ಅವರಿಬ್ಬರಲ್ಲಿ ನಡೆದ ಘೋರಯುದ್ಧ ಎಂಟು ದಿನಗಳವರೆಗೆ ಸಾಗಿತು. ಆ ವೇಳೆಗೆ ಭಗದತ್ತ ಹಾಗೂ ಅವನ ಆನೆ ಸುಪ್ರತೀಕವು ಸಾಕಷ್ಟು ಆಯಾಸಗೊಳ್ಳಲು, ಅವನು ಅರ್ಜುನನನ್ನು ಯುದ್ಧಕ್ಕೆ ಕಾರಣವನ್ನು ತಿಳಿಸಲು ಕೇಳಿಕೊಂಡ. ವಿಷಯ ತಿಳಿಸಿದ ಅರ್ಜುನ ಕಪ್ಪ ಒಪ್ಪಿಸುವಂತೆ ಕೇಳಲು, ಭಗದತ್ತ : ''ಇಂದ್ರ ನನಗೆ ಗುರು ; ನಿನಗೆ ತಂದೆ ; ನಮ್ಮಿಬ್ಬರಲ್ಲಿ ಜಗಳವೇಕೆ?'' ಎಂದು ಹೇಳಿ ವೈಷ್ಣವಾಸ್ತ್ರದ ಪ್ರಭಾವದಿಂದಾಗಿ ''ನೀನು ನನ್ನನ್ನೇನೂ ಗೆಲ್ಲಲಾರೆ'' ಎಂದು ಹೇಳುತ್ತಲೇ ಕಾಣಿಕೆಯೊಪ್ಪಿಸಿದ. ಭಗದತ್ತ ವಿಶ್ವಾಸದಿಂದಲೇ ಕಪ್ಪ ಒಪ್ಪಿಸಿದ್ದನ್ನು ಕಂಡ

---

೧. ರಾಮಾಯಣಕಾಲದಲ್ಲಿ ಲಂಕೆಗೆ ಹಾರಿದ್ದ ದಾಖಲೆ ಹನುಮಂತನದಾಗಿತ್ತು. ಈ ಸಮಯದಲ್ಲಿ ಹಾಗೆ ಲಂಕೆಗೆ ಹಾರಿದ್ದು ಘಟೋತ್ಕಚನದಾಯಿತು. ಆದರೆ ಘಟೋತ್ಕಚನು ಹನುಮಂತನ ಮತ್ತೊಂದು ರೂಪವೇ ಆದ ಭೀಮಸೇನನ ಪುತ್ರ. ಅಂತೂ ಸಮುದ್ರ ಹಾರಿದ ದಾಖಲೆ ಈ ತಂದೆ-ಮಕ್ಕಳದೇ ಹೊರತು ಇತರರದಲ್ಲ.

೨. ಈ ಮಹೌಘ ಸಂಖ್ಯೆಯ ವಿವರ ರಾಮಾಯಣದಲ್ಲಿದೆ. ಒಂದರ ಮುಂದೆ ೬೦ ಸೊನ್ನೆ ಹಾಕಿದಾಗ ಬರುವ ಸಂಖ್ಯೆಯೇ ಈ ಮಹೌಘ($೧೦^{೬೦}$).

೩.. ಕೃಷ್ಣ ಸಾಕ್ಷಾತ್ ಭಗವಂತನೆಂಬುದನ್ನು ಆ ಕಾಲಕ್ಕೆ ತಿಳಿಯದ ನಕುಲ ಇತರರಂತೆ ಕೃಷ್ಣನಿಗೂ ಕಪ್ಪ ನೀಡಲು ಸಂದೇಶ ಕಳುಹಿಸಿದ. ಇದು ಅವನು ಭಾಗವತಧರ್ಮವನ್ನು ಪೂರ್ಣ ಪಾಲಿಸದ ವ್ಯಕ್ತಿಗಳ ಸಾಲಿನಲ್ಲಿ ಸೇರುವಂತೆ ಮಾಡಿದ ಅಧರ್ಮಕಾರ್ಯ. ಕೃಷ್ಣ ಮಾತ್ರ ಅವನ ಅಪರಾಧವನ್ನು ಗಣಿಸದೆ ಕಪ್ಪ ನೀಡಿ ಅನುಗ್ರಹಿಸುವ ಮೂಲಕ ತನ್ನ ಭಕ್ತವಾತ್ಸಲ್ಯವನ್ನು ಲೋಕಕ್ಕೆ ಸಾರಿದ ಎಂಬುದು ವಿಶೇಷ : ನಕುಲಃ ಕರದಾನಾಯ ಪ್ರೇಷಯಾಮಾಸ ಕೇಶವೇ। (೧೮/೨೪)

ಅರ್ಜುನನು, ಅವನ ಆ ವಿಶ್ವಾಸಕ್ಕೆ ಕಟ್ಟುಬಿದ್ದು ವ್ಯರ್ಥಕಲಹವನ್ನು ಬಯಸದೆ ಪ್ರತಿಯಾಗಿ ನುಡಿಯಲಿಲ್ಲ. ಹೀಗೆ ಮುಂದೆ ಸಾಗಿದ ಅರ್ಜುನ ಉಳಿದ [೧]ಎಂಟು ವರ್ಷಗಳನ್ನೂ, ಆರು ದ್ವೀಪಗಳನ್ನು ಗೆದ್ದು ತನ್ನ ಶಸ್ತ್ರಾಸ್ತ್ರಗಳ ಪ್ರಭಾವದಿಂದ [೨]ನಾಲ್ಕು ದಿಕ್ಕುಗಳನ್ನೂ ಗೆದ್ದ. ಅಲ್ಲಿಂದ ಏಳು ಕೆಳಗಿನ ಲೋಕಗಳಿಗೂ ಹೋಗಿ ಅಲ್ಲಿಯ ದೈತ್ಯದಾನವರನ್ನೂ ಗೆದ್ದ. ವಿಷ್ಣುವಿನ ಮಾತಿನಿಂದ ಸಾಮೋಪಾಯದಿಂದಲೇ ಬಲಿಯಿಂದಲೂ ಕಪ್ಪವನ್ನು ಪಡೆದ. ವಾಸುಕಿಯನ್ನು ಜಯಿಸಿ, ಅವನಿಂದಲೂ ಕಪ್ಪ ಪಡೆದು, ಅಪಾರ ಸಂಪತ್ತಿನೊಂದಿಗೆ ಇಂದ್ರಪ್ರಸ್ಥಕ್ಕೆ ಹಿಂದಿರುಗಿದ. ಹೀಗೆ ಅರ್ಜುನನ ದಿಗ್ವಿಜಯಕ್ಕೆ ಹಿಡಿಸಿದ ಕಾಲ ಕೇವಲ ಒಂದು ವರ್ಷ ಮಾತ್ರ.

ಆ ನಾಲ್ವರು ನಾಲ್ಕು ದಿಕ್ಕುಗಳಿಂದ ಸಂಪಾದಿಸಿ ತಂದ ನಾಲ್ಕು ಚಿನ್ನದ ಹಾಗೂ ರತ್ನಗಳ ಪರ್ವತಗಳು ಪಶ್ಚಿಮ ಮೊದಲಾದ ದಿಕ್ಕುಗಳಲ್ಲಿ [೩]ಅಪಸವ್ಯಕ್ರಮದಿಂದ ಕ್ರಮವಾಗಿ ಹತ್ತು, ಮೂವತ್ತು, ನೂರು ಮತ್ತು ನಾಲ್ಕು ನೂರು ಯೋಜನಗಳಷ್ಟು ಉನ್ನತವಾಗಿದ್ದವು. ಆ ನಗರವು ವಿಶ್ವಕರ್ಮನಿಂದ ಮಾಡಲ್ಪಟ್ಟಿದ್ದರಿಂದಾದ ಅಲ್ಪಸ್ಥಳದಲ್ಲಿಯೂ ಆ ಸುವರ್ಣ ಹಾಗೂ ರತ್ನ ಪರ್ವತಗಳು ಹಿಡಿಸಲು ಸಾಧ್ಯವಾಯಿತು ; ಅದೊಂದು ಅದ್ಭುತವೇ ಸರಿ.

## ರಾಜಸೂಯಯಾಗದ ಆರಂಭ

ಅನಂತರ ಕೃಷ್ಣದ್ವೈಪಾಯನರ ಅಧ್ಯಕ್ಷತೆಯಲ್ಲಿ ಯಜ್ಞವು ನಡೆಯಿತು. ಸರ್ವವಿದ್ಯಾ-ಪಾರಂಗತರಾದ ಮುನಿಗಳೇ ಅದರ ಋತ್ವಿಜರಾದರು. ಅವರೆಲ್ಲ ದ್ವೈಪಾಯನರು ಹೇಳಿದ ರೀತಿಯಲ್ಲಿ ಹಿರಿಯನಾದ ಧರ್ಮರಾಜನನ್ನೇ ಯಜಮಾನನನ್ನಾಗಿ ಮಾಡಿ ದೀಕ್ಷೆ ವಹಿಸಿ-ಕೊಟ್ಟರು. ಭೀಮಾರ್ಜುನಾದಿಗಳೆಲ್ಲ ಅವನ ಪಕ್ಕದಲ್ಲಿ ಕುಳಿತುಕೊಂಡರು. ಬ್ರಹ್ಮಾಣೀ ಪದಕ್ಕೆ ಯೋಗ್ಯವಾದ ಕಾರಣದಿಂದ ದ್ರೌಪದೀ(ಭಾರತೀ) ಮಾತ್ರವೇ ಯಜ್ಞಪತ್ನಿಯಾದಳು. ಆ ಅರ್ಹತೆ ಇಲ್ಲದ್ದರಿಂದಲೇ ಬೇರೆ ಪತ್ನಿಯರು ಆ ಪದವಿಯಲ್ಲಿ ದ್ರೌಪದಿಯೊಂದಿಗೆ ಕುಳಿತು-ಕೊಳ್ಳಲಿಲ್ಲ ; ಹಾಗೆಂದು ಜಗತ್ಸೃಷ್ಟಿಕರ್ತರಾದ ಅನಂತತೇಜಸ್ವಿಗಳಾದ ವ್ಯಾಸರ ಅಪ್ಪಣೆಯೇ ಆಗಿತ್ತು. ಅಲ್ಲಿದ್ದ ಪ್ರತಿಯೊಂದು ಸ್ಥಳವೂ ರತ್ನಖಚಿತವಾಗಿತ್ತು, ಸುವರ್ಣಮಯವಾಗಿತ್ತು. ಪಾತ್ರೆ

---

೧. ಇಲ್ಲಿ ವರ್ಷಗಳು ಎಂದರೆ ಭರತವರ್ಷವನ್ನು ಬಿಟ್ಟು ಇತರ ಎಂಟುವರ್ಷಗಳು ಎಂದರ್ಥ.

೨. ತನ್ನ ಗಗನಗಾಮಿಯಾದ ರಥದಿಂದಾಗಿ ಇತರರು ದಿಗ್ವಿಜಯ ಮಾಡದಿದ್ದ ನಾಲ್ಕು ದಿಕ್ಕಿನ ಉಳಿದ ಭಾಗಗಳನ್ನು ಸಹ ಅರ್ಜುನ ಗೆದ್ದ ಎಂದರ್ಥ.

೩. ಅಪಸವ್ಯಕ್ರಮದಲ್ಲಿ ಎಂದರೆ ಪಶ್ಚಿಮದಿಕ್ಕಿನಿಂದ ನಕುಲ ತಂದಿದ್ದು ಹತ್ತು ಯೋಜನ ; ದಕ್ಷಿಣ ದಿಕ್ಕಿನಿಂದ ಸಹದೇವ ತಂದದ್ದು ಮೂವತ್ತು ಯೋಜನ ; ಪೂರ್ವ ದಿಕ್ಕಿನಿಂದ ಭೀಮಸೇನ ತಂದದ್ದು ನೂರು ಯೋಜನ ಹಾಗೂ ಉತ್ತರ ದಿಕ್ಕಿನಿಂದ ಅರ್ಜುನ ತಂದದ್ದು ನಾಲ್ಕುನೂರು ಯೋಜನ ಎಂದು ತಿಳಿಯಬೇಕು. ಮೇಲ್ನೋಟಕ್ಕೆ ಭೀಮ ತಂದ ದ್ರವ್ಯಕ್ಕಿಂತ ಅರ್ಜುನ ತಂದದ್ದು ಹೆಚ್ಚು ಎಂದು ಕಾಣುವುದು. ಆದರೆ, ಅರ್ಜುನ ಸಂಚರಿಸಿದ್ದ ಪ್ರದೇಶದ ವ್ಯಾಪ್ತಿ ಅಪಾರವಾಗಿತ್ತು. ಭೀಮಸೇನ ಸೀಮಿತ ಪ್ರದೇಶದಲ್ಲೇ ಬಲಾಢ್ಯರಾದ ಕರ್ಣ ಶಿಶುಪಾಲಾದಿಗಳನ್ನು ಗೆದ್ದು ತಂದ ಸಂಪತ್ತು ಆ ದೃಷ್ಟಿಯಲ್ಲಿ ಅರ್ಜುನನ ಸಾಧನೆಗಿಂತ ಮಿಗಿಲಾದುದೇ ಆಗಿತ್ತು ಎಂದು ತಿಳಿಯಬೇಕು.

ಮೊದಲಾದವುಗಳಷ್ಟೇ ಅಲ್ಲ, ಶಿಬಿರಗಳೆಲ್ಲವೂ ರತ್ನಮಯವೇ ಆಗಿದ್ದವು. ಪಾಂಡವರು ದಿಗ್ವಿ-ಜಯಕ್ಕೆ ಹೋಗಿದ್ದಾಗ, ಆಹ್ವಾನಿಸಲ್ಪಟ್ಟ ಹದಿನಾಲ್ಕು ಲೋಕಗಳ ಜನರೂ ಅಲ್ಲಿ ನೆರೆದರು. ಬ್ರಹ್ಮ, ರುದ್ರ, ಇಂದ್ರಾದಿದೇವತೆಗಳೆಲ್ಲ ಆಗಮಿಸಿದರು. ಭೀಷ್ಮ, ದ್ರೋಣ, ವಿದುರ, ಧೃತರಾಷ್ಟ್ರರು ಸೇರಿದರು. ಪತ್ನೀಸಮೇತರಾಗಿ ದುರ್ಯೋಧನಾದಿಗಳೂ, ಪುತ್ರಸಮೇತನಾಗಿ ಬಾಹ್ಲೀಕನೂ, ಬಲರಾಮನಿಂದ ಕೂಡಿಕೊಂಡ ಎಲ್ಲ ಯಾದವರೂ ಬಂದು ಸೇರಿದರು. ರುಗ್ಮಿಣೀ ಸತ್ಯಭಾಮೆ ಮೊದಲಾದ ಕೃಷ್ಣಪತ್ನಿಯರೂ ಯಜ್ಞಭೂಮಿಯನ್ನಲಂಕರಿಸಿದರು.

## ರಾಜಸೂಯಯಾಗದ ವೈಭವ

ಹೀಗೆ ನಡೆದ ಎಲ್ಲ ಲೋಕಗಳ ಆ ಅಪೂರ್ವಸಂಗಮದಲ್ಲಿ ಅನೇಕವಿಧವಾದ ತತ್ತ್ವ-ನಿರ್ಣಾಯಕವಾದ ವಿದ್ವದ್ಗೋಷ್ಠಿಗಳು ನಡೆದವು. ಅಂತಹ ಸಭೆಯ [೧]ನಿರ್ಣಾಯಕವಾದ ಪ್ರಾಶ್ನಿಕಸ್ಥಾನವನ್ನು ಪರಿಪೂರ್ಣಜ್ಞಾನಸ್ವರೂಪರಾದ ಭಗವಾನ್ ಶ್ರೀವೇದವ್ಯಾಸರೇ ವಹಿಸಿದರು. ಆ ರೀತಿ ನಡೆದ ತತ್ತ್ವನಿರ್ಣಯಕಥೆಗಳಲ್ಲಿ ಶ್ರೀಹರಿಯ ಗುಣಗಳ ಹಿರಿಮೆಯ ಪ್ರಸಾರ ವಿಶೇಷವಾಗಿ ನಡೆಯಿತು. ಶ್ರೀಹರಿಗೆ ಸಮನಾದ ಮತ್ತೊಬ್ಬ ದೇವತೆ ಎಲ್ಲೂ ಎಂದೂ ಇಲ್ಲ. ಇನ್ನು ಅವನಿಗಿಂತ ಉತ್ತಮರು ಎಲ್ಲಿಂದ ಬಂದಾರು? ಎಂಬುದೇ ಆ ಎಲ್ಲ ನಿರ್ಣಯಗಳ ಮುಖ್ಯಾಂಶವಾಗಿತ್ತು. ಬಾದರಾಯಣ ಹಾಗೂ ಪರಶುರಾಮರ ಸನ್ನಿಧಿಯಲ್ಲಿ ಈ ರೀತಿಯ ನಿರ್ಣಯದಿಂದ ಜನರೆಲ್ಲ ಆನಂದಪರವಶರಾಗಿದ್ದ ಆ ಸಮಯದಲ್ಲಿ ಧರ್ಮರಾಜನು ಆಜನ್ಮ ಬ್ರಹ್ಮಚರ್ಯವ್ರತದೀಕ್ಷಿತರಾಗಿದ್ದ ಭೀಷ್ಮರನ್ನು ಪ್ರಶ್ನಿಸಿದ. ಕೃಷ್ಣನೇ ಜಗತ್ತಿಗೆಲ್ಲ ಪೂಜ್ಯತಮನೆಂಬ ವಿಷಯವನ್ನು ತಾನು ಸ್ವತಃ ಸ್ಪಷ್ಟವಾಗಿ ತಿಳಿದಿದ್ದರೂ, ಅಲ್ಲಿ ನೆರೆದಿದ್ದ ರಾಜರ ಸಂದೇಹವನ್ನು ಪರಿಹರಿಸುವ ದೃಷ್ಟಿಯಿಂದ, ಧರ್ಮಿಷ್ಠನಾದ ಯುಧಿಷ್ಠಿರ ಭೀಷ್ಮರನ್ನು ಪ್ರಶ್ನಿಸಿದ.

## ಶ್ರೀಕೃಷ್ಣನಿಗೆ ಅಗ್ರಪೂಜೆ

ನಾರಾಯಣನಿಗೆ ಸಮರಿಲ್ಲವೆಂಬ ನಿರ್ಣಯ ಬ್ರಹ್ಮಾದಿಗಳಿಂದ ನಡೆದಿದ್ದರೂ, ಅಲ್ಲಿ ನೆರೆದಿದ್ದ ಕೆಲವು ರಾಜರು ಕೃಷ್ಣನನ್ನು ಮನುಷ್ಯನೆಂದೇ ಭಾವಿಸಿದ್ದರು. ಈ ಕೃಷ್ಣನೇ ಆ ನಾರಾಯಣ ಎಂಬ ತತ್ತ್ವವನ್ನು ಪ್ರಕಟಪಡಿಸುವ ಉದ್ದೇಶದಿಂದ ಧರ್ಮರಾಜ ಆ ರೀತಿ ಪ್ರಶ್ನಿಸಿದ. ಬ್ರಹ್ಮಾದಿದೇವತೆಗಳೆಲ್ಲ ಮನುಷ್ಯರಂತೆ ಅಲ್ಲಿಯ ಜನರಿಗೆ ಕಾಣುತ್ತಿದ್ದುದರಿಂದ, ಅವರನ್ನಾಗಲೀ ಮನುಷ್ಯರ ಬಳಿಕ ಮುನಿಗಳಲ್ಲಿ ವಿಶೇಷವಾಗಿ ಇಲ್ಲದ್ದರಿಂದಾಗಲೀ ಮುನಿ-

---

೧. ಇಂತಹ ಸಭೆಯ ಪ್ರಾಶ್ನಿಕಸ್ಥಾನವನ್ನು ಶ್ರೀವೇದವ್ಯಾಸರೊಬ್ಬರೇ ಅಲಂಕರಿಸಿದರು ಎಂಬುದು ಗಮನಿಸಬೇಕಾದ ಅಂಶ ; ಹಾಗೆ ಒಬ್ಬರೇ ಪ್ರಾಶ್ನಿಕಪದವಿಯನ್ನು ಅಲಂಕರಿಸುವವರು ಸರ್ವವಿದ್ಯಾವಿಶಾರದರೂ, ಸರ್ವಜ್ಞರೂ, ರಾಗದ್ವೇಷಾದಿ ಸಮಸ್ತದೋಷಶೂನ್ಯರೂ ಆಗಿರಲೇಬೇಕು ಎಂಬುದು ಶಾಸ್ತ್ರದ ನಿಯಮ. ಇದರಿಂದ ಶ್ರೀವೇದವ್ಯಾಸರು ಸಾಕ್ಷಾತ್ ಭಗವಂತನಾದ ಶ್ರೀವಿಷ್ಣು ಎಂಬುದು ಸ್ಫುಟಪಡುವುದು :
ಅಶೇಷಸಂಶಯಚ್ಛೇತ್ತಾ ನಿಃಸಂಶಯ ಉದಾರಧೀಃ।
ಏಕಶ್ಚೇತ್ ಪ್ರಾಶ್ನಿಕೋ ಜ್ಞೇಯಃ ಸರ್ವದೋಷವಿವರ್ಜಿತಃ॥ -ಕಥಾಲಕ್ಷಣ

ಗಳನ್ನಾಗಲೀ, ಕೇಳದೆ, ಅವರೆಲ್ಲ ಸರ್ವಶಾಸ್ತ್ರಪಾರಂಗತರೆಂದು ತಿಳಿದಿದ್ದ ಭೀಷ್ಮರನ್ನೇ ಹಾಗೆ ಕೇಳಿಕೊಂಡ. ಅದರೊಂದಿಗೆ ಅವರು ತಮ್ಮ ಕುಲವೃದ್ಧರೆಂಬ ಮತ್ತೊಂದು ಕಾರಣವೂ ಸೇರಿತ್ತು – "ಪಿತಾಮಹ ! ಬ್ರಹ್ಮರುದ್ರ ಮೊದಲಾದ ದೇವತೆಗಳೂ ಈ ಸಭೆಯಲ್ಲಿ ಸೇರಿರುವರು. ಅನೇಕ ರಾಜರೂ ಇಲ್ಲಿರುವರು. ಸಕಲಲೋಕಗಳು ನೆರೆದಿರುವ ಈ ಮಹಾಸಮಾಗಮದಲ್ಲಿ ಅಗ್ರಪೂಜೆಗೆ ಅರ್ಹನಾದ ಸರ್ವೋತ್ತಮ ಯಾರು?" ಧರ್ಮರಾಜನ ಪ್ರಶ್ನೆಗೆ "ಪ್ರಭುವಾದ ಕೃಷ್ಣನೇ ಅಂತಹ ಪೂಜ್ಯತಮ" ಎಂಬುದಾಗಿ ಭೀಷ್ಮರು ಉತ್ತರಿಸಿದರು. ಆಗ ಒಬ್ಬನೇ ವಿಷ್ಣು ಪರಶುರಾಮ, ವೇದವ್ಯಾಸ ಹಾಗೂ ಕೃಷ್ಣ ಎಂಬ ಮೂರು ರೂಪದಿಂದ ಅಲ್ಲಿ ಕಂಗೊಳಿ-ಸುತ್ತಿದ್ದರೂ, ಉಳಿದಿಬ್ಬರು ಬ್ರಾಹ್ಮಣರಾದ ಕಾರಣ ಅವರನ್ನು ಅಗ್ರಪೂಜೆಗೆ ಅರ್ಹರೆಂದು ಹೇಳಿದರೆ ಆ ಬಗ್ಗೆ ರಾಜರಾರೂ ವಿರೋಧಿಸುವುದಿಲ್ಲ, ಮಾತ್ರವಲ್ಲದೆ ಒಪ್ಪಿಯೂ ಬಿಡುತ್ತಿದ್ದರು. ಅವರಿಬ್ಬರಲ್ಲಿ ಅವರಿಗೆ ಅಂತಹ ವಿರೋಧವೂ ಇರಲಿಲ್ಲ. ವಿವಾದ ಉಂಟಾಗದಿದ್ದಲ್ಲಿ ವಿಷಯಕ್ಕೆ ಪ್ರಸಿದ್ಧಿಯು ಲಭಿಸಲಾರದು ಎಂಬ ಕಾರಣದಿಂದ ಭೀಷ್ಮರು ಕೃಷ್ಣನನ್ನೇ ಅಗ್ರಪೂಜೆಗೆ ಅರ್ಹನೆಂದು ಸ್ತುತಿಸಿದರು.

ಆ ರೀತಿ ಕೃಷ್ಣನಿಗೆ ಅಗ್ರಪೂಜೆಯನ್ನಿತ್ತರೆ ಅದನ್ನು ರಾಜರೆಲ್ಲ ವಿರೋಧಿಸುವರು. ಆ ರೀತಿಯ ವಿವಾದದಿಂದ ವಾಸುದೇವನ ಕೀರ್ತಿ ಇನ್ನೂ ಹೆಚ್ಚಾಗಿ ಹರಡುವುದು. ಈ ಎಲ್ಲ ಉದ್ದೇಶದಿಂದ ಭೀಷ್ಮರು ಕೃಷ್ಣನನ್ನೇ ಸೂಚಿಸಿದರು. ಭೀಷ್ಮರ ಮಾತನ್ನು ಮನ್ನಿಸಿ, ಪಾಂಡವರು ಕೃಷ್ಣನಿಗೇ ಅಗ್ರಪೂಜೆಯನ್ನು ಸಲ್ಲಿಸಿ, ಅವನ ರೂಪಗಳೇ ಆದ ವೇದವ್ಯಾಸರು ಹಾಗೂ ಪರಶುರಾಮರಿಗೆ ಅನಂತರ ಪೂಜೆ ಮಾಡಿ, ಉಳಿದವರನ್ನೆಲ್ಲ ಅವರ ಯೋಗ್ಯತೆಗೆ ತಕ್ಕಂತೆ ಗೌರವಿಸಿದರು.

## ಶಿಶುಪಾಲ ವಧೆ

ಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸುತ್ತಿದ್ದಂತೆಯೇ, ಕೆರಳಿದ ಚೇದಿರಾಜನಾದ ಶಿಶುಪಾಲ ಅದನ್ನು ಪ್ರತಿಭಟಿಸುತ್ತ ಕೃಷ್ಣನನ್ನು ನಿಂದಿಸತೊಡಗಿದ. ಹರಿನಿಂದೆ ಕಿವಿಗೆ ಬೀಳುತ್ತಲೇ ಪವಮಾನ-ಸುತನಾದ ಭೀಮ ಆ ಶಿಶುಪಾಲನನ್ನು ಸಂಹರಿಸಲೆಂದು ಕೋಪದಿಂದ ನುಗ್ಗಿದ. ಪರೋಕ್ಷ-ದಲ್ಲಿಯೇ ಆದರೂ, ವಿಷ್ಣುವನ್ನು ದ್ವೇಷಿಸುವವನ ನಾಲಿಗೆಯನ್ನು ಕತ್ತರಿಸುವೆನೆಂಬುದೇ ಭೀಮನ ನಿತ್ಯಪ್ರತಿಜ್ಞೆಯಾಗಿತ್ತು. ಭೀಷ್ಮರು ಕೂಡಲೇ ಭೀಮನನ್ನು ತಡೆಯುತ್ತ, ಅವನನ್ನು ಕೃಷ್ಣನು ಸಂಹರಿಸಲಿರುವುದನ್ನು ತಿಳಿಸಿದರು. ಆ ಮಾತನ್ನು ಕೇಳಿ ಭೀಮನು, ಭೀಷ್ಮರು ಕೈಹಿಡಿದು ತಡೆದದ್ದರಿಂದ ಸುಮ್ಮನಾದ. ಆ ವಿಷಯ ಭೀಮನಿಗೆ ತಿಳಿದಿದ್ದರೂ, ತನ್ನ ಕರ್ತವ್ಯವನ್ನು ನಿರ್ವಹಿಸುವ ದೃಷ್ಟಿಯಿಂದ ಮಾತ್ರವೇ ಆ ರೀತಿ ನುಗ್ಗಿ[೧] ಅನಂತರ 'ಅಷ್ಟೇ ಉಚಿತ ' ಎಂಬ

---

೧. ರಾಮಾಯಣದಲ್ಲೂ ಇದೇ ರೀತಿಯಾಗಿ ಪುಷ್ಪಕದಲ್ಲಿ ಸೀತಾಕೃತಿಯನ್ನು ಕರೆದೊಯ್ಯುತ್ತಿದ್ದ ರಾವಣನನ್ನು ಹನುಮಂತ ತಡೆಯಲು ಹೊರಟದ್ದು, ಆಗ ಸುಗ್ರೀವ ಹಾಗೆ ಮಾಡದಂತೆ ತಡೆದದ್ದು ಕಂಡುಬರುವುದು. ಈ ಎರಡೂ ಪ್ರಸಂಗಗಳಲ್ಲೂ ವಾಯುದೇವರ ರೂಪಗಳಾದ ಹನುಮಂತ ಹಾಗೂ ಭೀಮಸೇನ, ಅಂತಹ ವಿಷಮಪ್ರಸಂಗಗಳಲ್ಲಿ ಕರ್ತವ್ಯನಿಷ್ಠರಾದ ಹರಿಭಕ್ತರು ನಡೆದುಕೊಳ್ಳಬೇಕಾದ ನೀತಿಯನ್ನು ಜಗತ್ತಿಗೆ

ಕಾರಣದಿಂದ ನಿಂತ. ಕೃಷ್ಣನಿಗೆ ಸಂದ ಆ ಅಗ್ರಪೂಜೆ ದೇವಾಂಶರಾದ ಎಲ್ಲ ಸಜ್ಜನರ ಪಾಲಿಗೂ ಸಂಭ್ರಮದ ವಿಷಯವಾಯಿತು. ಮನುಷ್ಯರು ಮಾತ್ರ ಮಧ್ಯಸ್ಥರಾಗಿ ಉಳಿದರು. ದುರ್ಯೋಧನ ಮೊದಲಾದ ದೈತ್ಯಸ್ವಭಾವದವರಿಗೆ ಅದೊಂದು ಅಪಾರಖೇದದ ಸಂಗತಿ-ಯಾಯಿತು. ಕೆಟ್ಟಮಾತುಗಳಿಂದ ಮತ್ತೆ ಮತ್ತೆ ಶಿಶುಪಾಲ ಗುಣಪೂರ್ಣನಾದ ಶ್ರೀಕೃಷ್ಣನನ್ನು ನಿಂದಿಸ ತೊಡಗಿದ. ಕೊನೆಗೆ ಕೃಷ್ಣನನ್ನು ಯುದ್ಧಕ್ಕೂ ಆಹ್ವಾನಿಸಿದ ; ಅವನ ಬಾಣಗಳನ್ನೆಲ್ಲ ತುಂಡರಿಸಿದ ಕೃಷ್ಣ ಚಕ್ರದಿಂದ ಅವನ ರುಂಡವನ್ನು ಕತ್ತರಿಸಿದ. ಕತ್ತು ಕೆಳಕ್ಕೆ ಬೀಳುತ್ತಿದ್ದಂತೆಯೇ, ಅವನಲ್ಲಿದ್ದ ವಿಷ್ಣುಭಕ್ತನಾದ ಜಯನು ಶ್ರೀಹರಿಯೇ ಆಗಿದ್ದ ಶ್ರೀಕೃಷ್ಣನ ಉದರದಲ್ಲಿ ಸೇರಿ ಮತ್ತೆ ಪಾರ್ಷದನಾದ ; ಅವನಲ್ಲಿದ್ದ ಅಸುರ ಮಾತ್ರ ಮಹಾತಮಸ್ಸನ್ನೇ ಹೊಂದಿದ.

## ಯಾಗದ ಪರಿಸಮಾಪ್ತಿ

ಅನಂತರ ಪಾಂಡವರ ಯಜ್ಞ ಸಾಂಗವಾಗಿ ನೆರವೇರಿತು. ರಾಜರೆಲ್ಲ ಸುವರ್ಣ ಹಾಗೂ ರತ್ನಗಳ ಕಾಣಿಕೆಯನ್ನು ಉಡುಗೊರೆಯಾಗಿ ಧರ್ಮರಾಜನಿಗೆ ಅರ್ಪಿಸಿದರು. ಅಂತಹ ಕಾಣಿಕೆಗಳನ್ನೆಲ್ಲ ತೆಗೆದಿರಿಸುವ ಕಾರ್ಯವನ್ನು ಧರ್ಮರಾಜ ದುರ್ಯೋಧನನಿಗೆ ವಹಿಸಿದ್ದ[೧]. ಯಥೇಷ್ಟವಾದ ಭಕ್ಷ್ಯಭೋಜ್ಯಗಳಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿದ ಯುಧಿಷ್ಠಿರ ಅವರಿಗೆಲ್ಲ ಬಹು ಸುವರ್ಣರತ್ನಗಳನ್ನು ದಕ್ಷಿಣೆಯಾಗಿ ಕೊಟ್ಟು ಗೌರವಿಸಿದ. ಪ್ರತಿಯೊಬ್ಬರಿಗೂ ಅವರವರಿಗೆ ಇಷ್ಟವೆನ್ನಿಸಿದ್ದನ್ನೆಲ್ಲ ಪಾಂಡವರು ಆ ಸಮಯದಲ್ಲಿ ನೀಡಿ ಸಂತೋಷಪಡಿಸಿದರು. ಅಲ್ಲಿ ಭಾಗವಹಿಸಿದ ಜನರೆಲ್ಲ ಪಾಂಡವರೊಂದಿಗೆ ಕೂಡಿಕೊಂಡು ಗಂಗಾನದಿಯಲ್ಲಿ ಪರಮ-ಸಂತೃಪ್ತಿಯಿಂದ ಅವಭೃಥಸ್ನಾನ ಮಾಡಿದರು. ಅನಂತರ ಪಾಂಡವರು ತಮ್ಮ ಪಟ್ಟಣವನ್ನು[೨], ದೇವತೆಗಳು ತಮ್ಮ ತಮ್ಮ ಲೋಕಗಳನ್ನು ಸೇರಿದರು. ಧೃತರಾಷ್ಟ್ರ ಮೊದಲಾದ ಎಲ್ಲ ರಾಜರೂ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು.

## ಮಯನ ನಿರ್ಮಾಣಕೌಶಲ

ವಿಚಿತ್ರರತ್ನಗಳಿಂದ ನಿರ್ಮಿತವಾಗಿದ್ದ ಸೂರ್ಯನಂತಹ ಕಾಂತಿಯ ಆ ಸಭೆಯಲ್ಲಿ ಕೃಷ್ಣಸಮೇತನಾಗಿ ಧರ್ಮರಾಜ ಉತ್ತಮ ಆಸನದಲ್ಲಿ ಮಂಡಿಸಿದ್ದ. ರುಗ್ಮಿಣೀಪ್ರಮುಖರಾದ

---

ತೋರಿಸಿಕೊಟ್ಟಿರುವರು ಎಂದು ತಿಳಿಯಬೇಕು ; ಮುಂದೆ ಕರ್ಣಪರ್ವದಲ್ಲಿ ಕರ್ಣನನ್ನು ಸಂಹರಿಸ ಹೊರಟು ಶಲ್ಯನ ಕೋರಿಕೆಯಂತೆ ಆ ಕಾರ್ಯವನ್ನು ನಿಲ್ಲಿಸುವ ಪ್ರಸಂಗವೂ ಸಹ ಒಂದುರೀತಿಯಲ್ಲಿ ಇಂತಹುದೇ ಆಗಿದೆ.

೧. ಧರ್ಮರಾಜ ಹಾಗೆ ಮಾಡಲು ಶ್ರೀಕೃಷ್ಣನ ಸಲಹೆ ಕಾರಣವಾಗಿತ್ತು. ಪಾಂಡವರಿಗೆ ಸಲ್ಲುವ ಆ ಅಪಾರ-ಸಂಖ್ಯೆಯ ಕಾಣಿಕೆಗಳ ವಿವರ ದುರ್ಯೋಧನ ಕಣ್ಣಾರೆ ಕಾಣುವಂತಾಗಿ ಪಾಂಡವರ ಬಗ್ಗೆ ಮಾತ್ಸರ್ಯ ಹೊಂದಲೆಂಬುದೇ ಶ್ರೀಕೃಷ್ಣನ ಉದ್ದೇಶವಾಗಿತ್ತು ಎಂಬುದು ಇಲ್ಲಿಯ ರಹಸ್ಯ ; ಮುಂದೆ ನಡೆದದ್ದೂ ಸಹ ಹಾಗೆಯೇ.

೨. ಪಾಂಡವರು ಯಜ್ಞ ಮಾಡಿದ ಸ್ಥಳ ಇಂದ್ರಪ್ರಸ್ಥವು ಯಮುನಾತೀರದ ಪ್ರದೇಶ. ಯಾಗ ಪೂರೈಸಿದ ಬಳಿಕ ಅವರು ಅವಭೃಥಸ್ನಾನಕ್ಕೆಂದು ದೂರದ ಗಂಗಾನದಿಗೆ ತೆರಳಿ ಆ ಬಳಿಕ ಪುನಃ ಇಂದ್ರಪ್ರಸ್ಥಕ್ಕೆ ಹಿಂದಿರುಗಿದರು ಎಂದರ್ಥ.

ಕೃಷ್ಣಪತ್ನಿಯರೂ, ಭೀಮಾರ್ಜುನರೂ ಕೃಷ್ಣನ ಬಳಿಯೇ ಕುಳಿತರು. ದ್ರೌಪದಿಯು ಭೀಮಸೇನ-ನೊಂದಿಗೆ, ರುಗ್ಮಿಣೀಸತ್ಯಭಾಮೆಯರ ಬಳಿಯೇ ಕುಳಿತಳು. ನಕುಲಸಹದೇವರೂ, ದ್ರುಪದ ಮೊದಲಾದವರು ಅರ್ಜುನನ ಬಳಿ ಕುಳಿತರು. ಬಲರಾಮ ಮತ್ತು ಸಾತ್ಯಕಿ ಇಬ್ಬರೂ ಧರ್ಮರಾಜನ ಬಳಿ ಉಪವಿಷ್ಟರಾದರು. ಆ ಸಭೆಯು ವಿಷ್ಣುವಿನಿಂದ ಕೂಡಿದ ಬ್ರಹ್ಮ-ಸಭೆಯಂತೆ[೧] ಕಂಗೊಳಿಸಿತು. ಚಿತ್ರವಿಚಿತ್ರವಾದ ಬಂಗಾರದ ಹಾರಗಳಿಂದಲೂ, ಉತ್ತಮ ವಸ್ತ್ರ-ಗಳಿಂದಲೂ, ಹೊಳೆಯುವ ಕಿರೀಟಕುಂಡಲಗಳಿಂದಲೂ ಆ ರಾಜರೆಲ್ಲ ಅಲ್ಲಿ ವಿಶೇಷವಾಗಿ ಶೋಭಿಸಿದರು. ಅವರಲ್ಲೆಲ್ಲ ಪತ್ನೀಸಮೇತನಾದ ಕೃಷ್ಣನ ಶೋಭೆ ವರ್ಣನಾತೀತವಾಗಿತ್ತು. ರಾಜರು ಎಲ್ಲ ರೀತಿಯಿಂದಲೂ ಅಲ್ಲಿ ಭಗವಂತನನ್ನು ಉಪಾಸನೆ ಮಾಡಿದರು.

## ದುರ್ಯೋಧನನ ಅವಿವೇಕ

ಆ ವೇಳೆಗೆ ಸುಯೋಧನ ಖಡ್ಗಧಾರಿಯಾಗಿ ತಮ್ಮಂದಿರೊಂದಿಗೆ ಆಗಮಿಸಿದ. ಇಂದ್ರನೀಲಮಣಿಯ ರಶ್ಮಿಗಳಿಂದಾಗಿ ಕಾಣದಂತಿದ್ದ ಸಭೆಯ ಬಾಗಿಲನ್ನು ತಿಳಿಯದೆ, ಅವನು ದ್ವಾರದ ಇಕ್ಕೆಲಗಳಲ್ಲಿದ್ದ[೨] ಸ್ಫಟಿಕದ ಗೋಡೆಯನ್ನು ಜೋರಾಗಿ ಹಾಯ್ದು ಮುಖ ಜಜ್ಜಿಕೊಂಡ. ಆಗ ಧರ್ಮರಾಜನಿಂದ ಕಳುಹಿಸಲ್ಪಟ್ಟ ನಕುಲಸಹದೇವರು ದುರ್ಯೋಧನನ ಕೈಹಿಡಿದು-ಕೊಂಡು ಸಭೆಯೊಳಕ್ಕೆ ಕರೆತಂದರು. ಅಂತಹ ಅದ್ಭುತವಾದ ಸಂಪತ್ತು ಅವರಲ್ಲಿದ್ದುದನ್ನು ನೋಡಿ ಸಹಿಸಲಾರದೆ ದುರ್ಯೋಧನನು ಕ್ಷಣಮಾತ್ರ ಅಲ್ಲಿ ಕುಳಿತ ಶಾಸ್ತ್ರಮಾಡಿ ಮೇಲೆದ್ದು ಬೇರೆಡೆಗೆ ನಡೆದ. ಅಲ್ಲಿ ಇಂದ್ರನೀಲಮಣಿಗಳನ್ನು ಹೊಂದಿಸಿದ್ದ ರತ್ನಮಯವಾದ ಪದ್ಮಗಳನ್ನು ಕಂಡು ಅಲ್ಲಿಯ ನೆಲವನ್ನು ಜಲ ಎಂದು ಭಾವಿಸಿ, ತನ್ನ ವಸ್ತ್ರಗಳನ್ನು ಮೇಲೆತ್ತಿಕೊಂಡ. ರತ್ನಗಳ ಪ್ರಭೆಯಿಂದ ನೀರು ಕಾಣದಂತಿದ್ದ ಸ್ಥಳದಲ್ಲಿ ನೀರಿಲ್ಲವೆಂದೇ ಭಾವಿಸಿ, ಮುಂದೆ ಹೋಗುತ್ತ ತಮ್ಮಂದಿರೊಂದಿಗೆ ನೀರಿನಲ್ಲಿ ಬಿದ್ದುಬಿಟ್ಟ. ಆ ಸಮಯದಲ್ಲೆಲ್ಲ ಭೂಭಾರನಾಶಕ್ಕಾಗಿ ಭಗವಂತ-ನಿಂದ ಸೂಚಿತನಾದ ಭೀಮನು ದ್ರೌಪದಿಯೊಂದಿಗೆ ಸೇರಿ ಗಹಗಹಿಸಿ ನಕ್ಕುಬಿಟ್ಟ. ಭೀಮನ ಅನುಯಾಯಿಗಳೆಲ್ಲ ಅದರಲ್ಲಿ ಪಾಲ್ಗೊಂಡಿದ್ದಲ್ಲದೆ, ಕೃಷ್ಣಪತ್ನಿಯರೂ ಅದರಲ್ಲಿ ಸೇರಿಕೊಂಡರು. ಮುಗುಳ್ನಗೆಯಿಂದ ಮುಖಕಮಲವನ್ನು ಭೀಮನತ್ತ ತಿರುಗಿಸಿದ ಶ್ರೀಕೃಷ್ಣ ಏನನ್ನೂ ನುಡಿಯ-ಲಿಲ್ಲ. ಧರ್ಮರಾಜ ಮಾತ್ರ ಅವರನ್ನೆಲ್ಲ ನಗದಿರಲು ಕೇಳಿಕೊಂಡು, ದುರ್ಯೋಧನಾದಿಗಳಿಗೆ ವಸ್ತ್ರ, ಹಾರ, ಗಂಧ ಮೊದಲಾದವುಗಳನ್ನು ಕಳುಹಿಸಿಕೊಟ್ಟ. ದ್ರೌಪದೀ ಹಾಗೂ ಭೀಮಸೇನನಲ್ಲಿ ಬಹಳವಾಗಿ ಕೋಪ ಹೊಂದಿದ ಮನಸ್ಸಿನಿಂದಲೇ, ಶಕುನಿಯೊಂದಿಗೆ ದುರ್ಯೋಧನ ಅಲ್ಲಿಂದ

---

೧. ಬ್ರಹ್ಮಸಭೆಯಲ್ಲಿ ಮುಖ್ಯ ಭಗವತ್ಪೂಜಕರು ಬ್ರಹ್ಮದೇವರಾಗಿರುವಂತೆ, ಈ ಪಾಂಡವಸಭೆಯಲ್ಲಿ ಭಾವೀ ಬ್ರಹ್ಮನಾದ ಭೀಮಸೇನ ಕೃಷ್ಣಪೂಜಕನಾಗಿದ್ದ ಎಂಬ ಔಚಿತ್ಯವನ್ನು ಗಮನಿಸಬೇಕು.

೨. ದ್ವಾರವು ಇಂದ್ರನೀಲ ಮಣಿಯದಾಗಿದ್ದರೆ, ಗೋಡೆಗಳು ಸ್ಫಟಿಕಮಣಿಗಳದಾಗಿದ್ದವು. ಅದರಿಂದಾಗಿ ದುರ್ಯೋಧನ ಹಾಗೆ ಗೋಡೆಗೆ ಮುಖ ಜಜ್ಜಿಕೊಂಡ ದೃಶ್ಯ ಸಭೆಯೊಳಗಿದ್ದ ಸಕಲರಿಗೂ ಸ್ಪಷ್ಟವಾಗಿ ಗೋಚರಿಸುವಂತಾಗಿತ್ತು ಎಂಬುದು ಇಲ್ಲಿಯ ಸೂಕ್ಷ್ಮ ಹಿನ್ನೆಲೆ.

ಹೊರಟುಬಿಟ್ಟ ; ಬಹಳ ನಾಚಿಕೆಗೆ ತುತ್ತಾದ ಅವನು ಧರ್ಮರಾಜ ಕಳುಹಿಸಿದ ವಸ್ತ್ರ ಮೊದಲಾದವುಗಳನ್ನು ತಿರಸ್ಕರಿಸಿದ.

## ದುರ್ಯೋಧನ - ಶಕುನಿಯರ ದುರಾಲೋಚನೆ

ದುರ್ಯೋಧನನು ಹಸ್ತಿನಾವತಿಗೆ ಹಿಂದಿರುಗುತ್ತ ಮಾರ್ಗದಲ್ಲಿ ತನ್ನ ಮನಸ್ಸಿನ ಅಳಲನ್ನು ಶಕುನಿಯ ಮುಂದೆ ತೋಡಿಕೊಂಡ : ''ಕೃಷ್ಣನ ಬಳಿಯಲ್ಲಿ ನನ್ನನ್ನು ನಗಾಡಿದ ದ್ರೌಪದೀ-ಭೀಮರನ್ನು ದುಃಖಕ್ಕೀಡುಮಾಡದೆ ನಾನು ಬದುಕಿ ಫಲವೇನು? ನನಗೆ ಸಾಮರ್ಥ್ಯವಿದ್ದಲ್ಲಿ ಭೀಮನನ್ನು ಕೊಲ್ಲುತ್ತಿದ್ದೆ. ಕೃಷ್ಣನ ಅಗ್ರಪೂಜೆಯನ್ನು ಸಹ ನಿಲ್ಲಿಸುತ್ತಿದ್ದೆ. ಇಂತಹ ಪಾಂಡವ ಸಂಪತ್ತನ್ನು ಕಂಡು ಯಾರು ತಾನೇ ಬದುಕಬಯಸಿಯಾರು ? ಅಬ್ಬಾ ! ಅದು ಹೇಗೆ ಎಲ್ಲ ರಾಜರು ವೈಶ್ಯರಂತೆ ಅವರಿಗೆ ಕಾಣಿಕೆ ಒಪ್ಪಿಸುತ್ತಿದ್ದರು, ನೋಡಿದೆಯಾ !'' ಅವನ ಮಾತಿಗೆ ಪಾಂಡವರ ಬಗ್ಗೆ ಅವನಲ್ಲಿದ್ದ ದ್ವೇಷವನ್ನು ಹೆಚ್ಚಿಸುತ್ತಾ ಶಕುನಿ ಹಂಗಿಸಿದ - ''ಬಲಾಢ್ಯರಾದ ಸೋದರರೊಂದಿಗೆ ನಿನಗೆ ವೈರವೇಕೆ ಸುಯೋಧನ? ಗುಣದಲ್ಲೂ ಬಲದಲ್ಲೂ ಹಿರಿಯರಾದ ಅವರ ದಾಸನಾಗುವುದೇ ನಿನಗೆ ಒಳ್ಳೆಯದು.'' ಶಕುನಿಯ ಮಾತನ್ನು ಕೇಳಿ ಕೆರಳಿದ ದುರ್ಯೋಧನ - ''ಅವರ ಆ ಸಂಪತ್ತೆಲ್ಲ ನನ್ನ ಬಳಿ ಬರದಿದ್ದಲ್ಲಿ ನಾನು ಖಂಡಿತ ಬದುಕ-ಲಾರೆ ; ಇದು ಸತ್ಯ. ಅದನ್ನು ಬಾಹುಬಲದಿಂದ ತೆಗೆದುಕೊಳ್ಳುವುದು ಸಾಧ್ಯವಲ್ಲದ ಮಾತು. ಸ್ವಯಂ ಇಂದ್ರನೂ ಅವರನ್ನು ಯುದ್ಧದಲ್ಲಿ ಗೆಲ್ಲಲು ಸಮರ್ಥನಾಗಲಾರ. ಇನ್ನು ಮನುಷ್ಯರ ಪಾಡೇನು?'' ಎಂದು ದುಃಖಿಸತೊಡಗಿದ. ಆ ಪಾಪಿಗಳ ದೊರೆಯಾದ ಸುಯೋಧನನಿಗೆ ಪರಮಪಾಪಿಯಾದ ಶಕುನಿ - ''ಪಾಂಡವರ ಬಳಿ ನೀನು ಕಂಡ ಉತ್ತಮ ಸಂಪತ್ತನ್ನೆಲ್ಲ ಜೂಜಾಟದಲ್ಲಿ ಅನಾಯಾಸವಾಗಿ ನಿನ್ನ ಬಳಿಗೆ ಸಾಗಿಸುವೆ ; ಯೋಚನೆ ಬಿಡು''ಎಂದು ಧೈರ್ಯ ಹೇಳಿದ. ಅದರಿಂದ ದುರ್ಯೋಧನನ ಮನಸ್ಸಿಗೆ ನೆಮ್ಮದಿ ಎನ್ನಿಸಿತು.

## ದ್ಯೂತದ ಬಗ್ಗೆ ದುರ್ಯೋಧನನ ದುರಾಲೋಚನೆ

ಹಸ್ತಿನಾವತಿಯನ್ನು ಸೇರಿದ ನಂತರ, ಅವರಿಬ್ಬರೂ ಧೃತರಾಷ್ಟ್ರರಾಜನ ಬಳಿಗೆ ತೆರಳಿದರು. ದ್ವಾಪರಾಂಶನೂ, ನಾಸ್ತಿಕ್ಯದ ಮೂರ್ತರೂಪನೂ ಆದ ಶಕುನಿ ಮೆಲ್ಲನೆ ಧೃತರಾಷ್ಟ್ರನಿಗೆ - ''ನಿನ್ನ ಮಗ ಬಣ್ಣಗೆಟ್ಟಿರುವನು ; ಸೊರಗಿರುವನು ; ಮೈಯೆಲ್ಲಾ ಬಿಳಿಚಿಕೊಂಡಿರುವನು'' ಎಂದು ನುಡಿದ. ಕಳವಳಗೊಂಡ ಧೃತರಾಷ್ಟ್ರ ಅದಕ್ಕೆ ಕಾರಣವನ್ನು ಕೇಳಲು, ಅವರಿಬ್ಬರೂ ಮಾರ್ಗದಲ್ಲಿ ತಾವು ಮಾತನಾಡಿಕೊಂಡದ್ದನ್ನು ಅವನಿಗೆ ವಿವರಿಸಿದರು. ಆ ವಿಚಾರ ಕಿವಿಗೆ ಬೀಳುತ್ತಲೇ ಧೃತರಾಷ್ಟ್ರ 'ಆಗದು' ಎನ್ನುತ್ತಾ, ''ಧರ್ಮಕ್ಕೆಸಗುವ ಅಪಚಾರವು ಸರ್ವನಾಶಕ್ಕೆ ಕಾರಣವಾಗುವುದು. ನಿಮ್ಮ ವಿಚಾರ ತುಂಬಾ ಕೆಟ್ಟದಾಗಿದೆ ; ಅದು ನನಗೆ ಹಿಡಿಸದು. ಅವರೆಲ್ಲ ಆ ಅಪಾರಸಂಪತ್ತನ್ನು ತಮ್ಮ ಬಾಹುಬಲದಿಂದ ಗಳಿಸಿದವರು. ಬೇಕಿದ್ದಲ್ಲಿ ನೀನೂ ದಿಗ್ವಿಜಯ ಮಾಡಿ, ಬೇಕಾದಷ್ಟು ಯಜ್ಞಗಳನ್ನು ಮಾಡು. ಅಂತಹ ಗುಣಶಾಲಿಗಳೂ, ಉತ್ತಮಪರಾಕ್ರಮಿ-ಗಳೂ ಆದ ನಿನ್ನ ಸೋದರರೊಂದಿಗೆ ಸ್ಪರ್ಧಿಸುವುದು ಸರಿಯಲ್ಲ'' ಎಂದು ಬುದ್ಧಿವಾದವನ್ನು

ಹೇಳಿದ. ಸ್ವಲ್ಪವೂ ತಗ್ಗದೆ ದುರ್ಯೋಧನನು "ದ್ಯೂತದಿಂದ ಪಾಂಡವರ ಸಂಪತ್ತನ್ನು ಅಪಹರಿಸಲು ನೀನು ಒಪ್ಪದೇ ಹೋದಲ್ಲಿ ನನ್ನನ್ನೀಗ ಸತ್ತವನೆಂದೇ ತಿಳಿ. ನೀನು ಪಾಂಡವ-ರೊಂದಿಗೇ ಸುಖವಾಗಿರು. ನಾನು ಬದುಕುವುದು ನಿನಗೆ ಬೇಕಿದ್ದಲ್ಲಿ ಬೇಗನೆ ಪಾಂಡವರನ್ನು ಇಲ್ಲಿಗೆ ಕರೆಸು ; ಸಭೆಯಲ್ಲಿ [1]ಜೂಜಾಡಲು ಅವಕಾಶಮಾಡಿಕೊಡು. ಇದರಲ್ಲಿ ಅಧರ್ಮ-ವೇನಿದೆ ? ಬ್ರಾಹ್ಮಣರು ಬದುಕುವುದು ವೇದಗಳಿಂದ, ಕ್ಷತ್ರಿಯರಿಗೆ ಶಸ್ತ್ರವೇ ಬದುಕು. ಶತ್ರು-ನಾಶಕ್ಕೆ ಕಾರಣವಾಗುವ ಯಾವುದೂ ಶಸ್ತ್ರವೇ ಸರಿ. ಆದ್ದರಿಂದ ಈಗ ಜೂಜಾಟವೇ ನಮ್ಮ ಪಾಲಿನ ಧರ್ಮ ; ಇದರ ಮಹತ್ಫಲ ನಿನಗೂ ದೊರೆಯುವುದು" ಎಂದು ಹಟ ಹಿಡಿದ.

ಧೃತರಾಷ್ಟ್ರ ಆಗಲೂ ಅದಕ್ಕೆ ಸಮ್ಮತಿಸದೆ – "ಇಂತಹ ಫಲ ನನಗೇನೂ ಬೇಕಿಲ್ಲ, ಅದೆಲ್ಲ ನಿನಗೇ ಇರಲಿ" ಎಂದು ನಿರಾಕರಿಸಿದ. ಆದರೂ ಕಲ್ಯಾವೇಶಕ್ಕೆ ಒಳಗಾಗಿ, ಪುತ್ರವ್ಯಾಮೋಹಕ್ಕೆ ಸಿಲುಕಿದ್ದ ಅವನು ಕ್ರಮೇಣ ಅದಕ್ಕೆ ಸಮ್ಮತಿಯಿತ್ತು, ಪಾಂಡವರನ್ನು ಕರೆತರಲು ವಿದುರನನ್ನು ಇಂದ್ರಪ್ರಸ್ಥಕ್ಕೆ ಕಳುಹಿಸಿದ. ಪುತ್ರತ್ವಸಿದ್ಧಿಗಾಗಿ, ಒಂದಂಶನಿಂದ ಧೃತರಾಷ್ಟ್ರನನ್ನು ಆಗ ಅವನೊಳಗೆ ಪ್ರವೇಶಿಸಿದ ಕಲಿ, ಧೃತರಾಷ್ಟ್ರ ಕೊನೆಗಾಲದಲ್ಲಿ ಹಸ್ತಿನಾಪುರವನ್ನು ತೊರೆದು ಕಾಡಿಗೆ ತೆರಳುವವರೆಗೂ ಅವನನ್ನು ಬಿಡಲೇ ಇಲ್ಲ. ಈ ಮಧ್ಯದ ಕಾಲವೆಲ್ಲ ಈ ಕಾರಣಕ್ಕಾಗಿ ಅವನ ಮನಸ್ಸು ಪಾಪಪೂರಿತವಾಯಿತು. ಪ್ರಾಜ್ಞನಾದ ವಿದುರನೂ ಸಹ ಧೃತರಾಷ್ಟ್ರನ ಮಾತಿಗೆ ಪ್ರತಿಭಟಿಸಿದ – "ಇದು ಮಹಾಪಾಪ. ಇದು ಕುಲಕ್ಕೇ ನಾಶಕ. ಇದರಲ್ಲಿ ಸಂಶಯವಿಲ್ಲ. ಇಂತಹ ಅಕಾರ್ಯ ಬೇಡ. ಇದರಿಂದ ನಿನಗೂ ಅಪಕೀರ್ತಿ ತಪ್ಪುವುದಿಲ್ಲ." ಧೃತರಾಷ್ಟ್ರ ಅದಕ್ಕೆ ತಗ್ಗದೆ – "ಕಲಹವಾಗುವ ಪ್ರಸಂಗ ಬಂದರೆ ನಾವೇ ಅದನ್ನು ತಡೆಯೋಣ. ಪಾಂಡವರು, ನನ್ನ ಮಕ್ಕಳು ಒಟ್ಟಾಗಿ ಆಡುವುದನ್ನು ನೋಡಬೇಕೆಂಬುದೇ ನನ್ನ ಅಪೇಕ್ಷೆ, ಆದ್ದರಿಂದ ಬೇಗನೇ ಪಾಂಡವರನ್ನು ಕರೆದು ತಾ" ಎಂದು ಅವನನ್ನು ಬಲವಂತವಾಗಿ ಕಳಿಸಿದ ; ವಿದುರ ಇಂದ್ರಪ್ರಸ್ಥವನ್ನು ಸೇರುವ ವೇಳೆಗೆ, ಕೃಷ್ಣ ಅಲ್ಲಿಂದ ದ್ವಾರಕೆಗೆ ಹೊರಟುಬಿಟ್ಟಿದ್ದ.

## ಕೃಷ್ಣನ ದ್ವಾರಕಾಗಮನ

ಪಾಂಡವರನ್ನು ಬಿಟ್ಟು ದುರ್ಯೋಧನ ಹೋದಮೇಲೆ ಪಾಂಡವಸಭೆಯಲ್ಲಿ ಕಾಣಿಸಿಕೊಂಡ ನಾರದರನ್ನು ಧರ್ಮರಾಜ – "ಈಗ ರಾಜರಲ್ಲಿ ಯುದ್ಧಕ್ಕೆ ಸನ್ನಾಹ ಮಾಡಿಕೊಳ್ಳುತ್ತಿರುವವರು ಯಾರು ?" ಎಂದು ಪ್ರಶ್ನಿಸಿದ. ಅವರು ಉತ್ತರಿಸಿದರು – "ಸೌಭಪತಿಯಾದ [2]ಸಾಲ್ವನು

---

೧. ದುರ್ಯೋಧನ ಹಾಗೆ ಜೂಜನ್ನೇ ಆರಿಸಿಕೊಳ್ಳಲು ಕಾರಣವಿದೆ. ಅವನು ಸ್ವರೂಪತಃ ಕಲಿ ; ಕಲಿಯ ಐದು ಪ್ರಧಾನನೆಲೆಗಳಲ್ಲಿ ದ್ಯೂತವು ಮೊದಲನೆಯದು ಎಂಬ ವಿವರ ಶ್ರೀಮದ್ಭಾಗವತ ಮಹಾಪುರಾಣದಲ್ಲಿದೆ : ದ್ಯೂತಂ ಪಾನಂ ಸ್ತ್ರಿಯಃ ಸೂನಾ..... ಜಾತರೂಪಮ್ । ಅವನು ಅವುಗಳಲ್ಲಿ ಮೊದಲನೆಯದಾದ ದ್ಯೂತವನ್ನೇ ಪಾಂಡವರನ್ನು ವಂಚಿಸಲು ಆರಿಸಿಕೊಂಡ ಎಂಬುದು ಅವನ ಯೋಗ್ಯತೆಗೆ ಅನುಗುಣವೇ ಆಗಿದೆ ಎಂಬುದು ಇದರಿಂದ ಸ್ಫುಟಪಡುವುದು.

೨. ಈ ಸಾಲ್ವನು ಬ್ರಹ್ಮದತ್ತ ಎಂಬ ಸಾಲ್ವರಾಜನ ಮಗ ; ಬ್ರಹ್ಮದತ್ತನು ಸಾತ್ಯಕಿಯಿಂದ ಹತನಾದ ವಿವರ ಈಗಾಗಲೇ ಬಂದಿದೆ.(ಪುಟ ೮೬)

ಯಾದವರನ್ನು ಗೆಲ್ಲುವ ವರವನ್ನು ಪಡೆದುಕೊಂಡಿರುವನು. ದಿನಕ್ಕೊಮ್ಮೆ ಒಂದು ಹಿಡಿಯಷ್ಟು ಮರಳನ್ನು ಮಾತ್ರ ತಿನ್ನುತ್ತ ಅನೇಕವರ್ಷಗಳ ಕಾಲ ಅವನು ಮಾಡಿದ ಘೋರತಪಸ್ಸಿಗೆ ಮೆಚ್ಚಿದ ಶಿವ, ಸಕಲ ಯಾದವರನ್ನೂ ಜಯಿಸುವಂತಹ ವರವೊಂದನ್ನು ಕೊಟ್ಟಿರುವನು. ಈ ವರವನ್ನು ಪಡೆದು ಸಾಲ್ವ, ಕೃಷ್ಣನನ್ನು ಜಯಿಸಲೆಂದು ಮತ್ತೆ ಬಂದಿರುವನು. ಜರಾಸಂಧನ ವಧೆಯನ್ನು ಪಾಂಡವರ ದಿಗ್ವಿಜಯವನ್ನು, ರಾಜಸೂಯಯಾಗ, ಶಿಶುಪಾಲವಧೆಗಳನ್ನೆಲ್ಲ ಕೇಳಿ ಅವನೀಗ ಶೀಘ್ರದಲ್ಲಿಯೇ ಯಾದವರನ್ನು ಮುತ್ತುವ ವಿಚಾರದಲ್ಲಿರುವನು.'' ಈ ಮಾತನ್ನು ಕೇಳಿ ಧರ್ಮರಾಜ ಕೃಷ್ಣನ ಚಂದ್ರಮಂಡಲದಂತಹ ಮುಖವನ್ನು ನೋಡಿದ. 'ಆಗಲಿ ' ಎಂದು ಹೇಳಿ ಅವನು ಪ್ರದ್ಯುಮ್ನಾದಿ ಯಾದವರನ್ನೆಲ್ಲ ದ್ವಾರಕೆಗೆ ಕಳುಹಿಸಿಕೊಟ್ಟು ಕೆಲವು ದಿನಗಳ ಅನಂತರ ಅಣ್ಣ ಬಲರಾಮನೊಂದಿಗೆ ತಾನೂ ಹೊರಟ.

## ದ್ಯೂತಕ್ಕೆ ಆಹ್ವಾನ

ಇಂದ್ರಪ್ರಸ್ಥವನ್ನು ಪ್ರವೇಶಿಸಿದ ವಿದುರನು, ಧರ್ಮರಾಜನಿಗೆ ಧೃತರಾಷ್ಟ್ರನ ಅಪ್ಪಣೆಯನ್ನು ತಿಳಿಸಿದ. ಸೋದರರೂ, ದ್ರೌಪದಿಯೂ ಎಷ್ಟೇ ತಡೆದರೂ ಕೇಳದೆ ಧರ್ಮರಾಜ ಹೊರಡಲು ಸಿದ್ಧನಾಗಿಯೇ ಬಿಟ್ಟ. ಅಣ್ಣನ ಅಪ್ಪಣೆಯಂತೆ ಯುಧಿಷ್ಠಿರನನ್ನು ಆಹ್ವಾನಿಸಿದ ವಿದುರ, ದ್ಯೂತಕ್ಕೆ ಸಂಬಂಧಿಸಿದ ಅನೇಕ ದೋಷಗಳನ್ನು ವಿವರಿಸಿ, ಬರಕೂಡದೆಂದೇ ತಿಳಿಸಿದ. ''ದ್ಯೂತದ ದೋಷಗಳೆಲ್ಲ ಹೀಗಿವೆ ; ಆದರೂ ನೀನು ತಂದೆಯ ಅಪ್ಪಣೆಯನ್ನು ವಿಚಾರಮಾಡಿ, ಉಚಿತ-ವಾದದ್ದನ್ನು ಮಾಡು'' ಎಂಬ ವಿದುರನ ಮಾತಿಗೂ ಕಿವಿಗೊಡದೆ, ಕಲ್ಯಾವಿಷ್ಟನಾದ ಧರ್ಮ-ರಾಜನು ಸೇನೆಯೊಂದಿಗೆ ಕೂಡಿಕೊಂಡು ಧೃತರಾಷ್ಟ್ರನ ಬಳಿಗೆ ಹೊರಟುಬಿಟ್ಟ.

## ದ್ಯೂತದಲ್ಲಿ ಸರ್ವಸ್ವವನ್ನೂ ಸೋತ ಯುಧಿಷ್ಠಿರ

ಧರ್ಮಿಷ್ಠನಾದ ಯುಧಿಷ್ಠಿರನು ಕಲಿಯ ಆವೇಶದಿಂದಾಗಿ 'ದ್ಯೂತಕ್ಕೆಂದು ಕರೆದಾಗ ಯಾವ ಕಾರಣಕ್ಕೂ ತೆರಳದೆ ಇರಲಾರೆ' ಎಂಬುದಾಗಿ ಪ್ರತಿಜ್ಞೆಯನ್ನು ಮಾಡಿದ್ದ. ಅದರಿಂದಾಗಿ ಆಪ್ತರೆಲ್ಲ ಎಷ್ಟೇ ತಡೆದರೂ ಕೇಳದೆ ಅವನು ಹಸ್ತಿನಾಪುರಕ್ಕೆ ತ್ವರೆಯಿಂದಲೇ ಹೊರಟ. ದ್ಯೂತವಾಡುವುದು ಲೋಕಗುರುವಾದ ಕ್ಷತ್ರಿಯನಿಗೆ ಸ್ವಲ್ಪವೂ ಧರ್ಮವೆನ್ನಿಸದು. ದುರ್ಯೋಧನನಿಂದ ಸ್ವಾಗತಿಸಲ್ಪಟ್ಟ ಪಾಂಡುಪುತ್ರರು ಆ ರಾತ್ರಿಯನ್ನು ಅವನ ಬಳಿಯೇ ಕಳೆದರು. ಬೆಳಿಗ್ಗೆ ಭೀಷ್ಮಾದಿ ಪ್ರಮುಖರೊಂದಿಗೆ ಕೂಡಿಕೊಂಡು ಪಾಂಡವರು ಸಭೆಯನ್ನು ಸೇರಿದರು. ವಿದುರನೊಂದಿಗೆ ಧೃತರಾಷ್ಟ್ರನೂ, ಕರ್ಣ ಶಕುನಿಯರೊಂದಿಗೆ ಕೌರವರೂ ಸಭೆಯನ್ನು ಹೊಕ್ಕರು. ಆಗ ಶಕುನಿಯು ಯುಧಿಷ್ಠಿರನನ್ನು ಜೂಜಾಟಕ್ಕೆ ಆಹ್ವಾನಿಸಿದ. ಭೀಮ, ದ್ರೌಪದಿ, ಕುಂತಿ ಮತ್ತು ವಿದುರ ಈ ನಾಲ್ವರನ್ನು ಹೊರತುಪಡಿಸಿ ಉಳಿದೆಲ್ಲರಲ್ಲೂ ಆಗ ಕಲಿಯು ಪ್ರವೇಶಿಸಿದ್ದ. ಆದ್ದರಿಂದಲೇ ಕುಲವಿನಾಶಕವಾದ ಜೂಜಾಟದಂತಹ ದುಷ್ಕಾರ್ಯದಿಂದ ಭೀಷ್ಮಾದಿಗಳೂ ಅವರನ್ನು ತಡೆಯಲಿಲ್ಲ. ಭೀಮ ಮೊದಲಾದವರು ಹಾಗೂ ವಿದುರ ಎಷ್ಟು ತಡೆಯುತ್ತಿದ್ದರೂ ಲೆಕ್ಕಿಸದೆ ಧರ್ಮರಾಜ ತನ್ನೆಲ್ಲ

ಸಂಪತ್ತನ್ನು ಪಣವನ್ನಾಗಿರಿಸಿ ಆಡತೊಡಗಿದ. ಅಕ್ಷವಿದ್ಯೆಯನ್ನು ತಿಳಿದಿದ್ದ ಶಕುನಿ[1] ಅದೆಲ್ಲವನ್ನು ಗೆದ್ದುಬಿಟ್ಟ. ಅನಂತರ ಧರ್ಮರಾಜ ನಕುಲನನ್ನು ಪಣಕ್ಕೊಡ್ಡಿ ಸೋತ. ಅನಂತರ ಕ್ರಮವಾಗಿ, ಸಹದೇವ, ಅರ್ಜುನ, ಭೀಮರನ್ನಲ್ಲದೆ ದ್ರೌಪದಿಯನ್ನೂ ಪಣಕ್ಕಿಟ್ಟು ಸೋತುಬಿಟ್ಟ. ಕೊನೆಯದಾಗಿ ತನ್ನನ್ನೇ ಪಣವಾಗಿಟ್ಟು ಆಡಿದರೂ ಗೆಲುವು ದೊರೆಯದೆ ಹೋಯಿತು[2].

## ಕೌರವಸಭೆಯಲ್ಲಿ ದ್ರೌಪದಿ

ಬಳಿಕ ದುರ್ಯೋಧನನು ತನ್ನ ಸೂತನನ್ನು, ದ್ರೌಪದಿಯನ್ನು ಸಭೆಗೆ ಕರೆತರಲು ಕಳುಹಿಸಿದ. ದ್ರೌಪದಿಯ ಬಳಿಗೆ ಹೋಗಿ ಜೂಜಿನ ವಿಷಯವನ್ನೆಲ್ಲ ಅವಳಿಗೆ ತಿಳಿಸಿದ ಅವನು, 'ಜೂಜಿನಲ್ಲಿ ನೀನು ಸೋಲಲ್ಪಟ್ಟಿರುವಿ ; ಆದ್ದರಿಂದ ಬೇಗನೇ ಆ ದೊಡ್ಡ ಸಭೆಗೆ ನೀನು ಬರತಕ್ಕದ್ದು' ಎಂದು ನುಡಿದ. ಅದನ್ನು ಪ್ರತಿಭಟಿಸಿದ ದ್ರೌಪದಿ, "ಗುರುಹಿರಿಯರಿರುವ ಆ ಸಭೆಗೆ ನಾನೀಗ ಬರಲಾರೆ" ಎಂದು ಅವನನ್ನು ಹಿಂದಕ್ಕಟ್ಟಿದಳು. ಆ ಸೂತನು ಭೀಮನ ಭಯದಿಂದಾಗಿ ಹಾಗೆ ಮರಳಿದ್ದನ್ನು ತಿಳಿದು ದುರ್ಯೋಧನ, ತನ್ನ ತಮ್ಮನಾದ ದುಃಶಾಸನನನ್ನೇ ಆ ಕೆಲಸಕ್ಕೆ ನಿಯಮಿಸಿದ. ಪಾಪಪುರುಷರಲ್ಲಿ ಪ್ರಧಾನನಾದ ಆ ದುಃಶಾಸನನು ಹೋಗಿ, ದ್ರೌಪದಿಯ ಮುಡಿಯನ್ನು ಹಿಡಿದು, ತನ್ನ ತಾಯಿಯ ಮುಂದೆಯೇ ಎಳೆದು ತಂದು ಸಭೆಯಲ್ಲಿ ನಿಲ್ಲಿಸಿದ.

## ನಿರುತ್ತರರಾದ ಭೀಷ್ಮಾದಿಗಳು

ರಜಸ್ವಲೆಯಾಗಿದ್ದ , ಏಕವಸ್ತ್ರ ಧರಿಸಿದ್ದ ದ್ರೌಪದಿ, ಭೀಷ್ಮ ಮೊದಲಾದವರನ್ನು ಕುರಿತು ಪ್ರಶ್ನಿಸಿದಳು – "ನಿಮ್ಮಂತಹ ಧರ್ಮಜ್ಞರು ಇಂತಹ ಅನ್ಯಾಯವನ್ನು ಅದೇತಕ್ಕೆ ತಡೆಯುತ್ತಿಲ್ಲ? ಅನ್ಯಾಯದ ಜೂಜಾಟದಲ್ಲಿ ಗೆಲುವು ಧರ್ಮಸಮ್ಮತ ಹೇಗಾದೀತು? ರಾಜರಿಗಂತೂ ವಿಶೇಷವಾಗಿ ದ್ಯೂತವು ಅಧರ್ಮವೇ ಅಲ್ಲವೇ? ಧರ್ಮವನ್ನು ಹೇಳದವರು ಹೇಗೆ ತಾನೇ ಹಿರಿಯರೆನ್ನಿಸುವರು? ಹಿರಿಯರಿಲ್ಲದ ತಾಣ ಸಭೆಯಾದರೂ ಹೇಗಾದೀತು? ಪತಿ ಇನ್ನೂ ಸೋಲದಿರುವಾಗ ನಾನು ಹೇಗೆ ತಾನೇ ಜೂಜಿನಲ್ಲಿ ಸೋಲಲ್ಪಡುವೆ? ತಿಳಿದವರೆಲ್ಲ ಪತ್ನಿಯನ್ನು

---

೧. ಪಾಂಡವ ಕೌರವರು ಒಟ್ಟಾಗಿ ಜೂಜಾಡಲೆಂದು ಆಹ್ವಾನಿಸಿದ್ದ ಧೃತರಾಷ್ಟ್ರ, ಆ ಸಮಯದಲ್ಲಿ ದುರ್ಯೋಧನನ ಬದಲು ಶಕುನಿ ಆಟದಲ್ಲಿ ತೊಡಗಿದಾಗ ಅವನನ್ನು ತಡೆಯಲಿಲ್ಲ ಎಂಬುದು ಗಮನಾರ್ಹ. ಯುಧಿಷ್ಠಿರನಾದರೂ ದುರ್ಯೋಧನ ತಾನು ದ್ಯೂತಕ್ಕೆ ತೊಡಗದೆ ಶಕುನಿಯನ್ನು ಮುಂದೆ ಮಾಡಿದಾಗ, ತಾನೂ ಸಹ ಹಿಂದಕ್ಕೆ ಸರಿದು ಭೀಮಸೇನನನ್ನು ಮುಂದೆ ಮಾಡಬಹುದಿತ್ತು. ಆಗ ಪೂರ್ಣಪ್ರಜ್ಞನಾದ ಭೀಮಸೇನನಿಗೆ ಗೆಲುವು ಸಹಜವಾಗಿ ಲಭಿಸುತ್ತಿತ್ತು. ತನ್ನ ಜತೆಯಲ್ಲೇ ಇದ್ದ ಭೀಮಸೇನನ ಪ್ರಯೋಜನವನ್ನು ಪಡೆಯದ ಯುಧಿಷ್ಠಿರ ಮುಂದೆ ಸಂಕಟಗಳ ಸರಮಾಲೆಗೆ ಒಳಗಾಗುವಂತಾಯಿತು. ಹೀಗೆ ಹರಿವಾಯುಗಳಂತಹ ಸರ್ವಬಗೆಯ ಸಂರಕ್ಷಕರು ಇರುವಾಗಲೂ ಅವರಿಂದ ಯೋಗ್ಯ ನೆರವನ್ನು ಪಡೆಯದ ಅವಿವೇಕಿಗಳ ಬಾಳು ಸಹ ಹೀಗೆ ದುಃಖಕ್ಕೆ ಗುರಿಯಾಗುವುದು ಎಂಬ ತತ್ತ್ವ ಇಲ್ಲಿ ಸೂಚಿತ ಎಂದು ತಿಳಿಯಬಹುದು.

೨. ಅಲ್ಲಿ ಶಕುನಿಯಿಂದ ನಡೆದದ್ದು ಕೇವಲ ದ್ಯೂತವಾಗಿರದೆ ಕಪಟದ್ಯೂತವಾಗಿತ್ತು ಎಂಬುದು ಮತ್ತೊಂದು ಗಮನಾರ್ಹ ಸಂಗತಿ. ದ್ಯೂತವೇ ಒಂದು ರೀತಿಯ ಕಪಟತನ ; ಅದರಲ್ಲೂ ಕಪಟದ್ಯೂತ ಎಂದಾಗ ಅದು ಎಷ್ಟು ಹೇಯ ಎಂಬುದು ಮನವರಿಕೆಯಾಗುವುದು.

ಸಮಾನಧರ್ಮಿಣೀ ಎಂದೇ ಅಲ್ಲವೇ ಕರೆಯುವುದು? ಪತಿಯು ದಾಸನಾದಾಗಲೂ ಪತಿ-ಯೊಂದಿಗೇ ಅವಳು ಇರತಕ್ಕದ್ದು. ಆದ್ದರಿಂದ ಧರ್ಮರಾಜ ಸೋತರೂ ನಾನು ಹೇಗೆ ತಾನೇ ಇತರರ ದಾಸಿಯಾದೇನು?'' ಇಷ್ಟೆಲ್ಲ ದ್ರೌಪದಿಯ ಮಾತುಗಳಿಗೆ ಕಲ್ಯಾವೇಶದಿಂದಾಗಿ ಮೋಹಕ್ಕೊಳಗಾಗಿದ್ದ ಭೀಷ್ಮಾದಿಗಳು ಉತ್ತರಿಸಲಾರದೆ, ''ಧರ್ಮರಾಜನನ್ನೇ ಕೇಳಿಕೊ'' ಎಂದು ಹೇಳಿ ಸುಮ್ಮನೆ ಕುಳಿತುಬಿಟ್ಟರು. ಅಲ್ಲಿದ್ದ ಇತರರಿಗಾರಿಗೂ ದುರ್ಯೋಧನನನ್ನು ಎದುರು-ಹಾಕಿಕೊಳ್ಳುವ ಧೈರ್ಯ ಉಂಟಾಗಲೇ ಇಲ್ಲ. ವಿದುರನು ಮಾತ್ರ ಸ್ಪಷ್ಟವಾಗಿ ''ಇದು ಧರ್ಮವಲ್ಲ'' ಎಂದು ಸಾರಿದ. ಅವನ ಮಾತನ್ನು ಧೃತರಾಷ್ಟ್ರನಾಗಲೀ, ಅವನ ಮಕ್ಕಳಾಗಲೀ ಒಪ್ಪಿಕೊಳ್ಳಲಿಲ್ಲ. ತೋಳುಗಳನ್ನು ಮೇಲೆತ್ತಿಕೊಂಡು, ತನ್ನ ಅಶಕ್ತಿಯನ್ನು ದೇವತೆಗಳಿಗೆ ಸ್ಪಷ್ಟ-ಪಡಿಸುತ್ತಾ, ವಿದುರ ಗಟ್ಟಿಯಾಗಿ ''ಇದು ಅನ್ಯಾಯ'' ಎಂದೇ ಸಾರಿ – ''ನೀನು ಧರ್ಮದಿಂದ ಗೆಲ್ಲಲ್ಪಟ್ಟಿಲ್ಲ. ಈ ಸಭೆಯಲ್ಲೆಲ್ಲ ದೊಡ್ಡ ಅನ್ಯಾಯ ತಾಂಡವವಾಡುತ್ತಿದೆ '' ಎಂದೇ ದ್ರೌಪದಿಗೂ ವಿಜ್ಞಾಪಿಸಿದ. ವಿದುರನ ಮಾತನ್ನು ಕೇಳಿ ವಿಕರ್ಣ, ತಾನೂ ಸಹ ಸ್ವಯಂ ಪಾಪಿಯೇ ಆದರೂ, ಧರ್ಮವು ತನಗೆ ತಿಳಿದಿದೆಯೆಂದು ತೋರಿಸಿಕೊಳ್ಳಲೆಂದು ಡಂಭದಿಂದ ''ಇದು ಅಧರ್ಮ'' ಎಂದೇ ನುಡಿದ ; ಕರ್ಣನು ಅವನನ್ನು ಜಬರಿಸಿ ಸುಮ್ಮನಾಗಿಸಿದ.

## ಭೀಮನ ಪರಾಕ್ರಮ

ದ್ರೌಪದಿಯು ಆಪತ್ತಿಗೆ ತುತ್ತಾಗಿರುವುದನ್ನು, ಧರ್ಮರಾಜ ಧರ್ಮದಿಂದ ದೂರಾಗಿರು-ವುದನ್ನು ಕಂಡು ಯುವರಾಜನಾದ ಭೀಮಸೇನ, ಹಾದಿ ತಪ್ಪಿದ ರಾಜನನ್ನು ತಿದ್ದುವುದು ಯುವರಾಜನ ಕರ್ತವ್ಯ ಎಂಬ ಧರ್ಮಕ್ಕನುಗುಣವಾಗಿ, ಅವನಿಗೆ ಹೀಗೆಂದು ಹೇಳಿದ – ''ಇವಳನ್ನು ಜೂಜಿನಲ್ಲಿ ಪಣವನ್ನಾಗಿಸಿದ ನಿನ್ನ ಕೈಗಳನ್ನು ಸುಟ್ಟುಬಿಡಬೇಕು.'' ''ಅದು ಕೂಡದು'' ಎಂದು ಅರ್ಜುನನು ನುಡಿಯಲು ಭೀಮ ವಿವರಿಸಿದ – ''ಹಿರಿಯರನ್ನು ಮಾತಿನಿಂದ ದಂಡಿಸ-ಬೇಕು ; ಸಮರಾದವರನ್ನು ಹಣ ಕಿತ್ತುಕೊಂಡು, ಕಿರಿಯರನ್ನು ದಂಡನೆಯಿಂದಲೂ ತಿದ್ದ-ಬೇಕೆಂಬುದು ಶಾಸ್ತ್ರನಿಯಮ. ಆದ್ದರಿಂದಲೇ ನಾನು ಹಾಗೆಂದು ಹೇಳಿದೆನೇ ಹೊರತು ನಿಜಕ್ಕೂ ಸುಡಲೆಂದಲ್ಲ.'' ಆಗ ಕರ್ಣನು ದ್ರೌಪದಿಗೆ –''ನಿನಗೀಗ ಪತಿಗಳಿಲ್ಲ ; ಆದ್ದರಿಂದ ದುರ್ಯೋಧನನ ಮನೆಗೆ ಹೋಗು'' ಎಂದು ನುಡಿದ. ಪಾಂಡವರಲ್ಲಿ ಪರಸ್ಪರ ಒಡಕುಂಟು-ಮಾಡಬೇಕೆಂಬ ಕಾರಣದಿಂದ ದುರ್ಯೋಧನ – ''ಯುಧಿಷ್ಠಿರನೊಬ್ಬನೇ ನಿನ್ನ ದುಃಖಕ್ಕೆ ಕಾರಣ; ಅವನನ್ನು ಗುರುವಲ್ಲ ಎಂದು ಎಲ್ಲರಾಗಲಿ, ಭೀಮಪಾರ್ಥರಾಗಲಿ ಅಥವಾ ಭೀಮನೊಬ್ಬ-ನಾಗಲಿ ಹೇಳಿದರೆ, ನಾನು ನಿನ್ನನ್ನು ಬಿಡುಗಡೆ ಮಾಡುವೆ'' ಎಂಬುದಾಗಿ ದ್ರೌಪದಿಗೆ ಹೇಳಿದ.

ಅದಕ್ಕೆ ಭೀಮನು – ''ಅಣ್ಣನಾದ ಧರ್ಮಜ ನಮಗೆಲ್ಲ ಪೂಜ್ಯನೆಂಬುದರಲ್ಲಿ ಸಂಶಯವೇ ಇಲ್ಲ. ಈಗ ನಾನೇ ನಿಮಗೆಲ್ಲ ಗುರು ; ಬಲಶಾಲಿಯಾದವನೇ ಕ್ಷತ್ರಿಯರಲ್ಲಿ ಶ್ರೇಷ್ಠನಲ್ಲವೇ ? ನಾನು ನಿಮ್ಮೆಲ್ಲರಿಗಿಂತಲೂ ಬಲಶಾಲಿ ಎಂಬ ವಿಷಯದಲ್ಲಿ ನಿಮಗೆ ಸಂಶಯವಿದ್ದರೆ, ನೀವೆಲ್ಲ ಈಗ ಒಟ್ಟಾಗಿಯೇ ಮೇಲೆದ್ದು ಬನ್ನಿ. ನಿಮ್ಮೆಲ್ಲರನ್ನು ಬಂಧುಬಾಂಧವರ ಸಮೇತ ಕಾಲಿನಲ್ಲಿ

ಹೊಸಕಿ ಹಾಕುವೆ. ಹೂಂ ! ಬೇಗ ಬನ್ನಿ'' ಎಂದು ಗರ್ಜಿಸುತ್ತ ಮೇಲೆದ್ದ. ಭಯಗೊಂಡ ಸಭೆಯೆಲ್ಲ ಕಂಪಿಸತೊಡಗಿತು. ಭೀಷ್ಮ ದ್ರೋಣ, ವಿದುರ ಮೊದಲಾದವರು ''ಕ್ಷಮಿಸು ! ನೀನು ನುಡಿದಿದ್ದೆಲ್ಲ ಸತ್ಯ'' ಎಂದು ಹೇಳುತ್ತಲೇ ಕೈಹಿಡಿದು ಭೀಮನನ್ನು ತಡೆದರು. ಭೀಮಸೇನನು ಕುಳಿತಮೇಲೆಯೇ ದುರ್ಯೋಧನಾದಿಗಳ ಹೃದಯದ ನಡುಕ ಮತ್ತೆ ನಿಂತದ್ದು. ಧರ್ಮರಾಜ ಮೊದಲಾದ ಹಿರಿಯರು ತಡೆದದ್ದರಿಂದ ಅವರಿಗೆ ಗೌರವ ತೋರುವ ದೃಷ್ಟಿಯಿಂದ ಅವರನ್ನೆಲ್ಲ ಭೀಮ ಆಗಲೇ ಕೊಲ್ಲಲಿಲ್ಲ. ಧರ್ಮಶೀಲನಾದ ಧರ್ಮರಾಜನನ್ನು ಉಲ್ಲಂಘಿಸುವುದು ಅವನ ಉದ್ದೇಶವೂ ಆಗಿರಲಿಲ್ಲ. ಹೀಗೆ ಮಾಡಲು ಹಿರಿಯರನ್ನು ಗೌರವಿಸಬೇಕೆಂಬ ಆದರ್ಶವನ್ನು ತೋರಿಸುವುದು ಮಾತ್ರವಲ್ಲದೆ ದುರ್ಯೋಧನಾದಿಗಳ ಪಾಪದ ಕೊಡ ತುಂಬಲಿ ಎನ್ನುವ ಮತ್ತೊಂದು ಉದ್ದೇಶವೂ ಸೇರಿತ್ತು.

## ಭೀಮಪ್ರತಿಜ್ಞೆ

ಭೀಮಸೇನನು ನೋಡುತ್ತಿದ್ದಂತೆಯೇ ಪಾಪಿಯಾದ ದುರ್ಯೋಧನನು ದ್ರೌಪದಿಗೆ ತನ್ನ ತೊಡೆಯನ್ನು ತೋರಿಸಿದ. ಭೀಮ ಅವನನ್ನು ಎಚ್ಚರಿಸುತ್ತ – ''ವೇಗದ ಗದೆಯಿಂದ ಅಪ್ಪಳಿಸಿ ನಿನ್ನ ಈ ತೊಡೆಯನ್ನು ಮುರಿಯುವೆ '' ಎಂದ. ಮತ್ತೆ ದುರ್ಯೋಧನ ''ನಿಮಗೆ ಬೇರಾವ ಸಂಪತ್ತೂ ಈಗ ಉಳಿದಿಲ್ಲ, ಕೃಷ್ಣನನ್ನೇ ಪಣಕ್ಕೆ ಒಡ್ಡಿರಿ'' ಎಂದ. ಅವನು ಕೃಷ್ಣನಿಗೆ ಈ ರೀತಿ ಅವಮಾನ ಮಾಡಿದ್ದನ್ನು ಕಂಡು ಭೀಮಸೇನನು ಕೆರಳಿ – ''ಭೂಮಿಯ ಮೇಲೆ ಬೀಳಿಸಿ ನಿನ್ನ ತಲೆಯನ್ನು ಕಾಲಿನಿಂದ ಮೆಟ್ಟುವೆ'' ಎಂದು ಶಪಥ ಮಾಡಿದ. ಪರೋಕ್ಷದಲ್ಲಿಯೇ ಆದರೂ ಹರಿನಿಂದೆಯನ್ನು ಮಾಡಿದವರನ್ನು ಸಂಹರಿಸುವೆ ಎಂಬುದೇ ಆ ಭೀಮನ ನಿತ್ಯವ್ರತ. ಆದರೂ ಅವನ ಪಾಪ ಇನ್ನಷ್ಟು ವರ್ಧಿಸಲಿ ಎಂಬ ಕಾರಣದಿಂದ ಆಗಲೇ ಅವನನ್ನು ಸಂಹರಿಸಲಿಲ್ಲ. ಸೂರ್ಯಪುತ್ರನಾದ ಕರ್ಣನು ದ್ರೌಪದಿಯತ್ತ ತಿರುಗಿ ಹೇಳಿದ – ''ನಮ್ಮ ರಾಜನ ಮನೆಗೆ ಹೊರಡು. ಪಾಂಡವರ ಕಥೆ ಮುಗಿಯಿತು !'' ಕರ್ಣನ ಮಾತು ಮುಗಿಯುವ ಮುನ್ನವೇ ಭೀಮ ಮತ್ತು ಅರ್ಜುನ ಇಬ್ಬರೂ ಮೇಲೆದ್ದರು. ಅವರಿಬ್ಬರನ್ನು ಧರ್ಮರಾಜ ಮತ್ತು ಉಳಿದವರು ಮತ್ತೆ ತಡೆದರು. ಅವರಿಬ್ಬರೂ ಮತ್ತೆ ಕುಳಿತುಕೊಳ್ಳುತ್ತಲೇ, ಸುಯೋಧನನು ದುಃಶಾಸನನಿಗೆ ಹೇಳಿದ – ''ದುಃಶಾಸನ ! ಈ ಎಲ್ಲ ನಮ್ಮ ದಾಸರ ಬಟ್ಟೆಗಳನ್ನು ಸೆಳೆದುಹಾಕು.'' ಅವನು ಪಾಂಡವರನ್ನು ಸಮೀಪಿಸುತ್ತಿದ್ದಂತೆಯೇ ಅವರೆಲ್ಲ ತಮ್ಮ ಉತ್ತಮವಸ್ತ್ರಗಳನ್ನು ತಾವಾಗಿಯೇ ಅವನಿಗೆ ಕೊಟ್ಟರು. ಅವರೆಲ್ಲ ಚೀರವಸನರೇ ಆಗಿ ಕುಳಿತು, ಅವರೆಲ್ಲರ ದೌರ್ಜನ್ಯ-ವನ್ನು ಜಗತ್ತಿಗೆ ಸಾರಿದರು ; ವಿಶಾಲವಾದ ನೆಲದ ಮೇಲೆ ಅಪಾರ ತಾಳ್ಮೆ ವಹಿಸಿ ಕುಳಿತುಬಿಟ್ಟರು. ಮತ್ತೆ ದುರ್ಯೋಧನನಿಂದ ಹೇಳಲ್ಪಟ್ಟ ದುಃಶಾಸನನು, ಪಾಂಡವರು ನೋಡುತ್ತಿದ್ದಂತೆಯೇ, ಆ ರೀತಿ ದ್ರೌಪದಿಯ ವಸ್ತ್ರವನ್ನು ಎಳೆಯ ತೊಡಗಿದ್ದನ್ನು ನೋಡಿ, ಭೀಮಸೇನ ಗರ್ಜಿಸಿದ – ''ಪಾಪಿಗಳಲ್ಲಿ ಶ್ರೇಷ್ಠನೂ, ಧರ್ಮಶೀಲರಾದ ಕೌರವರ ವಂಶದಲ್ಲಿ ಅಧಮನೂ ಆದ ಈ ದುಃಶಾಸನನ ಎದೆಯನ್ನು ಸೀಳಿ ಜಗತ್ತಿನ ಕಣ್ಣೆದುರೇ ರಕ್ತವನ್ನು ಕುಡಿಯುವೆ.''

## ಅಕ್ಷಯಾಂಬರ

ವಸ್ತ್ರವು ಸೆಳೆಯಲ್ಪಡುತ್ತಿದ್ದಂತೆಯೇ ದ್ರೌಪದಿಯು ವಿಶೇಷವಾಗಿ ಕೃಷ್ಣನ ಧ್ಯಾನದಲ್ಲಿ ತಲ್ಲೀನಳಾದಳು. ಆಗ ಅವಳಿಗೆ ಬಂಗಾರದಂತೆ ಹೊಳೆಯುವ ಬೇರೊಂದು ವಸ್ತ್ರ ಉಂಟಾಯಿತು. ದುಃಶಾಸನನು ಎಳೆಯುತ್ತಿದ್ದಂತೆಲ್ಲ ಒಂದಾದ ಮೇಲೊಂದರಂತೆ ಸೀರೆಗಳು ಬರತೊಡಗಿದವು[೧]. ಎಳೆದೂ ಎಳೆದೂ ಬಸವಳಿದ ಆ ಪಾಪಿ ದುಃಶಾಸನನು ಸಭೆಯಲ್ಲಿಯೇ ಕೈಚೆಲ್ಲಿ ಕುಳಿತುಬಿಟ್ಟ. ಪರ್ವತಪ್ರಾಯವಾಗಿ ಬಿದ್ದಿದ್ದ ವಸ್ತ್ರರಾಶಿಯನ್ನು ಕಂಡು ಕೋಪಗೊಂಡ ತಿಳಿಗೇಡಿಯಾದ ದುರ್ಯೋಧನನು "ಇವಳನ್ನು ಬೇಗನೆ ಮನೆಗೇ ಕರೆದುಕೊಂಡು ಹೋಗು ; ತಡವೇತಕ್ಕೆ? " ಎಂದು ನುಡಿದ. ಅವನ ಮಾತನ್ನು ಕೇಳಿ ಆಗ ದ್ರುಪದಪುತ್ರಿ ಪ್ರತಿಜ್ಞೆಯನ್ನು ತೊಟ್ಟಳು – "ಭೀಮನು ದುರ್ಯೋಧನನನ್ನು, ಅರ್ಜುನನು ಕರ್ಣನನ್ನು, ಸಹದೇವನು ಅಕ್ಷಧೂರ್ತನಾದ ಶಕುನಿಯನ್ನೂ ಸಂಹರಿಸುವರು." ಅವಳ ಮಾತಿಗೆ ಆ ಮೂವರೂ ಆ ರೀತಿ ಶಪಥತೊಟ್ಟು ದುರ್ಯೋಧನಾದಿಗಳನ್ನು ಕೊಲ್ಲುವುದಾಗಿ ಹೇಳಿದರು. ಶಕುನಿಯ ಮಗನನ್ನು ತಾನು ಕೊಲ್ಲುವುದಾಗಿ ನಕುಲನೂ ಶಪಥ ಮಾಡಿದ.

---

೧. ವಸ್ತ್ರಗಳು ಅಕ್ಷಯವಾದವು ಎಂದರ್ಥ. ಹಾಗೆ ಅವು ಅಕ್ಷಯವಾಗಲು ಶ್ರೀಕೃಷ್ಣನೇ ಕಾರಣ. ದ್ರೌಪದಿಯು ಭೀಮಸೇನನ ಅನಂತರದ ಅಪ್ರತಿಮಳಾದ ಮಹಾಭಗವದ್ಭಕ್ತಳು ; ಜ್ಞಾನಭಕ್ತಿಗಳ ಹೊರತು ಬೇರೇನನ್ನೂ ಕೇಳದ ಮಹಾವ್ರತ ಅವರದು. ಆದ್ದರಿಂದ ದ್ರೌಪದಿಯು ವಸ್ತ್ರದಾನಕ್ಕಾಗಿ ಶ್ರೀಕೃಷ್ಣನನ್ನು ಬೇಡಿಕೊಳ್ಳಲಿಲ್ಲ. ಎಂದಿನಂತೆಯೇ ಸಹಜವಾಗಿಯೇ ಶ್ರೀಕೃಷ್ಣನನ್ನು ಸ್ತುತಿಸಿದಳು. ಆದರೆ ಭಕ್ತವತ್ಸಲನಾದ ಶ್ರೀಕೃಷ್ಣ ದ್ರೌಪದಿಯು ಕೇಳದಿದ್ದರೂ ವಸ್ತ್ರಗಳ ಧಾರೆಯನ್ನು ಸುರಿಸಿದ. ಅಂತಹ ಆಪತ್ತಿನಲ್ಲೂ ಫಲಾಪೇಕ್ಷೆಯನ್ನು ಮುಂದಿಡದ ಶ್ರೇಷ್ಠ ಭಗವದ್ಭಕ್ತೆಯಾಗಿ ದ್ರೌಪದಿ ಮಾನ್ಯಳಾದರೆ, ಅವಳು ಕೇಳದಿದ್ದರೂ ತಾನಾಗಿಯೇ ವಸ್ತ್ರಗಳನ್ನು ಅಕ್ಷಯ ಮಾಡುವ ಮೂಲಕ ಶ್ರೀಕೃಷ್ಣ ತಾನು ಕೇಳಿಸಿಕೊಳ್ಳದೇ ಫಲ ನೀಡುವ ಮಹಾಭಕ್ತವತ್ಸಲ ಎಂಬುದನ್ನು ಲೋಕಕ್ಕೆ ಸಾರಿದ. ಇಲ್ಲಿ ನಡೆದ ವಸ್ತುಸ್ಥಿತಿ ಇದು. ಆದರೆ ದ್ರೌಪದಿಯು ವಸ್ತ್ರಕ್ಕಾಗಿಯೇ ಬೇಡಿಕೊಂಡಳು ಎಂಬ ರೀತಿಯಲ್ಲಿ ಈ ಪ್ರಸಂಗ ಪ್ರಚಾರದಲ್ಲಿದೆ. ಅಂತಹ ಪ್ರಸಂಗದಲ್ಲಿ ಬೇಡಿಕೊಳ್ಳುವ ಕಾರ್ಯ ನಡೆದದ್ದು ದ್ರೌಪದಿಯ ದೇಹದಲ್ಲಿ ಶಾಪಗ್ರಸ್ತರಾಗಿ ನೆಲೆಸಿದ್ದ ಶಚೀ, ಶ್ಯಾಮಲಾ ಹಾಗೂ ಉಷಾ ಎಂಬುವರಿಂದ ಎಂದು ತಿಳಿಯಬೇಕು. ಅವರೇನೂ ದ್ರೌಪದಿಯಂತೆ ಅಚ್ಛಿನ್ನಭಗವದ್ಭಕ್ತರಲ್ಲ; ಎಂದರೆ ಒಮ್ಮೊಮ್ಮೆ ಫಲ ಕೇಳುವವರ ಸಾಲಿಗೆ ಸೇರುವರು. ಶ್ರೀಕೃಷ್ಣನು ಅಕ್ಷಯವಸ್ತ್ರವನ್ನು ನೀಡಿದ್ದೂ ಸಹ ದ್ರೌಪದಿಯ ಅಗತ್ಯ ಪೂರೈಸಲೆಂದೇನಲ್ಲ ಎಂಬುದು ಮತ್ತೊಂದು ಸೂಕ್ಷ್ಮ-ವಿಚಾರ ; ಕಾರಣ ಮಹಾವಿಷ್ಣುವಿನ ವಸ್ತ್ರರೂಪದಲ್ಲಿ ಸೇವೆ ಸಲ್ಲಿಸುವ ಭಾಗ್ಯ ಮುಖ್ಯಪ್ರಾಣನದಾದರೆ, ಅಂತಹ ಮುಖ್ಯಪ್ರಾಣನ ಪತ್ನಿ ಭಾರತೀ. ಅವರೇ ದ್ರೌಪದಿ. ಅವರ ಸಾಮರ್ಥ್ಯ ಶಿವಾದಿದೇವತೆಗಳಿಗಿಂತ ಮಿಗಿಲಾದುದು, ಎಂದರೆ ದುರ್ಯೋಧನ ದುಃಶಾಸನ ಮೊದಲಾದ ಸಕಲಪಾಪಿಗಳು ಒಟ್ಟಾದರೂ ಅವರ ರೋಮವನ್ನು ಕುಂದಿಸುವ ಶಕ್ತಿಯು ಅವರಿಗಿಲ್ಲ ; ಪತಿಯಾದ ಮುಖ್ಯಪ್ರಾಣನಂತೆ ಅವರೂ ಸಹ ಅಖಣಾಶ್ಮಸಮರೇ ಆಗಿರುವವು. ಇನ್ನು ಶ್ರೀಕೃಷ್ಣ ವಸ್ತ್ರವನ್ನು ನೀಡಿ ಅನುಗ್ರಹಿಸಿದ್ದು , ಅದರ ಅಗತ್ಯವಿದ್ದ ಶಚೀ, ಶ್ಯಾಮಲಾ ಮೊದಲಾದವರಿಗೆ ಎಂದು ತಿಳಿಯಬೇಕು. ಶ್ರೀಕನಕದಾಸರ 'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ' ಎಂಬ ಕೃತಿಯಲ್ಲಿ ಸ್ಪಷ್ಟವಾಗಿ ಶ್ರೀಕೃಷ್ಣ ಹಾಗೆ ಅಕ್ಷಯವಸ್ತ್ರ ನೀಡಿದ್ದು ಶ್ಯಾಮಲಾದಿಗಳಿಗೆ ಎಂಬ ವಿವರ ಬಂದಿದೆ : 'ಯಮಸುತನ ರಾಣಿಗೆ ಅಕ್ಷಯವಸನವನಿತ್ತೆ...' – ಯಮಸುತನ ರಾಣಿ ಎಂದರೆ ಯಮಧರ್ಮನ ಪತ್ನಿಯಾದ ಶ್ಯಾಮಲೆ ಎಂದರ್ಥ ; ಉಪಲಕ್ಷಣಯಾ ಶಚಿ ಮೊದಲಾದವರನ್ನು ಸಹ ಗ್ರಹಿಸಬೇಕು.

## ಉರಿದೆದ್ದ ಭೀಮ

ಅನಂತರ ದುಃಶಾಸನನು ದ್ರೌಪದಿಯನ್ನು ದುರ್ಯೋಧನನ ಮನೆಗೆ ಎಳೆಯತೊಡಗಿದ್ದನ್ನು ಕಂಡು ಉರಿದೆದ್ದ ಭೀಮಸೇನ – ''ಅರ್ಜುನ ! ಅರ್ಜುನ ! ಇನ್ನು ನಾನು ಕ್ಷಮಿಸಲಾರೆ. ಕಟ್ಟಿಗೆ ಹಾಗೂ ಮಲದಂತೆ ಬಿದ್ದು ಹೋಗುವ ಈ ದೇಹಕ್ಕೆ ಫಲಗಳು ಮೂರು – ವಿದ್ಯೆ, ಕರ್ಮ ಮತ್ತು ಮಕ್ಕಳು ಎಂಬುದು ವೇದದ ಮಾತು. ಪತ್ನಿಯು ಪರರ ವಶವಾದಲ್ಲಿ ಮಕ್ಕಳು ಹೇಗೆ ಬಂದಾರು? ಹೆಂಡತಿ ಕೆಟ್ಟಲ್ಲಿ , ಅರ್ಧಭಾಗ ಕೆಟ್ಟಂತಾಗುವ ಮನುಷ್ಯನಿಗೂ ಒಳ್ಳೆಯ ಲೋಕಗಳು ದೊರೆಯಲಾರವು. ರಕ್ಷಣೆ ಕೊಡದೆ ಹೆಂಡತಿಯನ್ನು ತೊರೆಯುವುದು ಸಹ ಒಳಿತಿಗೆ ಕಾರಣವಲ್ಲ. ಆದ್ದರಿಂದ ಈ ಧೃತರಾಷ್ಟ್ರಪುತ್ರರನ್ನು ಇವರ ಅನುಯಾಯಿಗಳೊಂದಿಗೆ ಕೊಂದುಹಾಕುವೆ'' ಎಂದು ಹೇಳುತ್ತ ಸುಟ್ಟುಬಿಡುವಂತೆ ಶತ್ರುಗಳತ್ತ ನೋಟ ಬೀರಿದ. ಮಹಾಭಯಂಕರವಾದ ಪರಿಘ ಒಂದನ್ನು ತೆಗೆದುಕೊಳ್ಳಲು ಸಹ ಸಿದ್ಧನಾದ. ಧೃತರಾಷ್ಟ್ರನ ಮಕ್ಕಳಲ್ಲಿ ಒಬ್ಬರನ್ನೂ ಉಳಿಸಕೂಡದೆಂಬುದೇ ಅವನ ವಿಚಾರವಾಗಿತ್ತು. ಆಗ ದುರ್ಯೋಧನನ ಯಾಗಶಾಲೆಯಿಂದ ನರಿಗಳು ಊಳಿಡುವ ಶಬ್ದ ಕೇಳಿಸಿತು. ಅದೇ ರೀತಿ ಧೃತರಾಷ್ಟ್ರನ ಮನೆಯಲ್ಲೂ ಭಯಾನಕವಾದ ಅಪಶಕುನಗಳು ಕಾಣಿಸಿಕೊಂಡವು. ಭೀಮಸೇನ ಕೋಪ-ಗೊಂಡ ಆ ಪ್ರಸಂಗದಲ್ಲಿ ಕಾಣಿಸಿದ ಅತ್ಯಂತ ಘೋರವಾದ ದುರ್ನಿಮಿತ್ತಗಳನ್ನು ಕಂಡು ಧೃತರಾಷ್ಟ್ರ ಕೂಡಲೇ ಅವುಗಳ ಫಲವೇನೆಂದು ವಿದುರನನ್ನು ಕೇಳಿದ.

## ವಿದುರನ ಹಿತೋಕ್ತಿ

ವಿದುರನು ಸ್ಪಷ್ಟವಾಗಿ ಹೇಳಿದ –''ಭೀಮನ ಪೆಟ್ಟಿಗೆ ಸಿಕ್ಕ ನಿನ್ನ ಮಕ್ಕಳೆಲ್ಲ ಬಾಂಧವರ ಸಮೇತ ಕ್ಷಣಮಾತ್ರದಲ್ಲಿಯೇ ಯಮಪಟ್ಟಣವನ್ನು ಕಾಣುವರು. ನೀನು ಚಿಕ್ಕಮಗುವಿನಂತೆ ಆಡುತ್ತ, 'ಏನು ಗೆದ್ದರು' 'ಏನು ಗೆದ್ದರು' ಎಂದು ಕೇಳುತ್ತಿರುವಿ. ಇಲ್ಲೀಗ ನೀನು ಅಧರ್ಮ-ದಿಂದ ಸೋತಿರುವ ಪಾಂಡವರನ್ನು ಕಾಣುತ್ತಿರುವಿ. ಸ್ತ್ರೀಯರಿಗೆ ಕೊಟ್ಟದ್ದನ್ನು, ಜೂಜಿನಲ್ಲಿ ಸೋತದ್ದನ್ನು ಮದವೇರಿದ ಮನುಷ್ಯ ಕೊಟ್ಟದ್ದನ್ನು ತಿಳಿದವರು ನಿಜಕ್ಕೂ ಕೊಟ್ಟದ್ದು ಎಂಬುದಾಗಿ ಭಾವಿಸುವುದಿಲ್ಲ. ಅಂತಹ ವ್ಯಕ್ತಿಯ ಬಂಧುಗಳು ಅಂತಹ ಸ್ವತ್ತನ್ನು ಮರಳಿ ಪಡೆಯುವ ಹಕ್ಕನ್ನು ಹೊಂದಿರುವರು ಎಂಬುದೇ ಶಾಸ್ತ್ರದ ನಿಯಮ. ಆದರೂ ಪಾಂಡವರು ಹಾಗೆ ತಮ್ಮ ಸ್ವತ್ತನ್ನು ಮರಳಿ ಕಿತ್ತುಕೊಳ್ಳುತ್ತಿಲ್ಲ. ಇದರಿಂದ ನಿನ್ನ ಮಕ್ಕಳ ದೌರ್ಜನ್ಯದ ಮಟ್ಟವನ್ನು ಅವರು ಹೊರಹಾಕಿರುವರು.'' ''ಹಾಗಿದ್ದಲ್ಲಿ, ವಿದುರ ! ಏನನ್ನು ಮಾಡಿದರೆ ಈ ದುರ್ನಿಮಿತ್ತಗಳ ಫಲ ತಪ್ಪೀತು ? ಬೇಗ ಹೇಳು.'' ವಿದುರನು ಸೂಚಿಸಿದ – '' ಕೂಡಲೇ ದ್ರೌಪದಿಯನ್ನು ಬಿಡುಗಡೆ ಮಾಡು. ವರಗಳನ್ನಿತ್ತು ಅವಳನ್ನು ಸಂತೋಷಪಡಿಸು. ಇಲ್ಲವಾದಲ್ಲಿ ನಿನ್ನ ಮಕ್ಕಳೆಲ್ಲ ಭೀಮನಿಗೆ ಆಹುತಿಯಾದರೆಂದೇ ತಿಳಿ. ಇದರಲ್ಲಿ ಸ್ವಲ್ಪವೂ ಸಂದೇಹ ಬೇಡ. ದ್ರೌಪದಿಯೂ, ಪಾಂಡವರೂ, ತಪೋವೃದ್ಧಿಯನ್ನು ಬಯಸುತ್ತ, ತಪಶ್ಶಕ್ತಿಯಿಂದ ನಿನ್ನ ಮಕ್ಕಳನ್ನು ಸುಟ್ಟುಹಾಕದೆ ಸುಮ್ಮನಿರುವರು. ಅದರಿಂದಾಗಿ ನಿನ್ನ ಮಕ್ಕಳ ಜೀವ ಇನ್ನೂ ಉಳಿದಿದೆ. ಕೂಡಲೇ

ದ್ರೌಪದಿಯನ್ನು ಬಿಡುಗಡೆ ಮಾಡದಿದ್ದಲ್ಲಿ ಭೀಮಸೇನ ನಿನ್ನ ಮಕ್ಕಳನ್ನು ನಿಶ್ಚಿತವಾಗಿ ಇನ್ನು ಉಳಿಸಲಾರ.''

## ದ್ರೌಪದಿ ಕೇಳಿದ ವರ

ವಿದುರನ ಮಾತುಗಳಿಂದ ಎಚ್ಚೆತ್ತ ಧೃತರಾಷ್ಟ್ರನು, ದುಃಶಾಸನನನ್ನು ಗದರಿಸಿ, ದ್ರೌಪದಿಯನ್ನು ಬಿಡುಗಡೆ ಮಾಡಿ, ವರಗಳನ್ನು ಸಹ ಕೇಳಿಕೊಳ್ಳಲು ಹೇಳಿದ. ಅವನು ಹಾಗೆ ಹೇಳಿದಾಗ, ಭಾಗವತಧರ್ಮದಲ್ಲಿ ನಿರತಳಾದ ದ್ರೌಪದಿಯು ತನಗಾಗಿ ಏನನ್ನೂ ಕೇಳಿಕೊಳ್ಳದೆ ತನ್ನ ಪತಿಗಳನ್ನು ರಾಜ್ಯಸಮೇತವಾಗಿ ಬಿಡುಗಡೆ ಮಾಡಲು ಕೇಳಿದಳು. ಅದಕ್ಕೆ ಒಪ್ಪಿದ ಧೃತರಾಷ್ಟ್ರ ಇನ್ನೂ ಕೆಲವು ವರಗಳನ್ನು ಕೇಳಲು ಒತ್ತಾಯ ಮಾಡಿದರೂ, ಅವಳು ಇನ್ನೇನನ್ನು ಕೇಳಲು ಬಯಸಲಿಲ್ಲ. ಪತಿ ಹಾಗೂ ಪರಮಾತ್ಮ ಇಬ್ಬರ ಹೊರತು ಬೇರಾರಿಂದಲೂ ವರ ಪಡೆಯ-ಕೂಡದು ಎಂಬುದು ಭಾಗವತಧರ್ಮ. ಆದ್ದರಿಂದಲೇ ಅವಳು ಬೇರೆ ವರವನ್ನು ಕೇಳಲಿಲ್ಲ. ಅಷ್ಟು ಮಾತ್ರವನ್ನೇ ಕೇಳಿದ್ದೂ ಸಹ ಅಧರ್ಮದಿಂದ ಕಿತ್ತುಕೊಂಡಿದ್ದ ರಾಜ್ಯಾದಿಗಳನ್ನು ಕೇಳುವುದು ವರವೆನ್ನಿಸಲಾರದು ಎಂಬ ಭಾವನೆಯಿಂದ ಮಾತ್ರ. ಭಾಗವತಧರ್ಮದಲ್ಲಿ ಕ್ಷತ್ರಿಯಸ್ತ್ರೀಯು ಮಾವನಿಂದ ಮೂರುವರಗಳನ್ನೂ, ಬ್ರಾಹ್ಮಣಸ್ತ್ರೀಯು ನೂರುವರಗಳನ್ನು ಪಡೆಯಬಹುದೆಂದು ಹೇಳಿರುವ ಮತ್ತೊಂದು ಕಾರಣವೂ ಇದರಲ್ಲಿ ಸೇರಿತ್ತು. ಆದ್ದರಿಂದ ಬೇರಾವ ವರವನ್ನೂ ಅವಳು ಕೇಳಿಕೊಳ್ಳಲಿಲ್ಲ.

## ಅನುದ್ಯೂತ

ಬಿಡುಗಡೆ ಹೊಂದಿದ ಪಾಂಡವರೆಲ್ಲರೂ ಹಿರಿಯರಿಗೆ ನಮಸ್ಕರಿಸಿ, ದ್ರೌಪದಿಯೊಂದಿಗೆ ತಮ್ಮ ಪಟ್ಟಣಕ್ಕೆ ಹೊರಟರು. ಇತ್ತ ದುರ್ಯೋಧನನ ತಮ್ಮನೂ, ಪಾಪಿಗಳಲ್ಲಿ ಅಗ್ರೇಸರನೂ ಆದ ದುಃಶಾಸನನು ತಂದೆ ಧೃತರಾಷ್ಟ್ರನಿಗೆ – ''ನಮ್ಮ ವಶಕ್ಕೆ ಬಂದಿದ್ದ ಪಾಂಡವರ ಎಲ್ಲ ಸಂಪತ್ತನ್ನೂ ನೀನು ಮತ್ತೆ ಅವರಿಗೇ ಕೊಡಿಸಿಬಿಟ್ಟೆ. ಇನ್ನು ವೃಕೋದರನಿಂದ ನಮಗೆ ಸಾವು ತಪ್ಪಿದ್ದಲ್ಲ. ಆದ್ದರಿಂದ ನಮಗೋಸ್ಕರ ನೀನು ಪಾಂಡವರನ್ನು ಮತ್ತೊಮ್ಮೆ ಕರೆಸು. ಮತ್ತೆ ಜೂಜಾಡಿ ಸೋಲುವ ಪಾಂಡವರು ಕಾಡಿಗೆ ತೆರಳಲಿ'' ಎಂದು ಬೇಡಿದ. ಅವನ ಮಾತಿಗೆ ಕಟ್ಟುಬಿದ್ದು ಧೃತರಾಷ್ಟ್ರ ಮತ್ತೆ ಪಾಂಡವರಿಗೆ ಹೇಳಿಕಳುಹಿಸಿದ. ಜೂಜಾಟಕ್ಕೆ ಮತ್ತೆ ಕರೆಯಲ್ಪಟ್ಟ ಧರ್ಮರಾಜನು ತಮ್ಮಂದಿರೂ, ದ್ರೌಪದಿಯೂ ಎಷ್ಟು ತಡೆದರೂ ಕೇಳದೆ ಮತ್ತೆ ಆಗಮಿಸಿದ. ಹನ್ನೆರಡು ವರ್ಷಗಳ ಕಾಲ ವನವಾಸ, ಅನಂತರ ಒಂದು ವರ್ಷದ ಕಾಲ ತುಂಬಾ ದೂರವಲ್ಲದ ಪ್ರಸಿದ್ಧರಾಜನ ಪಟ್ಟಣದಲ್ಲಿ ಅಜ್ಞಾತವಾಸ. ಅಜ್ಞಾತವಾಸದ ಅವಧಿಯಲ್ಲಿ ದ್ರೌಪದಿ ಅಥವಾ ಪಾಂಡವರಲ್ಲಿ ಯಾರೊಬ್ಬರನ್ನು ಗುರುತಿಸಿದರೂ, ಎಲ್ಲರಿಗೂ ಮತ್ತೆ ಹನ್ನೆರಡು ವರ್ಷಗಳ ವನವಾಸ ಮತ್ತೊಂದು ವರ್ಷ ಅಜ್ಞಾತವಾಸ. ಮುಂದೆ ಪುನಃ ಗುರುತು ಸಿಕ್ಕಿದಲ್ಲಿ ಅದರಂತೆಯೇ ವನವಾಸ ಅಜ್ಞಾತವಾಸಗಳು. ಈ ರೀತಿಯ ಪಣವನ್ನು ದುಃಶಾಸನನ ಸಲಹೆಯ

ಮೇರೆಗೆ ದುರ್ಯೋಧನ ಒಡ್ಡಿದ. ಅಕ್ಷವಿದ್ಯೆ ತಿಳಿದ ಶಕುನಿಯಿಂದಲೇ ಮತ್ತೆ ಸೋಲಿಸಲ್ಪಟ್ಟ ಧರ್ಮರಾಜ, ಸೋದರಸಮೇತನಾಗಿ ಕಾಡಿಗೆ ಹೊರಡಲು ಸಿದ್ಧನಾದ. ಆಗ ಪಾಪಿ ದುಃಶಾಸನನು ತನ್ನ ಹಂಚಿಕೆ ಫಲಿಸಿದ್ದಕ್ಕೆ ಕುಣಿದಾಡಿದ.

## ಭೀಮನ ಇನ್ನಷ್ಟು ಪ್ರತಿಜ್ಞೆಗಳು

ಭೀಮನನ್ನು ಕುರಿತು ಮತ್ತೆ ಮತ್ತೆ 'ಗೌಃ ಗೌಃ' ಎಂದು ಹೇಳುತ್ತ, ಕುಣಿಯುತ್ತಲೇ ಸಭಾಮಧ್ಯದಲ್ಲಿ ದ್ರೌಪದಿಯನ್ನು ಕುರಿತು – ''ನಿನಗೆ ಪತಿಗಳಿಲ್ಲ, ದುರ್ಯೋಧನನ ಮನೆಗೆ ಹೊರಡು. ಷಂಢತಿಲ (ಜೊಳ್ಳೆಳ್ಳು)ಗಳಾದ ಇವರೆಲ್ಲರೂ ತಿರುಗಿ ಮರಳದ ಅಂಧಂತಮಸ್ಸನ್ನೇ ಹೊಂದುವರು'' ಎಂದು ಭೀಮನನ್ನು ಅಣಕಿಸುತ್ತ ಹೇಳಿದ. ಆಗ ದುರ್ಯೋಧನಾದಿಗಳೆಲ್ಲರೂ ಗಟ್ಟಿಯಾಗಿ ನಕ್ಕರು. ಆಗ ಭೀಮಸೇನ ''ನಿಮ್ಮೆಲ್ಲರನ್ನು ನಾನು ಯುದ್ಧದಲ್ಲಿ ಸಂಹರಿಸುವೆ'' ಎಂದು ಪ್ರತಿಜ್ಞೆ ಮಾಡಿದ.

ಭೀಮನ ಈ ಮಾತನ್ನು ಕೇಳಿ ಕಳವಳಗೊಂಡ ಅವರೆಲ್ಲರೂ ದ್ರೋಣಾಚಾರ್ಯರನ್ನು ಶರಣು ಹೊಕ್ಕರು. ದ್ರೋಣರಿರುವಲ್ಲಿಯೇ ಅವರ ಪುತ್ರ ಅಶ್ವತ್ಥಾಮರೂ, ಭೀಷ್ಮ ಕೃಪರೂ ಇರುವರೆಂಬ ವಿಶ್ವಾಸದಿಂದಲೇ ಅವರು ಹಾಗೆ ದ್ರೋಣರನ್ನು ಮೊರೆಹೊಕ್ಕದ್ದು. ತಾವು ಬ್ರಾಹ್ಮಣರೇ ಆದರೂ ದ್ರೋಣರು – ''ಅಶ್ವತ್ಥಾಮ ಹಾಗೂ ಕೃಪರೊಂದಿಗೆ ನಾನು ನಿಮಗಾಗಿ ಶಸ್ತ್ರ ಹಿಡಿಯುವೆ. ನಿಮ್ಮೆಲ್ಲರನ್ನು ರಕ್ಷಿಸುವ ಯತ್ನವನ್ನು ನನ್ನ ಶಕ್ತಿಯಿದ್ದಷ್ಟೂ ಮಾಡುವೆ. ಆದರೆ ಭೀಮನಿಂದ ನಿಮ್ಮನ್ನು ರಕ್ಷಿಸುವ ಶಕ್ತಿ ಮಾತ್ರ ನನಗಿಲ್ಲ; ಇದು ಸತ್ಯವಾದ ಮಾತು'' ಎಂದು ಹೇಳಿದರು.

## ವನವಾಸಕ್ಕೆ ಪಾಂಡವರು

ಅನಂತರ ಅಪ್ರತಿಮಶೂರರಾದ ಪಾಂಡವರು ದ್ರೌಪದಿಯೊಂದಿಗೆ ಸಭೆಯಿಂದ ಕಾಡಿಗೆ ಹೊರಟರು. ಯುವಸಿಂಹದಂತೆ ಹೆಜ್ಜೆಯನ್ನು ಹಾಕುತ್ತ ನಡೆದ ಭೀಮನನ್ನು ದುರ್ಯೋಧನ ಅಪಹಾಸ್ಯಮಾಡಿ ಮತ್ತೆ ನಕ್ಕ. ಸಭೆಯಿಂದ ಅರ್ಧ ತೆರಳಿದ್ದ ಭೀಮಸೇನ ಹೊರಳಿ ನಿಂತು ಕೆಂಗಣ್ಣುಗಳಿಂದ ನೋಡುತ್ತ – ''ನಿನ್ನ ಮತ್ತೊಂದು ತೊಡೆಯನ್ನು ಸಹ ಯುದ್ಧದಲ್ಲಿ ಗದೆಯಿಂದ ಅಪ್ಪಳಿಸಿ ಮುರಿಯುವೆ'' ಎಂದು ಪ್ರತಿಜ್ಞೆ ಮಾಡಿ, ಆ ಕೆಟ್ಟ ಸಭೆಯಿಂದ ಹೊರ ನಡೆದ. ಹಾಗೆ ಹೊರಟ ಮಕ್ಕಳ ಹಿಂದೆ ಮಮತೆಯಿಂದ ಕುಂತಿಯು ತಾನೂ ಹೊರಡಲು ಸಿದ್ಧಳಾದಳು. ಅಳುತ್ತಿದ್ದ ಅವಳನ್ನು ವಿದುರನು ತನ್ನ ಮನೆಯಲ್ಲೇ ನಿಲ್ಲಿಸಿಕೊಂಡ. ಕುಂತಿಗೆ ನಮಸ್ಕರಿಸಿದ ಪಾಂಡವರು ದ್ರೌಪದಿಯೊಂದಿಗೆ ವೇಗವಾಗಿ ಹೊರಟುಬಿಟ್ಟರು.

''ಕೌರವರನ್ನು ಕೋಪದ ಕಣ್ಣಿನಿಂದ ಕೊಲ್ಲುವುದು ಬೇಡ'' ಎಂಬ ಕಾರಣದಿಂದ ಕರುಣಾಳು ಧರ್ಮರಾಜ ಮುಖವನ್ನು ಕೆಳಗೆ ಮಾಡಿಕೊಂಡು ಹೊರಟ. ಎರಡು ತೋಳು-ಗಳನ್ನು ಮೇಲೆತ್ತಿಕೊಂಡು ಬಲಶಾಲಿ ವೃಕೋದರ ಹೊರಟ ; ಈ ಎರಡು ತೋಳುಗಳಿಂದಲೇ ಇವರೆಲ್ಲರನ್ನೂ ಸಂಹರಿಸಬಲ್ಲೆ ಎಂಬುದೇ ಅವನ ಆ ಭಂಗಿಯ ಅರ್ಥವಾಗಿತ್ತು. ಕೇಶಗಳನ್ನು

ಕಟ್ಟಿಕೊಳ್ಳದೇ ಹಾಗೆಯೇ ದ್ರೌಪದಿ ಹೊರಟಿದ್ದಳು. ಅದು ದುರ್ಯೋಧನಾದಿಗಳ ಪತ್ನಿಯರು ಮುಂದೆ ಮುಕ್ತಕೇಶಿಯರಾಗುವರು ಎಂಬುದಕ್ಕೆ ಸೂಚನೆಯಾಗಿತ್ತು. ನಾನು ಮುಂದೆ ಈ ತೆರನಾಗಿ ಶತ್ರುಗಳಲ್ಲಿ ಬಾಣಗಳನ್ನು ಸುರಿಸುವೆನು ಎಂಬರ್ಥದಲ್ಲಿ ಅಸ್ತ್ರನಿಪುಣನಾದ ಅರ್ಜುನ ಮಣ್ಣನ್ನು ಸುರಿಸುತ್ತಾ ಹೊರಟಿದ್ದ. ಇಂತಹ ಅವಸ್ಥೆಯಲ್ಲಿ ತಮ್ಮ ಮುಖವನ್ನು ಶತ್ರುಗಳು ನೋಡುವುದು ಬೇಡವೆನ್ನುವ ಉದ್ದೇಶದಿಂದ ಧೈರ್ಯಶಾಲಿಗಳಾದ ನಕುಲಸಹದೇವರು ತಲೆಬಾಗಿಸಿಕೊಂಡೇ ಹೊರಟಿದ್ದರು. ಪ್ರೇತಸಂಸ್ಕಾರಸೂಕ್ತಗಳನ್ನು ಪಠಿಸುತ್ತಲೇ ಧೌಮ್ಯರು ಮುಂಭಾಗದಲ್ಲಿ ಹೊರಟಿದ್ದರು. ದುರ್ಯೋಧನಾದಿಗಳು ಸತ್ತಾಗ ಅವರ ಅಂತ್ಯಕ್ರಿಯೆಗಳನ್ನು ಮಾಡಿಸುವವನು ತಾನೇ ಎಂಬುದೇ ಅವರ ಆ ಪಠನೆಯ ಆಶಯವಾಗಿತ್ತು.

ರಥ ಉಪರಥಗಳೊಂದಿಗೆ ಸೂತರು ಪಾಂಡವರನ್ನು ಹಿಂಬಾಲಿಸಿದರು. ಅಡಿಗೆಯವರು, [೧]ಪೌರೋಗವರು, ಭೃತ್ಯರು ಮತ್ತಿತರ ಪಾಂಡವರ ಎಲ್ಲ ಹಿತೈಷಿಗಳೂ ಅವರ ಹಿಂದೆಯೇ ಸಾಗಿದರು. ಅವರೆಲ್ಲಾ ತಮ್ಮನ್ನು ಹಿಂಬಾಲಿಸಿ ಬಂದದ್ದನ್ನು ಕಂಡು ಪಾಂಡವರು ಜಾಹ್ನವೀ-ತೀರದಲ್ಲಿ ವಟವೃಕ್ಷವೊಂದನ್ನು ಆಶ್ರಯಿಸಿ ಕುಳಿತರು. ಅನಂತರ ಸಕಲಜಗತ್ತಿನಲ್ಲಿ ವ್ಯಾಪ್ತನೂ, ಸದಾ ಸರ್ವ ಸದ್ಗುಣಗಳಿಂದ ಪೂರ್ಣನೂ, ಬ್ರಹ್ಮರುದ್ರಾದಿಗಳಿಂದ ಸದಾ ಪೂಜಿತನೂ, ಸಂಸಾರದಿಂದ ತಾರಕನೂ ಆದ ನಾರಾಯಣನನ್ನು ಅವರೆಲ್ಲ ಸ್ಮರಿಸಿಕೊಂಡರು.



೧. ಪೌರೋಗವರು ಎಂದರೆ ಪಾಕಸಾಕ್ಷಿಗಳು.

# ವನ ಪರ್ವ

## ಕಿರ್ಮೀರ ವಧೆ

ಹಿಂಬಾಲಿಸಿ ಬಂದಿದ್ದ ಜನರನ್ನು ಕಳುಹಿಸುವುದು ಪಾಂಡವರಿಗೆ ಪ್ರಯಾಸದ ಕಾರ್ಯವೇ ಆಯಿತು. ಅನಂತರ ಮುಂದೆ ಸಾಗಿದ ಅವರು ಒಂದು ದಟ್ಟವಾದ ಅಡವಿಯನ್ನು ಹೊಕ್ಕರು. ಆ ರಾತ್ರಿ ನರಭಕ್ಷಕನಾದ ಕಿರ್ಮೀರನೆಂಬ ರಾಕ್ಷಸನು, ಭೀಮನನ್ನು ಅವನ ಪತ್ನೀ, ಸೋದರರೊಂದಿಗೆ ಸಂಹರಿಸಲೆಂದು ಆಕ್ರಮಣ ಮಾಡಿದ. ಬಕಾಸುರನ ತಮ್ಮನಾಗಿದ್ದ ಅವನು ಶಿವನ ವರದಿಂದಾಗಿ ಎಲ್ಲರಿಂದಲೂ ಅಜೇಯನೆನ್ನಿಸಿ, ಲೋಕಕಂಟಕನಾಗಿದ್ದ. ದೊಡ್ಡ ದೊಡ್ಡ ಮರಗಳನ್ನೂ, ಬೆಟ್ಟಗಳನ್ನೂ ಎಸೆಯುತ್ತ ನುಗ್ಗಿದ ಅವನೊಂದಿಗೆ ಸ್ವಲ್ಪಕಾಲ ಕಾದಿದ ಭೀಮ ಆ ರಣಯಜ್ಞದಲ್ಲಿ ನಾರಾಯಣನಿಗೆ ಬಲಿಯನ್ನಾಗಿ ಆ ಪಾಪಿಯನ್ನು ಸಮರ್ಪಿಸಿದ.

## ಅಕ್ಷಯಪಾತ್ರೆ

ಪಾಂಡವರ ಜೊತೆ ಸೇರಿದ್ದ ಯತಿಗಳ ಸಂಖ್ಯೆ ಹತ್ತುಸಾವಿರ ಹಾಗೂ ಮುನಿಗಳ ಸಂಖ್ಯೆ ಎಂಭತ್ತೆಂಟು ಸಾವಿರವಾಗಿತ್ತು. ಅವರಲ್ಲಿ ಪ್ರತಿಯೊಬ್ಬರಿಗೂ ಮುನ್ನೂರು ಜನರ ಪರಿವಾರ ಬೇರೆ ! ಅಪಾರ ಸಂಖ್ಯೆಯ ಅವರೆಲ್ಲರ ಪೋಷಣೆಗೆಂದು ಧರ್ಮರಾಜ ಸೂರ್ಯಾಂತರ್ಯಾಮಿಯಾದ ಭಗವಂತನನ್ನು ಆರಾಧಿಸಿ, ಪ್ರತಿದಿನವೂ ಅಕ್ಷಯ ಅನ್ನವನ್ನು, ರತ್ನ ಮೊದಲಾದುವುಗಳನ್ನು ನೀಡುವ ಸಾಮರ್ಥ್ಯ ಹೊಂದಿದ ಅಕ್ಷಯಪಾತ್ರೆಯೊಂದನ್ನು ಪಡೆದುಕೊಂಡ ; ಬಯಸಿದಂತಹ ಆಹಾರವನ್ನು ಅದು ನೀಡುತ್ತಿತ್ತು. ಅದರ ಪ್ರಭಾವದಿಂದಲೇ ಯುಧಿಷ್ಠಿರ ಅವರೆಲ್ಲರನ್ನು ಪೋಷಿಸಿದ. ಅವರೆಲ್ಲ ಆ ಮುನ್ನ ಯುಧಿಷ್ಠಿರನ ಮನೆಯಲ್ಲಿ ಸುವರ್ಣಪಾತ್ರೆಗಳಲ್ಲಿ ಭೋಜನ ಮಾಡುತ್ತಿದ್ದವರು. ಸಜ್ಜನರ ಸಮಾಗಮವನ್ನು ಬಯಸಿ ಅವರೆಲ್ಲ ಈಗ ಪಾಂಡವರೊಂದಿಗೆ ವಾಸಿಸಲಾರಂಭಿಸಿದ್ದರು. ಅಲ್ಲಿಗೆ ಬೇರೆಡೆಗಳಿಂದೆಲ್ಲ ಅನೇಕ ಮುನಿಗಳು ಬಂದು ಸೇರಿಕೊಂಡರು. ಪಾಂಡವರಿಂದ ತತ್ತ್ವಾರ್ಥಗರ್ಭಿತವಾದ ಪ್ರಾಚೀನಕಥೆಗಳನ್ನು ಕೇಳುತ್ತಲೂ, ತಮಗೆ ತಿಳಿದುದನ್ನು ಅವರಿಗೆ ಹೇಳುತ್ತಲೂ, ಅವರೆಲ್ಲ ಸುಖದಿಂದ ಕಾಲಕಳೆದರು. ಅನೇಕ ಕೋಟಿಸಂಖ್ಯೆಯಲ್ಲಿದ್ದ ರಥಗಳನ್ನೂ, ಆನೆಗಳನ್ನೂ, ಅಶ್ವಗಳನ್ನೂ ರತ್ನಾದಿಗಳನ್ನೂ, ಮನುಷ್ಯರನ್ನೂ ಬಿಟ್ಟು ಬಂದಿದ್ದರೂ, ಪಾಂಡವರು ಸ್ವರ್ಗದಲ್ಲಿ ದೇವತೆಗಳು ಸುಖಿಸುವಂತೆಯೇ ಕಾಡಿನಲ್ಲೂ ಸುಖಿಸಿದರು. ನಿತ್ಯವೂ ಒಂದು ಲಕ್ಷ ಗೋವುಗಳನ್ನೂ, ಒಂದು ನೂರು ಸುವರ್ಣಭಾರಗಳನ್ನೂ ದಾನಮಾಡುತ್ತಿದ್ದ ಯುಧಿಷ್ಠಿರ, ಸೋದರಸಮೇತನಾಗಿ ಆಗಲೂ ಇಂದ್ರನಂತೆಯೇ ಸುಖಿಸಿದ.

## ಮತ್ತೊಮ್ಮೆ ವಿದುರನ ಹಿತೋಕ್ತಿ

ಪಾಂಡವರು ಹೊರಟುಹೋದಮೇಲೆ ''ಈಗೇನು ಮಾಡುವುದು?'' ಎಂದು ತನ್ನನ್ನು ಪ್ರಶ್ನಿಸಿದ ಧೃತರಾಷ್ಟ್ರನಿಗೆ ವಿದುರ -''ಪಾಂಡವರನ್ನು ಮತ್ತೆ ಕರೆಸಿ ಅವರ ರಾಜ್ಯವನ್ನು ಅವರಿಗೆ

ಒಪ್ಪಿಸಿಬಿಡು'' ಎಂದೇ ಪುನಃ ಹೇಳಿದ. ಅವನ ಮಾತುಗಳನ್ನು ಕೇಳಿ ಕೆರಳಿದ ಧೃತರಾಷ್ಟ್ರ ''ತಿಳಿಯಿತು ! ನೀನು ನನ್ನ ಮಕ್ಕಳನ್ನು ಕಂಡರಾಗದವನು. ನಿನ್ನಿಂದ ನನಗೇನೂ ಆಗಬೇಕಿಲ್ಲ. ಬೇಕಿದ್ದರೆ ಇರು ; ಇಲ್ಲವಾದರೆ ತಿಳಿದಲ್ಲಿಗೆ ಹೊರಟುಹೋಗು'' ಎಂದು ನುಡಿದುಬಿಟ್ಟ. ಸ್ವಲ್ಪವೂ ಚಿಂತೆಗೊಳಗಾಗದೆ ವಿದುರ ಸಂತೋಷದಿಂದ ಪಾಂಡವರ ಬಳಿಗೆ ಹೊರಟುಬಿಟ್ಟ. ವಿದುರನು ಹೊರಟುಹೋಗುತ್ತಲೇ, ಆ ಪ್ರೀತಿಯ ತಮ್ಮನ ವಿಯೋಗವನ್ನು ಸಹಿಸಲಾಗದೆ ಧೃತರಾಷ್ಟ್ರ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದ. ಪ್ರಜ್ಞೆ ಮರಳಿದ ಮೇಲೆ ಅವನು ಸಂಜಯನನ್ನು ಕರೆಸಿ – ''ನಾನು ಬದುಕಬೇಕಾದಲ್ಲಿ ತಕ್ಷಣ ವಿದುರನನ್ನು ಕರೆದು ತಾ'' ಎಂದು ಹೇಳಿ, ಅವನನ್ನು ಕಳಿಸಿಕೊಟ್ಟ. ಸಂಜಯನು ಪಾಂಡವರ ಬಳಿಗೆ ಹೋಗಿ ವಿಷಯವನ್ನು ತಿಳಿಸಿ, ವಿದುರನನ್ನು ಕರೆದ. ವೈಯಕ್ತಿಕ ದ್ವೇಷವಿಲ್ಲದ ವಿದುರನೂ ಕೂಡಲೇ ಹಿಂದಿರುಗಿ ಅಣ್ಣನಿಗೆ ನಮಸ್ಕರಿಸಿದ. ಧೃತರಾಷ್ಟ್ರ ಆನಂದದಿಂದ ಅವನನ್ನು ಗಾಢವಾಗಿ ಆಲಿಂಗಿಸಿಕೊಂಡ. ತೊಡೆಯಮೇಲೆ ಕುಳ್ಳಿರಿಸಿಕೊಂಡು ನೆತ್ತಿಯನ್ನು ಮೂಸಿದ. ಅವನಿಗೆ ಆಗ ಉಂಟಾದ ಆನಂದಕ್ಕೆ ಪಾರವೇ ಇರಲಿಲ್ಲ.

ವಿದುರನು ಮತ್ತೆ ಬಂದದ್ದನ್ನು ಕಂಡ ಕೌರವರ ಮನಸ್ಸು ಕೋಪದಿಂದ ಕುದಿಯಿತು. ಮತ್ತೆ ಸಭೆ ಸೇರಿದ ಅವರೆಲ್ಲರೂ ಎಲ್ಲ ಪಾಂಡವರನ್ನಾಗಲೀ ಅಥವಾ ಅವರಲ್ಲಿ ಒಬ್ಬನನ್ನಾಗಲೀ ಮೋಸದಿಂದ ಕೊಂದುಬಿಡಬೇಕೆಂದು ತೀರ್ಮಾನಿಸಿ, ಕರ್ಣನೊಂದಿಗೆ ಹೊರಟುನಿಂತರು. ಅದನ್ನು ತಿಳಿದ ಸಕಲಲೋಕಗಳ ಅಂತರ್ಯಾಮಿಯೂ, ಒಡೆಯನೂ ಆದ ವ್ಯಾಸರೂಪಿ ವಿಷ್ಣುವು ಧೃತರಾಷ್ಟ್ರನ ಬಳಿಗೆ ಬಂದು ಎಲ್ಲವನ್ನೂ ತಿಳಿಸಿ, ''ನಿನ್ನ ಮಕ್ಕಳ ಈ ಕಾರ್ಯವನ್ನು ನಿಲ್ಲಿಸು'' ಎಂದು ಅಪ್ಪಣೆ ಮಾಡಿದರು – ''ಇವರೆಲ್ಲ ಹಾಗೆ ಹೋದಲ್ಲಿ ಬಂಧುಸಮೇತರಾಗಿ ಪಾಂಡವರಿಂದಾಗಿ ಮೃತ್ಯುವಶರಾಗುವರು'' ಎಂದು ಎಚ್ಚರಿಸಿದರು. ''ದಯವಿಟ್ಟು ತಾವೇ ಅವರಿಗೆಲ್ಲ ಬುದ್ಧಿವಾದ ಹೇಳಿ ತಡೆಯಬೇಕು'' ಎಂಬ ಅವನ ಪ್ರಾರ್ಥನೆಗೆ ''ನಾನು ಅವರೊಂದಿಗೆ ಮಾತನಾಡಲು ಇಚ್ಛಿಸುವುದಿಲ್ಲ'' ಎಂದು ವ್ಯಾಸರು ಉತ್ತರಿಸಿದರು. ''ನನ್ನ ಶಿಷ್ಯ ಮೈತ್ರೇಯ ಮುನಿ ಇಲ್ಲಿಗೆ ಬಂದು, ನಿನ್ನ ಮಕ್ಕಳಿಗೆ ಬುದ್ಧಿವಾದ ಹೇಳುವನು. ಅದನ್ನು ಅವನು ಕೇಳಿದರೆ ಸರಿ ; ಇಲ್ಲವಾದರೆ ಅವನು ನಿನ್ನ ಮಕ್ಕಳನ್ನು ಶಪಿಸುವುದು ನಿಶ್ಚಿತ'' ಎಂದು ಹೇಳಿ ಹೊರಟುಬಿಟ್ಟರು.

'ಈ ದುರ್ಯೋಧನಾದಿಗಳು ಈಗಲೇ ಪಾಂಡವರಿಂದ ಕೊಲ್ಲಲ್ಪಟ್ಟರೆ ಭೂಭಾರಹಾನಿಯು ಸಮಗ್ರವಾಗಿ ಆಗುವುದಿಲ್ಲ' ಎಂಬ ವಿಚಾರದಿಂದಲೇ ವ್ಯಾಸರು ಹಾಗೆ ದುರ್ಯೋಧನಾದಿಗಳ ಪ್ರಯತ್ನವನ್ನು ತಡೆಯಬಯಸಿದ್ದು. ಪ್ರೇರಣೆ ಮಾತ್ರದಿಂದಲೇ ಸಕಲಜಗತ್ತನ್ನು ನಿಯಂತ್ರಿಸುವ ಪರಮಾತ್ಮನಾದ ಅವರು ಹೀಗೆ ಒಮ್ಮೊಮ್ಮೆ ಮಾತುಗಳಿಂದಲೂ ಕೆಲವು ಕಾರ್ಯಗಳನ್ನು ನಡೆಸುವುದುಂಟು.

## ದುರ್ಯೋಧನನಿಗೆ ಮೈತ್ರೇಯರ ಶಾಪ

ಅದೇ ರೀತಿ ಸ್ವಲ್ಪಸಮಯದಲ್ಲಿಯೇ ವ್ಯಾಸರು ತಿಳಿಸಿದ್ದಂತೆ ಮೈತ್ರೇಯಮುನಿ ಆಗಮಿಸಿದರು. ಅವರನ್ನು ಗೌರವದಿಂದ ಸ್ವಾಗತಿಸಿದ ಧೃತರಾಷ್ಟ್ರ ಅಲ್ಲಿಗೆ ತನ್ನ ಮಕ್ಕಳನ್ನೂ , ಕರ್ಣ ಶಕುನಿಯರನ್ನೂ ಕರೆಸಿದ. ಮೈತ್ರೇಯರು ಪಾಂಡವರ ಗುಣಗಳನ್ನು ವರ್ಣಿಸಿ, ವಿಶೇಷವಾಗಿ ಭೀಮನ ಬಲವನ್ನು ಕೊಂಡಾಡಿದರು. ಭೀಮನಿಂದ ಕಿರ್ಮೀರ ಸತ್ತ ವಿಷಯವನ್ನು ತಿಳಿಸಿ, ಅಂತಹ ಪಾಂಡವರಿಗೆ ರಾಜ್ಯವನ್ನು ಹಿಂದಿರುಗಿಸಲು ಉಪದೇಶಿಸಿದರು. ಅವರ ಮಾತನ್ನು ಕೇಳಿ ಗಟ್ಟಿಯಾಗಿ ನಕ್ಕು ಅಪಹಾಸ್ಯ ಮಾಡಿದ ದುರ್ಯೋಧನನು ತನ್ನ ತೊಡೆಯನ್ನು ಜೋರಾಗಿ ತಟ್ಟಿಕೊಂಡ. ಮಹಾತೇಜಸ್ವಿಯಾದ ಆ ಮುನಿ – ''ನಿನ್ನ ಈ ತೊಡೆ ಮುರಿಯಲೆಂದೇ ಘೋರಯುದ್ಧ ನಡೆಯುವುದು'' ಎಂದು ಶಪಿಸಿ ಮೇಲೆದ್ದರು. ಧೃತರಾಷ್ಟ್ರನು ಪರಿಪರಿಯಾಗಿ ಪ್ರಾರ್ಥಿಸಿಕೊಳ್ಳಲು, ''ನಿನ್ನ ಮಗ ರಾಜ್ಯವನ್ನು ಪಾಂಡವರಿಗೆ ಹಿಂದಿರುಗಿಸಿದಲ್ಲಿ ನನ್ನ ಶಾಪ ತಟ್ಟದು'' ಎಂದು ನುಡಿದು ಹೊರಟೇ ಬಿಟ್ಟರು. ಧೃತರಾಷ್ಟ್ರನ ಅಪೇಕ್ಷೆಯಂತೆ ವಿದುರ ವಿವರಿಸಿದ ಕಿರ್ಮೀರವಧೆಯ ವಿವರವನ್ನು ಕೇಳಿ ದುರ್ಯೋಧನ ಭಯದಿಂದ ಕಂಪಿಸಿದ.

## ಪಾಂಡವರ ಬಳಿಗೆ ಶ್ರೀಕೃಷ್ಣನ ಆಗಮನ

ಕಾಡಿನಲ್ಲಿ ಸುಖವಾಗಿಯೇ ವಾಸಿಸುತ್ತಿದ್ದ ಪಾಂಡವರು, ತಮ್ಮ ವಿಷಯವನ್ನೆಲ್ಲ ಕೃಷ್ಣನಿಗೆ ಹೇಳಿಕಳುಹಿಸಿದರು. ಅದನ್ನು ಕೇಳಿದ ಕೃಷ್ಣನು ಸತ್ಯಭಾಮೆಯೊಂದಿಗೆ ಅವರ ಬಳಿಗೆ ಧಾವಿಸಿದ. ದ್ರುಪದ ಮೊದಲಾದ ಪ್ರಮುಖ ಸಂಬಂಧಿಗಳೂ ಅಲ್ಲಿಗೆ ಆಗಮಿಸಿದರು. ವಿಷಯ ತಿಳಿದು ಕೌರವರ ಮೇಲೆ ಸಿಡಿದೆದ್ದ ಕೃಷ್ಣನನ್ನು , ಪಾಂಡವರು ಬಹಳವಾಗಿ ಬೇಡಿ ಸಮಾಧಾನಪಡಿಸಿದರು. ಆ ವೇಳೆಗೆ [1]ಅಳುತ್ತ ದ್ರೌಪದಿ ಕೃಷ್ಣನ ಪಾದಗಳಿಗೆ ನಮಸ್ಕರಿಸಿದಳು. ಚರಣಗಳಿಗೆರಗಿದ ಅವಳು ಸ್ವತಂತ್ರನಾದ ಅವನನ್ನು ಅಪಾರವಾಗಿ ಸ್ತುತಿಸಿದಳು – ''ವಿಚಾರಕ್ಕೂ ಎಟುಕದ ಅನಂತಕಲ್ಯಾಣಗುಣಗಳ ಸಾಗರನೇ, ಎಲ್ಲ ದೋಷಗಳಿಂದ ದೂರಾದವನೇ, ರಮಾಬ್ರಹ್ಮರುದ್ರಾದಿ ಎಲ್ಲ ದೇವತೆಗಳಿಂದ ಸದಾ ವಂದಿತನೇ, ಎಲ್ಲ ಆಗುಹೋಗುಗಳಿಗೆ ಮುಖ್ಯಕಾರಣನೇ, ಎಲ್ಲ ಜೀವರಿಗೂ ಒಡೆಯನೇ, ಮುಕ್ತರಿಗೂ ನೆಲೆಯೇ, ಎಲ್ಲ ಜಗತ್ತಿನ ಒಡೆಯನೇ'' ಮುಂತಾಗಿ ಸ್ತುತಿಸಿ ತನ್ನೆಲ್ಲ ವಿಷಯವನ್ನು ಅರಿಕೆ ಮಾಡಿಕೊಂಡಳು ; ಅವಳು ಶೇಷರುದ್ರಗರುಡರಿಗಿಂತಲೂ ಶ್ರೀಹರಿಗೆ ಹೆಚ್ಚು ಪ್ರೀತ್ಯಾಸ್ಪದಳಷ್ಟೆ! ಎಲ್ಲ ವಿಷಯವನ್ನು ಕೇಳಿದ ಕೃಷ್ಣನು ''ಆ ದುರ್ಯೋಧನಾದಿಗಳ ಹೆಂಡಂದಿರೆಲ್ಲರೂ ಭೀಮನಿಂದ ಮೃತಪಟ್ಟ ಗಂಡಂದಿರನ್ನು ಅಪ್ಪಿಕೊಂಡು, ಮುಡಿಬಿಚ್ಚಿಕೊಂಡು ಗೋಳಿಡುವುದನ್ನು ನಿನಗೆ ತೋರಿಸುವೆ ; ಯೋಚನೆ ಬೇಡ'' ಎಂದು ಪ್ರತಿಜ್ಞೆ ಮಾಡಿದ.

---

೧. ಇಲ್ಲಿ ದ್ರೌಪದಿಯು ಅಳುವುದು ಎಂದರೆ ಅವಳ ದೇಹದೊಳಗೆ ನೆಲೆಸಿದ್ದ ಶಚಿ ಮೊದಲಾದ ದೇವತೆಗಳು ಅಳುವುದು ಎಂದೇ ಅರ್ಥ ; ಮುಖ್ಯವಾಗಿ ದ್ರೌಪದಿಯು ದುಃಖದ ಸ್ಪರ್ಶವನ್ನೇ ಹೊಂದದ ಋಜುದೇವತೆಯಾದ್ದರಿಂದ ಅವಳ ಅಳು ಲೋಕದೃಷ್ಟಿಯದು ಹಾಗೂ ಅಸುರಮೋಹಕವಾದದ್ದು ಎಂದು ತಿಳಿಯಬೇಕು : 'ಪ್ರಮದದ ಸುಧಿಯಾಂ ಮೋಹಕ ದ್ವೇಷಭಾಜಾಮ್' ಎಂಬಂತೆ.

## ಸಾಲ್ವವಧೆಯ ಕಥೆ

ಅನೇಕ ವಿಧವಾದ ಹಿತನುಡಿಗಳಿಂದ ಅವಳನ್ನು ಸಾಂತ್ವನಪಡಿಸಿದ ಕೃಷ್ಣ ಮತ್ತೆ ನುಡಿದ - ''ನಾನು ಆ ಸಮಯದಲ್ಲಿ ಎದುರಿಗಿದ್ದಿದ್ದರೆ ಇಂತಹ ಅನರ್ಥ ಉಂಟಾಗುತ್ತಿರಲಿಲ್ಲ. ಆದರೆ ನಾನಾಗ ಪಾಪಿಯಾದ ಸಾಲ್ವರಾಜನ ಮೇಲೆ ಯುದ್ಧಕ್ಕೆ ಹೊರಟಿದ್ದೆ. ಕೊನೆಗೂ ಆ ಪಾಪಿ ಸತ್ತ'' ಎಂದ. ಕೃಷ್ಣನಿಗೆ ಹತ್ತಿರ-ದೂರಗಳ ವ್ಯತ್ಯಾಸವಾಗಲೀ, ಕಾಲಾದಿಗಳ ಅಡೆತಡೆಯಾಗಲೀ ಎಂದೂ ಇಲ್ಲ; ಅವನಿಗೆ ಎಟುಕದ ವಸ್ತು ಎಲ್ಲೂ ಎಂದೂ ಇಲ್ಲ. ಅವನಿಗೆ ಅಶಕ್ತಿಯ ಹೆಸರೇ ಇಲ್ಲ. ಆದರೂ ಮನುಷ್ಯರ ನಡತೆಯನ್ನು ಅನುಕರಿಸುತ್ತ ಅವನು ಹಾಗೆ ಒಮ್ಮೊಮ್ಮೆ ನುಡಿಯುವುದುಂಟು. ದುರ್ಯೋಧನಾದಿಗಳ ದೋಷಗಳು, ಭೀಮಾದಿಗಳ ಗುಣಗಳು ಹೆಚ್ಚಬೇಕೆಂಬುದೂ, ರಾಜಸೂಯಾದಿಗಳಿಂದುಂಟಾದ ಹೆಚ್ಚಿನ ಪುಣ್ಯವನ್ನು ಧರ್ಮರಾಜನಿಂದ ಕಿತ್ತು ದ್ರೌಪದಿ ಹಾಗೂ ಅವನ ಸೋದರರಲ್ಲಿ ಅವರವರ ಯೋಗ್ಯತೆಗೆ ಅನುಗುಣವಾಗಿ ತುಂಬಿಸಬೇಕೆಂದೂ, ಉದ್ದೇಶಿಸಿಯೇ ಶ್ರೀಕೃಷ್ಣನು ಅಂತಹ ಪ್ರಸಂಗಕ್ಕೆ ಎಡೆ ಇತ್ತಿದ್ದ.

ಅಧಿಕಪುಣ್ಯವನ್ನು ಹರಿ ದ್ವೇಷಿಸುವನು ಎಂಬ ಕಾರಣದಿಂದ ''ಏಧಮಾನದ್ವಿಟ್'' ಎಂಬುದಾಗಿ ಅವನಿಗೆ ವೇದಗಳಲ್ಲಿ ಹೆಸರಿದೆ. ತಮ್ಮ ಯೋಗ್ಯತೆಗೆ ಮೀರಿ ಭೀಷ್ಮ ದ್ರೋಣ ಧೃತರಾಷ್ಟ್ರಾದಿಗಳು ಸಂಪಾದಿಸಿದ ಪುಣ್ಯವನ್ನು , ಪಾಂಡವರಿಗೆ ವರ್ಗಾಯಿಸುವ ಮತ್ತೊಂದು ಉದ್ದೇಶವೂ ಅವನಿಗೆ ಇದ್ದಿತು. ದುರ್ಯೋಧನಾದಿಗಳ ಪಾಪವು ವಿಶೇಷವಾಗಿ ಹೆಚ್ಚಲು ಸಹ ಆ ಕಾರ್ಯ ಸಾಧಕವಾಗಿತ್ತು. ಪಾಂಡವರು ತಮಗೆ ಪ್ರಿಯರೆಂಬುದನ್ನು ಸ್ವಯಂ ವ್ಯಾಸರೇ ಧೃತರಾಷ್ಟ್ರನಿಗೆ ಆಮೇಲೆ ತಿಳಿಸಿದರಲ್ಲವೇ ! ಭೀಮಸೇನ ಗುರುವಾದ್ದರಿಂದ ದ್ಯೂತಕಾಲದಲ್ಲಿ [೧]ಅರ್ಜುನಾದಿಗಳು ಕ್ಷಮೆ ವಹಿಸಿದ್ದು ಸಹ ಅಷ್ಟಾಗಿ ಧರ್ಮವೆನ್ನಿಸಲಿಲ್ಲ. ಆದರೆ ಭೀಮನಿಗೆ ಮಾತ್ರವೇ ಅದೂ ಪೂರ್ಣಧರ್ಮ ಎನ್ನಿಸಿದ್ದು , ಅತಿಕ್ಲೇಶವನ್ನು ಸಹಿಸಿದ್ದರಿಂದ ದ್ರೌಪದಿಗೂ ಅದು ಹಿರಿಯ ಧರ್ಮವೇ ಎನ್ನಿಸಿತು. 'ಶಾಪ ಕೊಡಕೂಡದು' ಎಂಬ ಭೀಮನ ಮನಸ್ಸನ್ನು ಅವಳು ಮಾತ್ರವೇ ಸರಿಯಾಗಿ ತಿಳಿದಿದ್ದಳು. ಈ ಎಲ್ಲ ಹಿನ್ನೆಲೆಯಲ್ಲಿ ಅವರವರ ಯೋಗ್ಯತೆಗೆ ತಕ್ಕಂತೆ ಧರ್ಮವೃದ್ಧಿ ಮೊದಲಾದವುಗಳನ್ನು ಮಾಡುವುದೇ ಆ ಪ್ರಸಂಗದ ಉದ್ದೇಶವಾಗಿತ್ತು. ಅದಕ್ಕಾಗಿಯೇ ಕೃಷ್ಣ ಆ ಸಮಯದಲ್ಲಿ ತಾನು ಎದುರಿಗೆ ಸನ್ನಿಹಿತನಾಗಿರಲಿಲ್ಲ ; ಅದಕ್ಕೆಂದೇ ತಾನು ಆ ಸಮಯದಲ್ಲಿ ಅಲ್ಲಿ ಉಪಸ್ಥಿತನಾಗಿರದಿದ್ದರಿಂದ ಅಷ್ಟೆಲ್ಲ ಆಯಿತು ಎಂದು ಹೇಳಿದ.

---

೧. ಭೀಮಸೇನನಿಗೆ ಯುಧಿಷ್ಠಿರ ಮಾತ್ರ ಅಣ್ಣ. ಆದ್ದರಿಂದ, ಅವನ ಮಾತನ್ನು ಗೌರವಿಸುವ ಲೋಕನೀತಿ ಅಗತ್ಯವಾಗಿತ್ತು. ಅರ್ಜುನಾದಿ ಇತರ ಮೂವರಿಗೆ ಯುಧಿಷ್ಠಿರನಂತೆ ಭೀಮಸೇನನೂ ಅಣ್ಣನೇ. ಆದ್ದರಿಂದ, ಅವರಿಬ್ಬರಿಗೂ ಸಹ ಸೂಕ್ತ ಗೌರವ ತೋರುವ ಹೊಣೆಗಾರಿಕೆ ಅವರಿಗೆ ಇದ್ದಿತು. ಆದರೆ, ಅವರು ಯುಧಿಷ್ಠಿರನ ಸಂಯಮವನ್ನಷ್ಟೇ ಅನುಮೋದಿಸುತ್ತಾ ಭೀಮಸೇನನ ಭಾಗವತಧರ್ಮದಲ್ಲಿ ಸೂಕ್ತರೀತಿಯಲ್ಲಿ ಪಾಲ್ಗೊಳ್ಳದ್ದು ಒಂದುರೀತಿಯಲ್ಲಿ ಧರ್ಮಲೋಪವೇ ಆಗಿ ಅವರ ಹೆಚ್ಚಿನ ಪುಣ್ಯ ಹ್ರಾಸಗೊಂಡಿತು ಎಂದು ಭಾವ.

## ಸಾಲ್ವನ ಪರಾಭವ

"ಸಾಲ್ವನು ಆಕ್ರಮಣ ಮಾಡಿದ್ದನ್ನು ಕೇಳಿ ನಾನು ಪ್ರದ್ಯುಮ್ನ ಮೊದಲಾದವರನ್ನು ಆಗ ಕಳುಹಿಸಿಕೊಟ್ಟೆನಲ್ಲವೇ ! ಅವರು ದ್ವಾರಕೆಯನ್ನು ಸೇರುವ ವೇಳೆಗಾಗಲೇ ಸಾಲ್ವ ಸೌಭದ ಮೂಲಕ ದ್ವಾರಕೆಯನ್ನು ಸಮೀಪಿಸುತ್ತಿದ್ದ. ಸಾಲ್ವನಿಂದ ಬಹಳವಾಗಿ ಪೀಡಿತವಾದ ದ್ವಾರಕೆಯನ್ನು ರಕ್ಷಿಸಲು, ಪ್ರದ್ಯುಮ್ನನು ಯಾದವರ ಗುಂಪನ್ನು ಕರೆದುಕೊಂಡು, ಸೋದರರೊಂದಿಗೆ ಪಟ್ಟಣದಿಂದ ಹೊರ ಬಂದ. ನನ್ನ ಮಗನನ್ನು ಕಂಡು, ಸಾಲ್ವ ವಿಮಾನದಿಂದ ಇಳಿದು ರಥವನ್ನೇರಿ, ಯುದ್ಧಕ್ಕೆ ತೊಡಗಿದ. ಬಹಳಕಾಲ ಭಯಂಕರವಾಗಿ ಅವನೊಂದಿಗೆ ಕಾದಿದ ನನ್ನ ಮಗನು ಅವನ ಅಸ್ತ್ರಗಳನ್ನೆಲ್ಲ ತನ್ನ ಮಹಾಸ್ತ್ರಗಳಿಂದ ತಡೆದು, ಅವನನ್ನು ಕೊಲ್ಲಲೆಂದು ನಾನು ಕೊಟ್ಟಿದ್ದ ಒಂದು ಅಮೋಘವಾದ ಬಾಣವನ್ನು ಕೈಗೆತ್ತಿಕೊಂಡ. ಆಗ ಆಕಾಶದಲ್ಲಿ ಮಾತೊಂದು ಕೇಳಿಸಿತು – "ಈ ಹಿಂದೆ ನಾರಾಯಣನು ಕೃಷ್ಣಾವತಾರದಿಂದ ಈ ಸಾಲ್ವನನ್ನು ಕೊಲ್ಲುವುದಾಗಿ ಸಂಕಲ್ಪಿಸಿದ್ದ. ಆದ್ದರಿಂದಲೇ ಪರಶುರಾಮ ರೂಪದಿಂದಲೂ ಸಾಲ್ವನನ್ನು ಕೊಲ್ಲದೆ, ಸೋಲಿಸಿದ್ದಾನೆ ಮಾತ್ರ. ಆದ್ದರಿಂದ ಇವನು ನಿನ್ನಿಂದ ಸಾಯಲಾರ. ಚಕ್ರಾಯುಧನಾದ ಶ್ರೀಕೃಷ್ಣನಿಗೆ ಪ್ರಿಯವಾಗಿರುವ ಈ ಬಾಣ ತುಂಬಾ ಅಮೋಘವಾದುದು. ಆದ್ದರಿಂದ ನೀನೀಗ ಈ ಬಾಣವನ್ನು ಪ್ರಯೋಗಿಸಬೇಡ. ಸಾಲ್ವನನ್ನು ಹಿಂದಿರುಗುವಂತೆ ನಾನು ಅವನ ಮನಸ್ಸಿನಲ್ಲಿಯೇ ಪ್ರೇರಿಸುವೆ." ವಾಯುದೇವರ ಈ ಮಾತನ್ನು ಕೇಳಿ ಪ್ರದ್ಯುಮ್ನ ಬಾಣವನ್ನು ಹಿಂದಕ್ಕೆ ತೆಗೆದುಕೊಂಡ. ಈ ವೇಳೆಗೆ ಸಾಲ್ವನಲ್ಲಿ "ಈ ಹುಡುಗನೊಂದಿಗೆ ಏನು ಕಲಹ ; ಕಾದುವುದಿದ್ದರೆ ಕೃಷ್ಣನೊಂದಿಗೇ" ಎಂಬ ವಿಚಾರ ಮಾಡಿ ಅವನು ಸೌಭವನ್ನೇರಿ ತನ್ನ ಪಟ್ಟಣಕ್ಕೆ ಹಿಂದಿರುಗಿದ. ಪ್ರದ್ಯುಮ್ನ , ಸಾಂಬ, ಗದಾ, ಸಾರಣ, ಚಾರುದೇಷ್ಣರು ಸಾಲ್ವನ ಸೇನೆಯನ್ನೆಲ್ಲ ಅವನ ಮಂತ್ರಿಗಳ ಸಮೇತ ಸಂಹರಿಸಿ, ಸಂತೋಷದಿಂದ ಪಟ್ಟಣವನ್ನು ಸೇರಿಕೊಂಡರು.

## ಶ್ರೀಕೃಷ್ಣನಿಂದ ಸಾಲ್ವನ ವಧೆ

ಆ ವೇಳೆಗೆ ನಾನೂ ಪಟ್ಟಣವನ್ನು ಸೇರಲು, ಅವರೆಲ್ಲ ನನಗೆ ವಿಷಯ ತಿಳಿಸಿದರು. ನನ್ನ ಆ [1]ಬಾಣವು ಕೈಯಲ್ಲಿದ್ದರೂ ವಿಜಯವು ಖಚಿತವಾದ್ದರಿಂದ ಸಾಲ್ವನು ತನ್ನ ಪಟ್ಟಣಕ್ಕೆ ಆ ರೀತಿ ಹಿಂದಿರುಗಬೇಕಾಯಿತು. ನನ್ನ ಪಟ್ಟಣ ದಾಳಿಗೆ ತುತ್ತಾದದ್ದನ್ನು ಕಂಡು ನಾನು ಅವನನ್ನು ಬೆನ್ನಟ್ಟಿದೆ. ಆ ವೇಳೆಗೆ ಅವನೂ ಸೌಭದ ಮೇಲೆ ಕುಳಿತು ಮತ್ತೆ ದಾಳಿಗೆ ಸನ್ನಾಹ ನಡೆಸಿದ್ದ. ಅವನ ಶಸ್ತ್ರಾಸ್ತ್ರಗಳನ್ನೆಲ್ಲ ನಾನು ಕತ್ತರಿಸಿ ಹಾಕಲು, ಆ ಪಾಪಿ ಸಾಲ್ವ ಮಾಯೆಯನ್ನು ಸೃಷ್ಟಿಸಿದ. ಸ್ವಲ್ಪ ಕಾಲ ಅದರೊಂದಿಗೆ ಆಟವಾಡಿದ ನಾನು ಜ್ಞಾನಾಸ್ತ್ರದಿಂದ ಅವನ ಆ ಮಾಯೆಯನ್ನೆಲ್ಲ

೧. ಮೇಲ್ನೋಟಕ್ಕೆ ಪ್ರದ್ಯುಮ್ನನಿಗೆ ಕೃಷ್ಣ ನೀಡಿದ್ದ ಬಾಣದ ಪ್ರಯೋಗವಾಗದೆಯೂ ಸಾಲ್ವನು ಹಿಂತಿರುಗುವಂತಾಯಿತು ಎನ್ನಿಸುವುದು. ಅದು ಹಾಗಲ್ಲ ; ಆ ಬಾಣವು ಪ್ರಯೋಗಿಸದೆ ಕೇವಲ ಜೊತೆ ಇದ್ದಾಗಲೂ ಸಹ ಗೆಲುವು ನೀಡುವಂತಹ ಅಪೂರ್ವತೆಯನ್ನು ಪಡೆದಿತ್ತು. ಅದರಿಂದಾಗಿ, ಪ್ರದ್ಯುಮ್ನನಿಗೆ ಸಾಲ್ವನನ್ನು ಹಾಗೆ ಹಿಮ್ಮೆಟ್ಟಿಸುವಂತಹ ಸಾಮರ್ಥ್ಯ ಒದಗಿತ್ತು ಎಂದು ತಿಳಿಯಬೇಕು.

ನಾಶ ಮಾಡಿ, ಅವನ ಹಿಂಬಾಲಕರಾದ ಅನೇಕ ರಾಕ್ಷಸರನ್ನು ಸಂಹರಿಸಿದೆ. ಚಕ್ರದಿಂದ ಅವನ ಸೌಭದ ರೆಕ್ಕೆಗಳನ್ನು ಕತ್ತರಿಸಿ, ಅದನ್ನು ಸಾಗರದಲ್ಲಿ ಬೀಳಿಸಿದೆ. ರಥವೇರಿ ಮತ್ತೆ ನುಗ್ಗಿದ ಅವನ ತೋಳುಗಳನ್ನು ಬಾಣದಿಂದಲೂ, ಅವನ ರಥವನ್ನು ಗದೆಯಿಂದಲೂ, ಅವನ ತಲೆಯನ್ನು ಚಕ್ರದಿಂದಲೂ ಕತ್ತರಿಸಿ ಹಾಕಿದೆ. ಬ್ರಹ್ಮಾದಿದೇವತೆಗಳೆಲ್ಲ ಆನಂದದಿಂದ ಸ್ತುತಿಸುತ್ತಿರುವಂತೆಯೇ, ದ್ವಾರಕೆಗೆ ಹಿಂದಿರುಗಿದೆ. ಹೀಗೆ ಕಾರ್ಯಗೌರವದಿಂದ ನಾನು ದೂರವಿರಬೇಕಾದ್ದರಿಂದ ನಿಮಗೆಲ್ಲ ಇಂತಹ ಪರಿಸ್ಥಿತಿ ಉಂಟಾಯಿತು'' ಎಂದು ವಿವರಿಸಿದ ಕೃಷ್ಣನು ಪಾಂಡವರಿಗೆ ನೆಮ್ಮದಿ ನೀಡಲೆಂದು ಅನೇಕ ದಿನಗಳ ಕಾಲ ಅಲ್ಲಿಯೇ ಉಳಿದ. ದ್ರೌಪದಿಯನ್ನು ಸಮಾಧಾನ-ಪಡಿಸುತ್ತಾ, ಸತ್ಯಭಾಮೆಯೂ ಕೃಷ್ಣನ ಜೊತೆಯೇ ಉಳಿದಳು.

## ಕೃಷ್ಣನೊಂದಿಗೆ ಪಾಂಡವರ ಮಕ್ಕಳು

ಪಾಂಡವರ ಎಲ್ಲ ಪತ್ನಿಯರೂ, ಪುತ್ರರೂ ಪಾಂಡವರೊಂದಿಗೆ ಕಾಡಿಗೆ ಬಂದಿದ್ದರು. ಅನಂತರ ದ್ರೌಪದಿಯನ್ನು ಸಮಾಧಾನಪಡಿಸಿದ ಧೃಷ್ಟದ್ಯುಮ್ನ ಅವಳ ಮಕ್ಕಳನ್ನು ಕರೆದುಕೊಂಡು ತನ್ನ ದೇಶಕ್ಕೆ ಹೊರಟ. ಧೃಷ್ಟಕೇತುವು (ಧರ್ಮರಾಜನ ಪತ್ನಿಯಾದ) ದೇವಕಿಯನ್ನು , ಕಾಶೀ-ರಾಜನು ಕಾಳೀದೇವಿಯನ್ನು ಕರೆದುಕೊಂಡು ಹೊರಟರು. ಉಳಿದ ಪತ್ನಿಯರು ಕುಂತಿಯ ಜೊತೆಯಲ್ಲಿಯೇ ಉಳಿದಿದ್ದರು. ಹಿಂದೆ ತಿಲೋತ್ತಮೆಯಾಗಿದ್ದ ಪಾರ್ವತೀ ಎಂಬ ಪತ್ನಿ ನಕುಲನಿಗೆ ಇದ್ದಳು. ಅವಳೊಂದಿಗೆ ನಕುಲಸಹದೇವರ ಇತರ ಪತ್ನಿಯರೂ ಕುಂತಿಯಿಂದ ತಡೆಯಲ್ಪಟ್ಟು ಅಲ್ಲಿಯೇ ಉಳಿದಿದ್ದರು. ಸುಭದ್ರೆ ಹಾಗೂ ಅಭಿಮನ್ಯು ಇಬ್ಬರನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಕೃಷ್ಣ ಸತ್ಯಭಾಮೆಯೊಂದಿಗೆ ಪಾಂಡವರಿಂದ ಬೀಳ್ಕೊಂಡು ದ್ವಾರಕೆಗೆ ಹೊರಟ. ಸ್ವಲ್ಪ ದಿನಗಳವರೆಗೆ ಪಾಂಚಾಲದೇಶದಲ್ಲಿದ್ದ ದ್ರೌಪದಿಯ ಮಕ್ಕಳು ಅನಂತರ ದ್ವಾರಾವತಿಗೇ ತೆರಳಿ, ಅಲ್ಲಿ ಕೃಷ್ಣನ ರಕ್ಷಣೆಯಲ್ಲಿ ನೆಲೆಸಿದರು.

## ಒಂದು ವರ್ಷ ಪೂರೈಸಿದ ವನವಾಸ

ಅಂದಿನಿಂದ ಮೊದಲ್ಗೊಂಡು ತನ್ನ ಕಾರ್ಯಕ್ಕಾಗಿ ಬಹಳವಾಗಿ ಪರಿತಪಿಸುತ್ತಾ ಧರ್ಮರಾಜ, ದ್ರೌಪದಿಯನ್ನು ಸೋದರರ ಪತ್ನಿಯಾಗಿ ಮಾತ್ರವೇ ನೋಡತೊಡಗಿದ. ಪಾಂಡವರು ಮುನಿ-ಗಳಿಗೆಲ್ಲ ನೀಡಿ ಉಳಿದ ಅನ್ನವನ್ನು ಭುಂಜಿಸುತ್ತಾ ವಾಸಿಸತೊಡಗಿದರು. ತಮ್ಮಂದಿರೆಲ್ಲರ ಭೋಜನ ಮುಗಿದ ಬಳಿಕವೇ ಧರ್ಮರಾಜ ತಾನು ಭೋಜನ ಮಾಡುತ್ತಿದ್ದ. ಅವನ ಅಪ್ಪಣೆಯನ್ನು ಮೀರಲಾರದೆ ತಮ್ಮಂದಿರು ಮೊದಲು ಭೋಜನ ಮಾಡಬೇಕಾಗುತ್ತಿತ್ತು. ಧರ್ಮರಾಜನ ಊಟವೂ ಪೂರೈಸಿದ ಮೇಲೆ ಕೊನೆಯದಾಗಿ ದ್ರೌಪದಿಯೊಬ್ಬಳೇ ಊಟ ಮಾಡುತ್ತಿದ್ದಳು. ಈ ರೀತಿ ಶ್ರೀಹರಿಯನ್ನು ನಂಬಿ, ಹರಿಗರ್ಪಿಸಿದ ಅನ್ನವನ್ನು ಮಾತ್ರವೇ ಭುಂಜಿಸುತ್ತಿದ್ದ ಅವರ ವನವಾಸದ ಒಂದು ವರ್ಷ ಪೂರೈಸಿತು.

## ಯುಧಿಷ್ಠಿರನಿಗೆ ಉಪದೇಶದ ಹಿನ್ನೆಲೆ

ಆಗೊಮ್ಮೆ ಭೀಮನ ಅಪ್ಪಣೆಯ ಮೇರೆಗೆ ತತ್ತ್ವಕೋವಿದಳಾದ ದ್ರೌಪದಿಯು ಧರ್ಮ-ರಾಜನೊಂದಿಗೆ ಮಾತಿಗೆ ತೊಡಗಿದಳು. ಅತ್ಯಂತ ಮೃದುಸ್ವಭಾವದ ಧರ್ಮರಾಜ ಹದಿನಾಲ್ಕನೆಯ ವರ್ಷದಲ್ಲೂ , ಹಿರಿಯರ ಅಂಜಿಕೆಯಿಂದಾಗಿ ರಾಜ್ಯವನ್ನು ಬಯಸದೆ ಇದ್ದಾನು ಎಂಬ ಕಾರಣದಿಂದ ಭೀಮಸೇನನು ಆ ರೀತಿ ದ್ರೌಪದಿಯನ್ನು ಆ ವಿಷಯದ ಪ್ರಸ್ತಾಪಕ್ಕಾಗಿ ಕಳುಹಿಸಿದ್ದ. ''ಕ್ಷಮೆಯು ಎಲ್ಲ ಕಡೆಗಳಲ್ಲೂ ಧರ್ಮವೆನ್ನಿಸಲಾರದು. ದುರ್ಜನರಲ್ಲಿ ತೋರುವ ಕ್ಷಮೆಯಂತೂ ಪಾಪಕ್ಕೇ ಕಾರಣವಾಗುವುದು. ವಿಶೇಷವಾಗಿ ಸಾಮರ್ಥ್ಯಶಾಲಿಗಳಾದ ರಾಜರಿಗಂತೂ ಕ್ಷಮೆಯು ಸರ್ವಥಾ ಶೋಭಿಸದು''. ಈ ಎಲ್ಲ ವಿಷಯವನ್ನು ಶಾಸ್ತ್ರದ ಆಧಾರದಿಂದ ಸಮರ್ಥಿಸಿ,''ಹದಿನಾಲ್ಕನೆಯ ವರ್ಷದಲ್ಲೂ ರಾಜ್ಯವನ್ನು ಕೊಡದ ಧೃತರಾಷ್ಟ್ರಪುತ್ರರನ್ನು ಸಂಹರಿಸಿ ರಾಜ್ಯವನ್ನು ವಹಿಸಿಕೊಳ್ಳುವೆ'' ಎಂಬ ಶಪಥವನ್ನು ಧರ್ಮರಾಜನಿಂದ ಮಾಡಿಸುವ ಉದ್ದೇಶ ಭೀಮಸೇನನಿಗೆ ಇತ್ತು. ಅದು ಪ್ರಸ್ತಾಪವಾಗಿ ತೀರ್ಮಾನಿಸಲ್ಪಡಬೇಕು ಎಂಬ ದೃಷ್ಟಿಯಿಂದ ದ್ರೌಪದಿಯನ್ನು ಹಾಗೆ ಮೊದಲು ಕಳುಹಿಸಿಕೊಟ್ಟ.

## ದ್ರೌಪದಿಯ ಉಪದೇಶ

ದ್ರೌಪದಿ ಧರ್ಮರಾಜನಿಗೆ ನುಡಿದಳು - ''ರಾಜನಾದವನು ದುಷ್ಟರಲ್ಲಿ ಕ್ಷಮೆಯನ್ನು ವಹಿಸುವುದು ಎಂದೂ ಧರ್ಮವೆನ್ನಿಸದು. ಅದನ್ನು ನೀನು ಸದಾ ಕಾಲ ವ್ಯರ್ಥವಾಗಿ ಹೊಂದಿ-ರುವಿ.'' ಧರ್ಮರಾಜ - ''ಕ್ಷಮೆಯೇ ಸರ್ವದಾ ಶ್ರೇಷ್ಠವಾದದ್ದು. ಜಗತ್ತೆಲ್ಲ ಸದಾ ಅದರಿಂದಲೇ ನಿಂತಿದೆ. ಎಲ್ಲ ಜಗತ್ತುಗಳಿಗೂ ಉಂಟಾಗುವ ಸುಖದುಃಖಗಳಿಗೆಲ್ಲ ನಾರಾಯಣನೇ ಮುಖ್ಯ-ಕಾರಣ. ಅವನಿಂದಲೇ ಅವೆಲ್ಲ ಜಗತ್ತಿಗೆ ಉಂಟಾಗುವುವು. ಆದ್ದರಿಂದ ಇಲ್ಲಿ ಯಾವ ವಿಷಯಕ್ಕೂ ಯಾರನ್ನು ದೂರಿಯೂ ಪ್ರಯೋಜನವಿಲ್ಲ. ಕ್ಷಮೆಯೊಂದೇ ಎಲ್ಲದರಲ್ಲೂ ಎಲ್ಲರಿಗೂ ಶ್ರೇಷ್ಠವಾದ ಧರ್ಮ'' ಎಂದು ವಾದಿಸತೊಡಗಿದ. ದ್ರೌಪದಿ ಪ್ರಶ್ನಿಸಿದಳು - ''ಎಲ್ಲರಲ್ಲಿಯೂ ಕ್ಷಮೆಯೇ ಧರ್ಮವೆನ್ನಿಸುವುದಾದರೆ, ರಾಜನಿರುವುದಾದರೂ ಏತಕ್ಕೆ? ಜನರ ಬದುಕಾದರೂ ಹೇಗೆ ನಡೆದೀತು? ಜಗತ್ತೆಲ್ಲ ದುಷ್ಟಜನಗಳಿಂದ ತುಂಬಿ ಹಾಳಾಗಿ ಹೋಗುವುದಿಲ್ಲವೆ? ವಿಷ್ಣುವೇ ಎಲ್ಲ ಜಗತ್ತಿನ ಪ್ರವರ್ತಕನೂ, ರಮಾಬ್ರಹ್ಮಾದಿ ಪ್ರಮುಖರಿಂದ ಕೂಡಿದ ಎಲ್ಲರೂ ಕಾಷ್ಠಾದಿಗಳಂತೆ ಅವನ ಅಧೀನರೂ ಎಂಬುದು ನಿಜ ; ಎಂದ ಮಾತ್ರಕ್ಕೆ ಪುರುಷಪ್ರಯತ್ನ ವ್ಯರ್ಥವೆಂದಲ್ಲ. ಅವನಿಂದಲೇ ಪುರುಷನು ಕಾರ್ಯಪ್ರವೃತ್ತನಾಗಿ, ಅದಕ್ಕನು-ಗುಣವಾದ ಶುಭಾಶುಭಫಲಗಳನ್ನು ಅನುಭವಿಸುವನು ; ಅವನ ನಿಯಂತ್ರಣ ಮಾತ್ರ ಬೇರಾರಿಗೂ ಆಗದು. ಆದ್ದರಿಂದ ಪುರುಷನೂ ಅವನ ಅಧೀನನೇ. ಪುರುಷಪ್ರಯತ್ನ ವ್ಯರ್ಥ-ವೆಂಬುದೇ ಶಾಸ್ತ್ರದ ಅಭಿಪ್ರಾಯವಾಗಿದ್ದಲ್ಲಿ ವೇದಗಳಲ್ಲೆಲ್ಲ ಕೇಳಿಬರುವ ವಿಧಿನಿಷೇಧಗಳು ಯಾರಿಗಾಗಿ ? ಹಾಗೆ ಪುರುಷನು ವಿಧಿನಿಷೇಧಗಳಿಗೆ ಪಾತ್ರನಲ್ಲದಿದ್ದಲ್ಲಿ, ಆ ವಿಧಿನಿಷೇಧಗಳಿಗೆಲ್ಲ

ಹರಿಯೇ ಪಾತ್ರನಾಗಬೇಕಾಗುವುದಲ್ಲವೆ? ಅಂದರೆ ಅವನಿಗೆ ಅವುಗಳ ಫಲದ ಲೇಪವೂ ಆಗಬೇಕಾಗುವುದಲ್ಲವೇ? ಆದರೆ ಸಂಪೂರ್ಣ ಸ್ವತಂತ್ರನಾದ ಶ್ರೀಹರಿಯು ಆ ರೀತಿ ಪುಣ್ಯ-ಪಾಪಗಳ ಲೇಪಕ್ಕೆ ತುತ್ತಾಗಲು ಹೇಗೆ ಸಾಧ್ಯ ? ಆದ್ದರಿಂದ ಜೀವನೇ ವಿಧಿನಿಷೇಧಗಳಿಗೆ ಪಾತ್ರನೆಂದಾಗುವುದಲ್ಲವೇ? ಎಂದಮೇಲೆ, ಪುರುಷಪ್ರಯತ್ನವು ವ್ಯರ್ಥ ಹೇಗಾದೀತು?'' ದ್ರೌಪದಿಯ ಮಾತಿಗೆ ಉತ್ತರಿಸಲಾಗದ ಧರ್ಮರಾಜ, ಕುತರ್ಕವನ್ನು ಆಶ್ರಯಿಸಿ, ''ನೀನು ಶ್ರೀಹರಿಗೂ ಅಸ್ವಾತಂತ್ರ್ಯವನ್ನು ಹೇಳುವಿಯೇನು ?'' ಎಂದು ಗದರಿದ. ಆ ರೀತಿ ಛಲದಿಂದ ಗದರಿಸಲ್ಪಟ್ಟರೂ ದ್ರೌಪದಿ ತಾನು ಸ್ತ್ರೀಯಾದ್ದರಿಂದ ಅವನನ್ನು ಕ್ಷಮಿಸಿಬಿಟ್ಟಳು. ಸ್ತ್ರೀಯರಿಗೆಂದೂ ಅತಿ ಮಾತುಗಾರಿಕೆ ಶೋಭಿಸುವುದಿಲ್ಲವಷ್ಟೆ ?

## ಭೀಮಗೀತೆ - ಜೀವಕರ್ತೃತ್ವವಿಚಾರ

ಅನಂತರ ಮುಂದೆ ಬಂದ ವೃಕೋದರನು ಧರ್ಮರಾಜನಿಗೆ ವಿವರಿಸಿದ - ''ಮಹಾರಾಜ ! ಶ್ರೀಹರಿಯು ಮಾತ್ರವೇ ಎಲ್ಲದಕ್ಕೂ ಕಾರಣನು ; ಬೇರೆಯವರಲ್ಲ, ಉಳಿದದ್ದೆಲ್ಲವೂ ಅವನ ಅಧೀನ ಎಂಬುದೂ ನಿಜ. ಆ ಶ್ರೀಹರಿಯು ಮಾತ್ರವೇ ಸ್ವತಂತ್ರನು. ಆದರೂ ಜೀವನು ವಿಹಿತಕರ್ಮವನ್ನು ಅಗತ್ಯವಾಗಿ ಮಾಡಲೇಬೇಕು. ಅದೇ ರೀತಿ ವಿಹಿತವಲ್ಲದ ಕರ್ಮವನ್ನು ಅತ್ಯಂತ ಯತ್ನದಿಂದ ತೊರೆಯಲೂ ಬೇಕು. ಪುರುಷನಿಂದ ಕಾರ್ಯವು ನಡೆಯುವುದು ಪ್ರತ್ಯಕ್ಷದಿಂದಲೇ ಸಿದ್ಧ. ಅದರಿಂದಲೇ ಶ್ರೀಹರಿಯ ಪ್ರೇರಣೆಯನ್ನು ಊಹಿಸಬೇಕಾಗುವುದು. ಜ್ಞಾನಿಯಾದವನು ವಿಷ್ಣುವಿನಿಂದ ವಿಹಿತವಾದ ತನ್ನ ಕರ್ತವ್ಯವನ್ನು ಮಾಡುತ್ತಾ, ಅದನ್ನು ಹರಿಪ್ರೇರಣೆಯೆಂದೇ ಬಗೆಯುವನು. ಅದರಿಂದಲೇ ಅವನಿಗೆ ಮಂಗಳಕರವಾದ ಗತಿಯೂ ಲಭಿಸುವುದು. ಕೆಟ್ಟ ಮನುಷ್ಯನು ಎಲ್ಲವನ್ನು ದೈವದ ಅಧೀನವೆಂದೇ ತಿಳಿದು, ತನ್ನ ಕರ್ತವ್ಯವನ್ನು ತೊರೆದು, ಅಧೋಗತಿಯನ್ನೇ ಹೊಂದುವನು. ಆದ್ದರಿಂದ ಸ್ವಕರ್ಮವನ್ನು ತಪ್ಪದೆ ಮಾಡಲೇ ಬೇಕು. ಇದೆಲ್ಲ ವಿಷ್ಣುವಿನ ಅಧೀನ ಎಂದು ಅರಿತೇ ಪ್ರತಿಯೊಬ್ಬನೂ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಬೇಕು. ಜೀವನಲ್ಲಿ ಕರ್ತೃತ್ವವಿದೆ ಎಂಬುದು ಪ್ರತ್ಯಕ್ಷಪ್ರಮಾಣದಿಂದಲೇ ಸಿದ್ಧವಾಗಿದೆ. ಅದೇ ರೀತಿ ಆಗಮದಿಂದಲೂ, ಯುಕ್ತಿಯಿಂದಲೂ ಎಲ್ಲವೂ ವಿಷ್ಣುವಿನ ವಶವೆಂಬುದು ಸಹ ಸಿದ್ಧವೇ ಆಗಿದೆ. ಆದ್ದರಿಂದ ಈ ಎರಡರಲ್ಲಿ ಯಾವುದನ್ನೂ ಸಹ ಅಲ್ಲಗಳೆಯಲು ಸಾಧ್ಯವಿಲ್ಲ. ಹೀಗೆ ತಿಳಿದೇ ಜ್ಞಾನಿಯಾದವನು ತನ್ನ ಸ್ವಕರ್ಮವನ್ನು ಆಚರಿಸುತ್ತ, ಅದರ ಪ್ರೇರಕನು ವಿಷ್ಣುವೆಂದೇ ತಿಳಿಯುವನು. ಆಗ ಅವನು ಮೂರೂ ಪ್ರಮಾಣಗಳನ್ನು ಅನುಸರಿಸಿದ-ವನಾಗುವನು. ಈ ರೀತಿ ಮೂರೂ ಪ್ರಮಾಣಗಳು ಒಂದು ವಿಷಯದಲ್ಲಿ ಸಮನ್ವಯ-ಗೊಳ್ಳುವುದಕ್ಕೆ 'ಪೂರ್ಣ ಪ್ರಮಾಣ' ಎಂದು ಹೆಸರು. ಒಂದಕ್ಕೆ ಮಾತ್ರ ವಿರೋಧ ಇಲ್ಲದಿದ್ದಾಗ ಅದು 'ಮಧ್ಯಮ ಪ್ರಮಾಣ', ಮೂರಕ್ಕೂ ವಿರುದ್ಧವಾದಾಗ 'ಅಪ್ರಮಾಣ'. ಆದ್ದರಿಂದ ಯಾವಾಗಲೂ ಈ ಮೂರೂ ಸಮನ್ವಯಗೊಳ್ಳಲೇಬೇಕು.

## ಶ್ರೀಹರಿಯ ಸ್ವಾತಂತ್ರ್ಯ

ತಿಳುವಳಿಕೆಯಿಲ್ಲದವನು ಪ್ರತ್ಯಕ್ಷವನ್ನು ಬಿಟ್ಟುಕೊಟ್ಟು, ದೇವರನ್ನು ಮಾತ್ರವೇ ಕರ್ತೃವೆಂದು ತಿಳಿದು ಕರ್ತವ್ಯವನ್ನು ಮರೆಯುವನು. ವಿವೇಕಿಯಾದವನು ಜೀವನು ವಿಷ್ಣುವಿನ ಅಧೀನ ಎಂದು ತಿಳಿದೇ ಯಾವಾಗಲೂ ಕರ್ತವ್ಯವನ್ನು ನಿರ್ವಹಿಸುವನು. ಸ್ವಭಾವವೆಂಬ ಹೆಸರಿನ 'ಹಠ' ಎಂಬ ಯೋಗ್ಯತೆ ಎಲ್ಲ ಜೀವರಲ್ಲಿಯೂ ಅನಾದಿಕಾಲದಿಂದಲೂ ಇರುವುದು. ಅದೇ ಪ್ರಥಮ ಕಾರಣ; ಅನಾದಿಕರ್ಮವು ಎರಡನೆಯ ಕಾರಣ; 'ಪೌರುಷ' ಎಂಬ ಹೆಸರಿನ ಜೀವಪ್ರಯತ್ನ ಮೂರನೆಯ ಕಾರಣ. ಈ ಮೂರು ಸಹ ಯಾವಾಗಲೂ ವಿಷ್ಣುವಿನ ಅಧೀನ. ಆ ವಾಸುದೇವ ಮಾತ್ರ ಯಾರ ವಶದಲ್ಲಿಯೂ ಇರದೆ ಪರಾತ್ಪರನೂ, ಪರಮನೂ, ಸ್ವತಂತ್ರನೂ ಆಗಿರುವನು. ಈ 'ಹಠ' ಎಂಬ ಯೋಗ್ಯತೆಯು ಬ್ರಹ್ಮದೇವರನ್ನು ಆರಂಭಿಸಿ, ಕಲಿಯವರೆಗೂ ತಾರತಮ್ಯಕ್ರಮದಲ್ಲಿರುವುದು. ಹಠದಿಂದ ಕರ್ಮಗಳು, ಕರ್ಮದಿಂದ ಹಠ ಹಾಗೂ ಕರ್ಮಗಳನ್ನು ಫಲಿಸುವಂತೆ ಮಾಡುವ ಯತ್ನವೂ ಹುಟ್ಟುವುವು. ಪ್ರಯತ್ನವಿಲ್ಲದೆ 'ಹಠ'ವಾಗಲಿ, 'ಕರ್ಮ'ವಾಗಲಿ ನಡೆಯವು. ಈ ಎಲ್ಲದಕ್ಕೂ ಫಲ ನೀಡುವವನು ವಾಸುದೇವನು ಮಾತ್ರ. ಸ್ವತಂತ್ರಶಕ್ತಿಯಿಂದಾಗಿ ಎಲ್ಲದಕ್ಕೂ ಕೂಡ ಅವನೇ ನಿಯಾಮಕನೂ ಆಗಿರುವನು. ಆದರೂ, ಅವನೂ ಇವುಗಳನ್ನು ಅನುಸರಿಸಿಯೇ ಫಲಗಳನ್ನು ನೀಡುವನು. 'ಇವುಗಳನ್ನು ಅನುಸರಿಸಿಯೇ ಫಲ ನೀಡುವೆನು' ಎಂಬುದೂ ಸಹ ಅವನ ಸಂಕಲ್ಪವೇ. ಇಂತಹ ಅವನಲ್ಲಿಯ ಸ್ವಾತಂತ್ರ್ಯ ಅವನು ಸರ್ವಶಕ್ತನಾದ್ದರಿಂದ ಎಂದೂ ಅವನನ್ನು ಬಿಟ್ಟುಹೋಗುವುದಿಲ್ಲ. ಸದಾ ಸಮರ್ಥ-ನಾಗಿರುವ ಅವನಿಗೆ ಅಶಕ್ತಿ ಮಾತ್ರ ಎಂದೂ ಇಲ್ಲವೇ ಇಲ್ಲ. ಆದ್ದರಿಂದ ವಿಷ್ಣು ವಿಧಿಸಿರುವ ಸ್ವಕರ್ಮವನ್ನು ಅವನ ಪೂಜೆಯೆಂದು ಎಲ್ಲರೂ ಅವಶ್ಯವಾಗಿ ಮಾಡಲೇಬೇಕು. ಅದರಿಂದ ಆ ವಿಷ್ಣುವಿನ ಲೋಕವೇ ದೊರೆಯುವುದು. ಇದನ್ನು ಬಿಟ್ಟಲ್ಲಿ ಮಾತ್ರ ನರಕ ತಪ್ಪಿದ್ದಲ್ಲ.

## ವರ್ಣಾಶ್ರಮಧರ್ಮಗಳು

ಬ್ರಾಹ್ಮಣನಿಗೆ ಜಪ ಮತ್ತು ಉಪದೇಶ ಈ ಎರಡೂ ವಿಹಿತಕರ್ಮಗಳು. ವಿಷ್ಣುವಿನ ಮುಖದಿಂದ ವಿಪ್ರಜಾತಿ ಹುಟ್ಟಿದ್ದರಿಂದ, ಮುಖದ ಕಾರ್ಯಗಳಾದ ಜಪ ಮತ್ತು ಉಪದೇಶಗಳನ್ನು ವಿಪ್ರನ ಕರ್ತವ್ಯವನ್ನಾಗಿ ಅವನು ವಿಧಿಸಿರುವನು. ಕ್ಷತ್ರಿಯನು ಬಾಹುಗಳಿಂದ ಹುಟ್ಟಿರುವುದರಿಂದ, ಬಾಹುಗಳ ಕೆಲಸವಾದ ದುಷ್ಟನಿಗ್ರಹ ಹಾಗೂ ಧರ್ಮಪ್ರವರ್ತನೆಗಳು ಅವನ ಮುಖ್ಯಕರ್ತವ್ಯ. ಮುಖ ಮತ್ತು ಬಾಹುಗಳು ತುಂಬಾ ಸಮೀಪವಿರುವುದರಿಂದ ಕ್ಷತ್ರಿಯನಿಗೂ, ಮುಖದ ಕಾರ್ಯಗಳಾದ ಜಪೋಪದೇಶಗಳೂ, ಬ್ರಾಹ್ಮಣನಿಗೂ ತೋಳಿನ ಕಾರ್ಯವಾದ ಯಜ್ಞವೂ ವಿಧಿಸಲ್ಪಟ್ಟಿವೆ. ತೊಡೆಗಳಿಂದ ಜನಿಸಿದ ವೈಶ್ಯನಿಗೆ ಅದರಿಂದಾಗುವ ಪ್ರಜಾವೃದ್ಧಿಯೇ ಮುಖ್ಯಕರ್ಮ. ಸಾದೃಶ್ಯದಿಂದಾಗಿ ಸ್ಥಾವರಗಳ ವೃದ್ಧಿಯೂ ಅವನಿಗೆ ವಿಹಿತವೇ ಆಗಿದೆ. ಕರ ಮತ್ತು ತೊಡೆಗಳ ಸಾಮೀಪ್ಯದಿಂದಾಗಿ ವೈಶ್ಯನಿಗೆ ವಾರ್ತಾತ್ಮಕವಾದ ಕರ್ಮವೂ

ಸಹ ಸ್ವಧರ್ಮವೆಂದೇ ಕರೆಯಲ್ಪಟ್ಟಿದೆ. ಶೂದ್ರನು ವಿಷ್ಣುವಿನ ಪಾದದಿಂದ ಹುಟ್ಟಿದವನು. ಗತಿಪ್ರಧಾನವಾದ ಶುಶ್ರೂಷಣವೆಂಬ ಧರ್ಮವನ್ನೂ ಹಸ್ತಪಾದಗಳ ಸಾದೃಶ್ಯದಿಂದಾಗಿ ಹಸ್ತೋದ್ಭವವಾದ ಕರ್ಮವನ್ನೂ ಸಮೀಪದಲ್ಲಿರುವುದರಿಂದ ಸಂತಾನವೃದ್ಧಿಯೆಂಬ ಕಾರ್ಯ-ವನ್ನೂ ಶೂದ್ರಜಾತಿಗೆ ವಿಧಿಸಲಾಗಿದೆ. ಭುಜಗಳು, ಎದೆ, ಮತ್ತು ಹೃದಯ ಇವು ಬಲ ಹಾಗೂ ಜ್ಞಾನಗಳ ಸ್ಥಳವಾಗಿರುವುದರಿಂದ ಬಲ ಹಾಗೂ ಜ್ಞಾನ ಈ ಎರಡೂ ಕಾರ್ಯಗಳೂ ಧರ್ಮವೆನ್ನಿಸಲ್ಪಟ್ಟಿವೆ. ತೋಳುಗಳು ಕೇವಲ ಕಾರ್ಯಕೌಶಲ ದ್ಯೋತಕವಾದ್ದರಿಂದ ವೈಶ್ಯ ಹಾಗೂ ಶೂದ್ರರು ಕರ್ಮಕೌಶಲದಲ್ಲಿಯೇ ಹೆಚ್ಚು ನಿರತರಾಗತಕ್ಕದ್ದು. ಈ ಎಲ್ಲವೂ ಪ್ರಧಾನವಾಗಿ ಈ ಎಲ್ಲರ ವಿಶೇಷಧರ್ಮಗಳಾದರೂ, ಎಲ್ಲವೂ ಎಲ್ಲರಿಗೂ [೧]ಸಾಮಾನ್ಯತಃ ಧರ್ಮಗಳೇ ಆಗಿವೆ.

ನಾವೆಲ್ಲ ದೇವತೆಗಳಾಗಿರುವುದರಿಂದ ಎಲ್ಲ ಕಾರ್ಯವೂ ನಮಗೆ ಯಾವಾಗಲೂ ಧರ್ಮವೆನ್ನಿಸುವುದು. ವಿಷ್ಣುವಿನಿಂದ ಹಿಂದೆಯೇ ವಿಧಿಸಲ್ಪಟ್ಟಿರುವ ಈ ಎಲ್ಲ ಧರ್ಮಗಳಿಂದಲೂ ವಿಷ್ಣುವೇ ಸದಾ ಆರಾಧಿತನಾಗಿರುವನು. ಅವನಲ್ಲಿ ಭಕ್ತಿಯೇ ಎಲ್ಲರಿಗೂ ಅತ್ಯಂತ ಪ್ರಧಾನ ಧರ್ಮ. ಯಥಾಯೋಗ್ಯವಾದ ಜ್ಞಾನ ಹಾಗೂ ಅವನ ಪೂಜೆಗಳೂ ಸಹ ಧರ್ಮಗಳೇ. ತಂದೆ, ಗುರು, ಪರದೇವತೆ ಎಲ್ಲವೂ ಎಲ್ಲರಿಗೂ ವಿಷ್ಣುವೇ ಆಗಿರುವುದರಿಂದ ಅವನೇ ಎಲ್ಲರಿಗೂ ಮುಖ್ಯತಃ ಪೂಜ್ಯ. ಅವನ ಭಕ್ತರಾಗಿರುವುದರಿಂದ ದೇವತೆಗಳೂ ಪೂಜಾರ್ಹರಾಗಿರುವರು. ಅವನಲ್ಲಿ ಅತ್ಯಂತ ಭಕ್ತರಾಗಿರುವವರನ್ನಂತೂ ವಿಶೇಷವಾಗಿ ಪೂಜಿಸಲೇಬೇಕು. ವಾಸುದೇವನು ಪೂಜಿತನಾದಾಗ ಮುಕ್ತಿಯನ್ನು ಅಪೂಜಿತನಾದಾಗ ಅತ್ಯಂತ ದುಃಖವನ್ನು ಕೊಡುವನು. ಸ್ವತಂತ್ರನಾಗಿರುವುದರಿಂದ ಅವನು ಸುಖದುಃಖಪ್ರದನಾಗಿರುವನು. ಉಳಿದೆಲ್ಲರೂ ಅವನ ಅಧೀನರೇ ಆಗಿರುವುದರಿಂದ ಅವರಾರೂ ಸ್ವತಂತ್ರರಲ್ಲ. ಸ್ವತಂತ್ರನಾಗಿರುವುದರಿಂದಲೇ ಅವನು ಸುಖ, ಜ್ಞಾನ, ಶಕ್ತಿ ಮೊದಲಾದ ಗುಣಗಳಿಂದ ತುಂಬಿರುವನು. ಅದೇ ಕಾರಣದಿಂದಲೇ ಎಲ್ಲ ದೋಷಗಳಿಂದಲೂ ದೂರಾಗಿರುವನು. ಮಿತಿಯಿಲ್ಲದ ಸಾಮರ್ಥ್ಯವೇ ಸ್ವತಂತ್ರನ ಲಕ್ಷಣ-ವಲ್ಲವೇ? ದೋಷದೂರತೆ ಹಾಗೂ ಗುಣಪೂರ್ಣತೆ ಎರಡೂ ಇವನ ಅಪರಿಮಿತ ಶಕ್ತಿಯಿಂದ ಸಾಧ್ಯವಾಗಿದೆ. ಈ ರೀತಿ ಎಲ್ಲ ಗುಣಗಳಿಂದ ತುಂಬಿರುವ ನಾರಾಯಣನನ್ನು ಎಲ್ಲರೂ ತಮ್ಮ ತಮ್ಮ ಧರ್ಮಗಳ ಮೂಲಕ ಪೂಜಿಸಲೇಬೇಕು.

---

೧. ಇದು ವರ್ಣಧರ್ಮಗಳ ಬಗ್ಗೆ ವಿಶೇಷ ಬೆಳಕು ಚೆಲ್ಲುವ ಮಾತು. ಬ್ರಾಹ್ಮಣ ಮೊದಲಾದ ಸಕಲವರ್ಣದವರಿಗೂ ಇತರವರ್ಣಗಳ ಕಾರ್ಯವೂ ವಿಹಿತ ; ಎಂದರೆ ತನಗಿಂತ ಚಿಕ್ಕವರಿಗೆ ತಿಳಿಸಿಕೊಡುವಾಗ ಅವನ ವರ್ತನೆ ಬ್ರಾಹ್ಮಣನದಾಗುವುದು. ನೊಂದವರಿಗೆ ರಕ್ಷಣೆ ನೀಡುವಾಗ ಕ್ಷತ್ರಿಯನಂತಾಗಬೇಕು ; ಪ್ರಜಾವೃದ್ಧಿ ಮೊದಲಾದ ಕಾರ್ಯಗಳಲ್ಲಿ ವೈಶ್ಯರಂತೆ ವರ್ತಿಸಬೇಕು ; ಗುರುಹಿರಿಯರ ಸೇವಾಕಾರ್ಯದಲ್ಲಿ ಶೂದ್ರನಂತೆ ನಡೆದು-ಕೊಳ್ಳಬೇಕು ಎಂದು ಇದರ ಭಾವ. ಹೀಗೆ ನಾಲ್ಕುವರ್ಣದ ಧರ್ಮಗಳೂ ಸಾಮಾನ್ಯತಃ ಎಲ್ಲರಿಗೂ ಕರ್ತವ್ಯ-ವೆನ್ನಿಸಲು ಪ್ರತಿಯೊಬ್ಬ ಮನುಷ್ಯನಲ್ಲೂ ಮುಖ, ಬಾಹು, ತೊಡೆ ಹಾಗೂ ಪಾದಗಳು ಇರುವುದೇ ಗಮಕ. ವರ್ಣವ್ಯವಸ್ಥೆಯನ್ನು ಲೇವಡಿ ಮಾಡುವವರು ಈ ಸೂಕ್ಷ್ಮವನ್ನು ತಿಳಿದಲ್ಲಿ ತಪ್ಪುಕಲ್ಪನೆ ದೂರಾಗಲು ಸಾಧ್ಯ.

## ರಾಜನ ಮುಖ್ಯ ಕರ್ತವ್ಯ

ಆದ್ದರಿಂದ ನಮಗೆ ಅನಗತ್ಯವಾದ ಕ್ಷಮೆ ಭೂಷಣವಲ್ಲ. ದುಷ್ಟನಿಗ್ರಹವೇ ನಮ್ಮ ಮುಖ್ಯ ಕರ್ತವ್ಯ. ಯಾವ ಕ್ಷತ್ರಿಯನು ಹರಿಯನ್ನು ಸ್ಮರಿಸುತ್ತ, ದುಷ್ಟರಾದ ಇತರ ಕ್ಷತ್ರಿಯರನ್ನೂ ಅವರಲ್ಲೂ ಯುದ್ಧಕ್ಕೆ ಬಂದವರನ್ನು ತನ್ನ ಬಾಹುಬಲದಿಂದ ಸಂಹರಿಸುವನೋ ಅಂತಹವನ ತೋಳುಗಳೂ, ದೇಹವೂ ಜ್ಞಾನಪೂರ್ಣವೇ ಆಗುವುವು. ಪಾಪಾಧಿಕರನ್ನು ಹಾಗೂ ಬಲಾಧಿಕ-ರನ್ನು ಕೊಲ್ಲುವುದರಿಂದ ಮುಕ್ತಿಯಲ್ಲೂ ಹೆಚ್ಚಿನ ಆನಂದ ಲಭಿಸುವುದು. ವಿಷ್ಣುವಿನ ಅಪಾರ ಪ್ರೀತಿಗೂ ಅಂತಹವನು ಪಾತ್ರನಾಗುವನು. ಆದ್ದರಿಂದ ಪಾಪಿಗಳನ್ನು ಸಂಹರಿಸಲೇಬೇಕು. ಕಪಟಜೂಜಿನವರೂ, ಸೆರೆಸಿಕ್ಕವರೂ ಆದ ಪಾಪಿಗಳನ್ನು ರಾಜನಾದವನು ಇತರರಿಂದ ಕೊಲ್ಲಿಸಬೇಕು. ರಾಜ, ರಾಜಪುತ್ರ ಅಥವಾ ರಾಜಾನುಜ ಈ ಮೂವರನ್ನು ಯುದ್ಧದಲ್ಲಿ ತಾನೇ ಸಂಹರಿಸಬೇಕು. ರಾಜಪುತ್ರನಾದರೂ, ಇನ್ನೂ ಅವನು ಅವಿವಾಹಿತನಾಗಿದ್ದಲ್ಲಿ, ಅಂತಹವನನ್ನು ಬೇರೆಯವರಿಂದ ಕೊಲ್ಲಿಸಬೇಕು, ತಾನೇ ಕೊಲ್ಲಬಾರದು. ಈ ರೀತಿಯಾಗಿ ವೇದದಲ್ಲಿಯೇ ಧರ್ಮವು ವಿಧಿಸಲ್ಪಟ್ಟಿದೆ. ಪಂಚರಾತ್ರಗಳಲ್ಲಿನ ವಿಷ್ಣುವಿನ ಮಾತೂ ಸಹ ಹಾಗೆಯೇ ಇದೆ. ದ್ಯೂತವು ಸರ್ವಥಾ ಅಧರ್ಮ ; ಅಕ್ಷದ್ಯೂತದಂತಹ ಮೋಸದಿಂದ ಕೂಡಿದ ಪಾಪಕಾರ್ಯ ಶಕುನಿಯಿಂದ ನಡೆದಿದೆ. ಅದನ್ನು ಕ್ಷತ್ರಿಯನಿಗೆ ಧರ್ಮವೆಂದು ವಿಧಿಸುವ ಮಾತು ಎಲ್ಲೂ ಕಂಡಿಲ್ಲ. ಆದ್ದರಿಂದ ಜೂಜಿನಲ್ಲಿ ಕೊಟ್ಟದ್ದನ್ನು ಕಳೆದುಕೊಂಡದ್ದೆನ್ನುವರೇ ಹೊರತು ಕೊಟ್ಟದ್ದೆಂದು ಯಾರೂ ಕರೆಯುವುದಿಲ್ಲ. ಭಯದಿಂದಾಗಲೀ, ಜೂಜಿನಲ್ಲಾಗಲೀ, ಕಾಮುಕಸ್ತ್ರೀಗಾಗಲೀ ಕೊಟ್ಟದ್ದನ್ನು ಮತ್ತೆ ಕಿತ್ತುಕೊಳ್ಳಬೇಕೆಂಬುದೇ ವೇದೋಕ್ತಧರ್ಮ. ಕಾಮುಕಸ್ತ್ರೀಗೆ ಕೊಟ್ಟದ್ದು ಅಲ್ಪವಾಗಿದ್ದಲ್ಲಿ ಅದನ್ನು ಕಿತ್ತುಕೊಳ್ಳಬೇಕಾಗಿಲ್ಲ. ಆದರೆ ಅದು ಕೊಟ್ಟವನ ಸರ್ವಸ್ವವೇ ಆಗಿದ್ದಲ್ಲಿ ಎಷ್ಟೇ ಅಲ್ಪವಾಗಿದ್ದರೂ ಅದನ್ನು ಹಿಂದಕ್ಕೆ ಪಡೆಯಲೇ ಬೇಕು. ಆ ಪುರುಷನಿಗೆ ಅದಕ್ಕೆ ಶಕ್ತಿ ಸಾಲದಿದ್ದಲ್ಲಿ ಅವನ ಬಂಧುಗಳಾದರೂ ಅದನ್ನು ಹಿಂದಕ್ಕೆ ತೆಗೆದುಕೊಳ್ಳತಕ್ಕದ್ದು.

## ಭೀಮಗೀತೆಯ ಉಪಸಂಹಾರ

ಆದ್ದರಿಂದ ನಾವೀಗ ನಮ್ಮ ರಾಜ್ಯವನ್ನು ಮರಳಿ ಕಿತ್ತುಕೊಳ್ಳಲೇಬೇಕಾಗಿದೆ. ನೀನು ಧರ್ಮಶೀಲನೂ, ಅಣ್ಣನೂ ಎಂಬ ಕಾರಣದಿಂದ ನಿನ್ನ ಅಪ್ಪಣೆಯಿಲ್ಲದೆ ನಾನು ಈವರೆಗೆ ಆ ಕಾರ್ಯವನ್ನು ಮಾಡಿಲ್ಲ. ಈಗ ನೀನೇನಾದರೂ ಅಪ್ಪಣೆ ಕೊಡುವುದಾದಲ್ಲಿ ಅವರನ್ನೆಲ್ಲ ಕೊಂದು ಹಾಕಿ, ಆ ರಾಜ್ಯವನ್ನು ತಂದು ನಿನಗೇ ಒಪ್ಪಿಸುವೆನು. ಪಾಪಿಷ್ಠರಲ್ಲೂ ನೀನು ಸತ್ಯವನ್ನುಳಿಸಿಕೊಳ್ಳಬೇಕೆಂದು ಬಯಸುವೆಯಾದಲ್ಲಿ, ಅದಕ್ಕೂ ಚಿಂತಿಸಬೇಕಿಲ್ಲ. ಈಗಾಗಲೇ ನಾವು ಹನ್ನೆರಡು ತಿಂಗಳುಗಳನ್ನು ಕಳೆದಿರುವೆವು. ವೇದದ ಆಧಾರದಿಂದ ಅವನ್ನೆಲ್ಲ ವರ್ಷಗಳೆಂದೇ ಪರಿಗಣಿಸಬಹುದು ; ಅವು ಮನುಷ್ಯರಿಗೆ ಸಾವಿರ ವರ್ಷಗಳ ಸತ್ರಗಳನ್ನು ವಿಧಿಸುವವಲ್ಲವೆ? ಇನ್ನುಳಿದ ಒಂದು ತಿಂಗಳನ್ನು ಅಜ್ಞಾತವಾಸದಲ್ಲಿ ಕಳೆದು ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಆಳೋಣ. ನೀನು ಮಿತ್ರರಿಗೆ ತಾಪವನ್ನು, ಶತ್ರುಗಳಿಗೆ ಹರ್ಷವನ್ನು

ಉಂಟುಮಾಡದಿರು. ಮಿತ್ರರನ್ನು ಸದಾ ಸಂತೋಷಪಡಿಸುತ್ತ ಶತ್ರುಗಳ ತಲೆಯ ಮೇಲೆ ನೀನು ಪ್ರಕಾಶಿಸು. ವಾಸುದೇವನನ್ನು ಭಜಿಸು. ಕೃಷ್ಣನು ಈಗ ಶಿವ ಮೊದಲಾದವರನ್ನು, ಬ್ರಹ್ಮಾದಿಗಳ ವರದಿಂದ ಅಜೇಯರಾದ ಜರಾಸಂಧಾದಿಗಳನ್ನು ನಮ್ಮ ಕಣ್ಣೆದುರಿಗೇ ಜಯಿಸಿರುವುದರಿಂದ, ಅವನ ಸ್ವಾತಂತ್ರ್ಯವು ಪ್ರತ್ಯಕ್ಷಸಿದ್ಧವೇ ಆಗಿದೆಯಲ್ಲವೇ ? ಬ್ರಹ್ಮ ಮೊದಲಾದವರೂ ಮತ್ತು ಲಕ್ಷ್ಮಿಯೂ ಆ ಕೃಷ್ಣನ ವಶವೆಂಬುದನ್ನು ಅನೇಕಬಾರಿ ವ್ಯಾಸರ ದೇಹದಲ್ಲಿ ನಾವೇ ಕಂಡಿರು-ವೆವಲ್ಲವೇ? ವೇದವ್ಯಾಸರು ದಿವ್ಯದೃಷ್ಟಿಯನ್ನಿತ್ತು, ನಮಗೆ ತನ್ನ ಸ್ವಾತಂತ್ರ್ಯವನ್ನು ಜಗತ್ತಿನಲ್ಲಿ ತೋರಿಸಿ ಕೊಟ್ಟಿರುವರಲ್ಲವೇ? ಆದ್ದರಿಂದ ರಾಜನೇ ! ಏಳು, ಶತ್ರುಗಳನ್ನೆಲ್ಲ ಕೊಂದು ರಾಜ್ಯವನ್ನು ಅನುಭವಿಸಲು ಸಿದ್ಧನಾಗು. ಹೀಗೆ ಮಾಡುವುದರಿಂದ ನಿನಗೆ ಮಹತ್ತರವಾದ ಕೀರ್ತಿ ಹಾಗೂ ಧರ್ಮಗಳು ಶ್ರೀಹರಿಯ ಪ್ರಸಾದದಿಂದ ಲಭಿಸುವವು''

## ಭೀಮನಿಗೆ ಮಣಿದ ಯುಧಿಷ್ಠಿರ

ಭೀಮನ ಈ ಮಾತುಗಳನ್ನು ಗಾಢವಾಗಿ ಆಲೋಚಿಸಿದ, ಧರ್ಮರಾಜನು ಆಶ್ವಾಸನೆ ನೀಡಿದ – ''ಹದಿಮೂರು ವರ್ಷಗಳು ಕಳೆದ ಮೇಲೆ ನೀನು ಹೇಳಿದಂತೆ ನಾನು ಖಂಡಿತವಾಗಿ ನಡೆದುಕೊಳ್ಳುವೆ. ಈ ಮಾತಿನಲ್ಲಿ ಸಂದೇಹ ಬೇಡ ; ನನ್ನಾಣೆ ; ಲೋಕಾಪವಾದಕ್ಕೆ ಅಂಜುವ ನನಗೆ ಇನ್ನೇನೂ ಹೇಳದಿರು. ನೀನು ನನ್ನನ್ನು ಕಠಿಣವಾದ ಮಾತುಗಳಿಂದ ನೋಯಿಸದಿರು ; ಆಗಲೂ ನಾನು ಮಾತಿಗೆ ತಪ್ಪಿದ್ದಲ್ಲಿ ನನ್ನನ್ನು ಉಲ್ಲಂಘಿಸಿ ನೀನೇ ಶತ್ರುಗಳನ್ನು ಕೊಲ್ಲಬಹುದು. ಭೀಷ್ಮದ್ರೋಣಾದಿ ಅಸ್ತ್ರನಿಪುಣರನ್ನು ಯುದ್ಧದಲ್ಲಿ ಹೇಗೆ ಎದುರಿಸಬೇಕೆಂಬುದೇ ನನ್ನ ಈಗಿನ ಸಮಸ್ಯೆ. ಪೂಜ್ಯರಾದ ಅವರನ್ನು ಎಂದೂ ಬಾಹುಯುದ್ಧದಲ್ಲಿ ಎದುರಿಸಕೂಡದು. ನೀನೂ ಅಸ್ತ್ರಗಳನ್ನು ತಿಳಿದಿರುವೆಯಾದರೂ ಅವುಗಳನ್ನು ನೀನು ಪ್ರಯೋಗಿಸಲು ಬಯಸಲಾರೆ. ಆದ್ದರಿಂದ ಧನಂಜಯನು ಅಸ್ತ್ರಗಳನ್ನು ಸಂಪಾದಿಸಬೇಕಾಗಿದೆ. ಆಗಷ್ಟೇ ನಾವು ಆ ಹಿರಿಯರೊಂದಿಗೆ ಹೋರಾಡಲು ಸಾಧ್ಯವಾದೀತು.'' ಸ್ನೇಹ ಕೆಟ್ಟೀತೆಂಬ ಭಯದಿಂದ ಭೀಮಸೇನನು ಧರ್ಮರಾಜನಿಗೆ ಮತ್ತೇನನ್ನೂ ಹೇಳಲು ಇಚ್ಛಿಸಲಿಲ್ಲ. ಜೊತೆಗೆ ತನ್ನ ಉದ್ದೇಶ ಈಡೇರಿದ್ದೂ ಸಹ ಭೀಮ ಆ ರೀತಿ ಸುಮ್ಮನಾಗಲು ಕಾರಣವಾಯಿತು. ಹದಿಮೂರು ವರ್ಷಗಳು ಕಳೆದಮೇಲೆ ರಾಜ್ಯ ಹೊಂದಲು ಹೋರಾಡುವುದಾಗಿ ಧರ್ಮರಾಜನಿಂದ ಮಾತು ಪಡೆಯುವುದಷ್ಟೇ ಅವನ ಮುಖ್ಯ ಉದ್ದೇಶವಾಗಿತ್ತು. ಇಲ್ಲದಿದ್ದಲ್ಲಿ ತುಂಬಾ ಮೃದುಸ್ವಭಾವದ ಅವನು ಬೇರೆಯವರ ಮಾತಿಗೆ ಕಿವಿಗೊಟ್ಟು, ರಾಜ್ಯವನ್ನೇ ಬಯಸದಿರುವ ಸಂಭವವೂ ಇರುತ್ತಿತ್ತು. ಹೀಗೆ ತನ್ನ ಕಾರ್ಯ ಈಡೇರಿದ್ದರಿಂದ ಭೀಮ ಮತ್ತೆ ಮಾತು ಬೆಳೆಸಲಿಲ್ಲ.

## ಅರ್ಜುನನಿಗೆ ಮಂತ್ರೋಪದೇಶ

ಅನಂತರ ಭೀಷ್ಮದ್ರೋಣಾದಿಗಳನ್ನು ಜಯಿಸುವ ಬಗೆ ಹೇಗೆಂಬುದೇ ಧರ್ಮರಾಜನ ಮುಖ್ಯ ಚಿಂತೆಯಾಯಿತು. ಭೀಮ ಗುರುಹಿರಿಯರನ್ನು ಎದುರಿಸಬಯಸುವುದಿಲ್ಲವಾದ್ದರಿಂದ

ಅರ್ಜುನನಿಂದಲೇ ಆ ಕಾರ್ಯ ಆಗತಕ್ಕದ್ದು ಎಂಬ ನಿಶ್ಚಯ ಅವನ ಮನಸ್ಸಿನಲ್ಲಿ ಮೂಡಿತು. ಯುಧಿಷ್ಠಿರನ ಚಿಂತೆಯನ್ನು ಅರ್ಥಮಾಡಿಕೊಂಡು, ಸರ್ವಜ್ಞರೂ, ಸರ್ವಶಕ್ತರೂ ಆದ ಕೃಷ್ಣದ್ವೈಪಾಯನರು ಅಲ್ಲಿಗೆ ಆಗಮಿಸಿದರು. ಧರ್ಮರಾಜನ ಚಿಂತೆಯನ್ನು ಪರಿಹರಿಸುತ್ತ – ''ಅರ್ಜುನನು ಭೀಷ್ಮದ್ರೋಣಾದಿಗಳನ್ನೆಲ್ಲ ಜಯಿಸಲು ಸಾಧ್ಯವಾಗುವಂತೆ ಮಂತ್ರವೊಂದನ್ನು ನಿನಗೆ ಉಪದೇಶಿಸುವೆ. ನೀನು ಅದನ್ನು ಅರ್ಜುನನಿಗೆ ತಿಳಿಸಿಕೊಡು'' ಎಂದು ಮಂತ್ರವೊಂದನ್ನು ಉಪದೇಶಿಸಿದರು. ಎಲ್ಲ ದೇವತೆಗಳನ್ನು ಕಾಣುವಂತೆ ಮಾಡುವ ಶಕ್ತಿ ಆ ಮಂತ್ರಕ್ಕಿತ್ತು. ತಾವು ನೇರವಾಗಿ ಉಪದೇಶಿಸಿದಲ್ಲಿ ಅಗತ್ಯಕ್ಕಿಂತ ಹೆಚ್ಚು ಫಲ[೧] ಲಭಿಸುವುದರಿಂದ, ಹಾಗೆ ಮಾಡದೆ, ಧರ್ಮರಾಜನ ಮೂಲಕ ಅರ್ಜುನನಿಗೆ ಉಪದೇಶಿಸಿದರು. ಭೀಷ್ಮದ್ರೋಣಾದಿಗಳನ್ನು ಗೆಲ್ಲಲು ಇಂತಹ ಉಪದೇಶವು ಸಾಕು ಎಂಬುದೇ ಅವರ ವಿಚಾರವಾಗಿತ್ತು. ಅದಕ್ಕಿಂತಲೂ ಹೆಚ್ಚಿನ ಫಲದ ಅಗತ್ಯ ಅರ್ಜುನನಿಗಿಲ್ಲ. ಭಗವಂತನಾದ ಶ್ರೀವ್ಯಾಸರು ಅದೃಶ್ಯರಾದ ಮೇಲೆ ಧರ್ಮರಾಜನು ಏಕಾಂತದಲ್ಲಿ ಆ ಮಂತ್ರವನ್ನು ಅರ್ಜುನನಿಗೆ ಉಪದೇಶಿಸಿದ.

## ಕಿರಾತಾರ್ಜುನೀಯ

ಆ ಮಂತ್ರವನ್ನು ಪಡೆದುಕೊಂಡ ಅರ್ಜುನನು, ಅಣ್ಣಂದಿರಿಬ್ಬರಿಗೂ ನಮಸ್ಕರಿಸಿ, ನಕುಲ ಸಹದೇವರನ್ನು ಆಲಿಂಗಿಸಿ, ಇಂದ್ರಕೀಲಪರ್ವತಕ್ಕೆ ಹೊರಟ. ಅಲ್ಲಿ ನೆಲೆಸಿ, ರುದ್ರಾಂತರ್ಗತ ವಿಷ್ಣುವನ್ನು ಸ್ಮರಿಸುತ್ತಾ, ತಪಸ್ಸನ್ನಾಚರಿಸಿದ. ಆರು ತಿಂಗಳುಗಳು ಕಳೆದಮೇಲೆ, ಮೂಕ ಎಂಬ ಅಸುರನು, ಹಂದಿಯ ರೂಪವನ್ನು ಧರಿಸಿ ತನ್ನನ್ನು ಕೊಲ್ಲಲೆಂದು ನುಗ್ಗಿ ಬರುತ್ತಿರುವುದನ್ನು ಕಂಡ. ಕೂಡಲೇ, ವೀರನಾದ ಅರ್ಜುನನು ಗಾಂಡೀವನನ್ನು ಹೆದೆ ಏರಿಸಿ ವಜ್ರಸದೃಶವಾದ ಅನೇಕ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದ. ಅದೇ ವೇಳೆಗೆ, ಪತ್ನೀಸಮೇತನಾಗಿ ಕಿರಾತವೇಷದಲ್ಲಿ ಅಲ್ಲಿಗೆ ಬಂದ ಶಿವನೂ ಸಹ ಆ ಹಂದಿಯನ್ನು ತನ್ನ ಬಾಣಗಳಿಂದ ಹೊಡೆದ. ಅವರಿಬ್ಬರ ಪೆಟ್ಟಿಗೆ ಆ ಪಾಪಿಷ್ಠ ದಾನವನು ಪ್ರಾಣ ಕಳೆದುಕೊಂಡ. ಆಗ ಕಿರಾತರೂಪಿಯಾದ ಶಿವನು, ''ನಾನು ಹಿಂಬಾಲಿಸಿಕೊಂಡು ಬಂದಿದ್ದ ಹಂದಿಯನ್ನು ನೀನು ಬಾಣಗಳಿಂದ

---

೧. ರಾಮಾಯಣದಲ್ಲಿ ಬರುವ ಶ್ವೇತರಾಜನ ಪ್ರಸಂಗದಲ್ಲೂ ನಡೆದದ್ದು ಹೀಗೆಯೇ. ಅನ್ನದಾನ ಮಾಡದೆ ಯಜ್ಞ ಮಾಡಿದ್ದರಿಂದಾಗಿ ಶ್ವೇತ ಎಂಬ ರಾಜ ಬ್ರಹ್ಮಲೋಕವನ್ನು ತಲುಪಿದ್ದರೂ ಹಸಿವಿನ ಬಾಧೆಯನ್ನು ತಾಳಲಾರದೆ ತನ್ನ ದೇಹದ ಮಾಂಸವನ್ನೇ ತಿನ್ನುವಂತಹ ಪರಿಸ್ಥಿತಿಗೆ ಒಳಗಾಗಿದ್ದ. ಅದರ ಪರಿಹಾರಕ್ಕಾಗಿ ಅವನು ಪ್ರಾರ್ಥಿಸಿಕೊಂಡಾಗ ಬ್ರಹ್ಮದೇವರು ಅವನಿಗೆ ಅಗಸ್ತ್ಯರ ಮೂಲಕ ಮಾಲೆಯೊಂದನ್ನು ಶ್ರೀರಾಮದೇವರಿಗೆ ಸಮರ್ಪಿಸಲು ತಿಳಿಸಿದರು. ಅವನು ಹಾಗೆ ಮಾಡಿದಾಗ ಅವನ ಹಸಿವಿನ ಬಾಧೆ ಪರಿಹಾರವಾಯಿತು. ಅವನೇ ಸಾಕ್ಷಾತ್ತಾಗಿ ಆ ಮಾಲೆಯನ್ನು ಶ್ರೀರಾಮದೇವರಿಗೆ ಸಮರ್ಪಿಸಿದ್ದಲ್ಲಿ ಅದಕ್ಕಿಂತ ಹೆಚ್ಚಿನ ಫಲ ಲಭಿಸುತ್ತಿತ್ತು ; ಅದು ಅನಗತ್ಯ ಎಂಬ ಕಾರಣದಿಂದ ಬ್ರಹ್ಮದೇವರು ಅವನಿಗೆ ಹಾಗೆ ಅಗಸ್ತ್ಯರ ಮೂಲಕ ಅದನ್ನು ನೀಡಲು ತಿಳಿಸಿದ್ದರು. ಇದರಿಂದ ನಾವು ದೇವತೆಗಳಿಗೆ, ಗುರುಹಿರಿಯರಿಗೆ ನೇರವಾಗಿ ಸಲ್ಲಿಸುವ ಸೇವೆ ಇತರರ ಮೂಲಕ ಸಲ್ಲಿಸುವ ಪೂಜೆಗಿಂತ ಹೆಚ್ಚು ಫಲದಾಯಕ ; ಅದರಂತೆ ಹಿರಿಯರಿಂದ ನೇರವಾಗಿ ಮಂತ್ರೋಪದೇಶವನ್ನು ಪಡೆಯುವುದು ಹೆಚ್ಚು ಸಿದ್ಧಿದಾಯಕ ಎಂಬ ಸೂಕ್ಷ್ಮ ವಿಚಾರ ತಿಳಿಯುವುದು.

ಹೊಡೆದದ್ದು ಸರಿಯಲ್ಲ, ನನ್ನೊಂದಿಗೆ ಯುದ್ಧಕ್ಕೆ ಸಿದ್ಧನಾಗು'' ಎಂದು ಆಹ್ವಾನಿಸಿದ. ಅರ್ಜುನನೂ ಸಹ ಹಿಂತೆಗೆಯದೆ 'ನಿಲ್ಲು, ನಿಲ್ಲು, ನಿನ್ನನ್ನು ಬಿಡಲಾರೆ ' ಎಂದು ಸಿದ್ಧನಾಗಿಯೇ ಬಿಟ್ಟ. ಇಬ್ಬರ ಮಧ್ಯೆ ಭಯಂಕರವಾದ ಕಾದಾಟ ನಡೆಯಿತು. ಕೊನೆಗೆ, ಅರ್ಜುನನ ಬಾಣಗಳನ್ನೆಲ್ಲ ಶಿವ ನುಂಗಿ ಹಾಕಿದ. ಬೇರೆ ದಾರಿಕಾಣದೆ ಗಾಂಡೀವದಿಂದಲೇ ಅವನನ್ನು ಅರ್ಜುನನು ಹೊಡೆಯ ಹೊರಟಾಗ, ಅದನ್ನೂ ಅವನು ನಗುತ್ತಲೇ ಕಿತ್ತುಕೊಂಡು ಬಿಟ್ಟ. ಬಳಿಕ ಆ ಇಬ್ಬರು ಪುರುಷಶ್ರೇಷ್ಠರು ಬಾಹುಯುದ್ಧಕ್ಕೆ ತೊಡಗಿದರು. ಶಿವ ಅರ್ಜುನನನ್ನು ಮುದ್ದೆ ಮಾಡಿ ಎಸೆದು ಬಿಟ್ಟ. ಶಿವನ ಆಕ್ರಮಣವನ್ನು ಎದುರಿಸಲಾರದೇ ಅರ್ಜುನ ಮೂರ್ಛಿತನಾದ.

ಹಿಂದೆ ಶಿವನು ವಿಷ್ಣುವನ್ನು – ''ನನಗಿಂತಲೂ ಕಿರಿಯರಿಗೆ ನೀನು ಅಜೇಯತ್ವವರವನ್ನು ನೀಡಿದಾಗ, ನನ್ನಿಂದ ಮಾತ್ರ ಅವರು ಸೋಲುವಂತೆ ಅನುಗ್ರಹಿಸಬೇಕು'' ಎಂದು ಕೇಳಿ-ಕೊಂಡಿದ್ದ. ಅದಕ್ಕೆ ವಿಷ್ಣುವಿನ ಸಮ್ಮತಿ ದೊರಕಿದ್ದುದರಿಂದಲೇ, ಈಗ ಅರ್ಜುನನನ್ನು ಗೆಲ್ಲಲು ಅವನಿಗೆ ಸಾಧ್ಯವಾಯಿತು. 'ಭೀಷ್ಮಾದಿಗಳನ್ನು ಗೆಲ್ಲಲು ಇವು ಮಾತ್ರವೇ ಸಾಕು' ಎಂಬ ಕಾರಣ-ದಿಂದ ಕೇವಲ ವೈಷ್ಣವಮಂತ್ರಗಳನ್ನು ವ್ಯಾಸರು ಅರ್ಜುನನಿಗೆ ಉಪದೇಶ ಮಾಡಿಸಿರಲಿಲ್ಲ. ನಿಯಮೇನ ವಿಜಯದಾಯಕವಾದ ವೈಷ್ಣವಮಂತ್ರಗಳಿಂದ ಪಾರ್ಥನಿಗೆ ದರ್ಪ ಉಂಟಾಗಕೂಡದು ಎಂಬ ಯೋಚನೆಯೂ ಅದರಲ್ಲಿ ಸೇರಿತ್ತು.

ಎಚ್ಚರಗೊಂಡ ಅರ್ಜುನನು ಜಯ ಹೊಂದುವ ಬಯಕೆಯಿಂದ ವ್ಯಾಸರು ಉಪದೇಶಿಸಿದ್ದ ಮಂತ್ರಗಳಿಂದ ಶಿವನನ್ನು ಆರಾಧಿಸತೊಡಗಿದ. ಶಿವನಿಗೆಂದು ಅರ್ಪಿಸಿದ ಪುಷ್ಪಗಳೆಲ್ಲ ಕಿರಾತನ ಮುಡಿಯನ್ನಲಂಕರಿಸಿದ್ದನ್ನು ಕಂಡ ಅರ್ಜುನನಿಗೆ, ಅವನೇ ಶಿವ ಎಂಬ ಸತ್ಯದ ಅರಿವಾಯಿತು. ಆನಂದದಿಂದ ನಮಸ್ಕರಿಸಿದ ಅರ್ಜುನನಿಗೆ , ಸಂತೋಷದಿಂದ ಶಿವನು ಪಾಶುಪತಾಸ್ತ್ರವನ್ನು ಅನುಗ್ರಹಿಸಿದ ; ವಿಷ್ಣುವೇ ದೇವತೆಯಾದ ಆ ಅಸ್ತ್ರವು ಸಾಧನೆಯ ಫಲವಾಗಿ ಅವನಲ್ಲಿದ್ದುದರಿಂದಾಗಿ, ಅದಕ್ಕೆ 'ಪಾಶುಪತ' ಎಂದೇ ಹೆಸರು.

## ಇಂದ್ರಲೋಕದಲ್ಲಿ ಅರ್ಜುನ

ಅದೇ ವೇಳೆಗೆ ಅರ್ಜುನನ ಮುಂದೆ ಕಾಣಿಸಿಕೊಂಡ ಇತರ ಪ್ರಮುಖ ದೇವತೆಗಳು ತಾವೂ ಸಹ ತಮ್ಮ ತಮ್ಮ ಅಸ್ತ್ರಗಳನ್ನು ಅರ್ಜುನನಿಗೆ ನೀಡಿದರು. ಅರ್ಜುನನ ಬಳಿಗೆ ಬಂದು, ಇಂದ್ರನು – ''ಭಾಗ್ಯಶಾಲಿಯೇ ! ನಿನ್ನ ವಿಷಯದಲ್ಲಿ ನನಗೆ ತುಂಬಾ ಸಂತೋಷವಾಗಿದೆ. ಆದ್ದರಿಂದ ರಥವನ್ನು ಕಳುಹಿಸಿ ಕೊಡುವೆನು. ನನ್ನ ಲೋಕಕ್ಕೆ ಬಾ'' ಎಂದು ತಿಳಿಸಿ ಅಲ್ಲಿಂದ ತೆರಳಿದ. ಅದರಂತೆ ಇಂದ್ರನ ರಥದೊಂದಿಗೆ ಮಾತಲಿಯು ಬರಲು, ಅದರಲ್ಲಿ ಕುಳಿತು ಅರ್ಜುನ ಸ್ವರ್ಗಲೋಕವನ್ನು ಸೇರಿದ. ಉಳಿದೆಲ್ಲ ದೇವತೆಗಳಿಂದ ಆದರಿಸಲ್ಪಟ್ಟ ಪಾರ್ಥನನ್ನು, ಇಂದ್ರನು ತನ್ನ ಜೊತೆಯಲ್ಲಿಯೇ ಸಿಂಹಾಸನದಲ್ಲಿ ಕೂಡಿಸಿಕೊಂಡ. ತನ್ನದೇ ರೂಪವಾದ ಅರ್ಜುನನನ್ನು ಗಾಢವಾಗಿ ಆಲಿಂಗಿಸಿಕೊಂಡ ಇಂದ್ರನು, ಅವನ ಮುಖವನ್ನು ಮತ್ತೆ ಮತ್ತೆ ನೋಡುತ್ತ ಸುಖಿಸಿದ. ಈ ರೀತಿಯಾಗಿ ಸುಖಿಸುತ್ತ

ಅರ್ಜುನನು ಐದು ವರ್ಷಗಳಷ್ಟು ಕಾಲ ಇಂದ್ರಲೋಕದಲ್ಲಿಯೇ ಉಳಿದ. ಆ ವೇಳೆಯಲ್ಲಿ ಇಂದ್ರನು ಅನೇಕ ದಿವ್ಯಮಹಾಸ್ತ್ರಗಳನ್ನು ಅರ್ಜುನನಿಗೆ ತಿಳಿಸಿಕೊಟ್ಟ.

## ಉರ್ವಶಿಯ ಶಾಪ

ಅಲ್ಲಿರುವಾಗ ಒಮ್ಮೆ ಅರ್ಜುನನು ತನ್ನ ಬಳಿಗೆ ಬಂದ ಉರ್ವಶಿಯನ್ನು 'ನೀನು ಕುಲದ ತಾಯಿ[೧]' ಎಂಬುದಾಗಿ, ಮನುಷ್ಯಭಾವದಿಂದಾಗಿ, ನಿರಾಕರಿಸಿದ[೨]. 'ಷಂಢನಾಗು' ಎಂದು ಅವನಿಗೆ ಉರ್ವಶಿ ಶಾಪವಿತ್ತಳು. ಇಂದ್ರ, 'ಒಂದು ವರ್ಷಕಾಲ[೩] ಷಂಢರೂಪದಲ್ಲಿ ನೀನು ಓಡಾಡು ; ನಿಜವಾದ ಷಂಢತನ ನಿನಗೆ ಉಂಟಾಗದಿರಲಿ' ಎಂದು ಅರ್ಜುನನಿಗೆ ಅನುಗ್ರಹ ಮಾಡಿದ. ಅಲ್ಲಿ ಚಿತ್ರಸೇನ ಗಂಧರ್ವನಿಂದ ಅರ್ಜುನನು ಗಾಂಧರ್ವವೇದವನ್ನು ತಿಳಿದುಕೊಂಡ; ಅದರಂತೆ ಇಂದ್ರನಿಂದಲೂ ಅಸ್ತ್ರಗಳನ್ನು ಸಂಪಾದಿಸಿಕೊಂಡ.

## ಘಂಟಾಕರ್ಣನಿಗೆ ಮೋಕ್ಷ

ಸುಭದ್ರೆ ಮತ್ತು ಅಭಿಮನ್ಯು ಇಬ್ಬರನ್ನೂ ಕರೆದುಕೊಂಡು ದ್ವಾರಕೆಗೆ ತೆರಳಿದ ಶ್ರೀಕೃಷ್ಣ , ಕೆಲವು ದಿನಗಳು ಕಳೆದ ಮೇಲೆ ಹೀಗೆ ಆಲೋಚಿಸಿದ – "ದುಷ್ಟಜನಗಳನ್ನು ವಂಚಿಸಲೋಸ್ಕರ ನಿನ್ನಿಂದ ನಾನು ವರ ಪಡೆಯುವೆನು ಎಂಬುದಾಗಿ ಶಿವನಿಗೆ ವರವಿತ್ತಿದ್ದೆ ; ಆ ಮಾತನ್ನು ಈಗ ನಡೆಸಬೇಕು." ಕೃಷ್ಣನ ಅಭಿಪ್ರಾಯವನ್ನು ತಿಳಿದ ರುಗ್ಮಿಣಿ, ಕೃಷ್ಣಪ್ರೀತಿಗಾಗಿ ತನಗಾಗಲೇ ಮಗನು ಜನಿಸಿದ್ದರೂ ಸಹ, ಕೃಷ್ಣನ ಇಂಗಿತವನ್ನು ನಡೆಸಲೆಂದು ಹೀಗೆಂದಳು – "ದೇವ, ನನಗೆ ಎಲ್ಲ ಅಸ್ತ್ರಗಳನ್ನು ತಿಳಿದ ಬಲಶಾಲಿಯಾದ ಮಗನೊಬ್ಬನು ಬೇಕೆನಿಸಿದೆ." ಅದಕ್ಕೆ ಸಮ್ಮತಿಸಿದ ಕೃಷ್ಣ , ಅಸುರರನ್ನು ವಂಚಿಸುವ ಸಲುವಾಗಿ, ಗರುಡನನ್ನೇರಿ ತನ್ನ ಸ್ಥಾನವೇ ಆದ ಬದರಿಕಾಶ್ರಮಕ್ಕೆ ಹೊರಟ. ಶಿವನಿಗೆ ತಾನು ಹಿಂದೆ ನೀಡಿದ್ದ ವಚನವನ್ನು ಸತ್ಯ ಮಾಡಲೆಂದೇ ಅಲ್ಲಿಗೆ ಆಗಮಿಸಿದ ಕೃಷ್ಣನನ್ನು , ಸರ್ವಜ್ಞರಾದ ಮುನಿಗಳು ವೈಭವದಿಂದ ಸ್ವಾಗತಿಸಿ ಪೂಜಿಸಿದರು. ರಾತ್ರಿಯ ವೇಳೆಯಲ್ಲಿ ಕೃಷ್ಣನು ಮುನಿಗಳ ಮಧ್ಯದಲ್ಲಿ ಇದ್ದಾಗ, ಶಿವನಿಂದ ಕಳುಹಿಸಲ್ಪಟ್ಟಿದ್ದ , ಕೃಷ್ಣನನ್ನು ಕಾಣಲೆಂದು ದ್ವಾರಕೆಗೆ ಹೊರಟಿದ್ದ ಘಂಟಾಕರ್ಣ ಮತ್ತು ಕರ್ಣ ಎಂಬ ಎರಡು ಪಿಶಾಚಿಗಳು

---

೧. ಬುಧನ ಮಗ ಪುರೂರವಸ್ ; ಪುರೂರವನಿಗೆ ಉರ್ವಶಿಯಲ್ಲಿ ಜನಿಸಿದ ಮಕ್ಕಳು ಆಯು ಮೊದಲಾದವರು ; ಯಯಾತಿ ಆಯುವಿನ ಮೊಮ್ಮಗ ; ಯಯಾತಿಯ ಕಿರಿಯ ಮಗ ಪುರುವಿನ ವಂಶದಲ್ಲಿ ಪಾಂಡವರ ಜನನ. ಅರ್ಜುನ ಪಾಂಡವರಲ್ಲೊಬ್ಬ – ಹೀಗೆ ಉರ್ವಶಿಯು ಕುರುಕುಲದ ತಾಯಿ ಎನ್ನಿಸುವಳು.

೨. ಇದು ಅರ್ಜುನನ ವಿಶಿಷ್ಟ ಬ್ರಹ್ಮಚರ್ಯಕ್ಕೆ ನಿದರ್ಶನವೆನ್ನಿಸುವ ಪ್ರಸಂಗ. ಉರ್ವಶಿಯಂತಹ ತ್ರಿಲೋಕ-ಸುಂದರಿಯತ್ತಲೂ ಸಹ ಆಕರ್ಷಿತವಾಗದ ವಿಶಿಷ್ಟ ಜಿತೇಂದ್ರಿಯತ್ವ ಅರ್ಜುನನದಾಗಿತ್ತು; ಇದರಿಂದಾಗಿ ಮುಂದೆ, ಅರ್ಜುನ (ಪುಟ ೩೧೨) (ಕ್ಷತ್ರತೇಜಾ ಬ್ರಹ್ಮಚಾರೀ ಕೌಮಾರಾದಪಿ ಚಾರ್ಜುನಃ) ಆಜನ್ಮ ಬ್ರಹ್ಮಚಾರೀ ಎಂಬ ಶ್ರೀಕೃಷ್ಣನ ಪ್ರಶಂಸೆಯ ಮಹತ್ತ್ವ ಬಿಂಬಿತವಾಗುವುದು.

೩. ಇದರಿಂದ ಅಜ್ಞಾತವಾಸದ ಒಂದು ವರ್ಷಕಾಲ ಅರ್ಜುನ ಬೃಹನ್ನಳೆ ಎಂಬುದಾಗಿ ಷಂಢವೇಷದಿಂದ ಇರಲು ಅನುಕೂಲವಾಯಿತು. ಪಾಲಿಸುವ ಧರ್ಮವು ಕೇಡನ್ನುಂಟು ಮಾಡದೆ ಒಳಿತಿಗೇ ಕಾರಣವಾಗುವುದು ಎಂಬುದಕ್ಕೆ ಇದೊಂದು ಅಪೂರ್ವ ನಿದರ್ಶನ.

ಅಲ್ಲಿಗೆ ಬಂದವು. ಕೃಷ್ಣನನ್ನು ಗುರುತಿಸಲಾರದೆ, ಆ ಪಿಶಾಚಿಗಳು, ತಮ್ಮ ಜಾತಿಗೆ ತಕ್ಕ ಚೇಷ್ಟೆಗಳನ್ನು ತೋರಿಸಿದವು. ಧ್ಯಾನಕ್ಕೆ ಕುಳಿತಾಗ ತಮ್ಮ ಹೃದಯದಲ್ಲೇ ಆ ಕೃಷ್ಣನನ್ನು ಕಂಡ ಅವರಿಗೆ ಆನಂದದಿಂದ ರೋಮಾಂಚನವಾಯಿತು. ಕೂಡಲೇ ಕೃಷ್ಣನ ಬಳಿಗೆ ಹೋಗಿ ಸ್ತುತಿಸಿ ನಮಸ್ಕರಿಸಿದವು. ಗಂಧರ್ವಶ್ರೇಷ್ಠರಾಗಿದ್ದ ಅವರನ್ನು ಕೃಷ್ಣ ಸ್ಪರ್ಶಮಾತ್ರದಿಂದಲೇ ಉತ್ತಮ ರೂಪ ಸ್ವರದಿಂದ ಕೂಡಿದ ಮೂಲರೂಪಕ್ಕೆ ಪರಿವರ್ತಿಸಿದ ; ಅವರು ಅವನನ್ನು ನೃತ್ಯಗೀತಾದಿಗಳಿಂದ ಬಹಳವಾಗಿ ಸ್ತುತಿಸಿದರು.

## ಶ್ರೀಕೃಷ್ಣನ ಕೈಲಾಸಯಾತ್ರೆ

ಶ್ರೀಕೃಷ್ಣನು ಅನಂತರ ಕೈಲಾಸಪರ್ವತಕ್ಕೆ ತೆರಳಿ, ಶಿವನನ್ನು ಕುರಿತು ತಪಸ್ಸು ಮಾಡುತ್ತಿರುವ-ವನಂತೆ ದುರ್ಜನರ ಮನಸ್ಸಿನಲ್ಲಿ ಮೋಹವನ್ನು ಕವಿಸುತ್ತ ಕುಳಿತ. ಹಿಂದೊಮ್ಮೆ ಕೃಷ್ಣನು ಶಿವನಿಗೆ ''ನಾನು ನಿನ್ನನ್ನು ಕುರಿತು ಹನ್ನೆರಡು ವರ್ಷಗಳ ಕಾಲ ತಪಸ್ಸನ್ನಾಚರಿಸುವಂತೆ ನಟಿಸುವೆನು ; ಅಸುರಮೋಹನವೇ ಅದರ ಮುಖ್ಯ ಉದ್ದೇಶ. ಅದರಿಂದ ದೇವತೆಗಳೇನೂ ಕಳವಳ-ಗೊಳ್ಳಬೇಕಿಲ್ಲ'' ಎಂದು ವಚನವಿತ್ತಿದ್ದ. ಆ ಮಾತನ್ನು ಸತ್ಯ ಮಾಡುವ ಸಲುವಾಗಿ ಬೃಹಸ್ಪತಿಗೆ ಒಂದೇ ಹಗಲಿನಲ್ಲಿ ಹನ್ನೆರಡು ರಾಶಿಗಳಲ್ಲೂ[೧] ಚರಿಸುವಂತೆ ಆಜ್ಞೆ ಮಾಡಿದ. ಆದ್ದರಿಂದ ಆ ಒಂದೇ ದಿನದಲ್ಲಿ ಹನ್ನೆರಡು ವರ್ಷಗಳಾಗಿಬಿಟ್ಟವು. ಪ್ರತಿಯೊಂದು ರಾಶಿಯನ್ನು ಒಂದು ವರ್ಷವನ್ನಾಗಿ ಮಾಡಿ, ಉಪವಾಸಾದಿಗಳನ್ನು, [೨]ನೂರೈವತ್ತು ಶ್ವಾಸಕಾಲವನ್ನು ತಿಂಗಳುಗಳನ್ನಾಗಿಯೂ ಕಲ್ಪಿಸಿ, ತನ್ನ ಭಕ್ತರಿಗೆಲ್ಲ ಹನ್ನೆರಡು ವರ್ಷ ವ್ರತದ ಫಲ ಕೊಡುವ ಸಲುವಾಗಿ ಅದನ್ನು ನಡೆಸಿದ.

ಅಲ್ಲಿ ಗರುಡ ಮೊದಲಾದವರು ಅವನ ಸೇವಕರಾಗಿ ಬಂದರು. ಶ್ರೀಕೃಷ್ಣನು ಹೋಮಾದಿ ಕ್ರಿಯೆಗಳನ್ನೆಲ್ಲ ತನ್ನನ್ನು ಕುರಿತೇ ಮಾಡಿಕೊಂಡರೂ, ದುಷ್ಟರಿಗೆ ಮಾತ್ರ ಅವೆಲ್ಲ ಶಿವನಿಗೆಂಬಂತೆ ತೋರಿಸುತ್ತಿದ್ದ. ಹಾಗೆ ವ್ರತನಿರತನಾಗಿದ್ದ ಕೃಷ್ಣನ ಬಳಿಗೆ ಬ್ರಹ್ಮ ಇಂದ್ರ ಮೊದಲಾದ ಎಲ್ಲ ದೇವತೆಗಳೂ, ಪಿತೃದೇವತೆಗಳು, ಮುನಿಶ್ರೇಷ್ಠರೊಂದಿಗೆ ಕೂಡಿಕೊಂಡು ಬಂದರು. ಅವರನ್ನು ಹಿಂಬಾಲಿಸಿ ಗಂಧರ್ವರೂ, ಸಿದ್ಧರೂ, ಯಕ್ಷರೂ ಬಂದರು. ತನ್ನ ಮನೆಯ ಬಳಿಗೆ ತನ್ನ

---

೧. ಗುರು ಒಂದು ವರ್ಷಕ್ಕೆ ಒಂದು ರಾಶಿಯಲ್ಲಿ ಸಂಚರಿಸುವನು. ಶ್ರೀಕೃಷ್ಣನ ಆದೇಶದಂತೆ ಆ ಸಮಯದಲ್ಲಿ ಗುರು ಒಂದೇ ದಿನದಲ್ಲಿ ಹನ್ನೆರಡು ರಾಶಿಗಳಲ್ಲಿ ಸಂಚರಿಸಿದ್ದರಿಂದ ಆ ಒಂದು ದಿನವು ಹನ್ನೆರಡು ವರ್ಷಗಳಷ್ಟು ದೀರ್ಘವಾಯಿತು ಎಂಬುದು ಇಲ್ಲಿಯ ವಿಶೇಷ : 'ಸಕಲಗ್ರಹಬಲ ನೀನೇ ಸರಸಿಜಾಕ್ಷ' ಎಂಬುದಕ್ಕೆ ಇದು ಉತ್ತಮ ನಿದರ್ಶನ.

೨. ಪ್ರತಿಗಂಟೆಗೆ ೯೦೦ ಶ್ವಾಸಗಳಂತೆ ಒಂದು ದಿವಸಕ್ಕೆ ಒಟ್ಟು ಶ್ವಾಸಗಳ ಸಂಖ್ಯೆ : ೯೦೦ X ೨೪ = ೨೧೬೦೦ ; ಶ್ರೀಕೃಷ್ಣನು ಒಂದು ದಿವಸವನ್ನು ಹನ್ನೆರಡು ವರ್ಷಗಳನ್ನಾಗಿ ಮಾಡಿದ್ದರಿಂದ (೨೧೬೦೦/೨೪) ಎರಡು ಗಂಟೆಗೆ ಒಂದು ವರ್ಷ ಎಂಬ ಲೆಕ್ಕದಲ್ಲಿ ೧೮೦೦ ಶ್ವಾಸಗಳಿಗೆ ಒಂದು ವರ್ಷ ಎಂದಾಗುವುದು. ಅದರಂತೆ ೧೫೦ ಶ್ವಾಸಗಳು ಎಂದರೆ ಒಂದು ತಿಂಗಳು ಎಂದಾಗುವುದು. ಇದರಿಂದ ಶ್ರೀಕೃಷ್ಣ ಆ ಕಾಲದಲ್ಲಿ ಮಾಸವ್ರತಗಳನ್ನು ೧೫೦ ಶ್ವಾಸಗಳ ಪ್ರಮಾಣದಲ್ಲಿ ಪೂರೈಸಿದ ಎಂಬುದು ಸೂಕ್ತವೆನ್ನಿಸುವುದು.

ಇಷ್ಟದೈವವೂ, ಸಕಲದೇವತೆಗಳ ದೈವವೂ ಆದ ಕೃಷ್ಣನು ಬಂದಿರುವುದನ್ನು ತಿಳಿದು, [೧]ಶಿವನೂ ಸಹ ಪತ್ನೀಸಮೇತನಾಗಿ, ತನ್ನ ಗಣಗಳೊಂದಿಗೆ , ಅತ್ಯಂತ ಸಂಭ್ರಮದಿಂದ ಪೂಜಾದ್ರವ್ಯಗಳನ್ನು ತೆಗೆದುಕೊಂಡು ಧಾವಿಸಿದ. ಕೃಷ್ಣನ ಪಾದಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಅರ್ಪಿಸಿ, ಪೂಜಿಸಿದ. ಅನಂತಗುಣಸಾಗರನಾದ ಆ ಪರಮಾತ್ಮನನ್ನು ಬಹಳವಾಗಿ ಸ್ತುತಿಸಿ, ಪ್ರಸನ್ನ-ಗೊಳಿಸಿದ. ಅಯೋಗ್ಯಜನರ ಮೋಹನೆಗಾಗಿ ಕೃಷ್ಣನೂ ಶಿವನನ್ನು ಸ್ತುತಿಸಿದ. ನಿಜಕ್ಕೂ ಅವನು ಸ್ತುತಿಸುತ್ತಿದ್ದುದು ಶಿವಾಂತರ್ಯಾಮಿಯಾದ ತನ್ನ ರೂಪವನ್ನೇ. ಕೃಷ್ಣನ ಮಾತುಗಳನ್ನು ಕೇಳಿ ಶಿವನು, ನೆರೆದಿದ್ದ ಎಲ್ಲ ದೇವತೆಗಳಿಗೂ ಶಪಥಪೂರ್ವಕವಾಗಿ ವಿವರಿಸಿದ – ''ನಾನು ಹೇಳುವ ಈ ಸತ್ಯವಾಕ್ಯಗಳನ್ನು ಕೇಳಿಸಿಕೊಳ್ಳಿರಿ. ವಿಷ್ಣುವನ್ನೇ ಎಲ್ಲ ಜನರು ಆಶ್ರಯಿಸಬೇಕು. ಆ ವಿಷ್ಣುವಿನ ಒಲುಮೆಗಾಗಿಯೇ, ರಮಾ, ವಾಯು ಮೊದಲಾದ ಇತರರನ್ನು ಆಶ್ರಯಿಸತಕ್ಕದ್ದು. ನನಗೂ ಬ್ರಹ್ಮನಿಗೂ ಸಹ ಈ ವಿಷ್ಣುವೇ ಪರದೇವತೆ. ಇದೇ ಎಲ್ಲ ಸಚ್ಛಾಸ್ತ್ರಗಳ ಮುಖ್ಯ ನಿರ್ಣಯ. ಮಾತ್ರವಲ್ಲದೆ, ಮಹಾಲಕ್ಷ್ಮಿಗೂ, ಉಳಿದೆಲ್ಲ ಜೀವಸಂಚಯಕ್ಕೂ ಇವನೇ ಸ್ವಾಮಿ ಎಂಬುದನ್ನು ನೀವು ಖಚಿತ ಪಡಿಸಿಕೊಳ್ಳಿರಿ.'' ಶಿವನ ಈ ಮಾತುಗಳನ್ನು ಕೇಳಿ ಕೃಷ್ಣನ ಬಗ್ಗೆ ಭಕ್ತಿ ಉಕ್ಕಿದ ಎಲ್ಲ ದೇವತೆಗಳೂ ಅವನನ್ನು ನಮಸ್ಕರಿಸಿದರು. ಶಿವನು ಹೇಳಿದ ಕೃಷ್ಣನ ಬಗ್ಗೆ ತತ್ತ್ವನಿರ್ಣಾಯಕವಾದ, ಅನೇಕ ವಾಕ್ಯಗಳಿಂದ, ಆ ಮೊದಲೇ ಮಹಾ ಜ್ಞಾನಿಗಳೇ ಆಗಿದ್ದ ಇಂದ್ರಾದಿ ದೇವತೆಗಳೆಲ್ಲರೂ, ಇನ್ನೂ ಹೆಚ್ಚು ಜ್ಞಾನವನ್ನು ಸಂಪಾದಿಸಿಕೊಳ್ಳುವಂತಾಯಿತು.

ದೇವತೆಗಳು ಕೃಷ್ಣನನ್ನು ಎಲ್ಲ ದೇವತೆಗಳಿಗಿಂತಲೂ ಉತ್ತಮನೆಂಬುದಾಗಿ ಸದಾ ತಿಳಿದೇ ಇರುವರು. ಆದರೂ, ಪ್ರಮಾಣಬಾಹುಲ್ಯದಿಂದಾಗಿ, ಪ್ರಬಲಯುಕ್ತಿಯಿಂದಾಗಿ ಕೆಲವೊಮ್ಮೆ ಒದಗಬಹುದಾದ ಸಂಶಯಗಳನ್ನು ಶಿವನ ವಾಕ್ಯವು ಆ ಸಮಯದಲ್ಲಿ ಪರಿಹರಿಸಿತು. ''ನಿನ್ನಿಂದ ನಾನು ಮಗನನ್ನು ಪಡೆಯುವೆನು'' ಎಂದಿತ್ತ ತನ್ನ ಮಾತನ್ನು ನಡೆಸಲೆಂದು ಕೃಷ್ಣನು ಶಿವನನ್ನು – ''ನನಗೆ ಮಗನನ್ನು ಕೊಡು'' ಎಂದು ಕೇಳಿದ. ''ನಿನಗೆ ಈ ಮೊದಲೇ ಜನಿಸಿರುವ ಪ್ರದ್ಯುಮ್ನನೆಂಬ ಮಗನು, ಈಗ ನನ್ನಿಂದ ಕೊಡಲ್ಪಟ್ಟವನು ಎಂಬ ರೂಢಿ ಜನಗಳಲ್ಲಿ ಬರಲಿ. ಹಿಂದೆ ನಾನು ಕಾಮನನ್ನು ಸುಟ್ಟಾಗ, ರತಿಯು ಬಂದು ನನನ್ನು ಕುರಿತು ತನ್ನ ಪತಿಯನ್ನು ಕೊಡುವಂತೆ ಪ್ರಾರ್ಥಿಸಿದಳು. ಕೃಷ್ಣನಿಂದ ಹುಟ್ಟುವ ನಿನ್ನ ಪತಿಯನ್ನು ಹೊಂದುವಿ ಎಂದು ಅವಳಿಗೆ ತಿಳಿಸಿದ್ದೆ. ನಿನ್ನ ಆಜ್ಞೆಯಂತೆ ಆ ಪ್ರದ್ಯುಮ್ನ ನಿನಗೆ ನನ್ನಿಂದ ಕೊಡಲ್ಪಟ್ಟವನು ಎಂದು ಆಗಲಿ. ದೇವೇಶ ! ನಾನು ನಿನ್ನ ದಾಸ. ಶರಣಾಗತನಾಗಿರುವ ನನ್ನನ್ನು ಕಾಪಾಡು.''

## ವಕ್ರಾಸುರನ ವಧೆ

ಈ ರೀತಿಯಾಗಿ ವಿಜ್ಞಾಪಿಸಿ ನಮಸ್ಕರಿಸಿದ ಶಿವ ಮರಳಿ ನುಡಿದ – ''ಕೃಷ್ಣನು ಈಗೇಕೆ ಇಲ್ಲಿಗೆ ಬಂದಿರುವನೆಂಬುದಕ್ಕೆ ಕಾರಣವನ್ನು ತಿಳಿಸುವೆನು, ಕೇಳಿರಿ ; ಹಿಂದೆ ವಕ್ರ ಎಂಬ ಹೆಸರಿನ

೧. ತನ್ನ ಮಂದಿರದ ಬಳಿಗೆ ಆಗಮಿಸಿದ ಶ್ರೀಕೃಷ್ಣನನ್ನು ಶಿವನು ಸತ್ಕರಿಸುವ ಈ ಪ್ರಸಂಗವು, ತನ್ನ ಬಳಿಗೆ ಆಗಮಿಸಿದ ಶ್ರೀರಾಮನನ್ನು ಸಮುದ್ರರಾಜನು ಸತ್ಕರಿಸುವ ರಾಮಾಯಣದ ಪ್ರಸಂಗವನ್ನು ಹೋಲುವುದು.

ಅಲ್ಲಿಗೆ ಬಂದವು. ಕೃಷ್ಣನನ್ನು ಗುರುತಿಸಲಾರದೆ, ಆ ಪಿಶಾಚಿಗಳು, ತಮ್ಮ ಜಾತಿಗೆ ತಕ್ಕ ಚೇಷ್ಟೆಗಳನ್ನು ತೋರಿಸಿದವು. ಧ್ಯಾನಕ್ಕೆ ಕುಳಿತಾಗ ತಮ್ಮ ಹೃದಯದಲ್ಲೇ ಆ ಕೃಷ್ಣನನ್ನು ಕಂಡ ಅವರಿಗೆ ಆನಂದದಿಂದ ರೋಮಾಂಚನವಾಯಿತು. ಕೂಡಲೇ ಕೃಷ್ಣನ ಬಳಿಗೆ ಹೋಗಿ ಸ್ತುತಿಸಿ ನಮಸ್ಕರಿಸಿದವು. ಗಂಧರ್ವಶ್ರೇಷ್ಠರಾಗಿದ್ದ ಅವರನ್ನು ಕೃಷ್ಣ ಸ್ಪರ್ಶಮಾತ್ರದಿಂದಲೇ ಉತ್ತಮ ರೂಪ ಸ್ವರದಿಂದ ಕೂಡಿದ ಮೂಲರೂಪಕ್ಕೆ ಪರಿವರ್ತಿಸಿದ ; ಅವರು ಅವನನ್ನು ನೃತ್ಯಗೀತಾದಿಗಳಿಂದ ಬಹಳವಾಗಿ ಸ್ತುತಿಸಿದರು.

## ಶ್ರೀಕೃಷ್ಣನ ಕೈಲಾಸಯಾತ್ರೆ

ಶ್ರೀಕೃಷ್ಣನು ಅನಂತರ ಕೈಲಾಸಪರ್ವತಕ್ಕೆ ತೆರಳಿ, ಶಿವನನ್ನು ಕುರಿತು ತಪಸ್ಸು ಮಾಡುತ್ತಿರುವ-ವನಂತೆ ದುರ್ಜನರ ಮನಸ್ಸಿನಲ್ಲಿ ಮೋಹವನ್ನು ಕವಿಸುತ್ತ ಕುಳಿತ. ಹಿಂದೊಮ್ಮೆ ಕೃಷ್ಣನು ಶಿವನಿಗೆ "ನಾನು ನಿನ್ನನ್ನು ಕುರಿತು ಹನ್ನೆರಡು ವರ್ಷಗಳ ಕಾಲ ತಪಸ್ಸನ್ನಾಚರಿಸುವಂತೆ ನಟಿಸುವೆನು ; ಅಸುರಮೋಹನವೇ ಅದರ ಮುಖ್ಯ ಉದ್ದೇಶ. ಅದರಿಂದ ದೇವತೆಗಳೇನೂ ಕಳವಳ-ಗೊಳ್ಳಬೇಕಿಲ್ಲ" ಎಂದು ವಚನವಿತ್ತಿದ್ದ. ಆ ಮಾತನ್ನು ಸತ್ಯ ಮಾಡುವ ಸಲುವಾಗಿ ಬೃಹಸ್ಪತಿಗೆ ಒಂದೇ ಹಗಲಿನಲ್ಲಿ ಹನ್ನೆರಡು ರಾಶಿಗಳಲ್ಲೂ[೧] ಚರಿಸುವಂತೆ ಆಜ್ಞೆ ಮಾಡಿದ. ಆದ್ದರಿಂದ ಆ ಒಂದೇ ದಿನದಲ್ಲಿ ಹನ್ನೆರಡು ವರ್ಷಗಳಾಗಿಬಿಟ್ಟವು. ಪ್ರತಿಯೊಂದು ರಾಶಿಯನ್ನು ಒಂದು ವರ್ಷವನ್ನಾಗಿ ಮಾಡಿ, ಉಪವಾಸಾದಿಗಳನ್ನು, [೨]ನೂರೈವತ್ತು ಶ್ವಾಸಕಾಲವನ್ನು ತಿಂಗಳುಗಳನ್ನಾಗಿಯೂ ಕಲ್ಪಿಸಿ, ತನ್ನ ಭಕ್ತರಿಗೆಲ್ಲ ಹನ್ನೆರಡು ವರ್ಷ ವ್ರತದ ಫಲ ಕೊಡುವ ಸಲುವಾಗಿ ಅದನ್ನು ನಡೆಸಿದ.

ಅಲ್ಲಿ ಗರುಡ ಮೊದಲಾದವರು ಅವನ ಸೇವಕರಾಗಿ ಬಂದರು. ಶ್ರೀಕೃಷ್ಣನು ಹೋಮಾದಿ ಕ್ರಿಯೆಗಳನ್ನೆಲ್ಲ ತನ್ನನ್ನು ಕುರಿತೇ ಮಾಡಿಕೊಂಡರೂ, ದುಷ್ಟರಿಗೆ ಮಾತ್ರ ಅವೆಲ್ಲ ಶಿವನಿಗೆಂಬಂತೆ ತೋರಿಸುತ್ತಿದ್ದ. ಹಾಗೆ ವ್ರತನಿರತನಾಗಿದ್ದ ಕೃಷ್ಣನ ಬಳಿಗೆ ಬ್ರಹ್ಮ ಇಂದ್ರ ಮೊದಲಾದ ಎಲ್ಲ ದೇವತೆಗಳೂ, ಪಿತೃದೇವತೆಗಳು, ಮುನಿಶ್ರೇಷ್ಠರೊಂದಿಗೆ ಕೂಡಿಕೊಂಡು ಬಂದರು. ಅವರನ್ನು ಹಿಂಬಾಲಿಸಿ ಗಂಧರ್ವರೂ, ಸಿದ್ಧರೂ, ಯಕ್ಷರೂ ಬಂದರು. ತನ್ನ ಮನೆಯ ಬಳಿಗೆ ತನ್ನ

---

೧. ಗುರು ಒಂದು ವರ್ಷಕ್ಕೆ ಒಂದು ರಾಶಿಯಲ್ಲಿ ಸಂಚರಿಸುವನು. ಶ್ರೀಕೃಷ್ಣನ ಆದೇಶದಂತೆ ಆ ಸಮಯದಲ್ಲಿ ಗುರು ಒಂದೇ ದಿನದಲ್ಲಿ ಹನ್ನೆರಡು ರಾಶಿಗಳಲ್ಲಿ ಸಂಚರಿಸಿದ್ದರಿಂದ ಆ ಒಂದು ದಿನವು ಹನ್ನೆರಡು ವರ್ಷಗಳಷ್ಟು ದೀರ್ಘವಾಯಿತು ಎಂಬುದು ಇಲ್ಲಿಯ ವಿಶೇಷ : 'ಸಕಲಗ್ರಹಬಲ ನೀನೇ ಸರಸಿಜಾಕ್ಷ' ಎಂಬುದಕ್ಕೆ ಇದು ಉತ್ತಮ ನಿದರ್ಶನ.

೨. ಪ್ರತಿಗಂಟೆಗೆ ೯೦೦ ಶ್ವಾಸಗಳಂತೆ ಒಂದು ದಿವಸಕ್ಕೆ ಒಟ್ಟು ಶ್ವಾಸಗಳ ಸಂಖ್ಯೆ : ೯೦೦ X ೨೪ = ೨೧೬೦೦ ; ಶ್ರೀಕೃಷ್ಣನು ಒಂದು ದಿವಸವನ್ನು ಹನ್ನೆರಡು ವರ್ಷಗಳನ್ನಾಗಿ ಮಾಡಿದ್ದರಿಂದ (೨೧೬೦೦/೨೪) ಎರಡು ಗಂಟೆಗೆ ಒಂದು ವರ್ಷ ಎಂಬ ಲೆಕ್ಕದಲ್ಲಿ ೧೮೦೦ ಶ್ವಾಸಗಳಿಗೆ ಒಂದು ವರ್ಷ ಎಂದಾಗುವುದು. ಅದರಂತೆ ೧೫೦ ಶ್ವಾಸಗಳು ಎಂದರೆ ಒಂದು ತಿಂಗಳು ಎಂದಾಗುವುದು. ಇದರಿಂದ ಶ್ರೀಕೃಷ್ಣ ಆ ಕಾಲದಲ್ಲಿ ಮಾಸವ್ರತಗಳನ್ನು ೧೫೦ ಶ್ವಾಸಗಳ ಪ್ರಮಾಣದಲ್ಲಿ ಪೂರೈಸಿದ ಎಂಬುದು ಸೂಕ್ತವೆನ್ನಿಸುವುದು.

ಇಷ್ಟದೈವವೂ, ಸಕಲದೇವತೆಗಳ ದೈವವೂ ಆದ ಕೃಷ್ಣನು ಬಂದಿರುವುದನ್ನು ತಿಳಿದು, [೧] ಶಿವನೂ ಸಹ ಪತ್ನೀಸಮೇತನಾಗಿ, ತನ್ನ ಗಣಗಳೊಂದಿಗೆ , ಅತ್ಯಂತ ಸಂಭ್ರಮದಿಂದ ಪೂಜಾದ್ರವ್ಯಗಳನ್ನು ತೆಗೆದುಕೊಂಡು ಧಾವಿಸಿದ. ಕೃಷ್ಣನ ಪಾದಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಅರ್ಪಿಸಿ, ಪೂಜಿಸಿದ. ಅನಂತಗುಣಸಾಗರನಾದ ಆ ಪರಮಾತ್ಮನನ್ನು ಬಹಳವಾಗಿ ಸ್ತುತಿಸಿ, ಪ್ರಸನ್ನ-ಗೊಳಿಸಿದ. ಅಯೋಗ್ಯಜನರ ಮೋಹನೆಗಾಗಿ ಕೃಷ್ಣನೂ ಶಿವನನ್ನು ಸ್ತುತಿಸಿದ. ನಿಜಕ್ಕೂ ಅವನು ಸ್ತುತಿಸುತ್ತಿದ್ದುದು ಶಿವಾಂತರ್ಯಾಮಿಯಾದ ತನ್ನ ರೂಪವನ್ನೇ. ಕೃಷ್ಣನ ಮಾತುಗಳನ್ನು ಕೇಳಿ ಶಿವನು, ನೆರೆದಿದ್ದ ಎಲ್ಲ ದೇವತೆಗಳಿಗೂ ಶಪಥಪೂರ್ವಕವಾಗಿ ವಿವರಿಸಿದ – ''ನಾನು ಹೇಳುವ ಈ ಸತ್ಯವಾಕ್ಯಗಳನ್ನು ಕೇಳಿಸಿಕೊಳ್ಳಿರಿ. ವಿಷ್ಣುವನ್ನೇ ಎಲ್ಲ ಜನರು ಆಶ್ರಯಿಸಬೇಕು. ಆ ವಿಷ್ಣುವಿನ ಒಲುಮೆಗಾಗಿಯೇ, ರಮಾ, ವಾಯು ಮೊದಲಾದ ಇತರರನ್ನು ಆಶ್ರಯಿಸತಕ್ಕದ್ದು. ನನಗೂ ಬ್ರಹ್ಮನಿಗೂ ಸಹ ಈ ವಿಷ್ಣುವೇ ಪರದೇವತೆ. ಇದೇ ಎಲ್ಲ ಸಚ್ಛಾಸ್ತ್ರಗಳ ಮುಖ್ಯ ನಿರ್ಣಯ. ಮಾತ್ರವಲ್ಲದೆ, ಮಹಾಲಕ್ಷ್ಮಿಗೂ, ಉಳಿದೆಲ್ಲ ಜೀವಸಂಚಯಕ್ಕೂ ಇವನೇ ಸ್ವಾಮಿ ಎಂಬುದನ್ನು ನೀವು ಖಚಿತ ಪಡಿಸಿಕೊಳ್ಳಿರಿ.'' ಶಿವನ ಈ ಮಾತುಗಳನ್ನು ಕೇಳಿ ಕೃಷ್ಣನ ಬಗ್ಗೆ ಭಕ್ತಿ ಉಕ್ಕಿದ ಎಲ್ಲ ದೇವತೆಗಳೂ ಅವನನ್ನು ನಮಸ್ಕರಿಸಿದರು. ಶಿವನು ಹೇಳಿದ ಕೃಷ್ಣನ ಬಗ್ಗೆ ತತ್ತ್ವನಿರ್ಣಾಯಕವಾದ, ಅನೇಕ ವಾಕ್ಯಗಳಿಂದ, ಆ ಮೊದಲೇ ಮಹಾ ಜ್ಞಾನಿಗಳೇ ಆಗಿದ್ದ ಇಂದ್ರಾದಿ ದೇವತೆಗಳೆಲ್ಲರೂ, ಇನ್ನೂ ಹೆಚ್ಚು ಜ್ಞಾನವನ್ನು ಸಂಪಾದಿಸಿಕೊಳ್ಳುವಂತಾಯಿತು.

ದೇವತೆಗಳು ಕೃಷ್ಣನನ್ನು ಎಲ್ಲ ದೇವತೆಗಳಿಗಿಂತಲೂ ಉತ್ತಮನೆಂಬುದಾಗಿ ಸದಾ ತಿಳಿದೇ ಇರುವರು. ಆದರೂ, ಪ್ರಮಾಣಬಾಹುಲ್ಯದಿಂದಾಗಿ, ಪ್ರಬಲಯುಕ್ತಿಯಿಂದಾಗಿ ಕೆಲವೊಮ್ಮೆ ಒದಗಬಹುದಾದ ಸಂಶಯಗಳನ್ನು ಶಿವನ ವಾಕ್ಯವು ಆ ಸಮಯದಲ್ಲಿ ಪರಿಹರಿಸಿತು. ''ನಿನ್ನಿಂದ ನಾನು ಮಗನನ್ನು ಪಡೆಯುವೆನು'' ಎಂದಿತ್ತ ತನ್ನ ಮಾತನ್ನು ನಡೆಸಲೆಂದು ಕೃಷ್ಣನು ಶಿವನನ್ನು – ''ನನಗೆ ಮಗನನ್ನು ಕೊಡು'' ಎಂದು ಕೇಳಿದ. ''ನಿನಗೆ ಈ ಮೊದಲೇ ಜನಿಸಿರುವ ಪ್ರದ್ಯುಮ್ನನೆಂಬ ಮಗನು, ಈಗ ನನ್ನಿಂದ ಕೊಡಲ್ಪಟ್ಟವನು ಎಂಬ ರೂಢಿ ಜನಗಳಲ್ಲಿ ಬರಲಿ. ಹಿಂದೆ ನಾನು ಕಾಮನನ್ನು ಸುಟ್ಟಾಗ, ರತಿಯು ಬಂದು ನನನ್ನು ಕುರಿತು ತನ್ನ ಪತಿಯನ್ನು ಕೊಡುವಂತೆ ಪ್ರಾರ್ಥಿಸಿದಳು. ಕೃಷ್ಣನಿಂದ ಹುಟ್ಟುವ ನಿನ್ನ ಪತಿಯನ್ನು ಹೊಂದುವಿ ಎಂದು ಅವಳಿಗೆ ತಿಳಿಸಿದ್ದೆ. ನಿನ್ನ ಆಜ್ಞೆಯಂತೆ ಆ ಪ್ರದ್ಯುಮ್ನ ನಿನಗೆ ನನ್ನಿಂದ ಕೊಡಲ್ಪಟ್ಟವನು ಎಂದು ಆಗಲಿ. ದೇವೇಶ ! ನಾನು ನಿನ್ನ ದಾಸ. ಶರಣಾಗತನಾಗಿರುವ ನನ್ನನ್ನು ಕಾಪಾಡು.''

## ವಕ್ರಾಸುರನ ವಧೆ

ಈ ರೀತಿಯಾಗಿ ವಿಜ್ಞಾಪಿಸಿ ನಮಸ್ಕರಿಸಿದ ಶಿವ ಮರಳಿ ನುಡಿದ – ''ಕೃಷ್ಣನು ಈಗೇಕೆ ಇಲ್ಲಿಗೆ ಬಂದಿರುವನೆಂಬುದಕ್ಕೆ ಕಾರಣವನ್ನು ತಿಳಿಸುವೆನು, ಕೇಳಿರಿ ; ಹಿಂದೆ ವಕ್ರ ಎಂಬ ಹೆಸರಿನ

೧. ತನ್ನ ಮಂದಿರದ ಬಳಿಗೆ ಆಗಮಿಸಿದ ಶ್ರೀಕೃಷ್ಣನನ್ನು ಶಿವನು ಸತ್ಕರಿಸುವ ಈ ಪ್ರಸಂಗವು, ತನ್ನ ಬಳಿಗೆ ಆಗಮಿಸಿದ ಶ್ರೀರಾಮನನ್ನು ಸಮುದ್ರರಾಜನು ಸತ್ಕರಿಸುವ ರಾಮಾಯಣದ ಪ್ರಸಂಗವನ್ನು ಹೋಲುವುದು.

ಅಸುರನೊಬ್ಬನಿದ್ದ. ಅವನು ಆಗ ತಾನೇ 'ಕೃಷ್ಣನಿಂದ ಜನಿಸುವ ಕಾಮನ ಹೊರತು ಬೇರೆ ಯಾರಿಂದಲೂ ವಧ್ಯನಾಗದಂತೆ ಬ್ರಹ್ಮದೇವರಿಂದ ವರವನ್ನು ಪಡೆದುಕೊಂಡಿದ್ದ. ಅವನನ್ನು ಕೊಲ್ಲಲೆಂದೇ ಕೃಷ್ಣನು ಉದರದಲ್ಲಿ ಪ್ರದ್ಯುಮ್ನನನ್ನಿರಿಸಿಕೊಂಡು ಇಲ್ಲಿಗೆ ಬಂದಿದ್ದ. ತನ್ನ ಉದರದಿಂದ ತನ್ನ ಮಗನನ್ನು ಹೊರಗೆ ಹಾಕಿ, ಕೃಷ್ಣನೀಗ ಆ ವಕ್ರನನ್ನು ಸುಡಿಸಿದ. ಇಲ್ಲಿಯ ಪೊದೆಯೊಂದು ಧಗ್ಗನೆ ಉರಿದುಹೋದದ್ದನ್ನು ನೀವೀಗ ಕಂಡಿರಲ್ಲವೇ ! ತನ್ನ ತೇಜಸ್ಸಿನಿಂದ ಪ್ರಜ್ವಲಿಸಿದ ಜ್ವಾಲೆಗಳ ಮಾಲೆಯಿಂದ ಕರಾಲನಾದ ಪ್ರದ್ಯುಮ್ನನಿಂದಾಗಿ ವನಸಮೇತನಾಗಿ ಆ ದೈತ್ಯ ಸುಟ್ಟುಹೋದ. ಪ್ರದ್ಯುಮ್ನನನ್ನು ಕೃಷ್ಣನು ಮತ್ತೆ ತನ್ನ ಉದರದಲ್ಲಿ ಇರಿಸಿಕೊಂಡ. ಇವನನ್ನು ಸದ್ಯೋಗರ್ಭವನ್ನಾಗಿ ರುಗ್ಮಿಣಿಯಲ್ಲಿ ಮತ್ತೆ ಹುಟ್ಟಿಸುವನು. ಕ್ಷಣಮಾತ್ರದಲ್ಲಿಯೇ ಮೊದಲಿನಂತೆ ಅವನು ಯುವಕನಾಗುವನು. ಇದೆಲ್ಲವನ್ನೂ ನಾರದಾದಿ ಮುನಿಗಳೆಲ್ಲರು ಕಂಡಿರುವರು. ಪೂರ್ಣೈಶ್ವರ್ಯಸಂಪನ್ನನಾದ್ದರಿಂದಲೇ ದೇವನಾದ ಇವನು ಹೀಗೆ ಕ್ರೀಡಿಸುವನು.''

ಶಿವನ ಈ ಮಾತುಗಳನ್ನು ಕೇಳಿ ವಿಸ್ಮಯಗೊಂಡ ಇಂದ್ರಾದಿದೇವತೆಗಳೆಲ್ಲ ಮತ್ತೆ ಕೃಷ್ಣನಿಗೆರಗಿದರು. ಅನಂತರ ಬ್ರಹ್ಮ ಶಿವ ಮೊದಲಾದ ದೇವತೆಗಳಿಂದ ಸ್ತುತಿಸಲ್ಪಟ್ಟ ದೇವನಾದ ಕೃಷ್ಣನು, ಗರುಡನ ಭುಜದ ಮೇಲೆ ಕುಳಿತು, ಪುನಃ ಪುನಃ ಶಿವನಿಂದ ನಮಸ್ಕರಿಸಲ್ಪಟ್ಟು ಹೊರಟು, ಮಾರನೆಯ ಹಗಲೇ ದ್ವಾರಕೆಗೆ ಮರಳಿದ.

## ದ್ವಾರಕೆಯನ್ನು ಮುತ್ತಿದ ಪೌಂಡ್ರಕವಾಸುದೇವ

ಕೃಷ್ಣನು ಕೈಲಾಸಕ್ಕೆ ತೆರಳಿದ ರಾತ್ರಿಯಲ್ಲೇ ಪೌಂಡ್ರಕವಾಸುದೇವನು ದ್ವಾರಕೆಯನ್ನು ಮುತ್ತಿದ. ಏಕಲವ್ಯ ಮಾತ್ರವಲ್ಲದೆ ಪೌಂಡ್ರಕನ ತಾಯಿಯ ತಂದೆಯೂ ಹಾಗೂ ಅವನ ಮೂರು ಅಕ್ಷೋಹಿಣೀ ಸೇನೆಯೂ ಅವನೊಂದಿಗೆ ಬಂದಿತ್ತು. ಪಟ್ಟಣವನ್ನು ಹಾಳು ಮಾಡುವ ಕಾರ್ಯದಲ್ಲಿ ಪೌಂಡ್ರಕನು ತೊಡಗಿದ್ದನ್ನು ಕಂಡು, ಬಲರಾಮ ಸಾತ್ಯಕಿ ಮೊದಲಾದ ಯಾದವವೀರರೆಲ್ಲರೂ ಅವನೊಂದಿಗೆ ಯುದ್ಧಕ್ಕೆ ತೊಡಗಿದರು. ಏಕಲವ್ಯ ಪ್ರಯೋಗಿಸಿದ ಅಸ್ತ್ರಶಸ್ತ್ರಗಳ ಹೊಡೆತಕ್ಕೆ ಯಾದವರ ಉತ್ಸಾಹ ಕುಂದಿತು. ರಾತ್ರಿಯಲ್ಲಿ ಅವರ ದೀಪಗಳೆಲ್ಲ ನಂದಿಹೋದವು. ಬಲರಾಮ ಸಾತ್ಯಕಿಯರೊಂದಿಗೆ ಯಾದವಸೇನೆಯು ಪಟ್ಟಣವನ್ನು ಸೇರಿ, ದೊಡ್ಡ ದೀವಟಿಗೆಗಳನ್ನು ತೆಗೆದುಕೊಂಡು ಮತ್ತೆ ಅಣಿಯಾಯಿತು. ಬಲರಾಮನ ನೇತೃತ್ವದಲ್ಲಿ ಹಾಗೆ ಬಂದ ಸೇನೆ, ಗಾಯಗೊಂಡ ಸಿಂಹಗಳು ಗುಹೆಯಿಂದ ಹೊರಬರುವಂತೆ, ಶಸ್ತ್ರಪಾಣಿಯಾಗಿ ಹೊರಬಿದ್ದಿತು. ಏಕಲವ್ಯನ ಮೇಲೆ ಬಲರಾಮನೂ, ಪೌಂಡ್ರಕನ ಮೇಲೆ ಸಾತ್ಯಕಿಯೂ ರಥಾರೂಢರಾಗಿ ಎರಿಹೋದರು. ಸಾತ್ಯಕಿ ಪೌಂಡ್ರಕರಲ್ಲಿ ನಡೆದ ಯುದ್ಧದಲ್ಲಿ ಆ ಇಬ್ಬರು ಒಬ್ಬರನ್ನೊಬ್ಬರು ವಿರಥರಾಗಿಸಿದರು. ಅನಂತರ ಅವರಿಬ್ಬರೂ ಗದಾಯುದ್ಧವನ್ನು ಆರಂಭಿಸಿ- ದರು. ಅದೇ ರೀತಿ ಬಲರಾಮ ಏಕಲವ್ಯರೂ ಸಹ ಒಬ್ಬರು ಮತ್ತೊಬ್ಬರ ರಥವನ್ನು ಹೊಡೆದು, ಅನಂತರ ತಾವೂ ಗದಾಯುದ್ಧವನ್ನೇ ಆರಂಭಿಸಿದರು.

## ಏಕಲವ್ಯನ ಪಲಾಯನ

ಆ ವೇಳೆಗೆ ಗರುಡಾರೂಢನಾಗಿ ಕೃಷ್ಣನು ಅವರಿಗೆ ಯುದ್ಧಭೂಮಿಯಲ್ಲಿ ಕಾಣಿಸಿಕೊಂಡ. ಕೃಷ್ಣನನ್ನು ಕಂಡ ತಕ್ಷಣ ಆನಂದದಿಂದ ಉಬ್ಬಿಹೋದ ಬಲರಾಮ, ಏಕಲವ್ಯನನ್ನು ಕೊಲ್ಲಲು ಸಿದ್ಧನಾದ. ಎರಡೂ ಕೈಗಳಿಂದ ಗದೆಯನ್ನೆತ್ತಿಕೊಂಡು ಧಾವಿಸಿ ಬರುತ್ತಿದ್ದುದನ್ನು ಕಂಡ ಏಕಲವ್ಯನು, ಬಲರಾಮನ ಬಲ ಹಾಗೂ ಕೋಪ ಎರಡನ್ನೂ ಕಂಡು ಭಯಭೀತನಾಗಿ, ಜೀವ ಉಳಿಸಿಕೊಳ್ಳಲೆಂದು ಬಹಳದೂರಕ್ಕೆ ಓಡತೊಡಗಿದ. ಗದಾಧಾರಿಯಾದ ಬಲರಾಮನೂ ಸಹ ಅವನನ್ನು ಬೆಂಬತ್ತಿ ಓಡತೊಡಗಿದ. ಓಡುತ್ತ, ಓಡುತ್ತ, ಏಕಲವ್ಯನು ಸಮುದ್ರದಲ್ಲಿಯೇ ಬಿದ್ದುಬಿಟ್ಟ. ಹೀಗೆ ಶತ್ರುವನ್ನು ತನ್ನ ಗದೆಯಿಂದಲೇ ದಾಟಿಸಿದ ಬಲರಾಮ ಅಲ್ಲಿ ಗದಾ-ಪಾಣಿಯಾಗಿ ಕಾಯುತ್ತಾ ನಿಂತುಬಿಟ್ಟ. ಬಲರಾಮ ತನ್ನನ್ನು ಅಟ್ಟಿಸಿಕೊಂಡೇ ಬರುತ್ತಿದ್ದಾನೆಂಬ ಭ್ರಮೆಯಿಂದ ಸಮುದ್ರದಲ್ಲಿ ಬಿದ್ದ ಏಕಲವ್ಯನು ಎಂಭತ್ತು ಯೋಜನಗಳಷ್ಟು ದೂರ ಈಜಿ, ಅಲ್ಲಿ ಒಂದು ದ್ವೀಪ ಸಿಕ್ಕಲು ಅದನ್ನು ಏರಿ ಹಿಂದಕ್ಕೆ ದಿಟ್ಟಿಸಿದ. ಹೀಗೆ ಬಲರಾಮನು ಅಪಾರ ಬಲಶಾಲಿಯಾದ ಏಕಲವ್ಯನನ್ನು ಓಡಿಸಿ ಸಂತೃಪ್ತಿಯಿಂದ ಕೃಷ್ಣನ ಬಳಿಗೆ ಹಿಂತಿರುಗಿದ.

## ಪೌಂಡ್ರಕವಾಸುದೇವನ ವಧೆ

ಸಾತ್ಯಕಿಯನ್ನು ಲೆಕ್ಕಿಸದೆ ಪೌಂಡ್ರಕನು ಕೃಷ್ಣನ ಮೇಲೆಯೇ ಎರಗಲು ಹೊರಟ. ಕೃಷ್ಣನು ಕ್ಷಣಮಾತ್ರದಲ್ಲಿಯೇ ಅವನ ರಥ ಹಾಗೂ ಆಯುಧಗಳನ್ನು ನಾಶ ಮಾಡಿದ. ಅವನು ಅಲ್ಲಿಂದ ಪಲಾಯನ ಮಾಡಿ ತನ್ನ ಪಟ್ಟಣವನ್ನೇ ಸೇರಿಕೊಂಡ. ಅಲ್ಲಿಂದ ಒಬ್ಬ ದೂತನನ್ನು ಕೃಷ್ಣನ ಬಳಿಗೆ ಕಳುಹಿಸಿಕೊಟ್ಟ. ಆ ದೂತ ಹೇಳಿದ – ''ನಾನೇ ನಿಜವಾದ ವಾಸುದೇವ. ನನ್ನ ಲಾಂಛನಗಳನ್ನೆಲ್ಲ ಬಿಟ್ಟುಕೊಟ್ಟು ಅನಂತನಾದ ನನ್ನನ್ನು ನೀನು ಶರಣು ಹೊಂದತಕ್ಕದ್ದು'' ಎಂಬ ಪೌಂಡ್ರಕನ ಮಾತುಗಳನ್ನು ಕೇಳಿ, ಯಾದವವೀರರೆಲ್ಲರೂ ನಕ್ಕರು. ಕೃಷ್ಣನೂ ಸಹ ನಗುತ್ತಲೇ – ''ನಿನ್ನ ಚಿಹ್ನೆಗಳಾದ ಆಯುಧಗಳನ್ನು ನಾನು ಯುದ್ಧದಲ್ಲಿ ನಿನಗೆ ಒಪ್ಪಿಸುವೆನು'' ಎಂದು ಆ ದೂತನ ಮೂಲಕ ಹೇಳಿ ಕಳುಹಿಸಿದ. ಕೃಷ್ಣ ಪೌಂಡ್ರಕರಿಬ್ಬರೂ ಯುದ್ಧದಲ್ಲಿ ಮತ್ತೆ ಎದುರಾದರು. ಬಂಗಾರದ ಗರುಡನ ಮೇಲೆ ಕುಳಿತು, ಕೃತ್ರಿಮವಾದ ಚಕ್ರಾದಿ ಆಯುಧಗಳನ್ನು ಧರಿಸಿ, ಶ್ರೀವತ್ಸ ಚಿಹ್ನೆಗಾಗಿ ವಕ್ಷಸ್ಥಲವನ್ನೇ ಸುಟ್ಟುಕೊಂಡಿದ್ದ ಆ ಕೇಡುಬುದ್ಧಿಯ ಅವನನ್ನು ಕಂಡು ಕೃಷ್ಣನಿಗೂ ನಗು ತಡೆಯದಾಯಿತು. ಅಸ್ತ್ರಶಸ್ತ್ರಗಳನ್ನು ಸುರಿಸುತ್ತಿದ್ದ ಅವನನ್ನು ಕ್ಷಣಮಾತ್ರದಲ್ಲಿ ಸೋಲಿಸಿ, ಅವನ ಕತ್ತನ್ನು ಚಕ್ರದಿಂದ ಕತ್ತರಿಸಿ ಹಾಕಿದ. ಅನಂತರ ಅವನ ಮಾತಾಮಹನ ಶಿರಸ್ಸನ್ನೂ ಒಂದು ಬಾಣದಿಂದ ಹಾರಿಸಿದ. ಅವನ ತಲೆ ಭೂಮಿಯ ಮೇಲೆ ಉರುಳಿತು. ಕೃಷ್ಣನು ಕಾಶೀಶ್ವರನಾಗಿದ್ದ ಅವನ ತಲೆಯನ್ನು ಕಾಶಿಯಲ್ಲೇ ಬೀಳಿಸಿದ. ''[೧]ಸದಾ ನಾನೇ ಬ್ರಹ್ಮ ; ನಾನೇ ವಾಸುದೇವ ''

---

೧. ಆರಂಭದ ಒಂದು ಹಂತದಲ್ಲಿ ದುರ್ಮತಗಳ ಪ್ರಭಾವಕ್ಕೆ ಒಳಗಾಗುವ ಸುಜೀವಿಯೂ ಸಹ ಒಮ್ಮೊಮ್ಮೆ 'ತಾನೇ ಬ್ರಹ್ಮ ; ಜಗತ್ತು ಮಿಥ್ಯೆ ; ತಾರತಮ್ಯ ಸುಳ್ಳು' ಇವೇ ಮೊದಲಾದ ತಪ್ಪು ಕಲ್ಪನೆಗಳಿಗೆ ಒಳಗಾಗು-ವುದುಂಟು. ಅದರಿಂದ ಅವರ ಸ್ವರೂಪದ ಹಿರಿಮೆಗೆ ಧಕ್ಕೆಯಾಗದು. ಆದರೆ ಈ ಪೌಂಡ್ರಕವಾಸುದೇವನಂತಹ

ಎಂಬ ಮಿಥ್ಯಾಜ್ಞಾನದಿಂದ ಆ ಪಾಪಿಯು ಅಂಧತಮಸ್ಸನ್ನೇ ಸೇರಿದ. ಅವನಿಗೆ ಸಹಾಯಕನಾಗಿದ್ದ ಪಾಪಿಷ್ಠ ಕಾಶಿರಾಜನೂ ಸಹ, ಕಿರ್ಮೀರ ಹಿಡಿಂಬ ಸಾಲ್ವಾದಿ ಇತರ ದೈತ್ಯರಂತೆಯೇ ತಮಸ್ಸಿನಲ್ಲಿಯೇ ಬಿದ್ದ.

ಅವರಿಬ್ಬರನ್ನು ಕೊನೆಗಾಣಿಸಿದ ಮೇಲೆ ಕೃಷ್ಣನು ಪ್ರದ್ಯುಮ್ನನನ್ನು ರುಗ್ಮಿಣಿಯಲ್ಲಿ ಕೂಡಲೇ ಹುಟ್ಟಿಸಿದ.

## ಏಕಲವ್ಯನ ವಧೆ

ಬಲರಾಮನಿಂದ ಸೋತು ಓಡಿಹೋದ ಏಕಲವ್ಯನೂ ಕೂಡ, ಶಿವನನ್ನು ಕುರಿತು ಮತ್ತೆ ತಪಸ್ಸು ಮಾಡಿ, ಅವನಿಂದ ಅಜೇಯತ್ವ ವರವನ್ನು ಪಡೆದ. ಶಿವನ ವರದಿಂದ ಕೊಬ್ಬಿದ ಅವನು ಮತ್ತೆ ಕೃಷ್ಣನ ಮೇಲೆ ಯುದ್ಧಕ್ಕೆ ಬಂದ. ಅವನ ಅಸ್ತ್ರಶಸ್ತ್ರಗಳನ್ನೆಲ್ಲ ತಡೆದು, ಕೃಷ್ಣನು ಅವನ ತಲೆಯನ್ನು ಚಕ್ರದಿಂದ ಬೇರ್ಪಡಿಸಿ ಬೀಳಿಸಿದ. ಕೃಷ್ಣದ್ವೇಷದಿಂದಾಗಿ ಆ ಪಾಪಿಯಾದ ಏಕಲವ್ಯನೂ ಕೂಡ ಮರಳಿ ಬರಲಾಗದ ನಿತ್ಯದುಃಖಾತ್ಮಕವಾದ ಭಯಂಕರವಾದ ತಮಸ್ಸನ್ನೇ ಹೊಂದಿದ.

## ಸುದಕ್ಷಿಣನ ವಧೆ

ಕೃಷ್ಣನಿಂದ ಪಾಪಿಗಳಾದ ಕಾಶಿರಾಜ ಮತ್ತು ಪೌಂಡ್ರಕ ಇಬ್ಬರೂ ಹತರಾದದ್ದನ್ನು ಕಂಡು ನೀಚಬುದ್ಧಿಯ ಕಾಶಿರಾಜನ ಪುತ್ರನಾದ ಸುದಕ್ಷಿಣನು ಶಿವನನ್ನು ಕುರಿತು ತಪಸ್ಸಿಗೆ ತೊಡಗಿದ. ಪ್ರತ್ಯಕ್ಷನಾದ ಶಿವನನ್ನು ಕುರಿತು, ಕೃಷ್ಣನನ್ನು ಇಲ್ಲವಾಗಿಸುವ ವರವನ್ನು ಬೇಡಿದ. ದೈತ್ಯಾವೇಶದಿಂದಾಗಿ ಶಿವನೂ ಸಹ ಅಂತಹ ವರವನ್ನು ಅವನಿಗೆ ಕೊಟ್ಟು, ದಕ್ಷಿಣಾಗ್ನಿಯಲ್ಲಿ [೧]ಕೃತ್ಯೆಯನ್ನು ಕೊಟ್ಟ. ಅಸುರಾವೇಶದಿಂದ ಕೂಡಿದ ಆ ದಕ್ಷಿಣಾಗ್ನಿಯು ಕಾಶೀರಾಜನ ಮಗನಿಂದ ಪೂಜೆಗೊಂಡು ಶಿವನ ವರದಿಂದ ಶಕ್ತಿ ಹೆಚ್ಚಿಸಿಕೊಂಡು ಸಂಪೂರ್ಣಶಕ್ತಿಯಾದ ಕೃಷ್ಣನ ಬಳಿಗೆ ಹೊರಟಿತು. ಅದನ್ನು ನಾಶಪಡಿಸಲು ಅನಂತವೀರ್ಯನಾದ ಕೃಷ್ಣನು ಚಕ್ರವನ್ನು ಪ್ರಯೋಗಿಸಲು, ಅದು ವಹ್ನಿಯನ್ನು ಬಹಳ ದೂರಕ್ಕೆ ಓಡಿಸಿಬಿಟ್ಟಿತು. ಕೃತ್ಯಾತ್ಮಕವಾದ ಆ ವಹ್ನಿಯು ಪ್ರಧಾನವಹ್ನಿಯ ಮಗ. ಆ ರೀತಿ [೨]ಚಕ್ರದಿಂದ ಓಡಿಸಲ್ಪಟ್ಟ ಅದು ಪತ್ನೀ, ಪುತ್ರ

---

ದುಷ್ಟರು ಮಾತ್ರ ಎಂತಹ ಸನ್ಮತಗಳ ತತ್ತ್ವಗಳು ಕಿವಿಗೆ ಬಿದ್ದರೂ ತಮ್ಮ ದುರಾಗ್ರಹವನ್ನು ಬಿಡದೆ 'ತಾನೇ ಬ್ರಹ್ಮ' ಮೊದಲಾದ ಆಸುರಮತಕ್ಕೆ ಒಳಗಾಗುವರು ಎಂಬ ವಿಶೇಷಾಂಶವನ್ನು ಸೂಚಿಸುವುದು ಇಲ್ಲಿಯ 'ಸದಾ' (ನಿತ್ಯಂ)ಎಂಬ ಪದದ ಆಂತರ್ಯ ಎಂದು ತಿಳಿಯಬೇಕು.

೧. ಕೃತ್ಯಾ ಎಂದರೆ ಆಸುರೀಶಕ್ತಿ ಎಂದರ್ಥ. ಶಿವನ ದುರ್ವಾಸರೂಪದ ತಲೆಯ ಮೇಲೂ ಅಂತಹ ಒಂದು ಕೃತ್ಯೆ ಇದ್ದ ವಿವರ ಶ್ರೀಮದ್ಭಾಗವತಪುರಾಣದಲ್ಲಿ(ಅಂಬರೀಷರಾಜನ ಕಥಾಪ್ರಸಂಗ) ಬಂದಿದೆ.

೨. ಶ್ರೀವಾಯುದೇವರು ಹನುಮದ್ರೂಪದಿಂದ ರಾವಣನ ಲಂಕೆಯನ್ನು ಭಸ್ಮಮಾಡಿದ್ದು ರಾಮಾಯಣದಲ್ಲಿ ಸುಪ್ರಸಿದ್ಧ. ಇಲ್ಲಿ ಶ್ರೀಕೃಷ್ಣ ಪೌಂಡ್ರಕವಾಸುದೇವನ ನೆಲೆಯಾದ ಕಾಶಿಯನ್ನು ಭಸ್ಮಮಾಡಿದ ವಿವರ ಬಂದಿದೆ. ಈ ಕಾರ್ಯಗಳಲ್ಲಿ ಶ್ರೀಹರಿವಾಯುಗಳ ಒಂದು ಬಗೆಯ ವಿಶೇಷ ಸಾಮ್ಯವನ್ನು ಕಾಣಬಹುದು. ಇದು ಅವರ ಸಾಕ್ಷಾತ್ ಬಿಂಬ-ಪ್ರತಿಬಿಂಬಭಾವಕ್ಕೆ ಸೂಚಕ ಎಂದು ತಿಳಿಯಬಹುದು.

ಹಾಗೂ ಪಟ್ಟಣಸಮೇತನನ್ನಾಗಿಯೇ ಆ ಸುದಕ್ಷಿಣನನ್ನು ಸುಟ್ಟುಹಾಕಿತು. ಅನಂತರ ಆ ಅಗ್ನಿಯು ಕೃಷ್ಣನ ಬಳಿಯೇ ಸೇರಿತು. ಆ ಪಾಪಿ ಸುದಕ್ಷಿಣನೂ ಸಹ ತಮಸ್ಸನ್ನೇ ಸೇರಿದ.

## ಕೃಷ್ಣ-ರುಗ್ಮಿಣಿಯರ ಪ್ರಣಯಕಲಹ

ಪರಿಪೂರ್ಣನಿತ್ಯಾನಂದಸ್ವರೂಪಿಯಾದ ಕೃಷ್ಣನು ದ್ವಾರಾವತಿಯಲ್ಲಿ ಕ್ರೀಡಿಸುತ್ತಾ, ಸಂಸಾರಿಗಳ ನಡತೆಯನ್ನು ಅನುಕರಿಸುತ್ತ, ದೋಷರಹಿತಳಾದ ರುಗ್ಮಿಣಿಯೊಂದಿಗೆ ಎಂದೂ ಭಿನ್ನಾಭಿಪ್ರಾಯ- ವಿಲ್ಲದವನಾದರೂ, ಒಮ್ಮೆ ಅವಳಿಗೆ ಹೇಳಿದ – ''ಭದ್ರೆ ! ನಿನ್ನಿಂದ ನನಗೇನೂ ಆಗಬೇಕಾಗಿಲ್ಲ. ಶತ್ರುಗಳ ಮಾನಭಂಗಕ್ಕೋಸ್ಕರವಷ್ಟೇ ನಾನು ನಿನ್ನನ್ನು ಅಪಹರಿಸಿ ಕರೆದು ತಂದದ್ದು.'' ಆ ರುಗ್ಮಿಣಿಯೂ ಸಹ ತಾನು ಕೃಷ್ಣನನ್ನು ಬಿಟ್ಟು ಎಂದೂ ಇರದಿದ್ದರೂ, ಹೆಂಗಸು ಗಂಡನಿಗೆ ಅಂಜಿ ನಡೆಯಬೇಕೆಂಬ ಧರ್ಮವನ್ನು ತೋರಿಸಲೆಂದು, ದುಃಖಿತಳಾದವಳಂತೆ ನಟಿಸಿದಳು. ಗೃಹಸ್ಥಧರ್ಮವನ್ನು ತಿಳಿಸಲೆಂದು ಕೃಷ್ಣನು, ದುಃಖರಹಿತಳಾದ ರುಗ್ಮಿಣಿಯನ್ನು ಸಾಂತ್ವನಪಡಿಸಿದ.

## ಬಲರಾಮನ ಪರಾಕ್ರಮ

ಕೃಷ್ಣನಿಂದ ಕಳುಹಿಸಲ್ಪಟ್ಟ ಬಲರಾಮನು, ಗೋಕುಲಕ್ಕೆ ಹೋಗಿ, ನಂದ ಮತ್ತು ಯಶೋದೆಯರನ್ನು ಕಂಡು, ಅವರಿಂದ ಪೂಜಿತನಾಗಿ, ಅವರ ಪ್ರಾರ್ಥನೆಯಂತೆ ಕೃಷ್ಣನ ವಾರ್ತೆಯನ್ನು ತಿಳಿಸಿದ. ಅಲ್ಲಿ ಅವನು ಗೋಪಿಯರೊಂದಿಗೆ ಕ್ರೀಡಿಸುತ್ತ ಎರಡು ತಿಂಗಳುಗಳ ಕಾಲ ಕಳೆದ. ಹಾಗಿರುವಾಗ ಒಮ್ಮೆ [೧]ಮತ್ತನಾದವನಾಗಿ, ಯಮುನಾನದಿಯನ್ನು ತನ್ನ ಬಳಿಗೆ ಕರೆದ. 'ಇವನು ಮದಿಸಿರುವನು' ಎಂಬ ಕಾರಣದಿಂದ ನದಿಯು ಅದಕ್ಕೆ ಓಗೊಡಲಿಲ್ಲ. ಆಗ ಕೆರಳಿದ ಅಪ್ರತಿಮಬಲಶಾಲಿಯಾದ ಬಲರಾಮನು ನದಿಯನ್ನು ತನ್ನೆಡೆಗೆ ನೇಗಿಲಿನಿಂದ ಸೆಳೆದ. ನದಿಯು ನಮಸ್ಕರಿಸಿ ಸ್ತುತಿಸಿದಾಗ ಅದನ್ನು ಪುನಃ ಬಿಡುಗಡೆ ಮಾಡಿದ. ನಂದಗೋಪಾದಿಗಳಿಂದ ಬೀಳ್ಕೊಂಡು ಹೊರಟ ಬಲರಾಮನು, ದ್ವಾರಕೆಗೆ ಹಿಂದಿರುಗಿ ಕೃಷ್ಣನಿಗೆ ಅವರೆಲ್ಲರ ಭಕ್ತಿಯನ್ನು ಅರಿಕೆಮಾಡಿದ.

ಅಸುರಾವೇಶದಿಂದ ಕೂಡಿದ ಮೈಂದ ಮತ್ತು ವಿವಿದರು, ತಮ್ಮ ಗೆಳೆಯ ನರಕಾಸುರನು ಮೃತನಾದ ಮೇಲೆ, ವಾಸುದೇವನ ವೈರಿಗಳಾಗಿ ಆನರ್ತರಾಷ್ಟ್ರವನ್ನು ನಾಶಮಾಡತೊಡಗಿದರು. 'ಬ್ರಹ್ಮದೇವರ ವರ ಹಾಗೂ ಅಮೃತತ್ತ್ವ ಇವುಗಳಿಂದಾಗಿ ಅವಧ್ಯರೆನ್ನಿಸಿರುವ ಈ ಇಬ್ಬರೂ ಈಗ ವಧಾರ್ಹರೇ ಎನ್ನಿಸಿರುವರು. ಇವರನ್ನು ಕೊಲ್ಲಲು ನಿನಗೆ ಸಾಧ್ಯವಾಗಲಿ' ಎಂಬ ವರವನ್ನಿತ್ತು , ಅವರ ವಧೆಗಾಗಿ ಬಲರಾಮನನ್ನು ಕೃಷ್ಣನು ಕಳುಹಿಸಿಕೊಟ್ಟ. ಹಾಗೆ ಹೊರಟ ಬಲರಾಮನು ರೈವತಪರ್ವತದಲ್ಲಿ ತನ್ನ ಮೇಲೆ ಯುದ್ಧಕ್ಕೆ ಬಂದ ಮೈಂದನನ್ನು ಮೊದಲು ಸಂಹರಿಸಿದ ;

೧. ಇಲ್ಲಿ ಬಲರಾಮ ಮತ್ತನಾದದ್ದು ಪೇಯರೂಪದ ಕಾದಂಬರೀಪಾನದಿಂದ ಎಂಬ ವಿಶೇಷವನ್ನು ಹದಿನಾರನೆಯ ಅಧ್ಯಾಯದ ಆರಂಭದಲ್ಲಿ ಬಂದಿರುವ ಗೋಮಂತಪರ್ವತ ಪ್ರಸಂಗದಲ್ಲಿನ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕು.

ಮಾರನೆಯ ದಿನ ಶಿಲೆಗಳನ್ನೆಸೆಯುತ್ತ ಮೇಲೆ ಬಿದ್ದ ವಿವಿದನನ್ನು ಮಹಾಸಾಹಸಿಯಾದ ಅವನು ಮುಸಲದಿಂದ ಅಪ್ಪಳಿಸಿ ಕೊಂದ. ಮೈಂದ-ವಿವಿದರಲ್ಲಿ ಆವಿಷ್ಟರಾಗಿದ್ದ ಇಬ್ಬರು ಅಸುರರು ತಮಸ್ಸನ್ನು ಸೇರಿದರು ; ಅಶ್ವಿನೀದೇವತೆಗಳು ತಮ್ಮ ಲೋಕವನ್ನು ಹೊಂದಿದರು.

## ಲಕ್ಷಣಾ - ಸಾಂಬರ ವಿವಾಹ

ದುರ್ಯೋಧನನ ಮಗಳಾಗಿ ಲಕ್ಷಣೆ ಎಂಬ ಹೆಸರಿನಿಂದ ಜನಿಸಿದ್ದ ರತಿಯನ್ನು , ಸ್ವಯಂವರಕಾಲದಲ್ಲಿ ಕೃಷ್ಣಪುತ್ರ ಸಾಂಬನು ಬಲಾತ್ಕಾರದಿಂದ ಅಪಹರಿಸಿದ. ಅವಳೂ ಸಹ ಸಾಂಬನಲ್ಲಿ ಅನುರಕ್ತಳೇ ಆಗಿದ್ದಳು. ಕನ್ಯೆಯು ಬಲಾತ್ಕಾರದಿಂದ ಅಪಹರಿಸಲ್ಪಟ್ಟದ್ದನ್ನು ಕಂಡು ಕ್ರೋಧದಿಂದ ಉರಿದ ದುರ್ಯೋಧನಾದಿಗಳು, ಕರ್ಣನೊಂದಿಗೆ ಸೇರಿಕೊಂಡು ಒಬ್ಬಂಟಿಗನಾದ ಸಾಂಬನನ್ನು ಮುತ್ತಿದರು. ಅವರೆಲ್ಲರೂ ಅವನನ್ನು ತುಂಬಾ ಶ್ರಮದಿಂದ ವಿರಥನನ್ನಾಗಿ ಮಾಡಿದರು. ಕೊನೆಗೂ ಹೇಗೋ ಅವನನ್ನು ಹಿಡಿದು, ಸೆರೆಯಲ್ಲಿಟ್ಟರು. ಅವನನ್ನು ಹಾಗೆ ಹಿಡಿಯಲೂ ಸಹ ದುರ್ಯೋಧನ, ಕರ್ಣ ಮತ್ತು ಭೂರಿಶ್ರವಸ್ ಎಲ್ಲರೂ ಒಟ್ಟಾಗಿ ಹೆಣಗಬೇಕಾಯಿತು. ಈ ವಿಷಯವನ್ನು ಕೇಳಿದ ಯಾದವರೆಲ್ಲ ಯುದ್ಧಕ್ಕೆ ಸಿದ್ಧರಾಗತೊಡಗಲು, ಬಲರಾಮನು ಅವರನ್ನೆಲ್ಲ ಸುಮ್ಮನಿರಿಸಿ, ಉದ್ಧವನನ್ನು ಜೊತೆಯಲ್ಲಿ ಕರೆದುಕೊಂಡು, ಶಾಂತಿಯನ್ನು ಬಯಸಿ ಕೌರವರ ಬಳಿಗೆ ಬಂದ. ಊರ ಹೊರಗಿನ ಉಪವನದಲ್ಲಿ ಇಳಿದುಕೊಂಡು, ಕೌರವರನ್ನು ಕರೆತರಲು ಉದ್ಧವನನ್ನು ಕಳುಹಿಸಿದ. ಕೌರವರೆಲ್ಲ ಧಾವಿಸಿ, ಬಲರಾಮನನ್ನು ಆದರಿಸಿ, ಸತ್ಕರಿಸಿದರು. ''ನಮ್ಮ ಉಗ್ರಸೇನರಾಜ ನಿಮ್ಮೆಲ್ಲರಿಗೂ ಈ ರೀತಿ ಸ್ವಯಂ ಅಪ್ಪಣೆ ಮಾಡಿರುವನು - ಒಂಟಿಯಾದ ನಮ್ಮ ಕುಮಾರನನ್ನು ನೀವೆಲ್ಲ ಸೇರಿ ಬಂಧಿಸಿರುವಿರಿ. ನಿಮ್ಮ ಅಪರಾಧವನ್ನು ನಾವು ಕ್ಷಮಿಸಿದ್ದೇವೆ. ಕೂಡಲೇ ಸಾಂಬನನ್ನು ಬಿಡುಗಡೆ ಮಾಡತಕ್ಕದ್ದು.'' ಈ ರೀತಿಯಾದ ಬಲರಾಮನ ಮಾತನ್ನು ಕೇಳಿದ ಕೌರವವೀರರು, ಬಲರಾಮನನ್ನು ಕೆಟ್ಟಮಾತುಗಳಿಂದ ನಿಂದಿಸಿ, ತಮ್ಮ ನಗರಕ್ಕೆ ಹಿಂದಿರುಗಿದರು. ಬಲರಾಮನಿಗೆ ಕೋಪ ಉಂಟಾಯಿತು. ಅವನು ತನ್ನ ನೇಗಿಲಿನಿಂದ ಹಸ್ತಿನಾಪುರವನ್ನು ಎಳೆದು ಗಂಗಾನದಿಯಲ್ಲಿ [೧] ಉರುಳಿಸುವ ಸನ್ನಾಹಕ್ಕೆ ತೊಡಗಿದ ; ಭಯಗೊಂಡ ಕೌರವರೆಲ್ಲ ಓಡಿ ಬಂದು ಕಾಲಿಗೆ ಬಿದ್ದು ಬೇಡಿಕೊಂಡರು; ಸಾಂಬನನ್ನು ಪತ್ನೀಸಮೇತವಾಗಿ ಬಿಡುಗಡೆ ಮಾಡಿದ್ದಲ್ಲದೆ, ಅಪಾರವಾಗಿ ಉಡುಗೊರೆಗಳನ್ನು ಸಹ ಅರ್ಪಿಸಿ ಬಲರಾಮನನ್ನು ಸಮಾಧಾನಪಡಿಸಿದರು. ಬಲರಾಮ ಯಶಸ್ವಿಯಾಗಿ ದ್ವಾರಕೆಗೆ ಮರಳಿದ.

ಅಚ್ಯುತನ ಆವೇಶದಿಂದ ಕೂಡಿದ ಬಲರಾಮನ ಇಂತಹ ಅಸಾಧ್ಯಕಾರ್ಯಗಳು ಒಂದಲ್ಲ ಎರಡಲ್ಲ. ಶ್ರೀಹರಿಯ ಆವೇಶ ಅವನಲ್ಲಿದ್ದ ವೇಳೆಯಲ್ಲಿ ಭೀಮನೂ ಸಹ ಬಲರಾಮನ ಮೇಲೆ ಯುದ್ಧಕ್ಕೆ ತೊಡಗುತ್ತಿರಲಿಲ್ಲ. ಕ್ರೀಡಾಯುದ್ಧದ ಕಾಲದಲ್ಲಿ ಶ್ರೀಹರಿಯ ಆವೇಶವು

೧. ಬಲರಾಮನ ಈ ಅದ್ಭುತಕಾರ್ಯದ ಸಂಕೇತವೆಂಬಂತೆ ಇಂದಿಗೂ ಹಸ್ತಿನಾಪುರವು ಗಂಗೆಯತ್ತ ವಾಲಿಕೊಂಡಿರುವಂತೆ ಕಾಣುವುದು ಎಂಬ ವಿಶೇಷ ಉಲ್ಲೇಖ ಶ್ರೀಮದ್ಭಾಗವತಪುರಾಣದಲ್ಲಿದೆ.

ಬಲರಾಮನಲ್ಲಿ ಬಹಳವಾಗಿ ಇರುತ್ತಿದ್ದುದನ್ನು ಗಮನಿಸಿ, ಭೀಮಸೇನನು ತಾತ್ಕಾಲಿಕವಾಗಿ ತನಗೆ ಪೆಟ್ಟು ಜಾಸ್ತಿ ಬೀಳುತ್ತಿದ್ದರೂ, ವಿಷ್ಣುಭಕ್ತಿಯಿಂದಾಗಿ, ಬಲರಾಮನ ಮೇಲೆ ಕೈಮಾಡು-ತ್ತಿರಲಿಲ್ಲ. ಆದರೆ ವಿಷ್ಣುವಿನ ಆವೇಶ ವ್ಯಕ್ತವಾಗದಿದ್ದ ವೇಳೆಯಲ್ಲಿ ಮಾತ್ರ ಭೀಮನ ಪೆಟ್ಟುಗಳನ್ನು ಸಹಿಸುವ ಶಕ್ತಿ ಬಲರಾಮನಲ್ಲಿರುತ್ತಿರಲಿಲ್ಲ. ಆಗ ಅವನು ಭೀಮನಿಂದ ಸೋಲಲೇ-ಬೇಕಾಗುತ್ತಿತ್ತು.

## ಉಷಾ ಸ್ವಯಂವರ

ಇಂತಹ ಬಲರಾಮನೊಂದಿಗೆ ಕೃಷ್ಣನು ದ್ವಾರಾವತಿಯಲ್ಲಿ ವಾಸಿಸುತ್ತಿದ್ದಾಗ, ಬಾಣಾಸುರನ ಮಗಳು ಉಷೆಯು ತನ್ನ ಕನಸಿನಲ್ಲಿ ಒಮ್ಮೆ ಕೃಷ್ಣನ ಮೊಮ್ಮಗನಾದ ಅನಿರುದ್ಧನನ್ನು ಕಂಡು ಮೋಹಿತಳಾದಳು. ಅದನ್ನು ಅವಳು ತನ್ನ ಗೆಳತಿ ಚಿತ್ರಲೇಖೆಗೆ ಹೇಳಲು, ಅವಳು ''ಚಿತ್ರವಸ್ತ್ರ''-ದಲ್ಲಿ ಎಲ್ಲ ಲೋಕಗಳನ್ನು ತೋರಿಸುತ್ತ , ಅನಿರುದ್ಧನನ್ನು ತೋರಿಸಿದಳು. ಅವನು ಕೃಷ್ಣನ ಮೊಮ್ಮಗ ಎಂಬುದನ್ನು ತಿಳಿದುಕೊಂಡ ಚಿತ್ರಲೇಖೆ ಅವನನ್ನು ರಾತ್ರಿವೇಳೆಯಲ್ಲಿ ಉಷೆಯ ಬಳಿಗೆ ಕರೆದುತಂದೇಬಿಟ್ಟಳು. ಹೀಗೆ ಚಿತ್ರಲೇಖೆಯು ಕರೆದುತಂದ ಅನಿರುದ್ಧನೊಂದಿಗೆ ಉಷೆ ಅನೇಕ ದಿನಗಳ ಕಾಲ ಕಳೆದಳು. ಅದನ್ನು ಕನ್ಯಾರಕ್ಷಕದಳದವರು ತಿಳಿದುಕೊಂಡು ಬಾಣಾ-ಸುರನಿಗೆ ವಿಷಯವನ್ನು ಅರಿಕೆ ಮಾಡಿದರು. ಅನಿರುದ್ಧನನ್ನು ಹಿಡಿಯಲು ತನ್ನ ಕಿಂಕರರನ್ನು ಅವನು ಕಳುಹಿಸಲು, ಅನಿರುದ್ಧ ಅವರನ್ನೆಲ್ಲ ಪರಿಘದಿಂದ ಹೊಡೆದಟ್ಟಿದ. ಆಗ ಬಾಣಾಸುರನು ತಾನೇ ಅವನ ಮೇಲೆ ಎರಗಿದ. ಅನಿರುದ್ಧನನ್ನು ಸೋಲಿಸುವುದು ಅವನಿಗೂ ಸುಲಭದ ಮಾತೇನು ಆಗಲಿಲ್ಲ. ಕೊನೆಗೆ ನಾಗಾಸ್ತ್ರದಿಂದ ಅವನನ್ನು ಕಟ್ಟಿಹಾಕುವಲ್ಲಿ ಯಶಸ್ವಿಯಾದ.

## ಬಾಣಾಸುರನ ಪರಾಭವ

ಅನಂತರ ಕೃಷ್ಣನು ಗರುಡನನ್ನೇರಿ, ಬಲರಾಮ ಹಾಗೂ ಪ್ರದ್ಯುಮ್ನರೊಂದಿಗೆ ಬಾಣಾಸುರನ ಪಟ್ಟಣವನ್ನು ಆಕ್ರಮಿಸಿದ. ಮೊದಲಿಗೆ ವಹ್ನಿಗಳೊಂದಿಗೆ ಆಂಗಿರಸನೊಂದಿಗೆ ಹೋರಾಡಿ, ಅವರನ್ನು ಕೃಷ್ಣನು ಕ್ಷಣಾರ್ಧದಲ್ಲಿಯೇ ಓಡಿಸಿಬಿಟ್ಟ. ಅದೇ ರೀತಿ ಶಿವನ ಪ್ರಮಥಗಣಗಳು ಸಹ ಅಲ್ಲಿಂದ ಕಾಲ್ತೆಗೆಯಬೇಕಾಯಿತು. ಅನಂತರ ಶೈವಜ್ವರ ಮುನ್ನುಗ್ಗಿ ಬಂದಿತು. ಅದರ ಭಸ್ಮಪ್ರಹಾರದಿಂದ ಬಲರಾಮನೂ ಸಹ ಜ್ವರಪೀಡಿತನಾಗಲು, ಆಲಿಂಗಿಸುವ ಮೂಲಕ ಕೃಷ್ಣ ಅವನನ್ನು ಜ್ವರದಿಂದ ಮುಕ್ತನನ್ನಾಗಿಸಿದ. ಅನಂತರ ಸ್ವಲ್ಪಕಾಲ ಆ ಜ್ವರದೊಂದಿಗೆ ಕೃಷ್ಣ ತಾನೂ ಸಹ ಕ್ರೀಡಿಸಿ, ಮುಷ್ಟಿಯಿಂದ ಅದನ್ನು ಹೊಸೆದು ಹಾಕಿ, ತಾನು ಅದಕ್ಕೆ ಪ್ರತಿಯಾಗಿ ವೈಷ್ಣವಜ್ವರವನ್ನು ಸೃಷ್ಟಿ ಮಾಡಿದ. ತಾನಾಗಲೇ ಶೈವಜ್ವರವನ್ನು ಸೋಲಿಸಿದ್ದರೂ, ಆ ಶಿವನ ಭೃತ್ಯನನ್ನು ತನ್ನ ಭೃತ್ಯನಿಂದ ಸೋಲಿಸುವುದೇ ಹೆಚ್ಚು ಸೊಗಸು ಎಂಬುದೇ ಕೃಷ್ಣನ ಆ ರೀತಿಯ ವೈಷ್ಣವಜ್ವರದ ಸೃಷ್ಟಿಗೆ ಹಿನ್ನೆಲೆಯಾಗಿತ್ತು. ವೈಷ್ಣವಜ್ವರದ ಆಕ್ರಮಣವನ್ನು ತಾಳಲಾರದೆ ನರಳಿದ ಶೈವಜ್ವರವು ಅದರ ಬಾಯಿಗೆ ತುತ್ತಾಗುವ ಹೊತ್ತಿನಲ್ಲಿ ಕೃಷ್ಣನನ್ನೇ ಶರಣುಹೊಕ್ಕು ಸ್ತುತಿಸಿ, ಬಿಡುಗಡೆಯನ್ನು ಹೊಂದಿತು. ಅತ್ಯಂತ ಅಲ್ಪಜನರಲ್ಲೂ ಹೇಗೋ ಜಯಗಳಿಸಿದನೆಂಬ

ರೀತಿಯಲ್ಲಿ ಕೃಷ್ಣನು ಈ ರೀತಿ ಅಸುರಜನ ಮೋಹನಕ್ಕಾಗಿ ವರ್ತಿಸುವನು. ನಿತ್ಯಸ್ವತಂತ್ರನಾದ ಅವನಿಗೆ ವ್ಯಾಧಿ ಮೊದಲಾದವುಗಳು ಎಲ್ಲಿಂದ ಬಂದಾವು? ತನ್ನ ಜ್ವರಾದಿಗಳೆಲ್ಲ ಪಲಾಯನ ಮಾಡಿದ್ದನ್ನು ಕಂಡು ಸ್ವಯಂ ಶಿವನೇ ಕೃಷ್ಣನ ಮೇಲೆ ಏರಿಬಂದ. ಆ ಯುದ್ಧದಲ್ಲಿ ಕೃಷ್ಣನು ವಿಜೃಂಭಣಾಸ್ತ್ರದಿಂದ ಶಿವನನ್ನು ಸ್ತಬ್ಧನನ್ನಾಗಿಸಿದ. ಹಾಗೆ ಸ್ತಬ್ಧನಾದ ಶಂಕರನು ಜಡದಂತೆ ನಿಶ್ಚೇಷ್ಟನಾಗಿ ನಿಂತಿರುವುದನ್ನು ಕಂಡು, ಕಮಲೋದ್ಭವರಾದ ಬ್ರಹ್ಮದೇವರು ಅಲ್ಲಿ ಕಾಣಿಸಿ-ಕೊಂಡರು. ಅಸುರಾವೇಶದಿಂದ ಕೂಡಿದ ಶಂಕರನನ್ನು ಎಚ್ಚರಿಸಿದರು; ಶಂಕರನನ್ನು ಎತ್ತಿಕೊಂಡು ವಿಷ್ಣುವಿನ ಉದರವನ್ನು ಪ್ರವೇಶಿಸಿ, ಅಲ್ಲಿ ಬಿಲ್ವವನದಲ್ಲಿ ಶೈವಪದಪ್ರಾಪ್ತಿಗಾಗಿ ತಪಸ್ಸು ಮಾಡುತ್ತಿದ್ದ ಶಿವನ ರೂಪವೂ ಸಹ ಸ್ತಂಭಿತವಾಗಿರುವುದನ್ನು ತೋರಿಸಿದರು. ಮೋಹವಳಿದ ಶಿವನು ಆಗ ಕೃಷ್ಣನನ್ನು ಬಹಳವಾಗಿ ಸ್ತುತಿಸಿದ. ಅನಂತರ ಸ್ವಯಂ ನುಗ್ಗಿದ ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿದ ಕೃಷ್ಣನು, ಅವನ ತಲೆಯನ್ನು ಕತ್ತರಿಸಲೆಂದು ಚಕ್ರವನ್ನು ಕೈಗೆತ್ತಿಕೊಂಡ. ಆಗ ಶಿವನು ಅವನನ್ನು ರಕ್ಷಿಸಲು ಪ್ರಾರ್ಥಿಸಿಕೊಳ್ಳಲು, ಆ ಬಾಣನನ್ನು ಸಹ ತನ್ನ ಭಕ್ತನನ್ನಾಗಿಸಿಕೊಂಡು ಕೃಷ್ಣನು ಎರಡು ಬಾಹುಗಳೊಂದಿಗೆ ಮಾತ್ರ ಅವನನ್ನು ಬದುಕಲು ಬಿಟ್ಟ. ಅನಿರುದ್ಧನನ್ನು ಬಿಡಿಸಿಕೊಂಡು ಕೃಷ್ಣನು, ಬಾಣನಿಂದ ಪೂಜಿತನಾಗಿ ದ್ವಾರಾವತಿಗೆ ಮರಳಿದ ; ಈ ರೀತಿ ಅಗ್ನಿಗಳಾದ ಆಂಗಿರಸ, ಜ್ವರ, ಸ್ಕಂದ ಹಾಗೂ ಉಮಾಪತಿಯನ್ನು ಅಯತ್ನದಿಂದ ಜಯಿಸಿದ ; ಸರ್ವಲೋಕನಾಶಕನಾದ ಶಿವನೇ ಕೃಷ್ಣನಿಂದ ಅನಾಯಾಸದಿಂದ ಜಯಿಸಲ್ಪಟ್ಟಾಗ, ಜ್ವರಾದಿಗಳ ಮೇಲಿನ ಜಯವು ಆ ಶ್ರೀಹರಿಗೆ ಆದಾವ ಲೆಕ್ಕ?

ಇಂತಹ ಲೆಕ್ಕವಿಲ್ಲದ ಶಿವಬ್ರಹ್ಮರಿಗೂ, ರಮೆಗೂ, ಯಾರ ಅನುಗ್ರಹವಿಲ್ಲದೆ ಚಲಿಸುವ ಶಕ್ತಿಯಾಗಲಿ, ಜ್ಞಾನಾದಿಗುಣಗಳಾಗಲಿ, ಅಸ್ತಿತ್ವವಾಗಲೀ ಎಂದೂ ಇಲ್ಲದಿರುವಾಗ, ಈ ಶಿವನನ್ನು ಜಯಿಸಿದ್ದು ಅದಾವ ಆಶ್ಚರ್ಯ ? ಗರುಡಾರೂಢನಾದ ಕೃಷ್ಣನೊಂದಿಗೆ ಬಲರಾಮ, ಪ್ರದ್ಯುಮ್ನ, ಅನಿರುದ್ಧ, ಉಷೆಯರೂ, ಚಿತ್ರಲೇಖೆಯೂ ದ್ವಾರಾವತಿಯನ್ನು ಸೇರಿದರು. ಅಲ್ಲಿ ನಿತ್ಯಾನಂದನಾದ ಕೃಷ್ಣ ಸ್ವೇಚ್ಛೆಯಿಂದಲೇ ಸುಖಿಸಿದ.

ಇಂತಹ ಅಸಂಖ್ಯಾತವೂ, ಅದ್ಭುತವೂ ಆದ ಕೃಷ್ಣನ ಅನೇಕ ಸಾಹಸಗಳು, ರಮಾ-ಬ್ರಹ್ಮರುದ್ರೇಂದ್ರಾದಿ ದೇವತೆಗಳಿಂದ ಸದಾ ಸ್ತುತಿಸಲ್ಪಡುವವು ; ಮುಕ್ತಿಯೇ ಅದಕ್ಕೆ ಫಲ.

## ಪಾಂಡವರ ತೀರ್ಥಯಾತ್ರೆ

ಈ ರೀತಿಯಾಗಿ ಅಪರಿಮಿತಪರಾಕ್ರಮಿಯಾದ ಕೃಷ್ಣನು ತನ್ನ ಪಟ್ಟಣದಲ್ಲಿರುವಾಗ ,ಇಂದ್ರ ಧನಂಜಯರಿಂದ ಕಳುಹಿಸಲ್ಪಟ್ಟ ಲೋಮಶಮುನಿಗಳು ಪಾಂಡವರ ಬಳಿಗೆ ಬಂದರು. ಅರ್ಜುನನ ವಾರ್ತೆಯನ್ನು ಅವರಿಂದ ಕೇಳಿದ ಪಾಂಡವರು ತುಂಬಾ ಸಂತೋಷಿಸಿ, ಅವರ ಜೊತೆಯಲ್ಲಿ ಎಲ್ಲ ತೀರ್ಥಕ್ಷೇತ್ರಗಳಲ್ಲಿ ಸಂಚರಿಸಿದರು. ಭೂಮಿಯನ್ನು ಪ್ರದಕ್ಷಿಣಾಕಾರವಾಗಿ ಸುತ್ತಿದ ಅವರು ಎಲ್ಲಾ ತೀರ್ಥಗಳಲ್ಲೂ ಸ್ನಾನ ಮಾಡಿ, ಎಲ್ಲ ಕ್ಷೇತ್ರಗಳಲ್ಲೂ ಕೃಷ್ಣನನ್ನು ಪೂಜಿಸಿ,

ಕೃತಕೃತ್ಯರಾದರು. ಆ ಪುಣ್ಯವನ್ನೆಲ್ಲ ಕೃಷ್ಣನಿಗೆ ಅರ್ಪಣೆ ಮಾಡುವ ಉದ್ದೇಶದಿಂದ ಅವರು ಪ್ರಭಾಸಕ್ಷೇತ್ರಕ್ಕೆ ಬಂದರು. ಅವರನ್ನು ಆದರಿಸುವ ದೃಷ್ಟಿಯಿಂದ ಕೃಷ್ಣನೂ ಸಹ ಬಲರಾಮಾದಿ ಸಕಲಯಾದವರೊಂದಿಗೆ ಅಲ್ಲಿಗೆ ಬಂದು ಸೇರಿದ. ಯಾದವರಿಂದ ಸಮೇತನಾದ ಕೃಷ್ಣನನ್ನು ಪಾಂಡವರು ಪೂಜಿಸಿದರು. ಕೃಷ್ಣನ ಅಪ್ಪಣೆಯಂತೆ ಯಾದವರೂ ಸಹ ಪಾಂಡವರನ್ನು ಪೂಜಿಸಿದರು.

ತಪೋವೇಷದಲ್ಲಿದ್ದ ಭೀಮಸೇನನನ್ನು ಕಂಡು ಬಲರಾಮ ಅತಿಸ್ನೇಹದಿಂದಾಗಿ ದುರ್ಯೋಧನನನ್ನು ನಿಂದಿಸತೊಡಗಿದ. ಅದಕ್ಕೆ ದನಿಗೂಡಿಸಿದ ಸಾತ್ಯಕಿಯು, ''ನಾವೆಲ್ಲ ಹೋಗಿ ಕರ್ಣನನ್ನೂ, ಕೌರವರನ್ನೂ ಕೊಂದುಹಾಕಿ, ಹದಿಮೂರು ವರ್ಷಗಳ ಅವಧಿ ಕಳೆಯುವವರೆಗೆ ಅಭಿಮನ್ಯುವನ್ನು ರಾಜ್ಯದಲ್ಲಿ ಸ್ಥಾಪಿಸೋಣ ; ಅನಂತರ ಪಾಂಡವರು ಬಂದು ಮುಂಚಿನಂತೆಯೇ ರಾಜ್ಯವನ್ನು ಪಾಲಿಸಲಿ'' ಎಂದ. ಸಾತ್ಯಕಿಯು ಈ ಮಾತುಗಳನ್ನು ಆಡುತ್ತಿದ್ದಂತೆಯೇ, ಪಾಂಡವರ ಮುಖಗಳನ್ನು ಗಮನಿಸಿದ ಕೃಷ್ಣ '' ಸಾತ್ಯಕಿ ! ಪಾಂಡವರೆಂದೂ ಮತ್ತೊಬ್ಬರು ಗೆದ್ದು ನೀಡುವ ರಾಜ್ಯವನ್ನು ಬಯಸುವವರಲ್ಲ. ಶತ್ರುಗಳನ್ನು ಅವರು ತಮ್ಮ ಬಾಹುಬಲದಿಂದಲೇ ಗೆದ್ದು, ರಾಜ್ಯವನ್ನು ಸಂಪಾದಿಸುವರು'' ಎಂದ. ಪಾಂಡವರೂ ಹಾಗೆಯೇ ನುಡಿದರು.

ಅನಂತರ ಕೃಷ್ಣನೊಂದಿಗೆ ಯಾದವರು ಮರಳಲು, ಮುಂದೆ ಸಾಗಿದ ಪಾಂಡವರು ಕ್ರಮವಾಗಿ ಹಿಮಾಲಯಪರ್ವತವನ್ನು ಸೇರಿದರು. ಅಲ್ಲಿಯ ಬೆಟ್ಟಗುಡ್ಡಗಳ ದುರ್ಗಮದಾರಿಯಲ್ಲಿ ದ್ರೌಪದಿಗೆ ಕಷ್ಟವಾದೀತೆಂದು ಭಾವಿಸಿ, ಅವರು ಘಟೋತ್ಕಚನನ್ನು ಸ್ಮರಿಸಿದರು. ತನ್ನ ಅನುಚರರೊಂದಿಗೆ ಕೂಡಲೇ ಅಲ್ಲಿ ಕಾಣಿಸಿಕೊಂಡ ಘಟೋತ್ಕಚನು ದ್ರೌಪದಿಯನ್ನು ಅವನ ಸೇವಕರು ಇತರ ಪಾಂಡವರನ್ನು ಬೆನ್ನ ಮೇಲೆ ಹೊತ್ತು ನಡೆದರು. ಹೀಗೆ ಪಾಂಡವರು ಬದರಿಕಾಶ್ರಮವನ್ನು ಸೇರಿದರು. ಅಲ್ಲಿ ನಾರಾಯಣನ ಪೂಜೆಯನ್ನು ಮಾಡುವ ಮೂಲಕ ತಮ್ಮ ಕರ್ತವ್ಯವನ್ನು ಪೂರೈಸಿಕೊಂಡ ಅವರು ಉತ್ತರದಿಕ್ಕಿನಲ್ಲಿ ಮುಂದುವರಿದರು. ಹಿಮಾಲಯಪರ್ವತವನ್ನು ದಾಟಿದ ಅವರು, ಸುವರ್ಣಕೂಟ, ನಿಷಧಪರ್ವತಗಳನ್ನು ದಾಟಿ, ಮೇರುಪರ್ವತದ ಪೂರ್ವದಿಕ್ಕಿನಲ್ಲಿರುವ ಗಂದಮಾಧನಗಿರಿಯಲ್ಲಿನ [೧]ಉತ್ತರಬದರಿಕಾಶ್ರಮವನ್ನು ತಲುಪಿದರು. ಅಲ್ಲಿ ಮುನಿಶ್ರೇಷ್ಠರೊಂದಿಗೆ ಬಹುಮಾನಿತರಾಗಿ ನಾರಾಯಣನನ್ನು ಪೂಜಿಸುತ್ತ ತತ್ತ್ವವಿದ್ಯೆಯನ್ನು ಪ್ರತಿಪಾದಿಸುತ್ತ, ಜ್ಞಾನಸಮಾಧಿಯಿಂದ ಕೂಡಿದ ತಪಸ್ಸನ್ನು ಆಚರಿಸತೊಡಗಿದರು.

---

೧. ಇಂದು ಜನರು ಸಂದರ್ಶಿಸಿ ಬರುವ ಬದರಿ ವಿಶಾಲಬದರೀ ಎಂದು ಪ್ರಸಿದ್ಧ. ಇನ್ನೂ ಮುಂದೆ ಹಿಮಾಲಯದ ಉತ್ತರಬದಿಯಲ್ಲಿ ಮತ್ತೊಂದು ಬದರಿ ಇದ್ದು ಅದು ಮನುಷ್ಯರಿಗೆ ಅಗಮ್ಯವೆನ್ನಿಸಿದ ವಿಶಿಷ್ಟಕ್ಷೇತ್ರ ಎಂಬುದು ಇಲ್ಲಿಯ ಉಲ್ಲೇಖದಿಂದ ತಿಳಿಯುವುದು. ಮಹಾಭಾರತದಲ್ಲೂ ಈ ಉತ್ತರಬದರಿಯ ಉಲ್ಲೇಖವಿದೆ. ಶ್ರೀವೇದವ್ಯಾಸರು ಹಾಗೂ ನಾರಾಯಣ ಸಾಕ್ಷಾತ್ ದರ್ಶನ ನೀಡುವುದು ಇಲ್ಲಿಯ ವಿಶೇಷ. ಶ್ರೀಮನ್ಮಧ್ವಾಚಾರ್ಯರು ಈ ಬದರಿಯನ್ನು ಸಹ ಸಂದರ್ಶಿಸಿದ್ದ ವಿವರ ಸುಮಧ್ವವಿಜಯದಲ್ಲಿ ಬಂದಿದೆ.

## ಸೌಗಂಧಿಕಪುಷ್ಪ ಪ್ರಸಂಗ

ಬದರಿಯಲ್ಲಿ ಪಾಂಡವರ ಸಮಯ ಅತ್ಯಂತ ಸುಖಮಯವಾಗಿಯೇ ಕಳೆಯುತ್ತಿತ್ತು. ಒಮ್ಮೆ ಭೀಮಸೇನ ದ್ರೌಪದಿಯೊಂದಿಗೆ ಏಕಾಂತದಲ್ಲಿದ್ದಾಗ ಆಶ್ಚರ್ಯವೊಂದು ನಡೆಯಿತು. ಶ್ರೀಕೃಷ್ಣನ ವಾಹನನಾದ ಗರುಡ ಒಂದು ಸರ್ಪವನ್ನು ದೊಡ್ಡ ಸರೋವರದಿಂದ ಮೇಲಕ್ಕೆ ಎಳೆದುಹಾಕಿದ. ಆಗ ಅವನ ರೆಕ್ಕೆಯ ಗಾಳಿಯ ರಭಸಕ್ಕೆ ಪರ್ವತ ಅಲುಗಿತು. ಆಗ ಸೂರ್ಯಮಂಡಲದಂತೆ ಹೊಳೆಯುವ, ಶ್ರೇಷ್ಠ ಸುವಾಸನೆಯ ಒಂದು ಬಂಗಾರದ ಶ್ರೇಷ್ಠ ಕಮಲ ಭೀಮ-ದ್ರೌಪದಿಯರ ಬಳಿ ಬಂದು ಬಿದ್ದಿತು. ಆ ಪುಷ್ಪದ ಸೊಬಗಿಗೆ ಮಾರುಹೋದ ದ್ರೌಪದಿಯು ಆ ರೀತಿಯ ಮತ್ತಷ್ಟು ಕಮಲಗಳನ್ನು ತನಗೆ ತಂದುಕೊಡಲು ಭೀಮನನ್ನು ಪ್ರಾರ್ಥಿಸಿಕೊಂಡಳು[೧]. ದೇವದೈತ್ಯರಾರಿಗೂ ಎದುರಿಸಲಾಗದ ಅಪ್ರತಿಮ ಬಲ ಭೀಮನಲ್ಲಿರುವುದೆಂಬುದನ್ನು ತಿಳಿದೇ ಅವಳು ಹಾಗೆ ಅವನನ್ನು ಪ್ರಾರ್ಥಿಸಿದ್ದು. ದ್ರೌಪದಿಯ ಪ್ರಾರ್ಥನೆಯನ್ನು ಈಡೇರಿಸಲು ಭೀಮಸೇನನು ಆ ಎತ್ತರದ ಪರ್ವತವನ್ನು ಗದಾಧಾರಿಯಾಗಿ ಶಸ್ತ್ರಾಸ್ತ್ರಪಾಣಿಯಾಗಿ ಭರದಿಂದ ಏರತೊಡಗಿದ. ಭೀಮಸೇನನ ಪ್ರಯಾಣವೈಖರಿಯನ್ನು ಸುರರು, ಸಿದ್ಧರೂ ಕೊಂಡಾಡತೊಡಗಿದರು. ಭೀಮನ ಕಾಲಿನ ತುಳಿತಕ್ಕೆ ಸಿಕ್ಕ [೨]ಸಿಂಹ-ಶಾರ್ದೂಲರೂಪದ ಅನೇಕ ದೈತ್ಯರು ಅಸು ನೀಗಿದರು.

## ಭೀಮ - ಹನುಮಂತರ ಸಮಾಗಮ

ಹಾದಿಯಲ್ಲಿ ಸೂರ್ಯನಂತೆ ಕಂಗೊಳಿಸುತ್ತಿದ್ದ ತನ್ನದೇ ಆದ ಹನುಮದ್ರೂಪವನ್ನು ಭೀಮ ಕಂಡ. ಅದು ತನ್ನದೇ ರೂಪವೆಂದು ತಿಳಿದೂ ಸಹ ಇತರರೊಂದಿಗೆ ವರ್ತಿಸುವಂತೆ ಭೀಮ ಅದರೊಡನೆ ನಡೆದುಕೊಂಡ. ಮನುಷ್ಯರಾಗಿ ಹುಟ್ಟಿದಾಗ ದೇವತೆಗಳು ತಮ್ಮದೇ ರೂಪದಲ್ಲೂ, ಹಾಗೆ ಬೇರೊಬ್ಬರಲ್ಲಿ ಹೇಗೋ ಹಾಗೆ ನಡೆದುಕೊಳ್ಳಬೇಕಾದದ್ದು ಅವರ ಶ್ರೇಷ್ಠಧರ್ಮಗಳಲ್ಲೊಂದು. ಅದೇ ರೀತಿಯಾಗಿ ತಮ್ಮ ಮೂಲರೂಪದ ಶಕ್ತಿಯನ್ನು ತೆಗೆದುಕೊಳ್ಳದೇ

---

೧. ಪುಷ್ಪವನ್ನು ಪ್ರಾರ್ಥಿಸಿದ ಇದು ಒಂದು ವಿಶಿಷ್ಟ ಪ್ರಸಂಗ ; ಎಂದರೆ ಸತ್ಯಭಾಮಾದೇವಿ ಶ್ರೀಕೃಷ್ಣನನ್ನು ಪಾರಿಜಾತಕ್ಕಾಗಿ ಪ್ರಾರ್ಥಿಸಿ, ಅದರಿಂದ ನರಕಾಸುರ ವಧೆ ಮೊದಲಾದವುಗಳು ನಡೆದು, ಶ್ರೀಕೃಷ್ಣನು ಸರ್ವೋತ್ತಮ ಎಂಬ ಮಹಾಪ್ರಮೇಯ ಲೋಕಕ್ಕೆ ತಿಳಿಯುವಂತಾಯಿತು. ಇಲ್ಲಿಯೂ ಸಹ ದ್ರೌಪದಿಯ ಪ್ರಾರ್ಥನೆಯಿಂದ ಮಣಿಮಂತ ಮೊದಲಾದ ಅನೇಕ ಮಹಾರಾಕ್ಷಸರು ಹತರಾಗಿ ಭೀಮಸೇನ ಜೀವೋತ್ತಮ ಎಂಬುದು ಜಗತ್ತಿಗೆ ಸ್ಫುಟವಾಯಿತು. ಇದರಿಂದ ಮಹಾಲಕ್ಷ್ಮಿಯಾದ ಸತ್ಯಭಾಮಾ ಹಾಗೂ ಭಾವೀ ಸರಸ್ವತಿಯಾದ ದ್ರೌಪದೀ ಇಬ್ಬರೂ ಸಹ ಲೋಕಕ್ಕೆ ಮಾಡಿದ ಅನುಪಮ ಉಪಕಾರ ತಿಳಿಯುವುದು ; ಅವರು ನಿಜಕ್ಕೂ ಪುಷ್ಪವನ್ನು ಬಯಸಿ ಹಾಗೆ ಕೇಳಿದವರಲ್ಲ ಎಂಬ ರಹಸ್ಯವು ಅನಾವರಣಗೊಳ್ಳುವುದು.

೨. ದೈತ್ಯರು ಕೆಲವು ಸಲ ಸಾಕ್ಷಾತ್ತಾಗಿ ಕಾಣಿಸಿಕೊಳ್ಳದೆ ಹೀಗೆ ಸಿಂಹ ಮೊದಲಾದ ಕ್ರೂರಪ್ರಾಣಿಗಳ ರೂಪದಲ್ಲಿ ಕಾಣಿಸಿಕೊಳ್ಳುವರು ಎಂಬ ಸೂಚನೆ ಇದರಲ್ಲಿದೆ. ಇದನ್ನು ತಿಳಿದೇ ಭೀಮಸೇನ ಅವರನ್ನು ಸಂಹರಿಸಿದ್ದರಿಂದ ಆತನ ಕಾರ್ಯ ಪ್ರಾಣಿವಧೆಯಾಗದೆ ಲೋಕಕಲ್ಯಾಣಕರ ಮಹತ್ತರ ಪುಣ್ಯಕಾರ್ಯವಾಯಿತು ಎಂಬ ವಿಶೇಷಾಂಶ ಸ್ಫುಟಪಡುವುದು.

ಇರುವುದು, ಮನುಷ್ಯರಂತೆಯೇ ವರ್ತಿಸುವುದೂ ಸಹ ಅವರ ಧರ್ಮಗಳೇ. ಅದರಿಂದಾಗಿ ತಾವಿಬ್ಬರೂ ಒಬ್ಬರೇ ಆದರೂ ಹನುಮಂತ-ಭೀಮರು ಆಗ ಅಣ್ಣತಮ್ಮಂದಿರಂತೆ ನಡೆದು-ಕೊಂಡರು. ಮನುಷ್ಯರಾಗಿ ಹುಟ್ಟಿದಾಗ ಎಲ್ಲ ದೇವತೆಗಳ ಗುಣಗಳೂ, ಅವರ ಮೂಲರೂಪಕ್ಕೆ, ಹಾಗೂ ಯುಗಧರ್ಮಕ್ಕೆ ಅನುಗುಣವಾಗಿ ತಾರತಮ್ಯಾನುಸಾರವಾಗಿ ಹೀಗೆ ಮರೆಯಾಗುವವು. ಪ್ರಧಾನದೇವತೆಗಳ ಗುಣಗಳು ಅಗತ್ಯ ಒದಗಿದಾಗ ಹೆಚ್ಚಿನ ಪ್ರಮಾಣದಲ್ಲಿ ವ್ಯಕ್ತವಾಗುತ್ತವೆ[೧]. ಆದರೆ ವಿಷ್ಣುವಿನ ಅವತಾರಗಳಿಗೆ ಈ ನಿಯಮ ಅನ್ವಯಿಸುವುದಿಲ್ಲ. ಅವನ ಎಲ್ಲ ಅವತಾರರೂಪಗಳೂ ಸಹ ಮೂಲರೂಪದಲ್ಲಿನ ಸಕಲಗುಣಧರ್ಮಗಳನ್ನು ಸಂಪೂರ್ಣವಾಗಿ ಹೊಂದಿರುತ್ತವೆ[೨]. ಅವುಗಳಲ್ಲಿ ಯಾವುದೇ ವಿಧವಾದ ವ್ಯತ್ಯಾಸ ಎಂದಿಗೂ ಇರುವುದಿಲ್ಲ.

ಬಯಸಿದ ಮಾತ್ರಕ್ಕೆ ವಾಯುದೇವರ ಮೂಲರೂಪದ ಸಕಲಗುಣಗಳೂ ಅವರ ಅವತಾರ-ರೂಪಗಳಲ್ಲೂ ಕಾಣಿಸಿಕೊಳ್ಳುವವು. ಆದರೆ ವಾಯುಭಿನ್ನರಾದ ಇತರದೇವತೆಗಳ ಗುಣಗಳು ವ್ಯಕ್ತವಾಗುವುದು ವಿಶೇಷಕಾರಣವಿದ್ದಾಗ ಮಾತ್ರ. ಆದ್ದರಿಂದ ಭೀಮಸೇನನು ಧರ್ಮವೃದ್ಧಿ-ಗಾಗಿಯೇ, ತನ್ನ ರೂಪದಲ್ಲಿ ಮತ್ತೊಂದು ವ್ಯಕ್ತಿಯೊಂದಿಗೆ ಎಂಬಂತೆ ವ್ಯವಹರಿಸಿದ ; ತಾನು ಸಮರ್ಥನಾಗಿದ್ದರೂ, ಹಾಗೆ ವರ್ತಿಸಲು ಮತ್ತೊಂದು ಕಾರಣ ಅಸುರ ಮೋಹನ.

ಹನುಮದ್ರೂಪದ ಮಹತ್ತರವಾದ ಹಿರಿಮೆಯನ್ನು ಕಂಡು, ಅವನ ಮುಖದಿಂದ ರಾಮನ ದಿವ್ಯವಾದ [೩]ಚಾತುರಾತ್ಮ್ಯವನ್ನು ಚತುರ್ಯುಗಗಳ ಧರ್ಮಸೂಕ್ಷ್ಮಗಳನ್ನು ಸಹ ಭೀಮಸೇನ ಕೇಳಿ ತಿಳಿದ. ಅರ್ಜುನನ ಧ್ವಜದ ಮೇಲಿದ್ದು ತನ್ನ ಗರ್ಜನೆಯಿಂದಲೇ ಅವನ ಶತ್ರುಗಳನ್ನು ಜಯಿಸಿಕೊಡುವ ವಚನವನ್ನೂ ಹನುಮಂತನು ಭೀಮನಿಗೆ ನೀಡಿದ. ಅನಂತರ ಭೀಮಸೇನನು ತ್ವರೆಯಿಂದ ಸೌಗಂಧಿಕವನದತ್ತ ನಡೆದ. ಮನುಷ್ಯರಿಂದ ತಲುಪಲಾಗದ ಆ ಸರೋವರವನ್ನು ಸೇರಿ, ಅಲ್ಲಿದ್ದ ಅದ್ಭುತಾಕಾರದ ಸುವರ್ಣ ಕಮಲಗಳನ್ನು ಕಂಡ.

---

೧. ರಾಮಾಯಣದಲ್ಲಿ ಬರುವ ರಾವಣನಿಂದ ಮೂರ್ಛೆಗೊಂಡಾಗ ಲಕ್ಷ್ಮಣ ತನ್ನ ಮೂಲರೂಪವನ್ನು ಸ್ಮರಿಸಿ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡ ವಿವರ ಇದಕ್ಕೆ ನಿದರ್ಶನ. ಅದರಂತೆ ಬಲರಾಮನು ಪ್ರಲಂಬಾಸುರನ ವಧೆಗಾಗಿ ಶ್ರೀಕೃಷ್ಣನ ಆದೇಶದಂತೆ ತನ್ನಲ್ಲಿದ್ದ ಶ್ರೀಹರಿಯ ಶುಕ್ಲಕೇಶ ಆವೇಶವನ್ನು ಚಿಂತಿಸಿದ ಪ್ರಸಂಗವೂ ಇಂತಹುದೇ ಎಂದೂ ತಿಳಿಯಬೇಕು.

೨. ಇದರಂತೆಯೇ ಮಹಾಲಕ್ಷ್ಮಿಯ ಹಿರಿಮೆಯನ್ನು ಅರಿತುಕೊಳ್ಳಬೇಕು ; ಅವರ ಸೀತಾ, ರುಗ್ಮಿಣೀ, ಸತ್ಯಭಾಮಾ ಮೊದಲಾದ ಸಕಲರೂಪಗಳೂ ಸಹ ಶ್ರೀಹರಿಯ ಕೃಷ್ಣ ರಾಮಾದಿ ರೂಪಗಳಂತೆ ಪರಿಪೂರ್ಣ. ಮೂಲ-ರೂಪದ ಸಕಲಸಾಮರ್ಥ್ಯವೂ ಅವತಾರರೂಪಗಳಲ್ಲಿಯೂ ಸಂಪೂರ್ಣವಾಗಿ ಸದಾ ವ್ಯಕ್ತವಾಗಿರುವವು ಎಂಬುದು ಮಹಾಪ್ರಮೇಯಗಳಲ್ಲೊಂದು.

೩. ಚಾತುರಾತ್ಮ್ಯ ಎಂದರೆ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬ ತನ್ನ ನಾಲ್ಕುರೂಪಗಳಿಂದ ಶ್ರೀಹರಿ ರಾಮಾಯಣದಲ್ಲಿ ಕಾಣಿಸಿಕೊಂಡಿದ್ದ ವಿವರ ಎಂದರ್ಥ. ವಾಸುದೇವ-ರೂಪವು ಸಾಕ್ಷಾತ್ ಶ್ರೀರಾಮನೇ ; ಸಂಕರ್ಷಣ ಮೊದಲಾದ ಇತರ ಮೂರು ರೂಪಗಳು ಲಕ್ಷ್ಮಣ, ಭರತ ಹಾಗೂ ಶತ್ರುಘ್ನರಲ್ಲಿ ಆವೇಶ ಹೊಂದಿದ್ದ ರೂಪಗಳು ಎಂಬುದು ವಿಶೇಷ. ಈ ಸೂಕ್ಷ್ಮವಿಚಾರವು ಮಹಾಭಾರತತಾತ್ಪರ್ಯನಿರ್ಣಯದ ಮೂರನೆಯ ಅಧ್ಯಾಯದ ಕೊನೆಯಲ್ಲಿ ನಿರೂಪಿತವಾಗಿದೆ.

## ಕ್ರೋಧವಶರ ವಧೆ

ದಿವ್ಯವಾದ ಆ ಬಂಗಾರದ ಕುಸುಮಗಳಿಂದ ಸುವಾಸನೆ ಎಲ್ಲೆಡೆ ಹರಡಿ ಬರುತ್ತಿತ್ತು. ಕಮಲಗಳತ್ತ ನಡೆಯುತ್ತಿದ್ದಂತೆಯೇ ನರಭಕ್ಷಕರಾದ ರಾಕ್ಷಸರು, ಮಹಾಬಲಶಾಲಿಯೂ, ಆಯುಧಪಾಣಿಯೂ, ಉಗ್ರರೂಪನೂ, ಮನ್ಮಥನಂತಹ ಸುಂದರರೂಪನೂ ಆದ ಅವನನ್ನು ತಡೆಯಲೆಂದು ನುಗ್ಗಿದರು. ಹಾಗೆ ಅಲ್ಲಿಯ ರಕ್ಷಣೆಯ ಭಾರವನ್ನು ಹೊತ್ತಿದ್ದ ಆ ರಾಕ್ಷಸರಿಗೆ ಕ್ರೋಧವಶರು ಎಂದು ಹೆಸರು. ಅವರ ಸಂಖ್ಯೆ ನೂರುಕೋಟಿಯಷ್ಟು ಅಪಾರವಾಗಿತ್ತು. ಶಿವನ ವರದಿಂದಾಗಿ ಅಜೇಯರೆನ್ನಿಸಿದ್ದ ಅವರೆಲ್ಲ ಭಯಂಕರವಾದ ಶಸ್ತ್ರಾಸ್ತ್ರಗಳ ಮಳೆಯನ್ನು ಭೀಮನ ಮೇಲೆ ಸುರಿಸಿದರು ; ಸಕಲವನ್ನು ಬಲ್ಲವನೂ, ತಪಸ್ಸಿಗೆ ನೆಲೆಯೂ, ಬಲಸಾಗರನೂ ಆದ ಭೀಮನ ಮೇಲೆ ಮೊದಲಿಗೆ ಶೈವಶಾಸ್ತ್ರಗಳನ್ನು ಉಲ್ಲೇಖಿಸಿ ವಾಗ್ಯುದ್ಧಕ್ಕೂ ತೊಡಗಿದರು.

ಹಾಗೆ ನಡೆದ ವಾಗ್ಯುದ್ಧದಲ್ಲಿ ಮೊದಲಿಗೆ ಅವರನ್ನೆಲ್ಲ ವೈಷ್ಣವಶಾಸ್ತ್ರಗಳನ್ನು ಉದಾಹರಿಸಿ ಭೀಮಸೇನ ಪರಾಭವಗೊಳಿಸಿದ. ಅನಂತರ ಅವರ ಶಸ್ತ್ರಾಸ್ತ್ರಗಳ ಸುರಿಮಳೆಗೆ ಗದೆಯಿಂದ ಉತ್ತರ ನೀಡುತ್ತಾ ವೀರರಾದ ಆ ರಾಕ್ಷಸರನ್ನೆಲ್ಲ ಸಂಹರಿಸಿದ. ವಾಯುವಿನಿಂದ ಕುಂತಿಯಲ್ಲಿ ಅವತರಿಸಿದ ಆ ಬಲಶಾಲಿಯೂ, ಶೂರನೂ, ಶತ್ರುನಾಶಕನೂ ಆದ ಭೀಮ, ಸತ್ಯ ಹಾಗೂ ಧರ್ಮಗಳಲ್ಲಿ ಯಾವಾಗಲೂ ನಿರತನಾದವನು ; ಪರಾಕ್ರಮದಲ್ಲಿ ಎಂದೂ ಶತ್ರುಗಳಿಗೆ ಮಣಿಯದವನು. ಜಗತ್ತು ಅಸತ್ಯ, ನಿರೀಶ್ವರ, ಅಪ್ರತಿಷ್ಠವೆಂದು ನುಡಿಯುತ್ತ, ನಾನು ಸಿದ್ಧ , ನಾನು ಈಶ, ಎಂದೂ ಹೇಳಿಕೊಳ್ಳುತ್ತಿದ್ದ ಅಲ್ಲಿನ ಮತ್ತೆ ಕೆಲವರನ್ನೂ ಸಹ ಭೀಮನು ವಿಷ್ಣುವಿನ ಗುಣಗಳನ್ನು ವರ್ಣಿಸುತ್ತಲೇ ಸೋಲಿಸಿದ. ವಿಷ್ಣುವು ಎಲ್ಲ ಜಗತ್ತಿನಿಂದಲೂ ಭಿನ್ನ , ಎಲ್ಲರಿಗಿಂತಲೂ ಉತ್ತಮ ಎಂಬುದಾಗಿ ಸ್ಫುಟವಾಗಿ ಸಾಧಿಸುತ್ತ ಅವರಲ್ಲಿನ ಲಕ್ಷಸಂಖ್ಯೆಯ ಮಹಾವೀರರನ್ನು ಸಂಹರಿಸಿದ. ಅಳಿದುಳಿದ ಅವರು ಅವನ ವೀರ್ಯವನ್ನು, ಬಲವನ್ನು ವಿದ್ಯಾಬಲ, ಬಾಹುಬಲಗಳನ್ನೂ ಸಹ ಕಂಡು ಶಕ್ತಿಸಾಲದವರಾಗಿ ಕೂಡಲೇ ಹಿಮ್ಮೆಟ್ಟಿದರು. ಮುಂದೆ ಸಾಗಿದ ಅವನು ಅವರನ್ನು ಗದೆಯಿಂದ ಸಂಹರಿಸುತ್ತ , ಓಡಿಸುತ್ತ , ಆ ಸರೋವರದಲ್ಲಿ ಇಳಿದು ಅಮೃತಸದೃಶವಾದ ಆ ಕೊಳದ ನೀರನ್ನೂ ಕುಡಿದು, ಅನಂತರ ದಿವ್ಯವಾದ ಕಮಲಗಳನ್ನು ತೆಗೆದುಕೊಂಡ.

ಇತ್ತ ಕಲಹಸೂಚಕವಾದ ಶಕುನಗಳನ್ನು ಕಂಡ ಯುಧಿಷ್ಠಿರನು, ದ್ರೌಪದಿಯನ್ನು ಕಂಡು, ''ಭೀಮ ಎಲ್ಲಿ ?'' ಎಂದು ಕಳವಳದಿಂದ ಕೇಳಿದ. ಸೌಗಂಧಿಕಪುಷ್ಪಕ್ಕಾಗಿ ಭೀಮ ಹೋಗಿರುವುದನ್ನು ದ್ರೌಪದಿಯಿಂದ ತಿಳಿದು, ತಮ್ಮಂದಿರು ಮೊದಲಾದವರೊಂದಿಗೆ ರಾಕ್ಷಸಶ್ರೇಷ್ಠರನ್ನು ಏರಿ, ಭೀಮಸೇನನಿದ್ದಲ್ಲಿಗೆ ಹೊರಟು ಅಲ್ಲಿ ಅವನು ಸುರಕ್ಷಿತವಾಗಿರುವುದನ್ನು ಕಂಡ. ಶಿವನು ಕೋಪಗೊಳ್ಳಬಹುದೆಂದು ಅಂಜಿದ ಧರ್ಮರಾಜನು ''ಹೀಗೆ ಮಾಡಕೂಡದು'' ಎಂದು ಭೀಮನಿಗೆ ಹೇಳಿದ. ದೇವತೆಗಳು ತಮ್ಮನ್ನು ಕೊಲ್ಲಬಹುದೆಂಬ ಭಯದಿಂದ ಆ ರಾಕ್ಷಸರೆಲ್ಲ

ಕುಬೇರನ ಅಪ್ಪಣೆಯಂತೆ ಆ ಕೊಳವನ್ನು ಕಾಯುತ್ತಿದ್ದರು[೧]. ಕುಬೇರನಿಗೆ ಶಿವನು ಒಡೆಯನಷ್ಟೆ! ಆದರೆ ಭೀಮನ ಮಾಹಾತ್ಮ್ಯವನ್ನು ಚೆನ್ನಾಗಿ ತಿಳಿದಿದ್ದ ಕುಬೇರನು ಆ ಬಗ್ಗೆ ಕೋಪಗೊಳ್ಳಲಿಲ್ಲ.

## ಪಂಚವರ್ಣದ ಪುಷ್ಪಗಳು – ಮಣಿಮಂತನ ವಧೆ

ಪಾಂಡವರು ಅಲ್ಲಿ ವಾಸಿಸುತ್ತಿದ್ದಾಗ ಮತ್ತೊಂದು ಪ್ರಸಂಗವು ನಡೆಯಿತು. ಸೌಗಂಧಿಕ-ಪುಷ್ಪದ ಘಟನೆ ಕಳೆದು ಕೆಲವು ದಿನಗಳು ಕಳೆದಿದ್ದವು. ಕುಬೇರನ ನೆಲೆ ಮನುಷ್ಯರಿಗೆ ಅಗಮ್ಯವಾದ ಪ್ರದೇಶವಾಗಿತ್ತು. ಅಲ್ಲಿದ್ದ ಪಂಚವರ್ಣದ ಪುಷ್ಪಗಳು ಗಾಳಿಗೆ ಸಿಕ್ಕಿ ದ್ರೌಪದಿ ಭೀಮಸೇನರ ಬಳಿ ಬಿದ್ದವು. ಅವನ್ನು ಕಂಡು ದ್ರೌಪದಿಯು ಭೀಮಸೇನನ ಕೀರ್ತಿ ಹಾಗೂ ಧರ್ಮಗಳು ವರ್ಧಿಸಬೇಕೆಂಬ ದೃಷ್ಟಿಯಿಂದ ಮತ್ತೆ ಅವನನ್ನು ಪ್ರಾರ್ಥಿಸಿಕೊಂಡಳು – ''ಕುಬೇರನ ರಕ್ಷಣೆಗೆ ಒಳಪಟ್ಟಿರುವ ಈ ಪ್ರದೇಶವು ಬೇರಾರಿಗೂ ಎಟುಕುವಂತಹುದಲ್ಲ. ಎಲ್ಲ ರಾಕ್ಷಸರನ್ನೂ ಸಂಹರಿಸಲು, ನೀನೇ ಅಲ್ಲಿಗೆ ಹೋಗಬೇಕು.'' ಕೂಡಲೇ ಗದೆ, ಧನುಸ್ಸು ಬಾಣಗಳೊಂದಿಗೆ ಸಿದ್ಧನಾದ ಭೀಮನು ಪರ್ವತವನ್ನೇರತೊಡಗಿದ.

ವಾಯುಸೂನುವಾದ ಅವನು ಅಲ್ಲಿಗೆ ಬಂದ ವಾರ್ತೆ ಕಿವಿಗೆ ಬೀಳುತ್ತಲೇ ಪದ್ಮತ್ರಯ ಸಂಖ್ಯಾಕವಾದ ರಾಕ್ಷಸಸೇನೆ ಅವನನ್ನು ಆಕ್ರಮಿಸಿತು. ಶಿವನ ವರದಿಂದ ಅಜೇಯನಾಗಿದ್ದ ಮಣಿಮಂತನೇ ಆ ರಾಕ್ಷಸರ ಪಂಗಡದ ಮುಂದಾಳು. ವಿವಿಧ ಶಾಸ್ತ್ರಗಳನ್ನು, ಮಹಾಸ್ತ್ರಗಳನ್ನು ಸುರಿಸುತ್ತಿದ್ದ ಆ ರಾಕ್ಷಸರನ್ನೆಲ್ಲ ಮಣಿಮಂತನ ಸಮೇತವಾಗಿಯೇ ಭೀಮನು ಉತ್ತಮ ಬಾಣಸಮೂಹಗಳಿಂದ ನಾಶಪಡಿಸಿದ. ಅವಧ್ಯರಾದ ಕ್ರೋಧವಶರೆಂಬ ಆ ರಾಕ್ಷಸರನ್ನೆಲ್ಲ ಸಂಹರಿಸಿ ಹಾಕಲು, ಭೀಮನಿಗೆ ಹಿಡಿಸಿದ ಕಾಲ ಒಂದುಕ್ಷಣ ಮಾತ್ರ[೩]. ತನ್ನ ಕಾರ್ಯವನ್ನು ಪೂರೈಸಿದ ಭೀಮನು, ಪರ್ವತಶಿಖರದ ಮೇಲೆ ಶೋಭಿಸಿದ. ಭೀಮಸೇನನಿಂದ ಪ್ರಾಣಬಿಟ್ಟ

---

೧. ದೇವತೆಯಾದ ಕುಬೇರನ ಭೃತ್ಯರಾದ ರಾಕ್ಷಸರು ಸ್ವಭಾವತಃ ಒಳ್ಳೆಯವರಾಗಿದ್ದಿರಬಹುದು ಎಂಬ ಶಂಕೆಗೆ ಇದು ಉತ್ತರವಾಗಿದೆ. ಅವರು ಹಾಗೆ ಕುಬೇರನ ಸೇವಕರಾಗಿದ್ದುದು ಭಕ್ತಿಭಾವದಿಂದಲ್ಲ ; ಯುದ್ಧದಲ್ಲಿ ಸೋತು ತಮ್ಮ ಪ್ರಾಣರಕ್ಷಣೆಗೆಂದು ಅವನ ಅಧೀನದಲ್ಲಿದ್ದವರೇ ಹೊರತು ಸೇವಾಮನೋಭಾವದಿಂದಲ್ಲ. ಆದ್ದರಿಂದ ಅವರು ಸ್ವರೂಪತಃ ದುಷ್ಟರೇ ಆಗಿದ್ದವರು. ಇದರಿಂದಾಗಿ ಭೀಮಸೇನ ಅವರನ್ನು ಸಂಹರಿಸಿದ್ದು ಅತ್ಯಂತ ಸಮುಚಿತ ಎಂಬ ಅಂಶ ಸ್ಫುಟಪಡುವುದು.

೨. ಶಿವನು ಕುಬೇರನ ಒಡೆಯನಾದ್ದರಿಂದ ಶಿವನ ವರದಿಂದ ಹಾಗೆ ವಿನಾಶಹೊಂದಿದ ಕ್ರೋಧವಶರ ಬಗ್ಗೆ ಕುಬೇರ ಆತಂಕಗೊಳ್ಳಲಿಲ್ಲ ಎಂದು ಭಾವ.

೩.. ರಾಮಾಯಣದ ಸುಂದರಕಾಂಡದಲ್ಲೂ ಹನುಮಂತ ಹೀಗೆ ಕ್ಷಣಮಾತ್ರದಲ್ಲಿ ರಾವಣ ಕಳುಹಿಸಿದ ಕೋಟಿ-ಗಟ್ಟಲೆ ಶಿವನ ವರದ ರಕ್ಕಸಸೇನೆಯನ್ನು ಸದೆ ಬಡೆದ ವಿವರ ಬಂದಿರುವುದನ್ನು ಇಲ್ಲಿ ಗಮನಿಸಬಹುದು : ಅಶೀತಿಕೋಟಿಯೂಥಪಂ ಪುರಃಸರಾಷ್ಟಕಾಯುತಮ್ ।ಅನೇಕಹೇತಿಸಂಕುಲಂ ಕಪೀಂದ್ರಮಾವೃಣೋ-ದ್ಬಲಮ್ ॥ ಸಮಾವೃತಸ್ತಥಾऽऽಯುಧೈಃ ಸ ತಾಡಿತಶ್ಚ ತೈರ್ಭೃಶಮ್ । ಚಕಾರ ತಾನ್ ಸಮಸ್ತಶಸ್ತಲಪ್ರಹಾರ-ಚೂರ್ಣಿತಾನ್ ॥ –ಮ.ಭಾ.ತಾ.ನಿ.(೨/೨೦,೨೧)

ಅವರೆಲ್ಲ ಅಂಧಂತಮಸ್ಸಿಗೇ ನಡೆದರು. ಅವರಲ್ಲಿ ಮಣಿಮಂತನು ಕಲಿಯುಗದಲ್ಲಿ ಮತ್ತೆ ಹುಟ್ಟಿ ಮಿಥ್ಯಾಮತಿಯನ್ನು ಹರಡಿ, ಅದರಿಂದಾಗಿ ಹೆಚ್ಚಿನ ತಮಸ್ಸನ್ನೇ ಹೊಂದಿದ.

ಅವಧ್ಯರೆನ್ನಿಸಿದ್ದ ಪದ್ಮತ್ರಯ ಸಂಖ್ಯೆಯ ರಾಕ್ಷಸರು ಮಾತ್ರವಲ್ಲದೆ, ಗೆಳೆಯನಾಗಿದ್ದ ಮಣಿಮಂತನೂ ಸಹ ನಾಶವಾದ ವಾರ್ತೆ ಕುಬೇರನ ಮನಸ್ಸನ್ನು ಮಲಿನಪಡಿಸಿತು. ಅಸುರಾವೇಶದಿಂದ ಕೂಡಿದ ಅವನು ಭೀಮನೊಂದಿಗೆ ಕಾದಲು ರಥವನ್ನೇರಿ ತಾನೇ ಹೊರಟ. ಆ ಸಮಯದಲ್ಲಿ ಭೀಮಸೇನನ ಸಿಂಹನಾದವನ್ನು ಕೇಳಿದ ಧರ್ಮರಾಜ, ದ್ರೌಪದಿಯ ಮೂಲಕ ಭೀಮನ ಸಮಾಚಾರವನ್ನು ತಿಳಿದು ರಾಕ್ಷಸರ ಸಹಾಯದಿಂದ ಅಲ್ಲಿಗೆ ಧಾವಿಸಿದ. ಅವರೆಲ್ಲರನ್ನು ಕಾಣುತಿದ್ದಂತೆಯೇ ಕುಬೇರನ ಅಸುರಾವೇಶ ಸ್ವಲ್ಪ ಕಡಿಮೆಯಾಗಿ, ಸ್ನೇಹಭಾವ ಕಾಣಿಸಿಕೊಂಡಿತು. ಆಯುಧಪಾಣಿಯಾಗಿ ಭೀಮನು ನಿಂತಿದ್ದನ್ನು ಕಂಡಾಗಲೂ, ಅಸುರಾ-ವೇಶದಿಂದಾಗಿ, ಅವನಿಗೆ ಭೀಮನಲ್ಲಿ ಹೆಚ್ಚಿನ ಆದರ ಉಂಟಾಗಲಿಲ್ಲ. ತಾನು ಹಾಗೆ ತನ್ನ ಸ್ನೇಹಿತನನ್ನು ಕಳೆದುಕೊಳ್ಳಲು ಅಗಸ್ತ್ಯಮುನಿಗಳ ಶಾಪವೇ ಕಾರಣ ಎಂದೂ ಸಹ ನುಡಿದ. ಕ್ರಮೇಣ ದೈತ್ಯಾವೇಶವು ಪೂರ್ತಿ ಇಳಿದಾದಮೇಲೆ ಶಾಂತಿಯನ್ನು ಹೊಂದಿ ಪಾಂಡವರನ್ನೆಲ್ಲ ಬಹಳವಾಗಿ ಗೌರವಿಸಿ, ಅವರಿಗೆ ವಾಸಕ್ಕೆಂದು ತನ್ನ ಸ್ಥಾನವನ್ನೇ ಸಂತೋಷದಿಂದ ನೀಡಿದ. ಅಲ್ಲಿ ಮಾತ್ರವಲ್ಲದೆ, ಮತ್ತಿತರ ದೇವತೆಗಳ ಗೃಹಗಳಲ್ಲಿ ಸಹ ಪಾಂಡವರು ಅನೇಕ ದಿನಗಳ ಕಾಲ ಸುಖವಾಗಿ ವಾಸ ಮಾಡಿದರು. ಹೀಗೆ ಆ ಮಹಾತ್ಮರು ಅಲ್ಲಿ ಒಟ್ಟಾಗಿ ನಾಲ್ಕು ವರ್ಷಗಳನ್ನು ಕಳೆದರು.

## ನಿವಾತಕವಚ ಕಾಲೇಯ ಮುಂತಾದವರ ವಧೆ

ಸ್ವರ್ಗದಲ್ಲಿ ನಾಲ್ಕುವರ್ಷಗಳನ್ನು ಕಳೆದು, ಐದನೆಯ ವರ್ಷಕ್ಕೆ ಕಾಲಿಡುತ್ತಿದ್ದಾಗ, ಇಂದ್ರನಿಂದ ಮಹಾಸ್ತ್ರಗಳನ್ನು ಪಡೆದುಕೊಂಡ ಅರ್ಜುನನು ಅವನಿಗೆ ಗುರುದಕ್ಷಿಣೆಯನ್ನು ಕೊಡುವ ಅಭಿಲಾಷೆಯನ್ನು ವ್ಯಕ್ತಪಡಿಸಿದ. ಇಂದ್ರನು ತನ್ನದೇ ರೂಪವಾದ ಅರ್ಜುನನನ್ನು ನಿವಾತಕವಚರೆಂಬ ತನ್ನ ಶತ್ರುಗಳನ್ನು ನಾಶಪಡಿಸಬೇಕೆಂಬ ಗುರುದಕ್ಷಿಣೆಯನ್ನು ಕೇಳಿದ. ಬ್ರಹ್ಮದೇವರು ಆ ರಾಕ್ಷಸರಿಗೆ ಸುರ, ದೈತ್ಯ , ಗಂಧರ್ವ, ಯಕ್ಷ , ರಾಕ್ಷಸ ಮೊದಲಾದ ಯಾರಿಂದಲೂ ಸಾವು ಬರದಂತೆ ವರವಿತ್ತಿದ್ದರು. ಇಂದ್ರ ಬಹಳವಾಗಿ ಬ್ರಹ್ಮದೇವರನ್ನು ಪ್ರಾರ್ಥಿಸಿಕೊಂಡಾಗ, "ಮನುಷ್ಯರೂಪದ ನಿನ್ನಿಂದ ಇವರನ್ನು ಕೊಲ್ಲಲು ಸಾಧ್ಯವಾಗಲಿ" ಎಂದು ವರ ನೀಡಿದ್ದರು. ಆದ್ದರಿಂದಲೇ ಇಂದ್ರನು ನರರೂಪದ ಅರ್ಜುನನನ್ನು ಆ ರೀತಿ ಕೇಳಿಕೊಂಡ ಹಾಗೂ ತನ್ನ ಕಿರೀಟವನ್ನು ಅವನಿಗೆ ತೊಡಿಸಿದ[೧].

---

೧. ಹೀಗೆ ಇಂದ್ರದತ್ತವಾದ ಕಿರೀಟವನ್ನು ಹೊಂದಿದಂದಿನಿಂದ ಅರ್ಜುನನಿಗೆ ಕಿರೀಟಿ ಎಂದು ಹೆಸರಾಯಿತು. ಅದು ಅವನ ಹತ್ತು ಹೆಸರುಗಳಲ್ಲಿ ಒಂದು ಎಂಬುದು ಗಮನಾರ್ಹ :
ಅರ್ಜುನಃ ಫಲ್ಗುನೋ ಜಿಷ್ಣುಃ ಕಿರೀಟೀ ಶ್ವೇತವಾಹನಃ।
ಬೀಭತ್ಸುರ್ವಿಜಯಃ ಕೃಷ್ಣಃ ಸವ್ಯಸಾಚೀ ಧನಂಜಯಃ॥ – ಭಾರತ(ವಿರಾಟ.೪೪/೯)

ಅರ್ಜುನನು ಇಂದ್ರನ ರಥವನ್ನು ಹತ್ತಿ ಮಾತಲಿಯೊಂದಿಗೆ ಗಾಂಡೀವಧನುಸ್ಸನ್ನು ತೆಗೆದು-ಕೊಂಡು ಆ ಮಹಾಸುರರನ್ನು ಕೊಲ್ಲಲು ಹೊರಟ. ಆಗ ದೇವತೆಗಳು ಅವನಿಗೆ ದೇವದತ್ತ ಎಂಬ ಶ್ರೇಷ್ಠ ಶಂಖವನ್ನು ಕೊಟ್ಟರು. ಶಂಖನಾದವನ್ನು ಮಾಡುತ್ತ, ಮಹಾಧನುಸ್ಸನ್ನು ಧ್ವನಿಗೈಯುತ್ತ, ಇಂದ್ರ ಕೊಟ್ಟ ದಿವ್ಯ ಕುಂಡಲಗಳನ್ನು ಧರಿಸಿದ ಅರ್ಜುನನು ದೈತ್ಯರ ಪಟ್ಟಣವನ್ನು ತಲುಪಿದ. ಅವನ ಶಂಖಧ್ವನಿ ಹಾಗೂ ಧನುರ್ಘೋಷಗಳನ್ನು ಕೇಳಿ ಮಹಾ-ಪರಾಕ್ರಮಿಗಳಾದ ನಿವಾತಕವಚರು ಅವನನ್ನು ಎದುರಿಸಲು ಸಿದ್ಧರಾದರು. ಅವರ ಸಂಖ್ಯೆ ಮೂರು ಕೋಟಿಯಷ್ಟಿತ್ತು. ಅವರು ಪ್ರಯೋಗಿಸಿದ ಆಯುಧಗಳು ಅನೇಕವಿಧವಾಗಿದ್ದವು. ಮಹಾಸ್ತ್ರ ಹಾಗೂ ಅಭ್ಯಾಸಬಲಗಳಿಂದ ಕೂಡಿ ಗಾಂಡೀವ ಧನುಸ್ಸಿನಿಂದ ಹೊರಬಂದ ಅರ್ಜುನನ ಬಾಣಗಳು ಆ ಅಸುರರ ಶಸ್ತ್ರಾಸ್ತ್ರಗಳನ್ನು ನಾಶಮಾಡಿದ್ದಲ್ಲದೆ, ಅವರ ಶಿರಸ್ಸುಗಳನ್ನೂ ಸಹ ಕತ್ತರಿಸುತ್ತಾ ಹೊರಟವು. ಅವರಲ್ಲಿ ಒಬ್ಬನೂ ಜೀವಂತವಾಗಿ ಉಳಿಯಲಿಲ್ಲ.

ಅಲ್ಲಿಂದ ಮುಂದೆ ಸಾಗಿದ ಅರ್ಜುನ ಪೌಲೋಮ ಮತ್ತು ಕಾಲಕೇಯ ಎಂಬ ಎರಡು ಬಗೆಯ ರಾಕ್ಷಸರ ಗುಂಪುಗಳನ್ನು ಎದುರಿಸಿದ. ಅವುಗಳಲ್ಲಿ ಒಟ್ಟು ಅರವತ್ತು ಸಾವಿರ ಮಹಾರಥರಿದ್ದರು. ಪಾಶುಪತಾಸ್ತ್ರವನ್ನು ಪ್ರಯೋಗಿಸಿ, ಅರ್ಜುನನು ಅವರನ್ನೆಲ್ಲ ಸುಟ್ಟು ಹಾಕಿ, ಇಂದ್ರಲೋಕಕ್ಕೆ ಮರಳಿದ. ಪ್ರೀತಿ ಉಕ್ಕಿದ ಇಂದ್ರನು, ಅರ್ಜುನನನ್ನು ಆಲಿಂಗಿಸಿಕೊಂಡ. ಹತರಾದ ಆ ಎಲ್ಲ ರಾಕ್ಷಸರೂ ಸಹ ಅಂಧತಮಸ್ಸಿನ ಹಾದಿಯನ್ನೇ ಹಿಡಿದರು.

## ಸೋದರರ ಬಳಿಗೆ ಮರಳಿದ ಅರ್ಜುನ

ಇಂದ್ರನ ಅಪ್ಪಣೆಯನ್ನು ಪಡೆದು ಅರ್ಜುನ ಸೋದರರ ಬಳಿಗೆ ಹಿಂದಿರುಗಿ ಬಂದ. ಇಂದ್ರನು ತನ್ನ ರಥದಲ್ಲಿಯೇ ಅವನನ್ನು ಅವರಲ್ಲಿಗೆ ಕಳುಹಿಸಿಕೊಟ್ಟ. ಅರ್ಜುನನು ಬರುತ್ತಿರುವುದನ್ನು ಕಾಣುತ್ತಿದ್ದಂತೆಯೇ, ಅವನ ಸಹೋದರರು ಬಹಳವಾಗಿ ಹರ್ಷಿಸಿದರು. ಮತ್ತೆ ಅವರೆಲ್ಲ ಸಂತೋಷದಿಂದಲೇ ನಾಲ್ಕು ವರ್ಷಗಳನ್ನು ಮೇರುಪರ್ವತದಲ್ಲಿಯೇ ಕಳೆದರು. ಕೃಷ್ಣನಿಗೆ ಸಂಬಂಧಿಸಿದ ಕಥೆಗಳು, ಧ್ಯಾನ, ಅರ್ಚನೆಗಳಿಂದ ಆ ಮಹಾತ್ಮರು ಅತ್ಯಂತ ಆನಂದವಾಗಿಯೇ ಕಾಲವನ್ನು ಕಳೆಯುತ್ತಿದ್ದರು.

ಭೀಮ ತಿಳಿಸಿದ : ''ಶತ್ರುಗಳನ್ನು ಸದೆಬಡಿಯದೆ, ಮಹತ್ತರವಾದ ಕೀರ್ತಿಯನ್ನು ಗಳಿಸದೆ, ಭಗವದಾಜ್ಞೆಯನ್ನು ಪಾಲಿಸದೆ, ರಾಜರಾದವರಿಗೆ ಎಂದಿಗೂ ಮುಖ್ಯಗತಿಯು ಸರ್ವಥಾ ಲಭಿಸದು. ಉಳಿದೆಲ್ಲ ವರ್ಣಗಳಿಗೂ ಬಾಹ್ಯಶತ್ರುಗಳಲ್ಲಿ ಕ್ಷಮೆ ಸಾಮಾನ್ಯವಾದ ಧರ್ಮವೇ ಆಗಿದೆ. ಹರಿಯ ಅಪ್ಪಣೆಯನ್ನು ನಡೆಸುವುದು ಮಾತ್ರ ಎಲ್ಲರಿಗೂ ಮುಖ್ಯಧರ್ಮವೇ ಸರಿ.'' ಈ ರೀತಿಯಾದ ಭೀಮಸೇನನ ಉದ್ಬೋಧಕವಾದ ಮಾತುಗಳನ್ನು ಕೇಳಿ, ತಮ್ಮಂದಿರೊಂದಿಗೂ, ದ್ರೌಪದಿಯೊಂದಿಗೂ ಕೂಡಿ, ರಾಕ್ಷಸರ ಭುಜಗಳ ಮೇಲೆ ಕುಳಿತು ಯುಧಿಷ್ಠಿರ ಮತ್ತೆ ಕೆಳಕ್ಕೆ ಇಳಿದುಬಂದ.

## ಅಜಗರ ಪ್ರಸಂಗ

ಹಿಮಾಲಯದ ದಕ್ಷಿಣದಿಕ್ಕಿನ ಬುಡದ ತಪ್ಪಲಲ್ಲಿ ಪಾಂಡವರು ವಾಸಿಸುತ್ತಿದ್ದಾಗ ಮತ್ತೊಂದು ಘಟನೆ ನಡೆಯಿತು. ಒಮ್ಮೆ ವಾಯುಸೂನುವಾದ ಭೀಮಸೇನ ಧನುರ್ಧಾರಿಯಾಗಿ ಮೃಗಗಳನ್ನು ಬೇಟೆಯಾಡುತ್ತ ಓಡಾಡುತ್ತಿದ್ದಾಗ ಒಂದು ಅದ್ಭುತಾಕಾರದ ಅಜಗರ ಅವನನ್ನು ಆಕ್ರಮಿಸಿತು. ಆಯುರಾಜನ ಮಗನಾದ ನಹುಷ ಆ ರೀತಿ ಅಜಗರನಾಗಿ ಹುಟ್ಟಿದ್ದ. ವೃತ್ರಾಸುರನ ವಧೆಯಿಂದಾಗಿ ಒದಗಿದ ಬ್ರಹ್ಮಹತ್ಯಾದೋಷದಿಂದಾಗಿ ಇಂದ್ರ ಕಮಲನಾಳದ ತಂತುವಿನ ಮಧ್ಯೆ ಅಡಗಿಕೊಂಡಿದ್ದಾಗ, ದೇವತೆಗಳಿಗೆಲ್ಲ ದೇವಲೋಕದ ಒಡೆತನದ ನಿರ್ವಹಣೆ ದೊಡ್ಡ ಸಮಸ್ಯೆಯಾಯಿತು. ಸಾಕಷ್ಟು ವಿಚಾರ ಮಾಡಿ ದೇವತೆಗಳು ನಹುಷನನ್ನೇ ಸ್ವರ್ಗಾಧಿ-ಪತಿಯನ್ನಾಗಿ ಮಾಡುವುದೆಂದು ತೀರ್ಮಾನಿಸಿದರು. ಯಾರೇ ಕಣ್ಣಿಗೆ ಬಿದ್ದರೂ ಅವರ ಬಲ ಮತ್ತು ತಪಸ್ಸುಗಳು ಸಂಪೂರ್ಣವಾಗಿ ಅವನಿಗೆ ಬರುವ ವರವೊಂದನ್ನು ಅವನಿಗೆ ದಯ-ಪಾಲಿಸಿದರು. ಆ ವರದಿಂದಾಗಿ ಎಲ್ಲ ದೇವತೆಗಳ, ಶ್ರೇಷ್ಠ ವಿಪ್ರರ ತಪಸ್ಸು ಹಾಗೂ ಬಲಗಳನ್ನೆಲ್ಲ ಪಡೆದು ಮೇರೆಮೀರಿದ ಆ ನಹುಷನಿಗೆ ದರ್ಪವೂ ತಾನೇ ತಾನಾಗಿ ಬೆಳೆಯಿತು. ದರ್ಪದಿಂದ ಇಂದ್ರಪತ್ನಿಯಾದ ಶಚಿಯನ್ನೇ ಬಯಸುವವರೆಗೂ ಅವನ ಅವಿವೇಕ ಮುಂದುವರೆಯಿತು.

ಇಂದ್ರನ ಮಾತಿನಿಂದ ಶಚಿಯ ಮೂಲಕ ಮಹರ್ಷಿಗಳ ಗುಂಪು ಹೊತ್ತಿದ್ದ ವಾಹನವನ್ನೇರಿ ತೆರಳಿದ. ಶಚಿಯ ಬಗೆಗಿನ ಅವನ ಆಕಾಂಕ್ಷೆಯು ಧರ್ಮವಿರುದ್ಧವೆಂಬುದನ್ನು ಅವನಿಗೆ ಮನದಟ್ಟು ಮಾಡಿಕೊಡುವ ಸಲುವಾಗಿ ಅಗಸ್ತ್ಯರು ವೇದಗಳ ಪ್ರಾಮಾಣ್ಯವನ್ನು ಅವನು ಒಪ್ಪುವನೋ ಇಲ್ಲವೋ ಎಂಬುದನ್ನು ತಿಳಿಯಬಯಸಿದರು ; ನಹುಷ ವೇದಗಳು ಅಪ್ರಮಾಣವೆಂದೇ ನುಡಿದುಬಿಟ್ಟ. ಆಗ ಅಗಸ್ತ್ಯರು ವೇದಗಳು ಸರ್ವಥಾ ಪ್ರಮಾಣವೇ ಆಗಿವೆ ಎಂದು ನುಡಿಯಲು, ಅವನು ಅವರ ತಲೆಯನ್ನು ತನ್ನ ಕಾಲಿನಿಂದ ಒದ್ದ. ಭೃಗುಋಷಿಗಳು ನಹುಷನ ಕಣ್ಣಿಗೆ ಬೀಳದಂತೆ ಅಗಸ್ತ್ಯರ ಜಟೆಯಲ್ಲಿ ಸೇರಿಕೊಂಡಿದ್ದರು. ಅವರಲ್ಲಿ ಪ್ರವೇಶಿಸಿದ ಬ್ರಹ್ಮದೇವರು ನಹುಷನಿಗೆ ಶಾಪವನ್ನಿತ್ತರು – "ಎಲವೋ ಪಾಪಿ ! ನೀನು ಅಜಗರವಾಗಿ ಜನಿಸು. ಹಗಲಿನ ಷಷ್ಠಕಾಲದಲ್ಲಿ ನಿನ್ನ ಕೈಗೆ ಸಿಕ್ಕುವವನು, ಅವನು ನಿನಗಿಂತ ಎಷ್ಟೇ ಬಲಾಧಿಕನಾಗಿದ್ದರೂ, ನಿನ್ನ ವಶವಾಗುವಂತಾಗಲಿ. ಹಾಗೆ ಹಿಡಿದ ಮನುಷ್ಯನನ್ನು ತಿನ್ನಲು ನಿನಗೆ ಸಾಧ್ಯವಾಗದೇ ಹೋದಂದು ಹಾಗೂ ಆ ಪುರುಷನು ಸಮರ್ಥನೇ ಆದರೂ ತನ್ನ ಬಿಡುಗಡೆಗೆ ಪ್ರಯತ್ನಿಸದೇ ಇದ್ದಾಗ, ನಿನ್ನಲ್ಲಿ ಸೇರಿರುವ ಎಲ್ಲ ದೇವಮುನಿಗಳ ಹೆಚ್ಚಿನ ಬಲವು ಅವನನ್ನು ಸೇರುವುದು; ನಿನ್ನ ಪ್ರಶ್ನೆಗಳನ್ನು ಉತ್ತರಿಸುವವನಿಂದ ನಿನಗೆ ಈ ಅಜಗರಜನ್ಮದಿಂದ ಮುಕ್ತಿ ದೊರೆತು, ಮತ್ತೆ ಸ್ವರ್ಗವನ್ನು ಪಡೆಯುವಿ. ಈ ಎಲ್ಲ ವಿಷಯದ ಸ್ಮೃತಿಯು ನನ್ನ ಅನುಗ್ರಹದಿಂದ ನಿನಗೆ ಉಳಿಯಲಿ." ಕೂಡಲೇ ನಹುಷ ಅಜಗರನಾಗಿ ಭೂಮಿಯಲ್ಲಿ ಜನಿಸಿದ.

ವಿಷ್ಣುವನ್ನು ಪೂಜಿಸಿ, ಪಾಪಮುಕ್ತನಾದ ಇಂದ್ರನು ಮತ್ತೆ ತನ್ನ ಸ್ಥಾನವನ್ನಲಂಕರಿಸಿದ. ಇಂದ್ರನಿಗೆ ಹಾಗೆ ಬಂದ ಬ್ರಹ್ಮಹತ್ಯಾದೋಷವು ಅವನ ಧರ್ಮವೃದ್ಧಿಗೆ ಕಾರಣವಾಯಿತು.

ವೃತ್ರನಂತಹ ಲೋಕಕಂಟಕನನ್ನು ಸಂಹರಿಸಿ, ಲೋಕಗಳನ್ನು ರಕ್ಷಿಸಿದ ಕಾರ್ಯ ಎಂದಾದರೂ ಇಂದ್ರನಿಗೆ ಪಾಪವನ್ನುಂಟುಮಾಡೀತೇ? ವೃತ್ರನನ್ನು ಕೊಂದು ಇಂದ್ರನು ಮಹೇಂದ್ರ ಎನ್ನಿಸಿದನು ಎಂಬುದೇ ಮೊದಲಾಗಿ ವೇದವಚನವಿದೆ. ಹೀಗೆ ಕೆಲವೊಮ್ಮೆ ಪಾಪವೂ ಸಹ ಪುಣ್ಯದ ವೃದ್ಧಿಗೇ ಕಾರಣವಾಗುವುದು. ಆದರೆ, ಈ ಪ್ರಸಂಗ ದೇವತೆಗಳು ಮತ್ತು ಮುನಿಗಳಂತಹ ಉತ್ತಮಾಧಿಕಾರಿಗಳ ವಿಷಯಕ್ಕೆ ಮಾತ್ರ ಅನ್ವಯಿಸುವುದು ; ಮನುಷ್ಯರಿಗಲ್ಲ. ಅದೇ ರೀತಿ ಅಸುರರು ಮಾಡುವ ಪುಣ್ಯಕಾರ್ಯವೂ ಸಹ ಪಾಪವೃದ್ಧಿಯಲ್ಲಿ ಪರ್ಯವಸಾನವಾಗುವುದು. ಇದೆಲ್ಲ ಸ್ಕಾಂದಪುರಾಣದಲ್ಲಿ ವಿವರವಾಗಿ ಬಂದಿದೆ. ದೇವತೆಗಳೆಂದೂ ಒಬ್ಬರು ಇನ್ನೊಬ್ಬರ ಸ್ಥಾನವನ್ನು ಅಂಗೀಕರಿಸುವುದಿಲ್ಲ. ಇದು ಅವರ ಪಾಲಿನ ದೊಡ್ಡ ವ್ರತ. ಅದರಿಂದಾಗಿ ನಹುಷನನ್ನು ಆ ರೀತಿ ದೇವತೆಗಳು ಇಂದ್ರಪದವಿಯಲ್ಲಿ ಕೂಡಿಸಿದ್ದರು.

## ಭೀಮನ ಪರಾಕ್ರಮ

ಈ ಎಲ್ಲ ವಿಷಯವನ್ನು ತಿಳಿದಿದ್ದರಿಂದಲೇ ಭೀಮನು ಆ ಅಜಗರನ ಕೈಯಲ್ಲಿ ಸಿಕ್ಕಿದವನಂತೆ ವರ್ತಿಸಿದ. ಆ ನಹುಷನಲ್ಲಿದ್ದ ದೇವತೆಗಳ ಹಾಗೂ ಮುನಿಗಳ ಬಲವೆಲ್ಲವನ್ನೂ ಸಹ ಸೆಳೆದು-ಕೊಳ್ಳಲೆಂದೇ ಭೀಮನು ತಾನಾಗಿಯೇ ಅವನ ಕೈಗೆ ಸಿಲುಕಿದ. ದೇವತೆಗಳು ಮನುಷ್ಯರಾಗಿ ಹುಟ್ಟಿದಾಗ, ಅವರ ಮೂಲರೂಪದ ಬಲದಲ್ಲಿ ಸ್ವಲ್ಪಮಾತ್ರ ಬಲ ವ್ಯಕ್ತವಾಗುವುದು. ವಾಯು-ವಿಗೆ ಮಾತ್ರ ಸಮಗ್ರ ಬಲವೂ ಸಹ ಬಯಸಿದಾಗಲೆಲ್ಲ ವ್ಯಕ್ತವಾಗುವುದು. ಉಳಿದವರಿಗೆ ಬಲಾದಿಗಳ ಪೂರ್ಣ ಅಭಿವ್ಯಕ್ತಿ ಎಂದೂ ಆಗುವುದಿಲ್ಲ. ಆದರೆ ವಿಷ್ಣುವಿನ ಗುಣಗಳು ಮಾತ್ರ ಅವತಾರರೂಪದಲ್ಲೂ ಸಂಪೂರ್ಣವಾಗಿ ಯಾವಾಗಲೂ ಪ್ರಕಟವಾಗಿರುವವು ಎಂಬುದೇ ಶಾಸ್ತ್ರಗಳ ನಿರ್ಣಯ. ಹಾಗೆ ಶಕ್ಯವಿದ್ದಾಗಲೂ, ಇತರ ಗುಣಗಳನ್ನು ತಮ್ಮ ಮೂಲರೂಪದ ಸ್ಮರಣೆಯಿಂದ ವ್ಯಕ್ತಮಾಡಿಕೊಳ್ಳದಿದ್ದಾಗ, ದೇವತೆಗಳ ಧರ್ಮ ಹೆಚ್ಚು ವೃದ್ಧಿಯಾಗುವುದು. ಆದ್ದರಿಂದಲೇ ಆ ರೀತಿ ತನ್ನ ಮಾನುಷಬಲವು ತಡೆಯಲ್ಪಟ್ಟಂತೆ ನಿಲ್ಲಲು, ಭೀಮನು ಸಮರ್ಥನೇ ಆದರೂ ದೈವಬಲವನ್ನು ವ್ಯಕ್ತಮಾಡಲು ಇಷ್ಟಪಡಲಿಲ್ಲ. ವಿದ್ಯೆಯಿಂದ ಜೀವನ ಸಾಗಿಸುವುದು ಬ್ರಾಹ್ಮಣರಿಗೂ ಸಹ ಧರ್ಮವೆನ್ನಿಸದು. ಇನ್ನು ಕ್ಷತ್ರಿಯರಿಗಂತೂ ಸರ್ವಥಾ ಸಲ್ಲದು. ಆದ್ದರಿಂದಲೇ ತನಗೆ ಅಜಗರನ ಪ್ರಶ್ನೆಗಳಿಗೆಲ್ಲ ಉತ್ತರ ತಿಳಿದಿದ್ದರೂ ಬಿಡುಗಡೆಗಾಗಿ ಭೀಮನು ಅವುಗಳಿಗೆ ಉತ್ತರ ನೀಡುವ ಗೋಜಿಗೆ ಹೋಗಲಿಲ್ಲ.

## ಭೀಮನನ್ನು ಸೇರಿದ ನಹುಷನ ಬಲ

ಭೀಮನು ಯಾವುದೇ ಪ್ರತಿರೋಧವನ್ನು ತೋರದಿದ್ದಾಗಲೂ, ಸಮಸ್ತಲೋಕದ ಬಲದಿಂದಲೂ ತುಂಬಿದ್ದ ಆ ನಹುಷನಿಗೆ, ಅವನನ್ನು ಅಲುಗಾಡಿಸಲೂ ಸಹ ಶಕ್ಯವಾಗಲಿಲ್ಲ. ಸುಮ್ಮನೆ ಭೀಮನನ್ನು ಸುತ್ತುವರಿದು ನಿಂತುಬಿಟ್ಟ. ಸೋದರರು ತನ್ನ ಬಗ್ಗೆ ಕಳವಳಗೊಳ್ಳಬಹುದು ಎಂಬ ಕಾರಣದಿಂದ ಬೇಗ ಬಿಡಿಸಿಕೊಳ್ಳಲು ಇಚ್ಛಿಸಿದರೂ, ಅವನಲ್ಲಿದ್ದ ಎಲ್ಲ ದೇವಮುನಿಗಳ

ತಪಸ್ಸು ಹಾಗೂ ಬಲಗಳನ್ನು ಸೆಳೆದುಕೊಳ್ಳುವ ಕಾರಣದಿಂದ ಭೀಮನು ಸ್ವಲ್ಪಕಾಲ ಕಾಯಲು ನಿರ್ಧರಿಸಿದ. ಕ್ರಮೇಣ ಆ ಸರ್ಪದ ಶಕ್ತಿ ಕುಂದಿ, ಅದರ ಪಟ್ಟು ತಾನೇ ಕಳಚುತ್ತದೆ ಎಂಬುದೂ ಸಹ ಭೀಮ ತನ್ನನ್ನು ಬೇಗ ತಾನೇ ಬಿಡಿಸಿಕೊಳ್ಳದಿರಲು ಕಾರಣವಾಗಿತ್ತು. ತನ್ನ ವಜ್ರಸದೃಶದೇಹಕ್ಕೆ ಯಾವ ಅಪಾಯವನ್ನೂ ಆ ಅಜಗರ ಮಾಡಲಾರದು ಎಂಬ ವಸ್ತುಸ್ಥಿತಿಯು ಭೀಮನಿಗೆ ತಿಳಿದಿತ್ತು. ಆದ್ದರಿಂದ ಭೀಮನು ಎಂದಿನಂತೆ [೧]ಸಹಜವಾಗಿಯೇ ಕೃಷ್ಣನನ್ನು ಧ್ಯಾನಿಸುತ್ತ ನಿಂತುಬಿಟ್ಟ. ಫಲದ ಅಪೇಕ್ಷೆಯಿಂದಲ್ಲ ; ಬ್ರಹ್ಮದೇವರ ಮಾತಿನಂತೆ ನಹುಷನಲ್ಲಿದ್ದ ಬಲವೆಲ್ಲ ಭೀಮನನ್ನು ಸೇರತೊಡಗಿತು. ಕ್ರಮೇಣ ಶಕ್ತಿಹೀನನಾಗುತ್ತಿದ್ದ ನಹುಷನಿಗೆ ಭೀಮನನ್ನು ಸುಮ್ಮನೆ ಹಿಡಿದುಕೊಂಡಿರುವುದು ಸಹ ಪ್ರಯಾಸವೇ ಎನ್ನಿಸತೊಡಗಿತು.

## ಯುಧಿಷ್ಠಿರನಿಂದ ನಹುಷನ ಶಾಪಮುಕ್ತಿ

ಭೀಮನು ಎಷ್ಟು ಹೊತ್ತಾದರೂ ಬಾರದೇ ಇದ್ದುದರಿಂದಲೂ, ಕೆಟ್ಟ ಶಕುನಗಳು ಕಾಣಿಸಿ-ಕೊಂಡದ್ದರಿಂದಲೂ, ಯುಧಿಷ್ಠಿರನು ಚಿಂತೆಗೀಡಾಗಿ, ದ್ರೌಪದಿಯಿಂದ ಭೀಮನು ಬೇಟೆಗೆ ಹೊರಟಿರುವುದನ್ನು ತಿಳಿದುಕೊಂಡ. ಭೀಮನ ನಡಿಗೆಯ ರಭಸಕ್ಕೆ ಮುರಿದು ಬಿದ್ದಿದ್ದ ಮರಗಳ ಗುರುತಿನಿಂದಾಗಿ ಭೀಮ ಹೊರಟಿದ್ದ ದಾರಿಯನ್ನು ಗುರುತಿಸುವುದು ಯುಧಿಷ್ಠಿರನಿಗೆ ಸಾಧ್ಯವಾಯಿತು. ಸರ್ಪದಿಂದ ಸುತ್ತುವರೆಯಲ್ಪಟ್ಟ ಭೀಮನು ಕಣ್ಣಿಗೆ ಬೀಳುತ್ತಲೇ ಎಲ್ಲವನ್ನು ಧರ್ಮರಾಜ ಕೇಳಿ ತಿಳಿದುಕೊಂಡ. ನಹುಷನ ಎಲ್ಲ ಪ್ರಶ್ನೆಗಳನ್ನೂ ಸಹ ಭೀಮನ ಮೇಲಿನ ಪ್ರೀತಿಯಿಂದಾಗಿ ಧರ್ಮರಾಜ ಉತ್ತರಿಸಿದ ; ಅಜಗರನು ಶಾಪಮುಕ್ತವಾಗಿ, ನಹುಷನ ರೂಪವನ್ನು ಹೊಂದಿ, ದಿವ್ಯ ಕುಂಡಲಗಳಿಂದ ಶೋಭಿಸುತ್ತ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳಿದ. ಭೀಮ ಯುಧಿಷ್ಠಿರರು ತಮ್ಮ ಆಶ್ರಮಕ್ಕೆ ಹೊರಟರು. ಅಲ್ಲಿ ಭೀಮನಿಂದ ಎಲ್ಲವನ್ನೂ ವಿವರವಾಗಿ ತಿಳಿದು, ಆ ಬಗ್ಗೆ ಕಾತರರಾಗಿದ್ದ ಭೀಮಸೇನನ ಅತ್ಯಂತಭಕ್ತರಾದ ಅವನ ಸಹೋದರರು, ದ್ರೌಪದೀ ಹಾಗೂ ಋಷಿ ಮುನಿಗಳು – "ಶಕ್ತನಾದರೂ ನಿನ್ನನ್ನು ಬಿಡಿಸಿಕೊಳ್ಳದ ಇಂತಹ ಸಾಹಸವನ್ನು ನಮಗೋಸ್ಕರವಾಗಿಯಾದರೂ ಇನ್ನು ಮುಂದೆ ಮಾಡದಿರು. ಅದರಿಂದ ನಮಗೆ ತುಂಬಾ ಸಂಕಟವಾಗುವುದು"ಎಂದು ಹೇಳುತ್ತ ಭೀಮನನ್ನು ಸಮೀಪಿಸಿ, ಆಲಿಂಗಿಸಿಕೊಂಡರು.

## ದ್ರೌಪದೀ ಸತ್ಯಭಾಮಾ ಸಂವಾದ

ಮತ್ತೆ ಕೆಲವು ದಿನಗಳು ಉರುಳಿದವು. ಮುನಿಗಳೊಂದಿಗೆ ಕೂಡಿಕೊಂಡು, ಪಾಂಡವ-ರೆಲ್ಲ ಕೌರವರ ದೇಶವನ್ನು ಸೇರಿದರು. ಅಲ್ಲಿಗೆ ಸತ್ಯಭಾಮೆಯೊಂದಿಗೆ ಕೃಷ್ಣನು ಬಂದು,

೧. ಭೀಮನು ಹೀಗೆ ಸಹಜವಾಗಿಯೇ ಕೃಷ್ಣನ ಧ್ಯಾನಕ್ಕೆ ತೊಡಗಿದ ಈ ಪ್ರಸಂಗವು, ಕೌರವಸಭೆಯಲ್ಲಿ ದ್ರೌಪದೀದೇವಿಯು ಸಹಜವಾಗಿಯೇ ಶ್ರೀಕೃಷ್ಣನ ಸ್ಮರಣೆಗೆ ತೊಡಗಿದ ಪ್ರಸಂಗವನ್ನು ಹೋಲುವುದು. ಇವರಿಬ್ಬರೂ ಪರಶುಕ್ಲತ್ರಯರಲ್ಲಿ ಸೇರಿದ ಶುದ್ಧಭಾಗವತಧರ್ಮದಲ್ಲಿ ರತರಾದವರು ಎಂಬ ವಿಶೇಷಾಂಶ ಈಗಾಗಲೇ ಬಂದಿದೆ.

ಅವರೆಲ್ಲರಿಂದ ಪೂಜಿತನಾಗಿ, ಸ್ನೇಹಸಲ್ಲಾಪಗಳನ್ನು ನಡೆಸಿದ. ಉತ್ತಮಸ್ತ್ರೀಯರಾದ ಸತ್ಯಭಾಮೆ ಹಾಗೂ ದ್ರೌಪದಿ ಸಂತೋಷದಿಂದ ಪರಸ್ಪರ ಸಂಭಾಷಿಸಿದರು. ಪರೀಕ್ಷೆ ಮಾಡುವವಳ ದೋಷರಹಿತಳಾದ ಸರ್ವಜ್ಞಳಾದ ಸತ್ಯಭಾಮೆಯು ಪ್ರಶ್ನಿಸಿದಾಗ, ದ್ರೌಪದಿಯು ಸಕಲ ಸ್ತ್ರೀಧರ್ಮಗಳನ್ನೂ ಸತ್ಯಭಾಮೆಯು ನಿರ್ದೋಷಳೂ, ಸರ್ವಜ್ಞಳೂ ಆದ ಮಹಾಲಕ್ಷ್ಮಿಯೇ ಎಂಬುದನ್ನು ತಿಳಿದೇ, ವಿವರಿಸಿದಳು. ಲೋಕಶಿಕ್ಷಣವೇ ಅವರೀರ್ವರ [೧]ಸಂವಾದದ ಮುಖ್ಯ ಉದ್ದೇಶವಾಗಿತ್ತು. ಸತ್ಯಭಾಮೆಯ ಮಾತುಗಳೆಲ್ಲ ಕ್ರೀಡೆಗಾಗಿ ಎಂಬುದನ್ನು ತಿಳಿದು, ಅದಕ್ಕೆ ಉಚಿತವಾದ ಉತ್ತರಗಳನ್ನು ದ್ರೌಪದಿಯು ಕೊಟ್ಟಳು. ಸ್ವಲ್ಪ ದಿನಗಳು ಪಾಂಡವರೊಂದಿಗೆ ಕಳೆದು ಪತ್ನೀಸಮೇತವಾಗಿ ಕೃಷ್ಣನು ದ್ವಾರಕೆಗೆ ಮರಳಿದ.

## ಜಯದ್ರಥನ ಪರಾಭವ

ಒಮ್ಮೆ ಪಾಂಡವರೆಲ್ಲ ಬೇಟೆಗೆ ಹೋಗಿದ್ದ ಸಮಯವನ್ನು ಸಾಧಿಸಿ ಕೋಟಿಕಾಶ್ಯ ಎಂಬುವನೊಂದಿಗೆ ಸೈನ್ಯಸಮೇತವಾಗಿ ಪಾಂಡವರ ಆಶ್ರಮದ ಬಳಿ ಬಂದ ಜಯದ್ರಥನು, ಅಲ್ಲಿ ದ್ರೌಪದಿಯನ್ನು ಕಂಡ. ಮತ್ತೊಂದು ಮದುವೆಯಾಗಲೆಂದು ಹೊರಟಿದ್ದ ಅವನು ಕೋಟಿಕಾಶ್ಯನನ್ನು ಕಳುಹಿಸಿ ತನ್ನ ಬಳಿಗೆ ದ್ರೌಪದಿಯನ್ನು ಕರೆತರಲು ಹೇಳಿದ. ಅವಳಿಂದ ತಿರಸ್ಕರಿಸಲ್ಪಟ್ಟವನಾಗಿ ಆ ಪಾಪಿಯು ಅವಳನ್ನು ಹಿಡಿಯಹೊರಟು ಅವಳಿಂದ ತಳ್ಳಲ್ಪಟ್ಟವನಾಗಿ ಭೂಮಿಯ ಮೇಲೆ ಮೂರ್ಛಿತನಾಗಿ ಬಿದ್ದ. ಎಚ್ಚರಗೊಂಡ ಅವನು ನಾಚಿಕೆಯಿಲ್ಲದೆ ಮತ್ತೆ ತನ್ನತ್ತ ಧಾವಿಸುತ್ತಿದ್ದುದನ್ನು ಕಂಡು ಬೇರೆ ಸಹಾಯವಿಲ್ಲದಿದ್ದುದರಿಂದ, ದ್ರೌಪದಿಯು, ಧೌಮ್ಯರಿಗೆ 'ಅಗ್ನಿಸಮೇತರಾಗಿ ಬನ್ನಿ' ಎಂದು ಹೇಳಿ, ಜಯದ್ರಥನ ರಥವನ್ನು ಏರಿದಳು. ಹಾಗೆ ಹತ್ತುವಾಗ ಸ್ಪಷ್ಟವಾಗಿ 'ನೀನು ಸುಖವಾಗಿ ಇಲ್ಲಿಂದ ಪಾರಾಗಲಾರೆ' ಎಂದು ಅವನನ್ನು ಧಿಕ್ಕರಿಸಿದಳು. ಆ ವೇಳೆಗೆ ಶಕುನಗಳನ್ನು ಕಂಡ ಪಾಂಡವರು ತ್ವರೆಯಿಂದ ಆಶ್ರಮಕ್ಕೆ ಬಂದು, ದಾಸಿಯ ಮಾತಿನಿಂದ ಎಲ್ಲವನ್ನೂ ಕೇಳಿ ತಿಳಿದು, ಸೈಂಧವನನ್ನು ವೇಗವಾಗಿ ಬೆನ್ನಟ್ಟಿದರು.

ಪಾಂಡವರ ಸಿಂಹನಾದವನ್ನು ಕೇಳುತ್ತಿದ್ದಂತೆಯೇ ರಥದಿಂದ ಕೆಳಗಿಳಿದ ದ್ರೌಪದಿಯು ಧೌಮ್ಯಋಷಿಗಳೊಂದಿಗೆ ಆಶ್ರಮಕ್ಕೆ ತೆರಳಿದಳು. ಜಯದ್ರಥನ ಸೈನ್ಯವನ್ನೆಲ್ಲ ಪಾಂಡವರು ನಾಶ ಮಾಡಿದರು. ದ್ರೌಪದಿಯ ಬಳಿಗೆ ಬಂದು 'ಸಿಂಧುರಾಜನ ಬಳಿಗೆ ಬಾ' ಎಂದು ಕರೆದಿದ್ದ ಪಾಪಿ ಕೋಟಿಕಾಶ್ಯನ ತಲೆಯನ್ನು ಭೀಮಸೇನ ಕತ್ತರಿಸಿ ಹಾಕಿದ. ಆ ಪಾಪಿಯು ತಮಸ್ಸನ್ನೇ ಸೇರಿದ. ಜಯದ್ರಥನ ಸೈನ್ಯವನ್ನು ಸಂಹರಿಸಿದ ಭೀಮಾರ್ಜುನರು, ಧರ್ಮರಾಜ ಮತ್ತು ನಕುಲ–ಸಹದೇವರನ್ನು ಅಲ್ಲಿಯೇ ಬಿಟ್ಟು, ಓಡುತ್ತಿದ್ದ ಜಯದ್ರಥನನ್ನು ಹಿಂಬಾಲಿಸಿದರು. ಅರ್ಜುನ

---

೧. ಸತ್ಯಭಾಮೆ ಮಹಾಲಕ್ಷ್ಮಿ; ದ್ರೌಪದಿ ಭಾವಿ ಸರಸ್ವತೀ ; ಇದರಿಂದ ದ್ರೌಪದೀ–ಸತ್ಯಭಾಮಾ ಸಂವಾದವೆಂದರೆ ಲಕ್ಷ್ಮೀ–ಸರಸ್ವತಿಯರ ಸಂವಾದವೆಂದಾಗುವುದು. ಇದರಿಂದ ಲಕ್ಷ್ಮೀ–ಸರಸ್ವತಿಯರು ಒಂದೆಡೆ ಸೇರರು – ಎಂದರೆ ಸಂಪತ್ತು ಇದ್ದವರಿಗೆ ವಿದ್ಯೆ ಇರದು ; ವಿದ್ಯಾವಂತರಿಗೆ ಸಂಪತ್ತು ಇರದು ಎಂಬ ರೂಢಿಯ ಕಲ್ಪನೆ ತಪ್ಪು ಎಂದಾಗುವುದು. ಆ ರೂಢಿಯ ಮಾತಿಗೆ ಭ್ರಷ್ಟಾಚಾರದ ಸಂಪಾದನೆ ಇದ್ದಲ್ಲಿ ವಿದ್ಯೆ ಇರದು, ಅಹಂಕಾರದ ಪಾಂಡಿತ್ಯವಿದ್ದಲ್ಲಿ ಸಂಪತ್ತು ನೆಲೆಸದು ಎಂದು ಅರ್ಥಮಾಡಿಕೊಳ್ಳಬೇಕು.

ಜಯದ್ರಥನ ರಥವನ್ನು ಪುಡಿಮಾಡಿದ. ಕಾಲುಗಳಿಂದಲೇ ಓಡುತ್ತಿದ್ದ ಅವನನ್ನು ಭೀಮಸೇನನು ಹಿಡಿದು ಜೋರಾಗಿ ಒದ್ದ; ಸಂಕಟಪಡುತ್ತಿದ್ದ ಅವನನ್ನು ಎಳೆದು ತಂದು ದ್ರೌಪದಿಯ ಪಾದದ ಮೇಲೆ ಬೀಳಿಸಿದ. ಆ ಪಾಪಿಯನ್ನು ಬಿಟ್ಟುಬಿಡುವಂತೆ ಧರ್ಮರಾಜನು ಹೇಳಿದ. ''ನಾನು ದ್ರೌಪದಿಯ ದಾಸ'' ಎಂದು ಜಯದ್ರಥನು ನುಡಿದ ಮೇಲೆಯೇ, ಅವನನ್ನು [೧] ಪಂಚಚೂಡ-ನನ್ನಾಗಿ ಮಾಡಿ ಭೀಮಸೇನ ಓಡಿಸಿದ. ನಾಚಿಕೆಯಿಂದ ತಲೆಬಾಗಿಸಿಕೊಂಡೇ ಹೊರಟ ಅವನು ಕಾಡನ್ನು ಸೇರಿಕೊಂಡ[೨]. ಪಾಂಡವರು ಸುಖದಿಂದಲೇ ಅಲ್ಲಿ ವಾಸಿಸತೊಡಗಿದರು.

ಭೀಮನಿಂದ ಪಂಚಚೂಡನಾದ ಜಯದ್ರಥನು ಶಿವನನ್ನು ಕುರಿತು ತಪಸ್ಸುಮಾಡಿ, ಒಂದು ದಿನದಮಟ್ಟಿಗೆ ಪಾಂಡವರನ್ನೆಲ್ಲ ತಡೆಯುವ ಶಕ್ತಿಯನ್ನು ಕರುಣಿಸಲು ಕೇಳಿಕೊಂಡ. ಅರ್ಜುನನ ಹೊರತು [೩] ಉಳಿದ ಪಾಂಡವರನ್ನು ಮಾತ್ರ ಗೆಲ್ಲುವಂತೆ ಶಿವನು ವರವಿತ್ತ. ಅರ್ಜುನನ ತಪಸ್ಸಿಗೆ ಶಿವ ಆ ಮುನ್ನವೇ ಒಲಿದಿದ್ದರಿಂದ ಅವನನ್ನು ಜಯಿಸುವ ವರವನ್ನು ನೀಡಲಿಲ್ಲ!

## ಮಾರ್ಕಂಡೇಯ ಸಮಾಸ್ಯಾ

ಆಗೊಮ್ಮೆ ಮಾರ್ಕಂಡೇಯ ಮುನಿಯು ಪಾಂಡವರ ಬಳಿಗೆ ಆಗಮಿಸಿ ಅನೇಕ ವಿಧವಾದ ಕಥೆಗಳನ್ನು ಅವರಿಗೆ ಹೇಳಿದರು. ಭಾಷಾತ್ರಯಗಳಿಂದ ಕೂಡಿದ್ದ ಆ ಕಥೆಗಳೆಲ್ಲ ಅರ್ಥಮಾಡಿ-ಕೊಳ್ಳಲು ಸುಲಭ ಎನ್ನಿಸದಂತಹವು. ಲೋಕದರ್ಶನವನ್ನು ಅವಲಂಬಿಸಿ ದೇವತೆಗಳೂ, ಮುನಿಗಳೂ ಕಥೆಗಳನ್ನು ಹೇಳುವರು. ಅಂತಹ ಕಥೆಗಳಲ್ಲಿ ನೀತಿಯನ್ನು ಮಾತ್ರ ಗ್ರಹಿಸಬೇಕೇ ಹೊರತು, ಇತಿಹಾಸವನ್ನಲ್ಲ. ಸಮಾಧಿಭಾಷೆಯ ಕಥೆಗಳಲ್ಲಿ ಇತಿಹಾಸವನ್ನೂ ಸಹ ಅಗತ್ಯವಾಗಿ ಗ್ರಹಿಸಲೇಬೇಕು. ಪರದರ್ಶನ ಭಾಷೆಗಳಲ್ಲಿ ಆಯಾ ದರ್ಶನಗಳು ಹಾಗಿವೆ ಎಂದು ಮಾತ್ರವೇ

---

೧. ಪಂಚಚೂಡ ಎಂದರೆ ತಲೆಯನ್ನು ಹಿಂದೆ ಮುಂದೆ ಮಧ್ಯೆ ಹಾಗೂ ಎರಡು ಪಾರ್ಶ್ವಗಳಲ್ಲಿ ಮಾತ್ರ ಕೇಶಗಳನ್ನು ಉಳಿಸಿ, ಉಳಿದಂತೆ ತಲೆಯನ್ನು ಬೋಳಿಸುವುದು ಎಂದರ್ಥ. ಇದು ಇಂತಹ ಅಪರಾಧಗಳಿಗೆ ವಿಹಿತವಾದ ಶಿಕ್ಷೆ. ಇದರಿಂದ ಅಂತಹ ಶಿಕ್ಷೆಗೊಳಗಾದವರನ್ನು ಕಾಣುತ್ತಲೇ ಜನ, ಅವರು ಪರಸ್ತ್ರೀಯರನ್ನು ಕೆಣಕಿದವರು ಎಂದು ಅರಿತು ಅವರಿಂದ ದೂರವಿರಲು ಸಾಧ್ಯವಾಗುವುದು. ಅದರೊಂದಿಗೆ ಅಂತಹ ಹೀನಕಾರ್ಯ-ಕ್ಕೆಣೆಸುವುದರ ಪರಿಣಾಮ ಇತರರಿಗೆ ತಿಳಿದು ಅವರು ಸಹ ಅಂತಹ ಪಾಪಕಾರ್ಯದಿಂದ ದೂರವಿರಲು ಸಾಧ್ಯವಾಗುವುದು ಎಂದು ತಿಳಿಯಬೇಕು.

೨. ಜಯದ್ರಥನ ಈ ದ್ರೌಪದಿ ಅಪಹರಣದ ಪ್ರಸಂಗ ರಾಮಾಯಣದ ರಾವಣನ ಸೀತಾಪಹರಣ ಪ್ರಯತ್ನವನ್ನು ಹೋಲುವುದು. ಅಲ್ಲಿ ರಾವಣ ಕೆಣಕಿದ್ದು ಸರ್ವೋತ್ತಮನಾದ ಮಹಾವಿಷ್ಣುವಿನ ಅವತಾರನಾದ ಶ್ರೀರಾಮನ ಪತ್ನಿ ಮಹಾಲಕ್ಷ್ಮಿಯಾದ ಸೀತೆಯನ್ನಾದರೆ, ಇಲ್ಲಿ ಜಯದ್ರಥ ಕೆಣಕಿದ್ದು ಜೀವೋತ್ತಮನಾದ ವಾಯುದೇವರ ಅವತಾರನಾದ ಭೀಮಸೇನನ ಪತ್ನಿ ಭಾವೀ ಸರಸ್ವತಿಯಾದ ದ್ರೌಪದೀದೇವಿಯನ್ನು. ಹೀಗೆ ಲಕ್ಷ್ಮೀ-ಸರಸ್ವತಿಯರ ದ್ರೋಹ ದುರ್ಜನರ ಸಹಜ ಪ್ರವೃತ್ತಿ ಎಂಬ ಸೂಚನೆ ಇವುಗಳಲ್ಲಿದೆ. ಲಕ್ಷ್ಮೀದ್ರೋಹವೆಂದರೆ ಭ್ರಷ್ಟಾಚಾರ; ಸರಸ್ವತೀದ್ರೋಹವೆಂದರೆ ದುರ್ವಿಚಾರ ಎಂದು ತಿಳಿಯಬೇಕು.

೩. ಉಳಿದ ಪಾಂಡವರಲ್ಲಿ ಭೀಮಸೇನನೂ ಸೇರುವನು ; ಆದರೆ ತನಗಿಂತ ಮಿಗಿಲಾದ ವಾಯುದೇವರ ಅವತಾರನಾದ ಭೀಮನನ್ನು ತಡೆಯುವಂತಹ ಶಕ್ತಿಯನ್ನು ನೀಡುವ ಸಾಮರ್ಥ್ಯ ಶಿವನದಲ್ಲ. ಆದರೂ ಅವರು ಹಾಗೆ ನೀಡಿದ್ದು ಕೇವಲ ದುಷ್ಟಮೋಹನಕ್ಕೆಂದು ಎಂದು ತಿಳಿಯಬೇಕು.

ತಿಳಿಯಬೇಕೇ ಹೊರತು, ನಿಜವಾದ ದರ್ಶನವೇ ಅದು ಎಂದಲ್ಲ. ವೈದಿಕದರ್ಶನ ಭಾಷೆಯನ್ನು ಮಾತ್ರ ಯಥಾರ್ಥವೆಂದೇ ತಿಳಿಯಬೇಕು. ಗುಹ್ಯಭಾಷೆಗಳಲ್ಲಿ ವಾಚ್ಯಾರ್ಥಕ್ಕಿಂತ ಭಿನ್ನವಾದ ಅರ್ಥವೇ ಗ್ರಾಹ್ಯ.

## ಪೌಂಡರೀಕಯಾಗ

ಪಾಂಡವರು ವನವಾಸದಲ್ಲಿದ್ದ ಆ ವೇಳೆಯಲ್ಲಿ , ಪಾಂಡವರ ರಾಜಸೂಯಯಾಗವನ್ನು ಸ್ಪರ್ಧಿಸುವ ಬುದ್ಧಿಯಿಂದ ದುರ್ಯೋಧನ ಪೌಂಡರೀಕ ಎಂಬ ಯಾಗವೊಂದನ್ನು ಮಾಡಿದ. ಅದು ಪಾಂಡವರು ಮಾಡಿದ ಯಜ್ಞದ ಹದಿನಾರನೆಯ ಒಂದಂಶಕ್ಕೂ ಸಾಟಿಯಾಗುವಂತಿರಲಿಲ್ಲ. ದುರ್ಯೋಧನನ ಆಜ್ಞೆಯಂತೆ ದುಃಶಾಸನನು ಪಾಂಡವರ ಬಳಿಗೆ ದೂತನನ್ನು ಕಳುಹಿಸಿ, 'ಬನ್ನಿ' ಎಂದು ದೂತನ ಮೂಲಕ ಹೇಳಿ ಕಳುಹಿಸಿದ. ಭೀಮಸೇನನು 'ನಾವು ಬರುವುದು ರಣಯಜ್ಞಕ್ಕೆ ಮಾತ್ರ' ಎಂಬ ಉತ್ತರವನ್ನು ಅವನ ಮೂಲಕ ಕಳುಹಿಸಿದ.

## ಘೋಷಯಾತ್ರೆ

ಮತ್ತೆ ಕೆಲವು ದಿನಗಳು ಕಳೆದವು. ತಮ್ಮ ಸಂಪತ್ತನ್ನು ಪಾಂಡವರಿಗೂ, ದ್ರೌಪದಿಗೂ ತೋರಿಸಿ ಅವಮಾನಪಡಿಸಬೇಕೆಂಬ ಉದ್ದೇಶದಿಂದ ಕರ್ಣಶಕುನಿಯರೊಂದಿಗೆ ಕೌರವರು ಪತ್ನೀಸಮೇತರಾಗಿ ಅವರಿದ್ದ ಸ್ಥಳಕ್ಕೆ ಘೋಷಯಾತ್ರೆಯ ನೆಪದಲ್ಲಿ ಹೊರಟರು. ಬಂಗಾರ-ದಿಂದಲೂ, ರತ್ನಗಳಿಂದಲೂ ಮನೋಹರವಾಗಿದ್ದ ರಥ, ಆನೆ, ಕುದುರೆಗಳೊಂದಿಗೆ ಮಾಲೆ ಹಾಗೂ ವಸ್ತ್ರಗಳೊಂದಿಗೆ ಅಲಂಕೃತವಾದ ಅವರ ಪಯಣ ದ್ವೈತವನಕ್ಕೆ ಸಾಗಿತು. ಗೋವು-ಗಳನ್ನು ನೋಡಲೆಂಬ ನೆಪದಿಂದ ಹೊರಟಿದ್ದ ಅವರಿಗೆ ತೇಜೋವಧೆಯನ್ನು ಮಾಡಬಯಸಿ, ಇಂದ್ರನು, ಅದಕ್ಕೆ ಬೇಕಾದ ಸಾಮರ್ಥ್ಯವನ್ನು ಅನುಗ್ರಹಿಸಿ, ಚಿತ್ರಸೇನ ಎಂಬ ಗಂಧರ್ವನನ್ನು ಅವರನ್ನು ಬಂಧಿಸಲು ಕಳುಹಿಸಿದ. ಅರವತ್ತುಸಾವಿರ ಗಂಧರ್ವಸೇನಾನಿಗಳೊಂದಿಗೆ ಕೂಡಿ-ಕೊಂಡು ಚಿತ್ರಸೇನನು, ದುರ್ಯೋಧನನು ಸ್ನಾನಮಾಡಲು ಉದ್ದೇಶಿಸಿದ್ದ ಸರೋವರದ ಬಳಿಗೆ ಬಂದ. ''ನಮ್ಮ ರಾಜ ದುರ್ಯೋಧನನು ಇಲ್ಲಿಗೆ ಸ್ನಾನಮಾಡಲು ಬರುವವನಿದ್ದಾನೆ. ನೀವೆಲ್ಲ ಅವನ ಆಜ್ಞೆಯನ್ನು ಗೌರವಿಸುತ್ತ, ಕೂಡಲೇ ಇಲ್ಲಿಂದ ಹೊರಡತಕ್ಕದ್ದು'' ಎಂಬುದಾಗಿ ದುರ್ಯೋಧನನ ಕಡೆಯ ಭಟರು ಅವರಿಗೆ ನುಡಿಯಲು, ಗಟ್ಟಿಯಾಗಿ ನಗುತ್ತ ಅವರು ''ಮೂರುಲೋಕಕ್ಕೆ ಒಡೆಯನಾದ ಇಂದ್ರದೇವನ ಅಪ್ಪಣೆಯನ್ನು ಮಾತ್ರವೇ ನಾವು ಗೌರವಿಸುವವರು. ಮನುಷ್ಯಚಕ್ರವರ್ತಿಗಳ ಮಾತನ್ನೇ ನಾವು ಕೇಳುವುದಿಲ್ಲವೆಂದಮೇಲೆ ಈ ಬಲಹೀನನಾದ ದುರ್ಯೋಧನನ ಮಾತು ನಮಗಾವ ಲೆಕ್ಕ?'' ಎಂದರು.

## ಗಂಧರ್ವರಿಂದ ಕೌರವರ ಪರಾಭವ

ಕೋಪಗೊಂಡ ದುರ್ಯೋಧನನು, ಕರ್ಣ ಹಾಗೂ ತಮ್ಮಂದಿರೊಂದಿಗೆ ಆ ಗಂಧರ್ವರ ಮೇಲೆ ಬಾಣಗಳನ್ನು ಬಿಡಲಾರಂಭಿಸಿದ. ಗಂಧರ್ವರೂ ಅದನ್ನು ಎದುರಿಸಿದರು.

ಮುಹೂರ್ತಕಾಲದವರೆಗೆ ಅವರ ಯುದ್ಧ ಸಮಸಮವಾಗಿಯೇ ಸಾಗಿತು. ಇಂದ್ರನ ವರ ಹಾಗೂ ಮಾಯಾಶಕ್ತಿಗಳಿಂದಾಗಿ ಕ್ರಮವಾಗಿ ಗಂಧರ್ವರ ಕೈ ಮೇಲಾಗತೊಡಗಿತು. ದುರ್ಯೋಧನನಿಗೆ ತೇಜೋಭಂಗವಾಗಬೇಕೆಂಬ ಉದ್ದೇಶದಿಂದಲೇ ಪಾಂಡವರಿಗಾಗಿ, ಆ ಗಂಧರ್ವರಿಗೆ ಕೃಷ್ಣ ಹಾಗೂ ಬ್ರಹ್ಮ ಇಬ್ಬರೂ ವಿಶೇಷಬಲವನ್ನು ಅನುಗ್ರಹಿಸಿದ್ದರು. ಚಿತ್ರಸೇನನಿಗೂ ಕರ್ಣನಿಗೂ ಮೊದಲು ನಡೆದ ಯುದ್ಧದಲ್ಲಿ, ಕರ್ಣನು ಅರ್ಜುನನ ಮೇಲಿನ ಸ್ಪರ್ಧಾಮನೋಭಾವದಿಂದಲೇ ಹೋರಾಡತೊಡಗಿದ. ಪರಶುರಾಮರ ಮಾತಿನಿಂದಾಗಿ ಕರ್ಣನಿಗೆ ಜಯಸಂಪಾದನೆ ಅಸಾಧ್ಯವಾಯಿತು. ರಥ ಮುರಿದುಕೊಂಡ ಕರ್ಣನು ವಿಕರ್ಣನ ರಥವನ್ನು ಏರಿ, ಹೇಗೋ ಅವನ ಕುದುರೆಗಳನ್ನು ನಿಯಂತ್ರಿಸುತ್ತ ಇಬ್ಬರೂ ಒಟ್ಟಾಗಿಯೇ ಪಲಾಯನ ಮಾಡಿಬಿಟ್ಟರು. ಅನಂತರ ದುರ್ಯೋಧನ ಚಿತ್ರಸೇನರಲ್ಲಿ ಯುದ್ಧ ನಡೆಯಿತು. ಮೊದಲಿಗೇನೋ ಅವರ ಯುದ್ಧ ಸಮವೇ ಎನಿಸಿದರೂ, ಅನೇಕ ಸಂಖ್ಯೆಯ ಗಂಧರ್ವರ ಮಾಯೆಯಿಂದಾಗಿ ದುರ್ಯೋಧನನ ರಥ ಪುಡಿಯಾಯಿತು. ಭೂಮಿಯ ಮೇಲೆ ಬಿದ್ದ ಅವನನ್ನು ಚಿತ್ರಸೇನನು ಇಂದ್ರದತ್ತವಾದ ವಿದ್ಯುತ್ಪಾಶಗಳಿಂದ ಕಟ್ಟಿಹಾಕಿದ. ಚಿತ್ರಸೇನನಿಗಿದ್ದ ವಿಷ್ಣುವಿನ ಆಜ್ಞೆ ಹಾಗೂ ಇಂದ್ರನ ವರಗಳು ಮಹಾಬಲಶಾಲಿಯಾದ ದುರ್ಯೋಧನನ ಪರಾಜಯಕ್ಕೆ ಕಾರಣವಾದವು. ಇಂದ್ರದೂತರಿಂದ ಅವನ ತಮ್ಮಂದಿರೂ, ಶಕುನಿಯೂ ಸಹ ಬಂಧಿಸಲ್ಪಟ್ಟರು.

## ಭೀಮಸೇನನಿಂದ ಕೌರವರ ಮೋಚನ

ಅವರನ್ನೆಲ್ಲ ಕಟ್ಟಿಕೊಂಡು ಗಂಧರ್ವರೆಲ್ಲ ಮತ್ತೆ ಆಕಾಶಕ್ಕೆ ಜಿಗಿದು ಹೊರಟು ಬಿಡಲು, ದುರ್ಯೋಧನನ ಮಂತ್ರಿಗಳು ಪಾಂಡವರಲ್ಲಿಗೆ ಧಾವಿಸಿ, ''ನಿಮ್ಮ ಕುಲದ ಕೌರವರೆಲ್ಲರನ್ನು ಪತ್ನೀಸಮೇತರನ್ನಾಗಿ ಇಂದ್ರಭೃತ್ಯರು ಕಟ್ಟಿಕೊಂಡೊಯ್ಯುತ್ತಿರುವರು. ದಯವಿಟ್ಟು ಅವರನ್ನು ಕಾಪಾಡಿ'' ಎಂದು ಪ್ರಾರ್ಥಿಸಿದರು. ಭೀಮಸೇನ ಉತ್ತರಿಸಿದ - ''ಮಹಾರಾಜ ! ಈ ಗಲಭೆಯ ಹಿನ್ನೆಲೆ ನನಗೆ ತಿಳಿದಿದೆ. ನಮಗೆ ತನ್ನ ಐಶ್ವರ್ಯ ತೋರಿಸಿ ಮೆರೆಯಬೇಕೆಂದು ದುರ್ಯೋಧನ ಬಂದನು. ಅದನ್ನು ತಿಳಿದ ಇಂದ್ರನು ಅವಮಾನಪಡಿಸುವ ಉದ್ದೇಶದಿಂದ ಹೀಗೆ ಮಾಡಿರುವನು. ಇದರಲ್ಲಿ ನಮಗಾದ ತೊಂದರೆ ಏನು?'' ತನ್ನ ದಿವ್ಯಜ್ಞಾನವನ್ನು ಹಾಗೆ ಪ್ರಕಟಿಸಿ ಭೀಮ ಸುಮ್ಮನಾಗಿಬಿಟ್ಟ. ಆಗ ಧರ್ಮರಾಜ 'ಏಕಾಹಯಜ್ಞ'ವೊಂದರಲ್ಲಿ ದೀಕ್ಷಿತನಾಗಿದ್ದ. ಅವನು ತನ್ನೆಲ್ಲ ತಮ್ಮಂದಿರನ್ನೂ ದುರ್ಯೋಧನನನ್ನು ಬಿಡಿಸಿಕೊಂಡು ಬರಲು ಕಳುಹಿಸಿಕೊಟ್ಟ. ಅವರೆಲ್ಲರೂ ಕೂಡಲೇ ಚಿತ್ರಸೇನನನ್ನು ಸೋಲಿಸಿ, ಕೌರವರನ್ನು ಬಿಡಿಸಿದರು. ಚಿತ್ರಸೇನನು ಭೀಮಾರ್ಜುನರಿಗೆ 'ಇಂದ್ರ ಹೇಳಿದ ದುರ್ಯೋಧನನ ಕೆಟ್ಟ ವಿಚಾರ'ವನ್ನು ವಿವರಿಸಲು, ಅದನ್ನು ಕೇಳುತ್ತಿದ್ದ ದುರ್ಯೋಧನನು ನಾಚಿಕೆಯಿಂದ ತಲೆ ತಗ್ಗಿಸಿದ. ಯಜ್ಞವನ್ನು ಪೂರೈಸಿ, ಅಲ್ಲಿಗೆ ಬರುತ್ತಿದ್ದ ಧರ್ಮರಾಜನನ್ನು ಇವರು ಎದುರುಗೊಂಡು, ಎಲ್ಲವನ್ನು ತಿಳಿಸಿದರು. ಧರ್ಮರಾಜನು ಚಿತ್ರಸೇನನನ್ನು ಗೌರವಿಸಿ, ಬೀಳ್ಕೊಟ್ಟು, ದುರ್ಯೋಧನನಿಗೆ -

"ಅಪ್ಪ! ಗಾಂಧಾರಿಯ ಸುಕುಮಾರ ! ಮತ್ತೊಮ್ಮೆ ಹೀಗೆ ಮಾಡದಿರು" ಎಂದು ಬುದ್ಧಿಹೇಳಿ ಕಳುಹಿಸಿಕೊಟ್ಟ.

## ದುರ್ಯೋಧನನಿಗೆ ದೈತ್ಯರ ಉಪದೇಶ

ಪಾಂಡವರಿಂದ ಬಿಡುಗಡೆ ಭಾಗ್ಯ ಕಂಡ ದುರ್ಯೋಧನನು ತನ್ನ ಪತ್ನಿ ಹಾಗೂ ಸೋದರರೊಂದಿಗೆ ಅಲ್ಲಿಂದ ಸ್ವಲ್ಪದೂರಕ್ಕೆ ತೆರಳಿದ. ಅಲ್ಲಿ ಅವರೆಲ್ಲರ ಸಮ್ಮೇಳನ ನಡೆಯಿತು. ಅಲ್ಲಿಗೆ ಬಂದ ಕರ್ಣನು – "ಅಬ್ಬಾ! ಕೊನೆಗೂ ಗೆದ್ದುಬಿಟ್ಟೆಯಲ್ಲ ರಾಜ !" ಎಂದು ಅಭಿನಂದಿಸಿದ. 'ಇಲ್ಲ' ಎಂದು ಎಲ್ಲವನ್ನೂ ಅವನಿಗೆ ವಿವರವಾಗಿ ತಿಳಿಸಿದ ದುರ್ಯೋಧನನು ದುಃಖದಿಂದ ಪ್ರಾಯೋಪವೇಶಕ್ಕೆ ಸಿದ್ಧನಾದ. ಕರ್ಣ, ದುಃಶಾಸನ, ಜೂಜುಕೋರ ಶಕುನಿ ಮೊದಲಾದವರು ಎಷ್ಟೇ ಕೇಳಿಕೊಂಡರೂ, ದುರ್ಯೋಧನನು ತನ್ನ ನಿಶ್ಚಯವನ್ನು ಬಿಡಲೊಪ್ಪಲಿಲ್ಲ. ರಾತ್ರಿ ಸಮಯದಲ್ಲಿ , ತಮ್ಮ ಪಕ್ಷ ಸಂಕಟಕ್ಕೆ ತುತ್ತಾಗಿರುವುದನ್ನು ಗಮನಿಸಿದ ಅಸುರವೃಂದವು ಸಭೆ ಸೇರಿ ಶುಕ್ರಾಚಾರ್ಯರ ಮೂಲಕ ಹೋಮಕರ್ಮದಲ್ಲಿ ಒಂದು ಕೃತ್ಯೆಯನ್ನು ನಿರ್ಮಿಸಿ, ಅದರ ಮೂಲಕ ದುರ್ಯೋಧನನನ್ನು, ಅವನ ಮಂತ್ರಿಗಳೆಲ್ಲ ಗಾಢನಿದ್ರೆಯಲ್ಲಿದ್ದಾಗ ಪಾತಾಳಕ್ಕೆ ಕರೆಸಿಕೊಂಡರು. ಅವರೆಲ್ಲ ದುರ್ಯೋಧನನಿಗೆ ಉಪದೇಶ ನೀಡಿದರು – "ನಮ್ಮೆಲ್ಲರಿಂದ ಸೃಷ್ಟಿಸಲ್ಪಟ್ಟಿರುವ ದಿವ್ಯಪುರುಷ ನೀನು. ತಪಸ್ಸಿಗೆ ಪ್ರಸನ್ನನಾದ ಶಿವನ ವರದಿಂದಾಗಿ ನೀನು ವಜ್ರಕಾಯನೂ, ಅವಧ್ಯನೂ ಆಗಿರುವಿ. ನೀನು ನಮ್ಮ ಪಕ್ಷದವನಾದರೆ, ಪಾಂಡವರೆಲ್ಲ ದೇವತೆಗಳ ಪಕ್ಷದವರು. ಈಗ ಎಲ್ಲ ದೇವತೆಗಳ ವರದಿಂದಾಗಿ ನೀನು ಸೋಲುವಂತಾಯಿತು. ನೀನು ಪಾಂಡವರನ್ನು ಗೆಲ್ಲಲು ಮಾಡಬೇಕಾದ್ದನ್ನೆಲ್ಲ ನಾವು ಮಾಡುವೆವು. ಕೃಷ್ಣನಿಂದ ಕೊಲ್ಲಲ್ಪಟ್ಟ ನರಕನೀಗ ಕರ್ಣನಲ್ಲಿ ಸೇರಿಕೊಂಡಿರುವನು. ಅವನು ಕೃಷ್ಣಾರ್ಜುನರಿಬ್ಬರನ್ನೂ ಇಲ್ಲವಾಗಿಸುವನು ; ಸಂಶಯ ಬೇಡ. ನಿನ್ನ ಜಯಕ್ಕಾಗಿ ನಾವೆಲ್ಲ ಭೀಷ್ಮಾದಿಗಳನ್ನು ಆವೇಶಿಸುವೆವು ಮತ್ತು ತಪಸ್ಸಿನ ಮೂಲಕ ನಿನ್ನ ಮತ್ತು ಕರ್ಣಾದಿಗಳ ಶಕ್ತಿಯನ್ನೂ ಹೆಚ್ಚಿಸುವೆವು. ಆದ್ದರಿಂದ ನೀನೀಗ ಹೋಗಿ ನಿರ್ಭಯವಾಗಿ ರಾಜ್ಯವನ್ನು ಪಾಲಿಸು. ನಿನ್ನ ಅಭ್ಯುದಯಕ್ಕೆ ಕಾರಣವಾಗುವ ಇದನ್ನೆಲ್ಲ ನೀನು ಬೇರಾರಿಗೂ ತಿಳಿಸಕೂಡದು". ಅನಂತರ ಕೃತ್ಯೆಯ ಮೂಲಕವೇ ಮತ್ತೆ ಅವನನ್ನು ಅವನು ಮಲಗಿದ್ದ ಸ್ಥಳಕ್ಕೆ ಪುನಃ ತಲುಪಿಸಿದರು. ತನ್ನ ಶರೀರದ ಅರ್ಧಭಾಗವು ಪಾರ್ವತಿಯಿಂದಲೂ, ಉಳಿದರ್ಧಭಾಗವು ಶಿವನಿಂದಲೂ ನಿರ್ಮಿತವಾಗಿ ತಾನು ಅವಧ್ಯನೆಂದು ಅರ್ಥಮಾಡಿಕೊಂಡ ಅವನು, ಮತ್ತೆ ರಾಜ್ಯವನ್ನು ವಹಿಸಿಕೊಳ್ಳಲು ಸಿದ್ಧನಾದ. ತನಗಾದ ಆ ಅನುಭವವನ್ನು ಮಾತ್ರ ಅವನು ಯಾರಿಗೂ ತಿಳಿಸಲೇ ಇಲ್ಲ.

ರಾತ್ರಿ ಕಳೆದು ಬೆಳಕು ಹರಿದಮೇಲೆ, ಮತ್ತೆ ಕರ್ಣ ನುಡಿದ – "ನಿನ್ನ ಭೃತ್ಯರಾದ ಪಾಂಡವರಿಂದಲೇ ನೀನು ಬಿಡುಗಡೆ ಮಾಡಲ್ಪಟ್ಟಿರುವಾಗ ಯೋಚಿಸುವುದೇತಕ್ಕೆ? ನಿನ್ನ ಭೃತ್ಯರೇ ಇಂತಹವರೆಂದಮೇಲೆ, ಲೋಕದಲ್ಲಿ ನಿನ್ನ ಕೀರ್ತಿ ಇನ್ನೂ ಹೆಚ್ಚುವುದಲ್ಲವೇ? ನಿನ್ನ ಪರಾಕ್ರಮದ ವಿಷಯ ಕೇಳಬೇಕೇನು? ಆದ್ದರಿಂದ ರಾಜಶ್ರೇಷ್ಠ ! ಮೇಲೇಳು. ; ಧೈರ್ಯ

ತಾಳು ; ಅರ್ಜುನನ ಮಹಿಮೆಯಲ್ಲಿ ನಿನಗಿರುವ ಸಂದೇಹವನ್ನು ಬಿಡು. ಅರ್ಜುನನನ್ನು ಕೊಲ್ಲುವವರೆಗೂ ನನ್ನ ಕಾಲುಗಳನ್ನು ನಾನೇ ತೊಳೆದುಕೊಳ್ಳುವೆನು.[೧]'' ಕರ್ಣನ ಮಾತಿನ ಜೊತೆಗೆ ತಮ್ಮಂದಿರ, ಶಕುನಿಯ ಪ್ರಾರ್ಥನೆಯೂ ಸೇರಿಕೊಳ್ಳಲು, ದುರ್ಯೋಧನನು ರಥವನ್ನು ಏರಿ, ತ್ವರೆಯಿಂದ ಹಸ್ತಿನಾಪುರವನ್ನು ಸೇರಿದ.

## ಕರ್ಣನಿಂದ ಕವಚಕುಂಡಲಗಳ ದಾನ

ಕವಚಕುಂಡಲಗಳಿರುವವರೆಗೂ ಕರ್ಣನು ಅವಧ್ಯ ಎಂಬುದನ್ನು ಮನಗಂಡು ಇಂದ್ರನು, ಆ ಎರಡನ್ನೂ ಕರ್ಣನಿಂದ ಪಡೆದುಕೊಳ್ಳಲು ಇಚ್ಛಿಸಿದ. ಅದನ್ನು ತಿಳಿದ ಸೂರ್ಯನು ಸ್ವಪ್ನದಲ್ಲಿ ಕರ್ಣನಿಗೆ ಕಾಣಿಸಿಕೊಂಡು ಅವುಗಳನ್ನು ನೀಡದಿರಲು ಎಚ್ಚರಿಸಿದ. ''ನಾನು ಕೊಟ್ಟೇ ತೀರುವೆ '' ಎಂದು ಕರ್ಣನು ಹಠ ಹಿಡಿಯಲು, ಅದಕ್ಕೆ ಪ್ರತಿಯಾಗಿ ಶ್ರೇಷ್ಠವಾದ ಆಯುಧವೊಂದನ್ನು ಇಂದ್ರನಿಂದ ಪಡೆಯಲು ಸೂಚಿಸಿದ. ಕವಚ ಕುಂಡಲಗಳೆರಡನ್ನೂ ಕತ್ತರಿಸಿ ಬ್ರಾಹ್ಮಣರೂಪಿಯಾಗಿ ಬಂದ ಇಂದ್ರನಿಗೆ ಅರ್ಪಿಸಿದ ಕರ್ಣನು ಅವನಿಂದ ಅಮೋಘವಾದ ಶಕ್ತ್ಯಾಯುಧವನ್ನು ಪಡೆದುಕೊಂಡ. ಇಂದ್ರನು ಅದನ್ನು ಕೊಡುವಾಗ ''[೨]ಅರ್ಜುನನನ್ನು ಬಿಟ್ಟು ಬೇರೊಬ್ಬನನ್ನು ಮಾತ್ರವೇ ನೀನು ಇದರಿಂದ ಕೊಲ್ಲುವೆ'' ಎಂದು ತಿಳಿಸಿಯೇ, ಕವಚಕುಂಡಲಗಳೊಂದಿಗೆ ತೆರಳಿದ.

## ಯಕ್ಷ ಪ್ರಶ್ನೆ

ದುರ್ಯೋಧನನನ್ನು ಬಿಡುಗಡೆ ಮಾಡಿ ಆಗಲೇ ಕೆಲವು ದಿನಗಳು ಕಳೆದಿದ್ದವು. ಆಗೊಮ್ಮೆ ಒಂದು ಮೃಗವು ಬ್ರಾಹ್ಮಣನೊಬ್ಬನ ಅರಣಿಗಳನ್ನೂ, ಪಾತ್ರೆಗಳನ್ನೂ ಹೊತ್ತುಕೊಂಡು ಓಡಿತು. ಆ ಬ್ರಾಹ್ಮಣನು ಪಾಂಡವರ ಬಳಿಗೆ ಬಂದು ಅವುಗಳನ್ನು ತಂದು ಕೊಡಲು ಕೇಳಿಕೊಂಡ. ಪಾಂಡವರೆಲ್ಲ ಮೃಗವನ್ನು ಬೆನ್ನಟ್ಟಿದರು. ಮೃಗವು ಕಣ್ಣಿಗೆ ಕಾಣದಂತೆ ಮಾಯವಾಗಲು, ಬಾಯಾರಿದ ಪಾಂಡವರು, ನೀರನ್ನು ತರಲು ಒಬ್ಬಬ್ಬರಾಗಿ ಹೊರಟರು; ಯುಧಿಷ್ಠಿರನನ್ನು ಬಿಟ್ಟು ಉಳಿದ ನಾಲ್ವರೂ ಯಮಧರ್ಮನ ಮಾಯೆಯಿಂದ ಗಾಢನಿದ್ರೆಯಲ್ಲಿ ಮಲಗಿದರು.

---

೧. ರಾಜ ಮಹಾರಾಜರು ಪರಿಚಾರಕರಿಂದ ಪಾದ ಪ್ರಕ್ಷಾಲನೆ ಮಾಡಿಸಿಕೊಳ್ಳುವುದು ರೂಢಿ ; ಮಠಾಧೀಶರಿಗೆ ಪಾದಪೂಜೆ ಹೇಗೋ ಹಾಗೆ. ಅಂಗರಾಜನಾದ ಕರ್ಣನಿಗೂ ಇಂತಹ ಗೌರವ ಇದ್ದಿತು. ಹೀಗೆ ಶಪಥ ಮಾಡುವ ಮೂಲಕ ಕರ್ಣ ಅಂತಹ ಗೌರವವನ್ನು ಕಳೆದುಕೊಂಡ ಎಂದಾಗುವುದು. ಅರ್ಜುನನಂತಹ ಗೌರವಾರ್ಹ ವ್ಯಕ್ತಿಗಳ ವಿರುದ್ಧ ವೈರಭಾವವನ್ನು ತಳೆಯುವುದು ತಮ್ಮ ಪೂಜ್ಯತೆಯನ್ನು ಕಳೆದುಕೊಳ್ಳುವ ನಿಂದ್ಯಕಾರ್ಯ ಎಂಬ ತತ್ತ್ವವೂ ಇದರಿಂದ ಧ್ವನಿತವಾಗುವುದು.

೨. ಇಂದ್ರದತ್ತವಾದ ಶಕ್ತ್ಯಾಯುಧಕ್ಕೆ ಅರ್ಜುನನನ್ನು ಸಹ ಕೊಲ್ಲುವ ಶಕ್ತಿ ಇದ್ದದ್ದು ಮುಂದೆ ಅನೇಕ ಪ್ರಸಂಗಗಳಲ್ಲಿ ತಿಳಿದು ಬರುವುದು. ಆದ್ದರಿಂದ ಇಲ್ಲಿ ಇಂದ್ರದೇವರು 'ನೀನು ಅರ್ಜುನನನ್ನು ಕೊಲ್ಲಲಾರೆ' ಎಂದು ಹೇಳಿರುವುದು ಮುಂದೆ ನಡೆಯುವ ವಸ್ತುಸ್ಥಿತಿಯನ್ನೇ ಹೊರತು, ಶಕ್ತ್ಯಾಯುಧದ ಅಸಾಮರ್ಥ್ಯವನ್ನಲ್ಲ ಎಂದು ತಿಳಿಯಬೇಕು.

ಅದೃಶ್ಯನಾಗಿಯೇ ಇದ್ದ ಯಮಧರ್ಮ ನೀರು ಕುಡಿಯಲು ಹೊರಟ ಅವರನ್ನೆಲ್ಲ ಹಾಗೆ ತಡೆದಿದ್ದ. ಅವರೆಲ್ಲ ಜ್ಞಾನಿಗಳೇ ಆಗಿದ್ದರೂ, ಕ್ಷತ್ರಧರ್ಮಪರಿಪಾಲನೆಗಾಗಿ ಅವನ ಪ್ರಶ್ನೆಗಳಿಗೆ ಉತ್ತರಿಸಲು ಇಚ್ಛಿಸಲಿಲ್ಲ. ಆದ್ದರಿಂದಲೇ ಅವರು ಬಲಾತ್ಕಾರವಾಗಿಯೇ ನೀರನ್ನು ಕುಡಿದರು. ದೇವತೆಗಳೂ ಕೂಡ ಮನುಷ್ಯರಾಗಿ ಹುಟ್ಟಿದಾಗ ಎಷ್ಟೇ ಬಲಾಢ್ಯರಾಗಿದ್ದರೂ, ಮಾನುಷ-ಭಾವದಿಂದಲೇ ಯುಕ್ತರಾಗಿರುವರು. ಲಕ್ಷ್ಮೀನಾರಾಯಣರು ಮಾತ್ರವೇ ಇದಕ್ಕೆ ಅಪವಾದ. ಪ್ರಸಂಗ ಬಂದಾಗ ಇತರರ ಗುಣಗಳು ಕ್ರಮವಾಗಿ ಪ್ರಕಟವಾಗುವವು. ಆದ್ದರಿಂದ ಭೀಮಾ-ರ್ಜುನರು ಧರ್ಮನಿಗಿಂತ ಅತ್ಯುತ್ತಮ ಬಲವಂತರೇ ಆಗಿದ್ದರೂ, ದೇವಮಾಯೆಯಿಂದಾಗಿ ಕ್ಷಣದಲ್ಲಿಯೇ ಮಲಗಿಸಲ್ಪಟ್ಟರು. ಆ ಮಾಯೆಯು ಮುಹೂರ್ತಕಾಲ ಮಾತ್ರವೇ ಅವರನ್ನು ಆವರಿಸುವಷ್ಟು ಸಾಮರ್ಥ್ಯವನ್ನು ಹೊಂದಿತ್ತು. ಮೇಲೆದ್ದ ಮೇಲೆ ಅದು ಅವರ ಶಕ್ತಿಗೆ ನೂರನೆಯ ಒಂದಂಶಕ್ಕೆ ಸಹ ಸಾಟಿ ಎನಿಸಲಾರದು[೧]. ಈ ಎಲ್ಲವೂ ಪದ್ಮಪುರಾಣದಲ್ಲಿ ವಿವರವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಅಶಕ್ತಿಯನ್ನು ಭೀಮಾರ್ಜುನರಲ್ಲಿ ತಿಳಿಯಕೂಡದು.

## ವನವಾಸದ ಪರಿಸಮಾಪ್ತಿ

ಅನಂತರ ಆ [೨]ಸರೋವರದ ಬಳಿಗೆ ಬಂದ ಧರ್ಮರಾಜನು, ಅಲ್ಲಿ ಮಲಗಿದ್ದ ತಮ್ಮಂದಿರನ್ನು ಕಂಡು ದುಃಖಪಟ್ಟ. ಬಳಿಕ ನೀರು ಕುಡಿಯಲು ಹೊರಟ ಅವನನ್ನು ಬಕನ ರೂಪದಲ್ಲಿ ಅವನ ತಂದೆಯಾದ ಯಮಧರ್ಮನು ಕಾಣಿಸಿಕೊಂಡು ತಡೆಯುತ್ತಾ , ತನ್ನ ನಿಯಮವನ್ನು ತಿಳಿಸಿ, ಪ್ರಶ್ನೆಗಳನ್ನು ಕೇಳಿದ. ಸೋದರರಿಗಾಗಿ ದಯಾಳುವಾದ ಧರ್ಮರಾಜನು ಪ್ರಶ್ನೆಗಳಿಗೆ ಉತ್ತರ ಕೊಡಲು ನಿರ್ಧರಿಸಿದ. ಅನಂತರ ಯಕ್ಷರೂಪವನ್ನು ಧರಿಸಿದ ಯಮಧರ್ಮನು ಕೇಳಿದ ಪ್ರಶ್ನೆಗಳಿಗೆಲ್ಲ ಧರ್ಮರಾಜ ಸಮರ್ಪಕವಾದ ಉತ್ತರಗಳನ್ನು

---

೧. ಅಜಗರ ಪ್ರಸಂಗದಲ್ಲಿ ಹೇಗೋ ಹಾಗೆ ಭೀಮಸೇನ ಭಗವನ್ನಿಯತಿಯನ್ನು ಪಾಲಿಸಲೆಂದು ಮಾತ್ರವೇ ಕೇವಲ ಮಲಗಿದಂತೆ ವರ್ತಿಸಿದ. ವಾಸ್ತವವಾಗಿ ಯಮಧರ್ಮನ ಮಾಯೆ ಭೀಮಸೇನನ ಮೇಲೆ ನಡೆಯುವಷ್ಟು ಪ್ರಬಲವಾದುದೇನಲ್ಲ ಎಂಬ ವಿಷಯ ಗಮನಾರ್ಹ. ಅರ್ಜುನನು ಮಾತ್ರ ಆ ಸಮಯದಲ್ಲಿ ಯಮ-ಧರ್ಮನ ಮಾಯೆಗೆ ಸ್ವಲ್ಪಹೊತ್ತು ಅನಿವಾರ್ಯವಾಗಿ ಒಳಗಾಗುವಂತಾಯಿತು ಎಂದು ತಿಳಿಯಬೇಕು. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಶ್ರೀತಾಮ್ರಪರ್ಣೀ ಶ್ರೀನಿವಾಸಾಚಾರ್ಯರ ಮಹಾಭಾರತವ್ಯಾಖ್ಯಾನನಿರ್ಣಯ-ದಿಂದ ತಿಳಿಯಬಹುದು.

೨. ಈ ಘಟನೆ ನಡೆದ ಸರೋವರವನ್ನು ಇಂದೂ ಸಹ ಕುರುಕ್ಷೇತ್ರದಲ್ಲಿ ಕಾಣಬಹುದು ; ತುಂಬಾ ವಿಶಾಲವಾಗಿರುವ ಈ ಸರೋವರವು 'ಬ್ರಹ್ಮ ಸರೋವರ' ಎಂದು ಪ್ರಸಿದ್ಧವಾಗಿರುವ ಸ್ಥಳದಿಂದ ಸುಮಾರು ಹತ್ತು ಕಿ.ಮೀ.ನಷ್ಟು ದೂರದಲ್ಲಿದೆ. ಇದಕ್ಕೆ ಹೋಗುವ ದಾರಿಯಲ್ಲಿ ಭೂರಿಶ್ರವಸ್ಸು ಹತನಾದ ಸ್ಥಳ ಎನ್ನುವ ಬೋರೆ ಎಂಬ ಸ್ಥಳವನ್ನು, ಅದಕ್ಕೆ ಸ್ವಲ್ಪ ದೂರದಲ್ಲಿ ಕರ್ಣನು ಹತನಾದ ಸ್ಥಳ ಎಂದು ಪ್ರತೀತಿ ಇರುವ 'ರಾಜಾ ಕರ್ಣ್ ಕಾ ಕಿಲೆ' ಎಂಬ ಸ್ಥಳವೂ ಇದೆ. ಮುಂದಿನ ವಿಶಾಲವಾದ ಅನೇಕ ಸ್ಥಳಗಳನ್ನು ದ್ವೈತವನ, ಕಾಮ್ಯಕವನ ಎಂಬುದಾಗಿ ಅಲ್ಲಿಯ ಜನರು ವಿವರಿಸುವರು. ಇಂತಹ ವಿವರಣೆಗಳು ಮಹಾಭಾರತದ ಉಲ್ಲೇಖಗಳಿಗೆ ತಾಳೆ ಹೊಂದುವಂತಿದೆ ಎಂಬುದು ಸಹ ಗಮನಿಸಬೇಕಾದ ಅಂಶ.

ಕೊಡಲು, ಸಂತೋಷಪಟ್ಟ ಯಮಧರ್ಮನು ಅವನ ಸೋದರರ ಮಧ್ಯೆ ಯಾರಾದರೂ ಒಬ್ಬನನ್ನು ಮಾತ್ರ ಎಬ್ಬಿಸಿಕೊಳ್ಳಲು ವರವಿತ್ತ. "ಒಬ್ಬನೇ ಬದುಕುವುದಾದಲ್ಲಿ ನಕುಲನು ಬದುಕಲಿ" ಎಂದು ಯುಧಿಷ್ಠಿರನು ಕೇಳಿಕೊಳ್ಳಲು, ಯಮಧರ್ಮನಿಗೆ ತುಂಬಾ ಆನಂದ-ವಾಗಿ - "ಅದೇಕೆ ಹಾಗೆ ಕೇಳಿದೆ ? ನಿನಗೆ ಭೀಮಸೇನನಲ್ಲಿ ತುಂಬಾ ಪ್ರೀತಿ, ನಿನಗೆ ರಾಜ್ಯ ದೊರೆಯಲು ಸಹ ಅವನೇ ಕಾರಣ ಅಲ್ಲವೇ?" ಎಂದು ಕೇಳಿದ ; ಧರ್ಮರಾಜನು ಉತ್ತರಿಸಿದ - "[೧]ಮಾದ್ರಿಯ ಮಗನನ್ನು ಬಿಟ್ಟು ಕುಂತಿಯ ಮಗನನ್ನು ಬದುಕಿಸುವುದು ತರವಲ್ಲ."

ಅದಕ್ಕೆ ಅಪಾರವಾಗಿ ಹರ್ಷಿಸಿದ ಯಮನು, ಆ ಎಲ್ಲರನ್ನೂ ಕೂಡಲೇ ಮೇಲೆಬ್ಬಿಸಿ, ಅಜ್ಞಾತವಾಸ ಕಾಲದಲ್ಲಿ ಅವರಿಗೆಲ್ಲ ಬಯಸಿದ ರೂಪವು ಬರಲೆಂದೂ, ಅವರು ಮತ್ತೆ ಬಯಸಿದಾಗ ತಮ್ಮ ನಿಜರೂಪ ಮರಳಿ ಉಂಟಾಗಲೆಂದೂ, ಅಜ್ಞಾತವಾಸದ ಕಾಲದಲ್ಲಿ ಅವರನ್ನು ಯಾರೂ ಗುರುತಿಸದಿರಲಿ ಎಂದೂ ವರವಿತ್ತ. ಧರ್ಮರಾಜನ ದಯಾಳುತನದಿಂದ ಪ್ರೀತನಾದ ಯಮನು ಹೀಗೆ ವರ ನೀಡಿದ. ತನ್ನ ರೂಪದೊಂದಿಗೆ ಮಗನೊಂದಿಗೆಂಬಂತೆ, ಕ್ರೀಡಿಸುತ್ತಾ , ಯಮನು ತನ್ನ ಕೀರ್ತಿಯನ್ನೇ ಹೆಚ್ಚಿಸಿಕೊಂಡ. ಇದಕ್ಕೆಂದೇ ಈ ರೀತಿಯ ವಿಪ್ರನ ಅರಣೀ ಅಪಹಾರದ ಪ್ರಸಂಗ ಮೊದಲಾದವುಗಳನ್ನು ಯಮಧರ್ಮ ಮಾಡಿದ್ದ. ಬಳಿಕ ಯುಧಿಷ್ಠಿರನಿಗೆ ಯಮಧರ್ಮನು ವಿಪ್ರನ ವಸ್ತುಗಳನ್ನು ಒಪ್ಪಿಸಿ, ಅವನಿಗೆ ಹಿಂದಿರುಗಿಸಲು ಹೇಳಿ ತನ್ನ ಲೋಕಕ್ಕೆ ತೆರಳಿದ. ಅನಂತರ ಪಾಂಡವರೆಲ್ಲರೂ ಹಿಂದಿರುಗಿ ಬ್ರಾಹ್ಮಣನಿಗೆ ಅರಣಿಯನ್ನು ಒಪ್ಪಿಸಿ, ಸಂತೋಷದಿಂದ ದ್ರೌಪದೀಸಮೇತರಾಗಿ ಕೃಷ್ಣನನ್ನು ಸ್ತುತಿಸಿದರು.



೧. ಧರ್ಮರಾಜನು ತೋರಿಸಿದ ಇಂತಹ ವಿಶಾಲಬುದ್ಧಿಯು ಧೃತರಾಷ್ಟ್ರನಲ್ಲಿ ಕಂಡುಬರದೆ, ಅವನು ತನ್ನ ತಮ್ಮನಾದ ಪಾಂಡುರಾಜನ ಮಕ್ಕಳನ್ನೂ ಎಂದೂ ಪರಕೀಯರಾಗಿಯೇ ಕಾಣುವ ಮೂಲಕ ನಿಜ ಅರ್ಥದಲ್ಲಿ ತನ್ನ ಸ್ಥಾನಕ್ಕೆ ಸಲ್ಲುವ ಗೌರವಕ್ಕೆ ಎರವಾದ ಎಂಬುದು ಗಮನಾರ್ಹ ; ಎಂದರೆ ಧರ್ಮರಾಜನಿಗೆ ಧರ್ಮ ಪ್ರಧಾನವಾಯಿತೇ ಹೊರತು ಸ್ವಾರ್ಥವಲ್ಲ; ಧೃತರಾಷ್ಟ್ರನಿಗೆ ಧರ್ಮಕ್ಕಿಂತ ತನ್ನ ಮಕ್ಕಳ ಹಿತ ಮುಖ್ಯವೆನ್ನಿಸಿತು ; ಪರಿಣಾಮವಾಗಿ ಧರ್ಮರಾಜ ಅಪಾರವಾದ ಯಶಸ್ಸನ್ನು ಕಂಡು ಲೋಕಮಾನ್ಯನಾದರೆ, ಧೃತರಾಷ್ಟ್ರ ತಾನ ಮಾಡಿದ ಅಪಚಾರಕ್ಕಾಗಿ ಬಹುಕಾಲ ಪರಿತಪಿಸುವಂತಹ ದುಃಸ್ಥಿತಿಗೆ ಗುರಿಯಾದ. ಸ್ವರೂಪದಲ್ಲೂ ಸಹ ಯಮನ ಅವತಾರನಾದ ಧರ್ಮರಾಜ, ಗಂಧರ್ವರಾಜನೊಬ್ಬನ ಅವತಾರನಾದ ಧೃತರಾಷ್ಟ್ರನಿಗಿಂತ ತುಂಬಾ ಮೇಲಿನ ಸ್ತರದವನು ಎಂಬ ಅಂಶವು ಈ ಪ್ರಸಂಗದಿಂದ ದೃಢಪಡುವುದು.

# ವಿರಾಟ ಪರ್ವ

## ವಿರಾಟರಾಜನ ಆಶ್ರಯದಲ್ಲಿ ಪಾಂಡವರು

ನಾರಾಯಣನ ಅನುಗ್ರಹದಿಂದ ಪಾಂಡವರ ಹನ್ನೆರಡು ವರ್ಷಗಳ ವನವಾಸ ಹರ್ಷದ ಹೊನಲಾಗಿಯೇ ಪೂರೈಸಿತು. ಪಾಂಡವರು ತಮ್ಮ ಜೊತೆಯಲ್ಲಿದ್ದ ಧೌಮ್ಯ ಮೊದಲಾದ ಬ್ರಾಹ್ಮಣರನ್ನು ಇತರ ಎಲ್ಲರನ್ನೂ ಸಹ ಕಳುಹಿಸಿಕೊಟ್ಟು ಅಜ್ಞಾತವಾಸವನ್ನು ಕೈಗೊಳ್ಳಲು ಸಿದ್ಧರಾದರು. [೧]ವಿರಾಟರಾಜನ ಪಟ್ಟಣದ ಬಳಿ ಸೇರಿ, ಅಲ್ಲಿದ್ದ ಶಮೀವೃಕ್ಷವೊಂದರಲ್ಲಿ ತಮ್ಮ ಆಯುಧಗಳನ್ನೆಲ್ಲ ಅಡಗಿಸಿಟ್ಟು ವೇಷಾಂತರವನ್ನು ಹೊಂದಿದರು. ಐವರೂ ಕ್ರಮವಾಗಿ ಯತಿ, ಸೂದ, ಷಂಢವೇಷ(ಬೃಹನ್ನಳೆ), ಅಶ್ವಸೂತವೇಷ ಹಾಗೂ ಗೋಪಾಲಕರ ವೇಷಗಳನ್ನು ಧರಿಸಿದರು; ದ್ರೌಪದಿಯು ಸೈರಂಧ್ರಿಯ ವೇಷವನ್ನು ಧರಿಸಿದಳು. ಆ ವೇಷಗಳಿಂದ ಎಲ್ಲರೂ ವಿರಾಟನನ್ನು ಸೇರಿ, ಅವನಿಂದ ಆದೃತರಾಗಿ ಆ ಶ್ರೇಷ್ಠ ಶುಭಲಕ್ಷಣಪೂರಿತರಾದ ಅವರೆಲ್ಲ ಅಲ್ಲಿಯೇ ಉಳಿದರು. ವಿರಾಟನ ಆಶ್ರಯದಲ್ಲಿದ್ದರೂ ಅವರೆಲ್ಲ ನಿಜಕ್ಕೂ ಯುಧಿಷ್ಠಿರನ ಸೇವೆಯನ್ನು ಮುಖ್ಯವಾಗಿ ಮನಃಪೂರ್ವಕವಾಗಿ ವಿಷ್ಣುವಿನ ಸೇವೆಯನ್ನೇ ಮಾಡುತ್ತಿದ್ದರು.

ಗೃಹಸ್ಥನಿಗೆ ಅದರಲ್ಲೂ ವಿಶೇಷವಾಗಿ ಕ್ಷತ್ರಿಯನಿಗೆ ಪರಪಾಕ ಯೋಗ್ಯವಲ್ಲ ಎಂಬ ಕಾರಣದಿಂದ ವೃಕೋದರ ಸೂದನ ವೇಷವನ್ನು ಧರಿಸಿದ. ವೈದಿಕವ್ಯವಹಾರಗಳಲ್ಲಿ ಜ್ಞಾನಾಧಿಕ್ಯವು ಪ್ರಕಟವಾಗುವುದರಿಂದ ಭೀಮ ಎಂಬ ಗುರುತು ತಿಳಿಯಬಹುದು ಎಂಬ ಕಾರಣದಿಂದ ಭೀಮ 'ಶೂದ್ರ' ವೇಷವನ್ನೇ ಧರಿಸಿದ. ವೇದಬಲ್ಲವರಿಗೆ ಇತರರ ಸ್ವತ್ತು ಸಹ ತಮ್ಮ ಸ್ವತ್ತೇ ಎಂದಾಗುವುದು ಎಂದು ಶಾಸ್ತ್ರದ ಮಾತಿದೆ ; ಎಂದ ಮೇಲೆ ಆ ದೇವಶ್ರೇಷ್ಠರ ವಿಷಯದಲ್ಲಿ ಹೇಳುವುದೇನು ! ಆದ್ದರಿಂದ ಅವರು ಅಲ್ಲಿ ನೆಲೆಸಿದ್ದು ತಮ್ಮ ಸ್ವಂತಬಲದಿಂದಲೇ ಹೊರತು ವಿರಾಟನ ಆಶ್ರಯದ ಬಲದಿಂದಲ್ಲ[೨].

---

೧. ಮತ್ಸ್ಯದೇಶದ ದೊರೆಯಾದ ವಿರಾಟನು ಶಂತನು ಪತ್ನಿ ಎನಿಸಿದ ಸತ್ಯವತಿಗೆ ಸೋದರನಾದ್ದರಿಂದ ಸತ್ಯವತಿಯ ಮರಿಮೊಮ್ಮಕ್ಕಳಾದ ಪಾಂಡವರಿಗೆ ಸಂಬಂಧಿಯೂ ಆಗಿದ್ದ ಎಂಬುದು ಅವನ ಆಸ್ಥಾನವನ್ನೇ ಇವರು ತಮ್ಮ ಅಜ್ಞಾತವಾಸದ ಕಾರ್ಯರಂಗವನ್ನಾಗಿ ಆಯ್ದುಕೊಳ್ಳಲು ಮತ್ತೊಂದು ಕಾರಣ.

೨. ಮೇಲ್ನೋಟಕ್ಕೆ ಪಾಂಡವರು ವಿರಾಟನ ಆಶ್ರಯದಲ್ಲಿದ್ದಂತೆ ತೋರುವುದು ; ಆದರೆ ದೇವಶ್ರೇಷ್ಠರಾದ ಅವರಿಗೆ 'ಹಾಹಾ' ಎಂಬ ಗಂಧರ್ವನ ಅವತಾರನಾದ ವಿರಾಟನ ಆಶ್ರಯ ಅನಗತ್ಯ. ಅಲ್ಲದೆ ವೇದಾದಿಶಾಸ್ತ್ರಗಳನ್ನು ಬಲ್ಲವರಿಗೆ ಸಹಜವಾಗಿಯೇ ಭೂಮಿಯ ಒಡೆತನವು ಲಭಿಸುವುದು ಎಂಬುದು ಧರ್ಮಶಾಸ್ತ್ರಗಳ ವಚನ. ಅದರೊಂದಿಗೆ ಪಾಂಡವರು, ಅದರಲ್ಲೂ ಭೀಮಸೇನ ರಾಜಸೂಯಯಾಗದ ಅಂಗವಾಗಿ ನಡೆದ ದಿಗ್ವಿಜಯಸಮಯದಲ್ಲಿ ವಿರಾಟನನ್ನು, ಕೀಚಕರನ್ನು ಸೋಲಿಸಿ ಅವರಿಂದ ಕಪ್ಪ ಪಡೆದ ವಿವರ ಸಭಾಪರ್ವದಲ್ಲಿ ಬಂದಿದೆ. ಎಂದರೆ ಪಾಂಡವರು ಚಕ್ರವರ್ತಿಗಳಾದರೆ, ವಿರಾಟ ಅವರ ಒಬ್ಬ ಸಾಮಂತರಾಜ ಮಾತ್ರ. ಹೀಗೆ ತಮ್ಮ ಮಾಂಡಲಿಕರಾಜನ ಬಳಿ ನೆಲೆಸಿದ್ದು, ಅವನಿಗೆ ಅನುಗ್ರಹಿಸಲೆಂದೇ ಹೊರತು, ಅವನಿಂದ ಉಪಕಾರ ಪಡೆಯಲೆಂದೇನಲ್ಲ ಎಂಬ ಅಂಶ ಸ್ಫುಟಪಡುವುದು. ದುರ್ಯೋಧನ ಪಾಂಡವರ ರಾಜ್ಯವನ್ನು ಗೆದ್ದುಕೊಂಡದ್ದರಿಂದ, ಅವನ ಆಶ್ರಯದಲ್ಲಿ ಪಾಂಡವರು ಇದ್ದಂತಾಯಿತು ಎಂಬ

ಶಾಪದ ಕಾರಣದಿಂದಾಗಿ ಅರ್ಜುನನು ಷಂಡವೇಷವನ್ನು ಧರಿಸಿದ. ಕ್ಷತ್ರಿಯನ ಅನಂತರ ಸೂತಜಾತಿಯ ಸ್ಥಾನ; ಆದ್ದರಿಂದ, ನಕುಲನು ಸೂತನ ವೇಷವನ್ನೇ ಧರಿಸಿದ. ವೈಶ್ಯಜಾತಿ ಸೂತಜಾತಿಯ ಅನಂತರದ್ದು; ಅದರಲ್ಲೂ ಗೋಪಾಲಕ ಶ್ರೇಷ್ಠನಾದವ. ಆದ್ದರಿಂದಲೇ ಸಹದೇವ ಗೋಪಾಲಕನಾದ. ಯತಿಯು ಸರ್ವಪೂಜ್ಯನೆಂಬ ಕಾರಣದಿಂದ ಧರ್ಮರಾಜ ಆ ವೇಷವನ್ನೇ ಧರಿಸಿದ. ಅನಂತರ ತನ್ನ ಕೌಶಲವನ್ನು ತೋರಿಸುವ ಸಲುವಾಗಿ, ಅಭ್ಯಾಸಮಾಡಿಕೊಳ್ಳುವ ಉದ್ದೇಶದಿಂದ ಯಾವಾಗಲೂ ಅಕ್ಷಾಸಕ್ತನಾಗಿಯೇ ಇರತೊಡಗಿದ. ಪತಿಯಾದ ಭೀಮಸೇನನ ಸಮಾನಧರ್ಮಿಣಿಯಾಗಬೇಕೆಂಬ ಕಾರಣದಿಂದಲೇ ದ್ರೌಪದಿಯು ಶೂದ್ರವೇಷವನ್ನು ಧರಿಸಿ, ಸೈರಂಧ್ರಿಯೆನ್ನಿಸಿದಳು. ಸ್ತ್ರೀಯರಿಗೆ ಭರ್ತೃಸಾಧರ್ಮ್ಯವೇ ಧರ್ಮ ಎಂಬುದು ಇದಕ್ಕೆ ಮುಖ್ಯಕಾರಣ[೧].

## ಜೀಮೂತನ ವಧೆ

ವಿರಾಟರಾಜನ ಪಟ್ಟಣಕ್ಕೆ ಒಮ್ಮೆ ಒಬ್ಬ ಅಸಾಧ್ಯ ಬಲಶಾಲಿಯಾದ ಮಲ್ಲನೊಬ್ಬ ಆಗಮಿಸಿದ. ಶಿವನ ವರದಿಂದಾಗಿ ಭೂಮಂಡಲದಲ್ಲಿನ ಎಲ್ಲ ಮಲ್ಲರನ್ನು ಅವನು ಜಯಿಸುತ್ತ ಬಂದಿದ್ದ. ಅವನನ್ನು ಕಾಣುತ್ತಲೇ ವಿರಾಟರಾಜನ ಆಸ್ಥಾನದಲ್ಲಿದ್ದ ಎಲ್ಲ ಜಟ್ಟಿಗಳು ಭಯದಿಂದ ಪಲಾಯನ ಮಾಡಿದರು. ಆಗ ಯುಧಿಷ್ಠಿರ "ನಿನ್ನ ಅಡಿಗೆಯವನು ತನ್ನ ಪರಾಕ್ರಮದಿಂದ ಈ ಮಲ್ಲನನ್ನು ಸಂಹರಿಸಿ ನಿನ್ನ ಕೀರ್ತಿಯನ್ನು ಬೆಳೆಸುವನು. ಅವನನ್ನು ಕರೆಸು" ಎಂದು ಸಲಹೆ ನೀಡಿದ. ಅದರಂತೆ ಕರೆಯಲ್ಪಟ್ಟ ಭೀಮನು ಶ್ರೀಹರಿಯ ಅನುಗ್ರಹದಿಂದ ಆ ಮಲ್ಲನನ್ನು ಯಮಪಟ್ಟಣಕ್ಕೆ ಅಟ್ಟಿದ.

## ಕೀಚಕನ ನೀಚಕಾರ್ಯ

ಪಾಂಡವರ ಅಜ್ಞಾತವಾಸದಲ್ಲಿ ಹತ್ತು ತಿಂಗಳು ಕಳೆದವು. ಆ ವೇಳೆಗೆ ದಿಗ್ವಿಜಯಕ್ಕೆಂದು ತೆರಳಿದ್ದ ವಿರಾಟರಾಜನ ಹೆಂಡತಿಯ ಸೋದರನಾದ ಬಲಾಢ್ಯ ಕೀಚಕನು ಪಟ್ಟಣಕ್ಕೆ ಹಿಂದಿರುಗಿದ. ದ್ರೌಪದಿಯನ್ನು ಕಂಡು ಕಾಮಪೀಡಿತನಾದ ಅವನು ಅವಳಿಂದ ಧಿಕ್ಕರಿಸಲ್ಪಟ್ಟ. ಹಾಗೆಯೇ ಮತ್ತೊಂದು ತಿಂಗಳೂ ಕಳೆಯಿತು. ತನ್ನ ಸಹೋದರಿಯಾದ ಸುದೇಷ್ಣೆಯನ್ನು ಅದಕ್ಕಾಗಿ ಕೇಳಿಕೊಳ್ಳಲು, ಅವಳು ಅದು ಸರಿಯಲ್ಲ ಎಂದು ವಿವೇಕ ಹೇಳಿದಳು. ಆದರೂ ಮತ್ತೆ ಮತ್ತೆ ಕೇಳತೊಡಗಿದ ಅವನ ಮಾತಿಗೆ ಕಟ್ಟುಬಿದ್ದು ಸುದೇಷ್ಣೆಯು ಒಮ್ಮೆ ದ್ರೌಪದಿಯನ್ನು

---

ಶಂಕೆಗೂ ಅವಕಾಶವಿಲ್ಲ ; ಏಕೆಂದರೆ ಅವನು ಅವರ ರಾಜ್ಯವನ್ನು ಹಾಗೆ ಕಿತ್ತುಕೊಂಡಿದ್ದು ಕ್ಷತ್ರಿಯರಿಗೆ ವಿಹಿತವಾದ ಶಸ್ತ್ರಾಸ್ತ್ರದಂತಹ ಧರ್ಮಮಾರ್ಗದಿಂದಲ್ಲ ; ಕೇವಲ ಕಪಟದ್ಯೂತದಿಂದ ಮಾತ್ರ. ಅದು ಊರ್ಜಿತವೆನ್ನಿಸದ್ದರಿಂದ ಅದು ಉಳಿದದ್ದು ಪಾಂಡವರ ರಾಜ್ಯವಾಗಿಯೇ ಹೊರತು ಕೌರವರ ರಾಜ್ಯವಾಗಿ ಅಲ್ಲ ಎಂಬ ಅನೇಕ ಸ್ಪಷ್ಟೀಕರಣಗಳನ್ನು ಇಲ್ಲಿ ಗಮನಿಸಬಹುದು. ಶ್ರೀರಾಮನಿಗೆ ಸುಗ್ರೀವಾದಿ ಕಪಿಗಳು ಸಹಾಯ ಮಾಡಿದ ಪ್ರಸಂಗದಂತೆ ಈ ಪ್ರಸಂಗ ಎಂದು ತಿಳಿಯಬೇಕು.

೧. ಭೀಮನೇ ದ್ರೌಪದೀಪತಿ ಎಂಬುದಕ್ಕೆ ಇದು ಸಹ ಒಂದು ಗಮಕ.

ಕುರಿತು, ತನಗಾಗಿ ಆ ಕೀಚಕನ ಮನೆಯಿಂದ ಸುರೆಯನ್ನು ತರುವಂತೆ ಹೇಳಿದಳು. ಆ ದುಷ್ಟನ ಸ್ಪರ್ಶಕ್ಕೆ ಭೀತಳಾದ ದ್ರೌಪದಿಯು "ಆಗದು" ಎಂದು ಹೇಳಿದರೂ, ಸುದೇಷ್ಣೆ ಬಲಾತ್ಕಾರ-ವಾಗಿಯೇ ಅವಳನ್ನು ಕಳುಹಿಸಿದಳು. ಮನೆಗೆ ಹೋದಾಗ ತನ್ನ ಕೈಹಿಡಿಯಲು ಬಂದ ಅವನನ್ನು ಕೆಳಕ್ಕೆ ತಳ್ಳಿ ಅವಳು ಸೂರ್ಯಾಂತರ್ಯಾಮಿ ವಾಸುದೇವನನ್ನು ಸ್ಮರಿಸುತ್ತ ಸಭೆಯತ್ತ ಓಡಿದಳು. ಹಿಂಬಾಲಿಸಿ ಬಂದ ಕೀಚಕನು ಅವಳನ್ನು ಬೀಳಿಸಿ ಕಾಲಿನಿಂದ ಒದೆಯ ತೊಡಗಲು, ಸೂರ್ಯಾಂತರ್ಯಾಮಿ ನಾರಾಯಣನಿಂದ ಕಳುಹಿಸಲ್ಪಟ್ಟಿದ್ದ ಹೇತಿ ಎಂಬ ರಾಕ್ಷಸನಲ್ಲಿ ಆವೇಶಿಸಿ ವಾಯು ಆ ಕೀಚಕನನ್ನು ಹೊಡೆದು ಬೀಳಿಸಿದ. ಇದನ್ನೆಲ್ಲ ಕಂಡ ಭೀಮಸೇನನು ಕೋಪದಿಂದ ಉರಿದ. ಕೀಚಕನನ್ನು ಸಂಹರಿಸಲು ಎದುರಿಗಿದ್ದ ಬೃಹದಾಕಾರದ ವೃಕ್ಷವೊಂದನ್ನು ಭೀಮನು ದಿಟ್ಟಿಸತೊಡಗಿದ್ದನ್ನು ಗಮನಿಸಿದ ಅಣ್ಣನಾದ ಯುಧಿಷ್ಠಿರ ಅವನನ್ನು ತಡೆದ.

## ಕೀಚಕ ವಧೆ

ಆ ರಾತ್ರಿ ಭೀಮನ ಬಳಿಗೆ ಬಂದ ದ್ರೌಪದಿಯು ಆ ಪಾಪಿ ಕೀಚಕನನ್ನು ಸಂಹರಿಸಲು ಪ್ರೇರೇಪಿಸಿದಳು. ಭೀಮನ ಸಲಹೆಯಂತೆ ಅವಳು ಕೀಚಕನನ್ನು ಕುರಿತು ಶೂನ್ಯಗೃಹಕ್ಕೆ ಹೋಗಲು ಹೇಳಿದಳು. ಅಲ್ಲಿ ಕೀಚಕನನ್ನು ಆಕ್ರಮಿಸಿದ ಭೀಮಸೇನನು ಬಾಹುಯುದ್ಧದಲ್ಲಿ ಅವನನ್ನು ಸಂಹರಿಸಿ, ಅವನ ಗುದದಲ್ಲಿ ಶಿರಸ್ಸು ಹಾಗೂ ಕೈಕಾಲುಗಳನ್ನು ಹೊಸಕಿ ಸೇರಿಸಿಬಿಟ್ಟ. ಶಿವನ ವರದಿಂದ ಅವಧ್ಯನೆನ್ನಿಸಿದ್ದ ಅವನು ಸತ್ತಿದ್ದನ್ನು ಕಂಡು ಶಿವನ ವರದಿಂದ ಅವಧ್ಯರೆನ್ನಿಸಿದ್ದ ಅವನ ನೂರೈದು ಜನ ತಮ್ಮಂದಿರು, ಕೀಚಕನೊಂದಿಗೆ ದಹಿಸಲು ದ್ರೌಪದಿಯನ್ನೂ ಬಂಧಿಸಿ-ದರು. ಕೀಚಕರಿಂದ ಕರೆದೊಯ್ಯಲ್ಪಡುತ್ತಿದ್ದ ಅವಳು ಗಟ್ಟಿಯಾಗಿ ಕೂಗಿಕೊಳ್ಳಲು, ಅದನ್ನು ಕೇಳಿದ ಭೀಮನು ಒಂದು ದೊಡ್ಡ ವೃಕ್ಷವನ್ನು ಕಿತ್ತಿ ಅದರಿಂದ ಅವರನ್ನೆಲ್ಲ ಬಡಿದು ಕೊಂದು ಹಾಕಿದ. ದ್ರೌಪದಿಯನ್ನು ಕರೆದುಕೊಂಡು ಮನೆಗೆ ಮರಳಿದ. ಹೀಗೆ ಶಿವನ ವರದಿಂದ ಯುದ್ಧದಲ್ಲಿ ಅವಧ್ಯರೆನ್ನಿಸಿದ್ದ ಆ ನೂರ ಆರು ಜನರೂ ಭೀಮನಿಂದ ಯುದ್ಧದಲ್ಲಿ ಮಡಿದರು. 'ಗಂಧರ್ವ' ಎಂಬ ಹೆಸರಿನಿಂದಲೇ ಅವರನ್ನೆಲ್ಲ ಕೊಂದು ಹಾಕಿದ ಭೀಮನೂ, ದ್ರೌಪದಿಯೂ ಸಂತೋಷಪಟ್ಟರು. ಇದರಿಂದ ಭಯಗೊಂಡ ಸುದೇಷ್ಣೆಯು ದ್ರೌಪದಿಯನ್ನು ಹೊರಟು ಹೋಗಲು ಕೇಳಿಕೊಂಡಳು. "ಇನ್ನು ಹದಿಮೂರು ದಿನ ಮಾತ್ರ ಪಾಲಿಸು" ಎಂಬ ದ್ರೌಪದಿಯ ಮಾತಿಗೆ, ಸುದೇಷ್ಣೆಯು ಭಯದಿಂದಲೇ ಒಪ್ಪಿಕೊಂಡಳು. ಹೀಗೆ ಅವರ ಒಂದು ವರ್ಷ ಪೂರೈಸಿತು.

## ದಕ್ಷಿಣ ಗೋಗ್ರಹಣ

ಇತ್ತ ದುರ್ಯೋಧನನಿಂದ ಕಳುಹಿಸಲ್ಪಟ್ಟ ದೂತರು ಭೂಮಿಯಲ್ಲೆಲ್ಲ ಸುತ್ತಿ, ಪಾಂಡವ-ರನ್ನೆಲ್ಲೂ ಗುರುತಿಸಲಾಗದೆ, ನಿರಾಶೆಯಿಂದ ಹಿಂದಿರುಗಿ, ಕೀಚಕ ಸತ್ತ ವರ್ತಮಾನವನ್ನು ಅವನಿಗೆ ತಲುಪಿಸಿದರು. ದುರ್ಯೋಧನನು ಕೀಚಕನು ದ್ರೌಪದಿಯ ನಿಮಿತ್ತವಾಗಿ ಭೀಮ-

ನಿಂದಲೇ ಸತ್ತಿರಬೇಕು ಎಂದು ಊಹಿಸಿದ. ದುರ್ಯೋಧನಾದಿಗಳೆಲ್ಲ ಭೀಷ್ಮಕರ್ಣಾದಿ-ಗಳೊಂದಿಗೆ ಸೈನ್ಯಸಮೇತರಾಗಿ ಹೊರಟರು. ಮೊದಲು ಯುದ್ಧಕ್ಕೆ ಹೊರಟ ಸುಶರ್ಮನು ವಿರಾಟನ ಗೋಸಂಪತ್ತನ್ನು ಹಿಡಿದು ಹಾಕಿದ. ಆ ವಾರ್ತೆಯನ್ನು ಕೇಳಿ ಸೈನ್ಯಸಮೇತನಾಗಿ ವಿರಾಟ ಆವುಗಳನ್ನು ಬಿಡಿಸಲು ಹೊರಟ. ಅರ್ಜುನನ ಹೊರತು ಉಳಿದೆಲ್ಲ ಪಾಂಡವರೂ ಅವನನ್ನು ಹಿಂಬಾಲಿಸಿದರು. ಯುದ್ಧದಲ್ಲಿ ಸುಶರ್ಮನು ವಿರಾಟನನ್ನು ಸೋಲಿಸಿ ಸೆರೆಹಿಡಿಯಲು, ವೃಕೋದರನು ಅವನ ಮೇಲೆ ನುಗ್ಗಿ ಅವನ ಎಲ್ಲ ಸೇನೆಯನ್ನು ಕೊಂದುಹಾಕಿ, ವಿರಾಟರಾಜನನ್ನು ಬಿಡಿಸಿದ ; ಸುಶರ್ಮರಾಜನನ್ನು ಸೆರೆಹಿಡಿದ. ಧರ್ಮರಾಜನು ಅವನನ್ನು ಬಿಡಿಸಿ ಕಳುಹಿಸಿಕೊಟ್ಟ. ಆ ವೇಳೆಗೆ ಕತ್ತಲಾಗಲು ಅವರೆಲ್ಲ ಆ ರಾತ್ರಿಯನ್ನು ಪಟ್ಟಣದ ಹೊರಗೇ ಕಳೆದರು.

## ಉತ್ತರ ಗೋಗ್ರಹಣ

ಮಾರನೆಯ ದಿನ ಭೀಷ್ಮದ್ರೋಣ ಮೊದಲಾದವರೆಲ್ಲ, ಕೀಚಕರಿಲ್ಲದ ವಿರಾಟನನ್ನು ಜಯಿಸುವುದು ಸುಲಭವೆಂದು ಭಾವಿಸಿ ಹೊರಟು ನಿಂತರು. ಕೀಚಕ, ಹಿಡಿಂಬ, ಬಕ, ಕಿರ್ಮೀರ, ಜರಾಸಂಧ ಮತ್ತು ಕಂಸಾದಿಗಳನ್ನು ಜಯಿಸಲು ಭೀಷ್ಮಾದಿಗಳಿಗೆ ಎಂದೂ ಸಾಧ್ಯವಾಗಿರಲಿಲ್ಲ. ಈಗ ಕೀಚಕ ಸತ್ತ ವಾರ್ತೆ ಕೇಳಿ ಅವರೆಲ್ಲ ಉತ್ಸಾಹದಿಂದ ವಿರಾಟನಗರಿಯತ್ತ ನಡೆದರು. ಭೀಮನಿಂದ ಕೌರವರನ್ನು ರಕ್ಷಿಸಲು ಪ್ರಯತ್ನಿಸುವೆನು ಎಂಬ ತಮ್ಮ ಮಾತನ್ನು ಸತ್ಯಮಾಡಿಕೊಳ್ಳಲೆಂದು ಮಗನಾದ ಅಶ್ವತ್ಥಾಮರೊಂದಿಗೆ ದ್ರೋಣರೂ ಅವರ ಜೊತೆ ಹೊರಟರು. ಯುದ್ಧಕ್ಕೇನಾದರೂ ಪಾಂಡವರು ಬಂದಲ್ಲಿ ಅವರ ಸುಳಿವು ಸಿಗುವುದು; ಇಲ್ಲ-ವಾದಲ್ಲಿ ಆ ಮೊದಲು ವಶವಾಗದಿದ್ದ ವಿರಾಟನನ್ನಾದರೂ ಶರಣಾಗತನನ್ನಾಗಿಸಿಕೊಳ್ಳಬಹುದು ಎಂಬ ಯೋಚನೆ ಅವರೆಲ್ಲರಲ್ಲಿ ತುಂಬಿತ್ತು. ಈ ಭಾವನೆಯಿಂದ ಅವರೆಲ್ಲ ವಿರಾಟನ ಗೋವುಗಳನ್ನೆಲ್ಲ ಎಲ್ಲೆಡೆಗಳಿಂದಲೂ ಮುತ್ತಿ ಸೆರೆಹಿಡಿದರು.

ವಿಷಯ ತಿಳಿದ ಉತ್ತರಕುಮಾರನು ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ರಥಾರೂಢನಾಗಿ ಕೌರವರನ್ನೆದುರಿಸಲು ಹೊರಟ. ಸಾಗರದಂತಹ ಕೌರವರ ಸೇನೆಯನ್ನು ನೋಡುತ್ತಲೇ ಅವನಿಗೆ ನಡುಕ ಉಂಟಾಗಿ ಪಲಾಯನದ ಸಿದ್ಧತೆಯನ್ನು ನಡೆಸಿದ. ಆಗ ಅರ್ಜುನನು ಅವನನ್ನು , ತುಂಬಾ ಪ್ರಯಾಸದಿಂದಲೇ ಒಪ್ಪಿಸಿ ತನ್ನ ಸಾರಥಿಯನ್ನಾಗಿ ಮಾಡಿಕೊಂಡು, ಕೌರವರ ಮೇಲೆ ನುಗ್ಗಿದ. ಗಾಂಡೀವವನ್ನು ತೆಗೆದುಕೊಂಡು ಹನುಮ-ದಾಕಾರದ ಧ್ವಜವನ್ನೂ , ದೇವದತ್ತ ಶಂಖವನ್ನು ತೆಗೆದುಕೊಂಡು ಹೊರಟ ; ಮೊದಲಿಗೆ ಗೋವುಗಳನ್ನು ಹಿಂದಿರುಗಿಸಿ ಅನಂತರ ಕೌರವರ ಮೇಲೆ ಎರಗಿದ. ದ್ವಂದ್ವಯುದ್ಧದಲ್ಲಿ ಅವರನ್ನೆಲ್ಲ ಅರ್ಜುನ ಸೋಲಿಸಿದ. ಅವರೆಲ್ಲ ಒಟ್ಟಾಗಿ ಮತ್ತೆ ಮೇಲೆ ಬೀಳುವುದನ್ನು ಕಂಡು ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಎಲ್ಲರ ಪ್ರಜ್ಞೆ ತಪ್ಪಿಸಿದ. ಭೀಷ್ಮರಿಗೆ ಪ್ರತ್ಯಸ್ತ್ರ ಗೊತ್ತಿದ್ದುದರಿಂದ, ಅವರನ್ನು ಹೊರತುಪಡಿಸಿ ಉಳಿದವರೆಲ್ಲರ ಉತ್ತರೀಯಗಳನ್ನು ಅರ್ಜುನ ತೆಗೆದುಕೊಂಡು ಹೊರಟ. ಆಗ ಎದುರಿಸಲು ಬಂದ ಭೀಷ್ಮರನ್ನು ವಿರಥರನ್ನಾಗಿಸಿದ.

## ಉತ್ತರಾ ಕಲ್ಯಾಣ

ಕೌರವರೆಲ್ಲರೂ ಸೋತ ವಾರ್ತೆ ಕಿವಿಗೆ ಬೀಳುತ್ತಲೇ, ಆ ಕಾರ್ಯವನ್ನು ಸಾಧಿಸಿದ್ದು ತನ್ನ ಮಗನೇ ಎಂಬ ಭಾವನೆಯಿಂದ ವಿರಾಟರಾಜ ಅಪಾರವಾಗಿ ಉಬ್ಬಿದ. ಆಗ ಯುಧಿಷ್ಠಿರನು ಹಾಗೆ ಗೆದ್ದದ್ದು ನಿಜವಾಗಿಯೂ 'ಷಂಢ'(ಬೃಹನ್ನಳೆಯ ರೂಪದ ಅರ್ಜುನ)ನೇ ಎಂದು ತಿಳಿಸಿದ. ಅದನ್ನು ಕೇಳಿ ಕೋಪಗೊಂಡ ವಿರಾಟನು ಅಕ್ಷದಿಂದ ಧರ್ಮರಾಜನನ್ನು ಹೊಡೆದ. ಅದನ್ನು ಕೇಳಿದ ಕೂಡಲೇ ಭೀಮಾರ್ಜುನರಿಬ್ಬರೂ ಕೋಪಗೊಂಡದ್ದನ್ನು ಕಂಡು, ಧರ್ಮ–ರಾಜನು ಅವರನ್ನು ತಡೆದ. ನಿಜರೂಪದಲ್ಲಿ ಕಾಣಿಸಿಕೊಂಡ ತಮ್ಮನ್ನು ಅವನು ಗೌರವಿಸಿ ಪೂಜಿಸಿ ಕ್ಷಮೆ ಕೇಳದಿದ್ದಲ್ಲಿ ಅವನನ್ನು ಸಂಹರಿಸಬೇಕೆಂಬ ತೀರ್ಮಾನದಿಂದ ಮಾರನೆಯ ದಿನ ಅವರೆಲ್ಲ ತಮ್ಮ ನಿಜರೂಪದಲ್ಲಿ ಕಾಣಿಸಿಕೊಂಡರು. ತನ್ನ ಸಿಂಹಾಸನದ ಮೇಲೆ ಮಂಡಿಸಿದ ಯುಧಿಷ್ಠಿರನನ್ನು ಕಂಡು ವಿರಾಟ 'ಇದೆಲ್ಲ ಏನು?' ಎಂದು ಕೇಳಿದ. ಉತ್ತರನು ಗೋಗ್ರಹಣದಲ್ಲಿ ನಡೆದ ಎಲ್ಲ ವಿಷಯವನ್ನು ವಿವರವಾಗಿ ತಿಳಿಸಿ ಅವರು ಪಾಂಡವರೆಂಬುದನ್ನು ತಿಳಿಸಿದ. ವಿರಾಟನು ಭಯದಿಂದ ನಡುಗುತ್ತ ಪಾಂಡವರನ್ನು ಶರಣು ಹೊಕ್ಕ ; ಅರ್ಜುನನಿಗೆಂದು ತನ್ನ ಮಗಳು ಉತ್ತರೆಯನ್ನು ಅರ್ಪಿಸಿದ. ತನ್ನ ಮಗ ಅಭಿಮನ್ಯುವಿಗೋಸ್ಕರ ಅವಳನ್ನು ಅರ್ಜುನನು ಸ್ವೀಕರಿಸಿದ.

ಹೀಗೆ ವಿರಾಟನನ್ನು, ಅವನ ಗೋವುಗಳನ್ನು ಬಿಡಿಸಿದ್ದರಿಂದಲೂ, ಕೀಚಕನನ್ನು ತಮಸ್ಸಿನಲ್ಲಿ ಬೀಳಿಸಿದ್ದರಿಂದಲೂ ಭೀಮಸೇನನಿಗೆ ಅಪಾರ ಧರ್ಮವು ಲಭಿಸಿತು. ಅನಂತರದ ಸ್ಥಾನ, ಗೋವಿಮೋಕ್ಷಣ ಮಾಡಿದ ಅರ್ಜುನನದು.

ಅವರೆಲ್ಲ ಕೃಷ್ಣನ ಬಳಿಗೆ ದೂತರನ್ನು ಕಳುಹಿಸಿದರು. ಅಭಿಮನ್ಯುವನ್ನು ಕರೆದುಕೊಂಡು ಬಲರಾಮನೊಂದಿಗೆ ಅನಂತ ಜ್ಞಾನಾನಂದಸಾಗರನಾದ ಶ್ರೀಕೃಷ್ಣನು ಕೂಡಲೇ ಆಗಮಿಸಿದ. ಅಭಿಮನ್ಯುವಿನೊಂದಿಗೆ ಉತ್ತರೆಯ ವಿವಾಹ ವಿಜೃಂಭಣೆಯಿಂದ ನಡೆಯಿತು. ಅಜ್ಞಾತ–ವಾಸವನ್ನು ಪೂರೈಸಿ ಕೃಷ್ಣನಿಂದೊಡಗೂಡಿದ ಪಾಂಡವರಿಗೂ, ಯಾದವವೀರರಿಗೂ, ಪಾಂಚಾಲರಿಗೂ ಅದೊಂದು ದುಡ್ಡ ಮಹೋತ್ಸವವೇ ಆಯಿತು.

## ಅಜ್ಞಾತವಾಸದ ಸಮಾಪ್ತಿ

ಯುದ್ಧದಲ್ಲಿ ಅರ್ಜುನನಿಂದ ನೊಂದ ಕೌರವರೆಲ್ಲರೂ, ಶಕುನಿಕರ್ಣರೊಂದಿಗೂ, ಭೀಷ್ಮಾದಿಗಳೊಂದಿಗೂ ಕೂಡಿಕೊಂಡು ಹಸ್ತಿನಾಪುರವನ್ನು ಸೇರಿ ಮಂತ್ರಾಲೋಚನೆಯನ್ನು ನಡೆಸಿದರು. ''ಅಜ್ಞಾತವಾಸ ಕಾಲದಲ್ಲಿ ಫಲ್ಗುನ ನಮ್ಮ ಕಣ್ಣಿಗೆ ಬಿದ್ದ ; ಆದ್ದರಿಂದ ಪಾಂಡವರು ಮತ್ತೆ ಕಾಡಿಗೆ ಹೋಗತಕ್ಕದ್ದು'' ಎಂದು ನುಡಿದ ಅವರಿಗೆ ಭೀಷ್ಮರು – ''ಅಜ್ಞಾತವಾಸದ ಅವಧಿ ಕಳೆದ ಮೇಲೆಯೇ ಪಾರ್ಥ ಕಣ್ಣಿಗೆ ಬಿದ್ದದ್ದು'' ಎಂದು ಎಚ್ಚರಿಸಿದರು. ಅವರ ಮಾತನ್ನು ದ್ರೋಣರೂ ಅನುಮೋದಿಸಿದರು. ಅವರಿಬ್ಬರ ಮಾತುಗಳನ್ನು ಕಡೆಗಣಿಸಿ, ಆ ಪಾಪಿಗಳೆಲ್ಲರೂ ಪಾಂಡವರೆಲ್ಲರೂ ಮತ್ತೆ ಕಾಡಿಗೆ ಹೋಗತಕ್ಕದ್ದು ಎಂದು ದೂತರ ಮೂಲಕ ಹೇಳಿ

ಕಳುಹಿಸಿದರು. ಅದಕ್ಕೆ ಧರ್ಮರಾಜನು "ಜ್ಞಾನಿಗಳು ನಾವು ಅಜ್ಞಾತವಾಸವನ್ನು ಪೂರೈಸಿರುವುದನ್ನು ಬಲ್ಲರು" ಎಂದು ಉತ್ತರಿಸಿದ.

ಸೌರಮಾನದ ರೀತಿಯಲ್ಲಿ ಅಜ್ಞಾತವಾಸ ಅಪೂರ್ಣವಾಯಿತೆಂಬುದು ಕೌರವರ [೧]ವಾದವಾಗಿತ್ತು. ಆದರೆ ಚಾಂದ್ರಮಾನದ ರೀತಿಯಲ್ಲಿ ಆ ಕಾಲ ಸಂಪೂರ್ಣವಾಗಿ ಮುಗಿದಿತ್ತು. ದಿನಗಳ ಒಡೆಯ ಸೂರ್ಯ ; ಪಕ್ಷ, ಮಾಸ ಹಾಗೂ ವರ್ಷಗಳ ಒಡೆಯ ಚಂದ್ರ. ಆದ್ದರಿಂದ ಚಾಂದ್ರವರ್ಷವನ್ನೇ ಮುಖ್ಯವೆಂದು ಜ್ಞಾನಿಗಳು ಹೇಳುವರು. ಆದ್ದರಿಂದಲೇ ಯಜ್ಞದಲ್ಲಿ ಚಾಂದ್ರಮಾನವನ್ನು ಗ್ರಹಿಸುತ್ತಾರೆಯೇ ಹೊರತು ಸೌರಮಾನವನ್ನಲ್ಲ. ಇದನ್ನೆಲ್ಲ ಗಮನಿಸದೆ ಧೃತರಾಷ್ಟ್ರನ ಮಕ್ಕಳು ರಾಜ್ಯದ ಲೋಭದಿಂದಾಗಿ ಹಾಗೆ ಹೇಳುತ್ತಾ ಅವರಿಗೆ ರಾಜ್ಯವನ್ನು ನೀಡಲು ನಿರಾಕರಿಸಿದರು. ವಿಪ್ರಶ್ರೇಷ್ಠರ ಮೂಲಕ ಅಜ್ಞಾತವಾಸದ ಕಾಲ ಪೂರ್ಣವಾಗಿದೆ ಎಂಬುದನ್ನು ಪ್ರಕಟಿಸುತ್ತ ಪಾಂಡವರು ಉಪಪ್ಲಾವ್ಯಕ್ಕೆ ತೆರಳಿದರು. ಕೃಷ್ಣ ಯಾದವರು ಹಾಗೂ ಪಾಂಚಾಲರೊಂದಿಗೆ ಕೂಡಿಕೊಂಡು ಪತ್ನೀಸಮೇತರಾಗಿ ಪಾಂಡವರೆಲ್ಲರೂ ಕೆಲವು ದಿನಗಳನ್ನು ಕೃಷ್ಣನ ಉಪದೇಶವನ್ನು ಶ್ರವಣಮಾಡುತ್ತ, ಉಪಪ್ಲಾವ್ಯದಲ್ಲಿ ನೆಲೆಸಿದರು.

★★★★★

೧. ಸೌರಮಾನದ ಲೆಕ್ಕದಲ್ಲಿ ಅಜ್ಞಾತವಾಸವು ಅಪೂರ್ಣ ಎಂದು ವಾದಿಸುವ ದುರ್ಯೋಧನಾದಿಗಳು, ಅನುದ್ಯೂತದ ಕಾಲದಲ್ಲಿ ನಿಬಂಧನೆಯನ್ನು ವಿಧಿಸುವಾಗಲೇ ಸೌರಮಾನದ ಲೆಕ್ಕಕ್ಕೆ ಅನುಗುಣವಾಗಿಯೇ ವನವಾಸ ಅಜ್ಞಾತವಾಸಗಳಯ ಎಂಬುದನ್ನು ಸ್ಫುಟಪಡಿಸಿದ್ದಲ್ಲಿ ಈಗ ಅದನ್ನು ಒಂದು ಅಂಶವನ್ನಾಗಿ ಪರಿಗಣಿಸಲು ಸಾಧ್ಯವಾಗುತ್ತಿತ್ತು. ಆದರೆ, ಆ ಕಾಲದಲ್ಲಿ ಅಂತಹ ನಿಬಂಧನೆಯನ್ನೇನು ಅವರು ವಿಧಿಸಿರಲಿಲ್ಲ, ಆದ್ದರಿಂದ ಜ್ಯೋತಿಃಶಾಸ್ತ್ರಕ್ಕನುಗುಣವಾಗಿ ಚಾಂದ್ರಮಾನವನ್ನೇ ಪಾಂಡವರು ಗಣಿಸಿದ್ದರಲ್ಲಿ ಯಾವುದೇ ಲೋಪವೂ ಆಗಿಲ್ಲ. ಕೌರವರು ಇಂತಹ ವಾದಕ್ಕೆ ಅವಕಾಶವಿರಲಿ ಎಂಬ ದುರಾಲೋಚನೆಯಿಂದಲೇ ಅನುದ್ಯೂತಕಾಲದಲ್ಲಿಯೇ ಅದನ್ನು ಸೂಚಿಸುವ ಗೋಜಿಗೆ ಹೋಗಿರಲಿಲ್ಲ ; ಎಂದರೆ, ವಿನಾಕಾರಣವಾಗಿ ಕಲಹ ಹೂಡುವ ಅವರ ಸ್ವಭಾವ ಇದರಿಂದ ಖಚಿತಪಡುವುದು. ಹೀಗೆ, ಪ್ರತಿಯೊಂದು ಕಾರ್ಯದಲ್ಲೂ ಸಹ ವಂಚನೆಯನ್ನೇ ಮುಂದೆ ಮಾಡಿ ಬದುಕುವ ರೀತಿ ದುರ್ಜನರದು ಎಂದು ತಿಳಿಯಬೇಕು.

# ಉದ್ಯೋಗ ಪರ್ವ

## ಧೃತರಾಷ್ಟ್ರನಿಗೆ ಹಿತೋಕ್ತಿ

ಉಪಪ್ಲಾವ್ಯದ ಸಭೆಯಲ್ಲಿ ನಡೆದ ಮಂತ್ರಾಲೋಚನೆಯಲ್ಲಿ ಕೃಷ್ಣನ ಸಮ್ಮತಿ ಪಡೆದು ದ್ರುಪದರಾಜನು ತನ್ನ ಪುರೋಹಿತನನ್ನು ಶಾಂತಿಪ್ರಸ್ತಾಪಕ್ಕೆಂದು ಧೃತರಾಷ್ಟ್ರನ ಬಳಿಗೆ ಕಳುಹಿಸಿಕೊಟ್ಟ. ಅವನು ಭೀಷ್ಮದ್ರೋಣರೇ ಮೊದಲಾದವರೊಂದಿಗೆ ಇದ್ದ ಧೃತರಾಷ್ಟ್ರನನ್ನು ಕುರಿತು ಹೇಳಿದ – ''ಧರ್ಮರಾಜನೊಂದಿಗೆ ವಿರೋಧ ನಿನಗೆ ತರವಲ್ಲ; ಭೀಮಾರ್ಜುನರಂತಹ ಮಹಾಬಲಾಢ್ಯರಾದ ತಮ್ಮಂದಿರನ್ನು ಹೊಂದಿರುವ ಅವನಿಗೆ, ಸ್ವಯಂ ಕೃಷ್ಣನೇ ಸ್ವಾಮಿಯಾಗಿರುವನು. ಶಿವನ ವರದಿಂದ ಅವಧ್ಯರಾಗಿದ್ದ ಜರಾಸಂಧಾದಿ ಅನೇಕ ರಾಕ್ಷಸರು ಭೀಮಸೇನನಿಂದ ಪ್ರಾಣ ಕಳೆದುಕೊಂಡಿರುವರು. ತೀರ್ಥಯಾತ್ರೆಗೆ ವಿಘ್ನವುಂಟುಮಾಡುತ್ತ ತೀರ್ಥಗಳಲ್ಲಿ ನೆಲೆಸಿದ್ದ ಮೂರುಕೋಟಿ ಸಂಖ್ಯೆಯ ರಾಕ್ಷಸರನ್ನು , ಸೋದರರ, ಬ್ರಾಹ್ಮಣರ ಮತ್ತು ಎಲ್ಲ ಜನರ ಹಿತವನ್ನು ಬಯಸಿ ಭೀಮ ಸಂಹರಿಸಿದ. ಆದರಿಂದಲೇ ಈಗ ಎಲ್ಲ ತೀರ್ಥಗಳಿಗೂ[೧] ಮನುಷ್ಯರು ಹೋಗಿ ಬರಲು ಸಾಧ್ಯವಾಗಿದೆ.

## ಜಟಾಸುರನ ವಧೆ

ಪಾರ್ವತಿಯ ವರದಿಂದ ಅವಧ್ಯನಾಗಿದ್ದ ಜಟಾಸುರನೆಂಬ ಮತ್ತೊಬ್ಬ ಅಸುರನು ಬ್ರಾಹ್ಮಣವೇಷದಿಂದ ಪಾಂಡವರನ್ನು ಮೋಸಗೊಳಿಸಿದ. ಭೀಮನು ಅವನು ರಾಕ್ಷಸನೆಂದು

---

೧. ತೀರ್ಥಕ್ಷೇತ್ರಗಳಲ್ಲಿ ಅಸುರರು ನೆಲೆಸುವುದು ವಿಶೇಷ ; ಅದಕ್ಕೆ ಮುಖ್ಯಕಾರಣ ಅಂತಹ ಪವಿತ್ರಸ್ಥಳಗಳನ್ನು ಸಂದರ್ಶಿಸುವ ಜನರು ಅತ್ಯಂತ ಸಾತ್ವಿಕರು ; ಪುಣ್ಯಶೀಲರು. ಹಣವಂತರನ್ನು ದರೋಡೆಮಾಡುವುದು ದುಷ್ಟರ ಸ್ವಭಾವವಾಗಿರುವಂತೆ, ಪುಣ್ಯವಂತರನ್ನು ಪೀಡಿಸುವುದು ಅಸುರರ ಸ್ವಭಾವ. ದ್ವಾಪರಯುಗದ ಕೊನೆಯ ಘಟ್ಟದಲ್ಲಿ ಅಂತಹ ಪ್ರಬಲರಾಕ್ಷಸರ ಸಂಖ್ಯೆ ಅಪಾರವಾಗಿ ಬೆಳೆದು ಸಜ್ಜನರ ಪಾಲಿಗೆ ತೀರ್ಥಕ್ಷೇತ್ರಗಳ ಯಾತ್ರೆ ಕನಸಿನ ಮಾತಾಗಿತ್ತು. ಅಂತಹ ಅಸುರರನ್ನು ಸಂಹರಿಸಿ, ತೀರ್ಥಯಾತ್ರೆಯಂತಹ ಪವಿತ್ರಕಾರ್ಯವನ್ನು ಸುಗಮಗೊಳಿಸಿದ್ದು ಭೀಮಸೇನನ ಅಪಾರ ಹಿರಿಮೆ. ಇದರಂತೆ ತೀರ್ಥಗಳು ಎಂದರೆ ಶಾಸ್ತ್ರಗ್ರಂಥಗಳು ಎಂದರ್ಥ ; ಅವುಗಳಲ್ಲೂ ಪ್ರಕ್ಷೇಪಾದಿಗಳ ಮೂಲಕ ಜ್ಞಾನಪ್ರಾಪ್ತಿಯ ಕಾರ್ಯವನ್ನು ಸಜ್ಜನರ ಪಾಲಿಗೆ ಗಗನಕುಸುಮದಂತಾಗಿಸುವರು. ತೀರ್ಥಗಳು ಇದ್ದೂ ಇಲ್ಲವಾಗಿದ್ದಂತೆ ಶ್ರೀಮಧ್ವಾವತಾರ ಸಮಯದಲ್ಲಿ ವೇದ, ಮಹಾಭಾರತಾದಿ ಶಾಸ್ತ್ರಗಳು ಇದ್ದೂ ಸಹ ಇಲ್ಲದಂತಾಗುವ ದುಃಸ್ಥಿತಿಗೆ ಒಳಗಾಗಿದ್ದವು. ಅಸುರರನ್ನು ಸಂಹರಿಸಿ ತೀರ್ಥಯಾತ್ರೆಯನ್ನು ಸುಗಮಗೊಳಿಸಿದ ಭೀಮಸೇನನೇ ಆನಂದತೀರ್ಥರಾಗಿ ಶಾಸ್ತ್ರಾಧ್ಯಯನ–ರೂಪ ತೀರ್ಥಯಾತ್ರೆಯನ್ನು ದುರ್ಮತಗಳ ರೂಪದ ಅಸುರರ ನಾಶದ ಮೂಲಕ ಮಾಡಿದ್ದು ಕಲಿಯುಗದ ಇತಿಹಾಸ. ಹೀಗೆ ಶಾಸ್ತ್ರಾಧ್ಯಯನ ಮಾಡುವವರು ಹಾಗೂ ತೀರ್ಥಯಾತ್ರೆ ಮಾಡುವವರು ವಿಶೇಷವಾಗಿ ಅಂತಹ ಪುಣ್ಯಕಾರ್ಯಗಳಿಗೆ ವಿಶೇಷಾನುಗ್ರಹ ಮಾಡಿರುವ ಶ್ರೀವಾಯುದೇವರ ಈ ಎರಡು ರೂಪಗಳನ್ನು ಚಿಂತಿಸುವುದು ಅತ್ಯಗತ್ಯ. ದಕ್ಷಿಣ ಕನ್ನಡದಲ್ಲಿ ಸಂಚರಿಸುವಾಗ ಕುಂಭಾಸಿ ಎಂಬಲ್ಲಿ ನೆಲೆಸಿದ್ದ ಕುಂಭಾಸುರನ ಸಂಹಾರವು ಶ್ರೀಭೀಮಸೇನನಿಂದ ನಡೆದು ಅದು ಇಂದಿಗೂ ಸಹ ಆ ಪ್ರಾಂತದ ಮಹಾಕ್ಷೇತ್ರಗಳಲ್ಲೊಂದು ಎಂದು ಮಾನ್ಯವಾಗಿದೆ : ಭಾಸಿ ಕುಂಭಾಸಿಸಂಜ್ಞ ತ್ವಂ ಕ್ಷೇತ್ರಂ ಶ್ರೀಶಗಿರಿಶಯೋಃ। ಯತ್ರ ಕುಂಭಾಸುರಸ್ಯಾಸಿ–ರಭಾಸೀದ್ದ್ರೌಪದೀಪತೇಃ ॥ – ಶ್ರೀವಾದಿರಾಜಸ್ವಾಮಿಗಳು – ತೀರ್ಥಪ್ರಬಂಧ(೧/೪೭)

ಕೂಡಲೇ ಗುರುತಿಸಿದರೂ ಬ್ರಾಹ್ಮಣವೇಷದಲ್ಲಿದ್ದ ಅವನನ್ನು ಆಗ ಕೊಲ್ಲುವುದು ಉಚಿತವಲ್ಲ-ವೆಂದು ಸುಮ್ಮನಿದ್ದ. ಒಮ್ಮೆ ಭೀಮನು ಬೇಟೆಗೆ ಹೊರಟಿದ್ದಾಗ ಅವನು ಧರ್ಮರಾಜ, ನಕುಲ, ಸಹದೇವ ಮತ್ತು ದ್ರೌಪದಿ ಇವರನ್ನೆಲ್ಲ ಹೊತ್ತುಕೊಂಡೇ ಓಡತೊಡಗಿದ. ಅವನು ಭೀಮನನ್ನು ಕಾಣುತ್ತಲೇ, ಎಲ್ಲರನ್ನೂ ಬಿಟ್ಟು ಭೀಮನ ಮೇಲೆ ಯುದ್ಧಕ್ಕೆ ಬಂದ. ಭೀಮಸೇನ ಆ ಪಾಪಿಯನ್ನು ಭೂಮಿಯ ಮೇಲೆ ಕೆಡವಿ ಕಾಲಿನಿಂದ ಅವನ ತಲೆಯನ್ನು ಪುಡಿಮಾಡಿ, ತಮಸ್ಸಿಗೇ ಕಳುಹಿಸಿದ ; ಅಂದ ಮೇಲೆ ಇನ್ನು ನಿನ್ನ ಪುತ್ರರನ್ನು ಕೊಲ್ಲುವುದು ಅವನಿಗೆ ಯಾವ ಲೆಕ್ಕ? ನಿವಾತಕವಚರಂತಹ ರಾಕ್ಷಸರೆಲ್ಲ ಅರ್ಜುನನಿಂದ ಹತರಾಗಿರುವರು. ಬ್ರಹ್ಮ-ರುದ್ರೇಂದ್ರಾದಿ ಎಲ್ಲ ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತೂ ಯಾರ ಅಧೀನದಲ್ಲಿದೆಯೋ ಅಂತಹ ಶ್ರೀಹರಿಯ ಶಕ್ತಿಯನ್ನು ಎಷ್ಟೆಂದು ಯಾರು ತಾನೇ ಬಲ್ಲರು? ಆದ್ದರಿಂದ ಇವರೆಲ್ಲರ ರಕ್ಷಣೆಯನ್ನು ಹೊಂದಿರುವ ಧರ್ಮರಾಜನಿಗೆ ಅವನ ಪಾಲಿನ ರಾಜ್ಯವನ್ನು ನೀನು ಹಿಂದಿರುಗಿಸು.'' ಆದರೆ ಧೃತರಾಷ್ಟ್ರನು ಅದಕ್ಕೆ ಸಮ್ಮತಿಸಲಿಲ್ಲ.

## ಕೃಷ್ಣನನ್ನು ಆಯ್ದುಕೊಂಡ ಅರ್ಜುನ

ಯಾದವರೊಂದಿಗೆ ದ್ವಾರಕೆಗೆ ಮರಳಿದ ಕೃಷ್ಣನ ಬಳಿಗೆ, ಯುದ್ಧಕ್ಕೆ ಸಹಾಯವನ್ನು ಬಯಸಿ, ಅರ್ಜುನ ಮತ್ತು ದುರ್ಯೋಧನ ಇಬ್ಬರೂ ಹೊರಟರು; ವೇಗದಲ್ಲಿ ಅರ್ಜುನನನ್ನು ಮೀರಿಸಿದ ದುರ್ಯೋಧನ ಅವನಿಗಿಂತ ಮುಂಚಿತವಾಗಿಯೇ ದ್ವಾರಕೆಯನ್ನು ತಲುಪಿದ. ಅವರಿಬ್ಬರ ಆಗಮನವನ್ನು ಮೊದಲೇ ತಿಳಿದಿದ್ದ ಸರ್ವಜ್ಞನಾದ ಶ್ರೀಕೃಷ್ಣ ಸ್ವಯಂ ನಿದ್ರಾರಹಿತನಾದರೂ, ನಿದ್ರೆ ಬಂದವನಂತೆ ಮಲಗಿದ. ಕೃಷ್ಣನ ಬಳಿಗೆ ಬಂದ ದುರ್ಯೋಧನ 'ರಾಜರಾಜನಾದ ನಾನು ಇವನ [೧]ಪಾದಗಳ ಬಳಿಗೆ ಕೂಡಲಾರೆ' ಎಂಬ ಅಹಂಕಾರದಿಂದ ಕೃಷ್ಣನ ತಲೆಯ ಬಳಿ ನಿಂತ. ಅನಂತರ ಅಲ್ಲಿಗೆ ಆಗಮಿಸಿದ ಅರ್ಜುನನು ಕೃಷ್ಣನಿಗೆ ನಮಸ್ಕರಿಸಿ ಭಕ್ತ್ಯುದ್ರೇಕದಿಂದಾಗಿ ತಲೆಬಾಗಿ ಕೈಜೋಡಿಸಿಕೊಂಡು ಅವನ ಪಾದಗಳ ಬಳಿ ನಿಂತುಕೊಂಡ. ದುರ್ಯೋಧನನು ಮೊದಲು ಬಂದಿದ್ದನ್ನು ತಿಳಿದಿದ್ದರೂ ಕೃಷ್ಣ ಅರ್ಜುನನನ್ನು ಮೊದಲು ನೋಡುತ್ತ ''ಅರ್ಜುನ ! ಸ್ವಾಗತ '' ಎಂದು ಮೇಲೆದ್ದ. ಆಗ ದುರ್ಯೋಧನ ದರ್ಪದಿಂದ – ''ನಾನೇ ಮೊದಲು ಬಂದವನು'' ಎಂದ. ಕೃಷ್ಣನು ಅವನಿಗೂ ಸ್ವಾಗತವನ್ನು ಹೇಳಿದ.

ಅವರಿಬ್ಬರೂ ಆಗಮಿಸಿರುವ ಕಾರಣವನ್ನು ಕೇಳಿದ ಕೃಷ್ಣನು ವಿವರಿಸಿದ – ''ನಿಮ್ಮಿಬ್ಬರಲ್ಲಿ ಒಬ್ಬನು ಮೊದಲು ಬಂದವನು, ಇನ್ನೊಬ್ಬನು ಮೊದಲು ಕಂಡವನು. ಅದರಿಂದ ನಾನೀಗ

---

೧. ದುರ್ಯೋಧನ ಹೀಗೆ ಕೃಷ್ಣನ ಶಿರಸ್ಸು ಹಾಗೂ ಪಾದಗಳಿಗೆ ಭೇದವನ್ನು ಚಿಂತಿಸಿದ್ದು ಅವನ ಅವಿವೇಕಕ್ಕೆ ನಿದರ್ಶನ. ಶ್ರೀಹರಿ ಸ್ವಗತಭೇದವಿವರ್ಜಿತನಾದವನು ; ಎಂದರೆ ಅವನಿಗೆ ಶಿರಸ್ಸು, ಪಾದ ಇತ್ಯಾದಿಗಳಲ್ಲಿ ವ್ಯತ್ಯಾಸವಿಲ್ಲ : ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಂ । ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥(ಗೀತಾ). ಇಂತಹ ಅವಿವೇಕವು ಅವನ ಪತನಕ್ಕೆ ಕಾರಣವಾದ ಮಹಾಪಾತಕಗಳ-ಲ್ಲೊಂದು ಎಂದು ತಿಳಿಯಬೇಕು.

ಇಬ್ಬರಿಗೂ ನನ್ನ ಸಹಾಯವನ್ನು ಸಮನಾಗಿ ಹಂಚುವೆನು. ಒಂದು ಕಡೆ ಶೂರರಾದ ನನ್ನ ಹತ್ತುಲಕ್ಷ ಮಕ್ಕಳು ; ಮತ್ತೊಂದು ಕಡೆ ನಿರಾಯುಧನಾದ ನಾನು. ಇದರಲ್ಲಿ ಯಾರನ್ನು ಬೇಕಾದರೂ ಆರಿಸಿಕೊಳ್ಳಬಹುದು.'' ಕೃಷ್ಣಭಕ್ತನಾದ್ದರಿಂದ ಅರ್ಜುನನು ಕೃಷ್ಣನನ್ನೇ ಆರಿಸಿಕೊಂಡ. ಕೃಷ್ಣನಲ್ಲಿ ಭಕ್ತಿಯಿಲ್ಲದ ದುರ್ಯೋಧನನಿಗೆ ಯುದ್ಧಮಾಡುವ [೧]ಯಾದವರೇ ಮೆಚ್ಚಿಗೆಯಾದರು. ಪಾಂಡವರಿಗೆ ಸಹಾಯ ಮಾಡುವುದು ಕೃಷ್ಣನ ಅಚಲ ನಿರ್ಧಾರವೇ ಆಗಿದ್ದರೂ, ದುರ್ಯೋಧನನ ಭಕ್ತಿಹೀನತೆಯನ್ನು ಪ್ರಕಟಿಸಲು ಅವನು ಹೀಗೆ 'ಸಮ'ಭಾಗದ ನಾಟಕವನ್ನು ಯೋಜಿಸಿದ್ದ.

## ಸೇನಾಸಂಗ್ರಹ

ಅನಂತರ ಕೃಷ್ಣನು ಅರ್ಜುನನೊಂದಿಗೆ ಪಾಂಡವರ ಬಳಿಗೆ ಹೊರಟ. ದುರ್ಯೋಧನನು ಬಲರಾಮನ ಬಳಿಗೆ ತೆರಳಿ ಸಹಾಯ ಪಡೆಯುವ ತನ್ನ ಪ್ರಯತ್ನವನ್ನು ಮುಂದುವರಿಸಿದ. ದುರ್ಯೋಧನನ ಬಗ್ಗೆ ಸ್ನೇಹವನ್ನು ತಾನು ಹೊಂದಿದ್ದರೂ, ಕೃಷ್ಣನ ಭಯದಿಂದಾಗಿ ಬಲರಾಮ ಅವನಿಗೆ ಸಹಾಯ ನೀಡಲು ಒಪ್ಪಿಕೊಳ್ಳಲಿಲ್ಲ. ಉಪಪ್ಲಾವ್ಯದಲ್ಲಿ ಆ ಮೊದಲು ನಡೆದ ಸಭೆಯಲ್ಲಿ ದುರ್ಯೋಧನನ ಪಕ್ಷವನ್ನು ವಹಿಸಿ, ಬಲರಾಮ ಮಾತನಾಡಿದ್ದಾಗ, ಸಾತ್ಯಕಿ ಕೃಷ್ಣನೆದುರಿಗೆ ಅವನನ್ನು ತೀವ್ರವಾಗಿ ಪ್ರತಿಭಟಿಸಿದ್ದ. ಅದರಿಂದಾಗಿ ಬಲರಾಮ ಹಾಗೆ ಮಾಡಿದ. ಅನಂತರ ಕೃತವರ್ಮನನ್ನು ಕರೆದುಕೊಂಡು ದುರ್ಯೋಧನನು ಹಸ್ತಿನಾವತಿಗೆ ಹಿಂದಿರುಗಿದ.

ದುರ್ಯೋಧನನ ಸಹಾಯಕ್ಕೆ ಒಟ್ಟುಗೂಡಿದ ನಾನಾದೇಶದ ರಾಜರ ಸೇನೆಯ ಸಂಖ್ಯೆ ಒಟ್ಟು ಹನ್ನೊಂದು ಅಕ್ಷೋಹಿಣಿ. ಪಾಂಡವರಲ್ಲಿ ಸೇರಿದ ಸಂಖ್ಯೆ ಏಳು ಅಕ್ಷೋಹಿಣಿಯಾಯಿತು; ಅದರಲ್ಲಿ ವಿರಾಟ, ದ್ರುಪದ, ಕೇಕಯ, ಧೃಷ್ಟಕೇತು, ಜರಾಸಂಧನ ಪುತ್ರನಾದ ಸಹದೇವ, ಕಾಶಿರಾಜ, ಪುರುಜಿತ್, ಕುಂತಿಭೋಜ, ಚೇಕಿತಾನ, ಸಾತ್ಯಕಿ ಇವರೆಲ್ಲ ತಮ್ಮ ತಮ್ಮ ಸೇನೆಗಳೊಂದಿಗೆ ಸೇರಿದ್ದರು. ಇವರೆಲ್ಲ ದೇವಪಕ್ಷದವರು.

ಅವಂತೀದೇಶದ ವಿಂದಾನುವಿಂದರು , ಜಯತ್ಸೇನ, ಇತರ ಕೇಕಯರು, ಕ್ಷೇಮಧೂರ್ತಿ, ದಂಡಧರ, ಕಲಿಂಗ, ಅಂಬಷ್ಠ , ಶ್ರುತಾಯು, ಅಚ್ಯುತಾಯು, ಬೃಹದ್ಬಲ, ಸುದಕ್ಷಿಣ, ಶ್ರುತಾಯುಧ, ಸೈಂಧವ, ಅಲಂಬುಸ, ಅಲಂಬಲ, ಅಲಾಯುಧ ಇವರೆಲ್ಲ ದೈತ್ಯರು ದುರ್ಯೋಧನನ

---

೧. ಕೃಷ್ಣನು ನಿರಾಯುಧನಾದ ಒಬ್ಬ; ಅವನ ಪುತ್ರರು ಸಾಯುಧರಾದ ಹತ್ತುಲಕ್ಷ ಜನರು. ಒಬ್ಬ ಕೃಷ್ಣನಿಗಿಂತ ಹತ್ತುಲಕ್ಷ ಜನ ಆಯುಧಪಾಣಿಗಳು ಮಿಗಿಲು ಎಂಬ ಅವಿವೇಕ ದುರ್ಯೋಧನನದು. ತಾಮಸರ ರೀತಿ ಇಂತಹುದು. ಅವರಿಗೆ ಒಬ್ಬ ದೇವರಿಗಿಂತ ಧನಕನಕಾದಿ ಇತರ ಬಗೆಬಗೆಯ ವಸ್ತುಗಳೇ ಹೆಚ್ಚಿನವುಗಳಾಗಿ ತೋರುವವು. ಅದೇ ಅವರ ಅಧಃಪತನಕ್ಕೆ ಪ್ರಮುಖಕಾರಣವಾಗುವುದು. ಸತ್ವಕ್ಕಿಂತ ಸಂಖ್ಯೆಯತ್ತ ಗಮನನೀಡುವ ಜನರೆಲ್ಲಾ ಈ ಬಗೆಯಲ್ಲಿ ತಾಮಸರೇ ಆಗಿರುವರು. ಐವರು ಪಾಂಡವರ ಸಾಧನೆಗೆ ನೂರುಜನ ಕೌರವರು ಸರ್ವಥಾ ಸಾಟಿಯಾಗಲಿಲ್ಲ ಎಂಬಲ್ಲೂ ಈ ಮಾತಿನ ತಥ್ಯ ಅಡಗಿದೆ : ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ (ದ್ವಾದಶಸ್ತೋತ್ರ) ಎಂಬ ಮಧ್ವವಾಣಿಯಲ್ಲಿ ಇದರ ತತ್ತ್ವ ಅಡಗಿದೆ.

ಪಕ್ಷಕ್ಕೆ ಸೇರಿದರು. ದುರ್ಯೋಧನನ ಆಹ್ವಾನದಂತೆ ಭಗದತ್ತನೂ ಸಹ ಅವನನ್ನು ಸೇರಿಕೊಂಡ. ಮಗ ಮತ್ತು ಮೊಮ್ಮಕ್ಕಳೊಂದಿಗೆ ಬಾಹ್ಲೀಕನೂ, ಭೀಷ್ಮದ್ರೋಣಕೃಪರೂ, ಧೃತರಾಷ್ಟ್ರನನ್ನು ಪ್ರೀತಿಪಡಿಸಲೆಂದು ಅವನ ಮಕ್ಕಳ ಕಡೆಗೆ ಸೇರಿದರು. ಪಾಂಡ್ಯದೇಶದ ವೀರಸೇನನು ಪಾಂಡವರ ಪಕ್ಷ ವಹಿಸಿದ.

## ದುರ್ಯೋಧನನ ಕುತಂತ್ರಕ್ಕೆ ಬಲಿಯಾದ ಶಲ್ಯ

ಶಲ್ಯನೂ ಸಹ ಪಾಂಡವರನ್ನು ಸೇರಲೆಂದೇ ಸೈನ್ಯಸಮೇತವಾಗಿ ಹೊರಟಿದ್ದ. ಅದನ್ನು ತಿಳಿದ ದುರ್ಯೋಧನನು ಮಾರ್ಗದುದ್ದಕ್ಕೂ ಎಲ್ಲ ಭೋಗಗಳಿಂದ ತುಂಬಿದ ಉತ್ತಮ ಸಭೆಗಳನ್ನು ಅವನಿಗೆ ಅನುಕೂಲಕರವಾಗುವ ರೀತಿಯಲ್ಲಿ ನಿರ್ಮಿಸಿದ. ಅದನ್ನೆಲ್ಲ ಧರ್ಮರಾಜನೇ ಮಾಡಿರಬಹುದೆಂದು ಊಹಿಸಿದ ಶಲ್ಯನು, ''ಇದನ್ನೆಲ್ಲ ಮಾಡಿಸಿದವನಿಗೆ ಅವನು ಬಯಸಿದ್ದನ್ನು ನೀಡುವೆ' ಎಂದು ಘೋಷಿಸಿದ. ಅಡಗಿಕೊಂಡಿದ್ದ ದುರ್ಯೋಧನ ಕೂಡಲೇ ಹೊರಗೆ ಕಾಣಿಸಿಕೊಂಡು – ''ನಿನ್ನ ಮಾತನ್ನು ಉಳಿಸಿಕೋ. ನನಗೆ ಯುದ್ಧದಲ್ಲಿ ನೆರವಾಗು'' ಎಂದು ನಿರ್ಬಂಧಿಸಿದ. ತನ್ನ ಕೀರ್ತಿಯನ್ನು ಉಳಿಸಿಕೊಳ್ಳಲೋಸುಗ ಸತ್ಯಸಂಧನಾದ ಶಲ್ಯನು ಅದಕ್ಕೆ ಸಮ್ಮತಿಸಿದ. ಅನಂತರ ಪಾಂಡವರ ಬಳಿಗೆ ತೆರಳಿ, ವಿಷಯ ತಿಳಿಸಿದ ; ಅವರ ಅನುಮತಿ ಪಡೆದು ಅರ್ಜುನನಿಗಾಗಿ ಕರ್ಣನ ತೇಜೋವಧೆಯನ್ನು ಮಾಡುವಂತೆ ಅವರು ಕೇಳಿದ ಮಾತಿಗೆ ಒಪ್ಪಿಕೊಂಡು, ಕೌರವರ ಬಳಿ ಸೇರಿಕೊಂಡ.

ಧೃತರಾಷ್ಟ್ರನು ಸಂಜಯನನ್ನು ಪಾಂಡವರ ಬಳಿಗೆ ರಾಯಭಾರಿಯಾಗಿ ಶಾಂತಿಗಾಗಿ ಕಳುಹಿಸಿ – ''ಯುದ್ಧವು ಅಧರ್ಮ'' ಎಂದು ಹೇಳಿಸಿದ. ವನವಾಸದಲ್ಲಿದ್ದಾಗ ಹಠವಾದದ ಪ್ರಸಂಗದಲ್ಲಿ ಭೀಮದ್ರೌಪದಿಯರು ತನಗೆ ಹೇಳಿದ್ದ ಮಾತನ್ನೇ ಧರ್ಮರಾಜ ಸಂಜಯನಿಗೆ ತಿಳಿಸಿ, ಅವನ ಬಾಯನ್ನು ಕಟ್ಟಿಸಿದ. ಕೃಷ್ಣನೂ ಸಹ ಧರ್ಮರಾಜನ ರೀತಿ ನ್ಯಾಯವಾದುದೆಂದು ಸಮರ್ಥಿಸಲು ಸಂಜಯನು ಸಂಪೂರ್ಣವಾಗಿ ನಿರುತ್ತರನಾಗಬೇಕಾಯಿತು. ಅವನು ಕೃಷ್ಣ ಹಾಗೂ ಪಾಂಡವರನ್ನು ವಂದಿಸಿ, ಧೃತರಾಷ್ಟ್ರನ ಬಳಿಗೆ ಹಿಂದಿರುಗಿ, ಅವನನ್ನು ಬಹಳವಾಗಿ ನಿಂದಿಸಿ ತನ್ನ ಮನೆಯನ್ನು ಸೇರಿಕೊಂಡ.

## ವಿದುರನೀತಿ

ಸಂಜಯನ ನಿಂದೆಯ ಮಾತುಗಳಿಂದ ಕಳವಳಗೊಂಡ ಧೃತರಾಷ್ಟ್ರನು ರಾತ್ರಿಯಲ್ಲಿ ವಿದುರನಿಗೆ ಹೇಳಿ ಕಳುಹಿಸಿ, ಅವನ ಮುಂದೆ ತನ್ನ ಕಳವಳವನ್ನು ತೋಡಿಕೊಂಡ. ವಿದುರನೂ ಸಹ ಪಾಂಡವರಿಗೆ ಅವರ ಪಾಲಿನ ರಾಜ್ಯವನ್ನು ಒಪ್ಪಿಸಲು ಆಗ್ರಹ ಪಡಿಸಿದ. ಹಾಗೆ ಮಾಡುವುದು ಪಾರತ್ರಿಕಸುಖದೊಂದಿಗೆ ಐಹಿಕಸುಖಕ್ಕೂ ಸಹ ಕಾರಣವೆಂದೂ ತಿಳಿಯಹೇಳಿದ. ಇಲ್ಲದಿದ್ದಲ್ಲಿ ಧರ್ಮವನ್ನು ಮೀರುವುದರ ಜೊತೆಗೆ ಮಕ್ಕಳೂ ಇಲ್ಲವಾಗುವರೆಂದು ಬುದ್ಧಿ ಹೇಳಿದ. ಧೃತರಾಷ್ಟ್ರನು ಮಾತ್ರ ಅದಕ್ಕೆ ಒಪ್ಪದೆ ಜ್ಞಾನದಿಂದ ಪಾಪ ಕಳೆದುಕೊಳ್ಳುವ ವಿಚಾರ–

ವನ್ನು ಮಾಡುತ್ತಾ , ವಿಷ್ಣುವಿನ ಸ್ವರೂಪವನ್ನು ತಿಳಿಸಲು ಕೇಳಿಕೊಳ್ಳಲು, ವಿದುರನು ಸನಾತನ (ಸನತ್ಸುಜಾತ)ನ್ನು ಸ್ಮರಿಸಿದ; ಅವರು ಬಂದು, ವಿಷ್ಣುವಿನ ಸ್ವರೂಪವನ್ನು ತಿಳಿಸಿಕೊಟ್ಟು ಕಪಟಿಗಳಾದವರಿಗೆ ಎಂದೂ ಸದ್ಗತಿಯು ಸರ್ವಥಾ ಲಭಿಸದು ಎಂದು ತಿಳಿಸಿದರು. ಬೆಳಿಗ್ಗೆ ಸಂಜಯನು, ಕೌರವರ ಸಭೆಯಲ್ಲಿ , ಧೃತರಾಷ್ಟ್ರನಿಗೆ ಪಾಂಡವರು ಹೇಳಿದ್ದನ್ನೆಲ್ಲ ನಿವೇದಿಸಿದ. ಅದನ್ನೆಲ್ಲ ಕೇಳಿ ಧೃತರಾಷ್ಟ್ರನು ಭೀತನಾದರೂ, ಮಕ್ಕಳ ಮೇಲಿನ ವ್ಯಾಮೋಹದಿಂದಾಗಿ ಪಾಂಡವರಿಗೆ ರಾಜ್ಯವನ್ನು ಒಪ್ಪಿಸಲಿಲ್ಲ.

## ರಾಯಭಾರಕ್ಕಾಗಿ ಶ್ರೀಕೃಷ್ಣ

ಧರ್ಮರಾಜನು ಸಂಜಯನನ್ನು ಕಳಿಸಿಕೊಡುವಾಗ, ''ನಮ್ಮ ತಂದೆ ಧೃತರಾಷ್ಟ್ರನು ರಾಜ್ಯ-ವನ್ನು ಕೊಡಲು ಒಪ್ಪುವುದಾದಲ್ಲಿ , ನೀನಾಗಲೀ, ವಿದುರನಾಗಲೀ ಇಲ್ಲಿಗೆ ಬರತಕ್ಕದ್ದು ; ಇಲ್ಲವಾದಲ್ಲಿ ಯಾರೂ ಬರಬೇಕಾದ್ದಿಲ್ಲ'' ಎಂದು ಹೇಳಿದ್ದ. ಈಗ ಅವರಿಬ್ಬರೂ ಬರದಿದ್ದುದನ್ನು ಕಂಡು ಧರ್ಮರಾಜನು ಕೃಷ್ಣನ ನೇತೃತ್ವದಲ್ಲಿ ಮಂತ್ರಾಲೋಚನೆಯನ್ನು ನಡೆಸಿದ. ಕೃಷ್ಣನು ನುಡಿದ – ''ನಾನೇ ಹೋಗುವೆ. ಸಭೆಯಲ್ಲಿ ಋಷಿಗಳ ಸನ್ನಿಧಿಯಲ್ಲಿ ಯೋಗ್ಯವಾದ ಹಿತನುಡಿ-ಗಳನ್ನು ಅವನಿಗೆ ತಿಳಿಸುವೆ. ಅದಕ್ಕೆ ಅವನು ಒಪ್ಪಿಕೊಳ್ಳದಿದ್ದಲ್ಲಿ ಎಲ್ಲ ಜನರ ದೃಷ್ಟಿಯಲ್ಲೂ , ಸರ್ವಧರ್ಮಗಳಿಗೂ ವಿರೋಧಿಯಾದ ಆ ದುರ್ಯೋಧನನು ವಧ್ಯನೇ ಆಗುವನು.''

ಆಗ ತನ್ನಿಂದಲೇ ಪಾಂಡವ-ಕೌರವರಲ್ಲಿ ವೈರ ಉಂಟಾಯಿತೆಂಬ ಲೋಕರೂಢಿಯನ್ನು ತೆಗೆಯಲೋಸುಗವೂ, ಲೋಕಸಂರಕ್ಷಣೆಗಾಗಿಯೂ, ಭೀಮಸೇನನು ನುಡಿದ – ''ನನ್ನ ನಿಮಿತ್ತವಾಗಿ ಕುಲನಾಶವಾಗದಿರಲಿ. ನಾವೆಲ್ಲ ಧೃತರಾಷ್ಟ್ರನ ಕುಲವನ್ನು ಉಳಿಸುವ ದೃಷ್ಟಿಯಿಂದ ತಗ್ಗಿ ನಡೆಯಲು ಹಿಂಜರಿಯೆವು.'' ಭೀಮಸೇನನಿಗೆ ಕೌರವರನ್ನೆಲ್ಲ ಸಂಹರಿಸುವ ದೃಢಸಂಕಲ್ಪ-ವಿದ್ದರೂ, ಲೋಕನೀತಿಗಾಗಿ ಹಾಗೆ ಹೇಳುತ್ತಿರುವನೆಂಬುದನ್ನು ತಿಳಿದು ಕೃಷ್ಣನೂ ಸಹ ಲೋಕ-ನೀತಿಗೆಂದೇ ಅವರ ವಧೆ ಧರ್ಮವೆಂದೇ ಲೋಕಕ್ಕೆ ತಿಳಿಸುವ ಉದ್ದೇಶದಿಂದ, ಭೀಮನನ್ನು ಆಕ್ಷೇಪಿಸುವ ರೀತಿಯಲ್ಲಿ, ಅವನನ್ನು ಯುದ್ಧಕ್ಕೇ ಪ್ರೇರಿಸುವ ರೀತಿಯಲ್ಲಿ ಮಾತನಾಡಿದ.

ಕೃಷ್ಣನ ಅಭಿಪ್ರಾಯವನ್ನು ಸರಿಯಾಗಿಯೇ ತಿಳಿದಿದ್ದ ಭೀಮಸೇನನು, ಸಭೆಯ ಮಧ್ಯದಲ್ಲಿ ತನ್ನ ಬಲ ಎಷ್ಟೆಂಬುದನ್ನು ಸ್ಪಷ್ಟವಾಗಿ ನಿರೂಪಿಸಲು, ಕೃಷ್ಣನೂ ಸಹ ಅದನ್ನು ಸಮರ್ಥಿಸುತ್ತ ಸಭೆಗೆ ಭೀಮಬಲವನ್ನು ಪ್ರಕಟಪಡಿಸಿದ. ಹೀಗೆ ಎಂದೂ ಏಕಮನಸ್ಕರೇ ಆದ ಭೀಮಕೃಷ್ಣರ ಸಂಭಾಷಣೆಯಿಂದ, ಲೋಕಕ್ಕೆ ಭೀಮನ ಅಪಾರ ಗುಣಗಳೂ, ಕೌರವರು ವಧಾರ್ಹರೇ ಎಂಬ ವಿಷಯವೂ ತಿಳಿಯುವಂತಾಯಿತು. ಅನಂತರ ಕೃಪಾಳುವಾದ ಅರ್ಜುನನೂ ಸಹ ಸಂಧಿಯ ಮಾತೆತ್ತಲು, ಕೃಷ್ಣನು ನೀತಿಪೂರ್ವಕವೂ, ಸಯುಕ್ತಿಕವೂ ಆದ ಮಾತುಗಳಿಂದ ಸಮಾಧಾನ-ಪಡಿಸಿದ. ಸಹದೇವನು ಮನುಷ್ಯಬುದ್ಧಿಯಿಂದ ನೀತಿಯುಕ್ತವೆಂಬಂತೆ ತೋರುವ ಮಾತು-ಗಳನ್ನಾಡಿ ತನ್ನ ಶೌರ್ಯವನ್ನು ಪ್ರಕಟಿಸುವ ದೃಷ್ಟಿಯಿಂದ, ''ಯುದ್ಧವನ್ನೇ ಏರ್ಪಡಿಸು'' ಎಂದ. ಸಾತ್ಯಕಿಯೂ ಸಹದೇವನ ಮಾತನ್ನು ಅನುಮೋದಿಸಿದ. ''ಕಳ್ಳರನ್ನು ಕೊಲ್ಲುವುದೇ ಕ್ಷತ್ರಿಯರ

ಹಿರಿಯ ಧರ್ಮ. ಆದ್ದರಿಂದ ಕೌರವರೊಂದಿಗೆ ಸಂಧಿ ಬೇಡ'' ಎಂದೇ ದ್ರೌಪದಿಯು ಕೃಷ್ಣನಿಗೆ ನುಡಿದಳು. ಕೃಷ್ಣನು ಅದಕ್ಕೆ ಸಮ್ಮತಿಸಿ, ಅಲ್ಲಿಂದ ಹೊರಟ. ಸಾತ್ಯಕಿಯೊಂದಿಗೆ ದಿವ್ಯರಥದಲ್ಲಿ ಹೊರಟ ಕೃಷ್ಣನನ್ನು ಪಾಂಡವರೆಲ್ಲರೂ ತುಂಬಾ ದೂರದವರೆಗೆ ಹಿಂಬಾಲಿಸಿ, ಬೀಳ್ಕೊಟ್ಟರು; ಕೃಷ್ಣನನ್ನು ವಿಪ್ರಶ್ರೇಷ್ಠರು ಹಿಂಬಾಲಿಸಿದರು.

## ಕೌರವರ ಸಭೆಯಲ್ಲಿ ಶ್ರೀಕೃಷ್ಣ

ತಾವೇ ಕೃಷ್ಣನಾದರೂ, ಪರಶುರಾಮ ಮತ್ತು ವೇದವ್ಯಾಸರೂ ಸಹ ಕೃಷ್ಣನೊಂದಿಗೆ, ಮುನಿಗಳೊಂದಿಗೆ ಹಿಂಬಾಲಿಸಿ ಹೊರಟರು. ಆ ಇಬ್ಬರನ್ನು ಬಿಟ್ಟು ಬೇರಾರು ತಾನೇ ಕೃಷ್ಣನ ಮಾತುಗಳ ಗುಣಗಳನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಾರು? ಎಲ್ಲ ರಾಷ್ಟ್ರವಾಸಿ-ಗಳಿಂದ ವಂದಿಸಲ್ಪಡುತ್ತಲೂ, ಬ್ರಹ್ಮಾದಿದೇವತೆಗಳಿಂದ ಪುಷ್ಪವೃಷ್ಟಿಯಿಂದ ಸ್ತುತಿಸಲ್ಪಡುತ್ತಲೂ ಕೃಷ್ಣನು ಹಸ್ತಿನಾಪುರವನ್ನು ತಲುಪಿದ. ಭೀಷ್ಮ ಮೊದಲಾದವರು ಅವನನ್ನು ಆದರದಿಂದ ಎದುರುಗೊಂಡರು ; ಅವರೊಂದಿಗೆ ಕೃಷ್ಣನು ರಾಜಮಾರ್ಗದಲ್ಲಿ ಸಾಗಿದ. ಜಗದೇಕ-ಸುಂದರನೂ, ಗುಣಸಾಗರನೂ ಆದ ಭಗವಂತನನ್ನು ಕಾಣಲು ಜನರೆಲ್ಲ ಅಲ್ಲಿ ನೆರೆದಿದ್ದರು. ಸಕಲಜನರ ಪೂಜೆಯನ್ನು ಸ್ವೀಕರಿಸುತ್ತಾ ಕೃಷ್ಣನು ಅರಮನೆಯನ್ನು ತಲುಪಿದ. ಭೀಷ್ಮ-ದ್ರೋಣರನ್ನು ಮುಂದಿಟ್ಟುಕೊಂಡು ಧೃತರಾಷ್ಟ್ರನು ಕೃಷ್ಣನನ್ನು ಪೂಜಿಸಿದ. ಸುವರ್ಣಪೀಠದಲ್ಲಿ ಮಂಡಿಸಿದ ಕೃಷ್ಣನ ಶರೀರಕಾಂತಿಯಿಂದ ದಿಕ್ಕುಗಳು ಶೋಭೆಯನ್ನು ಪಡೆದವು. ಅವರೆಲ್ಲರನ್ನು ಉಚಿತವಾದ ರೀತಿಯಲ್ಲಿ ಮಾತನಾಡಿಸಿ ಹೊರಟ ಕೃಷ್ಣನು ಆ ಬಳಿಕ ದುರ್ಯೋಧನನ ಮನೆಗೆ ಹೋದ; ಅವನು ಗುಣವಂತರನ್ನು ದ್ವೇಷಿಸುವವನು ಎಂಬ ಕಾರಣದಿಂದ ಅವನ ಯಾವುದೇ ವಿಧವಾದ ಪೂಜೆಯನ್ನು ಸ್ವೀಕರಿಸದೆ ವಿದುರನ ಮನೆಗೆ ಹೊರಟ ; ಭೀಷ್ಮ ಮೊದಲಾದವರು ಎಷ್ಟೇ ಕೇಳಿಕೊಂಡರೂ ಅವರಾರ ಮನೆಗೂ ಹೋಗಲು ಬಯಸಲಿಲ್ಲ. ಅವರೆಲ್ಲ ದ್ರೌಪದಿ-ಯನ್ನು ಉಪೇಕ್ಷಿಸಿದರು ಎಂಬುದೇ ಅವರ ಮನೆಗೆ ಹೋಗಬಯಸದಿರಲು ಕಾರಣವಾಗಿತ್ತು. ವಿದುರನ ಮನೆಯನ್ನು ಹೊಕ್ಕ ಕೃಷ್ಣನು ಅವನಿಂದ ಭಕ್ತಿಯಿಂದ ಬಹಳವಾಗಿ ಗೌರವಿಸ-ಲ್ಪಡುವವನಾಗಿ, ಅವನ ಅಂತಃಪುರಕ್ಕೂ ನಡೆದ. ವಿದುರನು ತನ್ನ ಸರ್ವಸ್ವವನ್ನೂ ಸಮರ್ಪಿಸಿ, ಕೃಷ್ಣನನ್ನು ಪೂಜಿಸಿದ.

## ಶ್ರೀಕೃಷ್ಣಬಂಧನದ ದುರಾಲೋಚನೆ

ಮಾರನೆಯ ದಿನ ಕೃಷ್ಣನು ದುರ್ಯೋಧನನಿಂದ ಸನ್ಮಾನಿತನಾಗಿ ಕೌರವರ ಸಭೆಯನ್ನು ಪ್ರವೇಶಿಸಿದ ; ಮಣಿಕಾಂಚನಗಳಿಂದ ಅಲಂಕೃತವಾದ ದಿವ್ಯಪೀಠವನ್ನು ಪರತತ್ತ್ವವನ್ನು ತಿಳಿದ ಮುನಿಶ್ರೇಷ್ಠರೊಂದಿಗೆ ಅಲಂಕರಿಸಿದ. ಭೀಷ್ಮಾದಿಗಳಿಂದ ಆದರಿಸಲ್ಪಟ್ಟವನಾಗಿ ಆ ಪುಂಡರೀಕಾಕ್ಷನಾದ ಶ್ರೀಕೃಷ್ಣನು ಸಭೆಗೆ ಉಚಿತವಾದ ಸಲ್ಲಾಪಗಳನ್ನು ನಡೆಸಿ, ಹೀಗೆಂದ – ''ಎಲವೋ ಧೃತರಾಷ್ಟ್ರ ! ನಿನ್ನ ಕುಲದ ಅಭ್ಯುದಯಕ್ಕಾಗಿ, ನಿನ್ನ ಗುಣವಂತನಾದ ಪುತ್ರ

ಧರ್ಮರಾಜನಿಗೆ ಅವನ ರಾಜ್ಯವನ್ನು ಹಿಂದಿರುಗಿಸು. ಆಗ ನಿನ್ನ ಕೀರ್ತಿಯು ಬೆಳೆಯುವುದು. ಧರ್ಮವು ವೃದ್ಧಿಯಾಗುವುದು; ನನ್ನ ಅನುಗ್ರಹವೂ ಸದಾ ಇರುವುದು. ಇಲ್ಲವಾದಲ್ಲಿ ನಿನ್ನ ಪಾಲಿಗೆ ಧರ್ಮಕೀರ್ತಿಗಳು ಇಲ್ಲವಾಗುವವಲ್ಲದೆ, ನನ್ನ ವಿರೋಧವೂ ಉಂಟಾಗುವುದು.'' ಧೃತರಾಷ್ಟ್ರನು ''ನನ್ನ ಮಾತನ್ನು ಕೇಳದ ಮಗನಿಗೆ ದಯವಿಟ್ಟು ನೀನೇ ವಿವೇಕ ಹೇಳಬೇಕು'' ಎಂದು ಬೇಡಿದ.

ಕೃಷ್ಣನಿಂದ ಬೋಧಿಸಲ್ಪಟ್ಟರೂ ಪಾಪಾಸಕ್ತನಾದ ದುರ್ಯೋಧನನು, ತಮ್ಮಂದಿರು ಹಾಗೂ ಅಮಾತ್ಯರೊಂದಿಗೆ ಕೂಡಿಕೊಂಡು ಸರ್ವಸಮರ್ಥನಾದ ಕೃಷ್ಣನನ್ನು ಬಂಧಿಸುವ ಯೋಜನೆಯನ್ನು ಹೂಡಿದ. ಕೃಷ್ಣನನ್ನು ಬಂಧಿಸಲು ಮನಸ್ಸು ಕೊಟ್ಟ ಪ್ರತಿಯೊಬ್ಬನೂ ದೇವವಿರೋಧಿಯಾಗಿದ್ದ. ಆದ್ದರಿಂದಲೇ ವಿಕರ್ಣ ಮೊದಲಾದವರೆಲ್ಲ ಸಾವನ್ನು ಕಾಣಬೇಕಾಯಿತು. ಮಾತ್ರವಲ್ಲದೆ ಅವರಾರಿಗೂ ಉತ್ತಮಗತಿಯೂ ದೊರೆಯಲಿಲ್ಲ. ಕರ್ಣನು ದೇವಾಂಶನೇ ಆದರೂ, ದುರ್ಯೋಧನನಿಗೋಸ್ಕರ ಅಂತಹ ವಿಚಾರದಲ್ಲಿ ತಲೆಹಾಕಿದ್ದ; ಸ್ವಭಾವತಃ ಅವನು ಕೆಟ್ಟವನಾಗಿರಲಿಲ್ಲ. ಆದ್ದರಿಂದಲೇ ಅವನಿಗೆ ಉತ್ತಮಗತಿಯೇ ಲಭಿಸಿತು. ಅಲ್ಲಿ ಕೃಷ್ಣನಿಗೆ ಅನುಕೂಲರಾಗಿದ್ದವರೆಲ್ಲ ಉತ್ತಮ ಜೀವರೇ ಆಗಿದ್ದರು.

## ವಿಶ್ವರೂಪಪ್ರದರ್ಶನ

ಎಲ್ಲ ಋಷಿಗಳು, ಪರಶುರಾಮರು, ವೇದವ್ಯಾಸರು ಹಾಗೂ ಕೃಷ್ಣ ಎಂಬ ಭಗವಂತನ ಮೂರುರೂಪಗಳು, ತಂದೆತಾಯಿಗಳು ಹಾಗೂ ಭೀಷ್ಮಾದಿಗಳು ಎಷ್ಟೇ ಹೇಳಿದರೂ ಅದಕ್ಕೆ ಕಿವಿಗೊಡದ ದುರ್ಯೋಧನನು ಕೃಷ್ಣನನ್ನು ಬಂಧಿಸುವ ಯೋಜನೆಗೆ ಕೈ ಹಾಕಿದ. ಸಾತ್ಯಕಿ ಮತ್ತು ಕೃತವರ್ಮ ಇಬ್ಬರಿಗೂ ದುರ್ಯೋಧನನ ಕೆಟ್ಟ ವಿಚಾರ ತಿಳಿಯಿತು. ಕೃತವರ್ಮನನ್ನು ನಿಲ್ಲಿಸಿ, ಸಾತ್ಯಕಿಯು ಏಕಾಂತದಲ್ಲಿ ಕೃಷ್ಣನನ್ನು ಕಂಡು, ದುರ್ಯೋಧನನ ಯೋಜನೆಯನ್ನು ತಿಳಿಸಿದ. ಸ್ವತಃ ಸರ್ವಜ್ಞನಾದ ಕೃಷ್ಣನು, ಸಾತ್ಯಕಿಯ ಮುಖದಿಂದಲೂ ಅದನ್ನು ಕೇಳಿ, ಧೃತರಾಷ್ಟ್ರನನ್ನು ಕುರಿತು ''ನಾನು ಎಂತಹವನೆಂಬುದನ್ನು ನೋಡು'' ಎಂದ. ಆಗ ಧೃತರಾಷ್ಟ್ರನು ತನ್ನ ಮಗನನ್ನು ಸಭೆಗೆ ಕರೆಸಿದ. ಕೃಷ್ಣನು ಸರ್ವತ್ರ ವ್ಯಾಪ್ತವೂ, ಷಡ್ಗುಣಪೂರ್ಣವೂ ಆದ ತನ್ನ ವಿಶ್ವರೂಪವನ್ನು ಆ ಸಮಯದಲ್ಲಿ ತೋರಿಸಿದ. ಪ್ರಳಯಕಾಲದ ಅಸಂಖ್ಯಸೂರ್ಯರ ಕಾಂತಿಯನ್ನೂ ಮೀರುತ್ತಿದ್ದ, ಜಗತ್ತನ್ನೆಲ್ಲ ವ್ಯಾಪಿಸಿದ, ಶಾಶ್ವತವೂ, ಅಪ್ರಮೇಯವೂ ಆದ ಆ ರೂಪವನ್ನು ಕಾಣುತ್ತಲೇ, ಅದರ ಪ್ರಕಾಶಕ್ಕೆ ಪಾಪಿಷ್ಠರಾದ ದುರ್ಯೋಧನಾದಿಗಳು ಕಣ್ಣುಗಳನ್ನು ಮುಚ್ಚಿಕೊಂಡರು. ಧೃತರಾಷ್ಟ್ರನಿಗೆ ದಿವ್ಯದೃಷ್ಟಿ ಉಂಟಾಗಿ ಕೃಷ್ಣನ ವಿಶ್ವರೂಪವನ್ನು ಕಾಣುವ ಯೋಗ ಉಂಟಾಯಿತು. ಮತ್ತೆ ತನ್ನ ರೂಪವನ್ನು ಮರೆ ಮಾಡಿದ ಕೃಷ್ಣನು, ಧೃತರಾಷ್ಟ್ರನ ಪ್ರಾರ್ಥನೆಯಂತೆ ಅವನ ಕಣ್ಣುಗಳನ್ನು ಮತ್ತೆ ಕಾಣದಾಗಿಸಿದ. ಕೃಷ್ಣನ ಈ ಎಲ್ಲ ಕಾರ್ಯದಿಂದ ದುರ್ಯೋಧನ ಮತ್ತು ಅವನ ಅನುಯಾಯಿಗಳೆಲ್ಲ ಪರಮಪಾಪಿಗಳು ಎಂಬ ಅಂಶ ಲೋಕಕ್ಕೆ ದೃಢಪಟ್ಟಿತು. ಅನಂತಶಕ್ತಿಯೂ, ಪುರುಷೋತ್ತಮನೂ ಆದ ಕೃಷ್ಣನು, ತನಗೆ ದುರ್ಯೋಧನನ

ಮನಸ್ಸನ್ನು ತಿದ್ದಲು ಸಾಧ್ಯವೇ ಇದ್ದರೂ, ಅಂಧಂತಮಸ್ಸಿಗೆ ಬೀಳಿಸುವ ಉದ್ದೇಶದಿಂದ, ಅವನನ್ನು ತನ್ನ ಮಾತನ್ನು ಕೇಳುವಂತೆ ಮಾಡಲಿಲ್ಲ. ತನ್ನನ್ನೂ ತನ್ನ ಭಕ್ತರನ್ನೂ ದ್ವೇಷಿಸುವವರಿಗೆ ಪರಮಾತ್ಮ ಹೇಗೆ ತಾನೇ ಸದ್ಬುದ್ಧಿಯನ್ನು ಕರುಣಿಸಿಯಾನು ?

## ಕರ್ಣನಿಗೆ ಕೃಷ್ಣನ ಹಿತೋಕ್ತಿ

ಕೃಷ್ಣನು ಮತ್ತೆ ಕುಂತಿಯ ಮನೆಗೆ ಹೋಗಿ, ಅವಳು ಧರ್ಮರಾಜನಿಗೆ ಹೇಳಿದ ಸಂದೇಶವನ್ನು ಕೇಳಿಕೊಂಡು, ಕರ್ಣನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟ. ಸ್ವಲ್ಪ ದೂರ ಕರೆದುಕೊಂಡು ಹೋಗಿ, ಕರ್ಣನಿಗೆ ಅವನ ಹುಟ್ಟಿನ ವಿಷಯವನ್ನು ತಿಳಿಸಿ, "ನೀನು ಪಾಂಡವರನ್ನು ಒಡಗೂಡು" ಎಂದು ವಿವೇಕ ಹೇಳಿದ. ಆದರೆ ಧೃತರಾಷ್ಟ್ರಪುತ್ರರಿಂದ ಸನ್ಮಾನ ಪಡೆದಿದ್ದ ಕರ್ಣನು ಅದಕ್ಕೆ ಒಪ್ಪಲಿಲ್ಲ. ಕೃಷ್ಣ ಅವನನ್ನು ಬೀಳ್ಕೊಟ್ಟ; ಅನಂತರ ಅಶ್ವತ್ಥಾಮರಿಗೂ ಪಾಂಡವರೊಂದಿಗೆ ಸ್ನೇಹದಿಂದಿರಲು ಉಪದೇಶಿಸಿದ. ತಂದೆಯು ಜೀವಂತವಿರುವವರೆಗೆ ಪಾಂಡವರೊಂದಿಗೆ ಸ್ನೇಹದಿಂದಿರುವುದಾಗಿ ಅಶ್ವತ್ಥಾಮರು ನುಡಿದರು[೧]. ಆ ಮುಂಚೆಯೇ ಕೌರವರ ಬಳಿಯಿಂದ ಹೊರಟು ಬಂದಿದ್ದ ಕೃಷ್ಣನು, ಅನಂತರ ಪಾಂಡವರ ಬಳಿಗೆ ಹೊರಟ. ಕುಂತಿಯೂ ಸಹ ನೀನು ನನ್ನ ಮಗನೆಂದೂ, ಪಾಂಡವರೊಂದಿಗೆ ಸೇರಬೇಕೆಂದು ಕೇಳಿಕೊಂಡಾಗ, [೨]ಕರ್ಣನು ಅದಕ್ಕೆ ಒಪ್ಪದೆ, ಅರ್ಜುನನನ್ನು ಬಿಟ್ಟು ಉಳಿದವರನ್ನು ಎಂದೂ ಕೊಲ್ಲಲಾರೆ ಎಂದು ಅವಳಿಗೆ ವಚನವಿತ್ತ.

ಅನಂತರ ಯುದ್ಧಮಾಡಲು ಸಿದ್ಧರಾದ ಕೌರವರು ಹಾಗೂ ಕೃಷ್ಣನೊಂದಿಗೆ ಪಾಂಡವರು ಕುರುಕ್ಷೇತ್ರವನ್ನು ಸೇರಿದರು. ಕೃಷ್ಣನಲ್ಲಿಯೇ ಮನಸ್ಸನ್ನಿರಿಸಿದ ಪಾಂಡವರು ಅಲ್ಲಿ ತಮ್ಮ ಶಿಬಿರಗಳನ್ನು ನಿರ್ಮಿಸಿಕೊಂಡರು.

★★★★★

---

೧. ಮಹಾಭಾರತದ ಪ್ರಚಲಿತ ಕೃತಿಗಳಲ್ಲಿ ಈ ಪ್ರಸಂಗ ಕಂಡುಬರುವುದಿಲ್ಲ ; ಆದರೆ, ಪ್ರಾಚೀನಪ್ರತಿಗಳಲ್ಲಿ ಇದರ ಉಲ್ಲೇಖವಿತ್ತು ಎಂಬುದು ಪಂಪಭಾರತದಲ್ಲೂ ಕಂಡುಬರುವ ಈ ಕೆಳಗಿನ ಮಾತುಗಳಿಂದ ಸ್ಫುಟಪಡುವುದು :
ತ್ರೈಲೋಕ್ಯಗುರು ಗುರುತನೂಜನಂ ಕೈಯ್ಯಂ ಪಿಡಿದರಮನೆಯಂ
ಪೊರಮಟ್ಟು ಕಪಟಪ್ರಪಂಚದಿಂದಾತನುಮಂ ತನಗೆ ಮಾಡಿ – ವಿಕ್ರಮಾರ್ಜುನವಿಜಯ(೯/೬೦)

೨. ಕುಂತಿಯ ಕೋರಿಕೆಯಂತೆ ಕರ್ಣ 'ತೊಟ್ಟ ಬಾಣವನ್ನು ತೊಡಲಾರೆ' ಎಂಬ ಮತ್ತೊಂದು ವಚನವನ್ನು ನೀಡಿದ ವಿವರ ಕುಮಾರವ್ಯಾಸಭಾರತದಲ್ಲಿ ಕಂಡುಬರುವುದು : ಹೋದ ಬಾಣವ ಮರಳಿ ತೊಡದಿರು ಮಾದುಕಳೆ ವೈರವ ನೆನೆಲ್ಕೆ ಹಸಾದವೆಂದನು ಬೀಳುಕೊಟ್ಟನು ಬಂದನರಮನೆಗೆ (ಉದ್ಯೋಗಪರ್ವ,೧೦/೩೫). ಆದರೆ ಮೂಲಮಹಾಭಾರತದಲ್ಲಾಗಲೀ, ತಾತ್ಪರ್ಯನಿರ್ಣಯದಲ್ಲಾಗಲೀ ಇದರ ಉಲ್ಲೇಖವಿಲ್ಲ. ಅದರಂತೆ ಭಾರತಮಂಜರೀ, ಚಂಪೂಭಾರತ ಮೊದಲಾದ ಪ್ರಾಚೀನಕೃತಿಗಳಲ್ಲೂ ಕಂಡುಬರುವುದಿಲ್ಲ. ಆದ್ದರಿಂದ ಅದು ಆ ಕವಿಗಳ ಕೇವಲ ಕಲ್ಪನೆ ಮಾತ್ರ ಎಂದು ದೃಢಪಡುವುದು.

# ಭೀಷ್ಮ ಪರ್ವ

## ಗೀತೋಪದೇಶ - ಮೊದಲದಿನದ ಯುದ್ಧ

ಸಾಗರದಂತಿದ್ದ ಆ ಕುರು–ಪಾಂಡವ ಸೇನೆಗಳು ಭೀಮ ಮತ್ತು ಭೀಷ್ಮರ ನೇತೃತ್ವದಲ್ಲಿ ಯುದ್ಧಕ್ಕೆ ಸಿದ್ಧವಾದವು. ಅವುಗಳನ್ನು ಕಂಡು ಅರ್ಜುನನು ಕೃಷ್ಣನನ್ನು ಕುರಿತು – ''ಅಚ್ಯುತ ! ನನ್ನ ರಥವನ್ನು ಈ ಎರಡೂ ಸೇನೆಗಳ ಮಧ್ಯದಲ್ಲಿ ನಿಲ್ಲಿಸು'' ಎಂಬುದಾಗಿ ಕೇಳಿಕೊಂಡ. ಕೃಷ್ಣನು ಹಾಗೆಯೇ ಮಾಡಲು, ಅರ್ಜುನನು ಎರಡೂ ಕಡೆಯೂ ಇದ್ದ ಬಾಂಧವರನ್ನು ಕಂಡ. ಪಾಪ ಬಂದೀತೆಂಬ ಭಯದಿಂದ ಬಿಲ್ಲನ್ನು ಕೆಳಗೆ ಹಾಕಿದ. ಕೃಷ್ಣನು ಉಪದೇಶಿಸಿದ :- ''ದುಷ್ಟ ಸಂಹಾರ ಹಾಗೂ ಧರ್ಮಜ್ಞಾನಗಳ ರಕ್ಷಣೆ ಈ ಎರಡೂ ಕ್ಷತ್ರಿಯನ ಮುಖ್ಯ ಕರ್ತವ್ಯ ; ಅದಕ್ಕೆ ತಪ್ಪಿದಲ್ಲಿ ಅವನಿಗೆ ಅಧೋಗತಿ ತಪ್ಪಿದ್ದಲ್ಲ. ಯಾವುದರಿಂದ ಈ ಎಲ್ಲ ಜಗತ್ತಿನ ಪ್ರವೃತ್ತಿ ನಡೆದಿದೆಯೋ, ಯಾವುದರಿಂದ ಈ ಜಗತ್ತೆಲ್ಲ ವ್ಯಾಪಿಸಲ್ಪಟ್ಟಿದೆಯೋ ಅಂತಹ ಪರಮತತ್ತ್ವವಾದ ಪರಮಾತ್ಮನನ್ನು ತನಗೆ ವಿಹಿತವಾದ ಧರ್ಮವನ್ನು ಆಚರಿಸುತ್ತ ಪೂಜಿಸುವುದರಿಂದ, ಮನುಷ್ಯ ಸಿದ್ಧಿಯನ್ನು ಹೊಂದುವನು. ಬಂಧುಗಳನ್ನು ಕೊಲ್ಲಬೇಕೆಂಬ ಕಾರಣದಿಂದ ನೀನು ದುಃಖಿಸಬೇಕಾಗಿಲ್ಲ ; ಏಕೆಂದರೆ ದೇಹ ಎಂದಿದ್ದರೂ ನಾಶವಾಗಲೇಬೇಕು. ಚೇತನ ಎಂದಿಗೂ ನಾಶವಾಗುವುದೇ ಇಲ್ಲ; ಅಲ್ಲವೇ? ಬ್ರಹ್ಮರುದ್ರಾದಿ ಎಲ್ಲ ದೇವತೆಗಳ (ಕ್ಷರ) ಮತ್ತು ಲಕ್ಷ್ಮಿಯ (ಅಕ್ಷರ) ಸೃಷ್ಟಿ, ಸ್ಥಿತಿ, ನಾಶ, ಅಜ್ಞಾನ, ಬಂಧ, ಮೋಕ್ಷ, ಪ್ರವೃತ್ತಿ, ಪ್ರಕಾಶ, ನಿಯಮನಗಳು ನನ್ನಿಂದಲೇ ಹೊರತು, ಇತರರಿಂದಲ್ಲ. ಸ್ವತಂತ್ರನೂ, ಗುಣಪೂರ್ಣನೂ ಆದ ನನ್ನ ಸೃಷ್ಟ್ಯಾದಿಗಳು ಬೇರಾರಿಂದಲೂ ಆಗಲಾರವು. ಹೀಗೆ ಸಮ ಮತ್ತು ಅಧಿಕ ಯಾರೂ ನನಗಿಲ್ಲದಿರುವುದರಿಂದ ಈ ಎಲ್ಲವೂ ಎಂದೂ ನನ್ನ ವಶವೇ ಆಗಿವೆ. ಇವರೆಲ್ಲರ ನಾಶ ಮೊದಲಾದವುಗಳನ್ನೂ, ಜೀವ ಮೊದಲಾದವುಗಳ ಅಸ್ವಾತಂತ್ರ್ಯವನ್ನು ನನ್ನ ವಶವೆಂದೇ ತಿಳಿ.

ಯುದ್ಧವನ್ನು ಬಿಟ್ಟು ಕೊಡುವಲ್ಲಿ ನಿನಗೆ ಸ್ವಾತಂತ್ರ್ಯವಿಲ್ಲವೆಂಬುದನ್ನು ಮನಗಂಡು ನನ್ನನ್ನು ಸ್ಮರಿಸುತ್ತ ಯುದ್ಧ ಮಾಡು. ಎಲ್ಲ ಕರ್ಮಗಳನ್ನೂ ನನ್ನಲ್ಲಿ ಅರ್ಪಿಸಿ, ನನ್ನನ್ನೇ ಎಲ್ಲರಿಗಿಂತ ಉತ್ತಮನೆಂದು ತಿಳಿದು, ಅನನ್ಯಯೋಗದಿಂದ ಯಾರು ಧ್ಯಾನಿಸುತ್ತ ನನ್ನನ್ನು ಆರಾಧಿಸುವರೋ, ಅವರೆಲ್ಲರನ್ನು ನಾನು ಬಹುಬೇಗನೆ ಮೃತ್ಯುಸಂಸಾರಸಾಗರದಿಂದ ಉದ್ಧರಿಸುವೆನು. ಅವ್ಯಕ್ತರೂಪದ ನನ್ನಿಂದ ಈ ಜಗತ್ತೆಲ್ಲ ವ್ಯಾಪ್ತವಾಗಿದೆ ; ಎಲ್ಲ ಪ್ರಾಣಿಗಳೂ ನನ್ನನ್ನು ಅವಲಂಬಿಸಿವೆ ; ನಾನು ಮಾತ್ರ ಅವುಗಳ ಅಧೀನನಾಗಿಲ್ಲ ; ಪರಿಪೂರ್ಣವೂ, ದೋಷರಹಿತವೂ ಆದ ಎಲ್ಲ ಗುಣಗಳೇ ನನ್ನ ದೇಹ ; ನಾನು ಸರ್ವದಾ ಪ್ರಭು ; ಎಂದೂ ನಾಶವಾಗದ ಮತ್ತು ದೋಷಗಳೇ ಇರದ ಪರಿಶುದ್ಧ ದೇಹ ನನ್ನದು ; ನನಗೆ ಎಂದೂ ನಾಶವಿಲ್ಲ. ''

ಕೃಷ್ಣನ ಮಾತುಗಳನ್ನೆಲ್ಲ ಅರ್ಥಮಾಡಿಕೊಂಡು, ಅರ್ಜುನನು ಪ್ರಾರ್ಥಿಸಿದ : ''ಈಶ ! ನಿನ್ನ ವ್ಯಾಪ್ತಿಯನ್ನು ನನಗೆ ತೋರಿಸು.'' ಅದರಂತೆ ದಿವ್ಯದೃಷ್ಟಿಯನ್ನು ಅರ್ಜುನನಿಗಿತ್ತು , ಶ್ರೀಕೃಷ್ಣ ತನ್ನ ವ್ಯಾಪ್ತವಾದ ವಿಶ್ವರೂಪವನ್ನು ತೋರಿಸಿದ. ಅರ್ಜುನನ ಯೋಗ್ಯತೆಗೆ ನಿಲುಕುವಷ್ಟರ

ಮಟ್ಟಿಗೆ ದೇಶತಃ ಕಾಲತಃ ಎಲ್ಲಾ ಗುಣಗಳಿಂದ ಪೂರ್ಣವಾದ ತನ್ನ ರೂಪವನ್ನು ಭಗವಂತ ತೋರಿಸಿದ. ಅರ್ಜುನನ ಪ್ರಾರ್ಥನೆಯಂತೆ ಕೃಷ್ಣನು ಮತ್ತೆ ತನ್ನ ರೂಪವನ್ನು ಲೋಕಮಾನಕ್ಕೆ ತಕ್ಕಂತೆ ತೋರಿಸುತ್ತ ಅವನಿಗೆ ಬೋಧಿಸಿದ ; ಜ್ಞಾನ, ಜ್ಞೇಯ, ಪ್ರಕೃತಿ ಮೊದಲಾದವುಗಳನ್ನು ವಿವರವಾಗಿ ತಿಳಿಸಿಕೊಟ್ಟ. ಕೃಷ್ಣನ ಉಪದೇಶದಿಂದ ಮರಳಿ ಜ್ಞಾನ ಪಡೆದ ಅರ್ಜುನನು ಬಿಲ್ಲುಬಾಣಗಳನ್ನು ಕೈಗೆತ್ತಿಕೊಂಡ.

## [೧]ಯುದ್ಧದ ಪ್ರಾರಂಭ

ಸೈನ್ಯಗಳು ವ್ಯೂಹರೂಪದಲ್ಲಿ ನಿಂತಮೇಲೆ ಯುದ್ಧ ಪ್ರಾರಂಭವಾಯಿತು. ಭೀಮಸೇನನು ಸಿಂಹನಾದ ಮಾಡುತ್ತ ಕೌರವರ ಸೇನೆಯ ಮೇಲೆ ನುಗ್ಗಿದ. ಅವರೆಲ್ಲರೂ ಭೀಮನನ್ನು ಅಡ್ಡಗಟ್ಟಿ, ಅವನ ತಲೆಯ ಮೇಲೆ ಬಾಣಗಳ ಮಳೆಯನ್ನೇ ಕರೆದರು. ಬಂಧುಗಳು ಹೊಡೆಯ ತೊಡಗಿದಾಗ, ಕೂಡಲೇ ಭರದಿಂದ ಕಾದಕೂಡದು ಎಂಬ ಧರ್ಮವನ್ನು ತೋರಿಸುತ್ತ ಭೀಮಸೇನನು ಅವರನ್ನು ಕೂಡಲೇ ತಿರುಗಿ ಹೊಡೆಯಲಿಲ್ಲ. ಬಾಣಗಳು ಭೀಮಸೇನನ ಮೇಲೆ ಬೀಳತೊಡಗಿದವು. ಇತ್ತಕಡೆ ವೀರರಾದ ಅಭಿಮನ್ಯು ಮೊದಲಾದ ಪಾಂಡವವೀರರು ಎದುರಿಸಲಾಗದ ಶಸ್ತ್ರವೃಷ್ಟಿಯನ್ನು ಧಾರ್ತರಾಷ್ಟ್ರರ ಮೇಲೆ ಕರೆದರು. ಅವರೆಲ್ಲರನ್ನು ಸಹ ಧಾರ್ತರಾಷ್ಟ್ರರು ಎಲ್ಲೆಡೆಗಳಿಂದಲೂ ಶಸ್ತ್ರಗಳಿಂದ ನೋಯಿಸತೊಡಗಿದರು. ಬಾಣಗಳ ಮಳೆಯನ್ನು ಕರೆಯತೊಡಗಿದ ಭೀಮನು ಧಾರ್ತರಾಷ್ಟ್ರರಿಂದ ಅವರನ್ನು ರಕ್ಷಿಸಿದ. ಆಗ ಭೀಮನ ಬಾಣಗಳಿಗೆ ಸಿಕ್ಕಿದ ಧಾರ್ತರಾಷ್ಟ್ರರೆಲ್ಲ ಬಹಳವಾಗಿ ನೊಂದರು. ಭೀಷ್ಮರು ಅವರ ರಕ್ಷಣೆಗೆ ಧಾವಿಸಿದರು.

ಪರಸ್ಪರ ಜಯಾಕಾಂಕ್ಷಿಗಳಾದ ಅವರೆಲ್ಲರಲ್ಲಿ ಆಗ ದ್ವಂದ್ವಯುದ್ಧ ಆರಂಭವಾಯಿತು. ದ್ರೋಣ–ದ್ರುಪದ, ಸಾತ್ಯಕಿ–ಕೃತವರ್ಮ, ದುಃಶಾಸನ–ಸಹದೇವ, ನಕುಲ–ವಿಕರ್ಣರ ಮಧ್ಯೆ ಯುದ್ಧ ನಡೆಯಿತು. ದ್ರೌಪದಿಯ ಮಕ್ಕಳಿಗೂ, ದುರ್ಮುಖಾದಿಗಳಿಗೂ ಯುದ್ಧ ಸಾಗಿತು. ಆ ರೀತಿಯ ದ್ವಂದ್ವಯುದ್ಧದಲ್ಲಿ ಸಾತ್ಯಕಿಯನ್ನು ಹೊರತುಪಡಿಸಿ ಉಳಿದೆಲ್ಲ ಪಾಂಡವಪಕ್ಷದವರಿಗೂ ಸೋಲಾಯಿತು. ಸಾತ್ಯಕಿ ಕೃತವರ್ಮನನ್ನು ಜಯಿಸಿದ. ಆ ವೇಳೆಗೆ ತಮ್ಮ ಸೈನ್ಯ ಭೀಷ್ಮ–ದ್ರೋಣಾದಿಗಳಿಂದಲೂ, ಭಗದತ್ತ ಮೊದಲಾದವರಿಂದಲೂ ಹೊಡೆದೋಡಿಸಲ್ಪಡುತ್ತಿರುವುದನ್ನು ಕಂಡು ಭೀಮನು, ಅವರಿಗೆ ಧೈರ್ಯ ಹೇಳಿ ನಿಲ್ಲಿಸಿದ. ದ್ರೋಣ, ಭಗದತ್ತ, ಕೃಪ, ದುರ್ಯೋಧನ ಮೊದಲಾಗಿ ಎಲ್ಲರನ್ನೂ ಕೇವಲ ಬಾಹುಬಲದಿಂದಲೇ ಅಸಾಧ್ಯ ಪರಾಕ್ರಮಿಯಾದ ಭೀಮಸೇನ ಸೋಲಿಸಿದ.

---

೧. ಗೀತೋಪದೇಶದ ಪ್ರಸಂಗದ ಬಳಿಕ ಯುಧಿಷ್ಠಿರನು ಭೀಷ್ಮ ,ದ್ರೋಣ, ಕೃಪ ಹಾಗೂ ಶಲ್ಯರ ಬಳಿ ತೆರಳಿ ತಮ್ಮದು ತಾತ್ತ್ವಿಕವಾದ ಯುದ್ಧವೇ ಹೊರತು ವೈಯಕ್ತಿಕವಾದುದಲ್ಲ ಎಂಬುದಾಗಿ ವಿಜ್ಞಾಪಿಸಿಕೊಂಡು ಅವರೆಲ್ಲರ ಅನುಮತಿಯನ್ನು ಪಡೆದುಕೊಳ್ಳುವನು ; ಅವನು ನೀಡಿದ ಆಹ್ವಾನಕ್ಕೆ ಸ್ಪಂದಿಸಿ ಕೌರವಪಕ್ಷದ ಯುಯುತ್ಸು ಎಂಬವನು ಪಾಂಡವಪಕ್ಷಕ್ಕೆ ತೆರಳಿದನು ಎಂಬ ವಿವರಗಳು ಮಹಾಭಾರತದಲ್ಲಿವೆ.

ಇತ್ತ ಶಲ್ಯರಾಜನು ಉತ್ತರನನ್ನು ಸಂಹರಿಸಿ ಅವನ ಸೇನೆಯನ್ನು ಹಿಂದಕ್ಕೆ ಅಟ್ಟಿದ. ಮತ್ತೊಂದು ಕಡೆ ಭೂರಿಶ್ರವಸ್‌ನೊಂದಿಗೆ ಸೇರಿಕೊಂಡು ತಮ್ಮ ಸೈನ್ಯವನ್ನು ಓಡಿಸುತ್ತಾ ಬರುತ್ತಿದ್ದ ಶ್ರೇಷ್ಠ ಅಸ್ತ್ರವಿದ್ಯಾಪಾರಂಗತರಾದ ಭೀಷ್ಮರನ್ನು, ಅಭಿಮನ್ಯುವಿನೊಂದಿಗೆ ಅರ್ಜುನ ಅಡ್ಡಗಟ್ಟಿದ. ಪರಾಕ್ರಮಿಯಾದ ಅಭಿಮನ್ಯುವನ್ನು ದಾಟಿ, ಅರ್ಜುನನು ನೋಡುತ್ತಿದ್ದಂತೆಯೇ, ಭೀಷ್ಮರು ಪಾಂಚಾಲರನ್ನೆಲ್ಲ ಓಡಿಸಿದರು. ಭೀಷ್ಮರ ಪರಾಕ್ರಮವನ್ನು ಹಾಗೂ ಅರ್ಜುನನು ಅವರ ಮೇಲಿನ ಗೌರವದಿಂದ ಸುಮ್ಮನಿರುವುದನ್ನು ಕಂಡು ಕೋಪಗೊಂಡ ಧರ್ಮರಾಜ ತನ್ನ ಸೇನೆಯನ್ನು ಹಿಂದಕ್ಕೆ ತೆಗೆದುಕೊಂಡ. ಅಂದಿಗೆ ಮೊದಲನೆಯ ದಿನದ ಯುದ್ಧ ಮುಕ್ತಾಯ-ವಾಯಿತು. ಆ ರಾತ್ರಿ ಧರ್ಮರಾಜ ಚಿಂತಾಕ್ರಾಂತನಾಗಿ, ಅರ್ಜುನನನ್ನು ತೆಗಳಿದ. ಕೃಷ್ಣ ಮೊದಲಾದವರು ಸಮಾಧಾನ ಮಾಡಿದ ಮೇಲೆ ಮಾರನೆಯ ದಿನ ಯುದ್ಧಕ್ಕೆ ತೊಡಗಿದ.

## ಎರಡನೆಯ ಹಾಗೂ ಮೂರನೆಯ ದಿನದ ಯುದ್ಧ

ಈ ರೀತಿ ಭೀಷ್ಮರು ಬೇರಾರಿಗೂ ಶಕ್ಯವಾಗದಂತಹ ರೀತಿಯಲ್ಲಿ ಪಾಂಡವರೊಂದಿಗೆ ಹೋರಾಡಿ, ಒಟ್ಟು ಹತ್ತು ದಿನಗಳ ಕಾಲ ಸೇನಾಧಿಪತ್ಯವನ್ನು ನಿರ್ವಹಿಸಿದರು. ಅವರಿಂದ 'ಅರ್ಧರಥ' ಎಂದು ಕರೆಯಲ್ಪಟ್ಟ ಕರ್ಣನು, "ನೀವು ಯುದ್ಧಮಾಡುತ್ತಿರುವವರೆಗೂ ನಾನು ಯುದ್ಧದಲ್ಲಿ ಭಾಗವಹಿಸಲಾರೆ" ಎಂದು ನುಡಿದು ಯುದ್ಧರಂಗದಿಂದ ದೂರಾಗಿದ್ದ. ಅದನ್ನು ಕಂಡು ಭೀಷ್ಮರು ನಿತ್ಯವೂ ಹತ್ತುಸಾವಿರ ರಥಿಗಳನ್ನು ವಧಿಸುವುದಾಗಿ ಪ್ರತಿಜ್ಞೆ ಮಾಡಿದ್ದರು. ಅಸ್ತ್ರಕೋವಿದರಲ್ಲಿ ಶ್ರೇಷ್ಠರೆನಿಸಿದ ಅವರು ಅದನ್ನು ತಪ್ಪದೆ ನಡೆಸಿದರೂ ಸಹ.

ಭೀಷ್ಮರನ್ನು ಸಂಹರಿಸಲು ಸಂಪೂರ್ಣ ಸಮರ್ಥರೇ ಆಗಿದ್ದ ಭೀಮ ಹಾಗೂ ಅರ್ಜುನ ಇಬ್ಬರೂ, ಅವರ ಮೇಲಿನ ಸ್ನೇಹ ಹಾಗೂ ಗೌರವದಿಂದಾಗಿ ಅವರನ್ನು ಕೊಲ್ಲಬಯಸಲಿಲ್ಲ.

ಬಹಳ ಆಶ್ಚರ್ಯಕರವಾದ ಅನೇಕ ಯುದ್ಧಗಳು ಆ ಅವಧಿಯಲ್ಲಿ ನಡೆದವು. ಅವುಗಳನ್ನು ಆಕಾಶದಲ್ಲಿ ನೆರೆದ ಬ್ರಹ್ಮ ರುದ್ರ ಮೊದಲಾದ ಎಲ್ಲ ದೇವತೆಗಳೂ, ಗಂಧರ್ವರೂ, ಅಪ್ಸರೆಯರೂ, ಅಸುರರೂ ವಿಮಾನಗಳಲ್ಲಿ ಕುಳಿತು ವೀಕ್ಷಿಸಿದರು. ಮಹಾ ಧನುರ್ಧಾರಿಯಾದ ಧೃಷ್ಟದ್ಯುಮ್ನನು ಭೀಷ್ಮರ ವ್ಯೂಹಗಳಿಗೆ ಪ್ರತಿವ್ಯೂಹಗಳನ್ನು ರಚಿಸುತ್ತಾ ಯುದ್ಧದಲ್ಲಿ ಶತ್ರುಗಳಿಗೆ ಅಜೇಯನಾಗಿ ಕಾದಿದ.

## ಚಕ್ರ ಹಿಡಿದ ಶ್ರೀಕೃಷ್ಣ

ಫಲ್ಗುನನು ಮೃದುವಾಗಿಯೇ ಯುದ್ಧ ಮಾಡುತ್ತಿದ್ದುದನ್ನು ಕಂಡು ಕೃಷ್ಣನು ಅವನಿಗೆ ತಿಳಿಸಿಕೊಡುವ ದೃಷ್ಟಿಯಿಂದ ಚಕ್ರವನ್ನು ಕೈಗೆತ್ತಿಕೊಂಡು ತಾನೇ ಭೀಷ್ಮರತ್ತ ಸಾಗಿದ. ಭೀಷ್ಮರು ಕೃಷ್ಣನನ್ನು ನಮಸ್ಕರಿಸಿ ಸ್ತುತಿಸಿದರು. ಅರ್ಜುನನೂ ಸಹ ಕೃಷ್ಣನ ಪಾದಗಳಿಗೆರಗಿ ಪ್ರಾರ್ಥಿಸಿ ಹಿಂದಕ್ಕೆ ಕರೆದು ತಂದ. ರಥವನ್ನೇರಿದ ಕೃಷ್ಣ ಮತ್ತೆ ಶಂಖನಾದವನ್ನು ಮಾಡಿದ. ಅನಂತರ ಶಸ್ತ್ರಾಸ್ತ್ರಗಳನ್ನು ಸುರಿಸುತ್ತ ನಡೆದ ಭೀಷ್ಮಾರ್ಜುನರ ಯುದ್ಧದಲ್ಲಿ ಅರ್ಜುನನು ಸುಲಭವಾಗಿಯೇ

ಭೀಷ್ಮರನ್ನು ಸೋಲಿಸಿ, ಕೌರವರ ಕಡೆಯ ಸಾವಿರಾರು ರಥ, ಕುದುರೆಗಳನ್ನು ನಾಶ ಮಾಡಿದ. ಪರಾಜಿತವಾದ ಕೌರವರ ಸೇನೆಯು ಭೀಷ್ಮರ ನೇತೃತ್ವದಲ್ಲಿ ಶಿಬಿರಕ್ಕೆ ಮರಳಿತು.

## ನಾಲ್ಕನೆಯ ದಿನದ ಯುದ್ಧ

ಒಮ್ಮೆ ಸೈನ್ಯದ ಮುಂಭಾಗದಲ್ಲಿಯೇ ಸಾಗಿ ಬಂದ ಭೀಮ ಭೀಷ್ಮ ದ್ರೋಣರ ಸಾರಥಿಗಳನ್ನು ಸಂಹರಿಸಿ, ಕುದುರೆಗಳನ್ನು ಓಡಿಸಿ, ವ್ಯೂಹವನ್ನು ಭೇದಿಸಿ ಒಳಕ್ಕೆ ನುಗ್ಗಿದ. ರಥವನ್ನು ಸರಿ-ಮಾಡಿಕೊಂಡು ಮತ್ತೆ ಅಡ್ಡಗಟ್ಟಿದ ಭೀಷ್ಮದ್ರೋಣರನ್ನು ಸುಲಭವಾಗಿ ಸೋಲಿಸಿ, ಇಪ್ಪತ್ತೈದು ಜನ ಕೌರವರನ್ನು ಸಂಹರಿಸಿದ. ಭಗದತ್ತ, ಅಶ್ವತ್ಥಾಮ, ಕೃಪ, ಶಲ್ಯ, ದುರ್ಯೋಧನ ಮೊದಲಾದ ಎಲ್ಲರನ್ನೂ ಸೋಲಿಸಿ ಓಡಿಸಿ, ಅವರ ಸೇನೆಯ ಬಹುಭಾಗವನ್ನು ನಾಶಮಾಡಿದ. ಭೀಮನ ಪ್ರಹಾರಕ್ಕೆ ದುರ್ಯೋಧನನ ರಥ, ಆಯುಧಗಳು ಪುಡಿಯಾದುದಲ್ಲದೆ, ಅವನು ಮೂರ್ಛೆಯನ್ನು ಹೊಂದಿದ. ದುರ್ಯೋಧನನು ಭೀಮನಿಂದ ಇಂತಹ ಸೋಲನ್ನು ಕಂಡಾಗ, ಅದನ್ನೆಲ್ಲ ಎಲ್ಲ ರಾಜರೂ ನೋಡುತ್ತಲೇ ಇದ್ದರು. ಅಂದಿಗೆ ಆ ದಿನದ ಯುದ್ಧ ಮುಗಿದು ಕೌರವರ ಸೇನೆ ಶಿಬಿರಕ್ಕೆ ಹಿಂದಿರುಗಿತು.

## ವಿಶ್ವೋಪಾಖ್ಯಾನ

ಆ ದಿನ ರಾತ್ರಿ ದುರ್ಯೋಧನನು, ಭೀಷ್ಮರ ಬಳಿಗೆ ತೆರಳಿದ ; ಭೀಮನ ಬಾಣಗಳ ಹೊಡೆತದಿಂದ ಅವನ ಮೈಯಲ್ಲಿ ಗಾಯಗಳಾಗಿ ರಕ್ತ ಸುರಿಯುತ್ತಿತ್ತು. ''ತಾತ ! ಅದೇತಕ್ಕೆ ನಾವು ಪ್ರತಿಸಲವೂ ಸೋಲುತ್ತಿರುವೆವು ; ಪಾಂಡವರು ಮಾತ್ರ ಯಾವಾಗಲೂ ಗೆಲ್ಲುತ್ತಾ ನಲಿಯುತ್ತಿರುವರು?'' ಎಂಬ ಅವನ ಪ್ರಶ್ನೆಗೆ ಭೀಷ್ಮರು ಉತ್ತರಿಸಿದರು – ''ಅವರೆಲ್ಲ ಭೂಮಿ-ಗಿಳಿದು ಬಂದಿರುವ ಅಜೇಯರಾದ ದೇವತೆಗಳು ; ಅವರಿಗೆ ವಿಶೇಷವಾಗಿ ಶ್ರೀಹರಿಯ ರಕ್ಷಣೆಯೂ, ಅನುಗ್ರಹವೂ ಇದೆ. ಹಿಂದೆ ಮಾನಸೋತ್ತರಶೈಲದಲ್ಲಿ ಬ್ರಹ್ಮ ಮೊದಲಾದ ದೇವತೆಗಳು ನೆರೆದಿದ್ದಾಗ, ಅವರಲ್ಲಿ ಬ್ರಹ್ಮನಿಗೆ ಮಾತ್ರ ಶ್ರೀಹರಿಯು ಆಕಾಶದಲ್ಲಿ ಕಾಣಿಸಿಕೊಂಡ. ಅವನನ್ನು ಬ್ರಹ್ಮನು ಪೂಜಿಸಿ, ಭೂಭಾರವನ್ನು ಇಳಿಸಲು ಪ್ರಾರ್ಥಿಸಿ, ಅವನ ಅಪ್ಪಣೆಯನ್ನು ದೇವತೆಗಳಿಗೆ ವಿವರಿಸಿದ – ''ಈಗ ಕಂಡಿದ್ದು ಅನಂತ ಗುಣಗಳ ಸಾಗರನಾದ ನಾರಾಯಣ ; ಇವನೀಗ ನಿಮಗೆಲ್ಲ ಭೂಮಿಯಲ್ಲಿ ಅವತರಿಸುವಂತೆ ಅಪ್ಪಣೆ ಮಾಡಿರುವನು. ಅವನು ತಾನೂ ಸಹ ದೇವಕೀಪುತ್ರನಾಗಿ ಅವತರಿಸುವನು.''

ಬ್ರಹ್ಮನಿಂದ ಅಪ್ಪಣೆಮಾಡಲ್ಪಟ್ಟ ಧರ್ಮ, ವಾಯು, ಮೊದಲಾದ ಎಲ್ಲ ದೇವತೆಗಳೂ, ಇಂದ್ರನೊಂದಿಗೂ, ಮರುದ್ಗಣಗಳೊಂದಿಗೂ ಕೂಡಿಕೊಂಡು ಪಾಂಡವರೇ ಮೊದಲಾದವರಾಗಿ ಜನ್ಮ ತಾಳಿರುವರು. ಆ ನಾರಾಯಣನೂ ಸಹ ದೇವಕೀನಂದನನಾಗಿ ಜನಿಸಿರುವನು. ಅವನಿಂದ ಪಾಲಿತರಾಗಿರುವ ಈ ಪಾಂಡವರು ದೇವವರ್ಗದವರಾಗಿ ಅಜೇಯರಾಗಿರುವರು. ನಿನಗೆ ಸೋಲಾಗಬಾರದೆಂದಿದ್ದಲ್ಲಿ ಅವರೊಂದಿಗೆ ಸಂಧಿ ಮಾಡಿಕೋ.'' ಭೀಷ್ಮರ ಮಾತುಗಳನ್ನು ಕೇಳಿ

ಡಾಂಭಿಕತನದಿಂದಲೇ ವಿಷ್ಣುವಿಗೆ ನಮಸ್ಕರಿಸಿ ಅಲ್ಲಿಂದ ಹೊರಟ. ಕೇಡುಬುದ್ಧಿಯ ಅವನು ಮತ್ತೆ ಬೆಳಗ್ಗೆ ಎಂದಿನಂತೆ ಸೇನೆಯನ್ನು ಯುದ್ಧಕ್ಕೆ ಅಣಿಗೊಳಿಸಿದ. ಭೀಷ್ಮರ ದಿವ್ಯೌಷಧಿಗಳ[1] ಪ್ರಭಾವದಿಂದಾಗಿ ಅವನ ಗಾಯಗಳೆಲ್ಲ ವಾಸಿಯಾಗಿದ್ದವು. ಭೀಷ್ಮರು ಎಂದಿನಂತೆಯೇ ಸೇನಾಪತ್ಯವನ್ನು ಮುಂದುವರೆಸಿದರು.

## ಐದು ಹಾಗೂ ಆರನೆಯ ದಿನದ ಯುದ್ಧ

ಭೀಮ-ಭೀಷ್ಮರ ಅನುಯಾಯಿಗಳಾದ ಶೂರರಲ್ಲಿ ಮತ್ತೆ ಭಯಂಕರವಾದ ಯುದ್ಧ ಮೊದಲಾಯಿತು. ಭೀಮನ ಅನುಯಾಯಿಯಾದ ಧೃಷ್ಟದ್ಯುಮ್ನನು ದುರ್ಯೋಧನನ ತಮ್ಮಂದಿ-ರೊಂದಿಗೆ ಕಾದುತ್ತ, ವಿಕರ್ಣ ಮೊದಲಾದವರನ್ನೆಲ್ಲ ಸಂಮೋಹನಾಸ್ತ್ರದಿಂದ ಮೂರ್ಛಿತರನ್ನಾಗಿಸಿ, ಅವರ ಸೇನೆಯನ್ನು ಸಂಹರಿಸಿದ. ಅದನ್ನು ಕಂಡು ದ್ರೋಣರು ವಿಜ್ಞಾನಾಸ್ತ್ರದಿಂದ ಅವರನ್ನೆಲ್ಲ ಮತ್ತೆ ಎಚ್ಚರಗೊಳಿಸಿ, ಧೃಷ್ಟದ್ಯುಮ್ನನನ್ನು ಎದುರಿಸಲು ನುಗ್ಗಿದರು. ಭೀಮಸೇನ ಅವರ ಸೂತನನ್ನು ಸಂಹರಿಸಿ, ಶತ್ರುಸೇನೆಯನ್ನು ಬಾಣಗಳ ಪ್ರವಾಹಗಳಿಂದ ಓಡಿಸತೊಡಗಿದ. ಕೃತವರ್ಮ ಅಲ್ಲಿಗೆ ಧಾವಿಸಿ ಧೃಷ್ಟದ್ಯುಮ್ನನೊಂದಿಗೆ ಹೋರಾಟಕ್ಕೆ ತೊಡಗಿದ. ಆ ಇಬ್ಬರು ಶ್ರೇಷ್ಠ ಬಿಲ್ಲಾಳುಗಳಲ್ಲಿ ನಡೆದ ಹೋರಾಟದಲ್ಲಿ ಕೊನೆಗೆ ಧೃಷ್ಟದ್ಯುಮ್ನನು ಕೃತವರ್ಮನನ್ನು ವಿರಥನನ್ನಾಗಿಸಿದ.

ದುರ್ಯೋಧನನು ತಾನೇ ಧೃಷ್ಟದ್ಯುಮ್ನನ ಮೇಲೆ ಸಾಗಿಬರಲು ಸಿದ್ಧನಾಗಲು, ಅವನನ್ನು ತಡೆದ ಭೀಮನು ಅವನ ರಥ ಹಾಗೂ ಆಯುಧಗಳನ್ನು ನಾಶಮಾಡಿ, ಬಾಣವೊಂದನ್ನು ಅವನ ಜತ್ರುಪ್ರದೇಶಕ್ಕೆ ಪ್ರಯೋಗಿಸಿದ. ರಕ್ತದ ಪ್ರವಾಹವನ್ನೇ ಹರಿಸುತ್ತಾ ಮೂರ್ಛಿತನಾಗಿ ದುರ್ಯೋಧನ ಕೆಳಗೆ ಉರುಳಿದ ; ಕೂಡಲೇ ಕೃಪಾಚಾರ್ಯರು ಅಲ್ಲಿಗೆ ಧಾವಿಸಿ ಬಂದು ಅವನನ್ನು ತಮ್ಮ ರಥದಲ್ಲಿ ಹಾಕಿಕೊಂಡು ತೆರಳಿದರು. ಭೀಮನು ಕೌರವರ ಸೇನೆಯನ್ನು ಮತ್ತೆ ಬಾಣಗಳ ಪ್ರವಾಹದಿಂದ ಹೊಡೆದೋಡಿಸತೊಡಗಿದ.

ಇತ್ತ ಅರ್ಜುನನೂ ಸಹ ಕೃಷ್ಣನು ಸಾರಥಿಯಾಗಿದ್ದ ರಥದಲ್ಲಿ ಕುಳಿತು ಬಾಣಗಳ ಪ್ರವಾಹದಿಂದ ಇಪ್ಪತ್ತೈದುಸಾವಿರ ರಥಿಗಳನ್ನು ಯಮಪುರಿಗೆ ಅಟ್ಟಿದ. ಅರ್ಜುನನ ಹಿಂದೆಯೇ ಬಂದ ಸಾತ್ಯಕಿಯೂ ಸಹ ಧನುರ್ಧಾರಿಯಾಗಿ ಕೌರವರ ಸೇನೆಯನ್ನು ಓಡಿಸತೊಡಗಿದ. ಅವನಿಗೂ ಭೂರಿಶ್ರವಸ್‌ನಿಗೂ ಯುದ್ಧ ಆರಂಭವಾಯಿತು. ಆ ಯುದ್ಧ ಭಯಂಕರ ಅಸ್ತ್ರಗಳಿಂದಾಗಿ ತುಂಬಾ ಭೀಕರವೇ ಆಗಿದ್ದಿತು. ಭೂರಿಶ್ರವಸ್ ಸಾತ್ಯಕಿಯ ಎದುರಿನಲ್ಲಿಯೇ ಅವನ ಹತ್ತುಜನ ಮಕ್ಕಳನ್ನು ಸಂಹರಿಸಿ, ಶರೀರವನ್ನೇ ಸೀಳುವಂತಹ ಕ್ರೂರವಾದ ಬಾಣಗಳಿಂದ ಸಾತ್ಯಕಿಯನ್ನು ಹೊಡೆದ.

---

೧. ಇದು ಆ ಕಾಲದ ಚಿಕಿತ್ಸಾಪದ್ಧತಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ಇಂದಿನ ನೋವುನಿವಾರಕಗಳು ಎಷ್ಟು ಪರಿಣಾಮಕಾರಿ ಎಂಬುದು ಎಲ್ಲರಿಗೂ ತಿಳಿದದ್ದೇ ; ಅದರಂತೆ ಆ ಕಾಲದಲ್ಲಿ ದಿವ್ಯೌಷಧಿಗಳ ಮೂಲಕ ರಣರಂಗದ ಗಾಯಗಳನ್ನು ಕೂಡಲೇ ಗುಣಪಡಿಸಿಕೊಳ್ಳುವ ವ್ಯವಸ್ಥೆ ಇದ್ದಿತು. ಭೀಷ್ಮರಿಗೆ ಅಂತಹ ಔಷಧಗಳ ಜ್ಞಾನವಿದ್ದುದು ಗಮನಾರ್ಹ. ಅದಕ್ಕೆ ಅವರು ಶಸ್ತ್ರಾಸ್ತ್ರವಿದ್ಯೆಯನ್ನು ಪರದೇವತೆಯಾದ ಪರಶುರಾಮ-ರಿಂದಲೇ ಅಧ್ಯಯನ ಮಾಡಿದ್ದು ವಿಶೇಷ ಕಾರಣವಾಗಿತ್ತು ಎಂದು ತಿಳಿಯಬಹುದು.

ಅನಂತರ ಅವರಿಬ್ಬರೂ ಒಬ್ಬರನ್ನೊಬ್ಬರು ವಿರಥರನ್ನಾಗಿಸಿಕೊಂಡರು. ಖಡ್ಗ ಕೈಗೆತ್ತಿಕೊಂಡ ಸಾತ್ಯಕಿಯನ್ನು ಮಹಾಖಡ್ಗದೊಂದಿಗೆ ಕೂಡಿದ ಭೂರಿಶ್ರವಸ್ ಆಕ್ರಮಿಸುವುದನ್ನು ನೋಡಿ, ಭೀಮಸೇನನು ಅವನನ್ನು ತನ್ನ ರಥದಲ್ಲಿ ಹತ್ತಿಸಿಕೊಂಡ. ಸುಯೋಧನನೂ ಅಲ್ಲಿಗೆ ಬಂದು ಭೂರಿಶ್ರವಸ್‌ನನ್ನು ತನ್ನ ರಥಕ್ಕೆ ಸೇರಿಸಿಕೊಂಡು ಅಲ್ಲಿಂದ ಪಲಾಯನ ಮಾಡಿದ. ಅರ್ಜುನನು ಭೀಷ್ಮರ ಮೇಲೆ ಹೊರಟ. ಮಹಾಬಲಿಷ್ಠರೂ, ಶ್ರೇಷ್ಠ ಅಸ್ತ್ರಜ್ಞರೂ ಆದ ಆ ಇಬ್ಬರೂ ಅದ್ಭುತವಾದ ಘಟಸರ್ಪಗಳ ವಿಷಕ್ಕೆ ಸಮಾನವಾದ ಬಾಣಗಳಿಂದ ಒಬ್ಬರನ್ನೊಬ್ಬರು ನೋಯಿಸಿಕೊಂಡು, ದೇವತೆಗಳು ನೋಡುತ್ತಿದ್ದಂತೆಯೇ ಹೋರಾಡಿದರು. ಕೊನೆಗೆ ಮಹಾರಥನಾದ ಅರ್ಜುನ ತನ್ನ ಬಾಹುಬಲದಿಂದ ಭೀಷ್ಮರನ್ನು ಜಯಿಸಿದ. ಭೀಷ್ಮರು ಸೇನೆಯೊಂದಿಗೆ ಹಿಂದಿರುಗಿದರು. ಆ ವೇಳೆಗೆ ರಾತ್ರಿಯು ಸಮೀಪಿಸಲು, ಪಾಂಡವರು ಶಿಬಿರಗಳಿಗೆ ಮರಳಿದರು.

## ಏಳನೆಯ ದಿನದ ಯುದ್ಧ

ಮಾರನೆಯ ದಿನ ಎಂದಿನಂತೆ ಯುದ್ಧ ಆರಂಭವಾಯಿತು. ಭೀಮನು ಭೀಷ್ಮರ ಸಾರಥಿಯನ್ನು ಕೊಂದು, ಅವರ ಸೇನೆಯನ್ನು ಅಟ್ಟಿದ. ಅವನ ಹೊಡೆತಕ್ಕೆ ರಥಗಳೂ, ಆನೆಗಳೂ, ಕುದುರೆಗಳೂ ರಾಶಿರಾಶಿಯಾಗಿ ಸತ್ತು ಬೀಳುತ್ತಿದ್ದವು. ಉಳಿದವರೆಲ್ಲರೂ ಪಲಾಯನ ಮಾಡತೊಡಗಿದರು. ಭೀಷ್ಮ ದ್ರೋಣ, ಅಶ್ವತ್ಥಾಮ ಮೊದಲಾಗಿ ದುರ್ಯೋಧನಾದಿಗಳೆಲ್ಲ ಪರಾಜಿತರಾದರು. ಸುಪ್ರತೀಕವೆಂಬ ಬೃಹದಾಕಾರದ ಆನೆಯ ಮೇಲೆ ಕುಳಿತು ಬಾಣಗಳನ್ನು ಬಿಡುತ್ತಲೇ ಭಗದತ್ತನು ಅಲ್ಲಿಗೆ ಬಂದ. ಭೀಮಸೇನನ ಮೇಲೆ ಬಾಣಗಳ ಮಳೆಯನ್ನು ಕರೆಯತೊಡಗಿದ ಅವನನ್ನು ಭೀಮಪುತ್ರನಾದ ಘಟೋತ್ಕಚನು ಎದುರಿಸಿದ. ಅವನನ್ನು ತಡೆದು, ತನ್ನ ಮಾಯೆಯಿಂದ ನಾಲ್ಕು ಆನೆಗಳ ಮೇಲೆ ಕುಳಿತುಕೊಂಡು ಭಗದತ್ತನ ಮೇಲೆ ನುಗ್ಗಿದ.

ಭಗದತ್ತನಲ್ಲಿ ವರಾಹರೂಪಿ ವಿಷ್ಣುವಿನಿಂದ ಕೊಡಲ್ಪಟ್ಟಿದ್ದ ಅಮೋಘವಾದ ವೈಷ್ಣವಾಸ್ತ್ರವಿರುವುದನ್ನು ತಿಳಿದಿದ್ದ ಭೀಮ, ಹಾಗೆ ತನ್ನ ಮಗ ಅವನ ಮೇಲೆ ಏರಿಹೋದಮೇಲೆ, ತಾನು ಮತ್ತೆ ಅವನತ್ತ ನುಗ್ಗಲು ಬಯಸಲಿಲ್ಲ. ಶ್ರೀಹರಿಯ ಅತಿಹೆಚ್ಚು ಅನುಗ್ರಹದಿಂದ ತನಗಾವ ಅಪಾಯವೂ ಅದರಿಂದ ಉಂಟಾಗುವುದಿಲ್ಲವೆಂದು ತಿಳಿದಿದ್ದರೂ, ಶ್ರೀಹರಿಯ ಮಾತನ್ನು ಸತ್ಯ ಮಾಡುವ ಕಾರಣದಿಂದ, ಭೀಮಸೇನನು ತಾನಾಗಿಯೇ ಅವನ ಮೇಲೆ ಎರಗಲು ಇಚ್ಛಿಸಲಿಲ್ಲ. ತನ್ನ ಮಗನಿಂದಲೇ ಅವನು ಸೋತರೆ, ಇನ್ನು ತನ್ನ ಬಲದ ವಿಷಯ ಮತ್ತೇನು ಹೇಳಬೇಕು ಎಂಬ ಕಾರಣದಿಂದ ಬೇರೆಡೆಗೆ ಹೊರಟ. ಭಗದತ್ತನು ಆ ಅಸ್ತ್ರವನ್ನು ಮರೆತಿದ್ದಾಗ ಮಾತ್ರವೇ ಭೀಮಸೇನನು ಅವನ ಮೇಲೆ ಆಕ್ರಮಣ ನಡೆಸುತ್ತಿದ್ದ. ಭೀಮಾರ್ಜುನರ ಹೊರತು ಮತ್ತಾರ ಮೇಲೂ ಭಗದತ್ತ ತನ್ನಲ್ಲಿದ್ದ ವೈಷ್ಣವಾಸ್ತ್ರ ಪ್ರಯೋಗಿಸಲಾರ ಎಂಬುದನ್ನು ಚೆನ್ನಾಗಿಯೇ ಅರಿತಿದ್ದ ಭೀಮಸೇನ, ಅದರಿಂದ ಘಟೋತ್ಕಚನಿಗೆ ಅಪಾಯವೇನೂ ಇಲ್ಲವೆಂಬುದನ್ನು ತಿಳಿದಿದ್ದ[೧].

---

೧. ವೈಷ್ಣವಾಸ್ತ್ರವನ್ನು ಭಗದತ್ತ ಭೀಮಾರ್ಜುನರಂತಹ ಮಹಾ ಪರಾಕ್ರಮಿಗಳ ಹೊರತು ಇತರರ ಮೇಲೆ ಪ್ರಯೋಗಿಸುವ ಸಾಧ್ಯತೆ ಇರಲಿಲ್ಲ ಎಂಬುದನ್ನು ತಿಳಿದಿದ್ದರಿಂದಲೇ, ಘಟೋತ್ಕಚನಿಗೆ ಅದರ ಅಪಾಯ

ನಾಲ್ಕು ಆನೆಗಳ ಮೇಲೆ ಕುಳಿತು ಭಗದತ್ತನನ್ನು ಎದುರಿಸಿದ ಘಟೋತ್ಕಚನು ಬಗೆಬಗೆಯ ಹೊಡೆತಗಳಿಂದ ಭಗದತ್ತ ಮತ್ತು ಅವನ ಸುಪ್ರತೀಕವನ್ನು ಬಹಳವಾಗಿ ಪೀಡಿಸಿದ ; ಎಲ್ಲ ಜನರು ನೋಡುತ್ತಿದ್ದಂತೆಯೇ, ಅವರಿಬ್ಬರಿಗೆ ಪ್ರಾಣಸಂಶಯವನ್ನೇ ಉಂಟು ಮಾಡಿದ. ಆನೆಯ ಆರ್ತನಾದವನ್ನು ಕೇಳಿ ಅಲ್ಲಿಗೆ ಬಂದ ಭೀಷ್ಮ ಮೊದಲಾದವರು ಮಹಾಕಾಯನಾದ ಘಟೋತ್ಕಚನನ್ನು ಅವನ ಬೆಂಗಾವಲಾಗಿದ್ದ ಭೀಮನನ್ನೂ ಕಂಡು ಬಹಳವಾಗಿ ಭಯಪಟ್ಟು, ಅಂದಿನ ಯುದ್ಧವನ್ನು ನಿಲ್ಲಿಸಿ, ಶಿಬಿರಗಳಿಗೆ ಹಿಂದಿರುಗಿದರು.

## ಎಂಟನೆಯ ದಿನದ ಯುದ್ಧ

ಪಾಂಡವರ ಹಾಗೂ ಕೌರವರ ಸೇನೆಗಳಲ್ಲಿ ಮಾರನೆಯ ದಿನ ನಡೆದ ಯುದ್ಧದಲ್ಲಿ ಉಲೂಪಿಯಲ್ಲಿ ಅರ್ಜುನನಿಂದ ಜನಿಸಿದ್ದ ಬಲಶಾಲಿಯಾದ ಇರಾವಂತನು ಶಕುನಿಯ ಆರು ಜನ ಮಕ್ಕಳನ್ನು ಒಬ್ಬನೇ ಎದುರಿಸಿದ. ಪ್ರಾಸ ಎನ್ನುವ ಆಯುಧದಿಂದ ಅವರೆಲ್ಲರಿಂದ ಬಹಳ ಪೆಟ್ಟುತಿಂದ ; ಅವನು ಕೆರಳಿ ಅವರೆಲ್ಲರ ತಲೆಗಳನ್ನು ಖಡ್ಗದಿಂದ ಕತ್ತರಿಸಿ ಹಾಕಿದ. ಆ ನೋಟ ಕೌರವರ ಮನಸ್ಸಿನಲ್ಲಿ ಅಂಜಿಕೆ ಹುಟ್ಟಿಸಿತು. ಅವನೊಂದಿಗೆ, ಹೋರಾಡಲೆಂದು ದುರ್ಯೋಧನನು ಅಲಂಬುಸ ಎಂಬ ರಾಕ್ಷಸನನ್ನು ''ಇರಾವಂತನನ್ನು ಕೊಲ್ಲು'' ಎಂದು ಹೇಳಿ ಕಳುಹಿಸಿಕೊಟ್ಟ. ಮಾಯಾವಿಗಳಾದ ಆ ಇಬ್ಬರಿಗೂ ಅತ್ಯಂತ ಭಯಂಕರವೂ, ಅದ್ಭುತವೂ ಆದ ಯುದ್ಧ ಆರಂಭವಾಯಿತು. ಆ ರಾಕ್ಷಸನು ಅಶ್ವಗಳನ್ನೂ, ಸವಾರರನ್ನೂ ಸೃಷ್ಟಿಸಲು, ಅವರು ಇರಾವಂತನ ಸೈನಿಕರನ್ನೆಲ್ಲ ಕೊಂದರು. ಆಗ ಹಾವಿನ ರೂಪವನ್ನು ತಳೆದ ಇರಾವಂತನನ್ನು, ಅಲಂಬುಸ ಗರುಡನ ರೂಪವನ್ನು ತಾಳಿ ಸಂಹರಿಸಿದ.

ಇರಾವಂತನು ಹತನಾದುದ್ದನ್ನು ಕೇಳಿ ಮಹಾ ಪರಾಕ್ರಮಿಯಾದ ಘಟೋತ್ಕಚ ಕೋಪದಿಂದ ಗರ್ಜನೆ ಮಾಡಿದ. ಅವನ ಗರ್ಜನೆಗೆ ಭೂಮಿ ನಡುಗಿತು ; ಸಾಗರ ಉಕ್ಕಿತು ; ಪರ್ವತಗಳು ಅಲುಗಾಡಿದವು ; ವೃಕ್ಷಗಳು ಉರುಳಿದವು. ಅಲಂಬುಸನು ಅವನನ್ನು ಕಂಡು ಭಯಪಟ್ಟು ಅಲ್ಲಿಂದ ಪಲಾಯನ ಮಾಡಿದ. ಕೌರವರ ಸೇನೆಯು ಭಯದಿಂದ ಹಿಮ್ಮೆಟ್ಟಿತು. ದುರ್ಯೋಧನ ಘಟೋತ್ಕಚನನ್ನು ಎದುರಿಸಿ ಬಂದು, ಘಟೋತ್ಕಚನ ಮಹಾಬಲಾಢ್ಯರಾದ ನಾಲ್ವರು ಮಂತ್ರಿಗಳನ್ನು ಸಂಹರಿಸಿ, ಉಳಿದ ಅನೇಕರನ್ನು ಕೊಂದ. ಅಳಿದುಳಿದ ಅವನ ಕಡೆಯವರು ಓಡತೊಡಗಲು, ಘಟೋತ್ಕಚನು ದುರ್ಯೋಧನನನ್ನು ಮುತ್ತಿದ. ಅವನಿಂದ ಬಹಳವಾಗಿ ತೊಂದರೆಗೀಡಾದ ದುರ್ಯೋಧನನು ಒಂದು ತೀಕ್ಷ್ಣವಾದ ಬಾಣವನ್ನು ಅವನ ಮೇಲೆ ಪ್ರಯೋಗಿಸಿದ. ಅದರಿಂದ ಬಹಳವಾಗಿ ಪೆಟ್ಟುತಿಂದ ಘಟೋತ್ಕಚನು ಕಣ್ಣು ಕತ್ತಲಿಟ್ಟಂತಾಗಿ ಭೂಮಿಯ ಮೇಲೆ ಬೀಳುತ್ತ, ಹೇಗೋ ಸಾವರಿಸಿಕೊಂಡು ಮತ್ತೆ

---

ಸರ್ವಥಾ ಇಲ್ಲ ಎಂಬ ಕಾರಣದಿಂದ ಘಟೋತ್ಕಚನ ಸಂರಕ್ಷಣೆಗೆ ಭೀಮ ಧಾವಿಸಲಿಲ್ಲ ಎಂದು ಭಾವ. ಉಳಿದಂತೆ ಘಟೋತ್ಕಚ ಮಹಾ ಪರಾಕ್ರಮಿ ಎಂಬುದಂತೂ ಸ್ಪಷ್ಟವೇ ಆಗಿತ್ತು.

ದುರ್ಯೋಧನನ ಮೇಲೆ ಬಾಣಗಳನ್ನು ಪ್ರಯೋಗಿಸಿದ. ಅಜೇಯರಾದ ಅವರಿಬ್ಬರ ನಡುವೆ ನಡೆದ ದೀರ್ಘಕಾಲದ ಯುದ್ಧದಲ್ಲಿ , ದ್ರೋಣಾದಿಗಳು ದುರ್ಯೋಧನನನ್ನು ರಕ್ಷಿಸಲು ಅಲ್ಲಿಗೆ ಧಾವಿಸಿದರು. ಹಾಗೆ ಅಲ್ಲಿಗೆ ಬಂದ, ದ್ರೋಣ, ಶಲ್ಯ, ಅಶ್ವತ್ಥಾಮ, ಕೃಪ, ಭೂರಿಶ್ರವಸ್, ಕೃತವರ್ಮ ಮೊದಲಾದ ಎಲ್ಲರನ್ನೂ ಆಕಾಶಕ್ಕೆ ಹಾರಿದ ಘಟೋತ್ಕಚನು ಸ್ಥೂಲವಾದ ಬಾಣಗಳಿಂದ ವೇಗವಾಗಿ ಹೊಡೆದ.

ಆ ಎಲ್ಲ ಮಹಾರಥಿಗಳಿಂದ ಸುತ್ತುವರಿಯಲ್ಪಟ್ಟ ಒಬ್ಬಂಟಿಗನಾದ ಘಟೋತ್ಕಚನನ್ನು ನೋಡಿ, ಭೀಮನು ಅಲ್ಲಿಗೆ ಧಾವಿಸಿ, ಅವರೆಲ್ಲರನ್ನೂ ಮುತ್ತಿದ. ಭೀಮನ ಬಾಣಗಳ ಹೊಡೆತಕ್ಕೆ ದ್ರೋಣರು ಮೂರ್ಛಿತರಾಗಿ ಬಿದ್ದರು. ಅಶ್ವತ್ಥಾಮ, ಕೃಪ, ದುರ್ಯೋಧನ ಮೊದಲಾದ ಇತರ ಎಲ್ಲರನ್ನೂ ಭೀಮ ಕ್ಷಣಮಾತ್ರದಲ್ಲಿಯೇ ವಿರಥರನ್ನಾಗಿಸಿದ. ಅತ್ತ ಮೇಲ್ಗಡೆಯಿಂದ ಘಟೋತ್ಕಚನೂ ಬಾಣಗಳ ಪ್ರವಾಹವನ್ನು ಅವರ ಮೇಲೆ ಸುರಿಸಿದ. ಮೇಲಿನಿಂದ ಅವನ ವೃಕ್ಷಗಾತ್ರದ ಬಾಣಗಳಿಂದಲೂ, ಕೆಳಗಿನಿಂದ ಭೀಮನ ಬಾಣಗಳ ಪ್ರವಾಹಗಳಿಂದಲೂ ಬಹಳವಾಗಿ ನೊಂದು ಅವರೆಲ್ಲ ತುಂಬಾ ಭಯಪಟ್ಟು ಓಡುತ್ತಾ ಶಿಬಿರಗಳನ್ನೇ ಸೇರಿಕೊಂಡರು. ಭೀಷ್ಮರ ಹೊರತು ಉಳಿದೆಲ್ಲರನ್ನೂ ಆ ರೀತಿ ಶಿಬಿರಕ್ಕೆ ಅಟ್ಟಿದ ಭೀಮ ಘಟೋತ್ಕಚರು ತಮ್ಮ ಸಿಂಹನಾದ ಮತ್ತು ಗರ್ಜನೆಗಳಿಂದ ಲೋಕವನ್ನೇ ತುಂಬಿಸಿ ಬಿಟ್ಟರು.

ತನ್ನ ಜನರನ್ನೆಲ್ಲ ಒಟ್ಟು ಮಾಡಿಕೊಂಡು ದುರ್ಯೋಧನನು ಸ್ವಲ್ಪ ಹೊತ್ತಿನ ಮೇಲೆ ಮತ್ತೆ ಯುದ್ಧಕ್ಕೆ ಬಂದು, ಘಟೋತ್ಕಚನನ್ನು ಗೆಲ್ಲುವ ಬಗೆಯನ್ನು ಭೀಷ್ಮರಲ್ಲಿ ಕೇಳಿದ. ''ನೀನು ಅವನ ಮೇಲೆ ಹೋಗದಿರು'' ಎಂದು ಉತ್ತರಿಸಿದ ಭೀಷ್ಮರು, ಘಟೋತ್ಕಚನನ್ನು ಎದುರಿಸಲು ಭಗದತ್ತನನ್ನು ಕಳುಹಿಸಿಕೊಟ್ಟರು. ತನ್ನ ಮೇಲೆ ನುಗ್ಗಿದ ಭಗದತ್ತನನ್ನೂ ಅವನ ಆನೆಯನ್ನೂ ಘಟೋತ್ಕಚ ಬಹಳವಾಗಿ ಪೀಡಿಸಿದ. ಭಗದತ್ತನು ಒಂದು ಶೂಲವನ್ನು ಅವನ ಮೇಲೆ ಪ್ರಯೋಗಿಸಿದ. ಅದನ್ನು ಕಂಡ ಅವನು ಆಕಾಶಕ್ಕೆ ನೆಗೆದು, ಆ ಶೂಲವನ್ನು ಕೈಯಲ್ಲಿ ಹಿಡಿದು ಮೊಳಕಾಲ ಮೇಲಿರಿಸಿಕೊಂಡು ಮುರಿದು ಹಾಕಿದ. ಅವನ ಆ ಸಾಹಸ ದೇವತೆಗಳನ್ನು ಸಂತೋಷಪಡಿಸಿತು.

ಆಗ ಭಗದತ್ತನು ಅವನ ಅನುಯಾಯಿಗಳನ್ನು ಹೊಡೆಯತೊಡಗಿದ. ಅವನಿಗೆ ಭೀಮಸೇನ ಎದುರಾದ. ಭೀಮಸೇನನ ಮೇಲೆ ಭಗದತ್ತ ತನ್ನ ಆನೆಯನ್ನು ನುಗ್ಗಿಸಲು ಯತ್ನಿಸಿದ. ಆದರೆ ಭೀಮನ ಬಾಣಗಳ ಹೊಡೆತವನ್ನು ಎದುರಿಸಿ ಒಂದು ಹೆಜ್ಜೆಯನ್ನೂ ಸಹ ಮುಂದಿಡಲು ಆ ಆನೆಗೆ ಸಾಧ್ಯವಾಗಲಿಲ್ಲ. ಆನೆ ಹಾಗೆ ಸ್ತಬ್ಧವಾಗಿ ನಿಂತುಬಿಡಲು, ಅವನು ಭೀಮನ ಕುದುರೆಗಳನ್ನು ಬಾಣಗಳಿಂದ ಪೀಡಿಸತೊಡಗಿದ; ಭೀಮನು ಅವನನ್ನೂ , ಅವನ ಆನೆಯನ್ನೂ ಕೊಲ್ಲಲು ಗದಾಪಾಣಿಯಾಗಿ ನುಗ್ಗಿದ. ಆ ವೇಳೆಗೆ ಹಿಂಭಾಗದಿಂದ ಅರ್ಜುನನು ಕೃಷ್ಣಸಮೇತನಾಗಿ ಅವನ ಮೇಲೆ ಸಾಗಿಬರಲು, ಭೀಮಾರ್ಜುನರಿಬ್ಬರ ಉಭಯರೀತಿಯ

ಆಕ್ರಮಣದಿಂದ ಭಯಗೊಂಡ ಭಗದತ್ತನು, ವೈಷ್ಣವಾಸ್ತ್ರವನ್ನು ತರಲೆಂದು[೧] ಅಲ್ಲಿಂದ ಪಲಾಯನ ಮಾಡಿದ. ಅವನೊಂದಿಗೆ ಭೀಮಾರ್ಜುನರಿಂದ ಪೆಟ್ಟು ತಿಂದ ಅವನ ಸೈನ್ಯವೂ ಓಡತೊಡಗಿತು. ಎಲ್ಲ ರಾಜರೂ ಹಿಮ್ಮೆಟ್ಟಿದರು. ಅದನ್ನು ಕಂಡ ಭೀಷ್ಮರು ಸೇನೆಯನ್ನು ಹಿಂತೆಗೆದುಕೊಂಡು ಅಂದಿನ ಯುದ್ಧವನ್ನು ಸಮಾಪ್ತಿಗೊಳಿಸಿದರು.

## ಒಂಭತ್ತನೆಯ ದಿನದ ಯುದ್ಧ

ಆ ರಾತ್ರಿ ಭೀಷ್ಮರ ಬಳಿಗೆ ಹೋಗಿ ದುರ್ಯೋಧನನು ಅವರನ್ನು ಕಠಿಣವಾದ ಮಾತುಗಳಿಂದ ನಿಂದಿಸಿದ. ಅದಕ್ಕೆ ಭೀಷ್ಮರು ''ಸಾವಿನ ಅಂಜಿಕೆಯನ್ನು ತೊರೆದು, ಸಾಧ್ಯವಿದ್ದಷ್ಟು ಶತ್ರುಗಳನ್ನು ಕೊಲ್ಲುವೆ' ಎಂದು ಶಪಥ ಮಾಡಿದರು. ಆ ಮಾತನ್ನು ಮಾರನೆಯ ದಿನ ಯುದ್ಧದಲ್ಲಿ ಸಾಕಷ್ಟು ನಡೆಸಿಯೂ ಬಿಟ್ಟರು. ಭೀಷ್ಮರನ್ನು ಸಾಧ್ಯವಾದಷ್ಟು ರೀತಿಯಲ್ಲಿ ಕೌರವರು ರಕ್ಷಿಸತೊಡಗಿದರು. ಭೀಷ್ಮರ ಬಾಣಗಳ ಹೊಡೆತಕ್ಕೆ ಹೆದರಿ ಚೇದಿ, ಪಾಂಚಾಲ ಹಾಗೂ ಮತ್ಸ್ಯದೇಶದ ರಾಜರು ಸಿಂಹಕ್ಕೆ ಭಯಪಟ್ಟ ಮೃಗಗಳಂತೆ ಓಡತೊಡಗಿದರು. ಅವರನ್ನೆಲ್ಲ ತಡೆದು ನಿಲ್ಲಿಸಿ, ಭೀಷ್ಮರನ್ನು ಎದುರಿಸಿ ಬಂದ ಅಭಿಮನ್ಯುವನ್ನು ಅಲಂಬುಸ ರಾಕ್ಷಸನು ಅಡ್ಡಗಟ್ಟಿದ. ಅವನನ್ನು ಗೆದ್ದ ಅಭಿಮನ್ಯುವು ಭೀಷ್ಮರತ್ತ ಸಾಗಲು, ಅವನನ್ನು ದುರ್ಯೋಧನನು ತಡೆದ. ಅವರಿಬ್ಬರಿಗೂ ಅದ್ಭುತವೂ, ಭಯಾನಕವೂ ಆದ ಯುದ್ಧ ಬಹುಕಾಲ ಸಮಸಮ-ವಾಗಿಯೇ ನಡೆಯಿತು. ಕೊನೆಗೆ ದುರ್ಯೋಧನನು ಅಭಿಮನ್ಯುವಿನ ಧನುಸ್ಸು, ಧ್ವಜಗಳನ್ನು ಕತ್ತರಿಸಿದ. ಅವನ ಮೇಲೂ ಉಗ್ರಬಾಣಗಳನ್ನು ಸುರಿಸಿ, ಅವನ ಸಾರಥಿಯನ್ನೂ ಕೊಂದ. ಕೂಡಲೇ ಅಲ್ಲಿಗೆ ಧಾವಿಸಿದ ಭೀಮಸೇನನು, ದುರ್ಯೋಧನನ ಕುದುರೆಗಳನ್ನು ಕೊಂದು-ಹಾಕಿದ. ದ್ರೋಣ, ಅಶ್ವತ್ಥಾಮ, ಭಗದತ್ತ, ಕೃಪ, ಚಿತ್ರಸೇನ ಮೊದಲಾದವರೆಲ್ಲ ಭೀಮನನ್ನು ಮುತ್ತಿದರು. ಅವರೆಲ್ಲರನ್ನೂ ಹಿಂದಕ್ಕೆ ಅಟ್ಟಿದ ಭೀಮನು ಚಿತ್ರಸೇನನನ್ನು ಕೊಲ್ಲಲು ಗದೆಯನ್ನು ಕೈಗೆತ್ತಿಕೊಂಡ. ಅದನ್ನು ಕಂಡು ಉಳಿದವರೆಲ್ಲ ಓಡಲು, ಚಿತ್ರಸೇನನು ರಥದಿಂದ ಕೆಳಕ್ಕೆ ಹಾರಿದ. ಭೀಮನ ಗದೆಯ ಪೆಟ್ಟಿಗೆ ಅವನ ರಥ ಪುಡಿಯಾಗಿಹೋಯಿತು. ಚಿತ್ರಸೇನ ಬದುಕುಳಿದಿದ್ದೇ ಕೌರವರಿಗೆಲ್ಲ ಸಂತಸದ ಸಂಗತಿಯಾಯಿತು.

ಭೀಷ್ಮರು ಪಾಂಚಾಲ ಕರೂಶ ಚೇದಿರಾಜರಿಗೆ ಸೇರಿದ ಹದಿನಾಲ್ಕು ಸಾವಿರ ರಥಗಳನ್ನೂ ತಮ್ಮ ಸಾಮರ್ಥ್ಯದಿಂದ ನಾಶಮಾಡಿ, ಅವರನ್ನು ತೋಳವು ಕುರಿಗಳನ್ನು ಓಡಿಸುವಂತೆ ಓಡಿಸಿದರು. ಹೀಗೆ ಪಾಂಡವರ ಸೇನೆಯನ್ನು ಹಿಂದಕ್ಕೆ ಅಟ್ಟಿದ ಉಗ್ರತೇಜಸ್ಸಿನ ಭೀಷ್ಮರು ಲೋಕಕ್ಕೆಲ್ಲ ತಮ್ಮ ಕೀರ್ತಿಯನ್ನು ಸಾರಿ, ರಾತ್ರಿಯಾಗಲು, ಕೌರವರಿಂದ ಪ್ರಶಂಸಿಸಲ್ಪಡುತ್ತ, ಶಿಬಿರಕ್ಕೆ ಮರಳಿದರು.

---

೧. ಈ ಬಾರಿ ಅವನೊಂದಿಗೆ ವೈಷ್ಣವಾಸ್ತ್ರ ಇರಲಿಲ್ಲವಾದ್ದರಿಂದ ಭೀಮಸೇನ ಅವನನ್ನು ಎದುರಿಸಿ ಸೋಲಿಸಿದ ಎಂಬ ವಿಶೇಷಾಂಶ ಇದರಿಂದ ತಿಳಿಯುವುದು.

ದ್ರೋಣಾಚಾರ್ಯರು ವಿರಾಟನ ಮುಂದೆಯೇ ಅವನ ಮಗ ಶಂಖನನ್ನು ಸಂಹರಿಸಿದರು ; ವಿರಾಟನನ್ನೂ ಜಯಿಸಿದರು ; ಪಾಂಡವರ ಸೇನೆಯನ್ನು ಓಡಿಸಿ, ಭೀಷ್ಮರ ಜೊತೆ ಶಿಬಿರಕ್ಕೆ ಹೊರಟರು. ಭೀಮಾರ್ಜುನರೂ ಸಹ ಶತ್ರುಗಳನ್ನು ಕೊಂದು ಓಡಿಸಿದರು. ಭೀಷ್ಮರಿಂದ ಭಯಗೊಂಡ ಯುಧಿಷ್ಠಿರನು ಸೈನ್ಯವನ್ನು ಹಿಂತೆಗೆದುಕೊಳ್ಳಲು, ಅವರೂ ಶಿಬಿರಕ್ಕೆ ಮರಳಿದರು.

ಭೀಷ್ಮರ ಪರಾಕ್ರಮಕ್ಕೆ ಭಯಪಟ್ಟ ಯುಧಿಷ್ಠಿರನು ಅವರ ಸಾವಿನ ಬಗೆಯನ್ನು ಅವರಿಂದಲೇ ತಿಳಿಯಲೆಂದು[೧] ಅಂದಿನ ರಾತ್ರಿ ಕೃಷ್ಣ ಹಾಗೂ ತಮ್ಮಂದಿರೊಂದಿಗೆ ಭೀಷ್ಮರ ಶಿಬಿರಕ್ಕೆ ಹೊರಟ. ಪಿತಾಮಹರೆಂಬ ಕಾರಣದಿಂದಲೂ, ತಾವು ಸಮರ್ಥರೇ ಆದರೂ ಅವರ ಅಪ್ಪಣೆಯಿಲ್ಲದೆ ಅವರನ್ನು ಕೊಲ್ಲಬಯಸದ್ದರಿಂದಲೂ, ಭೀಮಾರ್ಜುನರೂ ಅವರ ಅಪ್ಪಣೆಯನ್ನು ಪಡೆಯಲೆಂದು ಅವರನ್ನು ಹಿಂಬಾಲಿಸಿದರು. ಅವರೆಲ್ಲರಿಗಾಗಿ ಕೃಷ್ಣನೂ ಅವರ ಹಿಂದೆ ತೆರಳಿದ[೨].

## ಹತ್ತನೆಯ ದಿನದ ಯುದ್ಧ

ಭೀಷ್ಮರಿಂದ ಅವರನ್ನು ಕೊಲ್ಲಲು ಅಪ್ಪಣೆ ಪಡೆದುಕೊಂಡು ಪಾಂಡವರು, ಅವರ ಮಾತಿನಂತೆಯೇ ಶಿಖಂಡಿಯನ್ನು ಮುಂದಿಟ್ಟುಕೊಂಡು ಮಾರನೆಯ ದಿನ ಯುದ್ಧಕ್ಕೆ ಹೊರಟರು. ಭೀಷ್ಮರನ್ನು ಮುಂದಿಟ್ಟುಕೊಂಡು ಕೌರವರು ಬಂದರು. ಶಿಖಂಡಿಯನ್ನು ರಕ್ಷಿಸುತ್ತ ಅರ್ಜುನನೂ, ಭೀಷ್ಮರನ್ನು ರಕ್ಷಿಸುತ್ತ ದುಃಶಾಸನನೂ, ಮುಂಭಾಗದಲ್ಲಿ ಸಾಗಿದರು. ಉಳಿದವರೆಲ್ಲ ಭೀಷ್ಮರ ರಕ್ಷಣೆಯಲ್ಲೇ ತೊಡಗಿದರು. ಭೀಮಸೇನ ಮೊದಲಾದವರು ಅವರನ್ನು ಅಡ್ಡಗಟ್ಟಿದರು. ಭೀಷ್ಮರ ಬಳಿಗೆ ಹೊರಟ ಸಾತ್ಯಕಿಯನ್ನು ಅಲಂಬುಸ ರಾಕ್ಷಸನು ತಡೆದು ನಿಲ್ಲಿಸಲು, ಆ ಯಾದವವೀರನು ವಜ್ರಕಲ್ಪವಾದ ಬಾಣಗಳಿಂದ ಆ ರಾಕ್ಷಸನನ್ನು ನೋಯಿಸಿದ. ಆಗ ಆ ರಾಕ್ಷಸನು ಉಗ್ರವಾದ ಮಾಯೆಯನ್ನೇ ಸೃಷ್ಟಿಸಿದ. ಅಸ್ತ್ರದಿಂದ ಮಾಯೆಯನ್ನು ನಾಶಪಡಿಸಿ, ಸಾತ್ಯಕಿಯು ಆ ರಾಕ್ಷಸನನ್ನು ಓಡಿಸಿದ.

---

೧. ಭೀಷ್ಮರ ಪರಾಕ್ರಮ ಭೀಮಾರ್ಜುನರಿಗೆ ಎಂದೂ ಸಮಸ್ಯೆಯಾಗಿರಲಿಲ್ಲ. ಭೀಮಾರ್ಜುನರ ಮುಂದೆ ತಮ್ಮ ಆಟ ಸಾಗದು ಎಂಬ ಮಾತನ್ನು ಸ್ವತಃ ಭೀಷ್ಮರೇ ದುರ್ಯೋಧನನಿಗೆ ಸ್ಪಷ್ಟಪಡಿಸಿದ್ದ ವಿವರ ಮಹಾಭಾರತದಲ್ಲಿದೆ. ಆದರೆ ಪಿತಾಮಹರೆಂಬ ಗೌರವದಿಂದ ಭೀಮಾರ್ಜುನರು ಅವರ ಅನುಮತಿಯನ್ನು ಪಡೆದಾದ ಮೇಲೆಯೇ ಅವರನ್ನು ಸಂಹರಿಸುವ ಭಾವನೆಯನ್ನು ಹೊಂದಿದ್ದರು. ಅದಕ್ಕಾಗಿ ಯುಧಿಷ್ಠಿರ ಯುದ್ಧದ ಪ್ರಾರಂಭದಲ್ಲಿಯೇ ಅವರಿಗೆ ಯಾವ ರೀತಿಯ ಸಾವು ಅಭಿಪ್ರೇತ ಎಂದು ಕೇಳಿಕೊಂಡಿದ್ದ; ಅದಕ್ಕೆ ಅವರು ಅದನ್ನು ಮುಂದೊಮ್ಮೆ ತಿಳಿಸುವುದಾಗಿ ಹೇಳಿದ್ದರು. ಅದನ್ನು ಅವರ ಬಾಯಿಂದಲೇ ತಿಳಿದು ಅವರ ಯುದ್ಧಕ್ಕೆ ಮಂಗಳಹಾಡಲೆಂಬ ಭಾವನೆಯಿಂದ ಅಂದು ಅವರು ಹಾಗೆ ಅವರಲ್ಲಿಗೆ ತೆರಳಿದರು ಎಂಬುದು ಇಲ್ಲಿಯ ಭಾವ. ಈವರೆಗಿನ ಯುದ್ಧದಲ್ಲಿ ಭೀಮಾರ್ಜುನರಿಂದ ಭೀಷ್ಮರು ಅನೇಕಬಾರಿ ಪರಾಭವಗೊಂಡ ಉಲ್ಲೇಖ ಈಗಾಗಲೇ ಬಂದಿದೆ. ಉತ್ತರಗೋಗ್ರಹಣಪ್ರಸಂಗದಲ್ಲಿ ಇತರರೊಂದಿಗೆ ಭೀಷ್ಮರನ್ನೂ ಸಹ ಅರ್ಜುನ ಒಂಟಿಯಾಗಿಯೇ ಜಯಿಸಿದ ಸಂಗತಿಯೂ ಸುಪ್ರಸಿದ್ಧ ಎಂದ ಮೇಲೆ ಭೀಷ್ಮರ ಜಯ ಪಾಂಡವರಿಗೆ ಸಮಸ್ಯೆಯಾಗಿತ್ತು ಎಂಬ ಕಲ್ಪನೆಗೆ ಅವಕಾಶವಿರದು.

೨. ಇದು 'ಭಕುತಜನ ಮುಂದೆ ನೀನವರ ಹಿಂದೆ' ಎಂಬ ದಾಸವಾಣಿಗೆ ನಿದರ್ಶನದಂತಿರುವ ಪ್ರಸಂಗ.

ಅನಂತರ ಪಾರ್ಥನನ್ನು ಹಿಂಬಾಲಿಸಿ ಸಾತ್ಯಕಿಯು ಭೀಷ್ಮರತ್ತ ಸಾಗಿದ. ದ್ರೋಣ, ಅಶ್ವತ್ಥಾಮ, ದುರ್ಯೋಧನ, ಭೂರಿಶ್ರವಸ್, ಭಗದತ್ತ , ಕೃಪ, ಶಲ್ಯ, ಬಾಹ್ಲೀಕ, ಕೃತವರ್ಮ, ಸುಶರ್ಮ ಮತ್ತು ಎಲ್ಲ ಸೇನೆ - ಇವನ್ನೆಲ್ಲ ಭೀಮಸೇನನೊಬ್ಬನೇ ತಡೆದ. ಭೀಮನು ಅವರೆಲ್ಲರನ್ನು ಮತ್ತೆ ಮತ್ತೆ ವಿರಥರನ್ನಾಗಿ ಮಾಡಿ, ಭಗದತ್ತನನ್ನು ಅವನ ಆನೆಯ ಸಮೇತ ಓಡಿಸಿ, ಅರ್ಜುನನನ್ನು ಅವನು ಎದುರಿಸುವುದನ್ನು ತಪ್ಪಿಸಿದ. ಅರ್ಜುನನು ಭೀಷ್ಮರ ಬಳಿಗೆ ಬಂದ. ಭೀಷ್ಮರ ಬಳಿ ನಕುಲಸಹದೇವರೊಂದಿಗೆ ಹೋಗಬಯಸಿದ ಪರಾಕ್ರಮಿ ಧರ್ಮ-ರಾಜನನ್ನು, ಸಾವಿರ ಅಶ್ವಾರೋಹಿಗಳೊಂದಿಗೆ ಶಕುನಿಯು ಅಡ್ಡಗಟ್ಟಿದ. ಆ ಕುದುರೆಗಳನ್ನೂ ಕುದುರೆಸವಾರರನ್ನೂ, ಶಕುನಿಯನ್ನೂ ಸೋಲಿಸಿ ಅವರು ಭೀಷ್ಮರ ಬಳಿಗೆ ಬಂದರು. ದ್ರೌಪದಿಯ ಮಕ್ಕಳು, ವಿರಾಟದ್ರುಪದರು, ಕುಂತಿಭೋಜ, ಧೃಷ್ಟದ್ಯುಮ್ನ ಮೊದಲಾಗಿ ಎಲ್ಲರೂ ಅಲ್ಲಿ ನೆರೆದರು. ಭೀಷ್ಮರ ಬಳಿಗೆ ಹೊರಟಿದ್ದ ಧೃಷ್ಟದ್ಯುಮ್ನನನ್ನು ಸೈಂಧವ ಅಡ್ಡಗಟ್ಟಿದ. ಅವನ ಕುದುರೆ ಹಾಗೂ ಸೂತನನ್ನು ಕೊಂದು, ಅವನ ಗುಂಪಿನೊಂದಿಗೆ ಅವನನ್ನು ಓಡಿಸಿ, ವೀರನಾದ ಆ ಧೃಷ್ಟದ್ಯುಮ್ನ ಭೀಷ್ಮರ ಬಳಿಯೇ ಸೇರಿದ.

## ಭೀಷ್ಮಪಾತ

ಅರ್ಜುನನ ರಕ್ಷಣೆಯಲ್ಲಿ ಶಿಖಂಡಿಯು ಭೀಷ್ಮರ ಮುಂದೆ ನಿಂತು, ಬಾಣಗಳಿಂದ ಅವರನ್ನು ನೋಯಿಸಿದ. ಅವನು ಹೆಣ್ಣೆಂಬುದನ್ನು ತಿಳಿದಿದ್ದ ಭೀಷ್ಮರು ಅವನ ಮೇಲೆ ಬಾಣಗಳನ್ನು ಬಿಡಲಿಲ್ಲ, ಅವನು ಮಾತ್ರ ಅವರನ್ನು ನೋಯಿಸುತ್ತಲೇ ಇದ್ದ. ಕೋಪಗೊಂಡಿದ್ದ ದುರ್ಮ-ರ್ಷಣನು ಆಗ ಶಿಖಂಡಿಯನ್ನೂ, ದುಃಶಾಸನನು ಅರ್ಜುನನನ್ನೂ ತಡೆದರು. ದುರ್ಮರ್ಷಣ-ನನ್ನು ದಾಟಲು ಶಿಖಂಡಿಗೆ ಸಾಧ್ಯವಾಗದಾಯಿತು. ಲೋಕವೀರನಾದ ಅರ್ಜುನನಿಗೂ ದುಃ ಶಾಸನನನ್ನು ದಾಟಿ ಭೀಷ್ಮರ ಬಳಿಗೆ ಹೋಗುವುದು ಪ್ರಯಾಸದ ಕಾರ್ಯವೇ ಆಯಿತು. ಪರ್ವತವನ್ನು ಸಹ ಸೀಳುವಂತಹ ಹರಿತವಾದ ಬಾಣಗಳು ದುಃಶಾಸನನ ದೇಹಕ್ಕೆ ನಾಟ-ದಾದವು. ಆ ಇಬ್ಬರೂ ಕೋಪದಿಂದ ಬಹಳ ಕಾಲ ಹೋರಾಡಿದರು. ಆ ಅದ್ಭುತವಾದ ಯುದ್ಧ ಇಬ್ಬರಲ್ಲೂ ಸಮವಾಗಿಯೇ ನಡೆಯಿತು. ಅದನ್ನು ದೇವತೆಗಳೂ, ರಾಜರೂ ನೋಡುತ್ತಿದ್ದರು. ಆ ವೇಳೆಗೆ ವಿರಾಟ, ದ್ರುಪದ, ಕುಂತಿಭೋಜ, ದ್ರೌಪದಿಯ ಮಕ್ಕಳು, ಕೇಕಯರು ಮತ್ತು ಚೇಕಿತಾನರನ್ನು ಭೂರಿಶ್ರವಸ್, ಸೋಮದತ್ತ, ವಿಕರ್ಣ ಮತ್ತು ಕೇಕಯರು ಬಲವಾಗಿ ತಡೆದರು ; ಅವರನ್ನೆಲ್ಲ ಗೆದ್ದು ಭೀಷ್ಮರ ಬಳಿಗೆ ಬಂದರು.

ಆ ವೇಳೆಗೆ ಅರ್ಜುನನು ದುಃಶಾಸನನನ್ನು ಸೋಲಿಸಿ ಅಲ್ಲಿಗೆ ಬಂದ. ಅರ್ಜುನನ ನೆರವಿನಿಂದ ಶಿಖಂಡಿಯು ದುರ್ಮರ್ಷಣನನ್ನು ಜಯಿಸಿ, ಭೀಷ್ಮರ ಬಳಿಗೆ ಬಂದು ಅವರ ಮೇಲೆ ಬಾಣಗಳನ್ನು ಸುರಿಸತೊಡಗಿದ. ಅವರೆಲ್ಲರಿಂದಲೂ, ವಿವಿಧವಾದ ಶಸ್ತ್ರಾಸ್ತ್ರಗಳಿಂದ ಮರ್ಮಸ್ಥಳದಲ್ಲಿ ಪೆಟ್ಟು ತಿಂದ ಭೀಷ್ಮರು ಸಾತ್ಯಕಿ, ಪಾಂಚಾಲ, ಯುಧಿಷ್ಠಿರ ಮೊದಲಾದ ಎಲ್ಲರನ್ನೂ ವಿರಥರನ್ನಾಗಿ ಮಾಡಿದರು. ಅಲ್ಲದೆ ಪ್ರಳಯಕಾಲದ ಅಗ್ನಿಯಂತೆ ಉರಿದ ಅವರು

ಚೇದಿ, ಪಾಂಚಾಲ, ಕರೂಶ ಮೊದಲಾದವರ ಇಪ್ಪತ್ತೈದುಸಾವಿರ ಮಹಾರಥರನ್ನು ಯಮಪುರಿಗೆ ಅಟ್ಟಿದರು. ಸೂರ್ಯನಂತೆ ಪ್ರಜ್ವಲಿಸುತ್ತಿದ್ದ ಅವರನ್ನು ನೋಡಿ, ಪಾರ್ಥನು ಕೃಷ್ಣನ ಸೂಚನೆ-ಯಂತೆ, ಅರ್ಧಚಂದ್ರಾಕೃತಿಯ ಬಾಣದಿಂದ ಅವರ ಬಿಲ್ಲನ್ನು ಕತ್ತರಿಸಿದ. ಅವರು ಕೂಡಲೇ ಮತ್ತೊಂದು ಬಿಲ್ಲನ್ನು ಕೈಗೆತ್ತಿಕೊಂಡರು. ಅದನ್ನೂ ಅರ್ಜುನ ಕತ್ತರಿಸಿದ. ಹೀಗೆ ಅವರ ಎಂಟು ಧನುಸ್ಸುಗಳು ತುಂಡಾದವು; ಅವರ ಖಡ್ಗ-ಗುರಾಣಿಗಳನ್ನು ಸಹ ಕತ್ತರಿಸಿದ. ಬೇರೆ ರಾಜರು ಭೀಷ್ಮರಿಗೆ ಕೊಟ್ಟ ಎಲ್ಲ ಧನುಸ್ಸುಗಳನ್ನೂ ತುಂಡು ಮಾಡಿದ. ಅನಂತರ ಸೂರ್ಯಕಿರಣದಂತೆ ಹೊಳೆಯುವ ಬಾಣಗಳಿಂದ ಯುಧಿಷ್ಠಿರ ಮೊದಲಾದವರು ಸಹ ಹೊಡೆದರು ; ಅವುಗಳ ಪೆಟ್ಟಿಗೆ, ಭೀಷ್ಮರು ಭೂಮಿಯ ಮೇಲೆ ಬಿದ್ದರು. [೧]ಉತ್ತರಾಯಣದವರೆಗೂ ಅವರು ಹಾಗೆಯೇ ತಮ್ಮ ಪ್ರಾಣಗಳನ್ನು ಧರಿಸಿದರು.

## ಅರ್ಜುನನ ಅಸ್ತ್ರಕೌಶಲ

ಭೀಷ್ಮರು ಬೀಳುವ ವೇಳೆಗೆ ದ್ರೋಣ ಮೊದಲಾದವರನ್ನು ಓಡಿಸಿ ಭೀಮನು ಅಲ್ಲಿಗೆ ಸೇರಿದ. ಪಾಂಡವರು ಮತ್ತು ಎಲ್ಲ ಕೌರವರು ಆಯುಧಗಳನ್ನು ಕೆಳಗಿರಿಸಿ, ಭೀಷ್ಮರ ಬಳಿಗೆ ಧಾವಿಸಿದರು. ಅವರಿಗೆ ನಮಸ್ಕರಿಸಿ ಶಿಬಿರಕ್ಕೆ ಹಿಂದಿರುಗಿದ ಎಲ್ಲರೂ, ಮಾರನೆಯ ದಿನ ಬೆಳಿಗ್ಗೆ ಕೃಷ್ಣಸಮೇತರಾಗಿ ಭೀಷ್ಮರ ಬಳಿ ಸೇರಿದರು. ಹಿಂದಿನ ದಿನ ಅರ್ಜುನನಿಂದ ಬಾಣದ ತಲೆ-ದಿಂಬನ್ನು ಪಡೆದಿದ್ದ ಭೀಷ್ಮರು, ಈಗ ಬಾಯಾರಿ ನೀರನ್ನು ಕೇಳಿದರು. ಕೌರವರಿಗೆ ತಿಳಿಯದಿದ್ದ ಅದನ್ನು ತಿಳಿದು ಅರ್ಜುನನು ವಾರುಣಾಸ್ತ್ರದಿಂದ ಭೂಮಿಯನ್ನು ಭೇದಿಸಿ, ಸುಗಂಧ-ಪೂರಿತವಾದ ನೀರು ಊರ್ಧ್ವಧಾರೆಯಾಗಿ ಅವರ ಬಾಯಿಯಲ್ಲಿ ಬೀಳುವಂತೆ ಮಾಡಿದ. ಅದರಿಂದ ತೃಪ್ತರಾದ ಭೀಷ್ಮರು ಹೇಳಿದರು – "ಕೌರವರೇ ! ಅರ್ಜುನನ ಅಸ್ತ್ರನೈಪುಣ್ಯ ಎಂತಹುದೆಂಬುದನ್ನು ಕಂಡಿರಲ್ಲವೇ ? ಭೀಮನ ಬಲವನ್ನಂತೂ ಪ್ರತಿದಿನವೂ ಯುದ್ಧದಲ್ಲಿ ಕಾಣುತ್ತಲೇ ಇರುವಿರಿ. ಹರಿಯ ಎಂದೂ ಕುಂದದ ಮಾಹಾತ್ಮ್ಯವನ್ನು ಎಲ್ಲ ಲೋಕವೂ ಬಲ್ಲದು ; ಸಭೆಯಲ್ಲಿ ನೀವೂ ಸಹ ಕಂಡಿರುವಿರಿ. ಆದ್ದರಿಂದ ಯುದ್ಧವನ್ನು ನಿಲ್ಲಿಸಿರಿ ; ರಾಜರೆಲ್ಲ ಸುಖದಿಂದಿರಲಿ; ನಿಮಗೆ ಉಚಿತವಾದ ರೀತಿಯಲ್ಲಿ ರಾಜ್ಯವನ್ನು ಹಂಚಿಕೊಂಡು ಭೂಮಿಯನ್ನು ಪಾಲಿಸಿರಿ." ಅವರ ಮಾತನ್ನು ಆದರಿಸದೆ ದುರ್ಯೋಧನನು ಮನೆಗೆ ಹೊರಟ. ಶ್ರೀವೇದ-ವ್ಯಾಸರು ನೀಡಿದ್ದ ದಿವ್ಯದೃಷ್ಟಿಯಿಂದಾಗಿ ಸಂಜಯನು ತಿಳಿಸಿದ ಎಲ್ಲವನ್ನೂ ಧೃತರಾಷ್ಟ್ರನು ಕೇಳಿ ದುಃಖಿಸಿದ. ಕೃಷ್ಣನನ್ನೇ ಪರದೇವತೆಯನ್ನಾಗಿ ಆರಾಧಿಸುವ ಪಾಂಡವರೆಲ್ಲರೂ ಶಿಬಿರವನ್ನು ಸೇರಿ ಅವನ ಕಾರುಣ್ಯಕ್ಕೆ ಪಾತ್ರರಾಗಿ ನಲಿದರು.

★★★★★

೧. ಭೀಷ್ಮರಿಗೆ ಇಚ್ಛಾಮೃತ್ಯುತ್ವ ವರ ಇದ್ದಿದ್ದರಿಂದ ಅವರು ಹೀಗೆ ಉತ್ತರಾಯಣದವರೆಗೆ ಕಾಯಲು ಸಾಧ್ಯವಾಯಿತು ಎಂದು ತಿಳಿಯಬೇಕು.

# ದ್ರೋಣ ಪರ್ವ

## ದ್ರೋಣರ ಸೇನಾಪತ್ಯ - ಹನ್ನೊಂದನೆಯ ದಿನದ ಯುದ್ಧ

ಭೀಷ್ಮರು ಶರಮಂಚದ ಮೇಲೆ ಒರಗಿದ ಬಳಿಕ ಆಗಿನ ಕಾಲದ ಎಲ್ಲ ರಾಜರ ಅಸ್ತ್ರ ವಿದ್ಯಾಗುರುಗಳೂ, ರಥಿಗಳಲ್ಲಿ ಶ್ರೇಷ್ಠರೂ, ಮಹಾಜ್ಞಾನಿಗಳೂ, ಜಗದೊಡೆಯನಾದ ಪರಶು-ರಾಮನ ಶಿಷ್ಯರೂ ಆದ ದ್ರೋಣಾಚಾರ್ಯರಿಗೆ ದುರ್ಯೋಧನ ಸೇನಾಪತ್ಯವನ್ನು ವಹಿಸಿದ. ಭೀಷ್ಮರು ಅವಮಾನ ಮಾಡಿದರೆಂಬ ಕಾರಣದಿಂದ ಅವರು ಯುದ್ಧಮಾಡುವವರೆಗೂ ಯುದ್ಧದಲ್ಲಿ ಪಾಲ್ಗೊಳ್ಳದಿದ್ದ ಕರ್ಣ, ಅವರ ಅಪ್ಪಣೆಯನ್ನು ಪಡೆದು ರಥವನ್ನೇರಿ ದ್ರೋಣಾ-ಚಾರ್ಯರನ್ನು ಹಿಂಬಾಲಿಸಿದ. ದುರ್ಯೋಧನನು ಧರ್ಮರಾಜನನ್ನು ಸೆರೆಹಿಡಿದುಕೊಡಬೇಕು ಎಂದು ಕೇಳಿದ ವರವನ್ನು ನೆರವೇರಿಸುವುದಾಗಿ ದ್ರೋಣರು ಪ್ರತಿಜ್ಞೆ ಮಾಡಿದರು. ಆ ವಿಷಯ ಪಾಂಡವರ ಕಿವಿಗೂ ಬಿದ್ದಿತು.

ಪಾಂಡವ-ಕೌರವರಲ್ಲಿ ಮತ್ತೆ ಯುದ್ಧ ಪ್ರಾರಂಭವಾಯಿತು. ಆಗ ಬಾಣಗಳಿಂದ ದ್ರೋಣರು ಶತ್ರುಗಳನ್ನು ಸಂಹರಿಸುತ್ತ ನುಗ್ಗಿದರು. ಅವರನ್ನು ಅಡ್ಡಗಟ್ಟಲು ಬಂದ ಭೀಮಸೇನ-ನನ್ನು ಅಶ್ವತ್ಥಾಮ, ಕೃಪ ಮತ್ತು ಶಲ್ಯರಾಜ ಮೂವರೂ ತಡೆದರು. ಅವರನ್ನು ಕ್ಷಣಮಾತ್ರದಲ್ಲಿ ಸೋಲಿಸಿದ ಭೀಮನು ದ್ರೋಣರ ಬಳಿಗೇ ಸಾಗಿದ. ಭೀಮನನ್ನು ಹಿಂಬಾಲಿಸಿ ಅಭಿಮನ್ಯುವೂ ಬಂದ. ಶಲ್ಯರಾಜ ಅಭಿಮನ್ಯುವಿನೊಂದಿಗೆ ಯುದ್ಧಕ್ಕೆ ನಿಂತ. ಅವರಿಬ್ಬರ ಮಧ್ಯೆ ಬಹಳ ಭಯಂಕರವಾದ ಯುದ್ಧವೇ ನಡೆದು, ಕೊನೆಗೆ ಅಭಿಮನ್ಯುವನ್ನು ಹೊಡೆಯಲು ಶಲ್ಯರಾಜ ಗದೆಯನ್ನು ಕೈಗೆತ್ತಿಕೊಂಡ ; ಅದನ್ನು ಕಂಡ ಭೀಮನು ತಾನೂ ಗದಾಪಾಣಿಯಾಗಿ ಶಲ್ಯನ ಮೇಲೆ ಎರಗಿದ.

## ಭೀಮ - ಶಲ್ಯರ ಯುದ್ಧ

ಭೀಮ ಶಲ್ಯ ಇಬ್ಬರೂ ಅಜೇಯರು, ಗದಾಯುದ್ಧದಲ್ಲಿ ನಿಪುಣರು, ಅಸಾಧ್ಯ ಬಲ-ಶಾಲಿಗಳು, ಅತುಲ ಪರಾಕ್ರಮಿಗಳು. ಅವರಿಬ್ಬರಿಗೆ ನಡೆದ ಯುದ್ಧ ಆಶ್ಚರ್ಯಕರವಾಗಿತ್ತು; ರಮಣೀಯವಾಗಿತ್ತು. ಗದೆಯ ಪೆಟ್ಟುಗಳು ಅವರಿಬ್ಬರ ವಜ್ರಸದೃಶದೇಹಗಳ ಮೇಲೆ ಮೂಡಿದ್ದವು. ಕೊನೆಗೆ ಜನರೆಲ್ಲ ನೋಡುತ್ತಿದ್ದಂತೆಯೇ ಭೀಮಸೇನನ ಗದೆಯ ಪೆಟ್ಟಿಗೆ ಮದ್ರರಾಜ ಮೂರ್ಛಿತನಾಗಿ ಬಿದ್ದ, ಭೀಮನು ಕೋಪದಿಂದ ಭೂಮಿಯ ಮೇಲೆ ಮೊಣಕಾಲೂರಿ, ತಕ್ಷಣ ಮೇಲೆದ್ದ. ಕೃಪಾಚಾರ್ಯರು ಮೂರ್ಛೆ ತಿಳಿಯದೆ ಮದ್ರರಾಜ ಇನ್ನೂ ಮಲಗಿರುವುದನ್ನು, ಭೀಮಸೇನ ಅವನ ಮೇಲೆರಗಲು ಸಿದ್ಧನಾಗಿಯೇ ಇರುವುದನ್ನು ಕಂಡು, ಅಲ್ಲಿಗೆ ಬಂದು ಶಲ್ಯನನ್ನು ತಮ್ಮ ರಥದಲ್ಲಿ ಮಲಗಿಸಿಕೊಂಡು ಹೊರಟುಬಿಟ್ಟರು. ಹೀಗೆ ಶಲ್ಯನನ್ನು ಸೋಲಿಸಿದ ಭೀಮನು ಸಿಂಹನಾದ ಮಾಡುತ್ತಾ ತನ್ನ ರಥಕ್ಕೆ ಹಿಂದಿರುಗಿದ; ಶತ್ರುಸೈನ್ಯವನ್ನು ಮತ್ತೆ ಹೊಡೆದಟ್ಟಲಾರಂಭಿಸಿದ.

ಇತ್ತ ದ್ರೋಣಾಚಾರ್ಯರು ಅಭಿಮನ್ಯು, ಸಾತ್ಯಕಿ ಮೊದಲಾದವರನ್ನು ಸೋಲಿಸಿ ಧರ್ಮ–ರಾಜನನ್ನು ಹಿಡಿಯಲು ಮುಂದಾದರು. ಅವರನ್ನು ಕೃಷ್ಣನು ಸಾರಥಿಯಾಗಿದ್ದ ರಥದಲ್ಲಿ ಕುಳಿತು ಅರ್ಜುನನು ತಡೆಗಟ್ಟಿದ. ಶರೀರವನ್ನೇ ನಾಶಮಾಡುವ ಅವನ ಹರಿತವಾದ ಬಾಣಗಳಿಂದ ಕ್ಷಣಕಾಲದಲ್ಲಿಯೇ ಆನೆಕುದುರೆಗಳು ರಾಶಿರಾಶಿಯಾಗಿ ಮೃತಪಟ್ಟು , ರಕ್ತದ ಹೊಳೆಯೇ ಹರಿಯತೊಡಗಿತು. ಅಸಂಖ್ಯರಥಗಳು ಪುಡಿಪುಡಿಯಾದವು. ಹೀಗೆ ಭೀಮಾರ್ಜುನರ ಹೊಡೆತಕ್ಕೆ ತಮ್ಮ ಸೇನೆ ನಾಶವಾಗುತ್ತಿರುವುದನ್ನು ಗಮನಿಸಿ, ದ್ರೋಣರು ಅಂದಿನ ಯುದ್ಧವನ್ನು ನಿಲ್ಲಿಸಿ ಸೇನೆಯನ್ನು ಹಿಂತೆಗೆದುಕೊಂಡರು ; ಧರ್ಮರಾಜನು ಸೆರೆಸಿಕ್ಕಲಿಲ್ಲ.

## ಹನ್ನೆರಡನೆಯ ದಿನದ ಯುದ್ಧ

ಆ ರಾತ್ರಿ ದುರ್ಯೋಧನನು ದ್ರೋಣರ ಬಳಿಗೆ ಬಂದು, ಕ್ರೂರವಾದ ಮಾತುಗಳಿಂದ ಅವರನ್ನು ತೆಗಳಲು, ಅರ್ಜುನನನ್ನು ಬೇರೆಡೆಗೆ ಕರೆದೊಯ್ದಲ್ಲಿ ತಾವು ಧರ್ಮರಾಜನನ್ನು ಸೆರೆಹಿಡಿಯುವುದಾಗಿ ಅವರು ಭರವಸೆ ಇತ್ತರು. ಆಗ ಸುಶರ್ಮನಿಗೆ, ಸಂಶಪ್ತಕ ಮಹಾ–ರಥಿಕರೊಂದಿಗೆ ಕಾದಲು ಅರ್ಜುನನನ್ನು ದೂರಕ್ಕೆ ಕರೆದೊಯ್ಯಲು ದುರ್ಯೋಧನನು ಅಪ್ಪಣೆ ಮಾಡಲು, ಅವನೂ ಅದಕ್ಕೆ ಸಮ್ಮತಿಸಿದ. ಮಾರನೆಯ ದಿನ ಸುಶರ್ಮನು ತನ್ನ ಗುಂಪಿನೊಂದಿಗೆ ಕಾದಲು ಆಗ್ನೇಯ ದಿಕ್ಕಿಗೆ ಅರ್ಜುನನನ್ನು ಆಹ್ವಾನಿಸಿದ ; ಅರ್ಜುನನು ಅದನ್ನು ಅಂಗೀಕರಿಸಿ ಅವರೊಂದಿಗೆ ಯುದ್ಧಕ್ಕೆ ತೊಡಗಿದ. ಇತ್ತ ಭೀಮಸೇನನು ಕೌರವರ ಗಜಸೇನೆಗಳನ್ನು ಸದೆಬಡಿಯತೊಡಗಿದ.

## ವೈಜಯಂತಿಮಾಲೆಯಾದ ವೈಷ್ಣವಾಸ್ತ್ರ

ಆನೆಗಳೆಲ್ಲ ಭೀಮಸೇನನಿಗೆ ಆಹುತಿಯಾಗುವುದನ್ನೂ, ತಮ್ಮ ಸೈನ್ಯವೆಲ್ಲ ಎಲ್ಲ ಕಡೆಗಳಿಂದಲೂ ಓಡಿಹೋಗುತ್ತಿರುವುದನ್ನೂ ಕಂಡು, ದುರ್ಯೋಧನನ ಕೋರಿಕೆಯಂತೆ ಭಗದತ್ತನು ಸುಪ್ರತೀಕದೊಂದಿಗೆ ಧನುರ್ಧಾರಿಯಾಗಿ ಭೀಮನನ್ನು ಎದುರಿಸಲು ಹೊರಟ. ಸುಪ್ರತೀಕಕ್ಕೆ ಭಯಪಟ್ಟ ಭೀಮನ ಕುದುರೆಗಳು ನಿಲ್ಲದೆ ಓಡತೊಡಗಿದವು. ಸಾತ್ಯಕಿ, ಅಭಿಮನ್ಯು ಮೊದಲಾದವರೆಲ್ಲ ಸುಪ್ರತೀಕವನ್ನು ಎದುರಿಸಿ ಬರಲು, ಅದು ಅವರೆಲ್ಲರ ರಥಗಳನ್ನೂ , ಸೊಂಡಿಲಿನಿಂದ ಎತ್ತಿ ಆಕಾಶಕ್ಕೆ ತೂರಿತು. ಅವರೆಲ್ಲ ಪ್ರಯಾಸದಿಂದ ರಥದಿಂದ ಕೆಳಕ್ಕೆ ಹಾರಿ, ಅಪಾಯದಿಂದ ಪಾರಾದರು. ಅವರ ರಥಗಳು ಮಾತ್ರ ಪುಡಿಯಾಗಿ ಹೋದವು. ಆ ವೇಳೆಗೆ ಭೀಮನು ತನ್ನ ಕುದುರೆಗಳನ್ನು ಮತ್ತೆ ನಿಯಂತ್ರಿಸಿಕೊಂಡು ಭಗದತ್ತನ ಮೇಲೆ ಸಾಗಿಬಂದ. ''ಹೆಚ್ಚು ಸಂಕಟಕ್ಕೆ ಸಿಲುಕಿದಾಗ ಭಗದತ್ತ ಭೀಮನ ಮೇಲೆ ವೈಷ್ಣವಾಸ್ತ್ರವನ್ನು ಪ್ರಯೋಗಿಸ–ಬಹುದು. ಆದ್ದರಿಂದ ನಾನೀಗ ಅರ್ಜುನನೊಂದಿಗೆ ಅಲ್ಲಿಗೆ ತೆರಳಿ ನನ್ನ ವರದಿಂದಾಗಿ ಬೇರಾರಿಂದಲೂ ಧರಿಸಲಾಗದ ಅದನ್ನು ಸ್ವೀಕರಿಸುವೆ'' ಎಂಬುದಾಗಿ ಯೋಚಿಸಿ, ಕೃಷ್ಣನು ಅರ್ಜುನನೊಂದಿಗೆ ಅಲ್ಲಿಗೆ ಹೊರಡಲು ಉದ್ಯುಕ್ತನಾದ. ತ್ರಿಗರ್ತರು ಆಗ ಪಾರ್ಥನನ್ನು

ಅಡ್ಡಗಟ್ಟಲು, ಅವನು ಅವರಿಗೆ ಮೋಹ ಕವಿಸಲೆಂದು, [೧]ತ್ವಷ್ಟ್ರಾಸ್ತ್ರವನ್ನು ಪ್ರಯೋಗಿಸಿದ. ಆ ಅಸ್ತ್ರದ ಪ್ರಭಾವದಿಂದ ಮೋಹಕ್ಕೊಳಗಾದ ಅವರೆಲ್ಲರೂ, ತಮ್ಮಲ್ಲಿಯೇ ಪರಸ್ಪರರನ್ನು ಕೃಷ್ಣ-ಪಾರ್ಥರೆಂದು ತಪ್ಪಾಗಿ ತಿಳಿಯುತ್ತಾ ಹೊಡೆದುಕೊಳ್ಳತೊಡಗಿದರು. ಇತ್ತ ಅರ್ಜುನನು ಭಗದತ್ತನನ್ನು ಸಮೀಪಿಸಿದ.

ಭಗದತ್ತನು ಭೀಮನನ್ನು ಬಿಟ್ಟು ಅರ್ಜುನನ ಮೇಲೆಯೇ ಗಜಾರೂಢನಾಗಿ ಹೊರಟ; ತನ್ನ ಆನೆಯನ್ನು ಅರ್ಜುನನ ರಥದ ಮೇಲೆ ನುಗ್ಗಿಸಲು ಪ್ರಯತ್ನಿಸಿದ. ಆನೆಯ ವಿರುದ್ಧ ದಿಕ್ಕಿನಲ್ಲಿ ಕೃಷ್ಣನು ಮನೋವೇಗದಿಂದ ರಥವನ್ನು ಸುತ್ತಿಸತೊಡಗಲು, ಆ ಆನೆಗೆ ರಥವನ್ನು ಸಮೀಪಿಸಲು ಸಾಧ್ಯವಾಗದೇ ಹೋಯಿತು. ಆ ವೇಳೆಯಲ್ಲಿ ತೀಕ್ಷ್ಣವಾದ ಬಾಣಗಳಿಂದ ಅರ್ಜುನನು ಭಗದತ್ತನನ್ನು ನೋಯಿಸಿದ. ಅವರಿಬ್ಬರಲ್ಲಿ ಶಸ್ತ್ರಾಸ್ತ್ರಗಳ ಯುದ್ಧ ಬಹುಕಾಲ ನಡೆಯಿತು. ಕೊನೆಗೆ ಅರ್ಜುನನು ಭಗದತ್ತನ ಧನುಸ್ಸನ್ನು ತನ್ನ ಬಾಣದಿಂದ ತುಂಡು ಮಾಡಿದ.

## ಭಗದತ್ತನ ವಧೆ

ಆಗ ಭಗದತ್ತನು ವೈಷ್ಣವಾಸ್ತ್ರವನ್ನು ಅಂಕುಶದಲ್ಲಿ ಸೇರಿಸಿ ಪಾರ್ಥನ ಮೇಲೆ ಪ್ರಯೋಗಿಸಿದ. ಕೂಡಲೇ ಕೃಷ್ಣನು ಮೇಲೆದ್ದು ಆ ಅಸ್ತ್ರವನ್ನು ತಾನು ಧರಿಸಿದ. ಅದು ಜಗದೊಡೆಯನಾದ ಕೃಷ್ಣನ ಕೊರಳಲ್ಲಿ ವೈಜಯಂತೀಮಾಲೆಯಾಗಿ ಶೋಭಿಸತೊಡಗಿತು. ಅದನ್ನು ಕಾಣುತ್ತಲೇ ಅರ್ಜುನ – "ಕೃಷ್ಣ ! ನೀನೇಕೆ ಅದನ್ನು ಧರಿಸಿದೆ ?" ಎಂದು ಕೇಳಿದ ; ಕೃಷ್ಣ ವಿವರಿಸಿದ – "ಎಲ್ಲವನ್ನು ಸದಾ ಧರಿಸುವುದು ನಾನೇ ಅಲ್ಲವೆ? ನನಗೆ ಸದೃಶನೇ ಇಲ್ಲದಿರುವಾಗ, ಉತ್ತಮನೆಲ್ಲಿಂದ ಬಂದಾನು? ನಾನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ನಾಲ್ಕು ರೂಪಗಳನ್ನು ಧರಿಸಿ, ಅವುಗಳಿಂದ ಕ್ರಮವಾಗಿ ಎಲ್ಲ ಜಗತ್ತಿನ ಮೋಕ್ಷ , ಪ್ರಲಯ, ಸ್ಥಿತಿ ಮತ್ತು ಸೃಷ್ಟಿಗಳನ್ನು ಮಾಡುವೆನು. ಇಂತಹ ವಾಸುದೇವಾದಿ ನಾಲ್ಕುರೂಪಗಳ ನಾನು ಅನಿರುದ್ಧನಾಗಿ ಯಾವಾಗಲೂ ಎಲ್ಲರ ಹೃದಯದಲ್ಲೂ ನೆಲೆಸಿರುವೆನು. ಅಂತಹ ನಾನೇ ವರಾಹರೂಪದಿಂದ ಭೂಮಿದೇವಿಯ ಪ್ರೀತಿಗೆಂದು, ನರಕಾಸುರನಿಗೆ ನನ್ನ ಆ ಅಸ್ತ್ರವನ್ನು ನೀಡಿದ್ದೆ. ಅಸ್ತ್ರವಿರುವವರೆಗೂ ಅವನು ಪುತ್ರಸಮೇತನಾಗಿ ನಾಶವಾಗದಿರುವಂತೆ ವರವಿತ್ತಿದ್ದೆ. ಆ ಅಸ್ತ್ರವನ್ನು ಧರಿಸಲು ನನ್ನ ಹೊರತು ಬೇರಾರಿಗೂ ಸಾಧ್ಯವಾಗದು. ಆದ್ದರಿಂದಲೇ ನಾನು ಆ ಅಸ್ತ್ರವನ್ನು ಧರಿಸಿದೆ. ಅಸ್ತ್ರಹೀನನಾಗಿರುವ ಅವನನ್ನೀಗ ನೀನು ಸಂಹರಿಸು." ಇದನ್ನೆಲ್ಲ ಕೇಳಿ ಆಶ್ಚರ್ಯಚಕಿತನಾದ ಅರ್ಜುನನು, ಒಂದು ಬಾಣವನ್ನು ಅಭಿಮಂತ್ರಿಸಿ ಭಗದತ್ತನ ಹೃದಯಕ್ಕೂ, ಮತ್ತೊಂದು ಉತ್ತಮ ಬಾಣವನ್ನು ಆನೆಯ ಕುಂಭಸ್ಥಲಕ್ಕೂ ಪ್ರಯೋಗಿಸಿದ. ಪರ್ವತಪ್ರಾಯರಾಗಿದ್ದ ಅವರಿಬ್ಬರೂ ಇಂದ್ರನ ವಜ್ರಾಯುಧದ ಪೆಟ್ಟಿಗೆ ಪರ್ವತಗಳಂತೆ ಧರೆಗುರುಳಿದರು. ಅರ್ಜುನನ ಈ ಕಾರ್ಯವನ್ನು "ಭಲೇ ! ಭಲೇ !" ಎಂಬುದಾಗಿ ಅವನ ಕಡೆಯವರು ಶ್ಲಾಘಿಸಿದರು.

---

೧. ತ್ವಷ್ಟ್ರಾಸ್ತ್ರ ಎಂಬುದು ಒಂದುಬಗೆಯ ಸಮ್ಮೋಹನಾಸ್ತ್ರ. ಇಂತಹ ಅಸ್ತ್ರವೊಂದನ್ನು ಉತ್ತರಗೋಗ್ರಹಣಕಾಲದಲ್ಲಿ ಅರ್ಜುನ ಕುರುಸೇನೆಯ ಮೇಲೆ ಪ್ರಯೋಗಿಸಿದ್ದ ವಿವರ ವಿರಾಟಪರ್ವದಲ್ಲಿ ಬಂದಿದೆ.

## ಹನ್ನೆರಡನೆಯ ದಿನದ ಯುದ್ಧದ ಮುಕ್ತಾಯ

ಅನಂತರ ಪಾರ್ಥನು ತನ್ನ ಮೇಲೆ ಎರಗಿದ ಅಚಲ ಮತ್ತು ವೃಷಭ ಎಂಬ ಇಬ್ಬರು ಶಕುನಿಯ ತಮ್ಮಂದಿರನ್ನು ಕೊಂದ ; ಶಕುನಿಯನ್ನು ಸಹ ಬಾಣಗಳಿಂದ ಪೀಡಿಸಿದ. ಶಕುನಿಯು ಮಾಯೆಯನ್ನು ಸೃಷ್ಟಿಸಲು, ಅರ್ಜುನ ಅದನ್ನು ವಿಜ್ಞಾನಾಸ್ತ್ರದಿಂದ ನಾಶಮಾಡಿ, ಆ ಪಾಪಿಯನ್ನು ಓಡಿಸಿದ. ಬಳಿಕ ಅರ್ಜುನನು ಕೌರವಸೇನೆಯನ್ನು ಓಡಿಸತೊಡಗಿದ. ಅಶ್ವತ್ಥಾಮರು ಆ ವೇಳೆಗೆ ಮಾಹಿಷ್ಮತಿಯ ಅರಸನಾದ ನೀಲನನ್ನು ಸಂಹರಿಸಿದ್ದನ್ನು ಕಂಡು, ಭೀಮನು ಅವರ ಕುದುರೆಗಳನ್ನು ಕೊಂದು, ಅವರನ್ನೂ, ಕೌರವರ ಸೈನ್ಯವನ್ನೂ ಅಟ್ಟತೊಡಗಿದ. ಭೀಮಾರ್ಜುನರ ಹೊಡೆತಕ್ಕೆ ಪ್ರಾಣ ಕಳೆದುಕೊಳ್ಳುತ್ತಿದ್ದ ತಮ್ಮ ಸೇನೆಯನ್ನು ನೋಡಿ, ದ್ರೋಣರು ಅಂದಿನ ಯುದ್ಧವನ್ನು ಕೂಡಲೇ ನಿಲ್ಲಿಸಿ ಶಿಬಿರಕ್ಕೆ ಮರಳಿದರು. ಒಂದು ಕಡೆ ಭಗದತ್ತನ ಸಾವಿನಿಂದ, ಮತ್ತೊಂದೆಡೆ ಧರ್ಮರಾಜನು ಸೆರೆಸಿಕ್ಕದ್ದರಿಂದ ಅತ್ಯಂತ ಖಿನ್ನನಾದ ದುರ್ಯೋಧನನು, ದ್ರೋಣರನ್ನು ಕಟುವಾಗಿ ನಿಂದಿಸಿದ. ದ್ರೋಣರು ''ನಾಳೆ ಪಾರ್ಥನನ್ನು ಸಂಶಪ್ತಕರು ದೂರಕ್ಕೆ ಕರೆದೊಯ್ದ ಬಳಿಕ ಧರ್ಮರಾಜನನ್ನು ಸೆರೆಹಿಡಿಯುವೆ ಅಥವಾ ಅವನಿಗೆ ಸಮನಾದ ಪಾಂಡವವೀರನೊಬ್ಬನನ್ನು ಕೊಲ್ಲುವೆ'' ಎಂಬುದಾಗಿ ಶಪಥ ಮಾಡಿದರು.

## ಹದಿಮೂರನೆಯ ದಿನದ ಯುದ್ಧ - ಪದ್ಮವ್ಯೂಹ

ಬೆಳಿಗ್ಗೆ ಎಂದಿನಂತೆ ಯುದ್ಧ ಆರಂಭವಾಯಿತು. ದ್ರೋಣರು ಆ ದಿನ ವಿಷ್ಣುವಿನ ವರದಿಂದ ಬೇರಾರಿಂದಲೂ ಭೇದಿಸಲಾಗದ ಪದ್ಮವ್ಯೂಹವನ್ನು, ಅದಕ್ಕೆ ವಿಹಿತವಾದ ಮಂತ್ರವನ್ನು ಜಪಿಸಿ, ನಿರ್ಮಿಸಿದರು. ಅದರ ಬಳಿಗೆ ಅರ್ಜುನನ ಹೊರತು ಉಳಿದೆಲ್ಲ ಪಾಂಡವರೂ ಸಮೀಪಿಸಿದರು. ವೀರನಾದ ಅರ್ಜುನನು ಸಂಶಪ್ತಕರ ಜೊತೆ ಕಾದಾಟ ನಡೆಸಿದ ; ಅದರ ಬಳಿಗೆ ಬಂದರೂ ಪಾಂಡವರಿಗೆ ಆ ವ್ಯೂಹವನ್ನು ಭೇದಿಸಲು ಸಾಧ್ಯವಾಗಲಿಲ್ಲ. ತನ್ನ ಪ್ರತಿಭೆಯಿಂದಾಗಿ ಭೀಮನು ಅದರ ಭೇದನಕ್ರಮವನ್ನು ಬಲ್ಲವನಾಗಿದ್ದರೂ, ಅದಕ್ಕಾಗಿ ಕಾಮ್ಯಫಲದಾಯಕವಾದ ಅದರ ಮಂತ್ರವನ್ನು ಜಪಿಸಲಿಲ್ಲ. ಆಗ ಧರ್ಮರಾಜನು ಅದನ್ನು ತಿಳಿದಿದ್ದ ಅಭಿಮನ್ಯುವನ್ನು ಕುರಿತು – ''ವತ್ಸ ! ನೀನು ವ್ಯೂಹವನ್ನು ಭೇದಿಸು ; ನಿನ್ನನ್ನು ನಾವೆಲ್ಲ ಹಿಂಬಾಲಿಸಿ ಬರುವೆವು '' ಎಂದು ಹೇಳಿದ. ರಥಿಗಳಲ್ಲಿ ಶ್ರೇಷ್ಠನಾದ ಅಭಿಮನ್ಯುವು ಧರ್ಮರಾಜನ ಮಾತುಗಳನ್ನು ಅಂಗೀಕರಿಸಿ, ಶತ್ರುಗಳ ಸೇನೆಯನ್ನು ಭೇದಿಸಿ, ಒಳಕ್ಕೆ ನುಗ್ಗಿದ. ಅವನನ್ನು ಹಿಂಬಾಲಿಸಿ ಒಳಗೆ ನುಗ್ಗಲೆತ್ನಿಸಿದ ವೃಕೋದರ ಮೊದಲಾದವರನ್ನು ಸೈಂಧವ ತಡೆಗಟ್ಟಿದ. ಶಿವನ ವರದಿಂದಾಗಿ ಜಯದ್ರಥನು ತಮ್ಮನ್ನು ತಡೆಯುತ್ತಿದ್ದಾನೆಂದು ತಿಳಿದಿದ್ದ ಭೀಮನು, ಅವನನ್ನು ಗೆಲ್ಲಲು ತಾನು ಸಮರ್ಥನೇ ಆದರೂ, ಅಂದು ಅಭಿಮನ್ಯು ಮಡಿಯಬೇಕೆಂಬ ಕೃಷ್ಣನ ಅಭಿಪ್ರಾಯವನ್ನು ತಿಳಿದಿದ್ದರಿಂದ ಹಾಗೆ ಮಾಡದೆ ಅಶಕ್ತನಂತೆ ಅವನೊಂದಿಗೆ ಕಾದಾಡುತ್ತಲೇ ನಿಂತ. ಜಯದ್ರಥನೊಳಗಿದ್ದ ಶಿವನೊಂದಿಗೆ ಭೀಮಾದಿಗಳು ಆ ರೀತಿ ಹೊರಗೇ ಕಾದುತ್ತ ನಿಲ್ಲಲು, ಒಳಕ್ಕೆ ಪ್ರವೇಶಿಸಿದ ವೀರ ಅಭಿಮನ್ಯುವು ಶತ್ರುಸೇನೆಯನ್ನು ಉಲ್ಲೋಲಕಲ್ಲೋಲ ಮಾಡಿದ.

## ಅಭಿಮನ್ಯುವಿನ ವಧೆ

ದ್ರೋಣ, ದುರ್ಯೋಧನ, ಕರ್ಣ, ಶಲ್ಯ, ಅಶ್ವತ್ಥಾಮ ಮೊದಲಾದ ಪ್ರಮುಖರೊಂದಿಗೆ ಹೋರಾಟ ನಡೆಸಿದ ಅಭಿಮನ್ಯು, ಅವರನ್ನು ಅನುಸರಿಸಿ ಬಂದವರ ತಲೆಗಳನ್ನು ಕತ್ತರಿಸುತ್ತಾ ಓಡಾಡಿದ. ದುರ್ಯೋಧನನು ನೋಡುತ್ತಿದ್ದಂತೆಯೇ, ಅವನ ಮಗ ಲಕ್ಷಣನನ್ನು ಅಭಿಮನ್ಯುವು ಮೃತ್ಯುವಿಗೆ ಒಪ್ಪಿಸಿದ; ಕುರುಸೇನೆಯ ಹತ್ತುಸಾವಿರ ರಥಗಳನ್ನು ತನ್ನ ಬಾಣಗಳಿಂದ ನಾಶಮಾಡಿದ. ಹರಿಯ ಕೋಪಕ್ಕೆ ಅಂಜಿದ ದ್ರೋಣ ಮೊದಲಾದವರು ಎದುರುಗಡೆ ನಿಂತು ಅಭಿಮನ್ಯುವನ್ನು ಕೊಲ್ಲಲು ಅಸಮರ್ಥರಾಗಿ, ವಿಚಾರ ನಡೆಸಿದರು. ಕರ್ಣನನ್ನು ಮುಂದಿಟ್ಟುಕೊಂಡು ಕ್ಷಣದಲ್ಲಿಯೇ ಅವನ ಬಿಲ್ಲು, ಕುದುರೆ, ಮತ್ತು ರಥಗಳನ್ನು ನಾಶ ಮಾಡಿದರು. ಕರ್ಣನು ಅವನ ಧನುಸ್ಸನ್ನೂ , ಕೃಪಾಚಾರ್ಯರು ಸಾರಥಿಯನ್ನೂ , ದ್ರೋಣರು ಕುದುರೆಗಳನ್ನೂ , ಬಾಣಗಳಿಂದ ಕತ್ತರಿಸಿದರು. ಅವನನ್ನು ಕೊಲ್ಲಲು ಕೃಷ್ಣನ ಭಯದಿಂದಾಗಿ ಅವರಾರೂ ಮುಂದಾಗಲಿಲ್ಲ. ಆ ವೇಳೆಗೆ [೧]ದುಃಶಾಸನನ ಮಗನು ಗದಾಪಾಣಿಯಾಗಿ ಗದಾಧಾರಿಯಾದ ಅಭಿಮನ್ಯುವಿನ ಮೇಲೆ ನುಗ್ಗಿದ. ಮಹಾಪರಾಕ್ರಮಿಗಳಾದ ಅವರಿಬ್ಬರೂ ಪರಸ್ಪರರ ಗದಾಪ್ರಹಾರಗಳಿಂದಾಗಿ ಒಟ್ಟಾಗಿಯೇ ಸತ್ತು ಬಿದ್ದರು. ಅಭಿಮನ್ಯುವು ಮೃತನಾಗಲು ಹರ್ಷದಿಂದ ಶತ್ರುಗಳು ಧ್ವನಿಗೈಯ್ಯುತ್ತಿರುವುದನ್ನು ಕೇಳಿ, ಭೀಮಸೇನನು ಸೈಂಧವ ಮೊದಲಾದ ಎಲ್ಲರನ್ನೂ ಗೆದ್ದು ಯುಧಿಷ್ಠಿರನ ಬಳಿಯಲ್ಲಿ ನಿಂತ[೨].

## ಅರ್ಜುನನ ಘೋರಶಪಥ

ಆಗ ವೇದವ್ಯಾಸರು ಅಲ್ಲಿಗೆ ಆಗಮಿಸಿ ದುಃಖಿತಪ್ತರಾದ ಧರ್ಮರಾಜ ಮೊದಲಾದವರಿಗೆ ಸಮಾಧಾನ ಹೇಳಿದರು.

ಸಂಶಪ್ತಕರ ಗುಂಪನ್ನು ಗೆದ್ದು ಅರ್ಜುನನು ರಾತ್ರಿಯ ವೇಳೆಯಲ್ಲಿ ಕೃಷ್ಣಸಮೇತನಾಗಿ ಶಿಬಿರಕ್ಕೆ ಬರುತ್ತಲೇ, ತನ್ನ ಮಗನ ವಧೆಯ ವಿಚಾರವನ್ನು ಕೇಳಿ ಬಹಳವಾಗಿ ದುಃಖಿಸಿದ ; ಹಾಗೂ ಜಯದ್ರಥನನ್ನು ಮಾರನೆಯ ದಿನ ಸೂರ್ಯಾಸ್ತದ ಒಳಗಾಗಿ ಸಂಹರಿಸುವುದಾಗಿ ಪ್ರತಿಜ್ಞೆಯನ್ನೂ ಮಾಡಿದ.

---

೧. ಅಭಿಮನ್ಯು ಅಂದು ಇಡೀ ದಿನ ಬಿಡುವಿಲ್ಲದೆ ಕಾದಾಡಿದ್ದವನು. ದ್ರೋಣಾದಿ ಮಹಾರಥರ ಬಾಣಗಳಿಂದ ಪೆಟ್ಟು ತಿಂದಿದ್ದವನು ; ರಥ ಮೊದಲಾದವುಗಳನ್ನು ಕಳೆದುಕೊಂಡಿದ್ದವನು ; ಮುಖ್ಯವಾಗಿ ತನ್ನವರಾರೂ ಇಲ್ಲದೆ ಒಂಟಿಯಾಗಿದ್ದವನು. ಆದರೆ ದುಃಶಾಸನನ ಮಗ ತನ್ನವರ ಬೆಂಗಾವಲಿನಲ್ಲಿ ಧಾವಿಸಿ ಬಂದಿದ್ದವನು. ಅದರಿಂದಾಗಿ ಬಸವಳಿದಿದ್ದ ಅಭಿಮನ್ಯುವನ್ನು ಎದುರಿಸಿ .ಹೊಡೆಯಲು ಸಾಧ್ಯವಾಯಿತು ಎಂದು ತಿಳಿಯಬೇಕು. ಅಭಿಮನ್ಯು ಮಾತ್ರ ಸಹಜವಾಗಿಯೇ ಲೋಕವೀರನಾಗಿದ್ದ ಮಹನೀಯ.

೨. ಶ್ರೀಕೃಷ್ಣನ ಸಂಕಲ್ಪದಂತೆ ಅಭಿಮನ್ಯುವಿನ ಮರಣವು ಪೂರೈಸಿದೊಡನೆಯೇ ಭೀಮಸೇನನು ಜಯದ್ರಥನನ್ನು ಅವನಿಗೆ ಶಿವನ ವರವಿದ್ದರೂ ಪರಾಭವಗೊಳಿಸಿ ಪದ್ಮವ್ಯೂಹದೊಳಗೆ ನುಗ್ಗಿದ. ಇದರಿಂದ ಆವರೆಗೂ ಭೀಮಸೇನ ಆ ವ್ಯೂಹವನ್ನು ಭೇದಿಸದೇ ಇದ್ದುದು ಅಶಕ್ತಿಯಿಂದಲ್ಲ ; ಕೇವಲ ಶ್ರೀಕೃಷ್ಣನ ಸಂಕಲ್ಪಕ್ಕೆ ಅನುಗುಣವಾಗಿ ವರ್ತಿಸಲೆಂದು ಮಾತ್ರ ಎಂದು ತಿಳಿಯುವುದು.

ಆ ರಾತ್ರಿ ಕೃಷ್ಣನು ಅರ್ಜುನನನ್ನು ಸ್ವಪ್ನದಲ್ಲಿ ಶಿವನ ಬಳಿಗೆ ಕರೆದುಕೊಂಡು ಹೋದ. ತಾನೇ ಎಲ್ಲ ಜಗತ್ತಿನ ರಕ್ಷಣೆ ಮೊದಲಾದವುಗಳನ್ನು ಮಾಡಬಲ್ಲ ಶಕ್ತಿಯನ್ನು ಹೊಂದಿದ್ದರೂ, ತಾನು ಗುರುಮುಖದಿಂದಲೇ ಅನುಗ್ರಹವನ್ನು ಮಾಡುವವನು ಎಂಬುದನ್ನು ತೋರಿಸಿಕೊಡಲೆಂದು ಹಾಗೆ ಮಾಡಿದ. ಶಿವನೇ ಅರ್ಜುನನಿಗೆ ನಿಜವಾದ ಅಸ್ತ್ರಗುರು ಎಂಬುದನ್ನು ತಿಳಿಸಲು ಅವನ ಬಳಿಗೇ ಕರೆದೊಯ್ದು , ಉಲ್ಬಣವಾದ ಅಸ್ತ್ರವನ್ನು ಕೊಡಿಸಿದ. ಅವನಿಗೆ ರಕ್ಷೆಯನ್ನು ಸಹ ಮಾಡಿಸಿದ; ಉಪಪ್ಲಾವ್ಯಕ್ಕೆ ಹೋಗಿ ಸುಭದ್ರೆಗೆ ಸಮಾಧಾನವನ್ನು ಹೇಳಿ ಬಂದ. ಬೆಳಿಗ್ಗೆ ರಥವನ್ನು ಸಿದ್ಧಪಡಿಸಿ , ಅರ್ಜುನನೊಂದಿಗೆ ಯುದ್ಧಕ್ಕೆ ಹೊರಟ.

ಇತ್ತ ಅರ್ಜುನನ ಪ್ರತಿಜ್ಞೆಯನ್ನು ಕೇಳಿ ದುರ್ಯೋಧನ, ಜಯದ್ರಥ ಮೊದಲಾಗಿ ಎಲ್ಲರೂ ಚಿಂತಾಕ್ರಾಂತರಾದರು. ದುರ್ಯೋಧನನು ದ್ರೋಣರನ್ನು ಜಯದ್ರಥನ ರಕ್ಷಣೆಗಾಗಿ ಕೇಳಿಕೊಳ್ಳಲು, ಅವರು "ನಾನು ಖಂಡಿತವಾಗಿಯೂ ಅವನನ್ನು ರಕ್ಷಿಸುವೆನು" ಎಂಬುದಾಗಿ ಶಪಥ ಮಾಡಿದರು.

## ಹದಿನಾಲ್ಕನೆಯ ದಿನದ ಯುದ್ಧ

ದ್ರೋಣರು ಜಯದ್ರಥನ ರಕ್ಷಣೆಗಾಗಿ ಮಾರನೆಯ ದಿನ ಅಭೇದ್ಯವಾದ ವ್ಯೂಹವೊಂದನ್ನು ರಚಿಸಿದರು ; ಅದರ ಹೆಸರು [೧]ಶಕಟಾಬ್ಜಚಕ್ರ. ಅದರ ಮುಂಭಾಗದಲ್ಲಿ ಸ್ವಯಂ ದ್ರೋಣರೇ ನಿಂತರು. ಅದರ ಹಿಂಭಾಗದಲ್ಲಿ ಕರ್ಣ, ಅಶ್ವತ್ಥಾಮ, ಕೃಪ, ಶಲ್ಯ, ಮೊದಲಾದವರ ರಕ್ಷಣೆಯಲ್ಲಿ ಜಯದ್ರಥನನ್ನು ನಿಲ್ಲಿಸಿದರು.

ದಿವ್ಯರಥದಲ್ಲಿ ಮಂಡಿಸಿದ ಮಹಾವೀರನಾದ ಅರ್ಜುನನು, ಅಚ್ಯುತನಾದ ಕೃಷ್ಣನ ರಕ್ಷಣೆಯಲ್ಲಿ ದುರ್ಮರ್ಷಣನನ್ನು ಜಯಿಸಿ, ಅನಂತರ ಗುರುಗಳಾದ ದ್ರೋಣರನ್ನು ಸಮೀಪಿಸಿದ. [೨]ಕಾಲ ಮೀರುವುದೆಂಬ ಕಾರಣದಿಂದ, ದ್ರೋಣರಿಗೆ ಪ್ರದಕ್ಷಿಣೆಮಾಡಿ ಒಳಕ್ಕೆ ನಡೆದ. ಕೃಷ್ಣನು ಮನೋವೇಗದಿಂದಲೇ ರಥವನ್ನು ಒಳಗೆ ನಡೆಸಿದ. ಅರ್ಜುನನ ಬಾಣಗಳೇ ಅವನ ಹಿಂದೆ ಬೀಳುವಷ್ಟು ವೇಗದಲ್ಲಿ ಕೃಷ್ಣ ನಡೆಸಿದ ರಥ [೩]ಮುನ್ನುಗ್ಗುತ್ತಿತ್ತು. ಅನಂತರ

೧. ಶಕಟಾಬ್ಜಚಕ್ರ ಎಂದರೆ ಹೊರಭಾಗದಲ್ಲಿ ಶಕಟಾಕಾರದ ವ್ಯೂಹ ; ಅದರ ಮಧ್ಯೆ ಪದ್ಮವ್ಯೂಹ ; ಕೊನೆಯಲ್ಲಿ ಚಕ್ರವ್ಯೂಹ ; ಹೀಗೆ ಮೂರು ವ್ಯೂಹಗಳನ್ನೊಳಗೊಂಡಂತಹ ಅತ್ಯಂತ ಅಭೇದ್ಯವಾದ ವ್ಯೂಹ. ಹಿಂದಿನ ದಿನ ಅವರು ರಚಿಸಿದ್ದು ಕೇವಲ ಪದ್ಮವ್ಯೂಹವಾಗಿದ್ದರೆ, ಇಂದು ಜಯದ್ರಥನ ರಕ್ಷಣೆಗೆಂದು ಇಂತಹ ಅದ್ಭುತವಾದ ವ್ಯೂಹವನ್ನು ರಚಿಸಿದರು. ಕುರುಕ್ಷೇತ್ರಯುದ್ಧದಲ್ಲಿ ರಚಿತವಾದ ಅತ್ಯಂತ ಗಹನವಾದ ವ್ಯೂಹ ಎಂದರೆ ಇದೇ.

೨. ತನ್ನ ಪ್ರತಿಜ್ಞೆಯಂತೆ ಅರ್ಜುನ ಅಂದು ಸೂರ್ಯ ಮುಳುಗುವ ಮುನ್ನ ಜಯದ್ರಥನನ್ನು ಸಂಹರಿಸಲೇಬೇಕಿತ್ತು. ದ್ರೋಣರಂತಹ ಮಹಾರಥರೊಂದಿಗೆ ಕಾದಾಡುತ್ತಾ ನಿಂತಲ್ಲಿ ತನ್ನ ಮುಖ್ಯಕಾರ್ಯಕ್ಕೆ ಅಡ್ಡಿಯಾದೀತೆಂಬ ಕಾರಣದಿಂದ ವಿಹಿತವಲ್ಲವಾದರೂ ದ್ರೋಣರಿಗೆ ಪ್ರದಕ್ಷಿಣೆ ಮಾಡುವ ಮೂಲಕ ಅವರ ಪ್ರಸನ್ನತೆಯನ್ನು ಗಳಿಸಿ, ಅವರ ಅನುಮತಿಯನ್ನು ಪಡೆದು ಆ ವ್ಯೂಹದೊಳಗೆ ಪ್ರವೇಶಿಸಿದ ಎಂದರ್ಥ.

೩.. ಭಗದತ್ತನ ಸುಪ್ರತೀಕವನ್ನು ದಿಕ್ಕುತಪ್ಪಿಸಲೆಂದು ಕೃಷ್ಣ ಅರ್ಜುನನ ರಥವನ್ನು ಮನೋವೇಗದಿಂದ ನಡೆಸಿದ ವಿವರ ಹಿಂದೆ ಬಂದಿದೆ. ಈಗ ಅರ್ಜುನ ಬಿಟ್ಟ ಬಾಣಗಳಿಗಿಂತ ಹೆಚ್ಚುವೇಗದಲ್ಲಿ ರಥ ಓಡಿಸಿದ ವಿವರ ಬಂದಿದೆ. ಇದು ಶ್ರೀಕೃಷ್ಣನ ಸಾರಥ್ಯಕ್ಕೆ ಅದ್ಭುತ ನಿದರ್ಶನ. ದೇವರು ಎಂದೂ ದೇವರೇ ಅಲ್ಲವೇ !

ಎದುರಿಸಿ ಬಂದ ಕೃತವರ್ಮನನ್ನು ಅರ್ಜುನ ಅನಾಯಾಸದಿಂದ ಜಯಿಸಿದ. ದುರ್ಯೋಧನನ ಸೇನೆಯನ್ನು ಪ್ರವೇಶಿಸಿ, ಅದನ್ನೆಲ್ಲ ತನ್ನ ಉತ್ತಮ ಬಾಣಗಳಿಂದ, ಬಲಶಾಲಿಯಾದ ಮದ್ದಾನೆಯು ಕಮಲದ ಕೊಳವನ್ನು ಉಲ್ಲೋಲಕಲ್ಲೋಲ ಮಾಡುವಂತೆ, ನಾಶ ಮಾಡಿದ. ಕೃಷ್ಣನಿಂದ ಕೂಡಿದ ಆ ಅರ್ಜುನ, ಉಪೇಂದ್ರನಿಂದ[1] ಕೂಡಿದ ಇಂದ್ರನಂತೆ ಕಂಗೊಳಿಸುತ್ತ ಶರೀರನಾಶಕವಾದ ಬಾಣಗಳಿಂದ ಎಲ್ಲೆಡೆಗಳಿಂದಲೂ ಶತ್ರುಗಳ ತಲೆಗಳನ್ನು ಕತ್ತರಿಸತೊಡಗಿದ.

## ಶ್ರುತಾಯುಧನ ವಧೆ

ಅರ್ಜುನನು ದೃಢಾಯು, ಅಚ್ಯುತಾಯುಗಳನ್ನು ಕೊಂದು, ಬಳಿಕ ವಿಂದಾನುವಿಂದರನ್ನೂ ಸಹ ಎರಡು ಬಾಣಗಳಿಂದ ಯಮಪುರಿಗೆ ಅಟ್ಟಿದ. ಸುದಕ್ಷಿಣ, ಕಾಂಭೋಜ, ಮತ್ತು ಅಂಬಷ್ಠರನ್ನೂ ಸಹ ಸಂಹರಿಸಿ, ವರುಣನಿಂದ ನದಿಯಲ್ಲಿ ಜನಿಸಿದ್ದ ಶ್ರುತಾಯುಧನ ಮೇಲೆ ನುಗ್ಗಿದ. ವರುಣನು ಆ ಶ್ರುತಾಯುಧನಿಗೆ ದಿವ್ಯವೂ, ಅಮೋಘವೂ ಆದ ದೊಡ್ಡ ಗದೆ-ಯೊಂದನ್ನು ನೀಡಿದ್ದ. ಶ್ರುತಾಯುಧನ ತೀಕ್ಷ್ಣಬಾಣಗಳಿಂದ ಹೊಡೆಯಲ್ಪಟ್ಟ ಅರ್ಜುನನು ಅವನನ್ನು ಕ್ಷಣಾರ್ಧದಲ್ಲಿ ವಿರಥನನ್ನಾಗಿ ಮಾಡಲು, ಅವನು ಅರ್ಜುನನ ರಥವನ್ನೇ ಏರಿ, ತನ್ನಲ್ಲಿದ್ದ ವರುಣದತ್ತವಾದ ಗದೆಯನ್ನು ಕೃಷ್ಣನ ಮೇಲೆ ಅಪ್ಪಳಿಸಿದ. ಆದರೆ ಆ ಗದೆ ಅವನನ್ನೇ ತಿರುಗಿ ಅಪ್ಪಳಿಸಿತು. ಅವನ ತಲೆ ನೂರಾರು ಹೋಳುಗಳಾಗಿ ಸಿಡಿಯಿತು. ಅವನು ಅಸು ನೀಗಿ ಭೂಮಿಗೆ ಉರುಳಿದ.

ವರುಣನು ಆ ಗದೆಯನ್ನು ಅವನಿಗೆ ಕೊಡುವಾಗ, ''ಯುದ್ಧ ಮಾಡದೆ ಇರುವವನ ಮೇಲೆ ನೀನಾಗಿಯೇ ಈ ಗದೆಯನ್ನು ಅಪ್ಪಳಿಸಿದಲ್ಲಿ , ಅದರಿಂದ ನಿನ್ನ ತಲೆಯೇ ನೂರು ಹೋಳುಗಳಾಗಿ ಒಡೆದು ಹೋಗುವುದು ; ಇದು ಖಂಡಿತ. ಇಲ್ಲದಿದ್ದಲ್ಲಿ ಈ ಗದೆ ನಿನ್ನ ಪಾಲಿಗೆ ಎಂದಿಗೂ ಅಮೋಘವೇ ಆಗುವುದು'' ಎಂದು ಎಚ್ಚರಿಕೆಯನ್ನು ನೀಡಿದ್ದ. ಆದರೆ ಈಗ ಆ ಶ್ರುತಾಯುಧನು ಯುದ್ಧ ಮಾಡದೇ ಇದ್ದ ಕೃಷ್ಣನ ಮೇಲೆ ತನ್ನ ಗದೆಯನ್ನು ಪ್ರಯೋಗಿಸಿದ್ದರಿಂದ ಅಂತಹ ಅನಾಹುತಕ್ಕೆ ತುತ್ತಾಗಿ ಅಸು ನೀಗಬೇಕಾಯಿತು[2].

## ದುರ್ಯೋಧನನ ಪರಾಭವ

ಹೀಗೆ ತನ್ನ ಕಡೆಯ ವೀರರು ಸಾಯುತ್ತಿರುವುದನ್ನೂ , ಸೈನ್ಯವೆಲ್ಲ ಗುಂಪುಗುಂಪಾಗಿ ಓಡುತ್ತಿರುವುದನ್ನೂ ಕಂಡು, ವ್ಯಥೆಪಟ್ಟ ದುರ್ಯೋಧನನು ದ್ರೋಣರ ಬಳಿಗೆ ಹೋಗಿ ''ನೀವು

---

೧. ಉಪೇಂದ್ರನು ಕೃಷ್ಣನೇ ಆಗಿದ್ದರೆ, ಅರ್ಜುನ ಇಂದ್ರಾವತಾರನಾದವನು ಎಂಬಲ್ಲಿ ಇದರ ಔಚಿತ್ಯವನ್ನು ಕಾಣಬಹುದು.

೨. ಬವರದಲಿ ಖತಿಗೊಂಡು ಗದೆಯೊಳು ಕವಿದು ನಿನ್ನ ಶ್ರುತಾಯುಧನು ಹೊ-
ಕ್ಕವಘಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ।
ವಿವರವೇನೋ ತಿಳಿಯೆ ನಿಮ್ಮಾಯವನು ನೀನೇ ಬಲ್ಲೆ ನಿನ್ನಾ-
ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ ॥ -ಶ್ರೀಕನಕದಾಸರು(ಹರಿಭಕ್ತಿಸಾರ ೩೫)

ಅರ್ಜುನನನ್ನು ಉಪೇಕ್ಷಿಸಿಬಿಟ್ಟಿರಿ'' ಎಂದು ಕಟುವಾಗಿ ನುಡಿದ. ಆಗ ದ್ರೋಣರು ಮಹಾ-ಮಂತ್ರಬಲದಿಂದ ಅಭೇದ್ಯವೆನ್ನಿಸಿದ ಒಂದು ಕವಚವನ್ನು ಅವನಿಗೆ ತೊಡಿಸಿ, ''ಪಾಂಡವ-ರೆಲ್ಲರನ್ನೂ ಎದುರಿಸುವ ಒಟ್ಟುಬಲದಿಂದ ನೀನೀಗ ಅರ್ಜುನನನ್ನು ಎದುರಿಸು, ನಡೆ'' ಎಂದರು. ಕೂಡಲೇ ದುರ್ಯೋಧನನು ಬಂಗಾರದ ರಥದಲ್ಲಿ ಕುಳಿತು, ಧನುರ್ಧಾರಿಯಾಗಿ, ಅರ್ಜುನನನ್ನು ಸಮೀಪಿಸಿ, ಬೆಂಕಿಯಂತೆ ಪ್ರಜ್ವಲಿಸುತ್ತಿದ್ದ ಅನೇಕ ಬಾಣಗಳಿಂದ ಅವನನ್ನು ತಡೆದ. ಪಾರ್ಥನೂ ಸಹ ಉಗ್ರವೇಗದಿಂದ ಕೂಡಿದ ಬಾಣಗಳಿಂದ ಅವನನ್ನು ಹೊಡೆದ. ಆದರೆ ಅವಕ್ಕೆ ದುರ್ಯೋಧನನ ಕವಚವನ್ನು ಭೇದಿಸುವುದು ಸಾಧ್ಯವಾಗಲಿಲ್ಲ. ಆಗ ಕೋಪದಿಂದ ಅರ್ಜುನನು ಒಂದು ದಿವ್ಯಾಸ್ತ್ರವನ್ನು ತೆಗೆದುಕೊಂಡು ಅವನ ಕವಚವನ್ನು ಭೇದಿಸಲು ಅಣಿಯಾದ. ಆದರೆ ಅವನಿನ್ನೂ ಬಾಣವನ್ನು ಧನುಸ್ಸಿನಲ್ಲಿ ಹೂಡುತ್ತಿದ್ದಂತೆಯೇ ಅಶ್ವತ್ಥಾಮರು ಅದನ್ನು ಕತ್ತರಿಸಿ ಬಿಟ್ಟರು. ಅರ್ಜುನನು ಆಗ ಸುಯೋಧನನ ಕುದುರೆಗಳನ್ನು ಕೊಂದು, ಅವನ ಅಂಗೈಗೆ ಕ್ರೂರವಾದ ಬಾಣಗಳಿಂದ ಹೊಡೆದ. ಅಶ್ವತ್ಥಾಮರು ಪಾರ್ಥನನ್ನು ಅಡ್ಡಗಟ್ಟಿ ನಿಂತರು. ಅಲ್ಲಿಗೆ ಕರ್ಣ ಮೊದಲಾದವರೂ ಸೇರಿದರು. ಅವರೆಲ್ಲರೂ ಬಾಣಗಳಿಂದ ಅರ್ಜುನನನ್ನು ತಡೆದರು. ಜಯದ್ರಥನಿಗಾಗಿ ಆಗ ಆ ಮಹಾಸಾಹಸಿಗಳಲ್ಲಿ ನಡೆದ ಯುದ್ಧವು ಅದ್ಭುತವೂ, ಅನುಪಮವೂ ಆಗಿತ್ತು.

## ದ್ರೋಣರ ಪರಾಕ್ರಮ

ಇತ್ತ ದ್ರೋಣರು, ಅರ್ಜುನನು ಕೌರವಸೈನ್ಯವನ್ನು ಪ್ರವೇಶಿಸಿದ ಮೇಲೆ, ತಾವೂ ಸಹ ಪಾಂಡವರ ಸೈನ್ಯದಲ್ಲಿ ನುಗ್ಗಿ ಅವರ ರಥ, ಸೇನೆಯನ್ನು ಬಾಣಗಳಿಂದ ಧ್ವಂಸಮಾಡುತ್ತಾ, ವೀರರನ್ನು ಸಂಹರಿಸಿದರು. ಆ ವೀರಶ್ರೇಷ್ಠರಾದ ದ್ರೋಣರು ವಯಸ್ಸಿನಲ್ಲಿ ತುಂಬಾ ವೃದ್ಧ-ರಾಗಿದ್ದರೂ, ಆ ಯುವಧನುರ್ಧಾರಿಗಳ ಮಧ್ಯದಲ್ಲಿ ತಾವೂ ಯುವಕರಂತೆಯೇ ಸಂಚರಿಸುತ್ತಾ , ವೀರರ ತಲೆಗಳನ್ನು ಕೆಳಕ್ಕೆ ಬೀಳಿಸುತ್ತಾ , ಕ್ರಮವಾಗಿ ಧರ್ಮರಾಜನ ಬಳಿಗೆ ತಲುಪಿದರು. ಯುಧಿಷ್ಠಿರನನ್ನು ಸೆರೆಹಿಡಿಯ ಬಯಸಿದ ಆ ದ್ರೋಣರನ್ನು ಬಲಶಾಲಿಯಾದ ಸತ್ಯಜಿತ್ ಎಂಬ ದ್ರುಪದಪುತ್ರನು ಅಡ್ಡಗಟ್ಟಿದ ; ಅವರು ಅವನ ತಲೆಯನ್ನು ಬಾಣವೊಂದರಿಂದ ತುಂಡರಿಸಿದರು. ಅಲ್ಲದೆ ಧರ್ಮರಾಜನನ್ನೂ ಸಹ ಶ್ರೇಷ್ಠ ಬಾಣಗಳಿಂದ ನೋಯಿಸಿದರು. ಧರ್ಮರಾಜ ತನ್ನ ಶಕ್ತಿಯಿದ್ದಷ್ಟು ಅವರನ್ನು ಪ್ರತಿಭಟಿಸಿದ. ಅವನ ಕುದುರೆ ಮತ್ತು ರಥಗಳು ದ್ರೋಣರ ಬಾಣಕ್ಕೆ ಕ್ಷಣಾರ್ಧದಲ್ಲಿ ಆಹುತಿಯಾಗಿ ಬಿದ್ದವು. ಅವನು ಎರಡೂ ತೋಳುಗಳನ್ನೂ ಮೇಲೆತ್ತಿಕೊಂಡು ಭೂಮಿಯ ಮೇಲೆ ನಿಲ್ಲಬೇಕಾಯಿತು. ದ್ರೋಣರು ಸಹ ಅವನನ್ನು ಹಿಡಿಯಲು ಮುನ್ನುಗ್ಗಿದರು. ಆ ವೇಳೆಗೆ ಅಲ್ಲಿಗೆ ಬಂದ ಸಹದೇವನ ರಥಕ್ಕೆ ಹಾರಿ ಯುಧಿಷ್ಠಿರನು ವೇಗವಾಗಿ ಅಲ್ಲಿಂದ ದೂರಕ್ಕೆ ತೆರಳಿದ. ಧೃಷ್ಟಕೇತು ಮತ್ತು ಅವನ ಪುತ್ರ, ಜರಾಸಂಧನ ಮಗ ಸಹದೇವ, ಕಾಶಿರಾಜ, ಶಲ್ಯ, ಪಂಚಕೇಕಯರು, ಮೊದಲಾದವರು ಒಟ್ಟಾಗಿ ದ್ರೋಣರನ್ನು ಸುತ್ತುವರಿದು ಬಾಣಗಳಿಂದ ನೋಯಿಸಿದರು. ಅವರ ತಲೆಗಳನ್ನೆಲ್ಲ ಉತ್ತಮ ಬಾಣಗಳಿಂದ ಕ್ರಮವಾಗಿ

ಕತ್ತರಿಸುತ್ತಾ ನಡೆದ ದ್ರೋಣರು, ಅವರನ್ನೆಲ್ಲ ಊರ್ಧ್ವರೇತಸ್ಕರು ಸೂರ್ಯಮಂಡಲವನ್ನು ಭೇದಿಸಿ ಪಡೆಯುವ ಉತ್ತಮ ಲೋಕಗಳಿಗೆ ತಲುಪಿಸಿದರು[೧].

## ಅಲಂಬುಸನ ವಧೆ

ಅತ್ತ ಭೀಮನು ಕೌರವರ ಸೈನ್ಯವನ್ನು ನಾಶಮಾಡುತ್ತಾ ಹೊರಟ. ಅವನ ಹೊಡೆತವನ್ನು ತಾಳಲಾರದೆ ಅಳಿದುಳಿದ ಕುರುಸೈನ್ಯವು ಕಾಲಿಗೆ ಬುದ್ಧಿ ಹೇಳಿತು. ಆ ಸಮಯದಲ್ಲಿ ಅಲಂಬುಸ ರಾಕ್ಷಸನು ಭೀಮನನ್ನು ಎದುರಿಸಿದ ; ಭೀಮನ ಬಾಣಗಳಿಂದ ಬಹಳವಾಗಿ ನೊಂದ ಅವನು ಮಾಯಾಶಕ್ತಿಯಿಂದಾಗಿ ಅದೃಶ್ಯನಾಗಿ ಹೋರಾಡತೊಡಗಿದ. ಹಾಗೆ ಅದೃಶ್ಯರೂಪದಿಂದಲೇ ಅವನು ಭೀಮಸೇನನ ಅನುಚರರನ್ನು ಪೀಡಿಸತೊಡಗಲು, ಅದನ್ನು ಗಮನಿಸಿದ ಭೀಮ ಕೆರಳಿದ. ಪ್ರಸಂಗ ಒದಗಿದ್ದರಿಂದ ಶ್ರೀಕೃಷ್ಣನ ಅಪ್ಪಣೆಯಂತೆ ಭೀಮನು ತನ್ನಲ್ಲಿನ ಅಸ್ತ್ರನೈಪುಣ್ಯ-ವನ್ನು ತೋರಿಸಲು, ತ್ವಷ್ಟ್ರಾಸ್ತ್ರವನ್ನು ತೆಗೆದುಕೊಳ್ಳಲು, ಅದರಿಂದ ಶ್ರೇಷ್ಠಬಾಣಗಳು ಹೊರ-ಬರಲಾರಂಭಿಸಿದವು. ಹಾಗೆ ಬಂದ ಅವುಗಳು ಅದೃಶ್ಯನಾಗಿದ್ದ ರಾಕ್ಷಸನನ್ನು ಸಹ ಭೇದಿಸಿ, ಭೂಮಿಯೊಳಕ್ಕೆ ನುಗ್ಗಿದವು. ಭೀಮನನ್ನು ಬಿಟ್ಟು ಆ ರಾಕ್ಷಸ ದೂರಕ್ಕೆ ಓಡಿದ. ಭೀಮನು ಮತ್ತೆ ಕೌರವಸೇನೆಯನ್ನು ಓಡಿಸತೊಡಗಿದ. ದ್ರೌಪದಿಯ ಐವರು ಮಕ್ಕಳೂ ಸೇರಿ ಸೋಮದತ್ತನ ಮಗ ಶಲನನ್ನು ಯುದ್ಧದಲ್ಲಿ ಕೊಂದರು. ಘಟೋತ್ಕಚನು ಅಲಂಬುಸನ ಮೇಲೆ ಎರಗಿದ. ಆ ಇಬ್ಬರೂ ಮಹಾರಥರಿಗೆ ನಡೆದ ಯುದ್ಧದಲ್ಲಿ, ಅಲಂಬುಸನನ್ನು ಘಟೋತ್ಕಚನು ವಿರಥ-ನನ್ನಾಗಿಸಲು, ಅಲಂಬುಸ ಆಕಾಶಕ್ಕೆ ನೆಗೆದ. [೨]ಘಟೋತ್ಕಚ ತಾನೂ ಆಕಾಶಕ್ಕೆ ನೆಗೆದು ಅವನನ್ನು ಎದುರಿಸಿ, ಅವನನ್ನು ಹಿಡಿದು ಭೂಮಿಗೆ ಅಪ್ಪಳಿಸಿ, ತನ್ನ ಕಾಲಿನಿಂದ ಅವನ ತಲೆಯನ್ನು ತುಳಿದ. ತಲೆ ಜಜ್ಜಿಹೋದ ಆ ರಾಕ್ಷಸನು ರಾಜರ ಕಣ್ಣೆದುರಿನಲ್ಲಿಯೇ ಯಮಪುರಿಗೆ ತೆರಳಿದ. ಘಟೋತ್ಕಚನು ಅನಂತರ ಕುರುಸೈನ್ಯದ ರಥವೃಂದವನ್ನು ಹೊಡೆದೋಡಿಸತೊಡಗಿದ.

## ಕೃತವರ್ಮನ ಪಲಾಯನ

ಆಗ ಕೃತವರ್ಮನು ರಥಾರೂಢನಾಗಿ ಪಾಂಡವರ ಸೈನ್ಯವನ್ನು ಎದುರಿಸಲು ಧಾವಿಸಿದ. ಹಿಂದೊಮ್ಮೆ ಅವನ ಸ್ತುತಿಗೆ ಪ್ರೀತನಾದ ಕೃಷ್ಣನು ಅವನಿಗೆ ಒಂದು ಮುಹೂರ್ತದಲ್ಲಿ ಎಲ್ಲರನ್ನೂ ಗೆಲ್ಲುವ ವರವೊಂದನ್ನು ಕೊಟ್ಟಿದ್ದ. ಅದರಿಂದಾಗಿ ಅವನು ಪಾಂಚಾಲರ ಗುಂಪನ್ನು , ನಕುಲ-ಸಹದೇವರನ್ನೂ ಸಹ ಭೀಮನ ಮುಂದೆಯೇ ಸೋಲಿಸಿ, ಅವನನ್ನೂ ಬಾಣಗಳಿಂದ ಪೀಡಿಸಿದ. ಅವನಿಗಿದ್ದ ಕೃಷ್ಣನ ವರವನ್ನು ತಿಳಿದಿದ್ದ ಭೀಮನು ಆ ಸಮಯದಲ್ಲಿ ಅವನ ಮೇಲೆ ಧಾವಿಸಲಿಲ್ಲ.

---

೧. ಹೀಗೆ ಸೂರ್ಯಮಂಡಲವನ್ನು ಭೇದಿಸಿ ಸದ್ಗತಿ ಪಡೆಯುವುದು ಮಹಾಜ್ಞಾನಿಗಳಿಗೆ ವಿಹಿತವಾದ ರೀತಿ ಎಂಬುದು ವಿಶೇಷ.

೨. ಸರ್ವೋತ್ತಮನಾದ ಶ್ರೀರಾಮನು ತನಗೆ ಅಂಜಿ ಪಲಾಯನಗೈದ ಇಂದ್ರಜಿತ್‌ನನ್ನು ಲಕ್ಷ್ಮಣನಿಂದ ಕೊಲ್ಲಿಸಿದ; ಜೀವೋತ್ತಮನಾದ ಭೀಮಸೇನ ತನಗೆ ಅಂಜಿ ಪಲಾಯನಗೈದ ಅಲಂಬುಸನನ್ನು ತನ್ನ ಪುತ್ರ ಘಟೋತ್ಕಚನಿಂದ ಸಂಹರಿಸಿದ.

ಆದರೆ ಕೃತವರ್ಮನಿಗಿದ್ದ ವರ ವೃಷ್ಣಿಗಳಿಗೆ ಅನ್ವಯಿಸುತ್ತಿದ್ದಿಲ್ಲವಾದ್ದರಿಂದ, ಸಾತ್ಯಕಿಯಿಂದಾಗಿ ಅವನ ಕುದುರೆಗಳು ಸತ್ತವು; ರಥವೂ ಮುರಿಯಿತು. ಮತ್ತೊಂದು ಯಾನವನ್ನು ಏರಿದ ಕೃತವರ್ಮ, ಅಲ್ಲಿಂದ ಪಲಾಯನಗೈದ.

## ಯುಧಿಷ್ಠಿರನ ಆತಂಕ

ಅರ್ಜುನನು ಕರ್ಣಾದಿಗಳೊಂದಿಗೆ ಯುದ್ಧ ಮಾಡುತ್ತಿರಲು, ಕೃಷ್ಣನು ಶತ್ರುಗಳ ಬಲವನ್ನು ಕುಗ್ಗಿಸುವ ಸಲುವಾಗಿ ಮತ್ತೆ ಮತ್ತೆ ಪಾಂಚಜನ್ಯಶಂಖವನ್ನು ಮೊಳಗಿಸಲಾರಂಭಿಸಿದ. ಅಚ್ಯುತನ ಮುಖದಿಂದ ಹೊರಹೊಮ್ಮುವ ಗಾಳಿಯಿಂದ ಬಹಳವಾಗಿ ಧ್ವನಿ ಹೊರಡಿಸುತ್ತಿದ್ದ ಪಾಂಚ-ಜನ್ಯದ ಘೋಷವು, ಪ್ರಳಯಕಾಲದಲ್ಲಿ ಹೇಗೋ ಹಾಗೆ, ಬ್ರಹ್ಮರುದ್ರಾದಿಪೂರ್ವಕವಾದ ಎಲ್ಲ ಜಗತ್ತನ್ನೂ ನಡುಗುವಂತೆ ಮಾಡಿತು. ಅದರ ಧ್ವನಿಯಲ್ಲಿ ಗಾಂಡೀವದ ಧ್ವನಿಯೂ ಮುಚ್ಚಿಹೋಯಿತು. ಗಾಂಡೀವಘೋಷವು ತನ್ನ ಕಿವಿಗೆ ಬೀಳದಾಗಲು, ಬಹಳವಾಗಿ ಭಯಪಟ್ಟ ಧರ್ಮರಾಜನು, ಸಾತ್ಯಕಿಯ ಬಳಿಗೆ ಬಂದು – ''ಪಾರ್ಥನೇನಾದರೂ ಶತ್ರುಸೈನ್ಯದಲ್ಲಿ ಸಿಲುಕಿ-ಕೊಂಡನೇನೋ? ಸ್ವತಃ ಕೃಷ್ಣನೇ ಈಗ ಯುದ್ಧಮಾಡುತ್ತಿರುವಂತಿದೆ. ಅರ್ಜುನನ ಗಾಂಡೀವದ ಧ್ವನಿ ಕಿವಿಗೆ ಬೀಳುತ್ತಲೇ ಇಲ್ಲ. ಪಾಂಚಜನ್ಯದ ಧ್ವನಿ ಮಾತ್ರ ಜೋರಾಗಿ ಕೇಳಿಸುತ್ತಿದೆ. ಆದ್ದರಿಂದ ನೀನೀಗ ಹೋಗಿ ಅಸಹಾಯನಾಗಿರುವ ಪಾರ್ಥ ಈಗ ಬದುಕಿರುವನೇ? ಎಂದು ತಿಳಿದು ಬಾ'' ಎಂದು ಹೇಳಿದ.

## ಸಾತ್ಯಕಿಯ ಪರಾಕ್ರಮ

ಸಾತ್ಯಕಿಯು ಅದರಂತೆ, ಹೊರಡಲು ಸಿದ್ಧನಾದ. ಜಯಕ್ಕಾಗಿ ಬ್ರಾಹ್ಮಣರನ್ನು ಧನದಿಂದ ಪೂಜಿಸಿ, ಅವರ ಶ್ರೇಷ್ಠ ಆಶೀರ್ವಾದಗಳನ್ನು ಪಡೆದುಕೊಂಡು ಹೊರಟ. ಅವನನ್ನು ಹಿಂಬಾಲಿಸಿದ [೧]ಭೀಮನು, ಶತ್ರುಸೇನೆಯ ಮುಂಭಾಗವನ್ನು ಭೇದಿಸಿ, ಸಾತ್ಯಕಿಯನ್ನು ಒಳಕ್ಕೆ ಕಳುಹಿಸಿದ. ಯುದ್ಧ ಮಾಡುತ್ತಿದ್ದ ದ್ರೋಣರು ಅವನನ್ನು ಉಪೇಕ್ಷಿಸಿದರು. ಅವರ ಸಾರಥಿಯನ್ನು ಕೊಂದು ಕುದುರೆಗಳನ್ನು ಓಡಿಸಿದ. ವಿಪ್ರರ ಆಶೀರ್ವಾದ ಹಾಗೂ ಕೃಷ್ಣನ ವರ ಈ ಎರಡರಿಂದಾಗಿ ಆ ದಿನ ಸಾತ್ಯಕಿಯ ಶಕ್ತಿ ಹೆಚ್ಚುತ್ತಾ ಹೋಯಿತು. ಅವನ ವಿಷಯದಲ್ಲಿ ಪ್ರೀತನಾದ ಕೃಷ್ಣನು ಹಿಂದೊಮ್ಮೆ ಆ ದಿನದ ಮಟ್ಟಿಗೆ ಕೆಲ ಕಾಲ ಅವನ ಬಲ ಹೆಚ್ಚುವಂತೆ ವರವನ್ನು ದಯಪಾಲಿಸಿದ್ದ. ಹಾಗೆ ಬಲ ಹೆಚ್ಚಿದ ಸಾತ್ಯಕಿಯು ಭೀಮನನ್ನು ಅಲ್ಲಿಯೇ ನಿಲ್ಲಿಸಿ, ರಥದೊಂದಿಗೆ ಮುಂದೆ ಸಾಗಿದ. ಬಾಣಗಳ ಸುರಿಮಳೆಯಿಂದ ಎಲ್ಲಡೆಗಳಿಂದಲೂ ಯುದ್ಧದಲ್ಲಿ ಸೇನೆಯನ್ನು ನಾಶ ಮಾಡುತ್ತಿದ್ದ ಅವನನ್ನು, ಕೃತವರ್ಮನು ಮತ್ತೊಮ್ಮೆ ಎದುರಿಸಿ ಬಂದ.

---

೧. ಸಾತ್ಯಕಿಗೆ ಆ ಶಕಟಾಬ್ಜಚಕ್ರವ್ಯೂಹದ ಭೇದ ಅಸಾಧ್ಯವೆಂದು ತಿಳಿದಿದ್ದ ಭೀಮಸೇನ ತಾನೇ ಅದನ್ನು ಭೇದಿಸಿ ಅದರೊಳಗೆ ಪ್ರವೇಶಿಸಲು ಸಾತ್ಯಕಿಗೆ ಅವಕಾಶಮಾಡಿಕೊಟ್ಟ. ಇಂತಹ ಭೀಮಸೇನ ಹಿಂದಿನ ದಿನ ಕೇವಲ ಪದ್ಮವ್ಯೂಹವೊಂದನ್ನು ತಾನೂ ಪ್ರವೇಶಿಸಲಿಲ್ಲ, ಇತರರನ್ನೂ ಪ್ರವೇಶ ಮಾಡಿಸಲಿಲ್ಲ ಎಂಬುದಕ್ಕೆ ಕಾರಣ ಹಿಂದೆ ತಿಳಿಸಿದಂತೆ ಶ್ರೀಕೃಷ್ಣನ ಸಂಕಲ್ಪವೇ ಆಗಿದ್ದಿತು ಎಂದು ತಿಳಿಯಬೇಕು.

ಅವರಿಬ್ಬರಲ್ಲಿ ನಡೆದ ಭಯಂಕರ ಯುದ್ಧದಲ್ಲಿ ಕೃತವರ್ಮನ ರಥವು ಸಾತ್ಯಕಿಯ ಪೆಟ್ಟಿಗೆ ಪುಡಿಯಾಗಿ ಹೋಯಿತು. ಹೀಗೆ ಕೃತವರ್ಮನನ್ನು ಗೆದ್ದ ಶ್ರೇಷ್ಠಧನುರ್ಧಾರಿಯಾದ ಸಾತ್ಯಕಿಯು ಯುವಕರ ತಲೆಗಳನ್ನು ಕತ್ತರಿಸುತ್ತ ಮುಂದಕ್ಕೆ ನಡೆದ.

ಜಲಸಂಧನೆಂಬುವನು ಆನೆಯ ಮೇಲೆ ಕುಳಿತು ಸಾತ್ಯಕಿಯನ್ನು ತಡೆಯಲು ಬಂದ. ಆ ಅಸಾಧ್ಯ ಬಲಶಾಲಿಯನ್ನೂ ಸಹ ಸಂಹರಿಸಿದ ಸಾತ್ಯಕಿಯು, ಆನೆ, ರಥ, ಕುದುರೆ ಮತ್ತು ಕಾಲಾಳುಗಳನ್ನು ನಾಶಮಾಡುತ್ತ, ಕೌರವರ ಸೇನೆಯನ್ನು ದಿಕ್ಕುಗೆಡಿಸಿದ. ಬಂಡೆಗಳನ್ನು ಎಸೆಯುತ್ತಾ ಅವನ ಮೇಲೆರಗಿದ ಗುಡ್ಡಗಾಡಿನ ಜನರೂ ಸಹ ಸಾತ್ಯಕಿಯ ಬಾಣಕ್ಕೆ ಬಲಿಯಾದರು. ಉಳಿದ ಸೈನಿಕರನ್ನು ಓಡಿಸುತ್ತಾ ಸಾಗಿದ ಅವನು ಕೃಷ್ಣಾರ್ಜುನರ ಬಳಿಗೆ ಬಂದ.

## ಭೂರಿಶ್ರವಸ್ಸಿನ ವಧೆ

ಆ ವೇಳೆಗೆ ಭೂರಿಶ್ರವಸ್ ಅವನನ್ನು ಎದುರಿಸಿದ. ಅವರಿಬ್ಬರಿಗೂ ಬಹಳ ಕಾಲದವರೆಗೂ ತುಂಬಾ ಘೋರವೂ, ಭಯಂಕರವೂ, ವಿಚಿತ್ರವೂ ಆದ ಯುದ್ಧ ನಡೆಯಿತು. ಒಬ್ಬರು ಮತ್ತೊಬ್ಬರ ಕುದುರೆಗಳನ್ನೂ, ಸಾರಥಿಯನ್ನೂ, ಬಿಲ್ಲುಗಳನ್ನೂ ನಾಶ ಮಾಡಿಕೊಂಡರು. ಖಡ್ಗ– ಗುರಾಣಿಗಳನ್ನು ಹಿಡಿದು ಮತ್ತೆ ಕಾದತೊಡಗಿದ ಅವರಿಬ್ಬರೂ ಅನೇಕ ವಿಧವಾದ ಕೌಶಲಗಳನ್ನು ಮೆರೆದರು. ಕೊನೆಗೆ ಭೂರಿಶ್ರವಸ್ ಸಾತ್ಯಕಿಯನ್ನು ಭೂಮಿಯ ಮೇಲೆ ಬೀಳಿಸಿ, ಅವನ ಕೂದಲುಗಳನ್ನೆಲ್ಲ ಒಟ್ಟಾಗಿ ಹಿಡಿದು, ಒಂದು ಕಾಲನ್ನು ಅವನ ಎದೆಯಮೇಲೆ ಊರಿ, ಅವನ ತಲೆಯನ್ನು ಕತ್ತರಿಸ–ಲೆಂದು ಖಡ್ಗವನ್ನು ಕೈಗೆತ್ತಿಕೊಂಡ. ವಿಶ್ವತಶ್ಚಕ್ಷುವಾದ ಕೃಷ್ಣನು ಅದನ್ನು ಕಂಡು, ''ಸಾತ್ಯಕಿಯನ್ನು ರಕ್ಷಿಸು'' ಎಂದು ಅರ್ಜುನನಿಗೆ ಹೇಳಲು, ಅವನು ಒಂದು ಭಲ್ಲವನ್ನು ಎಸೆಯಲು ಅದು ಭೂರಿಶ್ರವಸ್‌ನ ತೋಳನ್ನು ಕತ್ತರಿಸಿತು. ತೋಳು ಕತ್ತರಿಸಿಹೋದ ಭೂರಿಶ್ರವಸ್ ಅರ್ಜುನನನ್ನು ತೆಗಳಿ, ಭೂಮಿಯ ಮೇಲೆ, ದರ್ಭಾಸನವನ್ನು ಹಾಕಿಕೊಂಡು, ಹರಿಯನ್ನು ಧ್ಯಾನಿಸುತ್ತ, ಅಸುರಾವೇಶದಿಂದಾಗಿ ಕೃಷ್ಣನನ್ನು ತೆಗಳುತ್ತ ಪ್ರಾಯೋಪವೇಶಕ್ಕೆ ಕುಳಿತ; ಕ್ರಮೇಣ ಅಸುರಾವೇಶ ಇಳಿದು, ಅತ್ಯಂತ ಹೆಚ್ಚಿನ ಭಕ್ತಿಯಿಂದಲೇ ಗರುಡಧ್ವಜನಾದ ಶ್ರೀಕೃಷ್ಣನನ್ನು ಧ್ಯಾನಿಸತೊಡಗಿದ. ಆ ವೇಳೆಗೆ ಮೇಲೆದ್ದ ಸಾತ್ಯಕಿಯು, ಕೃಷ್ಣ , ಅರ್ಜುನ ಮೊದಲಾದವರು ತಡೆಯುತ್ತಿದ್ದರೂ ಆ ಭೂರಿಶ್ರವಸ್‌ನ ತಲೆಯನ್ನು ಕತ್ತರಿಸಿಬಿಟ್ಟ. ಆಗ ಅವನಿಗೆಂದೇ ಸಿದ್ಧಪಡಿಸಿದ್ದ ತನ್ನ ಸಾರಥಿ–ಸಮೇತವಾದ ರಥವನ್ನು ಕೃಷ್ಣ ಆ ಸಮಯದಲ್ಲಿ ಸಾತ್ಯಕಿಗೆ ನೀಡಿದ.

## ಅರ್ಜುನನ ಪರಾಕ್ರಮ

ಆ ವೇಳೆಗೆ ಅರ್ಜುನನ ಕುದುರೆಗಳು ಬಳಲಿ ಬಾಯಾರಿದವು. ಅರ್ಜುನನು ಆಗ ವಾರುಣಾಸ್ತ್ರವನ್ನು ಪ್ರಯೋಗಿಸಿ, ಅದರಿಂದ ಒಂದು [೧]ಕೊಳವನ್ನೂ, ಬಾಣಗಳಿಂದಲೇ ಅಶ್ವ–

---

೧. ಅರ್ಜುನ ಹಾಗೆ ನಿರ್ಮಿಸಿದ ಆ ಕೊಳವನ್ನು ಇಂದೂ ಕುರುಕ್ಷೇತ್ರದಲ್ಲಿ ಕಾಣಬಹುದು. ತುಂಬಾ ವಿಶಾಲವೂ ಆಳವೂ ಆಗಿರುವ ಈ ಸರೋವರ ಅರ್ಜುನನ ಮಹಾಪರಾಕ್ರಮಕ್ಕೆ ಸಂಕೇತದಂತಿದೆ. ಅದನ್ನು ಕಂಡ ಋಷಿಮುನಿಗಳು ಕೂಡಲೇ ಅಲ್ಲಿಗೆ ಧಾವಿಸಿ, ಅದರಲ್ಲಿ ಮಿಂದು ಜಪಕ್ಕೆ ತೊಡಗಿದರೆಂಬ ರೋಚಕ ವಿವರವೂ

ಶಾಲೆಯನ್ನೂ ನಿರ್ಮಿಸಿದ. ಕೃಷ್ಣನು ಕುದುರೆಗಳನ್ನು ಬಿಚ್ಚಿ, ಅವುಗಳಿಗೆ ನಾಟಿದ್ದ ಬಾಣಗಳನ್ನು ಕಿತ್ತು ನೀರನ್ನು ಕುಡಿಸಿದ. ಆಗ ಅರ್ಜುನನು ಶತ್ರುಗಳನ್ನು ಬಾಣಗಳಿಂದ ಪೀಡಿಸುತ್ತಿದ್ದ. ಕುದುರೆಗಳು ಸುಧಾರಿಸಿಕೊಂಡ ಮೇಲೆ ಅವನ್ನು ಕೃಷ್ಣನು ಮತ್ತೆ ರಥಕ್ಕೆ ಕಟ್ಟಿದ. ಮತ್ತೆ ರಥವನ್ನೇರಿದ ಅರ್ಜುನ ತನ್ನ ದಾಳಿಯನ್ನು ಮುಂದುವರೆಸಿದ.

ಸಾತ್ಯಕಿಯು ತೆರಳಿ ತುಂಬಾ ಹೊತ್ತಾದರೂ ಅವನಿಂದ ಯಾವ ವರ್ತಮಾನವೂ ಬಾರದಿರಲು ಯುಧಿಷ್ಠಿರನಿಗೆ ಮತ್ತೆ ಚಿಂತೆ ಕವಿಯಿತು. ಯುಧಿಷ್ಠಿರ ಈ ಬಾರಿ ಭೀಮನಿಗೆ ತೆರಳಲು ಹೇಳಿದ – ''ಗಾಂಡೀವದ ಧ್ವನಿಯು ಕೇಳದೆ ಪಾಂಚಜನ್ಯದ ಧ್ವನಿಯು ಮಾತ್ರವೇ ಕೇಳಿಬರುತ್ತಿದೆ. ನಾನು ಸಾತ್ಯಕಿಗೆ ಹೊರೆಸಿದ ಹೊರೆ ಹೆಚ್ಚೇ ಆಯಿತೇನೋ? ನೀನೀಗ ಹೋಗಿ ಅವರಿಬ್ಬರೂ ಇನ್ನೂ ಬದುಕಿರುವುದಾದಲ್ಲಿ, ಅವರನ್ನು ಕಾಪಾಡು.'' ಭೀಮನು ಅದಕ್ಕೆ ಸ್ವಲ್ಪವೂ ಕಳವಳಗೊಳ್ಳದೆ ಉತ್ತರಿಸಿದ – ''ಕೃಷ್ಣನಿಂದ ರಕ್ಷಿತನಾದ ಪಾರ್ಥನನ್ನು ಗೆಲ್ಲಲು ಬ್ರಹ್ಮರುದ್ರಾದಿಗಳಿಗೂ ಸಾಧ್ಯವಿಲ್ಲ. ಇನ್ನು ಅಶ್ವತ್ಥಾಮ ಕರ್ಣಾದಿ ಧನುರ್ಧಾರಿಗಳು ಅವನಿಗೆ ಏನು ಮಾಡಿಯಾರು? ಆದ್ದರಿಂದ ಅರ್ಜುನನಿಗೂ ಮತ್ತು ಕೃಷ್ಣನ ಅನುಗ್ರಹಕ್ಕೆ ಪಾತ್ರನಾಗಿರುವ ಸಾತ್ಯಕಿಗೂ ಯಾವ ಭಯವೂ ಬರಲು ಸಾಧ್ಯವಿಲ್ಲ. ಈಗ ರಕ್ಷಣೆ ಬೇಕಾಗಿರುವುದು ಮುಖ್ಯವಾಗಿ ನಿನಗೆ. ಈ ದ್ರೋಣರು ನಿನ್ನನ್ನು ಸೆರೆ ಹಿಡಿಯಲು ಹೊಂಚುತ್ತಲೇ ಇರುವರು.'' ಧರ್ಮರಾಜ ತನ್ನ ಒತ್ತಾಯವನ್ನು ಬಿಡಲಿಲ್ಲ – ''ಘಟೋತ್ಕಚ ಮತ್ತು ಅಸ್ತ್ರವೀರರಲ್ಲಿ ಶ್ರೇಷ್ಠನಾದ ಧೃಷ್ಟದ್ಯುಮ್ನ ಈ ಇಬ್ಬರೂ ಬದುಕಿರುವವರೆಗೂ ನನ್ನನ್ನು ಹಿಡಿಯಲು ದ್ರೋಣರಿಗೆಂದೂ ಸಾಧ್ಯವಾಗದು. ನನಗೆ ಸಂತೋಷವನ್ನುಂಟುಮಾಡಲು ಇಚ್ಛಿಸುವುದಾದಲ್ಲಿ ನೀನೀಗ ಪಾರ್ಥ, ಸಾತ್ಯಕಿಯರ ಬಳಿಗೆ ತೆರಳಿ, ಅವರನ್ನು ರಕ್ಷಿಸು. ಅವರಿಬ್ಬರೂ ನಿನ್ನ ಕಣ್ಣಿಗೆ ಬೀಳುತ್ತಲೇ ಸಿಂಹನಾದವನ್ನು ಮಾಡಿ ನನಗೆ ಸೂಚನೆ ಕೊಡು; ಜಯದ್ರಥ ಸತ್ತಾಗಲೂ ನನಗೆ ಆ ರೀತಿ ಸೂಚನೆ ಕೊಡು.''

ಘಟೋತ್ಕಚ ಮತ್ತು ಸೇನಾಪತಿ ಧೃಷ್ಟದ್ಯುಮ್ನರಿಗೆ ಯುಧಿಷ್ಠಿರನ ರಕ್ಷಣೆಯ ಭಾರವನ್ನು ವಹಿಸಿ ಭೀಮನು ತೆರಳಲು ಸಿದ್ಧನಾದ. ಧೃಷ್ಟದ್ಯುಮ್ನನು ಭೀಮನಿಗೆ – ''ನೀನು ಕೃಷ್ಣಾರ್ಜುನರ ಬಳಿಗೆ ಅವಶ್ಯವಾಗಿ ತೆರಳಬಹುದು. ನಾನು ಬದುಕಿರುವವರೆಗೂ ದ್ರೋಣರು ನಮ್ಮ ರಾಜನನ್ನು ಹಿಡಿಯಲಾರರು; ನಾನವರ ಮೃತ್ಯುವಷ್ಟೆ?'' ಎಂದ.

## ಭೀಮನಿಂದ ದ್ರೋಣರ ಪರಾಭವ

ಅವನು ಮತ್ತೆ ಮತ್ತೆ ಹಾಗೆ ಹೇಳಲು, ಅವನಿಗೆ ಧರ್ಮರಾಜನನ್ನು ಒಪ್ಪಿಸಿ, ಭೀಮನು ಗದೆಯನ್ನು ತೆಗೆದುಕೊಂಡು, ಧನುಸ್ಸನ್ನು ಹೆದೆಯೇರಿಸಿ, ಬಾಣಗಳ ಪ್ರವಾಹವನ್ನೇ ಸುರಿಸುತ್ತಾ

---

ಸಹ ಮಹಾಭಾರತದಲ್ಲಿ ಬಂದಿದೆ. ಕುರುಕ್ಷೇತ್ರದಂತಹ ವಿಶ್ವದಾಖಲೆಯ ರಣರಂಗದಲ್ಲಿ ಕ್ಷಣಮಾತ್ರದಲ್ಲಿ ವಿಶಾಲ ಕೊಳವನ್ನು ತನ್ನ ಅಸ್ತ್ರಸಾಮರ್ಥ್ಯದಿಂದ ನಿರ್ಮಿಸಿದ ಅರ್ಜುನ ಅಸಾಮಾನ್ಯ ಬಿಲ್ಗಾರ ಎಂಬುದಕ್ಕೆ ಉತ್ತಮ ನಿದರ್ಶನ. ಇದೆಲ್ಲಾ ಅವನಿಗೆ ಸಾಧ್ಯವಾದದ್ದು ಶ್ರೀಕೃಷ್ಣನ ಅಪೂರ್ವ ಸಾರಥ್ಯದಿಂದಾಗಿ. ಭಗವಂತ ಒಲಿದವರ ಹಿರಿಮೆ ಎಷ್ಟು ಅಪಾರ ಎಂಬುದಕ್ಕೂ ಇದು ನಿದರ್ಶನ.

ಹೊರಟ. ಬಾಣಗಳ ಮಳೆಯನ್ನೇ ಸುರಿಸುತ್ತಾ ಬಂದ ಭೀಮನನ್ನು ತಡೆದು ದ್ರೋಣರು "ನನಗೆ ನಮಸ್ಕರಿಸಿದ ಅರ್ಜುನ ಮತ್ತು ಸಾತ್ಯಕಿ ಇಬ್ಬರನ್ನೂ ಶಿಷ್ಯವಾತ್ಸಲ್ಯದಿಂದ ನಾನು ಒಳಕ್ಕೆ ಬಿಟ್ಟೆ. ಸೈಂಧವನನ್ನು ರಕ್ಷಿಸುತ್ತೇನೆಂಬ ನನ್ನ ಪ್ರತಿಜ್ಞೆಯನ್ನೂ ಸಹ ನಾನು ಅರ್ಜುನನಿಗೋಸ್ಕರ ಕೈಬಿಟ್ಟೆ. ನಾನು ನಿನಗೆ ಮಾತ್ರ ಏನು ಮಾಡಿದರೂ ಮಾರ್ಗವನ್ನು ಕೊಡಲಾರೆ. ದಿವ್ಯವೂ, ಅದ್ಭುತವೂ ಆದ ನನ್ನ ಅಸ್ತ್ರವೀರ್ಯವನ್ನು ನೋಡು" ಎಂದರು. ಕೂಡಲೇ ಭೀಮನು ಗದೆಯನ್ನು ಕೈಗೆತ್ತಿಕೊಂಡು, - "ನಾನು ನಿಮ್ಮನ್ನು ತಂದೆಯಂತೆ ಗೌರವಿಸುತ್ತಾ, ಯಾವಾಗಲೂ ಮೃದು-ವಾಗಿಯೇ ವರ್ತಿಸುತ್ತಿರುವೆ. ನಾನು ನಿಷ್ಠುರನಾದಲ್ಲಿ ನನ್ನ ಬಲ ಹೇಗಿರುವುದು ಎಂಬುದನ್ನು ಈಗ ನೋಡಿ" ಎಂದು ಹೇಳುತ್ತಾ ದ್ರೋಣರ ರಥಕ್ಕೆ ಗುರಿಯಿಟ್ಟು ಗದೆಯನ್ನು ಎಸೆದ. ಅವರ ರಥ ಪುಡಿಪುಡಿಯಾಯಿತು; ಅದರ ಸೂತ, ಕುದುರೆಗಳು, ಧ್ವಜ, ಯಂತ್ರ, ಕೂಬರ(ನೊಗ)ಗಳೆಲ್ಲ ಪ್ರತ್ಯೇಕಪ್ರತ್ಯೇಕವಾಗಿಯೇ ಪುಡಿಯಾಗಿ ಹೋದವು. ಗದೆ ಬೀಳುವುದನ್ನು ನೋಡಿ ದ್ರೋಣರು ತ್ವರೆಯಿಂದ ಭೂಮಿಗೆ ಹಾರಿಕೊಂಡದ್ದರಿಂದ ಅವರಿಗೆ ಅಪಾಯ ಉಂಟಾಗಲಿಲ್ಲ. ಆ ವೇಳೆಗೆ ದುರ್ಯೋಧನ ಕಳುಹಿಸಿದ ಮತ್ತೊಂದು ರಥವು ಸಿದ್ಧವಾಗಿ ಬರಲು, ಅದನ್ನು ಏರಿ, ದ್ರೋಣರು ಮತ್ತೆ ಬಾಣಗಳನ್ನು ಸುರಿಸತೊಡಗಿದರು. ಪರಮಾಸ್ತ್ರಗಳಿಂದ ಅಭಿಮಂತ್ರಿತವಾದ ಅವರ ಬಾಣಗಳಿಂದ ಮುಚ್ಚಲ್ಪಟ್ಟ ಭೀಮನು ರಥದಿಂದ ಕೆಳಕ್ಕೆ ಹಾರಿ, ತಲೆಯನ್ನು ಮುಂದಕ್ಕೆ ಚಾಚಿಕೊಂಡು, ಗೂಳಿಯಂತೆ, ಮನೋವೇಗದಲ್ಲಿ ದ್ರೋಣರ ಬಳಿಗೆ ಸೇರಿದ. ಅವರ ರಥವನ್ನು ಕೈಯಲ್ಲಿ ಹಿಡಿದು ಕ್ಷಣಾರ್ಧದಲ್ಲಿ ಆಕಾಶಕ್ಕೆ ತೂರಿದ. "ನಿಮ್ಮನ್ನು ಕೊಲ್ಲಲು ನಾನು ಸಮರ್ಥನೇ ಆದರೂ ನಿಮ್ಮ ಮೇಲಿನ ಗೌರವದಿಂದ ಹಾಗೆ ಮಾಡುತ್ತಿಲ್ಲ" ಎಂಬುದನ್ನು ಅವರಿಗೆ ತಿಳಿಸಿ ಕೊಡುವುದೇ ಭೀಮನ ಆ ವರ್ತನೆಯ ಉದ್ದೇಶವಾಗಿತ್ತು. ಆಕಾಶದಿಂದ ಭೂಮಿಗೆ ಅಪ್ಪಳಿಸಿದ ಆ ರಥವು ಮೊದಲ ರಥದಂತೆಯೇ, ಸಂಪೂರ್ಣವಾಗಿ ಚೂರಾಯಿತು. ಅದರ ಸಾರಥಿ, ಕುದುರೆ, ಮೊದಲಾದವುಗಳೆಲ್ಲ ಜಜ್ಜಿಹೋದವು . ಕೆಳಕ್ಕೆ ಹಾರಿದ ದ್ರೋಣರು ಮತ್ತೊಮ್ಮೆ ಅಪಾಯದಿಂದ ಪಾರಾದರು. ಆ ವೇಳೆಗೆ ವಿಶೋಕ ಅಲ್ಲಿಗೆ ತನ್ನ ರಥವನ್ನು ತರಲು, ಅದನ್ನೇರಿ ಭೀಮನು ಒಳಕ್ಕೆ ನುಗ್ಗಿಬಿಟ್ಟ.

ದುರ್ಯೋಧನನು ಕಳುಹಿಸಿದ ಮತ್ತೊಂದು ರಥವನ್ನು ಏರಿ ದ್ರೋಣರು ಧರ್ಮರಾಜನನ್ನು ಹಿಡಿಯಲೆಂದು ಪಾಂಡವರ ಸೈನ್ಯದಲ್ಲಿ ನುಗ್ಗಿದರು. ಸೇನಾಧಿಪತಿಯಾದ ಧೃಷ್ಟದ್ಯುಮ್ನನು, ದ್ರೋಣರ ಬಾಣಗಳಿಗೆ ಹೆದರಿ ಓಡುತ್ತಿದ್ದ ತನ್ನ ಸೇನೆಯನ್ನು ತಡೆಯುತ್ತಾ, ಅವರನ್ನು ತನ್ನ ಬಾಣಗಳಿಂದ ಅಡ್ಡಗಟ್ಟಿದ. ಅವರು ನೋಡುತ್ತಿದ್ದಂತೆಯೇ ಅವರ ಸೇನೆಯನ್ನು ಓಡಿಸತೊಡಗಿದ. ಪಾಂಡವ-ಕೌರವರಿಗೆ ಜಯವನ್ನು ಹಾರೈಸುವ ಅವರಿಬ್ಬರಿಗೆ ಅತ್ಯಂತ ಅದ್ಭುತವೂ, ತಡೆಯಿಲ್ಲದ ಬಾಣಗಳ ಪ್ರವಾಹದಿಂದ ಕೂಡಿದುದೂ ಆದ ಭಯಂಕರವಾದ ಯುದ್ಧ ಬಹಳಕಾಲ ಸಮವಾಗಿಯೇ ನಡೆಯಿತು.

## ಭೀಮನಿಂದ ಕರ್ಣಾದಿಗಳ ಪರಾಭವ

ಇತ್ತ ಅಮಿತಪರಾಕ್ರಮಿಯಾದ ಭೀಮಸೇನನು ಬಾಣಗಳಿಂದ ಕೌರವರ ಸೇನೆಯನ್ನು ನಾಶ ಮಾಡುತ್ತಾ, ಮುಂದೆ ಸಾಗಿರಲು, ಅವನನ್ನು ವೀರರಾದ ವಿಂದ ಅನುವಿಂದ ಮೊದಲಾದ ಹನ್ನೊಂದು ಜನ ಕೌರವರು ಎದುರಿಸಿದರು; ಅವರಿಂದ ಬಾಣಗಳಿಂದ ಹೊಡೆಯಲ್ಪಟ್ಟ ಅವನು ಅವರೆಲ್ಲರ ತಲೆಗಳನ್ನು ಒಟ್ಟಾಗಿಯೇ ಕತ್ತರಿಸಿ ಬೀಳಿಸಿದ. ಅವರೆಲ್ಲ ಸಾಯಲು ಸತ್ಯವ್ರತ, ಪುರುಮಿತ್ರ, ಜಯ, ವೃಂದಾರಕ, ಪೌರವ ಎಂಬ ದುರ್ಯೋಧನನ ಮಂತ್ರಿಗಳು ಭೀಮನನ್ನು ಮುತ್ತಿದರು. ಅವರ ಬಾಣಗಳಿಂದ ಹೊಡೆಯಲ್ಪಟ್ಟ ಭೀಮನು ಹರಿತವಾದ ಬಾಣಗಳನ್ನು ಕೈಗೆತ್ತಿಕೊಂಡು ಅವುಗಳಿಂದ ಅವರೆಲ್ಲರ ತಲೆಗಳನ್ನು ಒಂದೇ ಸಲಕ್ಕೆ ಕತ್ತರಿಸಿ ಬೀಳಿಸಿದ. ಅಳಿದುಳಿದ ಕುರುಸೇನೆ ಓಡತೊಡಗಿತು. ಸಿಂಹವು ಕ್ಷುದ್ರಮೃಗಗಳನ್ನು ಓಡಿಸುವಂತೆ, ಅವರನ್ನೆಲ್ಲ ಓಡಿಸತೊಡಗಿದ ಭೀಮನು, ಅನಂತರ ಅಡ್ಡಬಂದ ಕೃತವರ್ಮನನ್ನು ಕ್ಷಣಾರ್ಧದಲ್ಲಿ ವಿರಥನನ್ನಾಗಿ ಮಾಡಿ, ಅವನ ಕುದುರೆ ಹಾಗೂ ಸಾರಥಿಗಳನ್ನು ಸಂಹರಿಸಿದ ; ಬಹಳವಾಗಿ ಗಾಯಗೊಂಡ ಅವನು ಕೂಡಲೇ ಯುದ್ಧವನ್ನು ತ್ಯಜಿಸಿ ಹೊರಟುಬಿಟ್ಟ. ಎಲ್ಲ ಪದಾತಿ, ಕುದುರೆ, ಆನೆಗಳನ್ನು ಯಮನ ಬಳಿಗೆ ಕಳುಹಿಸುತ್ತಲೇ ಸಾಗಿದ ಭೀಮನು ಕೃಷ್ಣಾರ್ಜುನರನ್ನು ತಲುಪಿದ. ಅವರನ್ನು ಕಾಣುತಿದ್ದಂತೆಯೇ ಅವನಿಗೆ ಅಪಾರ ಆನಂದವಾಯಿತು. ಅವರೂ ಇವನನ್ನು ಕಂಡು ಆನಂದದಿಂದ ಸಂಭಾಷಿಸಿದರು. ತನ್ನ ಸಿಂಹನಾದದಿಂದ ಅವರೆಲ್ಲರ ಕ್ಷೇಮವನ್ನು ಭೀಮನು, ಯುಧಿಷ್ಠಿರನಿಗೆ ತಿಳಿಸಿದ. ಅದನ್ನು ಅರ್ಥಮಾಡಿಕೊಂಡ ಮೇಧಾವಿಯಾದ ಧರ್ಮರಾಜನ ಮನಸ್ಸಿಗೆ ಹರ್ಷವುಂಟಾಯಿತು. ಭೀಮನ ಸಿಂಹನಾದದ ಶಬ್ದಕ್ಕೆ ಅಂಜಿ ಅನೇಕರು ಮಲಮೂತ್ರಗಳನ್ನೂ ರಕ್ತವನ್ನೂ ಸುರಿಸುತ್ತಾ ಪ್ರಾಣಬಿಟ್ಟರು[೧]. ಎಲ್ಲ ರಾಜರೂ ಭಯಗೊಂಡರು.

ಭೀಮನನ್ನು ತಡೆಯಲು ಕರ್ಣನೂ, ವಿಕರ್ಣ ಮೊದಲಾದ ಕೌರವರೂ ನುಗ್ಗಿ ಬಂದರು. ವಿಕರ್ಣ ಮತ್ತು ಚಿತ್ರಸೇನ ಇಬ್ಬರನ್ನೂ ಕೊಂದು, ಭೀಮನು ಕರ್ಣನ ರಥವನ್ನು ಪುಡಿಮಾಡಿ ಬಾಣಗಳಿಂದ ಅವನನ್ನು ಬಹಳವಾಗಿ ನೋಯಿಸಿದ. ಭೀಮನಿಗೆ ಹೆದರಿದ ಕರ್ಣನು ಅಲ್ಲಿಂದ ಪಲಾಯನ ಮಾಡಿದ. ಸ್ವಲ್ಪಕಾಲ ಸುಧಾರಿಸಿಕೊಂಡ ಕರ್ಣನು ಇನ್ನೂ ಕೆಲವು ದುರ್ಯೋಧನನ

---

೧. ಕುಮಾರವ್ಯಾಸಭಾರತದಲ್ಲೂ ಭೀಮನ ಈ ಸಿಂಹನಾದದ ಅದ್ಭುತ ಪರಿಣಾಮ ನಿರೂಪಿತವಾಗಿದೆ :

ಬಿರಿದುವೀತನ ಸಿಂಹನಾದಕೆ ಕರಿಗಳೆದೆಮಣಿ ಗದೆಯ ಹೊಯ್ಲಲಿ
ತಿರುಗಿ ಕೋಡಿಯಾಗಿ ಕೆಡೆದವು ಮಡಿದವಾಕ್ಷಣಕೆ ।
ಉರುಳಿದವು ಪರ್ವತದ ವಜ್ರದ ಸರಿಸ ಹೋರಟೆ ಕಾಣಲಾದುದು
ಕರಿಘಟೆಯ ಪವನಜನ ರಣದಲಿ ರಾಯ ಕೇಳೆಂದ ॥
ನೀಲಗಿರಿಗಳನೆಮ್ಮಿ ಘನಮೇಘಾಳಿ ಸುರಿದವು ಮಳೆಯನೆನೆ ಶರ-
ಜಾಳ ಕವಿದುದು ಗಜದ ಜೋಧರ ಝಾಡಿಯೆಸುಗೆಯಲಿ ।
ಕೋಲ ಕೊಂಬನೆ ಭೀಮ ಸಿಡಿಲುರಿ ನಾಲಗೆಗೆ ನೀರೇಗುವುದು ಮೇ-
ಲಾಳ ಮುರಿದವು ವಿವಿಧ ಶಸ್ತ್ರಾಸ್ತ್ರಪ್ರಹಾರದಲಿ ॥ –ದ್ರೋಣಪರ್ವ, ಸಂಧಿ ೧೦, ಪದ್ಯ ೧೫,೧೬

ತಮ್ಮಂದಿರೊಂದಿಗೆ ಸೇರಿಕೊಂಡು ಭೀಮನ ಮೇಲೆ ಮತ್ತೆ ಎರಗಿದ. ಕೌರವರೆಲ್ಲರನ್ನೂ ಸಂಹರಿಸಿ, ಭೀಮನು ಮತ್ತೆ ಕರ್ಣನ ಕುದುರೆ, ಆಯುಧಗಳನ್ನು ನಾಶಪಡಿಸಲು, ಕರ್ಣ ಮತ್ತೆ ಓಡಿದ. ಹೀಗೆ ಕರ್ಣನು ನೋಡುತ್ತಿದ್ದಂತೆಯೇ ಅಂದು ವಿಕರ್ಣ, ಚಿತ್ರಸೇನ ಮೊದಲಾದ ವೀರರಾದ ಧೃತರಾಷ್ಟ್ರನ ಮಕ್ಕಳು ಭೀಮನ ಬಾಣಗಳಿಗೆ ತಲೆಗಳನ್ನು ಕಳೆದುಕೊಂಡರು. ರಥಗಳಿಂದ ಭೂಮಿಯ ಮೇಲೆ ಉರುಳಿಬಿದ್ದರು. ಆಗ ಹಾಗೆ ಮಡಿದ ಅವರ ಒಟ್ಟು ಸಂಖ್ಯೆ ಇಪ್ಪತ್ತಮೂರು. ಕರ್ಣನ ರಥ ಕುದುರೆ ಸಾರಥಿ ಮತ್ತು ಕವಚಗಳೂ ಸಹ ಆ ರೀತಿ ನಾಶವಾದದ್ದು ಒಟ್ಟು ಇಪ್ಪತ್ತೊಂದು ಸಲ. ಭೀಮನ ಕ್ರೂರಬಾಣಗಳ ಹೊಡೆತಕ್ಕೆ ಕರ್ಣ ಪ್ರತಿಸಲವೂ ಅಂತಹ ಅವಸ್ಥೆಗೆ ತುತ್ತಾಗುತ್ತಿದ್ದ. ಕರ್ಣನು ಆ ಸಮಯದಲ್ಲಿ ಪ್ರತಿಸಲವೂ ಬದುಕುವುದೇ ಅನುಮಾನವಾಗುತ್ತಿತ್ತು. ಎಲ್ಲರೂ ನೋಡುತ್ತಿದ್ದಂತೆಯೇ ಅವನು ತನಗೆ ಯುದ್ಧದಲ್ಲಿ ಒದಗಿದ ಅಂತಹ ದುಃಖದಿಂದಾಗಿ ನೊಂದು ಮತ್ತೆ ಮತ್ತೆ ಓಡಬೇಕಾಗುತ್ತಿತ್ತು.

## ಕರ್ಣನಿಗೆ ಭೀಮನಿಂದ ಜೀವದಾನ

ಇಪ್ಪತ್ತೆರಡನೆಯ ಯುದ್ಧದಲ್ಲಿ ಕರ್ಣನು ಪರಶುರಾಮರು ಕೊಟ್ಟ ಹೊಳೆಯುವ ಅಭೇದ್ಯವಾದ ರಥವನ್ನು ಏರಿ, ಅವರೇ ನೀಡಿದ್ದ ವಿಜಯವೆಂಬ ಧನುಸ್ಸನ್ನು , ಎರಡು ಅಕ್ಷಯ ಬತ್ತಳಿಕೆಗಳನ್ನು ತೆಗೆದುಕೊಂಡು ಭೀಮನನ್ನು ಎದುರಿಸಿದ. ಆಗ ಕರ್ಣ–ಭೀಮರಿಗೆ ಭಯಂಕರವಾದ ಯುದ್ಧವು ದೀರ್ಘಕಾಲದವರೆಗೆ ನಡೆಯಿತು. ಕೆಂಪಾದ ಕಣ್ಣುಗಳಿಂದ ಕೂಡಿದ ಇಬ್ಬರೂ ಬಾಣಗಳ ಸಮೂಹದಿಂದ ಆಕಾಶವನ್ನೇ ಮುಚ್ಚಿಬಿಟ್ಟರು. ಆಗ ಮಹಾಬಾಹುವಾದ ಭೀಮನು, ''ಹುಟ್ಟಿನಿಂದ ಬಂದ ನಿನ್ನ ಕವಚಕುಂಡಲಗಳು ಇದ್ದಿದ್ದರೂ, ನಿನ್ನನ್ನು ಸುಲಭವಾಗಿಯೇ ಕೊಲ್ಲುತ್ತಿದ್ದೆ'' ಎಂಬುದನ್ನು ತೋರಿಸಲು, ಅವನ ಕವಚಕುಂಡಲಗಳನ್ನು ಬಾಣಗಳಿಂದ ಕತ್ತರಿಸಿ ಬೀಳಿಸಿದ. ಅನೇಕ ಬಾಣಗಳನ್ನು ಹೊಡೆದು ಕರ್ಣನನ್ನು ನೋಯಿಸಿದ. ಆಗ ಭೀಮನ ಮನಸ್ಸಿನಲ್ಲಿ ವಿಚಾರ ಮೂಡಿತು – ''ಸ್ಪರ್ಧಿಸದಿದ್ದಾಗ ಎಲ್ಲರನ್ನೂ ಗೆಲ್ಲುವ ವರವನ್ನು ಪರಶುರಾಮರು ಇವನಿಗೆ ಅನುಗ್ರಹಿಸಿರುವರು ; ಈಗಲಾದರೋ ಸಂಕಷ್ಟಕ್ಕೆ ಸಿಲುಕಿರುವ ಇವನು ನನ್ನೊಂದಿಗೆ ಖಂಡಿತವಾಗಿಯೂ ಸ್ಪರ್ಧಿಸುತ್ತಿಲ್ಲ. ಆದರೂ ಶ್ರೀಹರಿಯು ನನ್ನ ಮೇಲೆ ತನಗಿರುವ ಅಪಾರ ಅನುಗ್ರಹವನ್ನು ತೋರಿಸುತ್ತಾ , ತನ್ನ ಮಾತನ್ನೇ ಬಿಟ್ಟು ನನಗೇ ಜಯ ಕೊಡುತ್ತಿರುವನು. ಆದರೆ ನಾನು ಆ ಶ್ರೀಹರಿಯ ಮಾತನ್ನು ಅವಶ್ಯವಾಗಿ ಗೌರವಿಸಲೇಬೇಕು. ಆದ್ದರಿಂದ ಇವನಿಗೆ ನಾನೀಗ ಸ್ವಲ್ಪ ಆಸ್ಪದವನ್ನು ನೀಡುವೆ' ಎಂದು ಆಲೋಚಿಸಿ, ಸ್ವಲ್ಪ ಅವಕಾಶವನ್ನು ಕರ್ಣನಿಗೆ ನೀಡಿದ; ಆಗ ಕರ್ಣನು ತನ್ನ ಅಸ್ತ್ರವೀರ್ಯದಿಂದ ಭೀಮನ ಧನುಸ್ಸನ್ನು ಕತ್ತರಿಸಿದ. ಕುದುರೆಗಳ ಹಗ್ಗವನ್ನೂ ಕತ್ತರಿಸಿದ.

ಆಗ ಭೀಮನು ತನ್ನ ಸಹಜಶಕ್ತಿಯನ್ನು ತೋರಿಸುತ್ತಾ, ತನಗೆ ರಥ ಮೊದಲಾದವುಗಳಿಂದಾಗಲೀ, ಧನುಸ್ಸಿನಿಂದಾಗಲೀ ಏನೂ ಆಗಬೇಕಿಲ್ಲ ಎಂಬುದನ್ನು ತಿಳಿಸಲು, ರಥವನ್ನು ಬಿಟ್ಟು ಕೆಳಕ್ಕೆ ಇಳಿದು, ಆಕಾಶಕ್ಕೆ ಹಾರಿ ಕರ್ಣನ ರಥವನ್ನೇ ಏರಿದ. ಬಹಳವಾಗಿ ಅಂಜಿದ

ಕರ್ಣನು ರಥದ ನೊಗದ ಕೆಳಗೆ ಅಡಗಿಕೊಂಡ. ಹೀಗೆ ನಿರಾಯುಧನಾಗಿದ್ದರೂ ತಾನು ಶತ್ರುಗಳನ್ನು ನಿಗ್ರಹಿಸಬಲ್ಲೆನೆಂಬುದನ್ನು ತೋರಿಸಿ, ತಾನು ಸಮರ್ಥನೇ ಆಗಿದ್ದರೂ ಕರ್ಣನನ್ನಾಗಲಿ, ಅವನ ಧನುಸ್ಸು ಅಥವಾ ರಥಗಳನ್ನಾಗಲಿ, ದ್ರೋಣರ ರಥದಂತೆ ಧ್ವಂಸ ಮಾಡಲಿಚ್ಛಿಸಲಿಲ್ಲ. ಪರಶುರಾಮರ ಮಾತನ್ನು ಸತ್ಯಮಾಡಲು, ಅವರ ಮೇಲಿನ ಭಕ್ತಿಯಿಂದಲೇ, ಭೀಮನು ಆ ರೀತಿ ವರ್ತಿಸಿದ. ಅರ್ಜುನನ ಪ್ರತಿಜ್ಞೆಯನ್ನು ಸತ್ಯ ಮಾಡುವ ಕಾರಣದಿಂದಲೂ, ಕರ್ಣನು ಹರಿಭಕ್ತನಾದ್ದರಿಂದಲೂ ಭೀಮನು ಕರ್ಣನನ್ನು ಕೊಲ್ಲದೆ ಬಿಟ್ಟು, ಅವನಿಗೆ ಇನ್ನಷ್ಟು ಅವಕಾಶ ಕೊಡುವ ದೃಷ್ಟಿಯಿಂದ ಅವನ ರಥದಿಂದ ಇಳಿದು, ಸ್ವಲ್ಪ ದೂರಕ್ಕೆ ಹೋಗಿ ನಿಂತ.

ಕರ್ಣನಿಗೆ ಭೀಮನ ವರ್ತನೆ ಬಹಳವಾಗಿ ಅಚ್ಚರಿ ಹುಟ್ಟಿಸಿತು. ಪ್ರಾಯಃ ತನಗಿರುವ ಪರಶುರಾಮರ ವರದಿಂದಲೇ ಆ ರೀತಿ ವರ್ತಿಸಿದನೆಂದು ಊಹಿಸಿ, ಬಾಣಗಳಿಂದ ಮತ್ತೆ ಅವನು ಭೀಮನನ್ನು ಹೊಡೆಯತೊಡಗಿದ. ರಣರಂಗದಲ್ಲಿ ಸತ್ತು ಬಿದ್ದ ಆನೆಗಳನ್ನೇ ಭೀಮನು ಕರ್ಣನ ಬಾಣಗಳಿಗೆ ಅಡ್ಡವಾಗಿ ಎಸೆಯುತ್ತಾ, ಅವನ ಬಾಣಗಳನ್ನು ತನ್ನ ಬಳಿಗೆ ಬರದಂತೆ ನೋಡಿಕೊಂಡ. ಭೀಮನನ್ನು ರಥದಲ್ಲಿ ಕುಳಿತು ಸಮೀಪಿಸಿದ ಕರ್ಣನು, ಅವನನ್ನು ತನ್ನ ಬಿಲ್ಲಿನ ತುದಿಯಿಂದ ತಿವಿದು, ಅವನ ಶಕ್ತಿಯನ್ನು ಚೆನ್ನಾಗಿಯೇ ತಿಳಿದಿದ್ದರೂ, ದುರ್ಯೋಧನನ ಪ್ರೀತಿಗಾಗಿ ಕೆಟ್ಟ ಮಾತುಗಳಿಂದ ನಿಂದಿಸಿದ. ಇದನ್ನು ಕಂಡು ಅರ್ಜುನನು ತನ್ನ ಬಾಣಗಳನ್ನು ಕರ್ಣನ ಮೇಲೆ ಪ್ರಯೋಗಿಸುತ್ತಾ , ಕವಚಹೀನನಾದ ಅವನನ್ನು ನೋಯಿಸಿದ. ಕರ್ಣನು ಅಲ್ಲಿಂದ ಓಡಿದ. ಭೀಮನು ಮತ್ತೆ ತನ್ನ ರಥವನ್ನು ಏರಿದ.

ಇಂತಹ ಪ್ರಸಂಗದಲ್ಲೂ ತನ್ನಲ್ಲಿದ್ದ ಇಂದ್ರದತ್ತವಾದ ಶಕ್ತ್ಯಾಯುಧವನ್ನು ಕರ್ಣನು ಭೀಮನ ಮೇಲೆ ಪ್ರಯೋಗ ಮಾಡಲಿಲ್ಲ. ಅದಕ್ಕೆ ಅವನು ಅರ್ಜುನನನ್ನು ಬಿಟ್ಟು ಉಳಿದ ಪಾಂಡವರನ್ನು ಕೊಲ್ಲುವುದಿಲ್ಲವೆಂದು ತಾಯಿಗೆ ಕೊಟ್ಟ ಭಾಷೆಯೇ ಕಾರಣವಾಗಿತ್ತು. ಒಂದು ವೇಳೆ ಅವನು ಭೀಮನ ಮೇಲೆ ಆ ಶಕ್ತ್ಯಾಯುಧವನ್ನು ಪ್ರಯೋಗಿಸಿದ್ದರೂ, ಅದರಿಂದ ಭೀಮನಿಗೆ ಯಾವ ಅಪಾಯವೂ ಉಂಟಾಗುತ್ತಿರಲಿಲ್ಲ. ಭೀಮನ ತಲೆಯ ಮೇಲೆ ಬಿದ್ದ[೧] ನಾರಾಯಣಾಸ್ತ್ರವು ಸಹ ಅವನ ಕೂದಲಿಗೂ ಧಕ್ಕೆ ಉಂಟುಮಾಡಲಾರದೆಂದಮೇಲೆ, ಆ ಇಂದ್ರನ ಶಕ್ತ್ಯಾಯುಧವಾಗಲೀ, ಉಳಿದ ಯಾವುದೇ ಮಹಾಸ್ತ್ರಗಳೇ ಆಗಲೀ, ಅವನಿಗೆ ಏನನ್ನು ತಾನೇ ಮಾಡಿಯಾವು? ಅಲ್ಲದೆ ಕರ್ಣನ ರಥವನ್ನು ಏರಿದ್ದ ಭೀಮನು ಅಲ್ಲಿದ್ದ ಕರ್ಣನ ಶಕ್ತ್ಯಾಯುಧವನ್ನು ಅಲ್ಲಿಂದ ತರಬಹುದಾಗಿದ್ದರೂ, ಅದು ಘಟೋತ್ಕಚನ ಮರಣಕ್ಕೆ ಕಾರಣವಾಗಬೇಕೆಂಬ ಕೃಷ್ಣನ ಸಂಕಲ್ಪವನ್ನು ತಿಳಿದಿದ್ದರಿಂದ, ಹಾಗೆ ಮಾಡಲು ಇಚ್ಛಿಸಲಿಲ್ಲ[೨].

---

೧. ತಮ್ಮ ತಂದೆ ದ್ರೋಣರ ಮರಣಾನಂತರ ಅಶ್ವತ್ಥಾಮ ಪ್ರಯೋಗಿಸಿದ ಈ ನಾರಾಯಣಾಸ್ತ್ರಪ್ರಸಂಗದ ವಿವರ ಮುಂದೆ ಬಂದಿದೆ.

೨. ಹಿಂದಿನ ದಿನ ತನ್ನ ತಮ್ಮನ ಮಗನಾದ ಅಭಿಮನ್ಯುವಿನ ಮರಣವು ಶ್ರೀಕೃಷ್ಣನ ಸಂಕಲ್ಪವೆಂಬ ಕಾರಣದಿಂದ ಪದ್ಮವ್ಯೂಹವನ್ನು ಭೇದಿಸದೆ ಇದ್ದ ಭೀಮಸೇನ, ಈ ದಿನ ಮಧ್ಯರಾತ್ರಿಯ ಸಮಯಕ್ಕೆ ತನ್ನ ಮಗನಾದ ಘಟೋತ್ಕಚ ಕರ್ಣನ ಶಕ್ತ್ಯಾಯುಧಕ್ಕೆ ಬಲಿಯಾಗಬೇಕೆಂಬುದು ಶ್ರೀಕೃಷ್ಣನ ಸಂಕಲ್ಪ ಎಂಬ ಕಾರಣದಿಂದ

## ಕರ್ಣನ ಸೋಲು

ಹಿಂದಿರುಗಿದ ಕರ್ಣನು ಆ ರಥವನ್ನೂ ಧನುಸ್ಸನ್ನೂ ಬಿಟ್ಟು ಬೇರೊಂದು ರಥವನ್ನೇರಿ, ಶಕ್ತ್ಯಾಯುಧವನ್ನು ಮಾತ್ರ ತೆಗೆದುಕೊಂಡು, ಅರ್ಜುನನ ಮೇಲೆ ಹೊರಟ. ತನ್ನ ದಿವ್ಯರಥ ಹಾಗೂ ಧನುಸ್ಸುಗಳನ್ನು ಕೃಷ್ಣನ ಸಲಹೆಯಿಂದ ಅರ್ಜುನನು ಅಪಹರಿಸಬಹುದೆಂಬ ಅಂಜಿಕೆಯೇ ಅವನು ಆ ರಥವನ್ನು ಹಾಗೆ ಬಿಟ್ಟು ಬರಲು ಕಾರಣವಾಯಿತು. ಒಂದು ತಪ್ಪಿದಲ್ಲಿ ಮತ್ತೊಂದು ಉಳಿಯಲಿ ಎಂಬ ಕಾರಣದಿಂದ ಕರ್ಣನು ಯಾವಾಗಲೂ ಅವು ಮೂರನ್ನು ಒಟ್ಟಾಗಿ ತೆಗೆದುಕೊಂಡು ಅರ್ಜುನನ ಮೇಲೆ ಹೋಗುತ್ತಿರಲಿಲ್ಲ. ಅಮಿತ ತೇಜಸ್ವಿಯಾದ ಶ್ರೀಕೃಷ್ಣನ ತಂತ್ರಗಾರಿಕೆಗೆ ಕರ್ಣ ಬಹಳವಾಗಿ ಅಂಜುತ್ತಿದ್ದ. ಮರಣಕಾಲದಲ್ಲಿ ಮಾತ್ರ ಆ ರಥವನ್ನೇ ಏರಿ ಹೊರಟಿದ್ದ ; ಅದು ತನ್ನ ಸಾವಿನ ಸಮಯವೆಂಬುದನ್ನು ಅವನು ಅರಿತಿದ್ದ-ರಿಂದಾಗಿ ಹಾಗೆ ಮಾಡಿದ.

ಕರ್ಣನ ರಥದಲ್ಲಿ ಶಕ್ತ್ಯಾಯುಧವು ಇರುವುದನ್ನು ಕಂಡು ಕೃಷ್ಣನು, ಅರ್ಜುನನನ್ನು ಅವನೆಡೆಗೆ ಕರೆದೊಯ್ಯದೆ, ಸಾತ್ಯಕಿಗೆ ತನ್ನ ರಥವನ್ನು ನೀಡಿ, ಸಾಕಷ್ಟು ಬಲವನ್ನು ಅನುಗ್ರಹಿಸಿ ಅವನನ್ನು ಕರ್ಣನೊಂದಿಗೆ ಕಾದಲು ಕಳುಹಿಸಿಕೊಟ್ಟ. ಅಶಕ್ತನಾದ ತನ್ನ ಶಿಷ್ಯನನ್ನು ಅರ್ಜುನನು ತನ್ನ ಮೇಲೆ ಕಳುಹಿಸಿರುವನು ಎಂಬ ಭಾವನೆಯಿಂದ ಕರ್ಣನು ಸ್ಪರ್ಧೆಯಿಂದಲೇ ಸಾತ್ಯಕಿಯ ಜೊತೆ ಕಾದತೊಡಗಿ, ಹರಿಯ ರಥದಲ್ಲಿ ಕುಳಿತಿದ್ದ ಸಾತ್ಯಕಿಯಿಂದ ತನ್ನ ರಥವನ್ನು ಕಳೆದುಕೊಂಡ. ಕೃಷ್ಣನ ರಥದಲ್ಲಿ ಕುಳಿತಿದ್ದ ಯಾರೂ ಸೋಲಲು ಸಾಧ್ಯವಿಲ್ಲ ; ಅದರಿಂದಾಗಿ, ಸಾತ್ಯಕಿಯು ಕರ್ಣನಿಂದ ಸೋಲಲಿಲ್ಲ.

## ಭೀಮನ ಅಪೂರ್ವ ಧರ್ಮಪ್ರಜ್ಞೆ

ಧನುರ್ವಿದ್ಯೆಯನ್ನು ರೂಪಿಸಿದ ಪರಶುರಾಮರು, ರಾಜಕುಮಾರರು ಅಸ್ತ್ರಾಭ್ಯಾಸದ ಆರಂಭದಲ್ಲಿ ಒಂದು ವ್ರತವನ್ನು ಕೈಗೊಳ್ಳಬೇಕೆಂದು ವಿಧಿಸಿರುವರು. ಅಂತಹ ವ್ರತವು ಆ ಮೊದಲು ಇತರರು ಮಾಡಿದ್ದಾಗಿರಕೂಡದು ; ಇತರರಿಗೆ ತಿಳಿಯದಂತೆ ರಹಸ್ಯವಾಗಿರಬೇಕು ; ಶತ್ರುಗಳ ವಧೆಗೆ ಕಾರಣವಾಗುವಂತಿರಬೇಕು ಮತ್ತು ಧರ್ಮಕ್ಕೆ ವಿರುದ್ಧವಾಗಿರಕೂಡದು. ಅದರಿಂದ ಪರಶುರಾಮರಿಗೆ ವಿಶೇಷ ಪ್ರೀತಿ ಉಂಟಾಗುವುದು. ಭೀಮನು, ಲೋಕಕ್ಕೆ ಉಪದ್ರವವಾಗಕೂಡದು ಎಂಬ ಕಾರಣದಿಂದ, ತನ್ನನ್ನು "[೧]ತೂಬರ" ಎಂದು ಕರೆಯು-

---

ಅದನ್ನು ಅವನ ರಥದಿಂದ ಕೊಂಡೊಯ್ಯಬಯಸಲಿಲ್ಲ. ಈ ಎರಡೂ ಪ್ರಸಂಗಗಳಲ್ಲಿ ಭೀಮಸೇನನ ಶ್ರೀಕೃಷ್ಣನ ಮೇಲಿನ ಭಕ್ತಿ ವಿಶೇಷವಾಗಿ ಗೋಚರಿಸುವುದು. ಇತರರ ಮಕ್ಕಳ ಸಾವು ಭಗವಂತನ ಸಂಕಲ್ಪ ಎಂದು ಭಾವಿಸುವುದು ಸುಲಭ ; ಆದರೆ ತನ್ನ ಮಗನ ಸಾವೂ ಸಹ ಭಗವಂತನ ಸಂಕಲ್ಪ ಎಂದು ಅದಕ್ಕೆ ತಲೆಬಾಗುವ ಶ್ರೀಭೀಮಸೇನನ ಆದರ್ಶ ಊಹಾತೀತವಾದುದು. ಅದಕ್ಕೆಂದೇ 'ಶುದ್ಧಭಾಗವತಧರ್ಮರತ' ಎಂಬುದಾಗಿ ಮಹಾಭಾರತ ಅವನನ್ನು ಬಣ್ಣಿಸಿದೆ.

೧. ತೂಬರ ಎಂದರೆ ತಾರುಣ್ಯವನ್ನು ಸಮೀಪಿಸಿದ್ದರೂ ಗಡ್ಡಮೀಸೆಗಳು ಮೂಡದವನು ಎಂದರ್ಥ. ಕರ್ಣ ಭೀಮನನ್ನು ಹಾಗೆ ಕರೆದದ್ದು ಭೀಮನ ಪ್ರತಿಜ್ಞೆಯಂತೆ ನಡೆವಲ್ಲಿ ತನ್ನ ವಧೆಯಾಗಿ, ಅರ್ಜುನನ ಪ್ರತಿಜ್ಞೆಗೆ

ವವನನ್ನು ಕೊಲ್ಲುವುದಾಗಿ ವ್ರತವನ್ನು ಕೈಗೊಂಡಿದ್ದ. ಸೊಂಪಾಗಿ ಬೆಳೆದಿದ್ದ ಗಡ್ಡಮೀಸೆಗಳನ್ನು ಹೊಂದಿದ್ದ ತನ್ನನ್ನು ಹಾಗೆ ಕರೆಯುವುದು ಅಸಂಭಾವಿತವಾಗಿದ್ದರಿಂದ, ಯಾರಿಗೂ ಅಂತಹ ವ್ರತದಿಂದ ಕೇಡಾಗದು ಎಂಬ ಭಾವ ಅವನು ಅಂತಹ ವ್ರತವನ್ನು ಕೈಗೊಳ್ಳಲು ಕಾರಣವಾಗಿತ್ತು. ಸ್ನೇಹದಿಂದಾಗಿ ಭೀಮನು ಅರ್ಜುನನಿಗೆ ಏಕಾಂತದಲ್ಲಿ ಅದನ್ನು ತಿಳಿಸಿದ್ದರಿಂದ, ಅದು ಅವನಿಗೂ ತಿಳಿದಿತ್ತು. ಅದೇ ರೀತಿ ಅರ್ಜುನನು ''ಗಾಂಡೀವವನ್ನು ಬೇರೆಯವರಿಗೆ ಕೊಟ್ಟುಬಿಡು'' ಎಂದು ಹೇಳುವವನನ್ನು ತಾನು ಕೊಲ್ಲುವುದಾಗಿ ವ್ರತ ತೊಟ್ಟಿದ್ದ. ಗಾಂಡೀವ ತನಗೆ ದೊರೆಯುವುದನ್ನು ನಾರದರ ಮುಖದಿಂದ ಅರ್ಜುನ ಆ ಮೊದಲೇ ತಿಳಿದಿದ್ದರಿಂದ ಅವನು ಹಾಗೆ ವ್ರತವನ್ನು ಕೈಗೊಳ್ಳಲು ಸಾಧ್ಯವಾಗಿತ್ತು[೧]. ಅದೂ ಸಹ ಭೀಮನನ್ನು ಬಿಟ್ಟು ಬೇರಾರಿಗೂ ತಿಳಿದಿರಲಿಲ್ಲ. ತನ್ನ ಪ್ರತಿಜ್ಞೆಯನ್ನು ಏಕಾಂತದಲ್ಲಿ ಭೀಮನು ಅರ್ಜುನನಿಗೆ ತಿಳಿಸುತ್ತಿದ್ದಾಗ, ಅದನ್ನು ದುರ್ಯೋಧನನು ಕದ್ದು ಕೇಳಿಸಿಕೊಂಡು ಕರ್ಣನಿಗೂ ತಿಳಿಸಿದ್ದ. ಅದಕ್ಕಾಗಿ ಭೀಮನನ್ನು ಕೆರಳಿಸುವ ಉದ್ದೇಶದಿಂದ, ಕರ್ಣನು 'ತೂಬರ, ತೂಬರ' ಎಂದೇ ಭೀಮನನ್ನು ಅವಮಾನಿಸತೊಡಗಿದ.

ಆಗ ಭೀಮನು ಅರ್ಜುನನಿಗೆ, ''ನಾವಿಬ್ಬರೂ ನಮ್ಮ ನಮ್ಮ ಪ್ರತಿಜ್ಞೆಗಳನ್ನು ತಿಳಿದಿರುವೆವು. ಅದರಂತೆ ನಾನೀಗ ಕರ್ಣನನ್ನು ಕೊಲ್ಲಬೇಕಾಗಿದೆ. ನನ್ನ ಅಪ್ಪಣೆಯಿಂದ ನೀನೂ ಸಹ ಇವನನ್ನು ಕೊಲ್ಲುವುದಾಗಿ ಶಪಥ ಮಾಡಿರುವಿ. ಆದ್ದರಿಂದ ಈಗ ಇಬ್ಬರಲ್ಲಿ ಯಾರಾದರೂ ಒಬ್ಬರು ಇವನನ್ನು ಕೊಲ್ಲಲೇಬೇಕಿದೆ' ಎನ್ನಲು, ಅರ್ಜುನನು, ''ಇವನನ್ನು ನಾನೇ ಕೊಲ್ಲಬೇಕು ; ನಾನು ನಿನ್ನ ಅಧೀನನಾಗಿರುವುದರಿಂದ ಇದನ್ನು ನಾನು ಮಾಡಿದರೂ ನೀನು ಮಾಡಿದಂತೆಯೇ ಆಗುವುದು. ಆದರೆ, ನೀನು ಮಾಡಿದ್ದು ನಾನು ಮಾಡಿದಂತೆ ಆಗುವುದಿಲ್ಲ. ನೀನು ನನಗೆ ಗುರುವಲ್ಲವೇ? ಆದ್ದರಿಂದ ನನ್ನಿಂದಲೇ ಇವನು ಸಾಯಬೇಕು'' ಎಂದು ಕರ್ಣನತ್ತ ತಿರುಗಿ ''ಕೃಷ್ಣನು ಕೇಳುತ್ತಿರುವಂತೆಯೇ ನೀನೀಗ ಭೀಮನನ್ನು ಕ್ರೂರವಾಗಿ ನಿಂದಿಸಿರುವೆ. ಅಲ್ಲದೆ ನಿಮ್ಮೆಲ್ಲರಿಂದ ಒಬ್ಬಂಟಿಗನಾದ ನನ್ನ ಮಗ ಅಭಿಮನ್ಯು ಕೊಲ್ಲಲ್ಪಟ್ಟಿರುವನು. ಅದಕ್ಕಾಗಿ ನಾನು ನಿನ್ನನ್ನು ಕೊಲ್ಲುವೆ ; ಅಲ್ಲದೆ, ನಿನ್ನೆದುರೇ ನಿನ್ನ ಮಗನನ್ನೂ ಸಂಹರಿಸುವೆ' ಎಂದು ಹೇಳಿದ. ಇದನ್ನೆಲ್ಲ ಕೇಳಿದ ಕರ್ಣನು, ಮತ್ತೊಂದು ರಥವನ್ನು ಹತ್ತಿ, ಜಯದ್ರಥನ ರಕ್ಷಣೆಗೆಂದು ಧಾವಿಸಿದ.

---

ಭಂಗ ಉಂಟಾಗಿ ದುರ್ಯೋಧನನಿಗೆ ಸಂತೋಷವಾಗಲೆಂದು ಮಾತ್ರ. ವಾಸ್ತವವಾಗಿ ಭೀಮಸೇನ ತೂಬರನಾಗಿರಲೇ ಇಲ್ಲ. ಇದನ್ನು ತಿಳಿಯದ ಟಿ.ವಿ. ಮಾಧ್ಯಮದ ಮಹಾಭಾರತ ಭೀಮನನ್ನು ಗಡ್ಡಮೀಸೆಗಳಿಲ್ಲದವನಾಗಿಯೇ ಚಿತ್ರಿಸಿದ್ದು ಅವರಿಗೆ ಈ ಸಂದರ್ಭದ ಪರಿಜ್ಞಾನವಿಲ್ಲದಿರುವುದಕ್ಕೆ ದ್ಯೋತಕ. ಇದರ ಹಿನ್ನೆಲೆಯನ್ನು ವಿವರಿಸಿದ ಶ್ರೇಯಸ್ಸು ಆಚಾರ್ಯ ಶ್ರೀಮಧ್ವರದು ಮಾತ್ರ.

೧. ಅಸ್ತ್ರವಿದ್ಯೆಯ ಆರಂಭದ ಸಮಯದಲ್ಲಿ ಅರ್ಜುನ ಇನ್ನೂ ಗಾಂಡೀವ ಧನುಸ್ಸನ್ನು ಪಡೆದಿರಲಿಲ್ಲ ಎಂದ ಮೇಲೆ ಅದನ್ನು ಮತ್ತೊಬ್ಬರಿಗೆ ನೀಡು ಎಂದವರನ್ನು ಕೊಲ್ಲುವೆ ಎಂಬುದಾಗಿ ವ್ರತವನ್ನು ಕೈಗೊಳ್ಳುವುದು ಹೇಗೆ ಸಾಧ್ಯವಾಯಿತು ಎಂಬುದಕ್ಕೆ ಇದು ಉತ್ತರ ; ಎಂದರೆ ಅರ್ಜುನನಿಗೆ ಆಗ ಗಾಂಡೀವ ಲಭಿಸಿರಲಿಲ್ಲವಾದರೂ ಅದು ಮುಂದೆ ಅವನಿಗೆ ದೊರೆಯುವ ವಿಚಾರವನ್ನು ನಾರದರು ಆ ವೇಳೆಗಾಗಲೇ ಅವನಿಗೆ ತಿಳಿಸಿದ್ದರು. ಆದ್ದರಿಂದ ಅವನಿಗೆ ಅಂತಹ ಪ್ರತಿಜ್ಞೆ ಮಾಡಲು ಸಾಧ್ಯವಾಯಿತು ಎಂದು ಭಾವ.

## ಜಯದ್ರಥನ ವಧೆ

ಅಶ್ವತ್ಥಾಮ ಮತ್ತು ಕರ್ಣರಿಂದ ರಕ್ಷಿತನಾದ ಜಯದ್ರಥನನ್ನು ಕೊಲ್ಲುವುದು ಅರ್ಜುನನಿಗೆ ಸಾಧ್ಯವಾಗದಾಯಿತು. ಅಶ್ವತ್ಥಾಮರು ಅರ್ಜುನನನ್ನು ತಡೆಯಲು ಬಹಳವಾಗಿ ಪ್ರಯತ್ನಿಸ-ತೊಡಗಿದರು. ಅರ್ಜುನನಿಗೆ ಎಷ್ಟೇ ಪ್ರಯತ್ನಿಸಿದರೂ ಅಶ್ವತ್ಥಾಮರನ್ನು ದಾಟುವುದು ಅಸಾಧ್ಯ-ವಾಯಿತು. ಅವರಿಬ್ಬರಲ್ಲಿ ದೀರ್ಘಕಾಲದವರೆಗೆ ಭಯಂಕರ ಯುದ್ಧ ನಡೆಯಿತು. ಆ ವೇಳೆಗೆ ಕೃಷ್ಣನು ಸೂರ್ಯನಾಗಲೇ ಕೆಂಬಣ್ಣ ತಳೆಯುತ್ತಿದ್ದುದನ್ನು, ಅಶ್ವತ್ಥಾಮರು ಸೋಲದಿರುವುದನ್ನೂ, ಜಯದ್ರಥನಿನ್ನೂ ಹತನಾಗದ್ದನ್ನು ಕಂಡು, ಅರ್ಜುನನಿಗೆ ಜಯವನ್ನು ದೊರಕಿಸಿ ಕೊಡುವ ಉದ್ದೇಶದಿಂದ ದಟ್ಟವಾದ ಕತ್ತಲೆಯನ್ನು ಸೃಷ್ಟಿಸಿದ. ಆಕಾಶದಲ್ಲೆಲ್ಲ ಕತ್ತಲು ತುಂಬಿದ್ದನ್ನು ಕಂಡು, ಸೂರ್ಯ ಮುಳುಗಿದನೆಂದು ಭಾವಿಸಿ ದ್ರೋಣ ಮೊದಲಾದವರೆಲ್ಲ ಯುದ್ಧವನ್ನು ನಿಲ್ಲಿಸಿದರು. ಅರ್ಜುನನ ಪ್ರತಿಜ್ಞೆ ಭಂಗವಾಯಿತೆಂಬ ಹರ್ಷದಿಂದ ಜಯದ್ರಥನೂ ಸಹ ಅರ್ಜುನನ ಮುಖವನ್ನು ಕಾಣಲು ಅವನೆದುರಿಗೆ ಕಾಣಿಸಿಕೊಂಡ.

ಆಗ ಕೃಷ್ಣನ ಅಪ್ಪಣೆಯಂತೆ ಅರ್ಜುನನು ಅಗ್ನಿಯನ್ನು ಪ್ರವೇಶಿಸುವಂತೆ ನಟಿಸುತ್ತಾ, ಜಯದ್ರಥನ ಶಿರಸ್ಸನ್ನು ಕತ್ತರಿಸಿದ. ಕೃಷ್ಣನು ಎಚ್ಚರಿಸಿದ – ''ಇವನ ಶಿರಸ್ಸನ್ನು ಭೂಮಿಯ ಮೇಲೆ ಬೀಳಿಸಬೇಡ.'' ಪಾಶುಪತಾಸ್ತ್ರದ ಪ್ರಭಾವದಿಂದ ಒಂದಾದಮೇಲೊಂದರಂತೆ ಬಾಣ-ವನ್ನು ಪ್ರಯೋಗಿಸುತ್ತ ಅವನ ತಲೆಯನ್ನು ಆಕಾಶದಲ್ಲೇ ನಿಲ್ಲಿಸಿದ. ಕೃಷ್ಣನು ಮುಂದು-ವರೆಸಿದ – ''ಇವನ ತಂದೆ, 'ಇವನ ತಲೆಯನ್ನು ಭೂಮಿಯ ಮೇಲೆ ಬೀಳಿಸುವವನ ತಲೆ ಸಹಸ್ರ ಹೋಳಾಗಲಿ' ಎಂದು ಇವನಿಗೆ ವರವಿತ್ತಿರುವನು. ಆದ್ದರಿಂದ ಅವನ ಕೈಯಲ್ಲೇ ಇವನ ಶಿರಸ್ಸನ್ನು ಬೀಳಿಸುವ ಮೂಲಕ ಅವನನ್ನೂ ನೀನೀಗ ಸಂಹರಿಸಬೇಕಾಗಿದೆ'' ಎಂದ. ಅರ್ಜುನನು ಕೂಡಲೇ ಜಯದ್ರಥನ ತಲೆಯನ್ನು ಸಂಧ್ಯಾಕಾರ್ಯದಲ್ಲಿ ಮಗ್ನನಾಗಿದ್ದ ಅವನ ತೊಡೆಯ ಮೇಲೆ ಬೀಳಿಸಲು, ಅವನು ಚಕಿತನಾಗಿ ಅದನ್ನು ಕೆಳಕ್ಕೆ ಹಾಕಿದ ; ಅವನ ಮಾತಿನಂತೆಯೇ ಅವನ ತಲೆ ಸಾವಿರ ಚೂರಾಗಿ ಸಿಡಿದುಹೋಯಿತು[೧]. ಕೃಷ್ಣನು ಮತ್ತೆ [೨]ಕತ್ತಲೆಯನ್ನು

೧. ಭಸ್ಮಾಸುರ ಶಿವನಿಂದ ಪಡೆದಿದ್ದ ವರವೇ ಅವನ ಸಾವಿಗೆ ಕಾರಣವಾದಂತೆ, ವೃದ್ಧಕ್ಷತ್ರ ತನ್ನ ಮಗ ಜಯದ್ರಥನಿಗೆ ನೀಡಿದ್ದ ವರ ಅವನ ಸಾವಿಗೇ ಕಾರಣವಾಯಿತು. ಕೇಡುಬುದ್ಧಿಯ ಜನ ವರ ಕೊಡಲಿ, ವರ ಪಡೆಯಲಿ ಅದು ಮಾತ್ರ ಅವರಿಗೆ ಶಾಪವೇ ಆಗುವುದು ಎಂಬ ತತ್ತ್ವ ಇದರಿಂದ ತಿಳಿಯುವುದು.

೨. ಕುಮಾರವ್ಯಾಸಭಾರತ ಮೊದಲಾದವುಗಳಲ್ಲಿ ಕೃಷ್ಣ ಹಾಗೆ ಸೂರ್ಯ ಮುಳುಗಿದಂತೆ ಮಾಡಿದ್ದು ತನ್ನ ಸುದರ್ಶನ ಚಕ್ರವನ್ನು ಸೂರ್ಯನಿಗೆ ಅಡ್ಡ ಹಿಡಿಯುವ ಮೂಲಕ ಎಂಬುದಾಗಿ ನಿರೂಪಿತವಾಗಿದೆ. ವಸ್ತುಸ್ಥಿತಿ ಅದಲ್ಲ; ಕೃಷ್ಣನೇರವಾಗಿಯೇ ಕತ್ತಲೆಯನ್ನೇ ಸೃಷ್ಟಿಸಿದ. ಆ ರೀತಿ ಮಾಡಲು ಅವನಿಗೆ ಚಕ್ರ ಮೊದಲಾದವುಗಳ ಅಗತ್ಯವೂ ಇಲ್ಲ ಎಂಬುದು ಮಹಾಭಾರತದ ನಿರೂಪಣೆ ; ಎಂದರೆ ಕೃಷ್ಣ ಕತ್ತಲೆಯನ್ನು ಸೃಷ್ಟಿಸಿದ ; ಜಯದ್ರಥನ ವಧೆಯ ಬಳಿಕ ಅದನ್ನು ತಾನೇ ಪುನಃ ಲಯಗೊಳಿಸಿದ. ಅಂದಿನ ರಾತ್ರಿ ಚಂದ್ರೋದಯವಾದ ವಿವರ ಬರುವುದರಿಂದಲೂ, ಇನ್ನೂ ನಾಲ್ಕುದಿನದ ನಂತರ ಅಮಾವಾಸ್ಯೆ ಬರುವುದರಿಂದಲೂ ಅಂದು ಸೂರ್ಯಗ್ರಹಣವಾಗಿದ್ದರ ಸಾಧ್ಯತೆ ಸರ್ವಥಾ ಇಲ್ಲ; ಆದ್ದರಿಂದ ಅದೊಂದು ಪೂರ್ಣಸೂರ್ಯಗ್ರಹಣದ ಪ್ರಸಂಗ ಎಂಬ ಕೆಲವರ ಊಹೆ ಸರಿಯಲ್ಲ ಎಂಬುದು ಸ್ಪಷ್ಟ.

ಲಯಗೊಳಿಸಲು, ಹೊಳೆಯುವ ಸೂರ್ಯನು ಎಲ್ಲರ ಕಣ್ಣಿಗೂ ಬಿದ್ದ. ಎಲ್ಲೆಡೆಗಳಲ್ಲೂ 'ಹಾಹಾಕಾರ' ಉಂಟಾಯಿತು. ಆಗ ಭೀಮನು, ಶಲ್ಯ, ದುರ್ಯೋಧನ, ಕೃಪ ಮೊದಲಾದವರನ್ನೆಲ್ಲ ಗೆದ್ದು ಭಯಂಕರವಾದ ಸಿಂಹನಾದವನ್ನು ಮಾಡಿದ. ಅರ್ಜುನನಿಗೆ ಈ ರೀತಿ ಸಹಾಯಮಾಡುತ್ತಾ ಭೀಮನು ಸಾತ್ಯಕಿಯೊಂದಿಗೆ ಹರ್ಷಿಸಿದ. ಕೃಷ್ಣನು ಪಾಂಚಜನ್ಯವನ್ನೂ ಅರ್ಜುನನು ದೇವದತ್ತವನ್ನೂ ಸಂತೋಷದಿಂದ ಮೊಳಗಿಸಿದರು. ಭೀಮನ ಸಿಂಹನಾದ ಹಾಗೂ ಕೃಷ್ಣನ ಪಾಂಚಜನ್ಯದ ಘೋಷಗಳನ್ನು ಕೇಳಿ ಧರ್ಮರಾಜನು ಜಯದ್ರಥನು ಹತನಾದನೆಂಬುದನ್ನು ಅರ್ಥ ಮಾಡಿಕೊಂಡು ಬಹಳವಾಗಿ ಆನಂದಿಸಿದ. ದುರ್ಯೋಧನನು ಅಪಾರ ದುಃಖದಲ್ಲಿ ಮುಳುಗಿದ.

## ರಾತ್ರಿಯುದ್ಧ

ಅನಂತರ ಅಶ್ವತ್ಥಾಮರ ನೇತೃತ್ವದಲ್ಲಿ ನುಗ್ಗಿದ ಸೇನೆಯನ್ನೆಲ್ಲ ಭೀಮನು ಹಿಮ್ಮೆಟ್ಟಿಸಿದ. ಕರ್ಣನ ನೇತೃತ್ವದಲ್ಲಿದ್ದ ಕುರುಸೇನೆಯನ್ನು ಅರ್ಜುನನು ನಾಶಮಾಡತೊಡಗಿದ. ಭಗ್ನಗೊಂಡ ವ್ಯೂಹದಲ್ಲಿ ಧೃಷ್ಟದ್ಯುಮ್ನಾದಿಗಳೆಲ್ಲ ನುಗ್ಗಿ, ಭೀಮಾರ್ಜುನರ ಬಳಿಗೆ ಬಂದು ಸೇರಿದರು. ಆಗ ಒಟ್ಟಾದ ಪಾಂಡವರೂ, ಪಾಂಚಾಲರೂ ಶತ್ರುಗಳನ್ನು ಹೊಡೆಯಲಾರಂಭಿಸಿದರು. ಕೌರವಸೇನೆ ಹಿಂದಕ್ಕೆ ಓಡತೊಡಗಿತು. ತನ್ನ ಸೈನ್ಯ ಹಿಮ್ಮೆಟ್ಟುತ್ತಿರುವುದನ್ನೂ , ಜಯದ್ರಥ ಹತನಾದುದನ್ನೂ ಕಂಡು ಬಹಳವಾಗಿ ಕೋಪಗೊಂಡ ದುರ್ಯೋಧನನು ತಾನೊಬ್ಬನೇ ಭೀಮಸೇನ, ಧನಂಜಯ, ಯುಧಿಷ್ಠಿರ, ನಕುಲ, ಸಹದೇವ, ಧೃಷ್ಟದ್ಯುಮ್ನ, ಸಾತ್ಯಕಿ, ದ್ರೌಪದೀಪುತ್ರರು ಮೊದಲಾಗಿ ಎಲ್ಲರನ್ನೂ ಬಾಣಗಳಿಂದ ಎದುರಿಸಿದ. ಅವರೂ ಸಹ ಬಾಣಗಳಿಂದ ಅವನನ್ನು ಹೊಡೆದರು. ಅವರ ಬಾಣಗಳನ್ನು ಲೆಕ್ಕಿಸದೆ ಅವನು ಅಲ್ಲಿಯ ಕೆಲವರ ಬಿಲ್ಲುಗಳನ್ನು ತುಂಡರಿಸಿದ. ನಕುಲಸಹದೇವರ ರಥಗಳನ್ನು ಮುರಿದ. ಅವರೆಲ್ಲ ಬೇರೆ ಬಿಲ್ಲುಗಳನ್ನು ತೆಗೆದು-ಕೊಂಡು ದುರ್ಯೋಧನನನ್ನು ಮುತ್ತಿದರು. ಆದರೂ ದುರ್ಯೋಧನ ಕಂಗೆಡದೆ ಅವರೆಲ್ಲ-ರನ್ನೂ ತಾನೊಬ್ಬನೇ ಎದುರಿಸಿದ. ಶತ್ರುಗಳ ಗುಂಪಿನಲ್ಲಿ ಅವನೊಬ್ಬನೇ ಸಿಲುಕಿಕೊಂಡಿರುವುದನ್ನು ಕಂಡು ದ್ರೋಣ, ಅಶ್ವತ್ಥಾಮ, ಕೃಪ ಮೊದಲಾದವರೆಲ್ಲ ಅಲ್ಲಿ ನೆರೆದು, ಎಡೆಬಿಡದೆ ಬಾಣಗಳನ್ನು ಸುರಿಸುತ್ತಾ, ದುರ್ಯೋಧನನಿಗೆ ರಕ್ಷಣೆಯನ್ನು ನೀಡಿದರು. ದುರ್ಯೋಧನನು, ''ಯುದ್ಧದಲ್ಲಿ ಭೀಮನನ್ನು ಕೊಲ್ಲು'' ಎಂಬುದಾಗಿ ಕರ್ಣನಿಗೆ ಹೇಳಲು, ಅವನು ''ಅವನನ್ನು ಇಂದ್ರಸಮೇತ-ರಾದ ದೇವತೆಗಳಿಗೂ ಗೆಲ್ಲಲು ಸಾಧ್ಯವಿಲ್ಲ, ಯುದ್ಧದಲ್ಲಿ ಅವನಿಂದ ಬಹಳವಾಗಿ ನೊಂದಿರುವ ನಾನು ಇನ್ನೂ ಉಳಿದುಕೊಂಡಿರುವುದೇ ಪುಣ್ಯ ; ಆದ್ದರಿಂದ ಶಕ್ತಿಯಿದ್ದಷ್ಟು ಹೋರಾಡೋಣ ; ಜಯವು ದೈವಕ್ಕೆ ಸೇರಿದ್ದು'' ಎಂದು ತನ್ನ ಅಸಾಮರ್ಥ್ಯವನ್ನು ತೋಡಿಕೊಂಡ.

ದ್ರೋಣರನ್ನು ಸಮೀಪಿಸಿ, ದುರ್ಯೋಧನನು - ''ನಿಮ್ಮ ಉಪೇಕ್ಷೆಯಿಂದಲೇ ಸೈಂಧವ ಹತನಾದ. ಭೀಮ ಸಾತ್ಯಕಿಯರಿಂದ ನನ್ನ ಸೈನ್ಯವೂ ಹಾಳಾಯಿತು. ಪಾಂಡವರ ಮೇಲಿನ ಸ್ನೇಹದಿಂದ ನಿಮ್ಮ ಪ್ರತಿಜ್ಞೆಯನ್ನು ನೀವು ಕೈಬಿಟ್ಟಿರಿ'' ಎಂದು ನಿಂದಿಸಿದ. ಅವರು ಕೋಪದಿಂದ

ಮತ್ತೊಂದು ಶಪಥ ಕೈಗೊಂಡರು - ''ಇನ್ನು ಮೇಲೆ ನಾನು ಹಗಲೂ ರಾತ್ರಿಯೂ ಯುದ್ಧದಿಂದ ಹಿಂತಿರುಗುವುದಿಲ್ಲ. ಕಟ್ಟಿದ ಕವಚವನ್ನೂ ನಾನು ಮತ್ತೆ ಬಿಚ್ಚಲಾರೆ. 'ದೌಹಿತ್ರರ ಸಮೇತ ಯಾವ ಪಾಂಚಾಲರನ್ನೂ ಉಳಿಸಬೇಡ''ಎಂದು ನನ್ನ ಮಗನಿಗೆ ನೀನು ತಿಳಿಸಿಬಿಡು'' ಎಂದು ನುಡಿದು ರಾತ್ರಿಯಾಗಿದ್ದರೂ ಶತ್ರುಗಳ ಸೇನೆಯಲ್ಲಿ ನುಗ್ಗಿಬಿಟ್ಟರು. ಧೃಷ್ಟದ್ಯುಮ್ನನು ಅವರನ್ನು ಎದುರಿಸಿ ನಿಂತ. ಅಶ್ವತ್ಥಾಮ ದುರ್ಯೋಧನರನ್ನು ವಿರಥರನ್ನಾಗಿ ಮಾಡಿ, ಭೀಮನು ಅವರೆಲ್ಲ ನೋಡುತ್ತಿರುವಂತೆಯೇ ಅವರ ಸೇನೆಯನ್ನು ಓಡಿಸತೊಡಗಿದ.

ಆ ಎರಡೂ ಸೇನೆಗಳಲ್ಲಿ ಆ ವೇಳೆಗೆ ಒಟ್ಟು ಏಳು ಅಕ್ಷೋಹಿಣಿಯಷ್ಟು ಸೈನ್ಯ ನಾಶವಾಗಿತ್ತು. ಅವುಗಳಲ್ಲಿ ಕೌರವರ ಮೂರು ಅಕ್ಷೋಹಿಣಿಯನ್ನು ಭೀಮನೂ, ಎರಡನ್ನು ಅರ್ಜುನನೂ ನಾಶ ಪಡಿಸಿದ್ದರು. ಅವುಗಳ ಮಧ್ಯೆ ಹದಿನಾರನೆಯ ಒಂದಂಶವನ್ನು ಅಭಿಮನ್ಯು, ಸಾತ್ಯಕಿ ಮೊದಲಾದವರೂ, ಹತ್ತನೆಯ ಒಂದಂಶವನ್ನು ಘಟೋತ್ಕಚ, ಧೃಷ್ಟದ್ಯುಮ್ನ ಮೊದಲಾದವರೂ ನಾಶಮಾಡಿದ್ದರು. ಭೀಷ್ಮ , ದ್ರೋಣ ಮತ್ತು ಅಶ್ವತ್ಥಾಮರಿಂದ ಪಾಂಡವರ ಸೈನ್ಯದ ಎರಡು ಅಕ್ಷೋಹಿಣಿಯೂ, ಉಳಿದೆಲ್ಲರಿಂದ ಸೇರಿ ಅದರ ನಾಲ್ಕನೆಯ ಒಂದಂಶವೂ ಕೊಲ್ಲಲ್ಪಟ್ಟಿತ್ತು.

## ಮತ್ತೊಮ್ಮೆ ಭೀಮನಿಂದ ಕರ್ಣನ ಪರಾಭವ

ಆ ರಾತ್ರಿಯಲ್ಲಿ ಐದು ಅಕ್ಷೋಹಿಣಿಗಳೊಂದಿಗೆ ಪಾಂಡವರೂ, ಆರು ಅಕ್ಷೋಹಿಣಿಗಳೊಂದಿಗೆ ಕೌರವರೂ ವ್ಯೂಹಗಳನ್ನು ರಚಿಸಿಕೊಂಡು ಭಯಂಕರವಾದ ಯುದ್ಧವನ್ನು ಮುಂದುವರೆಸಿದರು. ತಮ್ಮ ಸೇನೆಯನ್ನು ಅಟ್ಟುತ್ತಿದ್ದ ಭೀಮನ ಮೇಲೆ ಕರ್ಣನು ಮತ್ತೆ ಯುದ್ಧಕ್ಕೆ ಹೊರಟ. ಭೀಮನು ಕರ್ಣನ ಎದುರೇ ದುಷ್ಕರ್ಣ ಮತ್ತು ಕರ್ಣ ಎಂಬ ದುರ್ಯೋಧನನ ಇಬ್ಬರು ತಮ್ಮಂದಿರನ್ನು ಕಾಲಿನಿಂದ ತುಳಿದು ಕೊಂದುಹಾಕಿದ. ಅವನ ಕಾಲ್ತುಳಿತಕ್ಕೆ ಸಿಕ್ಕಿ ಅವರ ರಥ, ಕುದುರೆ, ಧ್ವಜ ಮತ್ತು ಸೂತರೂ ನಾಶಹೊಂದಿದರು. ''ನೀನು ನನ್ನನ್ನು ನಿರಾಯುಧನೆಂದು ಕರೆದಿದ್ದೆ. ಆಗಲೂ ನಾನು ಕಾಲಿನಿಂದಲೇ ನಿನ್ನನ್ನು ಕೊಲ್ಲಲು ಸಮರ್ಥನಾಗಿದ್ದೆ'' ಎಂಬುದನ್ನು ಸೂಚಿಸಲು ಭೀಮನು ಆ ರೀತಿ ಅವರನ್ನು ಕಾಲಿನಿಂದ ತುಳಿದು ಕೊಂದ. ಅಲ್ಲದೆ ಮುಷ್ಟಿಯಿಂದಲೂ ನಾನು ನಿನ್ನನ್ನು ಕೊಲ್ಲಬಲ್ಲವನಾಗಿದ್ದೆ ಎಂಬುದನ್ನು ತಿಳಿಸಲೆಂದು ಮುಷ್ಟಿಯಿಂದ ಅಪ್ಪಳಿಸಿ ಕಳಿಂಗನನ್ನು ಕೊಂದ. ಭೀಮನ ಮುಷ್ಟಿಯ ಹೊಡೆತಕ್ಕೆ ಅಶ್ವ, ರಥ, ಸೂತ, ಧ್ವಜಗಳೊಂದಿಗೆ ಆ ಕಳಿಂಗನೂ ನಾಶವಾದ. ಇದರಿಂದ ಕರ್ಣನಿಗೆ ಭೀಮನು ''ನಾನು ನಿನ್ನನ್ನು ಉದ್ದೇಶಪೂರ್ವಕವಾಗಿಯೇ ಕೊಲ್ಲಲಿಲ್ಲ'' ಎಂಬುದನ್ನು ಮನದಟ್ಟು ಮಾಡಿಕೊಟ್ಟ. ಕಳಿಂಗನ ತಂದೆ ಕೇತುಮಾನ್, ಶಕ್ರದೇವ, ಶ್ರುತಾಯುಧರೂ ಸಹ ಅಕ್ಷೋಹಿಣೀಸೇನೆಯೊಂದಿಗೆ ಭೀಮನಿಂದ ಭೀಷ್ಮರು ಸೇನಾಧಿಪತಿಗಳಾಗಿದ್ದಾಗ ನಡೆದ ಖಡ್ಗಯುದ್ಧದಲ್ಲಿ ಮಡಿದಿದ್ದರು. ಈ ರಾತ್ರಿಯುದ್ಧದಲ್ಲಿ ಧ್ರುವ ಮೊದಲಾದ ಅನೇಕ ಕರ್ಣನ ತಮ್ಮಂದಿರನ್ನು ಭೀಮನು ಸಂಹರಿಸಿದ.

ಭೀಮನ ಸೂಚನೆಯನ್ನು ಅರ್ಥಮಾಡಿಕೊಂಡ ಕರ್ಣ ಬೇರೊಂದು ಶಕ್ತ್ಯಾಯುಧವನ್ನು ಭೀಮನ ಮೇಲೆ ಪ್ರಯೋಗಿಸುತ್ತಾ , ''ನಾನು ದಿವ್ಯವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿಲ್ಲ-

ವಾದ್ದರಿಂದ ನೀನು ಉಳಿದಿರುವಿ'' ಎಂಬ ಭಾವನೆಯನ್ನು ವ್ಯಕ್ತಪಡಿಸಿದ. ಅದನ್ನು ಅರ್ಥ-ಮಾಡಿಕೊಂಡ ಭೀಮನು ಆಕಾಶಕ್ಕೆ ನೆಗೆದು, ಆ ಶಕ್ತ್ಯಾಯುಧವನ್ನು ಹಿಡಿದು, ತ್ವರೆಯಿಂದ ಕರ್ಣನ ಮೇಲೆಯೇ ಎಸೆದು, ''ಹಾಗೇನಾದರೂ ಶಕ್ತ್ಯಾಯುಧವನ್ನು ನನ್ನ ಮೇಲೆ ಪ್ರಯೋಗಿಸಿದ್ದಲ್ಲಿ ಅದು ಈ ರೀತಿ ನಿನ್ನನ್ನೇ ಕೊಲ್ಲುತ್ತಿತ್ತು'' ಎಂದು ಸೂಚಿಸಿದ. ಕರ್ಣನನ್ನು ಉಳಿಸುವ ದೃಷ್ಟಿಯಿಂದ ಕರ್ಣನ ಬಲಭುಜಕ್ಕೆ ಎಸೆಯಲ್ಪಟ್ಟ ಆ ಶಕ್ತ್ಯಾಯುಧವು ಅವನ ಬಲತೋಳನ್ನು ಸೀಳಿಕೊಂಡು, ಭೂಮಿಯ ಮೇಲೆ ಬಿದ್ದು ಅದನ್ನೂ ಸೀಳಿ ಒಳಕ್ಕೆ ಸೇರಿತು. ಇಷ್ಟೆಲ್ಲ ಮಾಡಿದ ಭೀಮ ಮತ್ತೆ ತನ್ನ ರಥವನ್ನು ಏರಿ ಧನುರ್ಧಾರಿಯಾಗಿ, ಶತ್ರುಗಳನ್ನು ಕರ್ಣನ ಎದುರೇ ಹೊಡೆದೋಡಿಸತೊಡಗಿದ. ಆಗ ಕರ್ಣನು ಹರಿತವಾದ ಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸತೊಡಗಲು, ಭೀಮನು ತನ್ನ ಗದೆಯನ್ನು ತೆಗೆದುಕೊಂಡು ವೇಗದಿಂದ ಕರ್ಣನ ರಥಕ್ಕೆ ಅಪ್ಪಳಿಸಿದ. ಕರ್ಣನು ಅದನ್ನು ತಡೆಯಲು ಸ್ಥೂಣಾಕರ್ಣಾಸ್ತ್ರವನ್ನು ಬಿಟ್ಟ. ಆ ಅಸ್ತ್ರದಿಂದ ಹೊಡೆಯಲ್ಪಟ್ಟ ಗದೆಯು ಭೀಮನ ಬಳಿಗೆ ಮರಳಿತು. ಭೀಮನು ಅದನ್ನು ಕೈಯಲ್ಲಿ ತೆಗೆದುಕೊಂಡು ಕರ್ಣನ ರಥವನ್ನು ಏರಿ, ಅವನ ರಥದ ನೊಗವನ್ನು ಪುಡಿಮಾಡಿದ. 'ಹೀಗೆ ನಾನು ನಿನ್ನನ್ನೂ ಪುಡಿ ಮಾಡಲು ಶಕ್ತನೇ ಆಗಿರುವೆನು ; ಆದರೆ ಅದು ನನಗೆ ಬೇಕಿಲ್ಲವಾದ್ದರಿಂದ ನೀನು ಬದುಕಿರುವೆ' ಎಂಬುದನ್ನು ತೋರಿಸಿ ಮತ್ತೆ ತನ್ನ ರಥಕ್ಕೆ ಹಿಂದಿರುಗಿ, ಶತ್ರುಸೈನ್ಯವನ್ನು ಕೊಲ್ಲತೊಡಗಿದ. ಭೀಮನನ್ನು ಬಿಟ್ಟು ಕರ್ಣನು ಸಹದೇವನ ಬಳಿಗೆ ಹೊರಟು, ಅವನ ರಥವನ್ನು ಮುರಿದುಹಾಕಿ, ಕತ್ತಿನೊಳಗೆ ಧನುಸ್ಸನ್ನು ತೂರಿಸಿ, ಬಹಳವಾಗಿ ನಿಂದಿಸಿದ. ಸಹದೇವ ಬಹಳ ವ್ಯಥೆಗೊಂಡ. ಕರ್ಣ ಕುಂತಿಗೆ ಕೊಟ್ಟಿದ್ದ ತನ್ನ ಮಾತನ್ನು ಸ್ಮರಿಸಿಕೊಂಡು ಸಹದೇವನನ್ನು ಸಂಹರಿಸದೆ ಬಿಟ್ಟು, ಪಾಂಡವರ ಸೈನ್ಯವನ್ನು ಹೊಡೆಯಲಾರಂಭಿಸಿದ.

## ಘಟೋತ್ಕಚನ ಪರಾಕ್ರಮ

ಇತ್ತ ಅಶ್ವತ್ಥಾಮರು ವಿವಿಧ ಬಾಣಗಳಿಂದ ಯುಧಿಷ್ಠಿರನ ಸೈನ್ಯವನ್ನು ಎಲ್ಲ ಕಡೆಗಳಿಂದಲೂ ಕೊಲ್ಲಲಾರಂಭಿಸಿದರು. ರಣಕೋವಿದರಾದ ಅವರ ಹೊಡೆತಕ್ಕೆ ಸಿಕ್ಕ ಪಾಂಡವಸೇನೆಯು ಮೃತ್ಯುಪೀಡಿತವಾದ ಪ್ರಜೆಯಂತೆ ಹತವಾಗತೊಡಗಿತು. ಅಶ್ವತ್ಥಾಮರ ಹೊಡೆತಕ್ಕೆ ಸಿಕ್ಕ ತಮ್ಮ ಸೇನೆಯನ್ನು ನೋಡಿ, ಘಟೋತ್ಕಚನು ಅಶ್ವತ್ಥಾಮರ ಬಳಿಗೆ ಹೋಗಿ ತನ್ನೊಂದಿಗೆ ಯುದ್ಧಕ್ಕೆ ಬರಲು ಆಹ್ವಾನಿಸಿದ. ಅಶ್ವತ್ಥಾಮರು ಅವನಿಗೆ ''ಪುತ್ರ ! ತಂದೆಯಾದ ನನ್ನನ್ನು ನೀನೀಗ ಎದುರಿಸಬೇಡ'' ಎನ್ನಲು, ಅವನು ''ನೀವೇನೂ ನನ್ನ ತಂದೆಯಲ್ಲ ; ನನ್ನ ತಂದೆಯ ಸ್ನೇಹಿತರೆಂಬುದೇನೋ ನಿಜ ; ಆದರೆ ನೀವೀಗ ಶತ್ರುಪಕ್ಷವನ್ನು ಆಶ್ರಯಿಸಿರುವುದರಿಂದ ನನಗೆ ಶತ್ರುವೇ ಆಗಿರುವಿರಿ'' ಎಂದು ನುಡಿದ. ''ನೀನು ನನ್ನನ್ನು ಶತ್ರುವೆಂದು ಬಗೆದಲ್ಲಿ ನಾನೂ ನಿನ್ನಲ್ಲಿ ಶತ್ರುವಿನಂತೆಯೇ ವರ್ತಿಸುವೆ'' ಎಂದು ಹೇಳಿ ಇಂದ್ರನ ಧನುಸ್ಸಿನಂತೆ ಹೊಳೆಯುತ್ತಿದ್ದ ತಮ್ಮ ಬಿಲ್ಲನ್ನು ಹೆದೆಯೇರಿಸಿ, ಬಾಣಗಳ ಹೊಳೆಯನ್ನೇ ಹರಿಸುತ್ತಾ ಅಶ್ವತ್ಥಾಮರು ಉಗ್ರವೇಗದಿಂದ ಆ ರಾಕ್ಷಸನನ್ನು ಎದುರಿಸಿದರು. ಅವನೂ ಸಹ ತನ್ನ ಸೇನೆಯೊಂದಿಗೆ ಅವರ

ಮೇಲೆ ಎರಗಿದ. ಅನೇಕ ಜನ ಸುಶಿಕ್ಷಿತರಾದ ಮನುಷ್ಯರಿಂದಲೂ, ಒಂದುಲಕ್ಷ ರಾಕ್ಷಸರಿಂದಲೂ ಕೂಡಿದ್ದ ಆ ಘಟೋತ್ಕಚನು, ಅಕ್ಷೋಹಿಣಿಯಷ್ಟು ಸೈನ್ಯದಿಂದ ಅಶ್ವತ್ಥಾಮರನ್ನು ಬಾಣಗಳಿಂದ ನೋಯಿಸಿದ. ಅವನ ಬಾಣಗಳಿಂದ ನೊಂದು, ಶರೀರವು ಗಾಯಗೊಂಡು, ರಕ್ತವು ದೇಹದ ಮೇಲೆ ಸುರಿಯುತ್ತಿರಲು, ಅಶ್ವತ್ಥಾಮರು ಕಣ್ಣುಗಳನ್ನು ತಿರುಗಿಸುತ್ತಾ, ಹೆಚ್ಚುಕೋಪದಿಂದ ಮಹತ್ತರವಾದ ಧನುಸ್ಸನ್ನು ಧ್ವನಿ ಮಾಡುತ್ತಾ ಬಾಣಗಳಿಂದ ಕತ್ತಲೆಯನ್ನೇ ಕವಿಸಿದರು. ದೊಡ್ಡ ಬಾಣಗಳನ್ನು ಸುರಿಸುತ್ತಿದ್ದ ಆ ಅಕ್ಷೋಹಿಣೀ ಸಂಖ್ಯೆಯ ರಾಕ್ಷಸರನ್ನು ನಾಶಗೊಳಿಸಿದ ಅಶ್ವತ್ಥಾಮರು, ಘಟೋತ್ಕಚನ ನಿಷ್ಠ್ಯ ಎಂಬ ಮಗನನ್ನು ಸಂಹರಿಸಿದರು ; ಅವನ ಹೆಸರು ಅಂಜನವರ್ಮ ಎಂದಾಗಿತ್ತು.

ತನ್ನ ಮಗ ಹಾಗೂ ಸೈನ್ಯ ಎರಡೂ ಅಳಿದದ್ದನ್ನು ಕಂಡು ಘಟೋತ್ಕಚನು ಒಂದು ಬಾಣದಿಂದ ಅಶ್ವತ್ಥಾಮರನ್ನು ಹೊಡೆದ. ಅದರಿಂದ ಬಹಳವಾಗಿ ಪೆಟ್ಟು ತಿಂದ ಅಶ್ವತ್ಥಾಮರು, ಕಳವಳಗೊಂಡವರಾಗಿ, ಹಾಗೆಯೇ ಧ್ವಜಕ್ಕೆ ಒರಗಿಕೊಂಡು ಮತ್ತೆ ಚೇತರಿಸಿಕೊಂಡು ಮೇಲೆದ್ದರು. ಯಮದಂಡವನ್ನು ಹೋಲುವ ಒಂದು ಬಾಣವನ್ನು ಬಿಲ್ಲಿನಲ್ಲಿ ಹೂಡಿ, ಜೋರಾಗಿ ಎಳೆದು ಘಟೋತ್ಕಚನ ಮೇಲೆ ಅವರು ಪ್ರಯೋಗಿಸಲು, ಅದರ ಪೆಟ್ಟಿಗೆ ಅವನು ಮೂರ್ಛಿತನಾಗಿ ತನ್ನ ರಥದಲ್ಲಿ ಬಿದ್ದುಬಿಟ್ಟ. ಅವನ ಸಾರಥಿಯು ಮೂರ್ಛಿತನಾದ ಅವನ ರಥವನ್ನು ದೂರಕ್ಕೆ ಹೊಡೆದುಕೊಂಡು ಹೋದ. ಇದನ್ನೆಲ್ಲ ಉಳಿದವರು ನೋಡುತ್ತಲೇ ಇದ್ದರು. ಅಶ್ವತ್ಥಾಮರು ಹರಿತವಾದ ಬಾಣಗಳನ್ನು ಬಿಡುತ್ತಾ ಪಾಂಡವಸೈನ್ಯದ ಮೇಲೆ ತಮ್ಮ ದಾಳಿಯನ್ನು ಮುಂದುವರೆಸಿದರು. ಎಚ್ಚೆತ್ತ ಘಟೋತ್ಕಚನು ಕೋಪದಿಂದ ಮತ್ತೆ ಕೌರವ-ಸೈನ್ಯವನ್ನು ಪ್ರವೇಶಿಸಿ, ಅದನ್ನು ಓಡಿಸುತ್ತಾ ಮಹಾರಥರಿಗೆ ನಡುಕ ಹುಟ್ಟಿಸಿದ.

## ಘಟೋತ್ಕಚನ ವಧೆ

ಆ ವೇಳೆಗೆ ಅರ್ಜುನನನ್ನು ಎದುರಿಸಲು ಕರ್ಣನು ಬರುತ್ತಿದ್ದುದನ್ನು ಕಂಡು, ಜಗದೊಡೆಯನಾದ ಶ್ರೀಕೃಷ್ಣನು, ಅರ್ಜುನನನ್ನು ಶಕ್ತ್ಯಾಯುಧದಿಂದ ರಕ್ಷಿಸಲು ಹಾಗೂ ಶಕ್ತ್ಯಾಯುಧವನ್ನು ಘಟೋತ್ಕಚನ ಮೇಲೆ ಪ್ರಯೋಗ ಮಾಡಿಸಲು, ಆ ಘಟೋತ್ಕಚನನ್ನು ಕರ್ಣನ ಮೇಲೆ ಯುದ್ಧಕ್ಕೆ ಕಳುಹಿಸಿದ. ಅವನು ಕರ್ಣನನ್ನು ಆಹ್ವಾನಿಸಿ ಅವನೊಂದಿಗೆ ಯುದ್ಧಕ್ಕೆ ತೊಡಗಿದ. ದುರ್ಯೋಧನ ಮೊದಲಾದವರೂ ಸಹ ದ್ರೋಣರೊಂದಿಗೆ ಸೇರಿಕೊಂಡು ಅವನ ಮೇಲೆಯೇ ನುಗ್ಗಿದರು. ಘಟೋತ್ಕಚನಿಂದ ಬಹಳವಾಗಿ ಪೀಡಿತರಾಗಿದ್ದ ಅವರೆಲ್ಲ ಕರ್ಣನನ್ನು ಮುಂದಿಟ್ಟುಕೊಂಡೇ ಅವನ ಮೇಲೆ ಯುದ್ಧ ಮಾಡಿದರು. ತನ್ನ ಬಲವನ್ನು ನೆಚ್ಚಿದ್ದ ಮಹಾಸ್ತ್ರವೇತ್ತನಾದ ಕರ್ಣ ಅವನಿಂದ ವ್ಯಥೆಪಡಲಿಲ್ಲ. ಆಗ ಭೀಮನು ಅಶ್ವತ್ಥಾಮರನ್ನೂ, ಅರ್ಜುನನು ತ್ರಿಗರ್ತರನ್ನು ಎದುರಿಸಿದರು. ಅಲಂಬಲ ಎಂಬ ರಾಕ್ಷಸನು, ಭೀಮಪುತ್ರನನ್ನು ಕೊಲ್ಲಲೆಂದು ಅವನ ಮೇಲೆ ಬಿದ್ದ. ಅವನೊಂದಿಗೆ ಕಾದಿದ ಘಟೋತ್ಕಚನು

ಅವನನ್ನು ಭೂಮಿಯ ಮೇಲೆ ಬೀಳಿಸಿ, ಖಡ್ಗದಿಂದ ಅವನ ತಲೆಯನ್ನು ಕತ್ತರಿಸಿ, ಅದನ್ನು ದುರ್ಯೋಧನನ ಮೇಲೆ ಎಸೆದ. ಅವನ ಆ ಕಾರ್ಯ ದುರ್ಯೋಧನನ ಕಡೆಯ ಎಲ್ಲ ರಾಜರಿಗೂ ಭಯ ಹುಟ್ಟಿಸಿತು. ನರಭಕ್ಷಕನಾದ ಅಲಾಯುಧನೆಂಬ ಮತ್ತೊಬ್ಬ ಪರಾಕ್ರಮಿಯು ಘಟೋತ್ಕಚನ ಮೇಲೆ ನುಗ್ಗಲು, ಕ್ಷಣಕಾಲ ಅವನೊಂದಿಗೆ ಕಾದಿದ ಘಟೋತ್ಕಚನು ಅವನನ್ನು ಭೂಮಿಯ ಮೇಲೆ ಬೀಳಿಸಿ ಯಜ್ಞಪಶುವನ್ನಾಗಿ ಮಾಡಿ, ಅವನ ತಲೆಯನ್ನು ಕಿತ್ತಿ ದುರ್ಯೋಧನನ ಎದೆಯ ಮೇಲೆ ಅದನ್ನು ಅಪ್ಪಳಿಸಿದ. ಇದರಿಂದ ದುರ್ಯೋಧನಾದಿಗಳೆಲ್ಲ ದಿಕ್ಕೆಟ್ಟು ಹೋದರು. ಘಟೋತ್ಕಚನ ಬಲವು ತಿಳಿಯಲಿ ಎಂದು ಭೀಮಸೇನನು ಆ ರಾಕ್ಷಸನನ್ನು ಈ ಮೊದಲು ತಾನು ಕೊಂದಿರಲಿಲ್ಲ; ಅದನ್ನೀಗ ಅವನ ಮಗನು ನೆರವೇರಿಸಿದ.

ದುರ್ಯೋಧನಾದಿಗಳೆಲ್ಲ ಕರ್ಣನ ಬಳಿಗೆ ಬಂದು ಶಕ್ತ್ಯಾಯುಧವನ್ನು ಅವನ ಮೇಲೆ ಪ್ರಯೋಗಿಸಲು ಬೇಡಿಕೊಂಡರು. 'ಇವನು ಸತ್ತಲ್ಲಿ ಉಳಿದೆಲ್ಲರೂ ಸತ್ತಂತೆಯೇ ; ನಮ್ಮನ್ನು ಅರ್ಜುನನಾದರೂ ಏನು ಮಾಡಿಯಾನು ?' ಎಂದು ಘಟೋತ್ಕಚನಿಂದ ಪೀಡಿತರಾದ ಅವರೆಲ್ಲ ಮತ್ತೆ ಮತ್ತೆ ಅವನನ್ನು ಕೇಳಿಕೊಂಡರು. ಘಟೋತ್ಕಚನಿಂದ ಸ್ವಯಂ ನೊಂದಿದ್ದ ಕರ್ಣನೂ ಸಹ ಇಂದ್ರನು ಕೊಟ್ಟಿದ್ದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡ; ಪರ್ವತಾಕಾರದಲ್ಲಿ ಆಕಾಶದಲ್ಲಿ ನಿಂತಿದ್ದ ವೀರನಾದ ಘಟೋತ್ಕಚನ ಮೇಲೆ, ದಿಕ್ಕುವಿದಿಕ್ಕುಗಳನ್ನು ಬೆಳಗುತ್ತಿದ್ದ ಮೃತ್ಯುವಿನ ನಾಲಿಗೆಯಂತಿದ್ದ ಅದನ್ನು ಪ್ರಯೋಗಿಸಿದ. ಅದರಿಂದ ಎದೆ ಸೀಳಲ್ಪಟ್ಟ ಘಟೋತ್ಕಚನು ಶತ್ರುಸೇನೆಯ ಮೇಲೆ ಬೀಳುತ್ತಾ, ಸಾಯುವಾಗಲೂ ಅದನ್ನು ಕೊಂದ. ಘಟೋತ್ಕಚನು ಸತ್ತಿದ್ದನ್ನು ಕಂಡು ದುರ್ಯೋಧನಾದಿಗಳಿಗೆ ಉಂಟಾದ ಆನಂದ ಹೇಳತೀರದಾಯಿತು. ಅವರು ಗಟ್ಟಿಯಾಗಿ ಕಿರುಚಿದರು ; ಬಟ್ಟೆಗಳನ್ನು ಹರಿದುಕೊಂಡು ಕುಣಿದಾಡಿದರು.

ಆಗ ಕೃಷ್ಣನು ಅರ್ಜುನನನ್ನು ಆಲಿಂಗಿಸಿಕೊಂಡು ಕುಣಿದಾಡಿದ ; ಸಿಂಹನಾದ ಮಾಡಿದ ; ಶಂಖವನ್ನು ಗಟ್ಟಿಯಾಗಿ ಮೊಳಗಿಸಿದ ; ಅರ್ಜುನನು ವ್ಯಥೆಯಿಂದ ಕೃಷ್ಣನನ್ನು ಕೇಳಿದ – ''ಪ್ರಭು ! ವೀರನಾದ ನಮ್ಮ ಹಿರಿಯ ಮಗ ಸತ್ತಿರುವಾಗ ಈ ಸಮಯದಲ್ಲಿ ನೀನೇಕೆ ಹೀಗೆ ನಲಿಯುತ್ತಿರುವಿ ?'' ಕೃಷ್ಣ ಉತ್ತರಿಸಿದ – ''ಅಬ್ಬಾ! ಅರ್ಜುನ ಕೊನೆಗೂ ನೀನು ಬದುಕಿದಿ ; ನಿನಗೋಸ್ಕರವಾಗಿ ಇಟ್ಟುಕೊಂಡಿದ್ದ ಶಕ್ತ್ಯಾಯುಧವನ್ನು ಕರ್ಣನು ಈ ಘಟೋತ್ಕಚನ ಮೇಲೆ ಪ್ರಯೋಗಿಸಿದನಲ್ಲವೇ !'' ಧರ್ಮರಾಜನು ಬಹಳವಾಗಿ ದುಃಖಿಸಿದ. ಕರ್ಣನ ಮೇಲೆ ಅವನ ಕೋಪ ಉಕ್ಕಿತು. ಆಗ ಅಲ್ಲಿ ಗೋಚರಿಸಿದ ಕೃಷ್ಣದ್ವೈಪಾಯನರು – ''ಅರ್ಜುನ ಸಾಯ-ಬೇಕಾಗಿದ್ದ ಶಕ್ತ್ಯಾಯುಧಕ್ಕೆ ಇವನು ಸತ್ತಿರುವನು. ಆದ್ದರಿಂದ ರಾಜೇಂದ್ರ ! ನೀನು ದುಃಖಿಸ-ಬೇಡ. ಅರ್ಜುನನು ಉಳಿದುಕೊಂಡಿರುವುದನ್ನು ಗಮನಿಸು'' ಎಂದು ಸಮಾಧಾನಪಡಿಸಿ, ಮತ್ತೆ ಅದೃಶ್ಯರಾದರು. ಯುದ್ಧ ಮತ್ತೆ ಮುಂದುವರೆಯಿತು.

ಭೀಮಾರ್ಜುನರಿಂದಲೂ, ಇತರ ಪಾಂಡವರಿಂದಲೂ ಕೌರವರ ಸೈನ್ಯದ ನಾಶ ಮುಂದು-ವರೆಯಿತು. ಆ ವೇಳೆಗೆ ದೀವಟಿಗೆಗಳನ್ನು ಹಿಡಿದಿದ್ದವರೂ, ಯೋಧರೂ ಮೊದಲಾಗಿ ಎಲ್ಲರೂ

ನಿದ್ರಾಪೀಡಿತರಾದರು. ಅರ್ಜುನನು ಅವರ ಪರಿಸ್ಥಿತಿಯನ್ನು ಗಮನಿಸಿ ಅವರೆಲ್ಲರಿಗೂ ''ಚಂದ್ರೋದಯವಾಗುವವರೆಗೂ ನಿದ್ರೆ ಮಾಡಿರಿ'' ಎಂದು ಅನುಮತಿಯನ್ನು ಘೋಷಿಸಿದ. ಅರ್ಜುನನನ್ನು ಹರಸುತ್ತಾ ಅವರೆಲ್ಲ ಇದ್ದಂತೆಯೇ ಮಲಗಿಬಿಟ್ಟರು.

## ಬಾಹ್ಲೀಕನ ವಧೆ

[೧]ಚಂದ್ರೋದಯವಾದ ಮೇಲೆ ಮಹಾಸ್ತ್ರಶಸ್ತ್ರಗಳನ್ನು ಸುರಿಸುತ್ತಾ ಅವರೆಲ್ಲ ಪುನಃ ಯುದ್ಧಕ್ಕೆ ತೊಡಗಿದರು. ಸಾತ್ಯಕಿಯು ಸೋಮದತ್ತ ಮತ್ತು ಭೂರಿ ಇಬ್ಬರೊಂದಿಗೆ ಒಬ್ಬನೇ ಕಾದಾಡಿ ಅವರಿಬ್ಬರನ್ನೂ ಕೊಂದ. ಅವರಿಬ್ಬರೂ ಭೂಮಿಯ ಮೇಲೆ ಉರುಳಿದರು. ಬಾಹ್ಲೀಕನು ಸಾತ್ಯಕಿಯನ್ನು ಎದುರಿಸಿ, ಅವನ ರಥವನ್ನು ಮುರಿದುಹಾಕಿ, ಅವನನ್ನು ಕೊಲ್ಲಲೆಂದು ಬಾಣವೊಂದನ್ನು ಬಿಟ್ಟ. ಅದನ್ನು ಕಂಡು ಭೀಮನು ಆ ಬಾಣವನ್ನು ಮೂರು ತುಂಡಾಗಿ ಕತ್ತರಿಸಲು, ಬಾಹ್ಲೀಕನು ಒಂದು [೨]ಶತಘ್ನಿಯನ್ನು ತೆಗೆದುಕೊಂಡು ಅದರಿಂದ ಭೀಮನನ್ನು ಹೊಡೆದ. ಅದರಿಂದ ಬಹಳವಾಗಿ ಹೊಡೆಯಲ್ಪಟ್ಟ ಭೀಮನು, ತನ್ನ ಗದೆಯಿಂದ ಬಾಹ್ಲೀಕನನ್ನು ಅಪ್ಪಳಿಸಿದ. ಬಾಹ್ಲೀಕ ಗತಪ್ರಾಣನಾಗಿ ಬಿದ್ದ. ಆ ಮೊದಲು ಬಾಹ್ಲೀಕನು ಭೀಮನನ್ನು ಸ್ನೇಹಪೂರ್ವಕವಾಗಿ ''ಭೀಮ ! ಯುದ್ಧದಲ್ಲಿ ನೀನೇ ನನ್ನನ್ನು ಕೊಲ್ಲಬೇಕು. ಅದರಿಂದ ನನಗೆ ಕೀರ್ತಿ ಧರ್ಮಗಳು ಮಾತ್ರವಲ್ಲದೆ ಉತ್ತಮ ಲೋಕವೂ ದೊರೆಯುವುದು'' ಎಂದು ಬೇಡಿಕೊಂಡಿದ್ದ. ಅದಕ್ಕೆ ಭೀಮನು – ''ಬಹಳವಾಗಿ ನೀನು ನನ್ನನ್ನು ಹೊಡೆದಾಗ ಮಾತ್ರ, ನಾನು ನಿನ್ನನ್ನು ಯುದ್ಧದಲ್ಲಿ ಕೊಲ್ಲುವೆ ; ಇಲ್ಲವಾದಲ್ಲಿ ಸಾಧ್ಯವಿಲ್ಲ. ಆ ರೀತಿ ಹೊಡೆಯುವುದು ನಿನಗೆ ಪಾಪವೆನ್ನಿಸದೆ ನನಗೆ ಮಾಡಿದ ಸೇವೆಯೇ ಎನ್ನಿಸುವುದು'' ಎಂದಿದ್ದ. ಅದರಂತೆ ಈಗ ಬಾಹ್ಲೀಕನು ಭೀಮನನ್ನು ಹೊಡೆದು, ತಾನು ಸದ್ಗತಿಯನ್ನು ಪಡೆದ.

ಬಾಹ್ಲೀಕನು ಮೃತನಾಗಲು, ಕರ್ಣ ದುರ್ಯೋಧನ ಮೊದಲಾದವರು ಅಶ್ವತ್ಥಾಮರನ್ನು ದ್ರೋಣರನ್ನು ಮುಂದಿಟ್ಟುಕೊಂಡು ಭೀಮನ ಮೇಲೆ ಯುದ್ಧಕ್ಕೆ ತೊಡಗಿದರು. ಇತ್ತ ಧೃಷ್ಟದ್ಯುಮ್ನ ಮತ್ತು ಸಾತ್ಯಕಿಯರು ಭೀಮನನ್ನು ಅನುಸರಿಸಿ ಅವರ ಮೇಲೆ ನುಗ್ಗಿದರು. ಅರ್ಜುನನು ಸಂಶಪ್ತಕರೊಂದಿಗೆ ತನ್ನ ಯುದ್ಧವನ್ನು ಮುಂದುವರೆಸಿದ. ಆ ರಾತ್ರಿಯಲ್ಲಿ ಹಾಗೆ ನಡೆದ ಭೀಕರ ಯುದ್ಧದಲ್ಲಿ ಭೀಮಾರ್ಜುನರ ಹೊಡೆತಕ್ಕೆ ಕೌರವರ ಒಂದು ಅಕ್ಷೋಹಿಣೀ ಸೇನೆಯು ನಾಶವಾಯಿತು.

---

೧. ಆ ರಾತ್ರಿ ಚಂದ್ರೋದಯವಾದ ಇಲ್ಲಿಯ ವಿವರ ಅತ್ಯಂತ ಗಮನಾರ್ಹವಾದುದು. ಇದರಿಂದ ಅಂದಿನ ದಿನ ಅಮಾವಾಸ್ಯೆಯಾಗಿರಲಿಲ್ಲ ಎಂಬುದು ಸ್ಫುಟಪಡುವುದು. ಇದನ್ನು ತಿಳಿಯದ ಅನೇಕ ಆಧುನಿಕರು ಅಂದು ಸಂಜೆ ಸೂರ್ಯ ಕಾಣದಂತಾಗಿದ್ದು ಕೃಷ್ಣನ ಮಹಿಮೆಯಿಂದಲ್ಲ ; ಅಂದು ಪೂರ್ಣಸೂರ್ಯಗ್ರಹಣ-ವಾಗಿದ್ದರಿಂದಾಗಿ ಎಂದು ವಾದಿಸುವರು. ಆದರೆ ಅಂದು ಮಧ್ಯರಾತ್ರಿಯ ಬಳಿಕ ತುಸುಹೊತ್ತಿನಲ್ಲಿ ಚಂದ್ರೋದಯವಾದ ಇಲ್ಲಿಯ ವಿವರ ಅಂದಿನ ದಿನ ಖಂಡಿತವಾಗಿ ಅಮಾವಾಸ್ಯೆಯಾಗಿರಲಿಲ್ಲ ಎಂಬುದನ್ನು ತಿಳಿಸಿ ಕೊಡುವುದು.

೨. ಶತಘ್ನೀ ಎಂದರೆ ಒಂದು ಪೆಟ್ಟಿಗೆ ನೂರಾರು ಜನರನ್ನು ಕೊಲ್ಲಬಲ್ಲ ವಿಶಿಷ್ಟವಾದ ಆಯುಧ ಎಂದರ್ಥ.

## ಹದಿನೈದನೆಯ ದಿನದ ಯುದ್ಧ - ದ್ರೋಣರ ಪರಾಕ್ರಮ

ಸೂರ್ಯೋದಯವಾಯಿತು. ದ್ರೋಣರು ಆ ದಿನ ಅತ್ಯಂತ ಭಯಂಕರವಾದ ಹೋರಾಟವನ್ನೇ ನಡೆಸಿದರು. ಪಾಂಚಾಲರ ರಥಗಳ ಗುಂಪನ್ನು ಪ್ರವೇಶಿಸಿದ ಅವರು ಆನೆಗಳನ್ನೂ , ಕುದುರೆಗಳನ್ನೂ , ಮನುಷ್ಯರನ್ನೂ , ರಥಗಳನ್ನೂ ನಾಶಪಡಿಸುತ್ತಲೇ ಇದ್ದರು. ಅವರಿಂದ ಮಹಾರಥರು ಓಡಬೇಕಾಯಿತು. ದ್ರೋಣರಿಂದ ಬಿಡಲ್ಪಟ್ಟ ಬಾಣಗಳ ಕತ್ತಲೆಯಲ್ಲಿ ಶತ್ರುಸೇನೆಗೆ ಶಾಂತಿ ದೊರೆಯದಾಯಿತು. ಮಹಾ ಧನುರ್ಧಾರಿಗಳೂ, ಪರಮಾಸ್ತ್ರ ಕೋವಿದರೂ ಆದ ದ್ರೋಣರು ವೃದ್ಧರೇ ಆದರೂ ಯುವಕನಂತೆಯೇ ಯುದ್ಧ ಮಾಡಿದರು. ಅವರ ಬಾಣಗಳಿಗೆ [೧]ಅರ್ಬುದ ಸಂಖ್ಯೆಯ ರಥಗಳು ಮುರಿದು ಬಿದ್ದವು. ಸಹಸ್ರಗಟ್ಟಲೆ ಮನುಷ್ಯರು ಪ್ರಾಣಬಿಟ್ಟರು. ಅದರ ಹತ್ತರಷ್ಟು ಸಂಖ್ಯೆಯಲ್ಲಿ ಕುದುರೆಗಳೂ, ಅರ್ಬುದ ಸಂಖ್ಯೆಯ ಆನೆಗಳೂ ದ್ರೋಣರ ಬಾಣಕ್ಕೆ ತುತ್ತಾದವು. ಆ ಘೋರ ಯುದ್ಧದಲ್ಲಿ , ಅವರು ಎರಡು ಬಾಣಗಳಿಂದ, ವಿರಾಟ ಹಾಗೂ ದ್ರುಪದ ಇಬ್ಬರನ್ನೂ ಕೊಂದರು. ಅಶ್ವತ್ಥಾಮಾದಿಗಳನ್ನು ಗೆದ್ದ ಭೀಮನು ಧೃಷ್ಟದ್ಯುಮ್ನನನ್ನು ರಕ್ಷಿಸಿದ. ಭೀಮಸೇನನ ರಕ್ಷಣೆಯಲ್ಲಿ ಧೃಷ್ಟದ್ಯುಮ್ನನು ದ್ರೋಣರನ್ನು ಕೊಲ್ಲಲು ದೊಡ್ಡ ಪ್ರಯತ್ನವನ್ನೇ ನಡೆಸಿದ.

ದ್ರೋಣ – ಧೃಷ್ಟದ್ಯುಮ್ನರು ಒಬ್ಬರನ್ನೊಬ್ಬರು ಬಾಣಗಳಿಂದ ಎದುರಿಸಿದರು. ಧೃಷ್ಟದ್ಯುಮ್ನನ ಬಾಣದ ಪೆಟ್ಟಿಗೆ ದ್ರೋಣರು ಮೂರ್ಛಿತರಾಗಿ ರಥದಲ್ಲಿ ಕುಸಿದು ಕುಳಿತುಬಿಟ್ಟರು. ಧೃಷ್ಟದ್ಯುಮ್ನ ತ್ವರೆಯಿಂದ ಖಡ್ಗ ಗುರಾಣಿಗಳನ್ನು ಕೈಗೆತ್ತಿಕೊಂಡು, ದ್ರೋಣರ ಉತ್ತಮ ರಥವನ್ನೇ ಏರಿದ. ಆ ವೇಳೆಗೆ ಎಚ್ಚೆತ್ತ ದ್ರೋಣರು ಗೇಣುದ್ದದ ಅನೇಕ ಬಾಣಗಳನ್ನು ಪ್ರಯೋಗಿಸಿ ಧೃಷ್ಟದ್ಯುಮ್ನನನ್ನು ನೋಯಿಸಿದರು. ಧೃಷ್ಟದ್ಯುಮ್ನ ತನ್ನ ರಥಕ್ಕೆ ಮರಳಿದ. ಅವರಿಬ್ಬರಲ್ಲಿ ಮೊದಲಿನಂತೆಯೇ ಘೋರಯುದ್ಧ ಮುಂದುವರೆಯಿತು. ಬಾಣಗಳಿಂದ ಶತ್ರುಗಳನ್ನು ತಡೆದ ದ್ರೋಣರು, ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಬಹುಸಂಖ್ಯೆಯಲ್ಲಿ ಪಾಂಚಾಲರನ್ನು ಸುಟ್ಟು ಹಾಕಿದರು. ಪುರುಜಿತ್, ಕುಂತಿಭೋಜ ಮೊದಲಾದವರೆಲ್ಲ ಅವರ ಬಾಣಗಳಿಗೆ ಆಹುತಿಯಾದರು. ಭೀಮ, ಅರ್ಜುನ ಹಾಗೂ ಸಾತ್ಯಕಿ ಈ ಮೂವರೂ ಪರ್ಯಾಯ ಕ್ರಮದಲ್ಲಿ ಅಶ್ವತ್ಥಾಮರನ್ನೂ , ದೊಡ್ಡಸೇನೆಯನ್ನೂ ದೂರದಲ್ಲಿಯೇ ತಡೆದುಬಿಟ್ಟರು. ಕರ್ಣ, ದುರ್ಯೋಧನ, ಶಲ್ಯ, ಕೃತವರ್ಮ, ಕೃಪ ಮೊದಲಾದವರನ್ನೆಲ್ಲ ಭೀಮಾರ್ಜುನರು ಶರಸಮೂಹಗಳಿಂದ ಯುದ್ಧದಲ್ಲಿ ತಡೆದರು. ಭೀಮನು ಅಲ್ಲಿ ಗಜಸೇನೆಯನ್ನೂ ಜಯತ್ಸೇನ ಎಂಬ ಮಾಗಧನನ್ನೂ , ಅವರ ಅನೇಕ ರಥಗಳ ಸಮೂಹವನ್ನೂ ನಾಶಪಡಿಸಿದ.

## ದ್ರೋಣರ ಪ್ರಾಣತ್ಯಾಗ

ಮಾಳವರಾಜನ ಅಶ್ವತ್ಥಾಮ ಎಂಬ ಹೆಸರಿನ ಆನೆಯು ಭೀಮನಿಂದ ಹತನಾದುದನ್ನು ಕಂಡು, ಕೃಷ್ಣಪ್ರಚೋದಿತನಾಗಿ, ಧರ್ಮರಾಜನು 'ಅಶ್ವತ್ಥಾಮಾ ಹತಃ' ಎಂಬುದಾಗಿ ಹೇಳಿದ.

---

೧. ಅರ್ಬುದ ಎಂದರೆ ೧೦ ಕೋಟಿ.

'ಅಶ್ವತ್ಥಾಮರ ವಧೆಯನ್ನು ಕೇಳಿ ನಾನು ಯುದ್ಧ ಮಾಡಲಾರೆ ' ಎಂಬ ರಹಸ್ಯವನ್ನು ದ್ರೋಣರೇ ಧರ್ಮರಾಜನಿಗೆ ತಿಳಿಸಿದ್ದರು. ಆಗ ದ್ರೋಣರು ಯುಧಿಷ್ಠಿರನನ್ನು ಕುರಿತು 'ದಿಟವಾಗಿ ಹೇಳು' ಎಂಬುದಾಗಿ ಕೇಳಲು, 'ಸತ್ಯ'ವೆಂದೇ ಹೇಳಿ ಮೆಲ್ಲಗೆ 'ಆನೆ' ಎಂಬುದಾಗಿ ಸೇರಿಸಿದ. ದ್ರೋಣರಿಗೆ ತುಂಬಾ ವ್ಯಥೆಯಾಯಿತು. ಅವರ ರಥದ ಮುಂಭಾಗದ ಕಂಬವನ್ನು ಹಿಡಿದು ಭೀಮನು – 'ಗುಣವಂತರಾದ ನಿಮಗೆ ಈ ರೀತಿ ಸದಾ ಪರಧರ್ಮವನ್ನು ಆಶ್ರಯಿಸಿ ಬದುಕುವುದು ತರವಲ್ಲ' ಎಂದು ವಿವೇಕ ಹೇಳಿದ. ಆ ವೇಳೆಗೆ ಗಗನದಲ್ಲಿ ಕಾಣಿಸಿಕೊಂಡ ಮುನಿಗಳು 'ಇನ್ನು ಸಾಕು, ಬನ್ನಿ' ಎಂದು ದ್ರೋಣರನ್ನು ಕರೆದರು. ಎಲ್ಲವನ್ನೂ ತಿಳಿದು ದ್ರೋಣರು ಶಸ್ತ್ರವನ್ನು ತ್ಯಜಿಸಿದರು; ಎಲ್ಲ ಕರ್ಮಗಳನ್ನು ಅವನಲ್ಲಿ ಸಮರ್ಪಿಸಿ, ಸರ್ವೇಶ್ವರನೂ, ಎಂದೂ ದೋಷವಿಲ್ಲದವನೂ, ಶ್ರೇಷ್ಠನೂ ಆದ ವಾಸುದೇವನನ್ನು ಧ್ಯಾನಿಸುತ್ತಾ ದೇಹವನ್ನು ಬಿಟ್ಟು ತಮ್ಮ ಮೂಲರೂಪಕ್ಕೆ ತೆರಳಿದರು. ಗಗನಮಾರ್ಗವಾಗಿ ಹಾಗೆ ತಮ್ಮ ಲೋಕಕ್ಕೆ ನಡೆದ ದ್ರೋಣರನ್ನು ಕೃಷ್ಣ, ಪಾಂಡವರು ಹಾಗೂ ಕೃಪಾಚಾರ್ಯರು ಕಂಡರು.

ಆಗ ಪಾಂಡವರು ತಡೆದರೂ ಕೇಳದೆ ಧೃಷ್ಟದ್ಯುಮ್ನ ಖಡ್ಗ, ಗುರಾಣಿಗಳನ್ನು ತೆಗೆದುಕೊಂಡು ದ್ರೋಣರ ರಥವನ್ನೇರಿ ಖಡ್ಗದಿಂದ ಅವರ ತಲೆಯನ್ನು ಕತ್ತರಿಸಿ, ಮತ್ತೆ ವೇಗದಿಂದ ತನ್ನ ರಥಕ್ಕೆ ಹಿಂದಿರುಗಿದ. ಅದನ್ನು ಕಂಡು ಕೃಪಾಚಾರ್ಯರು ಬಹಳ ಅಂಜಿ, ಕುದುರೆಯೊಂದನ್ನು ಏರಿ ಓಡಿಹೋದರು. ದ್ರೋಣರ ಶಿರಸ್ಸನ್ನು ಧೃಷ್ಟದ್ಯುಮ್ನನು ಕತ್ತರಿಸಿದ್ದನ್ನು ಕಂಡು ಅರ್ಜುನ, ಧರ್ಮರಾಜ, ಸಾತ್ಯಕಿಯರೂ ಅವನನ್ನು ನಿಂದಿಸಿದರು. ಧೃಷ್ಟದ್ಯುಮ್ನನು ಅವರನ್ನು ಪ್ರಶ್ನಿಸಿದ – ''ಭೂರಿಶ್ರವಸ್‌ನನ್ನು ನೀವು ಕೊಂದದ್ದಾದರೂ ಹೇಗೆ?'' ಅದನ್ನು ಕೇಳಿ ಸಾತ್ಯಕಿ ಗದಾಪಾಣಿಯಾಗಿ ಧೃಷ್ಟದ್ಯುಮ್ನನ ಮೇಲೆ ನುಗ್ಗಿದ. ಸ್ವಲ್ಪವೂ ವಿಸ್ಮಯಗೊಳ್ಳದೆ ಧೃಷ್ಟದ್ಯುಮ್ನನು ತಾನೂ ಖಡ್ಗಧಾರಿಯಾಗಿ ಅವನನ್ನು ಎದುರಿಸಲು ಸಿದ್ಧನಾದ. ಆಗ ಧೃಷ್ಟದ್ಯುಮ್ನನ ಮೇಲಿನ ಸ್ನೇಹದಿಂದಾಗಿ, ಕೃಷ್ಣನ ಪ್ರೇರಣೆಯಂತೆ, ಭೀಮನು ಸಾತ್ಯಕಿಯನ್ನು ತಡೆದು ನಿಲ್ಲಿಸಿದ ; ಅವನನ್ನೂ ಅರ್ಜುನನನ್ನೂ ಸಮಾಧಾನಪಡಿಸಿದ. ಕೃಷ್ಣನಿಂದ ತಿಳಿಹೇಳಲ್ಪಟ್ಟ ಅವರಿಬ್ಬರೂ ಮತ್ತೆ ಮುಂಚಿನಂತೆ ಉತ್ತಮಸ್ನೇಹವನ್ನೇ ಹೊಂದಿದರು; ಪುನಃ ಅಣಿಯಾಗಿ ಯುದ್ಧಕ್ಕೆ ಹೊರಟರು.

## ನಾರಾಯಣಾಸ್ತ್ರ ಪ್ರಸಂಗ

ತಂದೆ ಹತರಾದುದನ್ನು ಕೇಳಿದ ಅಶ್ವತ್ಥಾಮರು ಕೋಪದಿಂದ ಧನುಸ್ಸನ್ನೆತ್ತಿಕೊಂಡು ನುಗ್ಗುತ್ತಾ, 'ಶತ್ರುಗಳನ್ನೆಲ್ಲ ನಿಃಶೇಷವಾಗಿ ಸಂಹರಿಸುವುದಾಗಿ' ಪ್ರತಿಜ್ಞೆಯನ್ನು ಮಾಡಿದರು. ಅಸಾಧ್ಯಕೋಪದಿಂದ ನಾರಾಯಣಾಸ್ತ್ರವನ್ನು ಪಾಂಡವಸೈನ್ಯದ ಮೇಲೆ ಪ್ರಯೋಗಿಸಿದರು. ಆ ಸಮಯದಲ್ಲಿ ಭೀಮನನ್ನು ಬಿಟ್ಟು ಉಳಿದವರೆಲ್ಲ ಭಯದಿಂದ ನಡುಗಿದರು. ಧರ್ಮರಾಜನು ವಿಷಾದದಿಂದ – ''ಸಾತ್ಯಕಿ ಮೊದಲಾದವರೆಲ್ಲ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋಗಲಿ ; ತಮ್ಮಂದಿರೊಂದಿಗೆ ನಾನು ಅಶ್ವತ್ಥಾಮರ ಬಾಣಕ್ಕೆ ಬಲಿಯಾಗುವೆನು'' ಎನ್ನಲು, ಕೃಷ್ಣನು – ''ಬದುಕಬಯಸುವವರೆಲ್ಲ ಅಸ್ತ್ರಕ್ಕೆ ಶರಣಾಗಿರಿ, ಅದು ನಿಮ್ಮನ್ನು ಬಿಡುವುದು'' ಎಂದು

ಘೋಷಿಸಿದ. ಅದನ್ನು ಕೇಳಿ ಭೀಮನೊಬ್ಬನನ್ನು ಬಿಟ್ಟು ಅರ್ಜುನ ಮೊದಲಾದ ಎಲ್ಲ ಪಾಂಡವಪಕ್ಷದವರೂ ಅದಕ್ಕೆ ನಮಸ್ಕರಿಸಿದರು. ಆ ನಾರಾಯಣಾಸ್ತ್ರವು ಭೀಮನ ತಲೆಯ ಮೇಲೆ ಉರಿಯುತ್ತಾ ಬಿದ್ದಿತು. ಆಗ ಅಗ್ನಿಯೊಳಗೆ ನಿಂತ ಅಗ್ನಿಯಂತೆ ಭೀಮನು ಕಾಣುತ್ತಿದ್ದ. ಭೀಮನು ಆ ಬೆಂಕಿಯಲ್ಲೂ ಸುಡದೆ, ಬೆಂಕಿಯಂತೆಯೇ ನಿಂತು ಬಿಡಲು, ಅರ್ಜುನನು ತನ್ನ ಪ್ರೀತಿಯನ್ನು ತೋರಿಸಲೆಂದು ವಾರುಣಾಸ್ತ್ರವನ್ನು ಪ್ರಯೋಗಿಸಿ ಆರಿಸಲು ನೋಡಿದ. ದೇಹದ ಮೇಲೆ ಅಸ್ತ್ರ ಬಿದ್ದಿರುವಾಗ ಹೊರಗೆ ನೀರು ಸುರಿಸುವುದರಿಂದ ಏನು ತಾನೇ ಪ್ರಯೋಜನ ! ಅದನ್ನು ತಿಳಿದಿದ್ದರೂ ಸ್ನೇಹದಿಂದಾಗಿ ಅರ್ಜುನನು ಆ ರೀತಿ ಮಾಡಿದ. ಹೀಗೆ ತನ್ನ ಅಸ್ತ್ರದ ಅಮೋಘತ್ವವನ್ನೂ , ಭೀಮನ ಅವಧ್ಯತ್ವವನ್ನೂ ಜಗತ್ತಿಗೆ ತೋರಿಸಿದ ಕೃಷ್ಣನು ಅರ್ಜುನ-ನೊಂದಿಗೆ ಭೀಮನ ರಥವನ್ನು ಏರಿದ. ವಾರುಣಾಸ್ತ್ರದಿಂದ ಕೂಡಿದ್ದರಿಂದಲೂ, ಕೃಷ್ಣನೊಂದಿಗೆ ಇದ್ದುದರಿಂದಲೂ, ನರನ ಆವೇಶ ಇದ್ದುದರಿಂದಲೂ, ಆ ಅಸ್ತ್ರ ಅರ್ಜುನನನ್ನು ಸುಡಲಿಲ್ಲ. ಅವರಿಬ್ಬರೂ ಭೀಮನನ್ನು ಅವನ ರಥದಿಂದ ಕೆಳಕ್ಕೆ ಇಳಿಸಿದರು, ಕೂಡಲೇ ಅಸ್ತ್ರ ಶಾಂತವಾಯಿತು; ಭೀಮನ ಕೈಯಲ್ಲಿ ಮಾತ್ರ ಇನ್ನೂ ಆಯುಧ ಹಾಗೆಯೇ ಇತ್ತು.

ಶುದ್ಧಕ್ಷತ್ರಿಯಧರ್ಮದಲ್ಲಿ ನಿರತನಾದ್ದರಿಂದಲೇ ಭೀಮನು, ಉಳಿದವರೆಲ್ಲ ವಾಹನಗಳಿಂದ ಕೆಳಗಿಳಿದು, ಅಸ್ತ್ರಗಳನ್ನು ಕೆಳಗಿರಿಸಿ ನಾರಾಯಣಾಸ್ತ್ರಕ್ಕೆ ನಮಸ್ಕರಿಸಿದರೂ, ತಾನು ಸಾಯುಧನಾಗಿ ರಥದ ಮೇಲಿದ್ದೇ, ಯಾರೂ ತಡೆಯಲಾಗದ ಆ ಅಸ್ತ್ರವನ್ನು ಎದುರಿಸಿದ. ಮಿತ್ರರಾದವರು ತಮ್ಮ ಧರ್ಮವನ್ನು ಮರೆತಾಗ, ಅವರನ್ನು ಎಚ್ಚರಿಸಬೇಕಾದ್ದೂ ಸಹ ಧರ್ಮವಾದ್ದರಿಂದ, ಭೀಮನು ಉಳಿದವರಿಗೂ ನಮಸ್ಕರಿಸಬೇಡಿರೆಂದೇ ಉಪದೇಶಿಸಿದ. ಆ ಅಸ್ತ್ರವು ನಮಸ್ಕಾರಾ-ರ್ಹವೇ ಆದರೂ ಯುದ್ಧದಲ್ಲಿ ಶತ್ರುವಿನಿಂದ ಬಿಡಲ್ಪಟ್ಟ ಬಾಣಗಳನ್ನು ಪ್ರಾಣ ಉಳಿಸಿಕೊಳ್ಳಲೆಂದು ಅದಕ್ಕೆ ನಮಸ್ಕರಿಸಬೇಕಾಗಿಲ್ಲ ; ಅದಕ್ಕೆಂದೇ ಭೀಮನು ಅದಕ್ಕೆ ನಮಸ್ಕರಿಸಲಿಲ್ಲ. ಅಸ್ತ್ರಕ್ಕೆ ಅಭಿಮಾನಿ ಸ್ವಯಂ ವಾಯುದೇವರೇ, ಅದಕ್ಕೆ ದೇವತೆ ಸಾಕ್ಷಾತ್ ಶ್ರೀಹರಿಯೇ. ಹೀಗೆ ಆ ಅಸ್ತ್ರವು ಭೀಮನ ಸ್ವರೂಪವೇ ಆದ್ದರಿಂದ ಅದು ಅಗ್ನಿಯು ಅಗ್ನಿಯನ್ನು ಹೇಗೋ ಹಾಗೆ ಸುಡಲಿಲ್ಲ. ಆ ಸಮಯದಲ್ಲಿ ಭೀಮನು ಆ ಅಸ್ತ್ರಕ್ಕೂ, ಅಸ್ತ್ರದೇವತೆಯಾದ ಶ್ರೀಹರಿಗೂ ಮನಸ್ಸಿನಲ್ಲಿಯೇ ಗೌರವವನ್ನು ತೋರಿಸಿದ. ಕ್ಷತ್ರಧರ್ಮವನ್ನು ಪಾಲಿಸುವ ಉದ್ದೇಶದಿಂದ ಹೊರಗೆ ಕಾಣುವಂತೆ ನಮಸ್ಕರಿಸಲಿಲ್ಲ. ಹೀಗೆ ಕೃಷ್ಣನು ತನ್ನ ಅಸ್ತ್ರ ಹಾಗೂ ಭೀಮಸೇನ ಇಬ್ಬರೂ ಅಮೋಘ ಎಂಬುದನ್ನು ತೋರಿಸಿ, ಮತ್ತೆ ಅರ್ಜುನನ ರಥವನ್ನು ಏರಿ, ಕುದುರೆಗಳನ್ನು ಓಡಿಸಿದ.

## ಅಶ್ವತ್ಥಾಮರಿಂದ ಆಗ್ನೇಯಾಸ್ತ್ರಪ್ರಯೋಗ

ನಾರಾಯಣಾಸ್ತ್ರವನ್ನು ಮತ್ತೊಮ್ಮೆ ಪ್ರಯೋಗಿಸಲು ದುರ್ಯೋಧನನು ಅಶ್ವತ್ಥಾಮರನ್ನು ಕೇಳಿಕೊಂಡ. ಆದರೆ 'ಅದು ಸಾಧ್ಯವಿಲ್ಲ' ಎಂದು ಹೇಳಿ ಅವರು ಧೃಷ್ಟದ್ಯುಮ್ನನ ಮೇಲೆ ನುಗ್ಗಿದರು. ಆ ರೀತಿ ಬರುತ್ತಿದ್ದ ಅಶ್ವತ್ಥಾಮರನ್ನು ಎದುರಿಸಲು ಧೃಷ್ಟದ್ಯುಮ್ನನ ಹಿಂದೆ

ಸಾತ್ಯಕಿಯೂ ಹೊರಟ. ಆಗ ನಡೆದ ಯುದ್ಧದಲ್ಲಿ ಅಶ್ವತ್ಥಾಮರ ಎರಡು ಬಾಣಗಳ ಹೊಡೆತಕ್ಕೆ ಆ ಇಬ್ಬರೂ ಮೂರ್ಛಿತರಾಗಿ ಬಿದ್ದರು. ಆ ವೇಳೆಗೆ ಅಲ್ಲಿಗೆ ಬಂದ ಭೀಮನ ಕುದುರೆಗಳನ್ನು ಅಶ್ವತ್ಥಾಮರು ಓಡಿಸಿಬಿಟ್ಟರು. ಭೀಮನು ಅವುಗಳನ್ನು ನಿಯಂತ್ರಿಸುತ್ತಿದ್ದಂತೆಯೇ ಅರ್ಜುನನು ಅಶ್ವತ್ಥಾಮರನ್ನು ಕಂಡು, ಅವರೊಂದಿಗೆ ಯುದ್ಧಕ್ಕೆ ತೊಡಗಿದ. ಅರ್ಜುನನನ್ನು ಕಟುವಾಗಿ ನಿಂದಿಸುತ್ತಾ ಅವರು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದರು. ಅದು ಪಾಂಡವರ ಸೇನೆಯನ್ನೆಲ್ಲ ವ್ಯಾಪಿಸಿಬಿಟ್ಟಿತು ; ಆಗ ಒಂದು ಅಕ್ಷೋಹಿಣೀ ಪಾಂಡವಸೇನೆಯು ಭಸ್ಮವಾಯಿತು. ಅರ್ಜುನನನ್ನು ಅವನ ರಥದ ಸಮೇತ ಕೃಷ್ಣ ಕಾಪಾಡಿದ[೧]. ಅರ್ಜುನನು ಇನ್ನೂ ಬದುಕಿರುವುದನ್ನು ಕಂಡು ಅಶ್ವತ್ಥಾಮರು ಬಿಲ್ಲನ್ನು ಕೆಳಗೆ ಎಸೆದು, ಅಲ್ಲಿಂದ ಹೊರಟುಬಿಟ್ಟರು. ಅವನ ಬಳಿಗೆ ಬಂದು ವೇದವ್ಯಾಸರು 'ನೀನೀಗ ಹೋಗಬೇಡ ; ಸಾಕ್ಷಾತ್ ಪ್ರಳಯರುದ್ರನಾಗಿರುವ ನೀನು ದೇವತಾಕಾರ್ಯಕ್ಕಾಗಿ ಮಹಾಪ್ರತಾಪಿಯಾಗಿ ಭೂಮಿಯಲ್ಲಿ ಜನಿಸಿರುವಿ. ನೀನು ಮಾಡಬೇಕಾದ ಕಾರ್ಯ ಇನ್ನೂ ಬಹಳ ಉಂಟು ; ಅದು ನಿನಗೂ ತಿಳಿದಿದೆ. ಅದನ್ನು ಪೂರೈಸು' ಎಂದು ಉಪದೇಶಿಸಿದರು. 'ಬೆಳಿಗ್ಗೆ ಹಾಗೆ ಮಾಡುವೆ' ಎಂದು ನುಡಿದು ಶ್ರೀವೇದವ್ಯಾಸರಿಗೆ ನಮಸ್ಕರಿಸಿ ಅಶ್ವತ್ಥಾಮರು ಅಲ್ಲಿಂದ ಹೊರಟರು. ಅವರನ್ನು ಹಿಂಬಾಲಿಸಿಯೇ ಭಯ ಹಾಗೂ ದುಃಖಗಳಿಂದ ಕೂಡಿದ ದುರ್ಯೋಧನಾದಿಗಳು ಶಿಬಿರಗಳನ್ನು ಹೊಕ್ಕರು. ಪಾಂಡವರೆಲ್ಲರೂ ಸಂತೋಷದಿಂದ ಕೃಷ್ಣನನ್ನು ಸ್ತುತಿಸುತ್ತ ಶಿಬಿರಗಳನ್ನು ಸೇರಿ, ಅಲ್ಲೂ ರಾತ್ರಿಯಲ್ಲಿ ಹರಿಯ ಅಮಿತಗುಣಗಳನ್ನು ಕೊಂಡಾಡುತ್ತ ನಲಿದರು.

★★★★★

೧. ಅತ್ಯಂತ ಅಪಾಯಕರವಾದ ಆಗ್ನೇಯಾಸ್ತ್ರದಿಂದ ಅರ್ಜುನನನ್ನು ಶ್ರೀಕೃಷ್ಣ ರಕ್ಷಿಸಿದ ಈ ಪ್ರಸಂಗ ಅಪೂರ್ವವಾದುದು. ಶ್ರೀಕೃಷ್ಣನು ಯುದ್ಧರಂಗದಲ್ಲಿ ಅರ್ಜುನನನ್ನು ಬಗೆಬಗೆಯ ಅಪಾಯಗಳಿಂದ ಕಾಪಾಡಿದ ಪ್ರಸಂಗಗಳಲ್ಲಿ ಇದು ಒಂದು ಮುಖ್ಯವಾದ ಪ್ರಸಂಗವಾಗಿದೆ. ಇಂತಹ ವಿಶೇಷರಕ್ಷಣೆಯ ಪ್ರಸಂಗ ಭೀಮನ ಬಗ್ಗೆ ಒದಗಲಿಲ್ಲ ಎಂಬಲ್ಲಿ ಅವನ ಹಿರಿಮೆ ವ್ಯಕ್ತವಾಗುವುದು.

# ಕರ್ಣ ಪರ್ವ

## ಹದಿನಾರನೆಯ ದಿನದ ಯುದ್ಧ - ಸೇನಾಪತಿಯಾಗಿ ಕರ್ಣ

ಅಶ್ವತ್ಥಾಮರ ಸಮ್ಮತಿಯನ್ನು ಪಡೆದು ದುರ್ಯೋಧನನು ಕರ್ಣನನ್ನು ಸೇನಾಪತಿಯನ್ನಾಗಿ ಮಾಡಿದ. ಕರ್ಣನು ಸನ್ನದ್ಧನಾಗಿ ಯುದ್ಧಕ್ಕೆ ಹೊರಟ. ಯುದ್ಧ ಆರಂಭವಾಯಿತು. ಉದಯಾದ್ರಿಯಂತೆ ಕಾಣುತ್ತಿದ್ದ ಆನೆಯ ಮೇಲೆ ಭೀಮನು ಅತಿನಿರ್ಮಲನಾದ ಉದಿಸುವ ಸೂರ್ಯನಂತೆ ಕಂಗೊಳಿಸಿದ. ರಾಜರನ್ನೆಲ್ಲ ಧ್ವಂಸಮಾಡುತ್ತಿದ್ದ ಭೀಮನ ಮೇಲೆ ನುಗ್ಗಿದ ಕ್ಷೇಮಧೂರ್ತಿಯು ಭೀಮನ ಆನೆಯನ್ನು ಹೊಡೆದು ಹಾಕಿದ. ಬಲದಿಂದ ಕೊಬ್ಬಿದ್ದ ಅವನನ್ನು ಭೀಮ ಬೇಗನೇ ಮೃತ್ಯುವಿನ ಮನೆಗೆ ಅಟ್ಟಿದ. ಅವನನ್ನು ಸಂಹರಿಸಿದ ಭೀಮನು ಪ್ರತಿಪಕ್ಷದ ಯುವಕರ ತಲೆಗಳನ್ನು ಚೆಂಡಾಡುತ್ತಾ , ಸಿಂಹವು ನರಿ-ನಾಯಿಗಳ ಗುಂಪನ್ನು ಕಂಗೆಡಿಸುವಂತೆ, ಆ ಕೌರವರ ಸೇನೆಯನ್ನು ಉಲ್ಲೋಲಕಲ್ಲೋಲಗೊಳಿಸಿದ.

## ಭೀಮ - ಅಶ್ವತ್ಥಾಮರ ಅದ್ಭುತ ಯುದ್ಧ

ಭೀಮನಿಂದ ಕಂಗೆಟ್ಟಿದ್ದ ತಮ್ಮ ಸೈನ್ಯವನ್ನು ನೋಡಿ, ಅಶ್ವತ್ಥಾಮರು ರಥವನ್ನೇರಿ ಭೀಮನ ಮೇಲೆ ನುಗ್ಗಿದರು. ಆಗ ಅವರಿಬ್ಬರಿಗೂ ಹಿಂದೆಂದೂ ಯಾರಲ್ಲಿಯೂ ನಡೆಯದಿದ್ದಂತಹ ಅತಿ ಘೋರವೂ, [೧]ಅದ್ಭುತವೂ ಆದ ಯುದ್ಧವು ನಡೆಯಿತು. ಅದನ್ನು ನೋಡುತ್ತಿದ್ದಂತೆಯೇ ದೇವತೆಗಳೂ, ಗಂಧರ್ವರೂ, ವಿಪ್ರರೂ, 'ಇಂತಹ ಅದ್ಭುತವಾದ ಯುದ್ಧವನ್ನು ನಾವೆಂದೂ ಕಂಡಿರಲಿಲ್ಲ; ಇಂತಹುದು ಮತ್ತೆ ನಡೆಯಲಾರದು ಸಹ. ಇತರ ಎಲ್ಲಾ ಯುದ್ಧಗಳೂ ಇದರ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸವು. ಇಂತಹ ಜ್ಞಾನ ಹಾಗೂ ಬಲಸಂಪತ್ತಿಗಳು ವಾಯುವನ್ನೂ, ಅನಂತರ ಶಿವನನ್ನು ಬಿಟ್ಟು ಬೇರಾವ ದೇವತೆಗಳಲ್ಲಿ ತಾನೇ ಕಾಣಲು ಸಾಧ್ಯ? ಇವರಿಬ್ಬರಲ್ಲಿ ಆ ಎರಡು ಬಲಗಳ ಮೇಳನದಿಂದಾಗಿ ಇದು ನಿಜಕ್ಕೂ ಅದ್ಭುತ' ಎಂದು ಉದ್ಗಾರ ಮಾಡಿದರು.

ದೇವತೆಗಳೆಲ್ಲ ಹೀಗೆನ್ನುತ್ತಿದ್ದಂತೆಯೇ ಆ ಇಬ್ಬರೂ ಮಹಾಪರಾಕ್ರಮಿಗಳಾದ ಪುರುಷ-ಶ್ರೇಷ್ಠರೂ, ಎಲ್ಲ ದಿಕ್ಕುಗಳನ್ನೂ, ಆಕಾಶವನ್ನೂ ತಮ್ಮ ಬಾಣಗಳಿಂದ ಮುಚ್ಚಿಹಾಕಿದರು. ಅದನ್ನು

---

೧. ರಾಮಾಯಣದಲ್ಲಿನ ರಾಮ-ರಾವಣರ ಯುದ್ಧವು ಅನುಪಮ (ರಾಮರಾವಣಯೋರ್ಯುದ್ಧಂ ರಾಮ-ರಾವಣಯೋರಿವ) ಎಂಬ ಮಾತು ಸುಪ್ರಸಿದ್ಧ. ಆದರೆ, ಶ್ರೀರಾಮ ಸರ್ವತ್ರವ್ಯಾಪ್ತನಾದ ಸರ್ವೇಶ್ವರನಾದ ಶ್ರೀಹರಿ ; ರಾವಣ ಶ್ರೀರಾಮನಿಗಿಂತ ಅನಂತಪಟ್ಟು ಕಡಿಮೆ ಎನ್ನಿಸಿದ ಅಣುಮಾತ್ರಸ್ವರೂಪದ ಜೀವ. ಅದರಲ್ಲೂ, ಅವನಲ್ಲಿ ಜಯನಂತಹ ವಿಷ್ಣುದ್ವಾರಪಾಲಕನ ಆವೇಶ ; ಎಂದರೆ ಅವರಿಬ್ಬರ ಮಧ್ಯೆ ನಡೆದ ಯುದ್ಧವು ಬಿಂದು-ಸಾಗರಗಳ, ಗಗನ-ಅಣುಗಳ ಹೋರಾಟದಂತೆ ನಗಣ್ಯ. ಆದರೆ, ಭೀಮ-ಅಶ್ವತ್ಥಾಮರು ಹಾಗಲ್ಲ; ಭೀಮ ಜೀವೋತ್ತಮನಾದ ವಾಯುದೇವನಾದರೆ, ಅಶ್ವತ್ಥಾಮ ಮನೋನಿಯಾಮಕನಾದ ಶಿವ. ಅವರಿಬ್ಬರಲ್ಲಿನ ಅಂತರ ಇನ್ನೂರುಗುಣಗಳು ಮಾತ್ರ. ಅದರಿಂದಾಗಿ ಇವರ ಯುದ್ಧದ ರೋಚಕತೆ ರಾಮ-ರಾವಣರ ಯುದ್ಧಕ್ಕಿಂತ ಹೆಚ್ಚಿನದಾಗಿತ್ತು ಎಂದು ತಿಳಿಯಬೇಕು.

ಕಾಣುತ್ತಿದ್ದ ಮಹಾರಥರೆಲ್ಲ ಭಯಭೀತರಾದರು. ಭೀಮನ ಬಾಣಗಳ ಪೆಟ್ಟಿಗೆ ಅಶ್ವತ್ಥಾಮರ ಬಿಲ್ಲು ತುಂಡಾಯಿತು. ಅಶ್ವತ್ಥಾಮರು ಮಹಾಸ್ತ್ರಗಳನ್ನು ಪ್ರಯೋಗಿಸತೊಡಗಿದರು. ಸ್ವಲ್ಪವೂ ಚಕಿತನಾಗದೆ ಭೀಮನು ಅವುಗಳನ್ನೆಲ್ಲ ಪ್ರತ್ಯಸ್ತ್ರಗಳಿಂದ ನಿವಾರಿಸಿದ. ಮತ್ತೆ ಅವರಿಬ್ಬರಲ್ಲಿ [೧]ಬಾಣಗಳ ಯುದ್ಧವೇ ಮುಂದುವರೆಯಿತು. ಅದು ತುಂಬಾ ಅದ್ಭುತವೂ, ರೋಮಾಂಚಕವೂ ಆಗಿತ್ತು. ಕೊನೆಗೆ ಭೀಮನ ಬಾಣಗಳ ಪೆಟ್ಟಿಗೆ ಬಹಳವಾಗಿ ನೊಂದ ಅಶ್ವತ್ಥಾಮರು ಗಾಢ ಮೂರ್ಛೆ ಹೊಂದಿ ರಥದಲ್ಲಿ ಬಿದ್ದರು. ಅವರ ಸಾರಥಿಯು ರಥವನ್ನು ಹಿಂದಕ್ಕೆ ಹೊಡೆದು-ಕೊಂಡು ಹೊರಟ. ಸ್ವಲ್ಪಮಾತ್ರವೇ [೨]ಬಳಲಿದ ದೇಹದ ಭೀಮನು ಕ್ಷಣಾರ್ಧದಲ್ಲಿಯೇ ಯುದ್ಧದ ಆಯಾಸವನ್ನು ಪರಿಹರಿಸಿಕೊಂಡಿದ್ದು , ಧನುರ್ಧಾರಿಯಾಗಿ ಸಿಂಹನಾದದಿಂದ ದಿಕ್ಕುಗಳನ್ನು ಧ್ವನಿಗೈಸುತ್ತಾ, ಗಜಗಳ ಹಿಂಡನ್ನು ಎದುರಿಸಲು ತೆರಳಿದ.

ಹೀಗೆ ಭೀಮಸೇನನು ಗಜಗಳನ್ನು ನಾಶ ಮಾಡತೊಡಗಲು, ಅತ್ತ ದುರ್ಯೋಧನನು ಧರ್ಮರಾಜನನ್ನು ಎದುರಿಸಿದ. ಆ ಇಬ್ಬರು ರಾಜರಿಗೂ ಯುದ್ಧ ನಡೆಯಿತು. ಬೇಗನೇ ಯುಧಿಷ್ಠಿರನು ದುರ್ಯೋಧನನ ರಥವನ್ನು ಮುರಿಯಲು, ದುರ್ಯೋಧನನು ದೊಡ್ಡ ಗದೆಯನ್ನು ಕೈಗೆತ್ತಿಕೊಂಡ. ಕೂಡಲೇ ಭೀಮನು ಗದಾಧಾರಿಯಾಗಿ ದುರ್ಯೋಧನನತ್ತ ನುಗ್ಗಲು, ಅದನ್ನು ಕಂಡ ಕೃಪಾಚಾರ್ಯರು ದುರ್ಯೋಧನನನ್ನು ತನ್ನ ರಥದಲ್ಲಿ ಹತ್ತಿಸಿಕೊಂಡು ಅಲ್ಲಿಂದ ಪಲಾಯನ ಮಾಡಿದರು.

ಕರ್ಣನು ನಕುಲನನ್ನು ವಿರಥನನ್ನಾಗಿ ಮಾಡಿದ. ಓಡತೊಡಗಿದ್ದ ನಕುಲನನ್ನು ಬೆನ್ನಟ್ಟಿದ ಕರ್ಣ ಅವನ ಕುತ್ತಿಗೆಗೆ ತನ್ನ ಬಿಲ್ಲಿನಿಂದ ಸುತ್ತಿ ತಿವಿದು ಅವನನ್ನು ಕಟುವಾಗಿ ನಿಂದಿಸಿದ. ಆದರೆ ಕುಂತಿಗೆ ನೀಡಿದ್ದ ವಚನದಿಂದಾಗಿ ಅವನನ್ನು ಕೊಲ್ಲದೆ ಬಿಟ್ಟು ಬೇರೆಡೆಗೆ ಸಾಗಿದ.

---

೧. ಗದುಗಿನಭಾರತದಲ್ಲಿ ಬಿಟ್ಟು ಹೋಗಿರುವ ಈ ವಿವರವು ಪಂಪಭಾರತದಲ್ಲಿ ಉಲ್ಲೇಖಗೊಂಡಿದೆ :
ಗದೆಯೊಳೇ ಜಟ್ಟಿಗಂ ಪವನನಂದನನೆಂಬರಾ ಮಾತು ಮಾತದ-
ಲ್ಲದು ಸುರಸಿಂಧುಪುತ್ರ ಗುರು ಕರ್ಣ ಕೃಪ ಪ್ರಮುಖರ್ಕಳಿಂತು ನೇ-
ರಿದರೇ ಶರಾಸನಾಗಮದೊಳೋಂಬಿನಮಂಬರದೊಳ್ ಸುರರ್ಕಳೇಂ
ಪುದಿತನೋ ಬಾಣ ಜಾಲದೇ ಗುರು ಪ್ರಿಯನಂದನನಂ ಮರುತ್ಸುತಮ್ ॥ —ಪಂಪಭಾರತ (೧೦/೬೭)

೨. ಭೀಮನ ದೇಹವು ವಜ್ರಸದೃಶವಾದ ಅಚ್ಛೇದ್ಯ ಅಭೇದ್ಯ ದೇಹ ಎಂಬುದು ಮಗುವಾಗಿದ್ದಾಗಲೇ ಶತಶೃಂಗಪರ್ವತವು ನೂರಾರುಭಾಗವಾಗಿ ಸೀಳಿದ ಪ್ರಸಂಗದಲ್ಲಿ ಸ್ಫುಟಗೊಂಡಿದೆ. ಆದರೆ, ಅಶ್ವತ್ಥಾಮರು ಪ್ರಯೋಗಿಸಿದ ಶಸ್ತ್ರಾಸ್ತ್ರಗಳು ಮೂಲತಃ ಸಾಕ್ಷಾತ್ ಭಗವಂತನೇ ಆದ ಶ್ರೀಪರಶುರಾಮದೇವರಿಂದ ದ್ರೋಣರ ಮೂಲಕ ಪಡೆದುಕೊಂಡಿದ್ದ ದಿವ್ಯಾಸ್ತ್ರಗಳು. ಅದರ ಪ್ರಭಾವದಿಂದಾಗಿ ಭೀಮಸೇನನ ದೇಹಕ್ಕೆ ಸ್ವಲ್ಪ ಪೆಟ್ಟಾಯಿತು. ಇದು ಪರಶುರಾಮರ ಅಸ್ತ್ರಗಳಿಗೆ ಸಂದ ಗೌರವವೇ ಹೊರತು ಭೀಮನ ದೇಹದ ದೌರ್ಬಲ್ಯಕ್ಕೆ ಸೂಚಕವಲ್ಲ ಎಂದು ತಿಳಿಯಬೇಕು. ಇಲ್ಲೂ ಸಹ ಅದು ಪರಿಣಾಮಬೀರಿದ್ದು ದೇಹದ ಮೇಲೆಯೇ ಹೊರತು ಭೀಮನ ಒಟ್ಟು ವ್ಯಕ್ತಿತ್ವಕ್ಕೆ ಸರ್ವಥಾ ಅಲ್ಲ ಎಂಬುದು ಇಲ್ಲಿಯ 'ವಿಹ್ವಲತನುಃ ಸ ತು ಕಿಂಚಿದೇವ'(೨೭/೧೧) ಎಂಬ ಪದಗಳಿಂದ ಸೂಚಿತ.

ವಿಂದ ಹಾಗೂ ಅನುವಿಂದ ಎಂಬ ಕೇಕಯರನ್ನು ಮಹಾಪರಾಕ್ರಮಿಯಾದ ಸಾತ್ಯಕಿಯು ಯುದ್ಧದಲ್ಲಿ ಎದುರಿಸಿದ. ಅವರಲ್ಲಿ ಉತ್ತಮಬಾಣಗಳ ಪ್ರವಾಹದಿಂದ ಕೂಡಿದ ಯುದ್ಧ ನಡೆದು ಕೊನೆಗೆ ಸಾತ್ಯಕಿಯು ಅನುವಿಂದನ ಶಿರಸ್ಸನ್ನು ಕತ್ತರಿಸಿದ. ಬಳಿಕ ವಿಂದನೊಂದಿಗೆ ಸಾತ್ಯಕಿಯ ಯುದ್ಧ ಮುಂದುವರಿದು, ಅವರಲ್ಲಿ ಇಬ್ಬರೂ ತಮ್ಮಿಬ್ಬರ ರಥಗಳನ್ನು ಪರಸ್ಪರ ನಾಶಮಾಡಿಕೊಂಡರು. ಅನಂತರ ಉತ್ತಮ ಅಸ್ತ್ರವಿದ್ಯಾಪರಿಣತರಾದ ಇಬ್ಬರೂ ಖಡ್ಗ ಗುರಾಣಿ-ಗಳನ್ನು ತೆಗೆದುಕೊಂಡು ಆಕಾಶದಲ್ಲಿ ಹದ್ದುಗಳು ಕಾದುವಂತೆ ಕಾದಿದರು. ಅದರಲ್ಲಿ ಇಬ್ಬರ ಕವಚಗಳೂ ತುಂಡಾದವು. ಅನಂತರ ಸಾತ್ಯಕಿಯು ಕುಂಡಲಸಮೇತವಾದ ವಿಂದನ ಶಿರಸ್ಸನ್ನು ಮುಂಗೈಯಿಂದಲೇ ಹೊಡೆದು ಕತ್ತರಿಸಿ ಬೀಳಿಸಿದ. ಸಾತ್ಯಕಿಯ ಈ ಸಾಹಸ ಅವನ ಬಂಧು-ಗಳನ್ನು ಸಂತೋಷಪಡಿಸಿತು.

ಕೃಪನು ತನ್ನತ್ತ ಬರುತ್ತಿದ್ದುದನ್ನು ಕಂಡು, ಅವನು ತನ್ನನ್ನು ತನ್ನ ತಪಸ್ಸಿನಿಂದ ಹಿಂಸಿಸಬಹುದು ಎಂಬ ಅಂಜಿಕೆಯಿಂದ ಧೃಷ್ಟದ್ಯುಮ್ನನು ಭೀಮನನ್ನು ಶರಣುಹೊಕ್ಕ. ಎಲ್ಲಡೆಗಳಲ್ಲೂ ತಮ್ಮ ಸೇನೆಯನ್ನು ನಾಶಮಾಡುತ್ತಿದ್ದ ಕರ್ಣನನ್ನು ಅರ್ಜುನನು ಎದುರಿಸಿ, ಕ್ಷಣಮಾತ್ರದಲ್ಲಿ ಯುದ್ಧದಲ್ಲಿ ವಿರಥನನ್ನಾಗಿ ಮಾಡಿದ. ಕರ್ಣನು ತನ್ನ ಸೇನೆಯನ್ನು ಹಿಂತೆಗೆದುಕೊಂಡ.

## ಕರ್ಣನಿಗೆ ಸಾರಥಿಯಾದ ಶಲ್ಯ

ಯುದ್ಧದಲ್ಲಿ ಅರ್ಜುನನಿಂದ ಸೋತು ಬಂದಿದ್ದ ಕರ್ಣನು, ದುರ್ಯೋಧನನ ತೋಳನ್ನು ಹಿಡಿದುಕೊಂಡು, "ನಾನು ಅನ್ಯಮನಸ್ಕನಾಗಿದ್ದಾಗ ಅರ್ಜುನ ನನ್ನನ್ನು ಗೆದ್ದ. ನನಗೆ ಪರಶು-ರಾಮರಿಂದ ಕೊಡಲ್ಪಟ್ಟಿರುವ ದಿವ್ಯವಾದ ರಥ ಹಾಗೂ [೧]ಧನುಸ್ಸುಗಳು ಇರುವುದೇನೋ ನಿಜ ; ಆದರೆ ಕೃಷ್ಣನಂತಹ ಸಾರಥಿ ಮಾತ್ರ ಇಲ್ಲ. ಶಲ್ಯನೇನಾದರೂ ನನ್ನ ಸಾರಥ್ಯವನ್ನು ವಹಿಸುವುದಾದಲ್ಲಿ ನಾನು ಖಂಡಿತವಾಗಿಯೂ ಶತ್ರುವಾದ ಅರ್ಜುನನನ್ನು ಕೊಲ್ಲುವೆನು" ಎಂದು ಹೇಳಿದ[೨]. ಕೂಡಲೇ ದುರ್ಯೋಧನನು ಶಲ್ಯನ ಬಳಿಗೆ ತೆರಳಿ ಕರ್ಣನ ಸಾರಥ್ಯ ವಹಿಸಲು ಅವನನ್ನು ಕೇಳಿಕೊಂಡ. ಶಲ್ಯನು[೩] ಕೋಪಗೊಂಡವನಂತೆ ವರ್ತಿಸಿದ. 'ರಥಿಗಿಂತಲೂ ಸಾರಥಿಯೇ ಉತ್ತಮ'

---

೧. ಕರ್ಣನಿಗೂ ಸಹ ಅರ್ಜುನನಿಗಿದ್ದಂತೆ ದಿವ್ಯವಾದ ರಥ ಹಾಗೂ ಧನುಸ್ಸುಗಳು ಇದ್ದವು ಎಂಬ ಈ ಸೂಕ್ಷ್ಮವಿವರ ಇತರ ಭಾಷೆಗಳಲ್ಲಿ ಬಂದಿರುವ ಹೆಚ್ಚಿನ ಮಹಾಭಾರತವನ್ನು ಕುರಿತ ಕೃತಿಗಳಲ್ಲಿ ಕಂಡುಬರುವುದಿಲ್ಲ. ಆದರೆ ಮೂಲಮಹಾಭಾರತದಲ್ಲಿ ಈ ವಿವರ ಸ್ಪಷ್ಟವಾಗಿ ಬಂದಿರುವುದು ಗಮನಾರ್ಹ. ಇದರಿಂದಾಗಿಯೇ ಕರ್ಣಾರ್ಜುನರ ಯುದ್ಧಕ್ಕೆ ವಿಶೇಷಮಹತ್ತ್ವ ಒದಗುವಂತಾಯಿತು ಎಂಬುದು ಗಮನಿಸಬೇಕಾದ ಅಂಶ.

೨. ಕರ್ಣ ಅರ್ಜುನನಿಗಿದ್ದಂತೆ ತನಗೆ ಕೃಷ್ಣನಂತಹ ಸಾರಥಿ ಇಲ್ಲ ಎಂಬುದನ್ನು ಮಾತ್ರ ಗಮನಿಸಿದ್ದ. ಆದರೆ ಅರ್ಜುನನಿಗಿದ್ದಂತಹ ಹನುಮದ್ಧ್ವಜವೂ ತನಗೆ ಇಲ್ಲ ಎಂಬುದನ್ನು ಗಮನಿಸಲಿಲ್ಲ ಎಂಬಲ್ಲಿ ಅವನ ಚಿಂತನೆಯ ಲೋಪ ಎದ್ದು ಕಾಣುವುದು. ಒಂದು ರೀತಿಯಲ್ಲಿ ಇದು ಹರಿಸರ್ವೋತ್ತಮತ್ವವನ್ನು ಗಮನಿಸಿಯೂ ವಾಯುಜೀವೋತ್ತಮತ್ವವನ್ನು ಗಮನಿಸದ ಮತಗಳನ್ನು ಹೋಲುವುದು.

೩. ಶಲ್ಯನಲ್ಲಿ ಕೃಷ್ಣನ ಸಾಮ್ಯವನ್ನು ಕಾಣಬಯಸಿದ ಕರ್ಣನ ಚಿಂತನೆಯೂ ಸಹ ಮಹಾಭಾರತದ ದರ್ಶನಕ್ಕೆ ಅನುಗುಣವಾದುದಲ್ಲ. ಭಗವದ್ಗೀತೆ ಹಾಗೂ ಒಟ್ಟು ಮಹಾಭಾರತದ ಸಂದೇಶವೆಂದರೆ ಶ್ರೀಕೃಷ್ಣನ

ಎಂದು ಪ್ರತಿಪಾದಿಸುತ್ತಾ ದುರ್ಯೋಧನನು ಅವನನ್ನು ಸಮಾಧಾನಪಡಿಸಿದ - "ಬುದ್ಧಿ ಬಲ, ಜ್ಞಾನ, ಧೈರ್ಯ ಮೊದಲಾದ ಗುಣಗಳಲ್ಲಿ ರಥಿಗಿಂತ ಹಿರಿಯನಾದವನೇ ಸಾರಥಿಯಾಗಲು ಸಾಧ್ಯ; ಅರ್ಜುನನಿಗೆ ಕೃಷ್ಣನಿಲ್ಲವೇ ಹಾಗೇ. ಹಿಂದೆ ತ್ರಿಪುರರಹನನಕಾಲದಲ್ಲಿ ಬ್ರಹ್ಮನೂ ಶಿವನಿಗೆ ಸಾರಥಿಯಾಗಿರಲಿಲ್ಲವೇನು?[೧]" ದುರ್ಯೋಧನನ ಇಂತಹ ಮಾತುಗಳಿಂದ ಶಾಂತನಾದವನಂತೆ ವರ್ತಿಸಿದ ಶಲ್ಯನು, ಕರ್ಣನಿಗೆ ಸಾರಥಿಯಾಗಲು ಸಮ್ಮತಿಸಿದ.

## ಹದಿನೇಳನೆಯ ದಿನದ ಯುದ್ಧ

ಶಲ್ಯನನ್ನು ಸಾರಥಿಯನ್ನಾಗಿಸಿಕೊಂಡ ಕರ್ಣನು ಸೇನೆಯನ್ನು ಸಜ್ಜುಗೊಳಿಸಿ ಯುದ್ಧಕ್ಕೆ ಹೊರಟ. ಹಾಗೆ ಹೋಗುವಾಗ ದರ್ಪದಿಂದ 'ಅರ್ಜುನನನ್ನು ನನಗೆ ತೋರಿಸಿಕೊಡುವವನಿಗೆ ಬಹುಮಾನವಾಗಿ ಅಪಾರಧನವನ್ನು ಸಂತೋಷದಿಂದ ನೀಡುವೆ' ಎಂದು ಬಹಳವಾಗಿ ಕೊಚ್ಚಿಕೊಳ್ಳತೊಡಗಿದ. "ನಿವಾತಕವಚರನ್ನು ಸಂಹರಿಸಿರುವ, ಖಾಂಡವವನ್ನು ಸುಟ್ಟುಹಾಕಿರುವ ಅರ್ಜುನನನ್ನು ಯಾವನು ತಾನೇ ಜಯಿಸಿಯಾನು? ಗೋಗ್ರಹಣಕಾಲದಲ್ಲಿ ನೀವೆಲ್ಲ ಅವನ ಪರಾಕ್ರಮವನ್ನು ಕಣ್ಣಾರೆ ಕಂಡಿರುವಿರಿ. ಕಾಗೆ-ನರಿಗಳಂತಹ ನೀನು ಹಂಸ-ಸಿಂಹಗಳಂತಹ ಅವನನ್ನು ಕುರಿತು ಯುದ್ಧಮಾಡಲು ಖಂಡಿತವಾಗಿಯೂ ತೆರಳದಿರು ; ಹಾಗೆ ಹೋಗಿ ಅವನಿಂದ ಹತನಾಗಿ ಯಮನ ಪಾಲಾಗದಿರು" ಎಂದ ಶಲ್ಯ ಅವನನ್ನು ಅಪಹಾಸ್ಯ ಮಾಡಿದ. ಅದಕ್ಕೆ ಪ್ರತಿಯಾಗಿ ಕರ್ಣನು ಮದ್ರದೇಶದ ಜನರನ್ನು ಬಹಳವಾಗಿ ಹಳಿದ. ಶಲ್ಯನು ಅದಕ್ಕೆ 'ಎಲ್ಲ ದೇಶಗಳಲ್ಲೂ ನೀಚ, ಮಧ್ಯಮ ಮತ್ತು ಉತ್ತಮ ಜನರು ಇದ್ದೇ ಇರುವರು' ಎಂದು ಉತ್ತರಿಸುತ್ತ, ಪಾರ್ಥನ ಹಿತವನ್ನು ಬಯಸಿ, ಕರ್ಣನ ಸಾರಥ್ಯವನ್ನು ನಿರ್ವಹಿಸಿದ[೨].

---

ಅದ್ವಿತೀಯವಾದ ಹಿರಿಮೆ. ಶಲ್ಯನಿರಲಿ, ಮಹಾಭಾರತಾದಿ ಮೂಲಗ್ರಂಥಗಳು ದಾಖಲಿಸುವ ಯಾವುದೇ ವ್ಯಕ್ತಿಯೂ ಸಹ ಶ್ರೀಕೃಷ್ಣನ ಹಿರಿಮೆಯ ಒಂದಂಶಕ್ಕೂ ಸಹ ಸಾಟಿ ಎನ್ನಿಸಲು ಸಾಧ್ಯವಿಲ್ಲ. ಹೀಗೆ ಕರ್ಣ ಅನೇಕ ಬಗೆಯಲ್ಲಿ ಅನುಚಿತವಾದ ಚಿಂತನೆಗೆ ತೊಡಗಿರುವುದು ಗಮನಿಸಬೇಕಾದ ಅಂಶ. ಇದರಿಂದಾಗಿ ಅವನು ಕೊನೆಗೂ ಸಹ ಯಶಸ್ಸನ್ನು ಗಳಿಸುವಲ್ಲಿ ವಿಫಲನಾದ ಎಂಬುದು ಅರ್ಥವತ್ತಾಗುವುದು.

೧. ಕೃಷ್ಣನ ಅರ್ಜುನನ ಸಾರಥ್ಯ ಹಾಗೂ ಬ್ರಹ್ಮನ ಶಿವನ ಸಾರಥ್ಯ - ಎರಡೂ ಸಹ ಅತ್ಯಂತ ರೋಚಕ ಪ್ರಸಂಗಗಳು. ಈ ಎರಡು ಪ್ರಸಂಗಗಳಲ್ಲೂ ರಥಿಗಿಂತ ಸಾರಥಿ ತುಂಬಾ ಶ್ರೇಷ್ಠರಾದವರು. ಶ್ರೀಕೃಷ್ಣನು ಸರ್ವೋತ್ತಮನಾಗಿ ಅರ್ಜುನನ ಸಾರಥ್ಯ ವಹಿಸಿದ್ದರೆ, ಬ್ರಹ್ಮ ಜೀವೋತ್ತಮನಾಗಿ ಶಿವನ ಸಾರಥ್ಯ ವಹಿಸಿದ್ದ. ಈ ವಿವರ ದುರ್ಯೋಧನನ ಬಾಯಿಂದ ಬಂದಿರುವುದೂ ಸಹ ಅಷ್ಟೇ ರೋಚಕ. ತಾನು ಬಹುವಾಗಿ ದ್ವೇಷಿಸುವ ಭೀಮಸೇನ , ಭಾವೀಬ್ರಹ್ಮನಾದ ಹನುಮಂತನ ಮತ್ತೊಂದು ರೂಪ ಎಂಬ ಪರಿಕಲ್ಪನೆ ಅವನಿಗೆ ಇರಲಿಲ್ಲ ಎಂಬುದಕ್ಕೂ ಇದು ಸೂಚಕ.

೨. ಅರ್ಜುನನಿಗೆ ಸಾರಥಿಯಾಗಿ ಶ್ರೀಕೃಷ್ಣ ಕಾಲಕಾಲಕ್ಕೆ ಅವನಿಗೆ ಉತ್ತೇಜನವನ್ನು ನೀಡಿ ಜಯಕ್ಕೆ ಕಾರಣನಾಗುತ್ತಿದ್ದ; ಅದಕ್ಕೆ ವಿರುದ್ಧವಾಗಿ ತಾನು ಬಯಸಿ ಬಯಸಿ ಆರಿಸಿಕೊಂಡ ಶಲ್ಯ ಕರ್ಣನ ತೇಜೋವಧೆಯನ್ನು ಹೆಜ್ಜೆಹೆಜ್ಜೆಗೂ ಮಾಡುತ್ತಾ ಅವನ ಉತ್ಸಾಹವನ್ನು ಕುಂದಿಸುತ್ತಿದ್ದ. ಇದಕ್ಕೆ ಮುಖ್ಯ ಕಾರಣ ಶ್ರೀಕೃಷ್ಣನ ಹಿರಿಮೆಯನ್ನು ಶಲ್ಯನಲ್ಲಿ ಕಾಣುವ ಅವನ ವ್ಯರ್ಥ ಪ್ರಯತ್ನವೇ ಆಗಿದ್ದುದು ಎಂಬುದು ಸ್ಪಷ್ಟ. ಹೀಗೆ ಇತರರನ್ನು ಭಗವಂತನಿಗೆ ಸಾಟಿ ಎಂದು ಭಾವಿಸುವುದು ಎಂದೂ ಸಹ ಒಳಿತಿಗೆ ಕಾರಣವಾಗದು ಎಂಬುದು ಇಲ್ಲಿಯ ತತ್ತ್ವ.

## ಭೀಮನಿಂದ ದುರ್ಯೋಧನನ ಪರಾಭವ

ಶಲ್ಯನಿಂದ ನಿಯಂತ್ರಿತವಾದ ರಥವನ್ನೇರಿದ ಕರ್ಣ ಪಾಂಡವರ ಸೇನೆಯನ್ನು ಹೊಕ್ಕು ಬಾಣಗಳಿಂದ ಅದನ್ನು ಎಲ್ಲೆಡೆಗಳಿಂದಲೂ ಹೊಡೆಯತೊಡಗಿದ. ಅವನನ್ನು ರಕ್ಷಿಸುತ್ತಾ ದುರ್ಯೋಧನ, ಕೃಪ, ಅಶ್ವತ್ಥಾಮ, ಮೊದಲಾದ ಮಹಾಸ್ತ್ರೋವಿದರು ಹಿಂಬಾಲಿಸಿದರು. ಭೀಮ, ಧೃಷ್ಟದ್ಯುಮ್ನ, ಸಾತ್ಯಕಿ ಮೊದಲಾದವರ ರಕ್ಷಣೆಯಲ್ಲಿ ಪಾಂಡವಸೇನೆಯು ಕರ್ಣನನ್ನು ಬಾಣಗಳ ಮಳೆಯಿಂದ ಮುತ್ತಿತು. ಅದನ್ನು ಕರ್ಣನು ಶ್ರೇಷ್ಠ ಬಾಣಗಳಿಂದ ಸೀಳುತ್ತಾ ಓಡಿಸಿ, ಧರ್ಮರಾಜನನ್ನು ಸಮೀಪಿಸಿ, ಅವನನ್ನು ಕೂಡಲೇ ವಿರಥನನ್ನಾಗಿಸಿ, ತನ್ನ ಧನುಸ್ಸನ್ನು ಅವನ ಕತ್ತಿನಲ್ಲಿ ಸಿಕ್ಕಿಸಿ, ಕ್ರೂರ ಮಾತುಗಳಿಂದ ಗಟ್ಟಿಯಾಗಿ ನಿಂದಿಸಿದ. ಅದನ್ನು ಕಂಡು ಭೀಮನು ಕೂಡಲೇ ದುರ್ಯೋಧನನನ್ನು[೧] ಆಕ್ರಮಿಸಿ ಅವನ ರಥ, ಬಿಲ್ಲುಗಳನ್ನೆಲ್ಲ ಧ್ವಂಸಮಾಡಿ, ಹಿಂಸಿಸತೊಡಗಿದ. ಭೀಮನ ಕೈಯಲ್ಲಿ ಉಳಿಯುವುದೇ ಸಂಶಯವೆನ್ನುವ ಸ್ಥಿತಿಗೆ ಸಿಲುಕಿಕೊಂಡ ಅವನತ್ತ ತೋರಿಸುತ್ತಾ, ಶಲ್ಯನು 'ಈ ಯುದ್ಧ , ಈ ಸೇನೆ ಎಲ್ಲ ಯಾರಿಗಾಗಿಯೋ ಅವನೀಗ ಯಮಪುರಿಗೆ ಹೋಗುವು- ದರಲ್ಲಿರುವನು. ಭೀಮನಿಂದ ಪೀಡಿತನಾಗಿರುವ ಅವನನ್ನು ಬೇಗನೇ ರಕ್ಷಿಸು ; ವ್ಯರ್ಥವಾಗಿ ಯುಧಿಷ್ಠಿರನನ್ನೇಕೆ ಹೀಗೆ ಹಿಂಸಿಸುತ್ತಿರುವಿ?' ಎಂದು ಎಚ್ಚರಿಸಿದ. ಅದನ್ನು ಕೇಳಿ ಕರ್ಣನು ಧರ್ಮರಾಜನನ್ನು ಬಿಟ್ಟು ದುರ್ಯೋಧನನ ರಕ್ಷಣೆಗೆ ತ್ವರೆಯಿಂದ ಧಾವಿಸಿದ.

## ಭೀಮನಿಂದ ಕರ್ಣನ ಪರಾಭವ

ಕರ್ಣನು ಕಣ್ಣಿಗೆ ಬೀಳುತ್ತಲೇ ಅತುಲ ಪರಾಕ್ರಮಿಯಾದ ಭೀಮನು ಕೋಪದಿಂದಲೇ ಅವನನ್ನು ಸುಟ್ಟುಬಿಡುವಂತೆ ನೋಡುತ್ತಾ , ಯುಧಿಷ್ಠಿರನ ರಕ್ಷಣೆಗೆ ಸಾತ್ಯಕಿ, ಧೃಷ್ಟದ್ಯುಮ್ನರನ್ನು ಕಳುಹಿಸಿ, ಕರ್ಣನ ಮೇಲೆ ನುಗ್ಗಿದ. ಪ್ರಳಯಕಾಲದಲ್ಲಿ ಜಗತ್ತೆಲ್ಲವನ್ನು ಸಂಹರಿಸಿದ ಶಿವನನ್ನೇ ನುಂಗುವ ವಿಷ್ಣುವಿನ ನರಸಿಂಹರೂಪವನ್ನು ಕರ್ಣನ ಮೇಲೆ ಧಾವಿಸಿದ ಭೀಮನ ರೂಪವು ಹೋಲುತ್ತಿತ್ತು. ಭೀಮನ ವೇಗಕ್ಕೆ ಭೂಮಿ ಕಂಪಿಸಿತು. ಶತ್ರುವೀರರ ಎಲ್ಲ ಸೇನೆಯು ಭಯದಿಂದ ಓಡತೊಡಗಿತು. ಕರ್ಣನ ಬಾಣಗಳಿಂದ ಹೊಡೆಯಲ್ಪಟ್ಟ ಅವನು ವಜ್ರಸದೃಶವಾದ ಒಂದು ಬಾಣವನ್ನು ಅವನ ಮೇಲೆ ಪ್ರಯೋಗಿಸಿದ. ಅದರ ಪೆಟ್ಟಿಗೆ ಕರ್ಣ ಸತ್ತವನಂತೆ ಕೆಳಗುರುಳಿದ. ಭೀಮನು ಒಂದು ಕಠಾರಿಯನ್ನು ಕೈಗೆತ್ತಿಕೊಂಡು ಕರ್ಣನತ್ತ ದಾಪುಗಾಲಿಡುತ್ತ ನಡೆದ. 'ಪರೋಕ್ಷವಾಗಿಯಾದರೂ ಸರಿಯೇ, ಶ್ರೀಹರಿಯ ನಿಂದೆಯನ್ನು ಮಾಡುವವನನ್ನು

---

೧. ಯುಧಿಷ್ಠಿರನನ್ನು ರಕ್ಷಿಸಲೆಂದು ಭೀಮನು ಮಾಡಿದ ಇಲ್ಲಿಯ ಉಪಾಯ ರೋಚಕವಾದುದು. ಯುಧಿಷ್ಠಿರನನ್ನು ಬಿಡಿಸಲೆಂದು ಕರ್ಣನ ಮೇಲೆ ಆಕ್ರಮಣ ನಡೆಸದೆ, ಪ್ರತಿಯಾಗಿ ಕುರುರಾಜನಾದ ದುರ್ಯೋಧನನ ಮೇಲೆ ಆಕ್ರಮಣ ನಡೆಸುವ ಮೂಲಕ ಕರ್ಣ ತಾನಾಗಿ ಯುಧಿಷ್ಠಿರನನ್ನು ಬಿಡುವಂತೆ ಮಾಡಿದ್ದಲ್ಲದೆ ಅವನು ತನ್ನ ಮೇಲೆ ತಾನಾಗಿಯೇ ಏರಿ ಬರುವಂತೆ ಮಾಡಿದ : 'ಯೋಗಃ ಕರ್ಮಸು ಕೌಶಲಮ್' ಎಂಬುದಕ್ಕೆ ಇದು ಒಂದು ರೀತಿಯ ನಿದರ್ಶನ.

ಹಿಡಿದು ನಾಲಿಗೆಯನ್ನು ಕತ್ತರಿಸಿ ಹಾಕುವೆನೆಂಬುದು' ಭೀಮನ ಮಹಾಪ್ರತಿಜ್ಞೆ. ಆದ್ದರಿಂದ ಈಗ ಕರ್ಣನ ನಾಲಿಗೆಯನ್ನು ಕತ್ತರಿಸಲೆಂದೇ ಅವನತ್ತ ಹೊರಟಿದ್ದ. ಸಮೀಪಕ್ಕೆ ಬಂದ ಅವನನ್ನು ಕುರಿತು ಶಲ್ಯನು, ಕಾರಣಗಳನ್ನು ಮುಂದಿಟ್ಟು – ''ಪವನಪುತ್ರ ! ನೀನೇ ಸ್ವತಃ ಈ ರೀತಿ ಅರ್ಜುನನ ಪ್ರತಿಜ್ಞೆಯನ್ನು ಸುಳ್ಳು ಮಾಡಬೇಡ[1] ; ನೀನೀಗ ದಯವಿಟ್ಟು ಈ ಸೂತಪುತ್ರನ ನಾಲಿಗೆಯನ್ನು ಕತ್ತರಿಸಬೇಡ'' ಎಂದು ಹೇಳಿ ಅಲ್ಲಿಂದ ಎಲ್ಲ ಜನರೂ ನೋಡುತ್ತಿದ್ದಂತೆಯೇ ಕರ್ಣನ ರಥವನ್ನು ಹಿಂದಕ್ಕೆ ತಿರುಗಿಸಿಕೊಂಡು ಹೊರಟ.

ಹೀಗೆ ಕರ್ಣನನ್ನು ಗೆದ್ದ ಭೀಮನು ಅಶ್ವತ್ಥಾಮ–ದುರ್ಯೋಧನರಿಂದ ಕೂಡಿದ್ದ ಕುರು–ಸೇನೆಯನ್ನೆಲ್ಲ ಹೊಡೆದಟ್ಟತೊಡಗಿದ. ಮೂರು ಅಕ್ಷೋಹಿಣೀ ಕೌರವಸೇನೆಯು ಕ್ಷಣಾರ್ಧದಲ್ಲಿ ಭೀಮನ ಹೊಡೆತಕ್ಕೆ ಕಂಗೆಟ್ಟಿತು. ಅದೇ ವೇಳೆಗೆ ಪಾಂಡವಸೇನೆಯನ್ನು ಪ್ರವೇಶಿಸಿದ

---

೧. ಭೀಮನು ಕರ್ಣನ ನಾಲಿಗೆಯನ್ನು ಕತ್ತರಿಸಿದಲ್ಲಿ ಅವಮಾನದಿಂದ ಬೇಯುವ ಕರ್ಣನು ಖಂಡಿತ ಜೀವಿಸಿರಲಾರ – ಎಂದರೆ ಅದು ಕರ್ಣನ ಪಾಲಿಗೆ ಸಾವೇ ಆಗುವುದು. ಇದರಿಂದ ತಾನು ಕರ್ಣನನ್ನು ಕೊಲ್ಲುವೆನು ಎಂಬ ಅರ್ಜುನನ ಪ್ರತಿಜ್ಞೆಗೆ ಅವಕಾಶ ತಪ್ಪಿದಂತಾಗುವುದು ಎಂಬುದು ಇಲ್ಲಿಯ ಭಾವ. ಭೀಮನಿಗೆ ಇದೇನೂ ತಿಳಿಯದ್ದಲ್ಲ. ಆದರೆ ಕರ್ಣನ ಮೇಲೆ ಹಾಗೆ ವರ್ತಿಸುವ ಮೂಲಕ ತನ್ನ ಪ್ರತಿಜ್ಞೆಯನ್ನು ಸತ್ಯಗೊಳಿಸುವ ಪ್ರಯತ್ನ ಹಾಗೂ ಅದಕ್ಕಿರುವ ತನ್ನ ಮಹಾಸಾಮರ್ಥ್ಯವನ್ನು ಭೀಮಸೇನ ಪ್ರಕಟಿಸಿದ (ಸಭಾಪರ್ವದಲ್ಲೂ ಶ್ರೀಕೃಷ್ಣನನ್ನು ನಿಂದಿಸಿದ ಶಿಶುಪಾಲನನ್ನು ನಿಗ್ರಹಿಸಲು ಈ ರೀತಿಯಾಗಿ ಕೋಪವನ್ನು ಪ್ರದರ್ಶಿಸಿದ ವಿವರ ಬಂದಿರುವುದನ್ನು ಇಲ್ಲಿ ಸ್ಮರಿಸಬಹುದು; ಭಗವನ್ನಿಂದಕರನ್ನು ಶಿಕ್ಷಿಸುವ ಭೀಮನ ಈ ದೀಕ್ಷೆ ಅನುಪಮವಾದುದು). ಇದು ಭೀಮನಿಗಿಂತ ಕರ್ಣನು ಬಲಾಢ್ಯ ಎಂಬ ಕೆಲವರ ತಪ್ಪು ಕಲ್ಪನೆಗೆ ಸ್ಪಷ್ಟ ಉತ್ತರವಾಗಿದೆ. ಈ ಪ್ರಸಂಗವು ಕುಮಾರವ್ಯಾಸಭಾರತದಲ್ಲಿಯೂ ನಿರೂಪಿತವಾಗಿರುವುದು ಗಮನಾರ್ಹ :

ಅರಸ ಕೇಳಾಶ್ಚರಿಯವನು ಟೆಬ್ಬರಿಸುವನೆ ಕಲಿಭೀಮನುಬ್ಬಟೆ
ಯರಿಗಳಾಹವಧೀರರಾದರೆ ಧಾತುಗೆಡುವವನೆ।
ಶರ ಧನುವ ಹಾಯ್ಕಿದನು ಧೊಪ್ಪನೆ ಧರೆಗೆ ಧುಮ್ಮಿಕ್ಕಿದನು ಖಡುಗವ
ತಿರುಹಿ ಬೆರಸಿದನಳವಿಯಲಿ ಕುರುಸೇನೆ ಕಳವಳಿಸೆ॥
ಹೊಡೆದು ತಲೆಯನು ಹಗೆಯ ರಕುತವ ಕುಡಿವೆನಲ್ಲದೊಡವನಿಪಾಲನ
ಕೆಡೆನುಡಿದ ನಾಲಗೆಯ ಕೀಳುವೆನೆನುತ ಕೋಪದಲಿ।
ಸಿಡಿವ ಕಿಡಿಗಳ ಕೋಪಶಿಖಿಯುಗ್ಗಡದ ಮಾರುತಿ ಹೊಯ್ದು ಕರ್ಣನ
ಕೆಡಹಿದನು ಮುರಿಯೊದೆದನೆದೆಯನು ಹಾಯ್ದು ಮುಂದಲೆಗೆ॥
ಬಾಯ ಬಿಟ್ಟುದು ಸೇನೆ ಕೌರವ ರಾಯನಾವೆಡೆ ದಳಕೆ ಬಲುಗೈ
ನಾಯಕರು ಕೃಪ ಗುರುಸುತರು ಕೈಗೊಟ್ಟರೇ ಹಗೆಗೆ।
ವಾಯುಜನ ಕೈದೊಳಸಿನಲಿ ಕುರುರಾಯ ರಾಜ್ಯಶ್ರೀಯ ಮುಂದಲೆ
ಹೋಯಿತೋ ಹಾ ಎನುತ ಮರುಗಿತು ಕೂಡೆ ಕುರುಸೇನೆ॥
ಥಟ್ಟುಗೆಡಹಿದ ಕರ್ಣನನು ಕೈಮುಟ್ಟದಿರು ಹೆರಸಾರು ಪಾರ್ಥನು
ಕೊಟ್ಟ ಭಾಷೆಯ ಮರೆದೆಲಾ ಕೈತಪ್ಪ ಮಾಡದಿರು।
ಬಿಟ್ಟು ಹಿಂಗೆಲೆ ಭೀಮ ಭೀತಿಯ ಬಿಟ್ಟು ಬೆರಸಿದೆ ಸಾಕು ಹರಿಬಕೆ
ಮುಟ್ಟಿಸಿದ ಗೆಲವಾಯ್ತು ಮರಳಿನ್ನೆಂದನಾ ಶಲ್ಯ॥ –ಕರ್ಣಪರ್ವ(ಸಂಧಿ ೧೨.ಶ್ಲೋ.೨೬–೨೯)

ಅಶ್ವತ್ಥಾಮರು ಅದನ್ನೆಲ್ಲ ಹೊಡೆಯುತ್ತಾ , ಧರ್ಮರಾಜ, ಧೃಷ್ಟದ್ಯುಮ್ನ , ನಕುಲ ಸಹದೇವರು, ಸಾತ್ಯಕಿ, ದ್ರೌಪದಿಯ ಮಕ್ಕಳು ಇವರನ್ನೆಲ್ಲ ಕ್ಷಣಮಾತ್ರದಲ್ಲಿ ವಿರಥರನ್ನಾಗಿ ಮಾಡಿದರು. ಅವರ ಆಯುಧಗಳನ್ನೂ ನಾಶ ಮಾಡಿದರು. ಅವರೆಲ್ಲ ಯುದ್ಧದಿಂದ ಓಡತೊಡಗಲು, ಅಂತರಿಕ್ಷವನ್ನೆಲ್ಲ ಬಾಣಗಳಿಂದ ಮುಚ್ಚಿ ಅವರ ಹಿಂದೆಯೇ ಸಾಗಿದ ಅವರಿಗೆ ಧರ್ಮರಾಜ ಬಿನ್ನೈಸಿದ - ''ಸ್ವಧರ್ಮದಲ್ಲಿ ನಿರತರಾಗಿರುವ ನಮ್ಮನ್ನೇಕೆ ಹಿಂಸಿಸುತ್ತಿರುವಿರಿ? ಕ್ಷತ್ರಿಯರಾದ ನಾವು ನಮ್ಮ ಧರ್ಮದಲ್ಲಿ ಮಗ್ನರಾಗಿರುವೆವು. ಪರಧರ್ಮವನ್ನು ಆಶ್ರಯಿಸಿದ ಬ್ರಾಹ್ಮಣರಾದ ನೀವು ನಮ್ಮನ್ನು ಹಿಂಸಿಸುವುದು ತರವಲ್ಲ.'' ಅಶ್ವತ್ಥಾಮರು ಅದನ್ನು ಕೇಳಿ ಗಟ್ಟಿಯಾಗಿ ನಕ್ಕು, ಅವರನ್ನೆಲ್ಲ ಬಿಟ್ಟು ಕೃಷ್ಣಾರ್ಜುನರಿದ್ದಲ್ಲಿಗೆ ಹೊರಟರು.

## ಅರ್ಜುನ - ಅಶ್ವತ್ಥಾಮರ ಅದ್ಭುತ ಯುದ್ಧ

ಹಾಗೆ ಹೊರಟ ಅಶ್ವತ್ಥಾಮರು ಸಂಶಪ್ತಕರೊಂದಿಗೆ ಕಾದುತ್ತಿದ್ದ ಶೂರನಾದ ಅರ್ಜುನನನ್ನು ಬಾಣವನ್ನು ಹಿಡಿದು ಭುಜಗೇಂದ್ರನಂತಿದ್ದ ತಮ್ಮ ಬಾಹುವನ್ನು ಮೇಲೆತ್ತಿ, ತಮ್ಮೊಡನೆ ಯುದ್ಧಕ್ಕೆ ಆಹ್ವಾನಿಸಿದರು. ಒಂದು ಕಡೆ ಸಂಶಪ್ತಕರಿಂದಲೂ, ಮತ್ತೊಂದು ಕಡೆ ಅಶ್ವತ್ಥಾಮರಿಂದಲೂ ಆಹ್ವಾನಿಸಲ್ಪಟ್ಟ ಅರ್ಜುನನು ಆಗ ಏನು ಮಾಡಬೇಕೆಂದು ಕೃಷ್ಣನನ್ನೇ ಕೇಳಿದ. ಕೃಷ್ಣನು ಕುದುರೆಗಳನ್ನು ಅಶ್ವತ್ಥಾಮರ ರಥದತ್ತಲೇ ಓಡಿಸಿದ. ಶ್ರೇಷ್ಠ ಅಸ್ತ್ರೋವಿದರೂ, ಮಹಾ-ಬಲಿಷ್ಠರೂ, ಯುದ್ಧದಲ್ಲಿ ಕೊಬ್ಬಿದವರೂ ಆದ ಆ ಇಬ್ಬರೂ ಕಾದುತ್ತಾ , ತಮ್ಮ ಬಾಣಗಳಿಂದ ದಿಕ್ಕುವಿದಿಕ್ಕುಗಳನ್ನು ತುಂಬಿ ಕತ್ತಲನ್ನೇ ಕವಿಸಿದರು. ಅಶ್ವತ್ಥಾಮರು ರಥ, ಕುದುರೆಗಳ ಹಾಗೂ ತಮ್ಮ ರೋಮಕೂಪಗಳಿಂದ, ಧ್ವಜ, ಬಿಲ್ಲು ಮೊದಲಾಗಿ ಎಲ್ಲೆಡೆಗಳಿಂದಲೂ ಹೀಗೆ ಅಮೋಘವಾದ ಬಾಣಗಳನ್ನು ಸುರಿಸುತ್ತಾ, ಅರ್ಜುನನನ್ನು ಶರಪಂಜರದಲ್ಲಿ ಕಟ್ಟಿಹಾಕಿದರು. ಹೀಗೆ ಸಿಕ್ಕಿಹಾಕಿಕೊಂಡ ಅರ್ಜುನನನ್ನು ಕೃಷ್ಣನು ತನ್ನ ಆಲಿಂಗನದಿಂದ ಎಚ್ಚರಿಸಿ, ಬಲವನ್ನೂ ಅನುಗ್ರಹಿಸಿದ. ಚೇತರಿಸಿಕೊಂಡ ಅರ್ಜುನನು ಪುನಃ ಮಹಾಸ್ತ್ರಗಳನ್ನು ಅವರ ಮೇಲೆ ಪ್ರಯೋಗಿಸಿದ. ತಮ್ಮ ಮಹಾಸ್ತ್ರಗಳಿಂದ ಅವೆಲ್ಲವನ್ನೂ ತಡೆದ ಅಶ್ವತ್ಥಾಮರು, ಗಾಂಡೀವದ ಹಗ್ಗವನ್ನೇ ಕತ್ತರಿಸಿ, ಅರ್ಜುನನ ಮೇಲೆ ಬಾಣಗಳನ್ನು ಸುರಿಸತೊಡಗಿದರು. ಕೂಡಲೇ ಬೆಳೆದ ಮತ್ತೊಂದು ಹಗ್ಗದಿಂದ ಅರ್ಜುನನು ಗಾಂಡೀವವನ್ನು ಮತ್ತೆ ಕಟ್ಟಿಕೊಂಡು, ಕೋಪದಿಂದ ಹರಿತವಾದ ಒಂದು ಬಾಣದಿಂದ ಅಶ್ವತ್ಥಾಮರ ಸಾರಥಿಯ ತಲೆಯನ್ನು ಕತ್ತರಿಸಿ ಬೀಳಿಸಿದ.

ಅಶ್ವತ್ಥಾಮರು ತಾವೇ ಸಾರಥ್ಯವನ್ನೂ ನಿರ್ವಹಿಸುತ್ತಾ, ಬಾಣಗಳನ್ನೂ ಬಿಡುತ್ತಾ, ಅರ್ಜುನನನ್ನು ಮತ್ತೊಮ್ಮೆ ಶರಕೂಟದಲ್ಲಿ ಬಂಧಿಸಿದರು. ಮತ್ತೆ ಆಲಿಂಗಿಸಿಕೊಂಡು ಶತ್ರುವನ್ನು ಗೆಲ್ಲುವ ಬಲವನ್ನೂ ಸಹ ಕೃಷ್ಣನು ನೀಡಲು, ಅರ್ಜುನನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಮತ್ತೆ ಮೇಲೆದ್ದು ಅಶ್ವತ್ಥಾಮರ ಮೇಲೆ ಬಾಣಗಳನ್ನು ಸುರಿಸಿದ. ಆಗ ಅಶ್ವತ್ಥಾಮರ ಹೊಡೆತಕ್ಕೆ ಮತ್ತೊಮ್ಮೆ ಗಾಂಡೀವದ ಹಗ್ಗ ತುಂಡಾಯಿತು. ಮತ್ತೆ ಮೂಡಿ ಬಂದ ಹಗ್ಗದಿಂದ ಗಾಂಡೀವ-ವನ್ನು ಕಟ್ಟಿಕೊಂಡ ಅರ್ಜುನನು ಅಶ್ವತ್ಥಾಮರು ಹಿಡಿದಿದ್ದ ಕುದುರೆಗಳ ಹಗ್ಗಗಳನ್ನು ಕತ್ತರಿಸಿದ.

ಹಗ್ಗಗಳಿಲ್ಲದ ಕುದುರೆಗಳು ಅರ್ಜುನನ ಬಾಣಗಳ ಪೆಟ್ಟಿಗೆ ನೊಂದು ದೂರಕ್ಕೆ ಓಡತೊಡಗಲು, ಅವುಗಳನ್ನು ಮತ್ತೆ ನಿಯಂತ್ರಿಸಿದ ಅಶ್ವತ್ಥಾಮರು ಹೀಗೆ ವಿಚಾರ ಮಾಡಿದರು – 'ಅರ್ಜುನನಿಗೆ ಕೃಷ್ಣನೇ ಸಾರಥಿ ; ಅವನ ಧ್ವಜದಲ್ಲಿರುವುದು ಹನುಮಂತ ; ಗಾಂಡೀವ ಅವನ ಧನುಸ್ಸು ; ಬತ್ತಳಿಕೆಗಳೆರಡೂ ಅಕ್ಷಯ ; ಕುದುರೆಗಳೂ ಅವಧ್ಯ ; ರಥವೂ ಅಭೇದ್ಯ. ಆದ್ದರಿಂದ ಅವನ ಮೇಲೆ ಇದಕ್ಕಿಂತ ಹೆಚ್ಚು ಕಾದುವುದು ಸಾಧ್ಯವಿಲ್ಲ[೧]. ಆದ್ದರಿಂದ ನಾನು ಸಮರ್ಥನೇ ಆದರೂ ಅವನ ಬಳಿಗೀಗ ತೆರಳೆನು.''

## ಅರ್ಜುನನ ಪರಾಕ್ರಮ

ಹೀಗೆ ಯೋಚಿಸಿದ ಅವರು ಪಾಂಡುಪುತ್ರರ ಸೇನೆಯನ್ನು ಮುತ್ತಿದರು. ಅವರ ಮೇಲೆ ಪಾಂಡ್ಯರಾಜ ಯುದ್ಧಕ್ಕೆ ಬರಲು, ಬಾಣಗಳನ್ನು ಸುರಿಸತೊಡಗಿದ ಅವರಿಬ್ಬರ ಯುದ್ಧ ಅದ್ಭುತವಾಗಿಯೇ ನಡೆಯಿತು. ಎಂಟುನೂರ ಎಂಟು ಗಾಡಿಗಳು ಹೊತ್ತಿದ್ದ ಆಯುಧಗಳನ್ನೂ ಅಶ್ವತ್ಥಾಮರು ಅರ್ಧ ಯಾಮದಲ್ಲಿ ಕತ್ತರಿಸಿ ಹಾಕಿದರು. ಕೊನೆಗೆ ಪಾಂಡ್ಯನನ್ನೂ ವಿರಥನನ್ನಾಗಿ ಮಾಡಿ, ಅವನ ಧನುಸ್ಸನ್ನೂ ಕತ್ತರಿಸಿ, ಕುಂಡಲ ಹಾಗೂ ಕಿರೀಟದಿಂದ ಹೊಳೆಯುತ್ತಿದ್ದ ಅವನ ಶಿರಸ್ಸನ್ನೂ ಸಹ ಕತ್ತರಿಸಿ ಬಿಟ್ಟರು ; ಮತ್ತೆ ಪಾಂಡವರ ಸೇನೆಯನ್ನು ಓಡಿಸತೊಡಗಿದರು. ಅತ್ತ ಪಾರ್ಥನೂ ಸಹ ದಂಡಧಾರ ಎಂಬ ಮಾಗಧನನ್ನು ಕೊಂದ. ಅಶ್ವತ್ಥಾಮರ ಹೊಡೆತಕ್ಕೆ ತಮ್ಮ ಸೇನೆಯು ಓಡುತ್ತಿರುವುದನ್ನು ನೋಡಿ, ಧೃಷ್ಟದ್ಯುಮ್ನನು ತ್ವರೆಯಿಂದ ಅವರ ಮೇಲೆ ನುಗ್ಗಿದ. ಅವನು ಕಣ್ಣಿಗೆ ಬೀಳುತ್ತಲೇ ಅಶ್ವತ್ಥಾಮರು – 'ಗುರುವನ್ನು ಕೊಂದ ಅತಿಪಾಪಿಯಾದ ನಿನ್ನನ್ನು ಈಗ ಯುದ್ಧದಲ್ಲಿ ಕೊಲ್ಲುವೆ ' ಎಂದು ಹೇಳಲು, ಅದಕ್ಕೆ ಧೃಷ್ಟದ್ಯುಮ್ನನು ತನ್ನ ಖಡ್ಗವನ್ನು ತೋರಿಸುತ್ತಾ – 'ನಿನ್ನ ತಂದೆಯನ್ನು ಕೊಂದ ಇದು ನಿಮಗೆ ಉತ್ತರ ನೀಡುವುದು' ಎಂದು ಹೇಳಿ ಧನುಸ್ಸನ್ನು ತೆಗೆದುಕೊಂಡು ಅನೇಕ ಬಾಣಗಳನ್ನು ಹೊಡೆದ.

ಅವರಿಬ್ಬರಿಗೂ ರೋಮಾಂಚಕವಾದ ತುಮುಲ ಯುದ್ಧವು ನಡೆದು, ಅಶ್ವತ್ಥಾಮರು ಕ್ಷಣದಲ್ಲಿಯೇ ಧೃಷ್ಟದ್ಯುಮ್ನನನ್ನು ವಿರಥನನ್ನಾಗಿಯೂ, ಆಯುಧಹೀನನನ್ನಾಗಿಯೂ ಮಾಡಿ, ಅವನನ್ನು ಕೊಲ್ಲಲೆಂದು ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಮಾಡಿದರು. ಆದರೆ ಅವನ ಚರ್ಮವನ್ನು ಭೇದಿಸಲು ಸಹ ಅವುಗಳಿಗೆ ಸಾಧ್ಯವಾಗಲಿಲ್ಲ. ಆಗ ಅಶ್ವತ್ಥಾಮರು ಖಡ್ಗವನ್ನು ಕೈಗೆತ್ತಿಕೊಂಡು ಅವನ ಬಳಿಗೆ ಹೋಗಿ ಹೊಡೆದರು; ಅದರಿಂದಲೂ ಅವನ ಚರ್ಮವು ಸಹ ಘಾಸಿಗೊಳ್ಳದ್ದನ್ನು ಕಂಡು, ಅವನನ್ನು ನೆಲದ ಮೇಲೆ ಬೀಳಿಸಿ ಧನುಸ್ಸಿನ ಹಗ್ಗವನ್ನು ಅವನ ಕೊರಳಿಗೆ ಸುತ್ತಿ ಎಳೆಯತೊಡಗಿದರು. ಧೃಷ್ಟದ್ಯುಮ್ನನ ಆ ಸ್ಥಿತಿಯನ್ನು ಕಂಡು, ಕೃಷ್ಣನಿಂದ ಪ್ರಚೋದಿತನಾದ ಅರ್ಜುನ, ಮತ್ತೊಂದು ಕಡೆಯಿಂದ ಭೀಮ, ಹೀಗೆ ಇಬ್ಬರೂ ಬಾಣಗಳಿಂದ ಅಶ್ವತ್ಥಾಮರನ್ನು ಹೊಡೆದರು. ವಜ್ರಸದೃಶವಾದ ಅವರ ಬಾಣಗಳಿಂದ

---

೧. ಕರ್ಣ ಗಮನಿಸದ ಅರ್ಜುನನ ಹಿರಿಮೆಯ ಅನೇಕ ಅಂಶಗಳನ್ನು ಅಶ್ವತ್ಥಾಮರು ಇಲ್ಲಿ ಗಮನಿಸಿರುವುದು ಅತ್ಯಂತ ಗಮನಾರ್ಹ.

ಬಹಳವಾಗಿ ಪೆಟ್ಟುತಿಂದ ಅವರು ಧೃಷ್ಟದ್ಯುಮ್ನನನ್ನು ಬಿಟ್ಟು, ತಮ್ಮ ರಥಕ್ಕೆ ಹಿಂದಿರುಗಿ, ಬೇರೆ ಕಡೆಗೆ ಹೊರಟರು. ಧೃಷ್ಟದ್ಯುಮ್ನನೂ ಸಹ ಬೇರೊಂದು ರಥವನ್ನು ಏರಿ, ಧನುಸ್ಸನ್ನು ತೆಗೆದುಕೊಂಡು ಕೃತವರ್ಮನ ಮೇಲೆ ಹೊರಟ. ಅವರಿಬ್ಬರಿಗೂ ಅದ್ಭುತವಾಗಿ ಯುದ್ಧ ನಡೆದು, ಧೃಷ್ಟದ್ಯುಮ್ನನು ಅಲ್ಪ ಪ್ರಯತ್ನದಿಂದಲೇ ಕೃತವರ್ಮನ ರಥ ಹಾಗೂ ಆಯುಧಗಳನ್ನು ನಾಶ ಮಾಡಿದ. ಅಲ್ಲಿಗೆ ಬಂದ ಕೃಪಾಚಾರ್ಯರು ಅವನನ್ನು ತಮ್ಮ ರಥದಲ್ಲಿ ಕೂಡಿಸಿಕೊಂಡು ಹೊರಟು ಬಿಟ್ಟರು.

## ಕರ್ಣನಿಂದ ಯುಧಿಷ್ಠಿರನ ಪರಾಭವ

ದುರ್ಯೋಧನನು ನಕುಲ-ಸಹದೇವರೊಂದಿಗೆ ಯುದ್ಧಕ್ಕೆ ತೊಡಗಿದ. ಅವನಿಗೆ ಅವರೊಂದಿಗೆ ನಡೆದ ಯುದ್ಧವು ಭಯಂಕರವಾಗಿಯೇ ಇತ್ತು. ಅವನು ಅವರಿಬ್ಬರನ್ನು ಅನಾಯಾಸವಾಗಿ ವಿರಥರನ್ನಾಗಿ ಮಾಡಿದ. ಆಗ ಧರ್ಮರಾಜನು ದುರ್ಯೋಧನನನ್ನು ತಡೆಯಲು, ಅವನ ರಥ, ಸೂತ, ಕುದುರೆ ಹಾಗೂ ಧ್ವಜಗಳನ್ನೂ ಸಹ ದುರ್ಯೋಧನನು ನಾಶ ಮಾಡಿದ. ಆ ವೇಳೆಗೆ ಮತ್ತೆ ಬಂದ ಕರ್ಣನನ್ನು ರಥದಲ್ಲಿ ಕುಳಿತು ಎದುರಿಸಿದ ಭೀಮನು, ಅವನು ನೋಡುತ್ತಿದ್ದಂತೆಯೇ ದುರ್ಯೋಧನನನ್ನು ಕ್ಷಣಾರ್ಧದಲ್ಲಿಯೇ ವಿರಥನನ್ನಾಗಿ ಮಾಡಿದ. ಕರ್ಣನನ್ನೂ ಸಹ ತಡೆದು, ಅವನ ಮುಂದೆಯೇ ಅವನ ಮಗ ಸುಷೇಣನ ಶಿರಸ್ಸನ್ನು ಕತ್ತರಿಸಿ ಹಾಕಿದ[೧]. ತಂದೆಯ ಸಮೀಪದಲ್ಲಿಯೇ ಅವನು ಭೂಮಿಯ ಮೇಲೆ ಸತ್ತು ಬಿದ್ದ. ಸತ್ಯಸೇನ ಎಂಬ ಇನ್ನೊಬ್ಬ ಮಗನೂ ಅವನ ಮುಂದೆಯೇ ಅದೇ ರೀತಿ ಭೀಮನಿಂದ ಆ ಮೊದಲೇ ಹತನಾಗಿದ್ದ. ಕರ್ಣನ ಇಬ್ಬರು ತಮ್ಮಂದಿರೂ ಸಹ ರಾತ್ರಿ ಯುದ್ಧದಲ್ಲಿ ಅವನ ಕಣ್ಣೆದುರೇ ಭೀಮನಿಂದ ಆ ರೀತಿಯಲ್ಲಿಯೇ ಸತ್ತಿದ್ದರು. ತನ್ನ ಮಗನು ಸತ್ತಿದ್ದನ್ನು ಕಂಡು ಕೋಪಗೊಂಡ ಕರ್ಣನು ಭೀಮನನ್ನು ಬಿಟ್ಟು, ಸೈನ್ಯವನ್ನು ನಾಶ ಮಾಡುತ್ತಾ, ಕುದುರೆಗಳಿಂದ ಕೂಡಿದ ಬೇರೊಂದು ರಥದಲ್ಲಿ ಕುಳಿತಿದ್ದ ಧರ್ಮರಾಜನತ್ತ ಹೊರಟ.

ಅವನನ್ನು ಸಾತ್ಯಕಿ-ಧೃಷ್ಟದ್ಯುಮ್ನರು, ದ್ರೌಪದಿಯ ಮಕ್ಕಳು ಮತ್ತು ಸೋಮಕರ ಗುಂಪು ತಡೆದರೂ, ಅವನು ಅವರೆಲ್ಲರನ್ನೂ ವಿರಥರನ್ನಾಗಿಸಿ, ನಕುಲಸಹದೇವರೊಂದಿಗೆ ಕೂಡಿದ್ದ ಧರ್ಮರಾಜನ ಬಳಿಗೇ ಹೊರಟ. ಧರ್ಮರಾಜನ ಕುದುರೆಗಳನ್ನು ಕೊಂದು, ನಕುಲಸಹದೇವರ ಆಯುಧಗಳನ್ನು ಕತ್ತರಿಸಿದ. ಅವರೆಲ್ಲ ಒಂದೇ ರಥದಲ್ಲಿ ಕುಳಿತು ಮತ್ತೆ ತನ್ನ ಮೇಲೆ ಬರಲು, ಅವರೆಲ್ಲರನ್ನು ಕರ್ಣನೂ ಕ್ರೂರ ಮಾತುಗಳಿಂದಲೂ, ಕ್ರೂರ ಬಾಣಗಳಿಂದಲೂ ನೋಯಿಸಿದ. ಧರ್ಮರಾಜನನ್ನು ಬಿಡುಗಡೆ ಮಾಡಲೆಂದು ಆಗ ಭೀಮನು, ದುರ್ಯೋಧನನನ್ನು ವಿರಥನನ್ನಾಗಿ ಮಾಡಿ, ಬಾಣಗಳಿಂದ ಅವನ ಮರ್ಮಸ್ಥಳಗಳಲ್ಲಿ ಹೊಡೆಯ ತೊಡಗಿದ. ಶಲ್ಯನು ಕರ್ಣನಿಗೆ ದುರ್ಯೋಧನನ ಅವಸ್ಥೆಯನ್ನು ತೋರಿಸಿದ. ಆಗ ಕರ್ಣನು ಯುಧಿಷ್ಠಿರನನ್ನು

---

೧. ಒಂದು ರೀತಿಯಲ್ಲಿ ಭೀಮನ ಈ ಕಾರ್ಯ ತನ್ನ ಮಗ ಘಟೋತ್ಕಚನನ್ನು ಸಂಹರಿಸಿದ ಕರ್ಣನ ಕಾರ್ಯಕ್ಕೆ ಉತ್ತರರೂಪವಾಗಿದ್ದಿತು ಎಂದು ತಿಳಿಯಬಹುದು.

ಬಿಟ್ಟು ಹೊರಟ. ಯುಧಿಷ್ಠಿರನೂ ಕೂಡ ಮೆಲ್ಲನೆ ಶಿಬಿರವನ್ನು ಸೇರಿ, ಹಾಸಿಗೆಯ ಮೇಲೆ ಮಲಗಿ ಬಿಟ್ಟ. ದುರ್ಯೋಧನನ ರಕ್ಷಣೆಗಾಗಿ ಕರ್ಣನು ಹೊರಡಲು, ಅಶ್ವತ್ಥಾಮ ಕೃಪರೂ ಸಹ ಹೊರಟರು. ಆಗ ಭೀಮನು ಅಶ್ವತ್ಥಾಮ ಕರ್ಣರ ಮೇಲೆ ನುಗ್ಗಿದ. ಕೃಪರು ಭೀಮನ ಬಾಣಗಳಿಂದ ಹೊಡೆಯಲ್ಪಟ್ಟ ದುರ್ಯೋಧನನನ್ನು ತಮ್ಮ ರಥದಲ್ಲಿ ಕೂಡಿಸಿಕೊಂಡು ಹೊರಟರು. ಭೀಮನಿಂದ ಪೀಡಿತರಾದ ಕರ್ಣ ಅಶ್ವತ್ಥಾಮರು ಅವನನ್ನು ಬಿಟ್ಟು ಸೋಮಕರ ಸೈನ್ಯವನ್ನು ಬಾಣಗಳಿಂದ ನಾಶ ಮಾಡುತ್ತಾ ನುಗ್ಗಿದರು.

## ಬಗೆಬಗೆಯ ಯುದ್ಧಗಳು

ಧರ್ಮರಾಜನನ್ನು ಕಾಣದ ಅರ್ಜುನನು ಕೃಷ್ಣನಿಂದ ಪ್ರೇರಿತನಾಗಿ ಹೊರಟು ಬಂದ. ಧೃಷ್ಟದ್ಯುಮ್ನನು ಕರ್ಣನಿಂದ ತನ್ನ ಸೇನೆ ಹೊಡೆಯಲ್ಪಡುತ್ತಿರುವುದನ್ನು ಕಂಡು, ಕೌರವಸೈನ್ಯವನ್ನು ತಾನೂ ಪೀಡಿಸತೊಡಗಿದ ; ಅವನನ್ನು ಅಶ್ವತ್ಥಾಮರು, ದುಃಶಾಸನನೂ ತಡೆದರು. ಅತಿರಥ-ರಾದ ದುಃಶಾಸನ ಮತ್ತು ಧೃಷ್ಟದ್ಯುಮ್ನರಿಗೆ ಘೋರವಾದ ಯುದ್ಧವೇ ನಡೆದು, ಅವರಿಬ್ಬರೂ ಬಾಣದಿಂದ ಕತ್ತಲೆಯನ್ನೇ ಉಂಟು ಮಾಡಿದರು. ದುಃಶಾಸನನು ಯುದ್ಧದಲ್ಲಿ ಧೃಷ್ಟದ್ಯುಮ್ನನನ್ನು ಸ್ತಂಭಿಸಿ, ಅವನು ಎಷ್ಟೇ ಪ್ರಯತ್ನಪಟ್ಟರೂ ಬಿಡದೆ ನಿರಾಯುಧನನ್ನಾಗಿ ಮಾಡಿದ.

ಅಶ್ವತ್ಥಾಮ ಹಾಗೂ ಅರ್ಜುನರಿಗೂ ಘೋರವಾದ ಯುದ್ಧವೇ ನಡೆದು, ಆಗ ಅಶ್ವತ್ಥಾಮರು ಅರ್ಜುನನನ್ನು ಮತ್ತೊಮ್ಮೆ ಶರಪಂಜರದಲ್ಲಿ ಬಂಧಿಸಿ, ಗಾಂಡೀವದ ಹಗ್ಗವನ್ನು ಕತ್ತರಿಸಿದರು. ಮತ್ತೆ ಕೃಷ್ಣನಿಂದ ಬಲ ಪಡೆದ ಅರ್ಜುನನು ಅಶ್ವತ್ಥಾಮರ ಸಾರಥಿಯನ್ನು ಸಂಹರಿಸಿ, ಕುದುರೆಗಳ ಹಗ್ಗವನ್ನು ಕತ್ತರಿಸಿ, ಅವರ ಕುದುರೆಗಳನ್ನು ಬಾಣಗಳಿಂದ ದೂರಕ್ಕೆ ಅಟ್ಟಿ ಬಿಟ್ಟ. ಹೀಗೆ ಅಶ್ವತ್ಥಾಮರನ್ನು ದಾಟಿ ಬರುವ ವೇಳೆಗೆ, ಕರ್ಣನು ಬಾಣಗಳ ಮಳೆಗರೆಯುತ್ತಾ ಪಾಂಡವರ ಸೇನೆಯನ್ನು ಓಡಿಸುತ್ತಿದ್ದ. ದುರ್ಯೋಧನನು ಅವನನ್ನು ಹಿಂಬಾಲಿಸಿಯೇ ಹೊರಟಿದ್ದನ್ನು ಕರ್ಣನು ಬರುತ್ತಿರುವುದನ್ನು ನೋಡಿ, ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಧೃಷ್ಟದ್ಯುಮ್ನ ಅವನನ್ನು ತಡೆದ. ಅವರಿಬ್ಬರಿಗೂ ಬಹಳ ಕಾಲ ಬಿಡುವಿಲ್ಲದೆ ಸಮವಾದ ಯುದ್ಧವೇ ನಡೆಯಿತು. ಆಗಲೇ ವೀರನಾದ ಸಾತ್ಯಕಿಯೂ ದುರ್ಯೋಧನನನ್ನು ತಡೆದನು. ಸಾತ್ಯಕಿಯಿಂದ ಯುದ್ಧದಲ್ಲಿ ತಡೆಯಲ್ಪಟ್ಟ ದುರ್ಯೋಧನನು ಸಾತ್ಯಕಿಯ ಅಶ್ವಗಳನ್ನು ಕೊಂದು, ಧೃಷ್ಟದ್ಯುಮ್ನನ ಬಿಲ್ಲನ್ನು ಕತ್ತರಿಸಿದ. ಅದೇ ವೇಳೆಯಲ್ಲಿ ಕರ್ಣನೂ ಧೃಷ್ಟದ್ಯುಮ್ನನ ಕುದುರೆಗಳನ್ನು ಕೊಂದ. ಹಾಗೆ ಆ ಇಬ್ಬರೂ ವಿರಥರಾಗಲು ಪಾಂಡವಸೈನ್ಯವು ನಾಶವಾಗ-ತೊಡಗಿತು.

ತಮ್ಮ ಸೈನ್ಯವು ಬಹಳವಾಗಿ ನಶಿಸುತ್ತಿರುವುದನ್ನು ನೋಡಿ, ಸಿಂಹಧ್ವಜನಾದ ಭೀಮನು ಭೂಮಿಯನ್ನೇ ನಡುಗಿಸುವಂತಹ ಉಗ್ರವಾದ ಸಿಂಹನಾದವನ್ನು ಮಾಡಿ ಯುದ್ಧದಲ್ಲಿ ಕೌರವರ ಸೈನ್ಯವನ್ನು ಎದುರಿಸಿದ. ವೃಕೋದರನ ಸಿಂಹನಾದದಿಂದಲೂ, ಬಾಣಗಳಿಂದಲೂ ನಾಶ-

ವಾಗತೊಡಗಿದ ಕೌರವಸೇನೆಯು ಕೂಡಲೇ ದಿಕ್ಕೆಟ್ಟು ಓಡತೊಡಗಿತು. ಭೀಮನಿಂದ ದುರ್ಯೋಧನನೂ ಸಹ ತನ್ನ ವಾಹನ ಹಾಗೂ ರಥಗಳನ್ನು ಕಳೆದುಕೊಂಡ. ಇದನ್ನು ಕಂಡು ಓಡುತ್ತಿದ್ದ ಪಾಂಡವಸೇನೆಯು ಉತ್ಸಾಹದಿಂದ ಕೂಡಲೇ ಹಿಂದಿರುಗಿ ಕುರುಸೇನೆಯನ್ನು ಬಡಿಯತೊಡಗಿತು; ಆಗ ಓಡುವ ಸರದಿ ಕೌರವಸೇನೆಯದಾಯಿತು.

## ಕರ್ಣನಿಂದ ಭಾರ್ಗವಾಸ್ತ್ರದ ಪ್ರಯೋಗ

ಭೀಮನ ಆಶ್ರಯದಿಂದಾಗಿ ಪಾಂಚಾಲರಿಂದ ದುರ್ಯೋಧನನ ಬಲವು ಹೀಗೆ ಕಂಗೆಟ್ಟಿದ್ದನ್ನು ಕಂಡು ಕರ್ಣನು ಕೋಪದಿಂದ ಉರಿದ ; ಪರಶುರಾಮರೇ ದೇವತೆಯಾಗಿದ್ದ 'ಭಾರ್ಗವ' ಎನ್ನುವ ಅಮೋಘ ಅಸ್ತ್ರವನ್ನು ಕೈಗೆತ್ತಿಕೊಂಡ. ಆ ದಿವ್ಯಾಸ್ತ್ರ ಎಲ್ಲ ಅಸ್ತ್ರಗಳನ್ನೂ ನಾಶ ಮಾಡುವ ಸಾಮರ್ಥ್ಯದೊಂದಿಗೆ, ಪ್ರತ್ಯಸ್ತ್ರರಹಿತವೂ ಆಗಿತ್ತು. ಕರ್ಣನು ಪ್ರಯೋಗಿಸಿದ ಆ ಅಸ್ತ್ರವು, ಪರಶುರಾಮರ ಅನುಗ್ರಹಕ್ಕೆ ಪಾತ್ರನಾದ ಭೀಮನನ್ನು ಬಿಟ್ಟು ಉಳಿದ ಸೇನೆಯನ್ನೆಲ್ಲಾ ಧ್ವಂಸ ಮಾಡತೊಡಗಿತು. ಹೆಚ್ಚಿನ ಜನ ಓಡತೊಡಗಿದರು; ಆ ಅಸ್ತ್ರವು ಓಡುವವರನ್ನು ಕೊಲ್ಲುವುದಿಲ್ಲ-ವಾದ್ದರಿಂದ ಅಪಾಯದಿಂದ ಅವರೆಲ್ಲ ಪಾರಾದರು. ಹಾಗೆ ಉಳಿದುಕೊಂಡವರಲ್ಲಿ ಪಾಂಚಾಲರು, ದ್ರೌಪದಿಯ ಮಕ್ಕಳು, ಧೃಷ್ಟದ್ಯುಮ್ನ, ಸಾತ್ಯಕಿ ಮೊದಲಾದವರು ಸೇರಿದ್ದರು. ಆ ಅಸ್ತ್ರಕ್ಕೆ ತನ್ನಲ್ಲಿ ಪ್ರತ್ಯಸ್ತ್ರವಾವುದೂ ಇಲ್ಲದ್ದನ್ನು ಗಮನಿಸಿ ಅರ್ಜುನನು ಕರ್ಣನತ್ತ ಸಾಗದೆ ಬೇರೆಡೆಗೆ ಹೊರಟ. ''ಈ ಸೂತಪುತ್ರನನ್ನು ಬಿಟ್ಟೇ ಬೇರೆಡೆಗೆ ನಾನೀಗ ಹೋಗಬೇಕಾಗಿದೆ. ಇಲ್ಲದಿದ್ದಲ್ಲಿ ಈ ಅಸ್ತ್ರದಿಂದ ಬದುಕುವುದು ಸಾಧ್ಯವಿಲ್ಲ'' ಎಂಬ ಅರ್ಜುನನ ಮಾತಿನಂತೆ ಕೃಷ್ಣನು ಕರ್ಣನನ್ನು ತಪ್ಪಿಸಿ, ಬೇರೊಂದು ಮಾರ್ಗದಿಂದ ಅವನನ್ನು ಭೀಮನ ಬಳಿಗೆ ಕರೆದೊಯ್ದ.

ಅರ್ಜುನನು ಭೀಮನಿಗೆ 'ಧರ್ಮರಾಜನ ಬಳಿಗೆ ಹೋಗಿ ಅವನ ಸಮಾಚಾರವನ್ನು ತಿಳಿದು ಬಾ. ನನ್ನನ್ನಾದರೋ ಅಳಿದುಳಿದ ಈ ಸಂಶಪ್ತಕರು ಯುದ್ಧಕ್ಕೆ ಆಹ್ವಾನಿಸುತ್ತಿರುವರು. ಆದ್ದರಿಂದ ನಾನು ಅವರೊಂದಿಗೆ ಕಾದುವೆನು ' ಎನ್ನಲು, ತನ್ನ ಬಾಹುಬಲವನ್ನು ಎದುರಿಸಲು ಯಾರಿಗೂ ಶಕ್ಯವಿಲ್ಲವೆಂದು ಅರಿತಿದ್ದ ಭೀಮನು 'ನಾನೊಬ್ಬನೇ ಸಂಶಪ್ತಕರನ್ನೂ, ಕರ್ಣನನ್ನೂ, ಕೌರವರನ್ನೂ ಎದುರಿಸುವೆ ; ಬೇಕಿದ್ದರೆ ನೀನೇ ರಾಜನ ಬಳಿಗೆ ಹೋಗಿ ಯೋಗಕ್ಷೇಮವನ್ನು ತಿಳಿದು ಬಾ ; ನಾನಂತು ಈ ಯುದ್ಧವನ್ನು ಬಿಟ್ಟು ಬರಲಾರೆ. ನನ್ನನ್ನು ಯಾರೂ ಯುದ್ಧಕ್ಕೆ ಅಂಜಿದವನು ಎಂದು ತಿಳಿಯಬಾರದು' ಎಂದ. ತನ್ನ ಮಹಾಪ್ರೀತಿಪಾತ್ರನಾದ ಭೀಮನ ಈ ಮಾತುಗಳನ್ನು ಕೃಷ್ಣನು ಬಹಳವಾಗಿ ಹೊಗಳಿದ.

## ಅರ್ಜುನ – ಧರ್ಮರಾಜರ ವಿಚಿತ್ರ ಪ್ರಸಂಗ

ಅರ್ಜುನನು ಕೃಷ್ಣನೊಂದಿಗೆ ಯುಧಿಷ್ಠಿರನನ್ನು ನೋಡಲೆಂದು ಶಿಬಿರಕ್ಕೆ ಹೊರಟ. ಅವರಿಬ್ಬರನ್ನು ಕಂಡು ಕರ್ಣನು ಸತ್ತಿರಬೇಕೆಂದು ಭಾವಿಸಿ ಯುಧಿಷ್ಠಿರ ಅರ್ಜುನನನ್ನು ಪ್ರಶಂಸಿಸಿದ. ಆಗ ನಮಸ್ಕರಿಸುತ್ತಾ ಅರ್ಜುನನು – 'ಕರ್ಣನನ್ನು ಬೇಗನೇ ಕೊಲ್ಲುವೆನು'

ಎನ್ನಲು, ಕೋಪಗೊಂಡ ಧರ್ಮರಾಜನು ಅರ್ಜುನನನ್ನು ಬಹಳವಾಗಿ ನಿಂದಿಸಿ, 'ನೀನು ಗಾಂಡೀವವನ್ನು ಕೃಷ್ಣನಿಗೆ ಕೊಡು ; ಅವನೇ ಆ ರಾಧೇಯನನ್ನು ಖಂಡಿತವಾಗಿ ಕೊಲ್ಲುವನು ಅಥವಾ ನೀನು ನಿವೃತ್ತನಾದಲ್ಲಿ ಭೀಮನಾದರೂ ಅವನನ್ನು ಕೊಲ್ಲುವನು. ನೀನು ಕುಂತಿಯಿಂದ ವ್ಯರ್ಥವಾಗಿ ಜನಿಸಿರುವಿ ! ನೀನು ಷಂಢ, ಮಿಥ್ಯಾಪ್ರತಿಜ್ಞ. ಸೂತಪುತ್ರನಿಂದ ತೊಂದರೆಗೀಡಾದ ನಾನು ಭೀಮನ ಪರಾಕ್ರಮದಿಂದಾಗಿ ಇನ್ನೂ ಬದುಕಿಕೊಂಡಿರುವೆ.' ಧರ್ಮರಾಜನ ಮಾತು ಮುಗಿಯುತ್ತಲೇ ಅರ್ಜುನನು ಖಡ್ಗವನ್ನು ಕೈಗೆತ್ತಿಕೊಂಡ. ಸರ್ವಜ್ಞನಾದ ಶ್ರೀಕೃಷ್ಣ – ''ಅರ್ಜುನ! ಏನಿದು?'' ಎನ್ನಲು, ಅರ್ಜುನನು, ''ಗಾಂಡೀವವನ್ನು ಇತರರಿಗೆ ಕೊಟ್ಟುಬಿಡು ಎಂದು ಹೇಳುವವನನ್ನು ಕೊಲ್ಲುವೆ ಎಂಬುದಾಗಿ ನಾನು ಪ್ರತಿಜ್ಞೆ ಮಾಡಿರುವೆ; ಆದ್ದರಿಂದ ನಾನೀಗ ಧರ್ಮರಾಜನನ್ನು ಕೊಲ್ಲಬೇಕಾಗಿದೆ '' ಎಂದು ಉತ್ತರಿಸಿದ.

## ಕೃಷ್ಣ ಮಾಡಿದ ಸತ್ಯಧರ್ಮಗಳ ವಿವೇಚನೆ

ಆಗ ಕೃಷ್ಣನು ಅವನಿಗೆ – ''ಸತ್ಯವನ್ನು ಹೇಳುವುದು ಶ್ರೇಯಸ್ಕರ ನಿಜ. ಆದರೆ ಸತ್ಯದ ಜ್ಞಾನ ಸುಲಭದ ಮಾತಲ್ಲ. ಸಜ್ಜನರಿಗೆ ಹಿತವನ್ನುಂಟುಮಾಡುವುದೇ ಸತ್ಯವೆಂಬುದು ಶಾಸ್ತ್ರಗಳ ನಿರ್ಣಯ. ಧರ್ಮದ ಆಚರಣೆಯೂ ಶ್ರೇಯಸ್ಕರವೇ ಹೌದು. ಆದರೆ ಧರ್ಮದ ಜ್ಞಾನ ಮಾತ್ರ ತುಂಬಾ ಗಹನವಾದುದು. ಸಜ್ಜನರನ್ನು ಉಳಿಸುವ ಕಾರ್ಯವೇ ಧರ್ಮ ಎಂಬುದು ಶಾಸ್ತ್ರದ ನಿಲುವು. ಕೌಶಿಕ ಎಂಬೊಬ್ಬ ಬ್ರಾಹ್ಮಣನು ತಪೋನಿರತನಾಗಿದ್ದಾಗ, ಅಡಗಿಕೊಂಡಿದ್ದ ಗ್ರಾಮಜನರನ್ನು ಕಳ್ಳರಿಗೆ ತೋರಿಸಿಕೊಡುವ ಮೂಲಕ ನರಕವನ್ನೇ ಹೊಂದಿದ. ಒಬ್ಬ ಬೇಡ ತಂದೆತಾಯಿಗಳಿಗಾಗಿ ಒಂದು ಹುಲಿಯನ್ನು ಆಹಾರಕ್ಕಾಗಿ ಕೊಂದ ; ಆ ಪ್ರಾಣಿ ಅಸುರನಾಗಿದ್ದ-ರಿಂದಾಗಿ, ಅವನು ಸ್ವರ್ಗವನ್ನೇ ಪಡೆದ. ಆ ಹುಲಿವೇಷದ ಅಸುರ ಲೋಕದ ಕೇಡಿಗೆಂದು ತಪಸ್ಸನ್ನು ಆಚರಿಸುತ್ತಿದ್ದ. ಆದ್ದರಿಂದ ಸಜ್ಜನರನ್ನು ಉಳಿಸುವ ಕಾರ್ಯವೇ ಧರ್ಮ ಎಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ರಾಜನನ್ನು ಕೊಲ್ಲಬೇಡ. ಅವನನ್ನು ನಿಂದಿಸುವ ಮೂಲಕ ನಿನ್ನ ಮಾತನ್ನು ಉಳಿಸಿಕೋ'' ಎಂದು ಉಪದೇಶಿಸಿದ.

ಅದರಂತೆ ಅರ್ಜುನನು ಯುಧಿಷ್ಠಿರನನ್ನು ಕೋಪದಿಂದಲೇ ಬಹಳವಾಗಿ ನಿಂದಿಸಿದ – ''ನೀನು ಕ್ರೂರಿ ; ಕೃತಘ್ನ ; ನಿರ್ವೀರ್ಯ ; ಕಟುನುಡಿಗಳನ್ನಾಡುವವನು ; ನಿನ್ನಿಂದ ನಮಗೆ ಸ್ವಲ್ಪವೂ ಸುಖವಿಲ್ಲ. ನನ್ನನ್ನು ನಿಂದಿಸುವ ಅಧಿಕಾರ ನಿನಗಿಲ್ಲ. ನಮ್ಮೆಲ್ಲರಿಗೂ ಯಾವಾಗಲೂ ಗತಿಯಾಗಿರುವ ಭೀಮನೇ ನನ್ನನ್ನು ನಿಂದಿಸಲು ಅರ್ಹ. ಅವನು ಎಲ್ಲ ವೀರರನ್ನೂ ಎದುರಿಸಿ ಈಗಲೂ ಯುದ್ಧ ಮಾಡುತ್ತಲೇ ಇರುವನು. ನೀನು ಮಾತ್ರ ಬರೀ ನಿಂದಿಸುವವನಷ್ಟೇ.'' ಹೀಗೆ ಯುಧಿಷ್ಠಿರನನ್ನು ನಿಂದಿಸಿಯಾದ ಮೇಲೆ ಅರ್ಜುನನು ತನ್ನನ್ನು ಕೊಂದುಕೊಳ್ಳಲು ಮತ್ತೆ ಖಡ್ಗವನ್ನು ಒರೆಯಿಂದ ಹೊರಗೆ ತೆಗೆಯಲು, ಕೃಷ್ಣನು ಕಾರಣವನ್ನು ಕೇಳಲು, ಅವನು ತನ್ನ ಉದ್ದೇಶವನ್ನು ತಿಳಿಸಿದ. ಅದನ್ನು ಕೇಳಿ ಕೃಷ್ಣನು ಅರ್ಜುನನನ್ನು ಗದರಿಸುತ್ತಾ – ''ತಿಳಿದೂ ದೇಹವನ್ನು ನಾಶ ಮಾಡಿಕೊಳ್ಳುವುದರಿಂದ ಮಹಾಪಾಪವೇ ಒದಗುವುದು. ಧರ್ಮ ಅರ್ಥ

ಕಾಮ ಹಾಗೂ ಮೋಕ್ಷಗಳ ಸಾಧನೆಯು ಆಗುವುದು ದೇಹದಿಂದಲೇ ಅಲ್ಲವೇ ! ಆದ್ದರಿಂದ ದೇಹವನ್ನು ಸರ್ವಥಾ ಬಿಡಕೂಡದು; ಆತ್ಮಪ್ರಶಂಸೆಯನ್ನು ಮಾಡಿಕೋ. ಗುರುಹಿರಿಯರನ್ನು 'ನೀನು' ಎಂದು ಹಳಿಯುವುದೇ ಅವರ ವಧೆ ಎನ್ನಿಸುವುದು. ಅದೇ ರೀತಿ ಸ್ವಪ್ರಶಂಸೆ ಆತ್ಮಹತ್ಯೆಗೆ ಸಮಾನ" ಎಂದು ವಿವೇಕ ಹೇಳಿದ. ಅರ್ಜುನನು ಅದರಂತೆ ಅಹಂಕಾರದಿಂದ ತನ್ನ ಗುಣಗಳನ್ನು ತಾನೇ ಸಾಕಷ್ಟು ಕೊಚ್ಚಿಕೊಂಡ.

ಗುರುನಿಂದೆ, ಆತ್ಮಪೂಜೆ ಈ ಎರಡೂ ಧರ್ಮಕ್ಕೆ ಕಾರಣವಾಗಲಾರವು ; ಆದರೂ ಅರ್ಜುನನ ಮನಸ್ಸಿನಲ್ಲಿಯ ಭಾವನೆಗಳನ್ನು ಹೊರಗೆ ಹಾಕಲೆಂದು ಕೃಷ್ಣನು ಆ ರೀತಿ ಮಾಡಿಸಿದ. ಹೀಗೆ ಅವನಿಗೆ ನಾಚಿಕೆಯನ್ನು ಉಂಟು ಮಾಡಿ, ಅವನ ಅಹಂಕಾರವನ್ನು ಅಡಗಿಸಿ 'ನಾನು ಶ್ರೇಷ್ಠಧರ್ಮವನ್ನು ತಿಳಿದವನಲ್ಲ ; ನನಗೆ ಕೃಷ್ಣನೇ ಗತಿ' ಎಂಬ ಭಾವನೆಯನ್ನು ಅವನ ಮನಸ್ಸಿನಲ್ಲಿ ಹುಟ್ಟಿಸಿ ಅವನ ದೋಷಗಳನ್ನು ಪರಿಹರಿಸಲೆಂದೇ ಕೃಷ್ಣನು ಅಂತಹ ಪ್ರಸಂಗವನ್ನು ಉಂಟು ಮಾಡಿದ್ದ. ಇದನ್ನೆಲ್ಲ ತಿಳಿಯದೆ ಬಹಳವಾಗಿ ಕೋಪಗೊಂಡ ಧರ್ಮರಾಜನು, "ಭೀಮನೇ ರಾಜನಾಗಲಿ ; ನೀನೇ ಯುವರಾಜನಾಗು ; ನನ್ನನ್ನು ನೀನು ಕೊಂದು ಹಾಕು. ಇಲ್ಲದಿದ್ದಲ್ಲಿ ನಾನೇ ಕಾಡಿಗೆ ಹೊರಟು ಹೋಗುವೆ" ಎಂದು ಹಾಸಿಗೆಯನ್ನು ಬಿಟ್ಟು ಮೇಲೆದ್ದ. ಆಗ ಸರ್ವಪ್ರೇರಕನಾದ ವಾಸುದೇವನು ಧರ್ಮರಾಜನನ್ನು ತಡೆದು ನಿಲ್ಲಿಸಿ ಅದರ ಹಿನ್ನೆಲೆಯನ್ನೆಲ್ಲ ವಿವರಿಸಿ ಸಮಾಧಾನಪಡಿಸಿದ. ಅರ್ಜುನನೂ ಸಹ ಧರ್ಮರಾಜನ ಪಾದಗಳಿಗೆರಗಿ ಕ್ಷಮೆ ಯಾಚಿಸಿದ. ಧರ್ಮರಾಜನೂ ಪ್ರೀತನಾದ.

ಹೀಗೆ ಒದಗಿದ್ದ ಮಹಾ ಆಪತ್ತನ್ನು ಕೃಷ್ಣನ ಅನುಗ್ರಹದಿಂದ ದಾಟಿದ ಅವರು ಅತ್ಯಂತ ಹರ್ಷಚಿತ್ತರಾಗಿ - "ನಿನ್ನ ಸಮರಾದ ಹಿತಾಕಾಂಕ್ಷಿಗಳು ನಮಗೆ ಯಾರಿರುವರು?" ಎಂಬುದಾಗಿ ಕೃಷ್ಣನನ್ನು ಸ್ತುತಿಸಿದರು.

## ಭೀಮ ಪರಾಕ್ರಮ

ಅಣ್ಣನಿಗೆ ನಮಸ್ಕರಿಸಿ, ಆಲಿಂಗನ ಹಾಗೂ ಅಭಿನಂದನೆಗಳಿಂದ ಅವನಿಂದ ಬೀಳ್ಕೊಂಡ ಅರ್ಜುನನು ಯುದ್ಧಕ್ಕೆ ಹೊರಟ ; ಕರ್ಣನನ್ನು ಜಯಿಸುವ ವಿಚಾರದಲ್ಲಿ ಸಂದೇಹಕ್ಕೊಳಗಾಗಿ ಅಂಜಿದ ಅವನಿಗೆ ಕೃಷ್ಣನು, ಅವನ ಹಿಂದಿನ ಸಾಹಸಕಾರ್ಯಗಳನ್ನು ಜ್ಞಾಪಿಸಿದ ; ವಿಶೇಷವಾಗಿ ನರಾವೇಶವನ್ನೂ ವ್ಯಕ್ತಗೊಳಿಸಿದ. ಇದರಿಂದ ಅರ್ಜುನನಿಗೆ ಅಚಲವಾದ ಧೈರ್ಯ ಉಂಟಾಯಿತು.

ಇತ್ತ ಭೀಮನು ಎಲ್ಲ ಶತ್ರುಬಲವನ್ನೂ ಸಹ ತಾನೊಬ್ಬನೇ ಹೊಡೆದು ಓಡಿಸುತ್ತಿದ್ದ. ತನ್ನನ್ನು ಎದುರಿಸುತ್ತಾ ಮೇಲೆ ಬೀಳುತ್ತಿದ್ದ ವೀರರನ್ನು ಭೀಮನು ತನ್ನ ಸಾರಥಿಯೊಂದಿಗೆ ಸಲ್ಲಾಪಿಸುತ್ತಲೇ ಕೊಂದು ಹಾಕುತ್ತಿದ್ದ. ಆ ವೇಳೆಗೆ ದುರ್ಯೋಧನನ ತಮ್ಮಂದಿರೊಂದಿಗೆ ಸೈನ್ಯಸಮೇತನಾಗಿ ಶಕುನಿಯು ಭೀಮನನ್ನು ಎದುರಿಸಲು, ಭೀಮನು ಅವನನ್ನು ವಿರಥನನ್ನಾಗಿಯೂ, ಆಯುಧಹೀನನನ್ನಾಗಿಯೂ ಮಾಡಿ, ಬಾಣಗಳಿಂದ ಹೊಡೆದು ಭೂಮಿಯ ಮೇಲೆ ಉರುಳಿಸಿದ. ಅವನು

ಸಹದೇವನ ಪಾಲು ಎಂಬುದಾಗಿ ದ್ಯೂತಪ್ರಸಂಗದಲ್ಲಿ ತಾನೇ ನಿಯೋಜಿಸಿದ್ದ ಕಾರಣದಿಂದ, ಶಕುನಿಯನ್ನು ಕೊಲ್ಲದೆ ಬಿಟ್ಟ. ಪ್ರಜ್ಞೆತಪ್ಪಿ ಉಸಿರು ಮಾತ್ರ ಉಳಿದುಕೊಂಡಿದ್ದ ಅವನನ್ನು ದುರ್ಯೋಧನನು ತನ್ನ ರಥದಲ್ಲಿ ಹೇರಿಕೊಂಡು ಹೊರಟುಬಿಟ್ಟ. ದುರ್ಯೋಧನನ ಹತ್ತು ಜನ ತಮ್ಮಂದಿರು ಭೀಮನನ್ನು ಬಿಟ್ಟು ಭಯದಿಂದ ಓಡಿದರು. ಆ ವೇಳೆಗೆ ತನ್ನಲ್ಲಿಗೆ ಬಂದ ಕೃಷ್ಣಾರ್ಜುನರಿಂದ ಧರ್ಮರಾಜನ ಕುಶಲ ತಿಳಿದು ಭೀಮನಿಗೆ ಸಂತೋಷವಾಯಿತು.

## ದುಃಶಾಸನನ ವಧೆ

ಕೌರವಸೇನೆಯನ್ನು ಹೊಡೆಯುತ್ತ, ಓಡಿಸುತ್ತ ಮತ್ತೆ ಮುನ್ನುಗ್ಗಿದ ಭೀಮನನ್ನು ಧನುರ್ಧಾರಿಯಾಗಿ ದುಃಶಾಸನನು, ನರಿಯು ಸಿಂಹವನ್ನು ಕೆಣಕುವಂತೆ, ಎದುರಿಸಿದ. ಕ್ರೂರ ಮಾತುಗಳನ್ನು ಆಗಲೂ ಮತ್ತೆ ಮತ್ತೆ ನುಡಿಯತೊಡಗಿದ ಆ ದುಃಶಾಸನನನ್ನು ಕ್ಷಣಾರ್ಧದಲ್ಲಿ ಭೀಮನು ರಥಹೀನನನ್ನಾಗಿ ಮಾಡಿ, ಭೂಮಿಯ ಮೇಲೆ ಬೀಳಿಸಿ, ಗದೆಯ ಹೊಡೆತದಿಂದ ಅವನ ಎದೆಯನ್ನು ಸೀಳಿದ. ಅವನ ಕತ್ತಿನ ಮೇಲೆ ಕಾಲನ್ನೂರಿ, ಹೊಟ್ಟೆಯ ಮೇಲೆ ಕುಳಿತು, ಕೋಪದಿಂದ ಅವನ ಮುಖವನ್ನು ನಿಟ್ಟಿಸುತ್ತಾ, ವಿಶಾಲವಾದ ದೊಡ್ಡ ಖಡ್ಗವನ್ನು ಒರೆಯಿಂದ ಎಳೆದು, ಅವನ ಎದೆಯನ್ನು ಬಗೆದ. ಅಲ್ಲಿ ಒಂದು ರಕ್ತದ ಕೊಳವನ್ನೇ ಮಾಡಿ, ಬಾಯಾರಿದವನು ಅಮೃತವನ್ನೆಂಬಂತೆ ಯಥೇಚ್ಛವಾಗಿ ರಕ್ತವನ್ನು ಹೀರಿದ; ಅವನ ಹಿಂದಿನ ದುಷ್ಕಾರ್ಯಗಳನ್ನೆಲ್ಲ ಜ್ಞಾಪಿಸಿದ. ಅವನ ವಾಗ್ಬಾಣಗಳನ್ನೆಲ್ಲ ಮತ್ತೆ ಮತ್ತೆ ಜ್ಞಾಪಿಸುತ್ತಾ, ಅವನ್ನೆಲ್ಲ ಅವನಿಗೆ ಹಿಂದಿರುಗಿಸಿದ. ಪುರುಷರಕ್ತವು ಅಪೇಯವೆಂಬುದನ್ನು ತಿಳಿದಿದ್ದ ಭೀಮನ ಹಲ್ಲುಗಳ ಒಳಗೂ ಸಹ ಆ ದುಃಶಾಸನನ ಹನಿಯಷ್ಟು ರಕ್ತವೂ ಪ್ರವೇಶಿಸಲಿಲ್ಲ[೧]. ಆದರೂ ಶತ್ರುಗಳನ್ನು

೧. ಭೀಮನು ದುಃಶಾಸನನ ರಕ್ತವನ್ನು ಪಾನ ಮಾಡಿದ ಎಂಬುದೇ ಪಂಪ, ಕುಮಾರವ್ಯಾಸ ಮೊದಲಾದವರ ನಿರೂಪಣೆ. ಅವುಗಳನ್ನಷ್ಟೇ ಓದಿದ ಜನರ ತಿಳುವಳಿಕೆಯೂ ಹಾಗೆಯೇ ಇದೆ. ವಸ್ತುಸ್ಥಿತಿ ಅದಲ್ಲ ಎಂಬುದನ್ನು ಮೂಲಭಾರತದ ಅವಲೋಕನ ಸ್ಫುಟಪಡಿಸುವುದು. ಸ್ತ್ರೀಪರ್ವದಲ್ಲಿ ಸ್ವತಃ ಭೀಮಸೇನನೇ ಗಾಂಧಾರಿಗೆ ಆ ವಿಷಯವನ್ನು ಸ್ಫುಟಪಡಿಸುವ ವಿವರ ಬಂದಿದೆ. ಭೀಮ ಹಾಗೆ ರಕ್ತ ಕುಡಿದಂತೆ ಅಭಿನಯಿಸಿದ್ದು ತನ್ನ ಪ್ರತಿಜ್ಞೆಯನ್ನು ಸತ್ಯ ಮಾಡಲೆಂದು ಮಾತ್ರ. ಅಂತಹ ಪ್ರತಿಜ್ಞೆಯನ್ನು ಮಾಡಿದ್ದು ಪರಸ್ತ್ರೀಯನ್ನು ಕೆಣಕುವ ನೀಚರಿಗೆ ದೊರೆಯುವ ಉಗ್ರಶಿಕ್ಷೆಯನ್ನು ತಿಳಿಸಿಕೊಡಲೆಂದು ಮಾತ್ರ. ಭೀಮಸೇನನ ಬಾಯಲ್ಲಿ ಬಿದ್ದ ರಕ್ತ ಅವನ ದಂತಪಂಕ್ತಿಯನ್ನೂ ಸಹ ದಾಟದೆ ಪುನಃ ಹೊರಬರುತ್ತಿತ್ತು. ರಕ್ತವನ್ನು ಹೀರುವೆ ಎಂಬ ಮಾತಿಗೆ ಕೊಲ್ಲುವೆ ಎಂಬ ಅರ್ಥವೇ ಲೋಕದ ರೂಢಿಯಲ್ಲೂ ಬಂದಿದೆ. ಅದರೊಂದಿಗೆ ದ್ವಾಪರಯುಗದಲ್ಲಿ ಮನುಷ್ಯನ ಪ್ರಾಣ ರಕ್ತಗತ ಎಂಬ ಮಾತಿದೆ ; ಅದರಂತೆ ರಕ್ತ ಕುಡಿಯುವೆ ಎಂಬುದಕ್ಕೆ ಪ್ರಾಣ ತೆಗೆಯುವೆ ಎಂದೇ ಅರ್ಥ. ಬಾಯಲ್ಲಿ ರಕ್ತ ಪ್ರವೇಶಿಸಿದರೂ ಅದು ಹೊಟ್ಟೆಯೊಳಗೆ ಇಳಿಯಬೇಕೆಂದಿಲ್ಲ. ಇದನ್ನು ಹಾವು ಕಚ್ಚಿ ನರಳುವವರನ್ನು ಸಂರಕ್ಷಿಸಲು ಹಾವು ಕಚ್ಚಿದ ಭಾಗವನ್ನು ತಮ್ಮ ಹಲ್ಲುಗಳಿಂದ ಕಚ್ಚಿ ವಿಷವನ್ನು ಹೊರತೆಗೆಯುವ ನಿದರ್ಶನಗಳಿಂದ ತಿಳಿಯ ಬಹುದು. ಆ ಸಮಯದಲ್ಲಿ ಅವರ ಬಾಯಲ್ಲಿಯ ರಕ್ತ ಅವರ ಉದರವನ್ನು ಪ್ರವೇಶಿಸಿದರೆ ಅವರೇ ಸಾವಿಗೀಡಾಗುವರು. ಹಾಗಾಗದೇ ಇರಲು ಅವರು ಹೀರಿದ ರಕ್ತವನ್ನು ಕೂಡಲೇ ಉಗಿಯುವ ಕಾರ್ಯವನ್ನು ಮಾಡುವುದು ಲೋಕದಲ್ಲಿ ಕಂಡಿದೆ. ಇದರಿಂದ ಭೀಮಸೇನ ವಾಸ್ತವವಾಗಿ ದುಃಶಾಸನನ ರಕ್ತವನ್ನು ಪಾನಮಾಡಿಲ್ಲ ಎಂಬ ವಿವರ ಸ್ಫುಟಪಡುವುದು(ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಮಹಾಭಾರತತಾತ್ಪರ್ಯನಿರ್ಣಯ'ದ ಅನುವಾದದಿಂದ ಪಡೆಯಬಹುದು).

ಕಾಮ ಹಾಗೂ ಮೋಕ್ಷಗಳ ಸಾಧನೆಯು ಆಗುವುದು ದೇಹದಿಂದಲೇ ಅಲ್ಲವೇ ! ಆದ್ದರಿಂದ ದೇಹವನ್ನು ಸರ್ವಥಾ ಬಿಡಕೂಡದು; ಆತ್ಮಪ್ರಶಂಸೆಯನ್ನು ಮಾಡಿಕೋ. ಗುರುಹಿರಿಯರನ್ನು 'ನೀನು' ಎಂದು ಹಳಿಯುವುದೇ ಅವರ ವಧೆ ಎನ್ನಿಸುವುದು. ಅದೇ ರೀತಿ ಸ್ವಪ್ರಶಂಸೆ ಆತ್ಮಹತ್ಯೆಗೆ ಸಮಾನ" ಎಂದು ವಿವೇಕ ಹೇಳಿದ. ಅರ್ಜುನನು ಅದರಂತೆ ಅಹಂಕಾರದಿಂದ ತನ್ನ ಗುಣಗಳನ್ನು ತಾನೇ ಸಾಕಷ್ಟು ಕೊಚ್ಚಿಕೊಂಡ.

ಗುರುನಿಂದೆ, ಆತ್ಮಪೂಜೆ ಈ ಎರಡೂ ಧರ್ಮಕ್ಕೆ ಕಾರಣವಾಗಲಾರವು ; ಆದರೂ ಅರ್ಜುನನ ಮನಸ್ಸಿನಲ್ಲಿಯ ಭಾವನೆಗಳನ್ನು ಹೊರಗೆ ಹಾಕಲೆಂದು ಕೃಷ್ಣನು ಆ ರೀತಿ ಮಾಡಿಸಿದ. ಹೀಗೆ ಅವನಿಗೆ ನಾಚಿಕೆಯನ್ನು ಉಂಟು ಮಾಡಿ, ಅವನ ಅಹಂಕಾರವನ್ನು ಅಡಗಿಸಿ 'ನಾನು ಶ್ರೇಷ್ಠಧರ್ಮವನ್ನು ತಿಳಿದವನಲ್ಲ ; ನನಗೆ ಕೃಷ್ಣನೇ ಗತಿ' ಎಂಬ ಭಾವನೆಯನ್ನು ಅವನ ಮನಸ್ಸಿನಲ್ಲಿ ಹುಟ್ಟಿಸಿ ಅವನ ದೋಷಗಳನ್ನು ಪರಿಹರಿಸಲೆಂದೇ ಕೃಷ್ಣನು ಅಂತಹ ಪ್ರಸಂಗವನ್ನು ಉಂಟು ಮಾಡಿದ್ದ. ಇದನ್ನೆಲ್ಲ ತಿಳಿಯದೆ ಬಹಳವಾಗಿ ಕೋಪಗೊಂಡ ಧರ್ಮರಾಜನು, "ಭೀಮನೇ ರಾಜನಾಗಲಿ ; ನೀನೇ ಯುವರಾಜನಾಗು ; ನನ್ನನ್ನು ನೀನು ಕೊಂದು ಹಾಕು. ಇಲ್ಲದಿದ್ದಲ್ಲಿ ನಾನೇ ಕಾಡಿಗೆ ಹೊರಟು ಹೋಗುವೆ" ಎಂದು ಹಾಸಿಗೆಯನ್ನು ಬಿಟ್ಟು ಮೇಲೆದ್ದ. ಆಗ ಸರ್ವಪ್ರೇರಕನಾದ ವಾಸುದೇವನು ಧರ್ಮರಾಜನನ್ನು ತಡೆದು ನಿಲ್ಲಿಸಿ ಅದರ ಹಿನ್ನೆಲೆಯನ್ನೆಲ್ಲ ವಿವರಿಸಿ ಸಮಾಧಾನಪಡಿಸಿದ. ಅರ್ಜುನನೂ ಸಹ ಧರ್ಮರಾಜನ ಪಾದಗಳಿಗೆರಗಿ ಕ್ಷಮೆ ಯಾಚಿಸಿದ. ಧರ್ಮರಾಜನೂ ಪ್ರೀತನಾದ.

ಹೀಗೆ ಒದಗಿದ್ದ ಮಹಾ ಆಪತ್ತನ್ನು ಕೃಷ್ಣನ ಅನುಗ್ರಹದಿಂದ ದಾಟಿದ ಅವರು ಅತ್ಯಂತ ಹರ್ಷಚಿತ್ತರಾಗಿ - "ನಿನ್ನ ಸಮರಾದ ಹಿತಾಕಾಂಕ್ಷಿಗಳು ನಮಗೆ ಯಾರಿರುವರು?" ಎಂಬುದಾಗಿ ಕೃಷ್ಣನನ್ನು ಸ್ತುತಿಸಿದರು.

## ಭೀಮ ಪರಾಕ್ರಮ

ಅಣ್ಣನಿಗೆ ನಮಸ್ಕರಿಸಿ, ಆಲಿಂಗನ ಹಾಗೂ ಅಭಿನಂದನೆಗಳಿಂದ ಅವನಿಂದ ಬೀಳ್ಕೊಂಡ ಅರ್ಜುನನು ಯುದ್ಧಕ್ಕೆ ಹೊರಟ ; ಕರ್ಣನನ್ನು ಜಯಿಸುವ ವಿಚಾರದಲ್ಲಿ ಸಂದೇಹಕ್ಕೊಳಗಾಗಿ ಅಂಜಿದ ಅವನಿಗೆ ಕೃಷ್ಣನು, ಅವನ ಹಿಂದಿನ ಸಾಹಸಕಾರ್ಯಗಳನ್ನು ಜ್ಞಾಪಿಸಿದ ; ವಿಶೇಷವಾಗಿ ನರಾವೇಶವನ್ನೂ ವ್ಯಕ್ತಗೊಳಿಸಿದ. ಇದರಿಂದ ಅರ್ಜುನನಿಗೆ ಅಚಲವಾದ ಧೈರ್ಯ ಉಂಟಾಯಿತು.

ಇತ್ತ ಭೀಮನು ಎಲ್ಲ ಶತ್ರುಬಲವನ್ನೂ ಸಹ ತಾನೊಬ್ಬನೇ ಹೊಡೆದು ಓಡಿಸುತ್ತಿದ್ದ. ತನ್ನನ್ನು ಎದುರಿಸುತ್ತಾ ಮೇಲೆ ಬೀಳುತ್ತಿದ್ದ ವೀರರನ್ನು ಭೀಮನು ತನ್ನ ಸಾರಥಿಯೊಂದಿಗೆ ಸಲ್ಲಾಪಿಸುತ್ತಲೇ ಕೊಂದು ಹಾಕುತ್ತಿದ್ದ. ಆ ವೇಳೆಗೆ ದುರ್ಯೋಧನನ ತಮ್ಮಂದಿರೊಂದಿಗೆ ಸೈನ್ಯಸಮೇತನಾಗಿ ಶಕುನಿಯು ಭೀಮನನ್ನು ಎದುರಿಸಲು, ಭೀಮನು ಅವನನ್ನು ವಿರಥನನ್ನಾಗಿಯೂ, ಆಯುಧಹೀನನನ್ನಾಗಿಯೂ ಮಾಡಿ, ಬಾಣಗಳಿಂದ ಹೊಡೆದು ಭೂಮಿಯ ಮೇಲೆ ಉರುಳಿಸಿದ. ಅವನು

ಸಹದೇವನ ಪಾಲು ಎಂಬುದಾಗಿ ದ್ಯೂತಪ್ರಸಂಗದಲ್ಲಿ ತಾನೇ ನಿಯೋಜಿಸಿದ್ದ ಕಾರಣದಿಂದ, ಶಕುನಿಯನ್ನು ಕೊಲ್ಲದೆ ಬಿಟ್ಟ. ಪ್ರಜ್ಞೆತಪ್ಪಿ ಉಸಿರು ಮಾತ್ರ ಉಳಿದುಕೊಂಡಿದ್ದ ಅವನನ್ನು ದುರ್ಯೋಧನನು ತನ್ನ ರಥದಲ್ಲಿ ಹೇರಿಕೊಂಡು ಹೊರಟುಬಿಟ್ಟ. ದುರ್ಯೋಧನನ ಹತ್ತು ಜನ ತಮ್ಮಂದಿರು ಭೀಮನನ್ನು ಬಿಟ್ಟು ಭಯದಿಂದ ಓಡಿದರು. ಆ ವೇಳೆಗೆ ತನ್ನಲ್ಲಿಗೆ ಬಂದ ಕೃಷ್ಣಾರ್ಜುನರಿಂದ ಧರ್ಮರಾಜನ ಕುಶಲ ತಿಳಿದು ಭೀಮನಿಗೆ ಸಂತೋಷವಾಯಿತು.

## ದುಃಶಾಸನನ ವಧೆ

ಕೌರವಸೇನೆಯನ್ನು ಹೊಡೆಯುತ್ತ, ಓಡಿಸುತ್ತ ಮತ್ತೆ ಮುನ್ನುಗ್ಗಿದ ಭೀಮನನ್ನು ಧನುರ್ಧಾರಿಯಾಗಿ ದುಃಶಾಸನನು, ನರಿಯು ಸಿಂಹವನ್ನು ಕೆಣಕುವಂತೆ, ಎದುರಿಸಿದ. ಕ್ರೂರ ಮಾತುಗಳನ್ನು ಆಗಲೂ ಮತ್ತೆ ಮತ್ತೆ ನುಡಿಯತೊಡಗಿದ ಆ ದುಃಶಾಸನನನ್ನು ಕ್ಷಣಾರ್ಧದಲ್ಲಿ ಭೀಮನು ರಥಹೀನನನ್ನಾಗಿ ಮಾಡಿ, ಭೂಮಿಯ ಮೇಲೆ ಬೀಳಿಸಿ, ಗದೆಯ ಹೊಡೆತದಿಂದ ಅವನ ಎದೆಯನ್ನು ಸೀಳಿದ. ಅವನ ಕತ್ತಿನ ಮೇಲೆ ಕಾಲನ್ನೂರಿ, ಹೊಟ್ಟೆಯ ಮೇಲೆ ಕುಳಿತು, ಕೋಪದಿಂದ ಅವನ ಮುಖವನ್ನು ನಿಟ್ಟಿಸುತ್ತಾ, ವಿಶಾಲವಾದ ದೊಡ್ಡ ಖಡ್ಗವನ್ನು ಒರೆಯಿಂದ ಎಳೆದು, ಅವನ ಎದೆಯನ್ನು ಬಗೆದ. ಅಲ್ಲಿ ಒಂದು ರಕ್ತದ ಕೊಳವನ್ನೇ ಮಾಡಿ, ಬಾಯಾರಿದವನು ಅಮೃತವನ್ನೆಂಬಂತೆ ಯಥೇಚ್ಛವಾಗಿ ರಕ್ತವನ್ನು ಹೀರಿದ; ಅವನ ಹಿಂದಿನ ದುಷ್ಕಾರ್ಯಗಳನ್ನೆಲ್ಲ ಜ್ಞಾಪಿಸಿದ. ಅವನ ವಾಗ್ಬಾಣಗಳನ್ನೆಲ್ಲ ಮತ್ತೆ ಮತ್ತೆ ಜ್ಞಾಪಿಸುತ್ತಾ, ಅವನ್ನೆಲ್ಲ ಅವನಿಗೆ ಹಿಂದಿರುಗಿಸಿದ. ಪುರುಷರಕ್ತವು ಅಪೇಯವೆಂಬುದನ್ನು ತಿಳಿದಿದ್ದ ಭೀಮನ ಹಲ್ಲುಗಳ ಒಳಗೂ ಸಹ ಆ ದುಃಶಾಸನನ ಹನಿಯಷ್ಟು ರಕ್ತವೂ ಪ್ರವೇಶಿಸಲಿಲ್ಲ[೧]. ಆದರೂ ಶತ್ರುಗಳನ್ನು

೧. ಭೀಮನು ದುಃಶಾಸನನ ರಕ್ತವನ್ನು ಪಾನ ಮಾಡಿದ ಎಂಬುದೇ ಪಂಪ, ಕುಮಾರವ್ಯಾಸ ಮೊದಲಾದವರ ನಿರೂಪಣೆ. ಅವುಗಳನ್ನಷ್ಟೇ ಓದಿದ ಜನರ ತಿಳುವಳಿಕೆಯೂ ಹಾಗೆಯೇ ಇದೆ. ವಸ್ತುಸ್ಥಿತಿ ಅದಲ್ಲ ಎಂಬುದನ್ನು ಮೂಲಭಾರತದ ಅವಲೋಕನ ಸ್ಫುಟಪಡಿಸುವುದು. ಸ್ತ್ರೀಪರ್ವದಲ್ಲಿ ಸ್ವತಃ ಭೀಮಸೇನನೇ ಗಾಂಧಾರಿಗೆ ಆ ವಿಷಯವನ್ನು ಸ್ಫುಟಪಡಿಸುವ ವಿವರ ಬಂದಿದೆ. ಭೀಮ ಹಾಗೆ ರಕ್ತ ಕುಡಿದಂತೆ ಅಭಿನಯಿಸಿದ್ದು ತನ್ನ ಪ್ರತಿಜ್ಞೆಯನ್ನು ಸತ್ಯ ಮಾಡಲೆಂದು ಮಾತ್ರ. ಅಂತಹ ಪ್ರತಿಜ್ಞೆಯನ್ನು ಮಾಡಿದ್ದು ಪರಸ್ತ್ರೀಯನ್ನು ಕೆಣಕುವ ನೀಚರಿಗೆ ದೊರೆಯುವ ಉಗ್ರಶಿಕ್ಷೆಯನ್ನು ತಿಳಿಸಿಕೊಡಲೆಂದು ಮಾತ್ರ. ಭೀಮಸೇನನ ಬಾಯಲ್ಲಿ ಬಿದ್ದ ರಕ್ತ ಅವನ ದಂತಪಂಕ್ತಿಯನ್ನೂ ಸಹ ದಾಟದೆ ಪುನಃ ಹೊರಬರುತ್ತಿತ್ತು. ರಕ್ತವನ್ನು ಹೀರುವೆ ಎಂಬ ಮಾತಿಗೆ ಕೊಲ್ಲುವೆ ಎಂಬ ಅರ್ಥವೇ ಲೋಕದ ರೂಢಿಯಲ್ಲೂ ಬಂದಿದೆ. ಅದರೊಂದಿಗೆ ದ್ವಾಪರಯುಗದಲ್ಲಿ ಮನುಷ್ಯನ ಪ್ರಾಣ ರಕ್ತಗತ ಎಂಬ ಮಾತಿದೆ ; ಅದರಂತೆ ರಕ್ತ ಕುಡಿಯುವೆ ಎಂಬುದಕ್ಕೆ ಪ್ರಾಣ ತೆಗೆಯುವೆ ಎಂದೇ ಅರ್ಥ. ಬಾಯಲ್ಲಿ ರಕ್ತ ಪ್ರವೇಶಿಸಿದರೂ ಅದು ಹೊಟ್ಟೆಯೊಳಗೆ ಇಳಿಯಬೇಕೆಂದಿಲ್ಲ. ಇದನ್ನು ಹಾವು ಕಚ್ಚಿ ನರಳುವವರನ್ನು ಸಂರಕ್ಷಿಸಲು ಹಾವು ಕಚ್ಚಿದ ಭಾಗವನ್ನು ತಮ್ಮ ಹಲ್ಲುಗಳಿಂದ ಕಚ್ಚಿ ವಿಷವನ್ನು ಹೊರತೆಗೆಯುವ ನಿದರ್ಶನಗಳಿಂದ ತಿಳಿಯ ಬಹುದು. ಆ ಸಮಯದಲ್ಲಿ ಅವರ ಬಾಯಲ್ಲಿಯ ರಕ್ತ ಅವರ ಉದರವನ್ನು ಪ್ರವೇಶಿಸಿದರೆ ಅವರೇ ಸಾವಿಗೀಡಾಗುವರು. ಹಾಗಾಗದೇ ಇರಲು ಅವರು ಹೀರಿದ ರಕ್ತವನ್ನು ಕೂಡಲೇ ಉಗಿಯುವ ಕಾರ್ಯವನ್ನು ಮಾಡುವುದು ಲೋಕದಲ್ಲಿ ಕಂಡಿದೆ. ಇದರಿಂದ ಭೀಮಸೇನ ವಾಸ್ತವವಾಗಿ ದುಃಶಾಸನನ ರಕ್ತವನ್ನು ಪಾನಮಾಡಿಲ್ಲ ಎಂಬ ವಿವರ ಸ್ಫುಟಪಡುವುದು( ಹೆಚ್ಚಿನ ವಿವರಗಳನ್ನು ನಮ್ಮ ಪ್ರಕಾಶನದ 'ಮಹಾಭಾರತತಾತ್ಪರ್ಯನಿರ್ಣಯ'ದ ಅನುವಾದದಿಂದ ಪಡೆಯಬಹುದು).

ಭಯಪಡಿಸಲೋಸುಗ ರುಚಿನೋಡಿ ಮತ್ತೆ ಮತ್ತೆ ಕುಡಿಯುವವನಂತೆ ಅಭಿನಯಿಸಿದ. ಆ ವೇಳೆ ನರಸಿಂಹದೇವರನ್ನು ಸ್ಮರಿಸುತ್ತಾ 'ಯಸ್ತೇ ಮನ್ಯೋ' ಎಂಬ ಮನ್ಯುಸೂಕ್ತವನ್ನು ಸಾಕ್ಷಾತ್ಕರಿಸಿಕೊಂಡು, ಶೋಣಿತರೂಪದ ಸೋಮವನ್ನು ಸಮರ್ಪಿಸಿದ. ರಣಯಜ್ಞದಲ್ಲಿ ನರಸಿಂಹದೇವರಿಗೆ ಶೋಣಿತವೆಂಬ ಸೋಮರಸವನ್ನೇ ಆಗ ಭೀಮನು ಅರ್ಪಿಸಿದ.

ಆ ರೀತಿ ತನ್ನ ಪ್ರತಿಜ್ಞೆಯನ್ನು ಲೋಕದಲ್ಲಿ ಸತ್ಯಮಾಡಿ ತೋರಿಸಿದ ಭೀಮನು, 'ಪತಿಗಳಿದ್ದವರೆಲ್ಲಾ ಈಗ ವಿಧವೆಯರಾಗಿದ್ದರೆ, ಪತಿಹೀನೆ ಎಂದು ನೀನು ಕರೆದಿದ್ದ ದ್ರೌಪದಿಯು ಈಗ ಪತಿಸಹಿತಳೇ ಆಗಿರುವಳು ; ಹಿಂದೆ ಗಟ್ಟಿ ಎಳ್ಳುಗಳೆಂದು ಹೇಳಿಕೊಂಡವರನ್ನೆಲ್ಲಾ ಈಗ ಜೊಳ್ಳೆಳ್ಳುಗಳನ್ನಾಗಿಸಿದ ಆ ದೇವರ ಅಗಾಧಶಕ್ತಿಯನ್ನು ಓ ಜನರೇ, ನೀವೀಗ ನೋಡಿರಿ ! ನನ್ನ ಕೈಯಲ್ಲಿ ಸಿಕ್ಕಿರುವ ಇವನನ್ನು ಗಂಡೆಂದು ಭಾವಿಸಿರುವ ಯಾರು ಬೇಕಾದರೂ[೧] ನನ್ನ ಕೈಯಿಂದ ಬಿಡಿಸಲು ಸಿದ್ಧರಿದ್ದರೆ ಬರಬಹುದು' ಎಂದು ಹಂಗಿಸುತ್ತಾ , ಅವನ ರಕ್ತವನ್ನು ದೇವಶ್ರೇಷ್ಠನು ಅಮೃತವನ್ನು ಕುಡಿಯುವಂತೆ, ಕುಡಿದ. ಅನಂತರ ಇನ್ನೂ ಜೀವವಿದ್ದ ಆ ದುಃಶಾಸನನನ್ನು ಹಾಗೆಯೇ ಬಿಟ್ಟು ನಿರಾಯುಧನಾಗಿಯೇ ಶತ್ರುಸೈನ್ಯದ ಮಧ್ಯದಲ್ಲಿ ನರ್ತಿಸತೊಡಗಿದ. 'ಹಿಂದೆ ನಮ್ಮನ್ನು ಗೌಃ ಗೌಃ(ದನಗಳು,ದನಗಳು) ಎಂದು ಕರೆದವರ ಸುತ್ತಾ ನಾವೀಗ ಗೌಃ ಗೌಃ ಎಂದು ಕರೆದು ಕುಣಿಯುತ್ತಿರುವೆವು' ಎಂದು ಶತ್ರುಗಳ ಮಧ್ಯದಲ್ಲಿ ನರ್ತನ ಮಾಡುತ್ತಾ ಶತ್ರುಗಳ ಗುಂಪನ್ನು ತನ್ನ ಮೇಲೆ ಯುದ್ಧಕ್ಕೆ ಆಹ್ವಾನಿಸಿದ. ಕರ್ಣ, ಅಶ್ವತ್ಥಾಮ, ದುರ್ಯೋಧನ ಮೊದಲಾದ ಯಾರೂ ಆ ಸಮಯದಲ್ಲಿ ಭೀಮನನ್ನು ನೋಡಲೂ ಸಹ ಧೈರ್ಯಸಾಲ-ದವರಾಗಿದ್ದರು[೨]. ಭಯದಿಂದಾಗಿ ಕರ್ಣನ ಧನುಸ್ಸು ಅವನ ಕೈಯಿಂದ ಜಾರಿತು ; ಕಣ್ಣು-

೧. 'ಯಾರು ಬೇಕಾದರೂ' ಎಂದರೆ ತನ್ನಕಡೆಯವರೂ ಸೇರಿದಂತೆ ಯಾರು ಬೇಕಾದರೂ ಎಂಬ ಅರ್ಥವನ್ನು ತಿಳಿದುಕೊಂಡು ಕುಮಾರವ್ಯಾಸಭಾರತದಲ್ಲಿ ಅದಕ್ಕೆ ಉತ್ತರವೆಂಬಂತೆ ಅರ್ಜುನ ದುಃಶಾಸನನ ರಕ್ಷಣೆಗೆ ಮುಂದಾಗಿ ಶ್ರೀಕೃಷ್ಣ ಅವನನ್ನು ತಡೆದ ಎಂಬ ವಿವರ ಬಂದಿದೆ. ಅದು ಸರಿಯಲ್ಲ. ಇಲ್ಲಿ ಪ್ರಸಕ್ತವಾಗಿರುವುದು ದುಃಶಾಸನನ ರಕ್ಷಣೆಗೆ ಆಹ್ವಾನಿತರಾದದ್ದು ಕೌರವರ ಕಡೆಯರೇ ಹೊರತು ಪಾಂಡವರ ಕಡೆಯವರಲ್ಲ. ಇಂತಹ ಮುಖ್ಯ ವಿವರವನ್ನು ತಿಳಿಯದ ಅಜ್ಞನೂ ಅರ್ಜುನನಲ್ಲ. ಇದೆಲ್ಲಾ ಕವಿಯ ಕಲ್ಪನೆಗಳು ಮಾತ್ರ.

೨. 'ಆ ಸಮಯದಲ್ಲಿ ದ್ರೌಪದಿಯು ಅಲ್ಲಿಗೆ ಆಗಮಿಸಿ ಭೀಮಸೇನ ದುಃಶಾಸನನ ದಂತಪಂಕ್ತಿಯನ್ನು ಕಿತ್ತಿ ಅವನ ರಕ್ತದಿಂದ ದ್ರೌಪದಿಯ ಮುಡಿಯನ್ನು ಬಾಚಿ ಕಟ್ಟಿದ' ಎಂಬ ಮತ್ತೊಂದು ಕಲ್ಪನೆ ಪಂಪಭಾರತ (೧೨/೧೫೪-೧೫೭)ಹಾಗೂ ಕುಮಾರವ್ಯಾಸಭಾರತ ಕರ್ಣಪರ್ವ(೧೯/೭೪-೯೩)ದಲ್ಲಿದೆ :
ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂದ ಬಾರ್ಚಿ ಪೊದ। ಳ್ದೊಸಗೆಯಿನವನ ಕರುಳ್ಗಳೆ ಪೊಸವಾಸಿಗಮಾಗೆ ಕೃಷ್ಣೆಯಂ ಮುಡಿಯಿಸಿದಂ॥ -ಪಂಪಭಾರತ(೧೨/೧೫೫)
ಶೋಣಿತಾಂಬುವಿನಿಂದ ತರುಣಿಯ ವೇಣಿಯನು ನಾದಿದನು ದಂತಶ್ರೇಣಿಯಲಿ ಬಾಚಿದನು ಬೈತಲೆದೆಗೆದು ಚೆಲುವಿನಲಿ। ರಾಣಿ ಹುಸಿಯದೆ ಹೇಳು ಹೇಳೆನ್ನಾಣೆ ಸೊಗಸೇ ಖಳನ ದಂತಶ್ರೇಣಿ ತವೆ ಪಾವನವೆಯೆಂದನು ಪವನಸುತ ನಗುತ॥ -ಗದುಗಿನ ಭಾರತ, ಕರ್ಣಪರ್ವ(೧೯/೮೧)
ಇದೂ ಸಹ ಕೇವಲ ಕವಿಯ ನಿರ್ಮೂಲ ಕಲ್ಪನೆ ಮಾತ್ರ. ವಾಸ್ತವವಾಗಿ ಭೀಮ ಅಂತಹ ಪ್ರತಿಜ್ಞೆಯನ್ನು ಮಾಡಿರಲೇ ಇಲ್ಲ ಎಂಬುದು ಮಹಾಭಾರತದಿಂದ ತಿಳಿಯುವ ವಿವರ. ಸ್ತ್ರೀಯರಾರೂ ರಣರಂಗಕ್ಕೆ ಆಗಮಿಸಿದ ವಿವರ ಮಹಾಭಾರತದಲ್ಲಿ ಕಂಡುಬರುವುದಿಲ್ಲ.

ಗಳೆರಡೂ ಹಾಗೆಯೇ ಮುಚ್ಚಿಕೊಂಡವು. ಶಲ್ಯರಾಜನ ಉಪಚಾರದಿಂದ ಹೇಗೋ ಅವನು ಉಳಿದುಕೊಂಡದ್ದು , ಅವನು ಅರ್ಜುನನಿಂದಲೇ ಹತನಾಗಬೇಕೆಂಬ ಕಾರಣದಿಂದಲೇ. ಅಶ್ವತ್ಥಾಮರು ಅಲ್ಲಿ ನಿಲ್ಲದೆ ದೂರಕ್ಕೆ ಧಾವಿಸಿದರು. 'ಈ ರಣಯಜ್ಞದಲ್ಲಿ ನಾನೀಗ ಸೋಮ-ವನ್ನು ಪಾನಮಾಡಿದೆ. ನಾನು ಹರಿಗರ್ಪಿಸಬೇಕಾದ ಇಂತಹ [೧] ಮತ್ತೊಂದು ಪಶುವೆಂದರೆ ದುರ್ಯೋಧನನೇ', ಎಂದು ಹೇಳುತ್ತಾ ಆ ವೇಳೆ ಸತ್ತಿದ್ದ ದುಃಶಾಸನನನ್ನು ಬಿಟ್ಟು ದುರ್ಯೋಧನನ ಮೇಲೆ ನುಗ್ಗಿದ.

ಉಗ್ರರೂಪಿಯಾದ ಭೀಮನು ಹಾಗೆ ನುಗ್ಗುತ್ತಿದ್ದುದನ್ನು ಕಂಡು ಭಯಗೊಂಡ ದುರ್ಯೋಧನ ಅಲ್ಲಿಂದ ಕಾಲಿಗೆ ಬುದ್ಧಿ ಹೇಳಿದ. ಎರಡೂ ಕಡೆಯ ಸೈನ್ಯದಲ್ಲೂ, ಕೃಷ್ಣಾರ್ಜುನರ ಹೊರತು ಉಳಿದವರಾರೂ ಆ ಸಮಯದಲ್ಲಿ ರಣರಂಗದಲ್ಲಿ ಉಳಿಯಲೇ ಇಲ್ಲ. ಯುದ್ಧಭೂಮಿಯು ಮುಹೂರ್ತಕಾಲ ಬರಿದಾಗಿ ಹೋಯಿತು. ಭೀಮನು ಹರ್ಷದಿಂದ ಹುಲಿಯಂತೆ ಹೆಜ್ಜೆಯನ್ನು ಹಾಕುತ್ತಾ ಕುಣಿದಾಡಿದ. ಯುದ್ಧದಲ್ಲಿ ಶತ್ರುಗಳನ್ನು ಗೋವುಗಳಂತೆ ಸಂಕಲ್ಪಿಸಿ, ಹುಲಿಯಂತೆ ಕುಣಿಯುತ್ತಿದ್ದ ಭೀಮನನ್ನು ನೋಡಿ ಕೃಷ್ಣಾರ್ಜುನರು ಹರ್ಷದಿಂದ ನಲಿದರು. ಹೆಚ್ಚಿನ ಆನಂದದಿಂದ ಭೀಮನನ್ನು ಬಹಳವಾಗಿ ಹೊಗಳಿದರು. ಆ ರೀತಿ ಆ ಯುದ್ಧರಂಗವು ಭೀಮನಿಂದ ಬರಿದಾಗಿ, ಮುಹೂರ್ತ ಕಳೆದ ಮೇಲೆ, ದುರ್ಯೋ-ಧನನ ತಮ್ಮಂದಿರು ಬಾಣಗಳನ್ನು ಸುರಿಸುತ್ತಾ, ಬಲಶಾಲಿಯಾದ ಭೀಮನ ಮೇಲೆ ಬಿದ್ದರು. ಅವರೆಲ್ಲರನ್ನೂ ವೀರನಾದ ಭೀಮನು ಕ್ಷಣಾರ್ಧದಲ್ಲಿಯೇ ಬಾಣಗಳಿಂದ ತಲೆಗಳನ್ನು ಹಾರಿಸಿ ಯಮಪಟ್ಟಣಕ್ಕೆ ಕಳುಹಿಸಿಕೊಟ್ಟ. ಆ ದಿನ ಒಟ್ಟು ಇಪ್ಪತ್ತು ಜನ ದುರ್ಯೋಧನನ ತಮ್ಮಂದಿರು ಭೀಮನಿಂದ ಹತರಾದರು. ಉಳಿದವರು ಯುದ್ಧದಿಂದ ಪಲಾಯನ ಮಾಡಿದರು.

## ವೃಷಸೇನನ ವಧೆ

ಭೀಮನು ಈ ರೀತಿಯ ಅದ್ಭುತ ಕಾರ್ಯಗಳನ್ನು ಮಾಡುತ್ತಿರಲು, ಶತ್ರುಸಮೂಹವೆಲ್ಲ ಭಯಭೀತವಾಯಿತು. ಕರ್ಣನೂ ಸಹ ಭಯದಿಂದ ಕಣ್ಣುಮುಚ್ಚಿಕೊಂಡ. ಕರ್ಣನ ಮಗ ವೃಷಸೇನ ನಕುಲನ ಮೇಲೆ ಯುದ್ಧಕ್ಕೆ ಹೊರಟ. ನಕುಲನು ಅವನನ್ನು ಬಾಣಗಳಿಂದ ತಡೆಯಲು, ಅವನು ನಕುಲನನ್ನು ವಿರಥನನ್ನಾಗಿ ಮಾಡಿದ. ಆಗ ನಕುಲನು ಖಡ್ಗ ಗುರಾಣಿಗಳನ್ನು ಹಿಡಿದು ಅವನ ಮೂರುಸಾವಿರ ಅನುಯಾಯಿಗಳನ್ನು ಕೊಂದ. ವೃಷಸೇನನು ಅವನ ಗುರಾಣಿಯನ್ನು ಕತ್ತರಿಸಿ, ಭೀಮ ಅರ್ಜುನ ಮೊದಲಾದವರ ಮೇಲೆ ಬಾಣಗಳನ್ನು

---

೧. ಪಂಪಭಾರತ ಹಾಗೂ ಕುಮಾರವ್ಯಾಸಭಾರತದಲ್ಲಿ ಕೌರವರಲ್ಲಿ ತೊಂಭತ್ತೊಂಭತ್ತನೆಯವನಾಗಿ ದುಃಶಾಸನ ಹತನಾದ ಎಂಬ ಮಾತು ಬಂದಿದೆ. ಆದರೆ, ಅಂದೇ ಅನೇಕ ಕೌರವರು ಹತರಾದ ವಿವರ ಕರ್ಣಪರ್ವದಲ್ಲಿ ಬಂದಿದೆ. ಅಲ್ಲದೆ, ಯುದ್ಧದ ಕೊನೆಯ ದಿನವೂ ಸಹ ಇನ್ನಷ್ಟು ಕೌರವರು ಹತರಾದ ಉಲ್ಲೇಖವೂ ಮಹಾಭಾರತದಲ್ಲಿದೆ. ಅದ್ದರಿಂದ ಕುಮಾರವ್ಯಾಸಭಾರತದ ಆ ನಿರೂಪಣೆ ಮೂಲಮಹಾಭಾರತಕ್ಕೆ ಅನುಗುಣವಾದುದಲ್ಲ ಎಂದು ತಿಳಿಯುವುದು.

ಸುರಿಸಿದ. ಆಗ ಅರ್ಜುನನು ಅವನ ತಲೆ, ಬಾಹು, ತೊಡೆ ಮೂರನ್ನೂ ಒಂದೇ ಸಲಕ್ಕೆ ಕತ್ತರಿಸಿ ಅವನನ್ನು ಕೊಂದುಹಾಕಿದ.

## ಕರ್ಣಾರ್ಜುನರ ಯುದ್ಧ

ಒಂದೇ ಬಾಣದಿಂದ ಈ ರೀತಿ ತನ್ನ ಮಗನು ಹತನಾಗಲು, ಕರ್ಣನು ಅರ್ಜುನನ ಮೇಲೆ ಯುದ್ಧಕ್ಕೆ ಹೊರಟ. ಸರ್ವಾಸ್ತ್ರಪಾರಂಗತರಾದ ಆ ಇಬ್ಬರಲ್ಲಿ ಭಯಂಕರವಾದ ದ್ವಂದ್ವಯುದ್ಧ ಆರಂಭವಾಯಿತು. ಆಗ ಸುರರು, ಅಸುರರು ಹಾಗೂ ಇತರರು ಅವರಿಬ್ಬರ ಪಕ್ಷವನ್ನು ಕ್ರಮವಾಗಿ ವಹಿಸಿದವರಾಗಿ ಆಕಾಶದಲ್ಲಿ ನೆರೆದರು. ದೇವಾಸುರರ ಮಧ್ಯೆ ಅವರಿಬ್ಬರ ಸಲುವಾಗಿ ದೊಡ್ಡ ವಿವಾದವೇ ಉಂಟಾಯಿತು. ಆಗ ಶಿವನು ಬ್ರಹ್ಮದೇವರನ್ನು ಕುರಿತು – ''ಭೀಮ ದುರ್ಯೋಧನರು ಸುರಾಸುರರಿಗೆ ಮುಖ್ಯ ಆಶ್ರಯರಾಗಿರುವರು. ಅವರಿಬ್ಬರಿಗೂ ಕ್ರಮವಾಗಿ ಅರ್ಜುನ ಕರ್ಣರು ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯರಾದವರು. ಇವರಿಬ್ಬರಿಗಾಗಿ ಈಗ ಸುರರೂ, ಅಸುರರೂ, ತಾವು ಯುದ್ಧಮಾಡಲು ಬಯಸುತ್ತಿರುವರು. ಅದರಿಂದಾಗಿ ಜಗತ್ತಿಗೆ ನಾಶವುಂಟಾಗುವುದು. ಆದ್ದರಿಂದ ಅವರಿಬ್ಬರಿಗೂ ಯುದ್ಧ ಸಮವಾಗಿಯೇ ನಡೆಯಲಿ'' ಎಂದು ಕೇಳಿಕೊಂಡರು. ಆಗ ಬ್ರಹ್ಮದೇವರನ್ನು ಕುರಿತು ಇಂದ್ರನು – ''ಕೃಷ್ಣನಿರುವಲ್ಲಿಯೇ ಜಯವೆಂಬುದು ನಿಶ್ಚಯ ; ಕೃಷ್ಣನ ಸಂಕಲ್ಪ ಎಂದೂ ಸುಳ್ಳಾಗಲಾರದು. ಕೃಷ್ಣನಾದರೋ ಅರ್ಜುನನಿಗೆ ಜಯವನ್ನು ಕೊಡಲು ನಿಶ್ಚಯಿಸಿರುವನು'' ಎಂದು ಹೇಳಿ, ''ಅರ್ಜುನನಿಗೆ ಜಯವಾಗಲಿ, ಕರ್ಣನು ಮೃತನಾಗಲಿ'' ಎಂಬುದಾಗಿ ಪ್ರಾರ್ಥಿಸಿ, ನಮಸ್ಕರಿಸಿದ. 'ಆಗಲಿ' ಎಂದು ಹೇಳಿ ಬ್ರಹ್ಮದೇವರು ಅಸುರರನ್ನು, ದೇವತೆಗಳನ್ನು ಕುರಿತು ಅಪ್ಪಣೆ ಮಾಡಿದರು – ''ಕರ್ಣಾರ್ಜುನರ ನಿಮಿತ್ತದಿಂದಾಗಲೀ, ಭೀಮ–ದುರ್ಯೋಧನರ ನಿಮಿತ್ತದಿಂದಾಗಲೀ ನೀವು ಕಲಹ ಮಾಡಕೂಡದು ; ಸುಮ್ಮನೆ ಇವರ ಯುದ್ಧವನ್ನು ನೋಡತಕ್ಕದ್ದು.'' ಇದರಿಂದ ಶಾಂತಿಯನ್ನು ಹೊಂದಿ ಅವರೆಲ್ಲಾ ಇವರೀರ್ವರ ಯುದ್ಧವನ್ನು ನೋಡತೊಡಗಿದರು.

## ಅರ್ಜುನನಿಗೆ ಕೃಷ್ಣ ಭೀಮರಿಂದ ಸ್ಫೂರ್ತಿ

ಕರ್ಣಾರ್ಜುನರಿಬ್ಬರೂ ಮಹಾಸ್ತ್ರಗಳಿಂದಲೂ, ಶಸ್ತ್ರಗಳಿಂದಲೂ ಕಾದತೊಡಗಿದರು. ಭೀಮನು ರಥಾರೂಢನಾಗಿ ಅರ್ಜುನನ ರಕ್ಷಣೆಯನ್ನು ಮಾಡುತ್ತಿದ್ದ. ಸಾತ್ಯಕಿ ಧೃಷ್ಟದ್ಯುಮ್ನ ಮುಂತಾದ ಪ್ರಮುಖರು ಗಟ್ಟಿಯಾಗಿ ಗರ್ಜಿಸುತ್ತಾ ಅರ್ಜುನನನ್ನು ಸುತ್ತುಗಟ್ಟಿ ನಿಂತರು. ದುರ್ಯೋಧನ, ಅಶ್ವತ್ಥಾಮ ಮೊದಲಾದವರೆಲ್ಲ ಕರ್ಣನನ್ನು ಸುತ್ತುವರೆದು ಅವನನ್ನು ರಕ್ಷಿಸತೊಡಗಿದರು. ಆಗ ಕರ್ಣನು ಅರ್ಜುನನನ್ನು ಮೀರಿಸುತ್ತಾ , ಬಾಣಗಳ ರಾಶಿಯಿಂದ ಯುದ್ಧದಲ್ಲಿ ಅವನನ್ನು ನೋಯಿಸಿದ. ಆಗ ಗರ್ಜಿಸುತ್ತಾ ಭೀಮನು ಗದೆಯನ್ನು ಕೈಗೆತ್ತಿಕೊಳ್ಳುತ್ತಾ ಅರ್ಜುನನಿಗೆ ನುಡಿದ – ''ನೀನೀಗ ಶಕ್ತಿ ತಂದುಕೊಂಡು ಇವನನ್ನು ನಾಶಮಾಡು. ಇಲ್ಲವಾದಲ್ಲಿ ಇವನನ್ನು ನಾನೇ ಗದೆಯಿಂದ ಸದೆಬಡಿಯುವೆ.'' ಕೃಷ್ಣನೂ ಸಹ ಅವನಲ್ಲಿದ್ದ ನರಾವೇಶವನ್ನು ಬಹಳವಾಗಿ

ವ್ಯಕ್ತ ಮಾಡುತ್ತಾ ಎಚ್ಚರಿಸಿದ. ಆಗ ಶಕ್ತಿ ಹೆಚ್ಚಿಸಿಕೊಂಡ ಧನಂಜಯನು ಸುಯೋಧನ, ಅಶ್ವತ್ಥಾಮ, ಕೃಪ, ಕೃತವರ್ಮ ಮೊದಲಾಗಿ ಎಲ್ಲರನ್ನೂ ತನ್ನ ಬಾಣಗಳಿಂದ ವಿರಥರನ್ನಾಗಿ ಮಾಡಿ, ಒಳ್ಳೆಯ ಗರಿಗಳಿಂದ ಕೂಡಿದ ಬಾಣಗಳಿಂದ ನೋಯಿಸಿದ. ಅವರೆಲ್ಲ ಸ್ವಲ್ಪ ದೂರಕ್ಕೆ ತೆರಳಿ ಅವರಿಬ್ಬರ ಯುದ್ಧವನ್ನು ನೋಡುತ್ತ ನಿಂತರು.

ಅರ್ಜುನನ ಅಮಾನುಷವಾದ ಆ ರೀತಿಯ ಸಾಹಸವನ್ನು ನೋಡಿ ಅಶ್ವತ್ಥಾಮರು ದುರ್ಯೋಧನನ ಕೈಯನ್ನು ತಮ್ಮ ಕೈಯಲ್ಲಿ ಹಿಡಿದುಕೊಂಡು ವಿವೇಕ ಹೇಳಿದರು – ''ಭೀಮನ ಬಲವನ್ನಂತೂ ನೀನು ಕಂಡೇ ಇರುವೆ ! ಅದೇ ರೀತಿ ಈಗ ಅರ್ಜುನನಿಂದ ನಾವೆಲ್ಲ ಹೇಗೆ ಸೋತೆವು ಎಂಬುದನ್ನೂ ನೋಡಿರುವೆ ! ಇನ್ನು ವೈರ ಸಾಕು ; ಪಾಂಡವರೊಂದಿಗೆ ಸೇರಿ ರಾಜ್ಯವನ್ನು ಪಾಲಿಸು. ನಾನೂ ನಿನ್ನ ಜೊತೆ ಇರುವೆ. ನಾನು ತಡೆದಲ್ಲಿ ಧನಂಜಯ ಯುದ್ಧ ನಿಲ್ಲಿಸುವವನು. ಕೃಷ್ಣನಿಗೂ ವಿರೋಧ ಬೇಕಿಲ್ಲ. ಭೀಮ ಯಾವಾಗಲೂ ಕೃಷ್ಣನಂತೆ ನಡೆಯು–ವವನು. ಯುಧಿಷ್ಠಿರನು ಶಾಂತ ಸ್ವಭಾವದವನು ; ನಕುಲಸಹದೇವರೂ ಹಾಗೆಯೇ ; ನಿನ್ನ ಹಿತವನ್ನು ಬಯಸಿ ನಾನು ಹೀಗೆಲ್ಲಾ ನಿನಗೆ ಹೇಳುತ್ತಿರುವೆ ; ಭಯದಿಂದಲ್ಲ. ನಾನೂ ನನ್ನ ಮಾತುಲ ಕೃಪಾಚಾರ್ಯ, ಇಬ್ಬರೂ ಚಿರಂಜೀವಿಗಳಲ್ಲವೇ? ಆದ್ದರಿಂದ ನನ್ನ ಮಾತನ್ನು ನೀನು ಸಂದೇಹಿಸಬೇಕಿಲ್ಲ'' ಅದಕ್ಕೆ ಒಪ್ಪದೆ ದುರ್ಯೋಧನ ನುಡಿದ – ''ಭೀಮನೀಗ ದುಃಶಾಸನನ ರಕ್ತವನ್ನು ಕುಡಿದು, ಹುಲಿಯಂತೆ ಕುಣಿದ. ನಾನೆಂದೂ ಅವನೊಂದಿಗೆ ಸಂಧಿಯನ್ನು ಬಯಸಲಾರೆ''. ಅದಕ್ಕೆ ಅಶ್ವತ್ಥಾಮರು ಸುಮ್ಮನಾಗಿ ಬಿಟ್ಟರು.

## ಕರ್ಣಾವಸಾನ

ಕರ್ಣಾರ್ಜುನರು ಅಸ್ತ್ರಶಸ್ತ್ರಗಳ ಸುರಿಮಳೆಯಿಂದ ಆಕಾಶವನ್ನೇ ತುಂಬಿಸಿದರು. ಆಗ್ನೇಯ, ವಾರುಣ, ಐಂದ್ರ ಮೊದಲಾದ ಅಸ್ತ್ರಗಳನ್ನು ಒಬ್ಬರು ಮತ್ತೊಬ್ಬರ ವಧೆಗಾಗಿ ಪ್ರಯೋಗಿಸಿದರು. ಬ್ರಹ್ಮಾಸ್ತ್ರವನ್ನೂ ಸಹ ಇಬ್ಬರೂ ಪ್ರಯೋಗಿಸಿ ಗರ್ಜಿಸಿದರು. ಒಬ್ಬರು ಮತ್ತೊಬ್ಬರ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಪ್ರಯೋಗಿಸುತ್ತಾ ಕಾದಿದರು. ಕ್ರಮವಾಗಿ ಅರ್ಜುನನ ಬಲ ಹೆಚ್ಚುತ್ತಾ ಹೋಯಿತು. ಆ ವೇಳೆಗೆ ಕರ್ಣನು ನಾಗನಿಂದ ಕೂಡಿದ ಬ್ರಹ್ಮಾಸ್ತ್ರಯುಕ್ತವಾದ ಉತ್ತಮ ಬಾಣವೊಂದನ್ನು ಅರ್ಜುನನ ಮೇಲೆ ಪ್ರಯೋಗಿಸಿದ. ಕೃಷ್ಣನು ಅರ್ಜುನನ ರಥವನ್ನು ಭೂಮಿಯಲ್ಲಿ ಒತ್ತಿ ಕರ್ಣನ ಆ ಅಸ್ತ್ರವನ್ನು ವ್ಯರ್ಥವಾಗಿಸಿದ. ಅದು ಅರ್ಜುನನ ಕಿರೀಟವನ್ನು ಪುಡಿಮಾಡಿ, ಆಕಾಶಕ್ಕೆ ನೆಗೆಯಿತು. ಆ ಬಾಣದಲ್ಲಿದ್ದ ಸರ್ಪವೂ ಮೇಲಕ್ಕೆ ನೆಗೆಯಿತು. ಐದು ಅಂಗುಲಗಳಷ್ಟು ಆಳವಾಗಿ ಭೂಮಿಯಲ್ಲಿ ಅರ್ಜುನನ ರಥವು ತುಳಿಯಲ್ಪಡಲು, ಅರ್ಜುನನ ಕುಡಿಗಣ್ಣಿನ ಪ್ರದೇಶಕ್ಕೆ ಗುರಿಯಿಟ್ಟು ಬಿಡಲ್ಪಟ್ಟಿದ್ದ ಆ ನಾಗವು, ಅರ್ಜುನನ ಕಿರೀಟವನ್ನು ಪುಡಿ- ಮಾಡಿ, ಆಕಾಶಕ್ಕೆ ಹಾರಿತು. ಅದು ಆಕಾಶದಲ್ಲಿ ಹಾರುತ್ತಿದ್ದಂತೆಯೇ ಕೃಷ್ಣನಿಂದ ಹೇಳಲ್ಪಟ್ಟಂತಹ ಅರ್ಜುನನು ಆ ಪೂರ್ವವೈರಿಯಾದ ತಕ್ಷಕಪುತ್ರ ಅಶ್ವಸೇನನನ್ನು ಬಾಣಗಳಿಂದ ಕೊಂದು ಕೆಳಕ್ಕೆ ಬೀಳಿಸಿದ. ಕರ್ಣನ ಬ್ರಹ್ಮಾಸ್ತ್ರಕ್ಕೆ ಅಂತಹ ಹೆಚ್ಚಿನ ವೇಗವು ಪರಶುರಾಮರ ಅನುಗ್ರಹದಿಂದ ಲಬ್ಧವಾಗಿತ್ತು.

ಅರ್ಜುನನೊಂದಿಗೆ ಮಹಾಸ್ತ್ರಯುದ್ಧವನ್ನು ಮುಂದುವರೆಸಿದ ಕರ್ಣನ ರಥದ ಚಕ್ರವು ಶಾಪದಿಂದಾಗಿ ಭೂಮಿಯಲ್ಲಿ ಸಿಕ್ಕಿಹಾಕಿಕೊಂಡಿತು. ಪರಶುರಾಮರ ಶಾಪದಿಂದಾಗಿ ದಿವ್ಯಾಸ್ತ್ರಗಳಾವುವೂ ಅವನಿಗೆ ತೋಚದಾದವು[೧]. ರಥಚಕ್ರವನ್ನು ಮೇಲೆತ್ತುವ ಇಚ್ಛೆಯಿಂದ ಕರ್ಣನು ಅದಕ್ಕೆ ಸ್ವಲ್ಪ ಅವಕಾಶವನ್ನು ಕೊಡಲು ಕೇಳಿಕೊಂಡ ; ಕೃಷ್ಣನು ಅದಕ್ಕೆ ಒಪ್ಪಲಿಲ್ಲ. ಮುಕ್ಕಣ್ಣನಾದ ಶಿವನಿಂದ ಕೊಡಲ್ಪಟ್ಟಿದ್ದ ಅಂಜಲಿಕ ಎಂಬ ಅಸ್ತ್ರವನ್ನು ಪಾರ್ಥನು ಕೈಗೆತ್ತಿಕೊಂಡು, ಅದರಲ್ಲಿ ಸತ್ಯಧರ್ಮಗಳ ಫಲವನ್ನು ಸೇರಿಸಿ ಕರ್ಣನ ವಧೆಗೆಂದು ಬಾಣವನ್ನು ಪ್ರಯೋಗಿಸಿದ. ಘೋರವಾದ ಬಾಣವೊಂದನ್ನು ಸಂಧಾನ ಮಾಡುವ ಹವಣಿಕೆಯಲ್ಲಿದ್ದ ಕರ್ಣನ ಶಿರಸ್ಸನ್ನು ಅರ್ಜುನನ [೨]ಅಸ್ತ್ರವು ಕತ್ತರಿಸಿ ಹಾಕಿತು[೩]; ಅಪರಾಹ್ನಕಾಲದಲ್ಲಿ ಆಗಲೇ ವೃದ್ಧನಾಗಿದ್ದ ಕರ್ಣನ ತಲೆಯು ಮೇಲಕ್ಕೆ ಹಾರಿ ಕೆಳಗುರುಳಿತು.

ಕರ್ಣನು ಮೃತನಾಗಲು, ದೀನಮುಖದಿಂದ ಕೂಡಿದ ದುರ್ಯೋಧನನು ತನ್ನ ಸೇನೆ-ಯನ್ನು ಹಿಂತೆಗೆದುಕೊಂಡು, ಶಲ್ಯಸಮೇತನಾಗಿ ಶಿಬಿರಕ್ಕೆ ಹೊರಟ.

ಕರ್ಣನ ವಧೆಯನ್ನು ಕೇಳಿದ ಯುಧಿಷ್ಠಿರನು ಅಲ್ಲಿಗೆ ಬಂದು, ಅವನ ಶರೀರವನ್ನು ನೋಡಿದ. ಕೃಷ್ಣ , ಅರ್ಜುನ ಭೀಮರನ್ನು ಬಹಳವಾಗಿ ಪ್ರಶಂಸಿಸಿದ. ಉಳಿದ ಮಹಾವೀರ-ರೆಲ್ಲರೂ ಕೃಷ್ಣಸಮೇತರಾಗಿ ಶಿಬಿರಗಳನ್ನು ಸೇರಿ, ಕೃಷ್ಣನನ್ನು ಕೊಂಡಾಡುತ್ತಾ ಸುಖಿಸಿದರು.



---

೧. ಶಲ್ಯ ಕರ್ಣನಿಗೆ ಮತ್ತೊಮ್ಮೆ ಸರ್ಪಾಸ್ತ್ರವನ್ನು ಪ್ರಯೋಗಿಸಲು ಹೇಳಿದ್ದಾಗಿಯೂ, ಅದನ್ನು ತೊಟ್ಟ ಬಾಣವನ್ನು ಮತ್ತೆ ತೊಡೆನು ಎಂದು ಕುಂತಿಗೆ ವಚನ ನೀಡಿದ ಕಾರಣದಿಂದ ಕರ್ಣ ನಿರಾಕರಿಸಿದಾಗ ಶಲ್ಯ ಕರ್ಣನ ಸಾರಥ್ಯವನ್ನು ತೊರೆದು ನಡೆದ ಎಂಬ ಮತ್ತೊಂದು ಮೂಲಕ್ಕೆ ವಿರುದ್ಧವಾದ ನಿರೂಪಣೆ ಪಂಪಭಾರತ (ಆಗಳಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಣಾಗ್ನಿದಿಂಪತಪ್ಪೇಕ ಗ್ರಾಹಿಗಮೊರಂಟಂಗಂ ರಥಮನೆಸಗೆನೆಂದು ವರೂಥದಿಂದಿಳಿದು ಪೋಗೆ..-೧೨/೨೦೫) ಹಾಗೂ ಕುಮಾರವ್ಯಾಸಭಾರತ (ಮರುಳಲಾ ಮಾದ್ರೇಶ ಮರಳಿದ ಶರವ ತೊಡುವನೆ ಸ್ವೈರಿಸಿದ ಕಾತರಿಸಿ ವಾಘೆಯ ಬಿಸುಟು ಕಿಡಿಕಿಡಿವೋಗಿ ಖಾತಿಯಲಿ। ಅರಸನೊಲಿದಂತಾಗಲೆನ್ನದು ಮರುಳುತನ ಕುಲಹೀನನಲಿ ಗುಣವರಸಲೇಕೆಂದೆನುತ ಧುಮ್ಮಿಕ್ಕಿದನು ಧಾರುಣಿಗೆ। - ಕರ್ಣಪರ್ವ.೨೫/೪೨) ದಲ್ಲಿದೆ. ಆದರೆ ಕರ್ಣ ಕುಂತಿಗೆ ಆ ರೀತಿ ವಚನ ನೀಡಿದ್ದ ವಿವರವೇ ಮೂಲಭಾರತದಲ್ಲಿಲ್ಲ ಎಂಬುದನ್ನು ಈಗಾಗಲೇ ಸ್ಪಷ್ಟಪಡಿಸಲಾಗಿದೆ. ಶಲ್ಯನು ಕರ್ಣನ ಸಾರಥ್ಯವನ್ನು ತೊರೆದ ವಿವರವೂ ಸಹ ಮೂಲದಲ್ಲಿಲ್ಲ. ಅವನು ಸಾರಥ್ಯ ತೊರೆಯದಿದ್ದಲ್ಲಿ ತಾನೇ ರಥದಿಂದ ಕೆಳಕ್ಕಿಳಿದು ಅದನ್ನು ಮೇಲೆತ್ತುವ ಕಾರ್ಯಕ್ಕೆ ಏಕೆ ತೊಡಗಲಿಲ್ಲ? ಎಂಬ ಪ್ರಶ್ನೆಗೆ ಅದು ಸಾರಥಿಯ ಕೆಲಸವಾಗಿರದೆ ರಥಿಯದೇ ಕೆಲಸ ಎಂಬುದೇ ಉತ್ತರ. ಅಲ್ಲದೇ, ಸಾರಥಿಯು ಕುದುರೆಗಳನ್ನು ಓಡಿಸುವ ಕಾರ್ಯದಲ್ಲಿ ನಿರತನಾದಾಗ ಮಾತ್ರವೇ ರಥಿಗೆ ರಥದ ಗಾಲಿಯನ್ನು ಮೇಲೆತ್ತುವ ಕಾರ್ಯ ಯಶಸ್ವಿಯಾಗಬಲ್ಲದು ಎಂಬುದು ಸಾಮಾನ್ಯ ತಿಳುವಳಿಕೆಗೂ ಸ್ಫುಟಪಡುವ ವಿವರ.

೨. ಕರ್ಣನು ರಥದಿಂದ ಕೆಳಗಿಳಿದಿದ್ದಾಗ ಅವನನ್ನು ಕೊಲ್ಲಿಸಲು ಮುಖ್ಯಕಾರಣ ಪರಶುರಾಮರ ವಿಜಯ ಎಂಬ ಆ ರಥದಲ್ಲಿ ಕುಳಿತಿರುವವರೆಗೂ ಅವನಿಗೆ ಸಾವಿಲ್ಲ ಎಂಬ ವರ ಕಾರಣವಾಗಿತ್ತು ಎಂದು ತಿಳಿಯಬೇಕು.

೩. ಕರ್ಣನು ಅರ್ಜುನನ ಬಾಣದ ಪೆಟ್ಟಿಗೆ ಕೂಡಲೇ ಸಾಯಲಿಲ್ಲ; ಅದಕ್ಕೆ ಅವನ ಹೃದಯದಲ್ಲಿದ್ದ ಅಮೃತಕಲಶ ಕಾರಣವಾಗಿತ್ತು ; ಕೃಷ್ಣ ಆಗ ಬ್ರಾಹ್ಮಣರೂಪದಲ್ಲಿ ಕರ್ಣನ ಬಳಿಗೆ ತೆರಳಿ ಅದನ್ನು ದಾನವಾಗಿ ಪಡೆದುಕೊಂಡ ; ಕೂಡಲೇ ಕರ್ಣ ಮೃತನಾದ ಎಂಬ ಕೆಲವರ ಹೇಳಿಕೆಯೂ ಸರಿಯಲ್ಲ. ಕರ್ಣನ ಹೃದಯದಲ್ಲಿ ಹಾಗೆ ಅಮೃತಕಲಶವಿದ್ದ ವಿವರ ಮೂಲಭಾರತದಲ್ಲೆಲ್ಲೂ ಕಂಡುಬರುವುದಿಲ್ಲ ಎಂಬುದನ್ನು ಗಮನಿಸಬೇಕು.

# ಶಲ್ಯ ಪರ್ವ

## ಹದಿನೆಂಟನೆಯ ದಿನದ ಯುದ್ಧ

ರಾತ್ರಿ ಕಳೆದು ಬೆಳಗಾಯಿತು. ಅಶ್ವತ್ಥಾಮರ ಅನುಮತಿಯನ್ನು ಪಡೆದುಕೊಂಡು ದುರ್ಯೋಧನನು ಶಲ್ಯನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು, ಯುದ್ಧಕ್ಕೆ ಹೊರಟ. ಹರ್ಷದಿಂದ ಪಾಂಡವರೂ ಸಹ ಅವನನ್ನು ಎದುರಿಸಿ ಬಂದರು.

ಪಾಂಡವರಿಗೆ ಶತ್ರುಗಳೊಂದಿಗೆ ಘೋರವಾದ, ಉತ್ತಮವಾದ ಯುದ್ಧವೇ ನಡೆಯಿತು. ಮುಂಭಾಗದಲ್ಲಿ ಭೀಮನೂ, ಮಧ್ಯದಲ್ಲಿ ಧರ್ಮರಾಜನೂ, ಹಿಂಭಾಗದಲ್ಲಿ ಕೃಷ್ಣರಕ್ಷಿತನಾದ ಅರ್ಜುನನೂ ಪಾಂಡವರ ಸೈನ್ಯದಲ್ಲಿದ್ದರು. ರಾಜನಿಗೆ ಚಕ್ರರಕ್ಷಕರಾಗಿ ನಕುಲಸಹದೇವರು ಇದ್ದರು. ಧೃಷ್ಟದ್ಯುಮ್ನ, ಸಾತ್ಯಕಿ ಇವರೆಲ್ಲ ರಾಜನ ಎರಡೂ ಪಕ್ಕಗಳಲ್ಲಿ ಅನುಸರಿಸಿ ನಡೆದಿದ್ದರು. ಕೌರವರ ಸೈನ್ಯದ ಮುಂಭಾಗದಲ್ಲಿ ಅಶ್ವತ್ಥಾಮರೂ, ಮಧ್ಯದಲ್ಲಿ ಶಲ್ಯನೂ, ಹಿಂಭಾಗದಲ್ಲಿ ತಮ್ಮಂದಿರೊಂದಿಗೆ ದುರ್ಯೋಧನನೂ, ಶಲ್ಯನಿಗೆ ಚಕ್ರರಕ್ಷಕರಾಗಿ ಶಕುನಿಯೂ, ಅವನ ಮಗನೂ, ಎರಡೂ ಪಕ್ಕಗಳಲ್ಲಿ ಕೃಪ, ಕೃತವರ್ಮರೂ ಇದ್ದರು.

ಭೀಮ ಅಶ್ವತ್ಥಾಮರಿಗೂ, ಧರ್ಮರಾಜ ಶಲ್ಯರಿಗೂ, ಭಯಾನಕವಾದ ಯುದ್ಧ ನಡೆದು, ಅದರಲ್ಲಿ ಭೀಮನು ಸುಲಭವಾಗಿಯೇ ಅಶ್ವತ್ಥಾಮರನ್ನು ಬಾಣಗಳಿಂದ ವಿರಥರನ್ನಾಗಿಸಿದ. ಶಲ್ಯನಿಂದ ಧರ್ಮರಾಜನ ರಥ ಮುರಿಯಿತು. ಆಗ ಅರ್ಜುನನು ಶಲ್ಯನನ್ನು ಎದುರಿಸಿ ಬಂದ. ಅವರಿಬ್ಬರಿಗೂ ರೋಮಾಂಚಕವಾದ ಮಹಾಯುದ್ಧ ನಡೆಯಿತು. ಬೇರೊಂದು ರಥವನ್ನೇರಿ ಅಶ್ವತ್ಥಾಮರು ಭೀಮನ ಮೇಲೆ ಮತ್ತೆ ಬಂದರು. ದುರ್ಯೋಧನನೂ ಬಾಣಗಳನ್ನು ಸುರಿಸುತ್ತಾ ಭೀಮನನ್ನು ಅಡ್ಡಗಟ್ಟಿದ. ಅವರಿಬ್ಬರನ್ನು ತನ್ನ ಬಾಣಗಳಿಂದ ಭೀಮನು ತಡೆದ. ಅವರಿಬ್ಬರೊಂದಿಗೆ ಅವನಿಗೆ ನಡೆದ ಯುದ್ಧವು ಭಯಾನಕವಾಗಿಯೇ ಇತ್ತು. ದುರ್ಯೋಧನನ ತಮ್ಮಂದಿರನ್ನು ದ್ರೌಪದಿಯ ಮಕ್ಕಳು, ಯುಯುತ್ಸುವಿನ ಜೊತೆ ಸೇರಿ, ಶಿಖಂಡಿ ಮೊದಲಾದ ಮಾತುಲರೊಂದಿಗೆ ಸೇರಿ, ತಡೆದರು. ಸಹದೇವ ಶಕುನಿಗೂ, ಉಲೂಕ ನಕುಲರಿಗೂ, ಧೃಷ್ಟದ್ಯುಮ್ನ ಕೃತವರ್ಮರಿಗೂ, ಸಾತ್ಯಕಿ ಕೃಪರಿಗೂ ಆಶ್ಚರ್ಯಕರವಾದ ಯುದ್ಧ ನಡೆಯಿತು.

### ಶಲ್ಯನ ಪರಾಕ್ರಮ

ಶಲ್ಯನು ತನ್ನ ಬಾಣಗಳಿಂದ ಅರ್ಜುನನನ್ನು ದಿಗ್ಭ್ರಾಂತನನ್ನಾಗಿಸಿದ. ಅರ್ಜುನನೂ ತನ್ನ ಬಾಣಗಳಿಂದ ಯುದ್ಧದಲ್ಲಿ ಮೆರೆಯುತ್ತಿದ್ದ ಶಲ್ಯನನ್ನು ನೋಯಿಸಿದ. ಅವರಿಬ್ಬರಿಗೂ ದೇವಾಸುರಯುದ್ಧದಂತಹ ಯುದ್ಧವು ಬಹಳ ಕಾಲದವರೆಗೆ ಸಮವಾಗಿಯೇ ನಡೆಯಿತು. ಅನಂತರ ಮದ್ರರಾಜನು ವಜ್ರಸದೃಶವಾದ ಬಾಣವೊಂದನ್ನು ಕೈಗೆತ್ತಿಕೊಂಡು, ಅದನ್ನು ಅರ್ಜುನನ ಎದೆಗೆ ಹೊಡೆದು ನೋಯಿಸಿದ. ಆ ಪೆಟ್ಟಿಗೆ ಅರ್ಜುನ ಮೂರ್ಛಿತನಾದ. ಮತ್ತೆ ಎಚ್ಚೆತ್ತು ಅರ್ಜುನನು ಧೀಮಂತನಾದ ಮದ್ರರಾಜನ ಬಿಲ್ಲನ್ನು ಕತ್ತರಿಸಿದ. ಅವನು ಮತ್ತೊಂದು

ಬಿಲ್ಲನ್ನು ತೆಗೆದುಕೊಂಡು ಅರ್ಜುನನ ಮೇಲೆ ಸೂರ್ಯಾಸ್ತ್ರ, ಯಮಾಸ್ತ್ರ ಪರ್ಜನ್ಯಾಸ್ತ್ರಗಳನ್ನು ಪ್ರಯೋಗಿಸಿದ. ಅವನ್ನೆಲ್ಲ ಅರ್ಜುನನು ಐಂದ್ರಾಸ್ತ್ರದಿಂದ ಭಗ್ನಪಡಿಸಿದ. ಮತ್ತೊಮ್ಮೆ ಕೋಪದಿಂದ ಅರ್ಜುನನು ಶಲ್ಯರಾಜನ ಬಿಲ್ಲನ್ನು ತುಂಡರಿಸಿದ. ಶಲ್ಯನು ಗದೆಯನ್ನು ಕೈಗೆತ್ತಿಕೊಂಡು ಅದನ್ನು ಅರ್ಜುನನ ವಕ್ಷಸ್ಥಳದ ಮೇಲೆ ಪ್ರಯೋಗಿಸಿದ. ಅದರ ಪೆಟ್ಟಿಗೆ ಅರ್ಜುನನು ಮೂರ್ಛಿತನಾದ. ಕೌರವರೆಲ್ಲರು ಆಗ ಕೂಗಾಡಿ ಹರ್ಷಿಸಿದರು. ಪ್ರಜ್ಞೆ ಮರಳಿದ ಅರ್ಜುನನು ಮತ್ತೆ ಶಲ್ಯನನ್ನು ನೋಯಿಸಿದ. ಮೈಮೇಲೆಲ್ಲ ಪೆಟ್ಟುಗಳು ಬಿದ್ದು ನೊಂದ ಶಲ್ಯನು ಹಾಗೆಯೇ ಧ್ವಜಕ್ಕೆ ಒರಗಿದ. ಸ್ವಲ್ಪ ಸುಧಾರಿಸಿಕೊಂಡು ಯಮದಂಡ ಸದೃಶವಾದ ಮತ್ತೊಂದು ಬಾಣವನ್ನು ತೆಗೆದುಕೊಂಡು ಅರ್ಜುನನ ವಕ್ಷಸ್ಥಲಕ್ಕೆ ಅದನ್ನು ಗುರಿಯಿಟ್ಟು ಹೊಡೆದ. ಅದರಿಂದ ಬಹಳ ನೊಂದ ಅರ್ಜುನನು ಧ್ವಜಕ್ಕೆ ಒರಗಿ ಸುಧಾರಿಸಿಕೊಳ್ಳಬೇಕಾಯಿತು. ಅನಂತರ ಮದ್ರರಾಜನ ಬಿಲ್ಲನ್ನು ಕತ್ತರಿಸಿ, ಅವನ ಛತ್ರ, ಧ್ವಜ ಹಾಗೂ ಸಾರಥಿಯನ್ನೂ ಸಹ ವೇಗದಿಂದ ನಾಶ ಮಾಡಿದ.

## ಶಲ್ಯನ ವಧೆ

ಧರ್ಮರಾಜನು ಆ ವೇಳೆಗೆ ಮತ್ತೊಂದು ರಥವನ್ನೇರಿ ಬಂದು, ನಾಲ್ಕು ಉತ್ತಮ-ಬಾಣಗಳಿಂದ ಶಲ್ಯನ ನಾಲ್ಕೂ ಕುದುರೆಗಳನ್ನು ಕೊಂದು ಹಾಕಿದ. ಬೇರೊಂದು ರಥವನ್ನೇರಿ-ಕೊಂಡ ಶಲ್ಯನು ಒಟ್ಟಾಗಿ ಬಂದ ಅನೇಕ ಪಾಂಡವವೀರರನ್ನು ಬಾಣಗಳ ಮಳೆಯಿಂದ ಮುಚ್ಚಿದ ; ಧರ್ಮರಾಜನನ್ನು ವಿರಥನನ್ನಾಗಿ ಮಾಡಿದ. ಸಾತ್ಯಕಿ, ಧೃಷ್ಟದ್ಯುಮ್ನರ ಕುದುರೆಗಳು, ನಕುಲಸಹದೇವರ ಬಿಲ್ಲುಗಳು ಅವನ ಹೊಡೆತಕ್ಕೆ ಬಲಿಯಾದವು. ಶಲ್ಯ ತನ್ನ ಶಂಖವನ್ನು ಮೊಳಗಿಸಿದ.

ಶಲ್ಯನು ಆ ರೀತಿ ರಣರಂಗದಲ್ಲಿ ಬಲಗೊಳ್ಳುವುತ್ತಿರುವುದನ್ನು ಕಂಡ ಭೀಮಸೇನನು ವೇಗದಿಂದ ಕಾಣಿಸಿಕೊಂಡು, ಅನೇಕ ಬಾಣಗಳಿಂದ ಕ್ಷಣಾರ್ಧದಲ್ಲಿ ಶಲ್ಯನನ್ನು ವಿರಥನನ್ನಾಗಿ ಮಾಡಿದ. ಬೇರೊಂದು ರಥವನ್ನೇರಿ ಧಾವಿಸಿದ ಶಲ್ಯನನ್ನು ಮರ್ಮಸ್ಥಳಗಳಲ್ಲಿ ಬಾಣಗಳನ್ನು ಪ್ರಯೋಗಿಸಿ ನೋಯಿಸಿ, ಮತ್ತೆ ವಿರಥನನ್ನಾಗಿ ಮಾಡಿದ. ಮೂರನೆಯ ರಥವನ್ನು ಏರಿ ಶಲ್ಯ ಮತ್ತೆ ಧಾವಿಸಿದ. ಆಗ ಅವನು ತೆಗೆದುಕೊಂಡ ಆಯುಧಗಳನ್ನೆಲ್ಲ ಭೀಮ ಕ್ಷಣದಲ್ಲಿ ನಾಶಗೊಳಿಸಿ, ಮರ್ಮಸ್ಥಳಗಳಲ್ಲಿ ಹೊಡೆದು ಬಹಳವಾಗಿ ನೋಯಿಸಿದ. ಆಗ ಶಲ್ಯನು ಮುಷ್ಟಿಯನ್ನು ಮೇಲೆತ್ತಿಕೊಂಡು ಧರ್ಮರಾಜನ ಮೇಲೆಯೇ ನುಗ್ಗಿದ. ಭೀಮನಿಂದ ಮರ್ಮಸ್ಥಳಗಳಲ್ಲಿ ಹೊಡೆಯಲ್ಪಟ್ಟಿದ್ದ, ಕವಚವನ್ನು ಕಳೆದುಕೊಂಡಿದ್ದ, ಉಸಿರು ಮಾತ್ರವೇ ಉಳಿದುಕೊಂಡಿದ್ದ, ಸಾಯಲೆಂದೇ ಹೊರಟಿದ್ದ, ತನ್ನ ಮೇಲೆ ನುಗ್ಗುತ್ತಿದ್ದ ಅವನನ್ನು ನೋಡಿ, ಬೇರೊಂದು ರಥವನ್ನು ಏರಿದ್ದ ಧರ್ಮರಾಜನು ಅವನನ್ನು ಕೊಲ್ಲಲೆಂದು ಅಮೋಘವಾದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡ. ದಿವ್ಯಾಸ್ತ್ರಗಳಿಂದ ಅದನ್ನು ಮಂತ್ರಿಸಿ, ಸತ್ಯಧರ್ಮಗಳ ಫಲವನ್ನು ತುಂಬಿಸಿ, ಆ ಶಕ್ತಿಯನ್ನು ಶಲ್ಯನ ಹೃದಯಕ್ಕೆ ಹೊಡೆದ. ಎದೆ ಸೀಳಲ್ಪಟ್ಟು ಮುಖ

ಮೇಲೆ ಮಾಡಿ ಭೂಮಿಯ ಮೇಲೆ ಶಲ್ಯನು ಒರಗಿದ; ಸತ್ಯಧರ್ಮಗಳಲ್ಲಿ ರತನಾಗಿದ್ದ ಅವನು ಇಂದ್ರನ ಅತಿಥಿಯಾದ.

## ಕೌರವಸೇನೆಯ ವಿನಾಶ - ಶಕುನಿ ಮೊದಲಾದವರ ವಧೆ

ಹೀಗೆ ವೀರನಾದ ಶಲ್ಯನು ಹತನಾಗಲು, ಸುಶರ್ಮನು ಅರ್ಜುನನ ಮೇಲೆ ನುಗ್ಗಿದ. ಉಳಿದ ಸಂಶಪ್ತಕರೊಂದಿಗೆ ಅವನನ್ನೂ ಅರ್ಜುನನು ಮೃತ್ಯುವಿನ ಬಾಯಿಗೆ ಹಾಕಿದ. ಅಳಿದುಳಿದ ದುರ್ಯೋಧನನ ತಮ್ಮಂದಿರನ್ನೆಲ್ಲ ಭೀಮನು ಸಂಹರಿಸಿದ ; ಸೇನೆಯನ್ನೂ ಸಹ ನಿಃಶೇಷವಾಗಿ ಸಂಹರಿಸಿದ. ಉಲೂಕನನ್ನೂ, ಅತಿಪಾಪಿಯಾದ ಶಕುನಿಯನ್ನೂ ಸಹದೇವನು ಕೊಂದುಹಾಕಿದ. ಅಶ್ವತ್ಥಾಮ ಕೃತವರ್ಮರನ್ನು ಭೀಮಾರ್ಜುನರು ಬಹಳ ಸಲ ಮತ್ತೆ ಮತ್ತೆ ವಿರಥರನ್ನಾಗಿ ಮಾಡಿ, ಹಿಂಸಿಸಿ, ಓಡಿಸಿದರು. ಭಯಗೊಂಡ ಅವರೆಲ್ಲ ಕಾಡನ್ನು ಸೇರಿಕೊಂಡರು. ಸಾತ್ಯಕಿಯಿಂದ ಹಿಡಿಯಲ್ಪಟ್ಟ ಸಂಜಯನನ್ನು ಅಪರಿಮಿತ ಶಕ್ತಿಶಾಲಿಗಳಾದ ವ್ಯಾಸರು ಬಂದು ಬಿಡಿಸಿದರು.

## ದುರ್ಯೋಧನನ ಪಲಾಯನ

ದುರ್ಯೋಧನನು ಒಬ್ಬಂಟಿಗನಾಗಿಯೇ ಪಾಂಡವರ ಮೇಲೆ ಎರಗಿದ. ಅವರಿಗೂ ಅವನಿಗೂ ಅನೇಕ ಬಾಣಗಳಿಂದ ಘೋರವಾದ ಯುದ್ಧವೇ ನಡೆದು, ಅದರಲ್ಲಿ ಅವನು ಅರ್ಜುನನನ್ನು ಮೂರ್ಛಿತನನ್ನಾಗಿಸಿದ. ಯುಧಿಷ್ಠಿರ ನಕುಲಸಹದೇವರನ್ನೂ ವಿರಥರನ್ನಾಗಿ ಮಾಡಿದ. ಆಗ ಭೀಮಸೇನನು ಅವನ ರಥವನ್ನು ಮುರಿಯಲು, ಅವನು ಆನೆಯನ್ನೇರಿ ಮತ್ತೆ ಬಂದು, ಸಾತ್ಯಕಿ, ಶಿಖಂಡಿ, ನಕುಲಸಹದೇವರು ಮತ್ತು ಯುಧಿಷ್ಠಿರ ಇವರೆಲ್ಲರನ್ನೂ ಆಯುಧಹೀನರನ್ನಾಗಿ ಮಾಡಿದ. ಭೀಮನ ಬಾಣಗಳ ಪೆಟ್ಟಿಗೆ ದುರ್ಯೋಧನನ ಆನೆಯು ಪ್ರಾಣ ಬಿಡಲು, ಅಂಜಿಕೆ ತೊರೆದ ದುರ್ಯೋಧನನು ಒಂದು ಕುದುರೆಯನ್ನೇರಿ, ಪ್ರಾಸವೆಂಬ ಆಯುಧವನ್ನು ಹಿಡಿದುಕೊಂಡು ಪಾಂಡವಸೈನಿಕರನ್ನು ಕೊಲ್ಲುತ್ತಾ , ಅದರಿಂದ ಸಾತ್ಯಕಿಯನ್ನು ಹೊಡೆದ. ಆ ಪೆಟ್ಟಿಗೆ ಸಾತ್ಯಕಿ ಮೂರ್ಛಿತನಾದ. ನಕುಲಸಹದೇವರೂ ಅದರ ಪೆಟ್ಟಿಗೆ ಮೈಮರೆತು ರಥದಲ್ಲಿ ಒರಗಿದರು. ಆವನು ಧರ್ಮರಾಜನತ್ತ ಹೊರಟಿದ್ದನ್ನು ನೋಡಿ, ಭೀಮನು ಅವನ ಕುದುರೆಯನ್ನು ಹೊಡೆದು ಕೊಂದು, ಪ್ರಾಸಾಯುಧವನ್ನು ಕತ್ತರಿಸಿದ. ಆಗ ದುರ್ಯೋಧನನು ತನ್ನ ದೊಡ್ಡ ಗದೆಯನ್ನು ಕೈಗೆತ್ತಿಕೊಂಡು ಅಲ್ಲಿಂದ ತಪ್ಪಿಸಿಕೊಂಡು, [೧]ದ್ವೈಪಾಯನವೆಂಬ ದೊಡ್ಡ ಕೊಳದೊಳಗೆ ಪ್ರವೇಶಿಸಿದ.

ಒಟ್ಟು ಯುದ್ಧದಲ್ಲಿ ಭೀಮನಿಂದ ಕೌರವರ ಆರು ಅಕ್ಷೋಹಿಣೀಸೇನೆ ಹತವಾಯಿತು. ಕಳಿಂಗರ ಅರ್ಧ ಅಕ್ಷೋಹಿಣಿ ಸೇನೆಯ ಹೊರತು ಉಳಿದ ಐದು ಅಕ್ಷೋಹಿಣೀಸೇನೆಯು ಅರ್ಜುನನಿಂದ ಹತವಾಯಿತು. ಇತರರಿಂದ ಉಳಿದ ಸೇನೆ ಅಳಿದಿತ್ತು.

---

೧. ದುರ್ಯೋಧನ ಪ್ರವೇಶಿಸಿದ್ದು ವೈಶಂಪಾಯನಸರೋವರ ಎಂಬ ಪಂಪಭಾರತದಲ್ಲಿನ ಉಲ್ಲೇಖ ಸರಿಯಲ್ಲ; ಆ ಹೆಸರಿನ ಸರೋವರದ ಪ್ರಸ್ತಾಪವೇ ಮೂಲಮಹಾಭಾರತದಲ್ಲಿ ಕಾಣಸಿಗುವುದಿಲ್ಲ.

ಪಾಂಡವರ ಸೈನ್ಯದ ನಾಲ್ಕು ಅಕ್ಷೋಹಿಣಿಯನ್ನು ಅಶ್ವತ್ಥಾಮರು ಕೊಂದರು. ಉಳಿದದ್ದನ್ನು ದ್ರೋಣ, ಕರ್ಣ, ಭೀಷ್ಮ ದುರ್ಯೋಧನ, ಭಗದತ್ತ ಇವರೆಲ್ಲ ಕ್ರಮವಾಗಿ ಕೊಂದರು.

## ದ್ವೈಪಾಯನಸರೋವರದಲ್ಲಿ ದುರ್ಯೋಧನ

ಇತ್ತ ಜಯಗಳಿಸಿದ ಮಹಾತ್ಮರಾದ ಪಾಂಡವರೆಲ್ಲ ಜೋರಾಗಿ ಸಿಂಹನಾದ ಮಾಡುತ್ತಿರಲು, ಅತ್ತ ಹಾಗೆ ದ್ವೈಪಾಯನ ಸರೋವರವನ್ನು ಪ್ರವೇಶಿಸಿದ ದುರ್ಯೋಧನನು ಜಲಸ್ತಂಭವನ್ನು ಮಾಡಿ ಮಂತ್ರಗಳನ್ನು ಜಪಿಸತೊಡಗಿದ. ದುರ್ವಾಸರು ಕೊಟ್ಟಿದ್ದ ಆ ಮಂತ್ರಗಳು ಮೃತ-ಸಂಜೀವನಪ್ರದವಾಗಿದ್ದವು. 'ನೀರಿನಲ್ಲಿದ್ದು ಏಳುದಿನಗಳ ಕಾಲ ಅವುಗಳನ್ನು ಜಪಿಸಿ, ಅವುಗಳಿಂದ, ಸತ್ತವರನ್ನೆಲ್ಲ ಈ ದುರ್ಯೋಧನನು ಬದುಕಿಸಿಕೊಳ್ಳುವನು ; ಹಾಗೆ ಬದುಕು-ವವರೆಲ್ಲ ಅವಧ್ಯರೂ ಆಗುವರು.' ಈ ರೀತಿಯಾಗಿ ಅವನ ವಿದ್ಯಾಬಲವನ್ನು ತಿಳಿದು, ಪಾಂಡವರು, ಅವನನ್ನು ಹುಡುಕುತ್ತಾ ಹೊರಟು, ವ್ಯಾಧರಿಂದ ಅವನು ಆ ಸರೋವರದಲ್ಲಿ ಸೇರಿದ್ದನ್ನು ತಿಳಿದುಕೊಂಡರು. ಕೃಷ್ಣನನ್ನು ಮುಂದಿಟ್ಟುಕೊಂಡು ಅಲ್ಲಿಗೆ ಬಂದ ಅವರು, ನೀರಿನಿಂದ ಹೊರಗೆ ಬಂದು ದುರ್ಯೋಧನನು ಕೃಪ, ಕೃತವರ್ಮ ಮತ್ತು ಅಶ್ವತ್ಥಾಮರೊಂದಿಗೆ ಮಂತ್ರಾಲೋಚನೆ ನಡೆಸುತ್ತಿದ್ದುದನ್ನು ನೋಡಿದರು. ಪಾಂಡವರನ್ನು ನೋಡುತ್ತಿದ್ದಂತೆಯೇ ಆ ಮೂವರೂ ಅಲ್ಲಿಂದ ಪಲಾಯನ ಮಾಡಿದರು. ದುರ್ಯೋಧನನು ನೀರಿನೊಳಗೆ ಪ್ರವೇಶಿಸಿದ. ಆಗ ಧರ್ಮರಾಜನು ಕೃಷ್ಣನ ಅಪ್ಪಣೆಯಂತೆ ಅವನನ್ನು ತುಂಬಾ ನಿಷ್ಠುರ ನುಡಿಗಳಿಂದ ಯುದ್ಧಕ್ಕೆ ಆಹ್ವಾನಿಸಿದ.

ಕೋಪಗೊಂಡ ದುರ್ಯೋಧನನು ಏಟು ತಿಂದ ಹಾವಿನಂತೆ ಬುಸುಗುಡುತ್ತಾ , ಶಾಠ್ಯ-ದಿಂದ, 'ನಾನು ತಪಸ್ಸಿಗಾಗಿ ಕಾಡಿಗೆ ತೆರಳುವೆ ; ನೀನೇ ಎಲ್ಲ ಭೂಮಿಯನ್ನೂ ಆಳಿಕೋ' ಎಂದು ನುಡಿದ. ಧರ್ಮರಾಜನು ಅವನನ್ನು ಮತ್ತೆ - ''ಕೃಷ್ಣನು ನಿಮ್ಮಲ್ಲಿಗೆ ಬಂದಿದ್ದಾಗ ಸೂಜಿಯ ಮೊನೆಯಷ್ಟು ಭೂಮಿಯನ್ನೂ ಸಹ ಎಂತಹ ಪ್ರಸಂಗ ಬಂದಾಗಲೂ ನಮಗೆ ಕೊಡಲು ಇಚ್ಛಿಸುವುದಿಲ್ಲವೆಂದು ಹೇಳಿದ್ದ ನೀನು, ಈಗ ಭೀಷ್ಮ ದ್ರೋಣ ಮೊದಲಾದವರಂತಹ ಪ್ರಮುಖರನ್ನೆಲ್ಲಾ ಕೊಲ್ಲಿಸಿ, ಭೂಮಿಯನ್ನು ನಮಗೆ ಕೊಡಲು ಇಚ್ಛಿಸುತ್ತಿರುವಿಯೇನು? ಆದರೆ ನಾವು ಮಾತ್ರ ನಿನ್ನನ್ನು ಕೊಲ್ಲದೆ ಭೂಮಿಯನ್ನು ಸ್ವೀಕರಿಸಲಾರೆವು. ಏಳು ! ಯುದ್ಧಕ್ಕೆ ಬಾ ! ಧೈರ್ಯ ತಾಳು ! ಕೌರವರ ಕುಲದಲ್ಲಿ ಹುಟ್ಟಿದ ನೀನು ಈ ರೀತಿ ಹೇಡಿಯಾಗಿ ನೀರನ್ನು ಹೊಕ್ಕಿರುವುದು ತರವಲ್ಲ '' ಎಂದು ಕಠಿಣವಾಗಿ ನಿಂದಿಸಿದ. ಇಂತಹ ಕ್ರೂರ ಮಾತುಗಳಿಂದ ಕೆರಳಿದ ಅವನು, ಬುಸುಗುಡುತ್ತಾ ಜಲಸ್ತಂಭದಿಂದ ಮೇಲೆದ್ದು ಬಂದು ನುಡಿದ - ''[೧]ನಾನಿರುವುದು ಒಬ್ಬನೇ. ನನಗೆ ಕಿರೀಟವಿಲ್ಲ ; ಕವಚವಿಲ್ಲ ; ನೀವಾದರೋ ತುಂಬಾ ಜನ.

---

೧. ತನಗೆ ರಾಜ್ಯ ಕೋಶ ಸೇನೆ ಭೀಷ್ಮಾದಿ ವೀರರು ಇರುವುದಾಗಿ ಕೊಚ್ಚಿಕೊಂಡಿದ್ದ ದುರ್ಯೋಧನ ತನ್ನ ಪರಿಸ್ಥಿತಿಯನ್ನು ಹೀಗೆ ತನ್ನ ಬಾಯಿಂದಲೇ ಹೇಳಿಕೊಳ್ಳುವುದು ಅವನ ದುಃಸ್ಥಿತಿಗೆ ಉತ್ತಮ ನಿದರ್ಶನ. ಅವನಿಗೆ ಆ ಗತಿ ಒದಗುವುದನ್ನು ಸಂಧಾನದ ರಾಯಭಾರದ ಪ್ರಸಂಗದಲ್ಲಿ ಶ್ರೀಕೃಷ್ಣ ಸ್ಪಷ್ಟವಾಗಿಯೇ ತಿಳಿಸಿದ್ದುದನ್ನು ಇಲ್ಲಿ ಗಮನಿಸಬಹುದು.

ನಿಮಗೆ ಕವಚ, ಶಿರಸ್ತ್ರಾಣಗಳೆಲ್ಲವೂ ಇವೆ. ಹಾಗೂ ನೀವು ನನ್ನೊಂದಿಗೆ ಯುದ್ಧ-ಮಾಡುವುದಾದಲ್ಲಿ, ನಾನೊಬ್ಬನೇ ಎಲ್ಲರೊಂದಿಗಾಗಲೀ, ಒಬ್ಬನೊಂದಿಗಾಗಲೀ ಹೋರಾಡಲು ಸಿದ್ಧ; ನನಗೇನೂ ಭಯವಿಲ್ಲ'' ಎಂದ. ಇದಕ್ಕೆ ಧರ್ಮರಾಜನು - ''ಕವಚ ಮೊದಲಾದವು-ಗಳನ್ನೆಲ್ಲ ನಾನೀಗ ನಿನಗೆ ಕೊಡುವೆನು. ನಮ್ಮವರಲ್ಲಿ ನೀನು ಯಾರೊಂದಿಗೆ ಕಾದ ಬಯಸುವೆಯೋ ಆರಿಸಿಕೊ ! ಆ ಒಬ್ಬನನ್ನು ಕೊಂದಲ್ಲಿ ಎಲ್ಲ ರಾಜ್ಯವನ್ನೂ ನೀನೇ ಪಾಲಿಸು. ಉಳಿದ ನಾವೆಲ್ಲ ಕಾಡಿಗೆ ಹೋಗುವೆವು. ನೀನೇನಾದರೂ ಅವನಿಂದ ಸತ್ತಲ್ಲಿ ನಾವು ಭೂಮಿಯನ್ನೆಲ್ಲ ಅನುಭವಿಸುವೆವು. ಶತ್ರುಗಳನ್ನು ಕೊಲ್ಲಲು ಬೇಕಾದ ಆಯುಧವನ್ನೂ ಸಹ ನೀನೇ ಆರಿಸಿಕೊಳ್ಳಬಹುದು'' ಎಂದ. ಅದಕ್ಕೆ ದುರ್ಯೋಧನನು, ''ದುರ್ಬಲರಾದ ಅರ್ಜುನ ಮೊದಲಾದ ಉಳಿದ ನಾಲ್ವರೊಂದಿಗೆ ನಾನು ಕಾದಲಾರೆ. ಆದ್ದರಿಂದ ಭೀಮನೊಂದಿಗೆ ಗದಾಯುದ್ಧವನ್ನೇ ಬಯಸುವೆನು. ನನಗೆ ಗದೆಯೇ ಪ್ರಿಯವಾದ ಆಯುಧ ; ಬೇರಾವ ಆಯುಧವನ್ನೂ ನಾನು ಮುಟ್ಟಲಾರೆ.''

## ಭೀಮ - ದುರ್ಯೋಧನರ ಗದಾಯುದ್ಧ

ದುರ್ಯೋಧನನ ಮಾತನ್ನು ಕೇಳಿ, ಕೂಡಲೇ ವೀರನಾದ ಭೀಮನು ಆನಂದದಿಂದ ಅವನ ಗದೆಗಿಂತ ಒಂದೂವರೆ ಪಟ್ಟು ಭಾರವಾಗಿದ್ದ ತನ್ನ ಗದೆಯನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧನಾಗಿ, ಗರ್ಜಿಸುತ್ತಾ , ಮೇಲೆದ್ದ.

ಆದಿದೇವನಾದ ಶ್ರೀಕೃಷ್ಣನು ಧರ್ಮರಾಜನ್ನು ಕುರಿತು - ''ನೀನು ಕಠಿಣ ಪ್ರಸಂಗವನ್ನೇ ತಂದೊಡ್ಡಿದ್ದೆ. ಈ ರಾಜ ದುರ್ಯೋಧನನು ಗದೆ ಹಿಡಿದು ಹೋರಾಡುವಾಗ, ಇವನನ್ನು ಜಯಿಸಲು ನಿಖಿಲದೇವಾಸುರರಿಗೂ ಶಕ್ಯವಿಲ್ಲ. ಅವನು ಖಂಡಿತವಾಗಿಯೂ ನಿಮ್ಮಲ್ಲಿ ಅರ್ಜುನ ಮೊದಲಾದ ನಾಲ್ವರನ್ನೂ ಕೊಲ್ಲಬಲ್ಲ. ಭೀಮನು ಮಾತ್ರವೇ ಇವನನ್ನು ಯುದ್ಧದಲ್ಲಿ ಕೊಲ್ಲಲು ಸಮರ್ಥ. ಭೀಮನಿಗೆ ಸಮನಾದ ಬಲಶಾಲಿ ಇನ್ನೊಬ್ಬನಿಲ್ಲ ; ದುರ್ಯೋಧನ-ನಾದರೋ ಸಾಕಷ್ಟು ತಯಾರಿ ಮಾಡಿಕೊಂಡವನು. ತನ್ನ ಪ್ರತಿಜ್ಞೆಯನ್ನು ಪಾಲಿಸಲೆಂದು ಭೀಮಸೇನ ಅವನ ತೊಡೆಗಳನ್ನು ಭೇದಿಸುವನು'' ಎಂದು ನುಡಿದ.

ಅನಂತರ ಭೀಮನು ಎಲ್ಲ ಲೋಕಕ್ಕೆ ತಾನು ಮಾಡಿದ್ದು ಧರ್ಮವೆಂಬುದನ್ನು ತಿಳಿಸು-ವುದಕ್ಕಾಗಿ ಹೀಗೆಂದ - '' ನನ್ನ ಪ್ರತಿಜ್ಞೆಯಂತೆ ನಿನ್ನ ಎರಡೂ ತೊಡೆಗಳನ್ನು ಮುರಿಯುವೆನು. ಇದರ ಬಗ್ಗೆ ಸಂದೇಹವೇ ಬೇಡ.'' ಹೀಗೆ ನುಡಿದ ಅವನನ್ನು ದುರ್ಯೋಧನನು ಎದುರಿಸಿದ. ಇಬ್ಬರಿಗೂ ಯುದ್ಧವು ಮೊದಲಾಯಿತು. ಆಗ ಭೀಮನು ತನ್ನ ಹೆಚ್ಚು ಬಲವನ್ನು ಮುಂದೆ ತೋರಿಸಲೆಂದು ಮೊದಲಿಗೆ ಮೆಲ್ಲಗೆ ಯುದ್ಧ ಮಾಡಿದ. ಆಶ್ಚರ್ಯಕರವಾದ ಗದಾಮಾರ್ಗವನ್ನು ಪ್ರದರ್ಶಿಸುತ್ತಾ, ಅವರಿಬ್ಬರೂ ಕಾದತೊಡಗಿದರು. ಆ ವೇಳೆಗೆ ಅಲ್ಲಿಗೆ ಆಗಮಿಸಿದ ಬಲ-ರಾಮನು ಅವರನ್ನು ತಡೆಯಲು ಪ್ರಯತ್ನಿಸಿದ. ಅವನು ಎಷ್ಟು ಪ್ರಯತ್ನಿಸಿದರೂ ಅವರಿಬ್ಬರೂ

ತಮ್ಮ ಯುದ್ಧವನ್ನು ನಿಲ್ಲಿಸಲಿಲ್ಲ. ಕೃಷ್ಣ ಮೊದಲಾದವರಿಂದ ಗೌರವಿಸಲ್ಪಟ್ಟ ಬಲರಾಮನು ತಾನೂ ಆ ಯುದ್ಧವನ್ನು ನೋಡತೊಡಗಿದ.

## ದುರ್ಯೋಧನನ ಊರುಭಂಗ

ಶಿಕ್ಷಾಬಲಗಳಿಂದ ಕೂಡಿದ ಅವರಿಬ್ಬರೂ ಬಹುಬಗೆಯ ಪಟ್ಟುಗಳನ್ನು ಪ್ರದರ್ಶಿಸಿದರು. ಆಗ ಭೀಮನನ್ನು ವಂಚಿಸಲೆಂದು ದುರ್ಯೋಧನನು ಶಿರಸ್ಸನ್ನು ಭೂಮಿಯ ಕಡೆಗೆ ಮಾಡಿ, ತೊಡೆಗಳನ್ನು ಮೇಲೆ ಮಾಡಿದ. ಆಗ ಭೀಮನು ಕೃಷ್ಣನ ಅಪ್ಪಣೆಯಂತೆ ದುರ್ಯೋಧನನ ಪೃಷ್ಠಮೂಲದಲ್ಲಿ ಗದೆಯಿಂದ ಅಪ್ಪಳಿಸಿದ. ದುರ್ಯೋಧನನು ತೊಡೆ ಮುರಿದುಕೊಂಡು ಕೆಳಕ್ಕೆ ಬಿದ್ದ. ಪ್ರತಿಜ್ಞಾಪಾಲನೆಗಾಗಿ ನಾಭಿಯ ಮೇಲೂ ಅಲ್ಲದೆ ಕೆಳಕ್ಕೂ ಅಲ್ಲದೆ ಮಧ್ಯದಲ್ಲಿಯೇ ಭೀಮನು ಹೊಡೆದ. ಗದಾಯುದ್ಧದ ನಿಯಮವನ್ನೂ ಪಾಲಿಸುವ ಮೂಲಕ ತನ್ನ ಕೀರ್ತಿಯನ್ನೂ ರಕ್ಷಿಸಲೆಂದೇ ಭೀಮನು ಮಧ್ಯಭಾಗದಲ್ಲಿಯೇ ಹೊಡೆದ. ತನ್ನ ಎರಡು ಪ್ರತಿಜ್ಞೆಗಳನ್ನೂ ಪೂರೈಸಲೆಂದು ಎರಡು ತೊಡೆಗಳನ್ನೂ ಮುರಿದ.

ದ್ಯೂತದಲ್ಲಿ ಕೃಷ್ಣನನ್ನು 'ಪಣವನ್ನಾಗಿ ಇರಿಸು' ಎಂಬುದಾಗಿ ದುರ್ಯೋಧನ ಹೇಳಿದ್ದಾಗ ಮಾಡಿದ್ದ ಮತ್ತೊಂದು ಪ್ರತಿಜ್ಞೆಯಂತೆ ಭೀಮನು ಅವನ ತಲೆಯನ್ನು ತುಳಿದ. ಆ ಸಮಯದಲ್ಲಿ 'ಋಷಭಂ ಮಾ ಸಮಾನಾನಾಂ' ಎಂಬ ಸೂಕ್ತವನ್ನೂ ದರ್ಶನ ಮಾಡಿದ. ಅವನ ಪುಣ್ಯ, ವಿದ್ಯೆಗಳನ್ನೆಲ್ಲ ಎಲ್ಲ ರೀತಿಯಿಂದಲೂ ತೆಗೆದುಕೊಂಡು, ಅವನನ್ನು ತಮಸ್ಸಿಗೆ ಕಳುಹಿಸುವ ಸಲುವಾಗಿ ತಲೆಯನ್ನು ಕಾಲಿನಿಂದ ಮೆಟ್ಟಿದ. ಅವನ ಕುಕೃತ್ಯಗಳನ್ನೆಲ್ಲ ನೆನಪಿಸುತ್ತಾ ಕೃಷ್ಣನ ಬಂಧನಕ್ಕಾಗಿ ಪ್ರಯತ್ನಿಸಿದ್ದಿ ಎಂದು ಹೇಳುತ್ತಾ ಮತ್ತೊಮ್ಮೆ ಅವನ ತಲೆಯನ್ನು ಮತ್ತೆ ಮತ್ತೆ ಒದ್ದ. ಅದನ್ನು ಕಂಡು ಬಲರಾಮನಿಗೆ ಕೋಪ ಉಕ್ಕಿತು. ಅವನು – ''ಇದು ಧರ್ಮವಲ್ಲ'' ಎಂದು ಎರಡೂ ತೋಳುಗಳನ್ನು ಮೇಲಕ್ಕೆ ಎತ್ತಿ ಗಟ್ಟಿಯಾಗಿ ಕೂಗಿದ. ಮತ್ತೆ ಕೋಪದಿಂದ ತುಂಬಾ ಕೆಂಪೇರಿದವನಾಗಿ, ಅವನು ಮುಸಲ ಹಾಗೂ ಹಲಗಳನ್ನು ತೆಗೆದುಕೊಂಡು ಭೀಮನ ಮೇಲೆ ನುಗ್ಗಿದ. ಭೀಮನು ಮಾತ್ರ ಕದಲಲಿಲ್ಲ. ಭೀಮ ಹಾಗೆ ನಿರ್ಭಯವಾಗಿ ನಿಲ್ಲಲು, ಕೃಷ್ಣನು ಬಲರಾಮನನ್ನು ಹಿಡಿದುಕೊಂಡು – ''ಭೀಮನು ದುರ್ಯೋಧನನನ್ನು ಧರ್ಮ- ದಿಂದಲೇ ಹೊಡೆದಿರುವನು, ಮಂಡಲದಲ್ಲಾಗಲೀ ಅಭಿಸಾರದಲ್ಲಾಗಲೀ, ಅಪಸಾರದಲ್ಲಾಗಲೀ, ವಂಚಿಸುವವನನ್ನು ನಾಭಿಯಿಂದ ಕೆಳಗೆ ಹೊಡೆಯುವುದು ತಪ್ಪಲ್ಲ. ಅಲ್ಲದೆ ಭೀಮ 'ನಿನ್ನ ತೊಡೆಗಳನ್ನು ಮುರಿಯುವೆನು' ಎಂಬುದಾಗಿ ಸಕಾರಣವಾಗಿ ಪ್ರತಿಜ್ಞೆ ಮಾಡಿದ್ದ ; ಆದ್ದರಿಂದ ಧರ್ಮಿಷ್ಠನಾದ ಭೀಮನು ಇವನನ್ನೀಗ ನ್ಯಾಯವಾಗಿಯೇ ಕೊಂದಿರುವನು.''

## ಭೀಮನದು ಅಧರ್ಮಯುದ್ಧವಲ್ಲ

ಕೃಷ್ಣನ ಮಾತನ್ನು ಕೇಳಿ 'ಇದು ಕಪಟಧರ್ಮ' ಎಂದು ನುಡಿಯುತ್ತಲೇ ಬಲರಾಮನು ತನ್ನ ಅನುಯಾಯಿಗಳೊಂದಿಗೆ ತನ್ನ ಊರಿಗೆ ತೆರಳಿದ. ಅನಂತರ ಧರ್ಮರಾಜನು 'ಇದೇನು

ಧರ್ಮವೋ, ಅಧರ್ಮವೋ?' ಎಂಬುದಾಗಿ ಕೃಷ್ಣನನ್ನು ಪ್ರಶ್ನಿಸಲು, ಅದಕ್ಕೆ ಕೃಷ್ಣನು - ''ಅತ್ಯಂತ ಪಾಪಿಷ್ಠರಾದ ಜನರನ್ನು ಸಾಕ್ಷಾತ್ ಧರ್ಮದಿಂದ ಕೊಲ್ಲಕೂಡದು. ಹಿಂದೆ ದೇವತೆಗಳೂ ಸಹ ವಂಚನೆಯನ್ನು ಮಾಡಿಯೇ ಅಸುರರನ್ನು ಸಂಹರಿಸಿದರು. ಆದ್ದರಿಂದ ಇವನೂ ಸಹ ಅಧರ್ಮದಿಂದಲೇ ಸತ್ತಿರುವನು. ಇದರಲ್ಲಿ ದೋಷವೇನೂ ಇಲ್ಲ. ಭೀಷ್ಮ ದ್ರೋಣ ಮತ್ತು ಕರ್ಣರೂ ಸಹ ಒಂದು ನಿಮಿತ್ತದಿಂದಲೇ ಕೊಲ್ಲಲ್ಪಟ್ಟಿರುವಾಗ, ಈ ಪಾಪಿ ದುರ್ಯೋಧನನು ಹೀಗೆ ಸತ್ತಲ್ಲಿ ಯಾವ ದೋಷವೂ ಇಲ್ಲ. ಪ್ರತಿಜ್ಞೆಯನ್ನು ಪಾಲಿಸಬೇಕೆಂಬ ದೃಷ್ಟಿಯಿಂದಲೂ ಭೀಮನು ಅವನ ತೊಡೆಗಳನ್ನು ಮುರಿದಿರುವನು. ದುರ್ಯೋಧನನ ಪಾಪಕ್ಕೆ ಉಚಿತವಾದಂತಹ ಧಾರ್ಮಿಕ ಪ್ರತಿಜ್ಞೆಯನ್ನೇ ಭೀಮನು ಮಾಡಿದ್ದನು. ಆದ್ದರಿಂದಲೇ ಇಲ್ಲಿ ಲೌಕಿಕ ರೀತಿಯಲ್ಲೂ ಸಹ ಯಾವ ಅನ್ಯಾಯವೂ ನಡೆದಿಲ್ಲ. ಭೀಮಸೇನನ ಸಾಮರ್ಥ್ಯವನ್ನು ತಿಳಿಯದ ಜನ ಮಾತ್ರ ಅದನ್ನು ಆಪದ್ಧರ್ಮ ಎಂದು ತಿಳಿಯುವರು. ಶಿವನ ವರ ಹಾಗೂ ಗದಾಶಿಕ್ಷಣ ನೈಪುಣ್ಯದಿಂದಾಗಿ, ದುರ್ಯೋಧನನು ಅವಧ್ಯತ್ವದಲ್ಲಿ ಜರಾಸಂಧನಿಗೆ ಸಮನೆಂದೇ ಪ್ರಖ್ಯಾತನಾಗಿದ್ದ. ಆದ್ದರಿಂದ ಭೀಮನು ಮಾಡಿದ್ದು ಧರ್ಮವೇ ಆಗಿದೆ'' ಎಂದು ಹೇಳುತ್ತಾ, ಕೊನೆಗೂ ಧರ್ಮರಾಜನ ಮನಸ್ಸಿನಲ್ಲಿ ಸಂಶಯವನ್ನೇ ಉಳಿಸಿದ. ಅದಕ್ಕೆ ಭೂ-ಭಾರವನ್ನು ಪರಿಹರಿಸಿದ ಸಮಗ್ರ ಪುಣ್ಯವು ಭೀಮನಿಗೆ ಮಾತ್ರವೇ ಸಂಪೂರ್ಣವಾಗಿ ಬರತಕ್ಕದ್ದೆಂಬುದೇ ಮುಖ್ಯ ಕಾರಣವಾಗಿತ್ತು. ಕೃಷ್ಣನು ಬಲರಾಮನಿಗೂ, ಜನಗಳಿಗೂ 'ಧರ್ಮ'ವೆಂದೇ ಮತ್ತೆ ಮತ್ತೆ ತಿಳಿಸಿದ್ದರೂ, ಧರ್ಮರಾಜನು ಆ ಬಗ್ಗೆ ಸಂಶಯವನ್ನೇ ಹೊಂದಿದ್ದರಿಂದ, ಅವನಿಗೆ ಅಂತಹ ಪೂರ್ಣ ಪುಣ್ಯ ಲಭಿಸಲಿಲ್ಲ. ಅದಕ್ಕೆಂದೇ ಕೃಷ್ಣನು ಅವನನ್ನು ಸಂಶಯರಹಿತನನ್ನಾಗಿ ಮಾಡಲಿಲ್ಲ. ಮುಖ್ಯ ಧರ್ಮವನ್ನು ಅವನು ಬಲರಾಮನಿಗೂ, ಜನರಿಗೂ ತಿಳಿಸಿದ. ಧರ್ಮದಿಂದಲೇ ದುರ್ಯೋಧನನು ಸತ್ತಿದ್ದು ಎಂಬುದಾಗಿ ಮುಂದೆಯೂ ಸಹ ಕೃಷ್ಣನು ಅರ್ಜುನನಿಗೆ ತಿಳಿಸುವನು.

## ದುರ್ಯೋಧನನ ಮೇಲೆ ಪುಷ್ಪವೃಷ್ಟಿ

ಮತ್ತೆ ಮತ್ತೆ ಭೀಮನು ದುರ್ಯೋಧನನನ್ನು ಧರ್ಮದಿಂದಲೇ ಸಂಹರಿಸಿರುವನು ಎಂಬುದಾಗಿ ಕೃಷ್ಣನು ಹೇಳುತ್ತಿದ್ದುದನ್ನು ಕಂಡು ಅತ್ಯಂತ ಪಾಪಿಯಾದ ದುರ್ಯೋಧನನು ಕೋಪದಿಂದ ಕೆಳತುಟಿಯನ್ನು ಅದುರಿಸುತ್ತಾ , ಕೃಷ್ಣನನ್ನು - ''ನಿನ್ನಿಂದಲೇ ಪಾಂಡವರು ಪಾಪಕಾರ್ಯದಲ್ಲಿ ತೊಡಗಿರುವುದು ; ನೀನೊಬ್ಬನೇ ಪರಮಪಾಪಿ'' ಎಂದು ನಿಂದಿಸಿದ. ಆಗಕ್ಕೆ ಕೃಷ್ಣನು - ''ನಿನಗೆ ಸಮನಾದ ಮಹಾಪಾಪಿಯು ಎಂದೂ ಆಗಿಲ್ಲ, ಭೀಷ್ಮಾದಿಹತ್ಯೆಯ ಪಾಪವೂ ಸಹ ಸೇರುವುದು ನಿನ್ನನ್ನೇ. ಪಾಪಿಷ್ಠನಾದ ನಿನ್ನನ್ನೇ ಅವರು ಅನುಸರಿಸಿದರಲ್ಲವೇ ? ಪಾಪಿಯನ್ನೂ, ಅವನ ಹಿಂಬಾಲಕರನ್ನೂ ಕೊಲ್ಲುವುದರಲ್ಲಿ ಯಾವ ಪಾಪವೂ ಇಲ್ಲ. ಆದ್ದರಿಂದಲೇ ಪಾಂಡವರಿಗೆ ಯಾವ ಪಾಪವೂ ಇಲ್ಲ. ಅವರು ಸ್ವಾಭಾವಿಕವಾಗಿಯೂ ಗುಣವಂತರು, ನನ್ನನ್ನೇ ನಂಬಿದವರು. ಸ್ವಭಾವತಃ ಅತಿಪಾಪಿಯಾದ ನೀನು ಉಳಿದವರನ್ನೂ

ಪಾಪದ ಹಾದಿಯಲ್ಲಿ ತೊಡಗಿಸಿ, ನೀನೂ ಸದಾ ಪಾಪದಲ್ಲಿಯೇ ಮಗ್ನನಾಗಿದ್ದಿ. ಆದ್ದರಿಂದ ನೀನು ಅತ್ಯಂತ ಕೆಟ್ಟ ಗತಿಯನ್ನೇ ಹೊಂದುವಿ'' ಎಂದು ಕಟುವಾಗಿ ಉತ್ತರಿಸಿದ.

ಪಾಪಿಗಳಲ್ಲಿ ಅತಿಪಾಪಿಯಾದ ದುರ್ಯೋಧನನು ಮತ್ತೆ ತನ್ನನ್ನು ಸಮರ್ಥಿಸಿಕೊಳ್ಳುತ್ತಾ ಹೇಳಿದ – ''ಒಳ್ಳೆಯ ಕೊನೆಯನ್ನು ಕಂಡವರಲ್ಲಿ ನನಗಿಂತ ಶ್ರೇಷ್ಠರು ಬೇರೆ ಯಾರು ತಾನೇ ಇದ್ದಾರು ? ನಾನು ಯಾವ ತಪ್ಪನ್ನು ತಾನೇ ಮಾಡಿರುವೆನು ? ಯಜ್ಞಗಳನ್ನು ನಡೆಸಿದ್ದೇನೆ ; ಪುಣ್ಯಗಳನ್ನು ಆಚರಿಸಿದ್ದೇನೆ ; ಶತ್ರುಗಳ ತಲೆಯ ಮೇಲೆ ಕಾಲನ್ನಿರಿಸಿದ್ದೇನೆ ; ಯುದ್ಧ ಮಾಡುತ್ತಿರುವಾಗಲೇ, ಯುದ್ಧರಂಗದಲ್ಲಿಯೇ ನನಗೆ ಸಾವು ಬಂದಿದೆ. ಇನ್ನೇನು ಬೇಕು ? ಬೇಕೆನಿಸಿದ ಭೋಗಗಳನ್ನು ಭೋಗಿಸಿದ್ದೇನೆ. ಅತ್ಯಂತ ಶ್ರೇಷ್ಠ ಗತಿಯನ್ನೇ ಹೊಂದಿದ್ದೇನೆ. ಕಪಟ ಯುದ್ಧವನ್ನು ಮಾಡಿದ ಪಾಂಡವರು ದುಃಖವನ್ನೇ ಹೊಂದುವರು. ಚಂದ್ರಸೂರ್ಯರನ್ನು ಹೋಲುವ ಶೂರರೂ, ಧಾರ್ಮಿಕರೂ ಆದ ಸಜ್ಜನರಿಲ್ಲದಿರುವ, ರತ್ನಹೀನವಾದ ಈ ಭೂಮಿಯನ್ನು ಪಾಂಡವರು ಆಳಿಕೊಳ್ಳಲಿ.'' ದುರ್ಯೋಧನನು ಹೀಗೆ ಹೇಳುತ್ತಿರುವಂತೆಯೇ ದೇವತೆಗಳು ಸುರಿಸಿದ ಪುಷ್ಪಗಳ ವೃಷ್ಟಿ ಅವನ ಮೇಲೆ ಬಿದ್ದಿತು. ದುರ್ಯೋಧನನಿಗೆ ಅದೇ ಬುದ್ಧಿಯನ್ನೇ ದೃಢವಾಗಿಸಿ, ಅವನನ್ನು ಗಾಢತಮಸ್ಸಿನಲ್ಲಿ ಬೀಳಿಸುವುದೇ ದೇವತೆಗಳ ಆ ಪುಷ್ಪವೃಷ್ಟಿಯ ಉದ್ದೇಶವಾಗಿತ್ತು. ತನ್ನನ್ನು ಹೊಗಳಿ ಕೊಳ್ಳುತ್ತಾ , ವಾಸುದೇವನನ್ನೂ , ಅವನ ಭಕ್ತರನ್ನೂ ನಿಂದಿಸುತ್ತಾ ಇರುವವರಿಗೆ ತಮಸ್ಸು ಹೇಗೆ ತಾನೇ ತಪ್ಪೀತು? ವಿಶೇಷವಾಗಿ ಅಂತ್ಯಕಾಲದಲ್ಲಿ ಹೀಗೆ ಮಾಡುವವರಿಗಂತೂ ಹೇಳಲೇ ಬೇಕಿಲ್ಲ! ಇವುಗಳಲ್ಲಿ ಯಾವ ಒಂದ-ರಿಂದಲೂ ದುಃಖ ತಪ್ಪದಿರುವಾಗ, ಎಲ್ಲವೂ ಸೇರಿದಾಗ ಹೆಚ್ಚು ದುಃಖವೇ ದೊರೆಯುವುದು. ಈ ಉದ್ದೇಶದಿಂದಲೇ ದೇವತೆಗಳಿಂದ ಹಾಗೆ ಪುಷ್ಪವೃಷ್ಟಿ ಮಾಡಿಸಿದ ಕೃಷ್ಣನು, ಮತ್ತೆ ಅವನಿಗೆ – ''ಕೃತಘ್ನನೂ, ಕ್ರೂರಿಯೂ, ಗುಣವಂತರನ್ನು ಯಾವಾಗಲೂ ದ್ವೇಷಿಸುವವನೂ ಆದ ನೀನು ಮಾಡಿದ ಸಕಲ ಪುಣ್ಯಕಾರ್ಯವೂ ವ್ಯರ್ಥವೇ. ನಿನ್ನಂತಹವನಿಗೆ ಧರ್ಮದ ಫಲ ದೊರೆಯುವುದಾದಲ್ಲಿ ಕತ್ತಲೆಯೂ ಸೂರ್ಯನಂತೆ ಬೆಳಗಬೇಕಾದೀತು?'' ಎಂದು ಹೇಳಿ, 'ಭೀಮನು ಅವನನ್ನು ನ್ಯಾಯವಾದ ರೀತಿಯಲ್ಲಿಯೇ ಕೊಂದಿರುವನು' ಎಂದು ಮತ್ತೆ ಮತ್ತೆ ಹೇಳುತ್ತಾ ಅದನ್ನು ಜನರಿಗೆಲ್ಲ ತಿಳಿಸಿದ.

## ಧೃತರಾಷ್ಟ್ರಾದಿಗಳಿಗೆ ಸಾಂತ್ವನ

ಕೃಷ್ಣನು ಈ ರೀತಿಯಾಗಿ ಧರ್ಮವನ್ನು ಪ್ರಕಟಿಸಲು, ಎಲ್ಲ ಸಜ್ಜನರ ಮನಸ್ಸಿನಲ್ಲಿಯೂ, 'ಆ ಪಾಪಿಯಾದ ದುರ್ಯೋಧನನು ನ್ಯಾಯವಾದ ರೀತಿಯಲ್ಲಿಯೇ ಕೊಲ್ಲಲ್ಪಟ್ಟಿರುವನು ' ಎಂಬ ಅಂಶವು ದೃಢವಾಯಿತು. ಯಾವಾಗಲೂ ದೋಷವನ್ನೇ ಶಂಕಿಸುವ ಧರ್ಮರಾಜ ಮಾತ್ರ ಪುಷ್ಪವೃಷ್ಟಿಯ ಪ್ರಸಂಗದಿಂದಂತೂ ಪುನಃ ಸಂಶಯವನ್ನೇ ಹೊಂದಿದ. ಇದನ್ನು ತಿಳಿದಿದ್ದರೂ ದುರ್ಯೋಧನನ ಬಗ್ಗೆ ತಮಗಿದ್ದ ಸ್ನೇಹದಿಂದಾಗಿ, ಅಶ್ವತ್ಥಾಮ ಬಲರಾಮರು ಮಾತ್ರ ಅದನ್ನು ಅಧರ್ಮವೆಂದೇ ತಪ್ಪಾಗಿ ಹೇಳಿದರು.

ಅನಂತರ ಕೃಷ್ಣನು, ಹರ್ಷದಿಂದ ಗರ್ಜಿಸುತ್ತಿದ್ದ ಪಾಂಡವರೊಂದಿಗೆ ಹಾಗೂ ಪಾಂಚಾಲ-ರೊಂದಿಗೆ ಕೂಡಿಕೊಂಡು, ಬ್ರಹ್ಮರುದ್ರಾದಿಗಳಿಂದಲೂ ಪೂಜಿಸಲ್ಪಡುತ್ತಾ , ಮಂದಹಾಸದಿಂದ ರಣರಂಗದಿಂದ ಹೊರಟ. ಆ ವೇಳೆಗೆ ಕಾಣಿಸಿಕೊಂಡ ಸಂಜಯನಿಂದ, ಧೃತರಾಷ್ಟ್ರನು ದುಃಖತಪ್ತನಾಗಿರುವುದನ್ನು ತಿಳಿದು, ಅವನನ್ನು ಸಮಾಧಾನಪಡಿಸಲು ಕೃಷ್ಣ ಧರ್ಮರಾಜರ ಅಭಿಪ್ರಾಯದಂತೆ ಯುಯುತ್ಸು ತೆರಳಿದ. ಅವನನ್ನು ಹಿಂಬಾಲಿಸಿ ಕೃಷ್ಣನೂ ಹೊರಟ. ಧರ್ಮಯುಕ್ತವಾದ ತತ್ತ್ವಾರ್ಥಯುಕ್ತವಾದ ಲೋಕನೀತಿಗೆ ಅನುಗುಣವಾದ ಮಾತುಗಳಿಂದ ಧೃತರಾಷ್ಟ್ರನನ್ನು ಸಮಾಧಾನಪಡಿಸಿ, ಕೃಷ್ಣನು ಮತ್ತೆ ಪಾಂಡವರ ಬಳಿಗೆ ಮರಳಿದ.

ಕಾಲಾನುಸಾರವಾಗಿ ದೇವತೆಗಳನ್ನು ಸಂಹರಿಸುವ ಉದ್ದೇಶದಿಂದ, ಕೃಷ್ಣನು ಪಾಂಡವರು ಹಾಗೂ ಸಾತ್ಯಕಿಯೊಂದಿಗೆ ಆ ರಾತ್ರಿಯಲ್ಲಿ ಕೌರವರ ಶಿಬಿರಕ್ಕೆ ಹೊರಟ[೧].



೧. ಹೀಗೆ ಶ್ರೀಕೃಷ್ಣ ಪಾಂಡವರನ್ನು ಕೌರವರ ಶಿಬಿರಕ್ಕೆ ಸ್ಥಳಾಂತರಿಸಿದ ಪ್ರಸಂಗವನ್ನು ಕೆಲವರು ತಪ್ಪಾಗಿ ತಿಳಿದು, ಪಾಂಡವರನ್ನು ಅಶ್ವತ್ಥಾಮರ ಆಕ್ರಮಣದಿಂದ ರಕ್ಷಿಸಲು ಮಾಡಿದ ಉಪಾಯ ಎನ್ನುವುದುಂಟು ; ಅದು ಸರಿಯಲ್ಲ. ಪಾಂಡವರು ಅಂದು ಆ ಶಿಬಿರದಲ್ಲೇ ಉಳಿದಿದ್ದಲ್ಲಿ ಅಶ್ವತ್ಥಾಮರಿಗೆ ಅಲ್ಲಿಯ ಸೇನೆ ಹಾಗೂ ಜನರನ್ನು ಸಂಹರಿಸಲು ಸರ್ವಥಾ ಸಾಧ್ಯವಾಗುತ್ತಿರಲಿಲ್ಲ. ಭೀಮಾರ್ಜುನರನ್ನು ಎದುರಿಸುವಲ್ಲಿ ಅವರ ವೈಫಲ್ಯ ಅನೇಕಬಾರಿ ಸಾಬೀತಾಗಿರುವುದನ್ನು ಗಮನಿಸಬೇಕು. ಆದರೆ, ಶ್ರೀಕೃಷ್ಣನ ಸಂಕಲ್ಪ ಭೂಭಾರಹರಣ-ಕ್ಕಾಗಿ ಪಾಂಡವರ ಸೇನೆಯೂ ಸಹ ಧೃಷ್ಟದ್ಯುಮ್ನಾದಿಗಳ ಸಮೇತ ಅಂದೇ ಹತವಾಗಬೇಕು ಎಂದಾಗಿದ್ದಿತು. ಅದಕ್ಕಾಗಿ ಅಶ್ವತ್ಥಾಮರ ಆ ಹನನ ಕಾರ್ಯವು ಸುಗಮವಾಗಿ ನಡೆಯಲಿ ಎಂಬ ಭಾವದಿಂದಲೇ ಪಾಂಡವರನ್ನು ಕೌರವರ ಶಿಬಿರಕ್ಕೆ ಸ್ಥಳಾಂತರಿಸಿದ ಎಂಬುದು ಮಹಾಭಾರತವೇ ಮುಖ್ಯವಾದ ಪ್ರಮೇಯ :

ತೇಷಾಂ ನೂನಂ ಭಯಾನ್ನಾಸೌ ಕೃತವಾನ್ ಕುರುನಂದನ। ಅಸಾಂನ್ನಿಧ್ಯಾದ್ಧಿ ಪಾರ್ಥಾನಾಂ ಕೇಶವಸ್ಯ ಚ ಧೀಮತಃ॥ ಸಾತ್ಯಕೇಶ್ಚಾಪಿ ಕರ್ಮೇದಂ ದ್ರೋಣಪುತ್ರೇಣ ಸಾಧಿತಮ್। ಕೋ ಹಿ ತೇಷಾಂ ಸಮಕ್ಷಂ ತಾನ್ ಹನ್ಯಾದಪಿ ಮರುತ್ಪತಿಃ॥ -ಮಹಾಭಾರತ, ಸೌಪ್ತಿಕಪರ್ವ(೮/೧೫೪,೧೫೫)

# ಸೌಪ್ತಿಕ ಪರ್ವ

## ಅಶ್ವತ್ಥಾಮರ ಪ್ರಸಂಗ

ಆ ವೇಳೆಗೆ ಕೃಪ ಮತ್ತು ಕೃತವರ್ಮರೊಂದಿಗೆ ಅಶ್ವತ್ಥಾಮರು ದುರ್ಯೋಧನನ ಬಳಿಗೆ ಹೋದರು. ಆಗಲೇ ತೊಡೆ ಮುರಿದು ಬಿದ್ದಿದ್ದ ಅವನನ್ನು ನರಿನಾಯಿಗಳು, ಪಿಶಾಚಿಗಳು ತಿನ್ನ ತೊಡಗಿದ್ದವು. ಅಶ್ವತ್ಥಾಮರು ದುಃಖಪೀಡಿತರಾಗಿ ಪಾಂಡವರನ್ನು ನಿಂದಿಸಿ, 'ರಾಜನೇ ನಾನೀಗ ಏನು ಮಾಡಬೇಕು?' ಎಂದು ಕೇಳಿದರು. ಅದಕ್ಕೆ ಅವನು ''ಪಾಂಡವರನ್ನೆಲ್ಲ ಸಂಹರಿಸು'' ಎಂದು ಹೇಳಿ, ಅವರಿಗೆ ಧೂಳಿನಿಂದಲೇ ಅಭಿಷೇಕ ಮಾಡಿದ. ಹಾಗೆ ಅಭಿಷೇಕಿಸುವಾಗ ದುರ್ಯೋಧನನ ಮನಸ್ಸಿನಲ್ಲಿ ಪಾಂಡುರಾಜನ ಸಂತತಿಯನ್ನು ಪೂರ್ಣವಾಗಿ ನಾಶ ಮಾಡಿ, ತನ್ನ ಪತ್ನಿಯಲ್ಲಿ ಸಂತತಿಯನ್ನು ಬೆಳೆಸಿ, ಭೂಮಿಯನ್ನು ಆಳಿಸಬೇಕು ಎಂಬ ಭಾವನೆ ತುಂಬಿತ್ತು. ಅಶ್ವತ್ಥಾಮರು ಅದಕ್ಕೆಲ್ಲ ಸಮ್ಮತಿಸಿ, ಅಲ್ಲಿಂದ ಹೊರಟರು. ಕೃಷ್ಣ, ಭೀಮ ಹಾಗೂ ಅರ್ಜುನರ ಭಯದಿಂದಾಗಿ ಆ ಮೂವರೂ ಒಂದೇ ರಥದಲ್ಲಿ ಕುಳಿತು ಮತ್ತೆ ದಟ್ಟಡವಿಯನ್ನೇ ಹೊಕ್ಕರು. ದ್ರೋಣವಧೆ, ದುರ್ಯೋಧನವಧೆಗಳನ್ನು ಕುರಿತೇ ಚಿಂತಿಸುತ್ತಿದ್ದ ಅಶ್ವತ್ಥಾಮರಿಗೆ ನಿದ್ರೆ ಬರಲಿಲ್ಲ. ಅರ್ಧರಾತ್ರಿಯಲ್ಲಿ ಆಲದ ಮರದಲ್ಲಿದ್ದ ಅನೇಕ ಸಾವಿರ ಕಾಗೆಗಳನ್ನು ಗೂಬೆಯೊಂದು ಸಂಹರಿಸುತ್ತಿರುವುದನ್ನು ಕಾಣುತ್ತಲೇ, ಅವರು ಕೃಪ ಕೃತವರ್ಮರಿಗೆ ಹೇಳಿದರು - ''ಈ ನಿದರ್ಶನದ ಮೂಲಕ ಪರಮಾತ್ಮನಿಂದ ಪ್ರೇರಿತನಾಗಿರುವ ನಾನು ಪಾಂಡುಪುತ್ರರನ್ನು ಕೊಲ್ಲಲು ಹೋಗುತ್ತಿರುವೆನು '' ಎಂದು ಹೇಳಿ, ರಥವನ್ನೇರಿದರು. ಅವರು ತಡೆದರೂ ಕೇಳದೆ ಪಾಂಡವರ ಶಿಬಿರದತ್ತ ಧಾವಿಸಿದರು ; ಅವರಿಬ್ಬರೂ ಅವರನ್ನು ಹಿಂಬಾಲಿಸಿದರು.

### ಉಪಪಾಂಡವರ ಸಂಹಾರ

ಹಾಗೆ ಹೊರಟ ಅಶ್ವತ್ಥಾಮರು ಪಾಂಡವರ ಶಿಬಿರದ ಬಾಗಿಲಲ್ಲಿ ಭಯಂಕರವಾದ ತನ್ನದೇ ರೂಪವಾದ ಶಿವನನ್ನು ಕಂಡರು. ಅವನ ಸುತ್ತಲೂ ಬಹು ಕೋಟಿ ಸ್ವರೂಪದ ವಾಸುದೇವನೂ ಇದ್ದ. ಕೃಷ್ಣನನ್ನು ಹಾಗೆ ಕಾಣುತ್ತಲೇ ಅಶ್ವತ್ಥಾಮರಿಗೆ ಭಯ ಉಂಟಾಯಿತು. ಕೃಷ್ಣನ ಅಪ್ಪಣೆಯಂತೆಯೇ ತನ್ನ ರೂಪವಾದ ಅಶ್ವತ್ಥಾಮರೊಂದಿಗೆ ಯುದ್ಧ ಮಾಡಿದ ಶಿವನು, ಅವರ ಎಲ್ಲಾ ಆಯುಧಗಳನ್ನೂ ಕಸಿದುಕೊಂಡ. ಈ ರೀತಿ [೧]ಆತ್ಮಹತ್ಯೆಗಳು ಕಂಡುಬರುತ್ತಿರುವುದು ಶ್ರೀಹರಿಯ ಅಚಿಂತ್ಯಶಕ್ತಿಗೆ ನಿದರ್ಶನ. ಶ್ರೀಹರಿಯಿಂದ ಪ್ರೇರಿತರಾಗಿ ಅಶ್ವತ್ಥಾಮರು, ಹಾಗೆ ಶಿವ-ರೂಪದ ತನ್ನಿಂದಲೇ ಅಸ್ತ್ರಗಳೆಲ್ಲ ಕಿತ್ತುಕೊಳ್ಳಲ್ಪಡಲು, ತಮ್ಮನ್ನೇ ಬಲಿಪಶುವನ್ನಾಗಿ ಮಾಡಿಕೊಂಡು ವಿಷ್ಣುವನ್ನು ಕುರಿತು ಒಂದು ಮಾನಸಯಜ್ಞವನ್ನು ಮಾಡಿದರು. ಯಜ್ಞದಿಂದ ಪ್ರೀತನಾದ

---

೧. ಇಲ್ಲಿ ಹೋರಾಟ ನಡೆದಿರುವುದು ಶಿವ-ಅಶ್ವತ್ಥಾಮರ ಮಧ್ಯೆ ; ಶಿವ ಮೂಲರೂಪವಾದರೆ, ಅಶ್ವತ್ಥಾಮ ಅವನ ಅವತಾರ ರೂಪ ; ಎಂದರೆ ಅವರು ಹೊಡೆದಾಡುತ್ತಿರುವುದು ಒಂದು ರೀತಿಯಲ್ಲಿ ಆತ್ಮಹತ್ಯೆ ಇದ್ದಂತೆ. ಇಂತಹ ಪ್ರಸಂಗಗಳು ಜೀವನ ಅಸ್ವಾತಂತ್ರ್ಯಕ್ಕೂ ಶ್ರೀಹರಿಯ ಅಚಿಂತ್ಯಾದ್ಭುತಶಕ್ತಿಗೂ ನಿದರ್ಶನ.

ಶ್ರೀಹರಿಯಿಂದ ಪ್ರೇರಿತನಾಗಿ ಶಿವನು ಅಶ್ವತ್ಥಾಮರಿಗೆ ಎಲ್ಲ ಆಯುಧಗಳನ್ನೂ ಹಿಂತಿರುಗಿಸುತ್ತಾ ನುಡಿದ – "ಪ್ರಭುವಾದ ವಿಷ್ಣುವಿನಿಂದ ಆಜ್ಞಪ್ತನಾಗಿ ಈವರೆಗೂ ನಾನು ಈ ಪಾಂಡವರ ಶಿಬಿರವನ್ನು ರಕ್ಷಿಸುತ್ತಿದ್ದೆ. ಹರಿಯ ಇಚ್ಛೆಯಿಂದಲೇ ಆಜ್ಞಪ್ತನಾಗಿ ನಾನೀಗ ನಿನಗೆ ಹಾದಿಯನ್ನು ಕೊಡುತ್ತಿರುವೆನು. ಈ ಎಲ್ಲ ಜನರನ್ನೂ ಕೊಲ್ಲಲು ಆಯುಧಗಳನ್ನೂ ಸಹ ನೀಡುತ್ತಿರುವೆನು." ಹೀಗೆ ಹೇಳಿ ಅವರ ಆಯುಧಗಳನ್ನೆಲ್ಲ ಕೊಟ್ಟು, ಶಿವ ಅಂತರ್ಧಾನನಾದ. ಅಶ್ವತ್ಥಾಮರು ಕೃಪ ಕೃತವರ್ಮರಿಗೆ – "ಶಿಬಿರದಿಂದ ಹೊರಬರುವ ಎಲ್ಲರನ್ನೂ ನೀವು ಕೊಂದುಬಿಡಿ" ಎಂದು ಹೇಳಿ, ಧನುಸ್ಸು ಹಾಗೂ ಖಡ್ಗಗಳೊಂದಿಗೆ ಯಮನಂತೆ ಅದರ ಒಳಕ್ಕೆ ನುಗ್ಗಿದರು.

## ಧೃಷ್ಟದ್ಯುಮ್ನನ ವಧೆ

ಆ ವೇಳೆಗೆ ಅಲ್ಲಿಗೆ ಆಗಮಿಸಿದ ಅಶ್ವತ್ಥಾಮರು ಮಲಗಿದ್ದ ಧೃಷ್ಟದ್ಯುಮ್ನನ ಬಳಿಗೆ ಹೋಗಿ, ಕಾಲಿನಿಂದ ಅವನ ಎದೆಯ ಮೇಲೆ ಒದೆಯಲು, ಅವನಿಗೆ ಎಚ್ಚರವಾಯಿತು. ಅವನು 'ನೀನು ಗುರುಪುತ್ರ ಅಶ್ವತ್ಥಾಮನೆಂಬುದು ನನಗೆ ತಿಳಿಯಿತು. ನಾನು ಮೇಲೆದ್ದು ಶಸ್ತ್ರವನ್ನು ಹಿಡಿದ ಮೇಲೆ ನೀವು ನನ್ನಲ್ಲಿ ಕೊಲ್ಲಿರಿ ; ಅದೇ ವೀರಧರ್ಮ ಅಲ್ಲವೇ? ಅದರಿಂದ ಶಸ್ತ್ರದಿಂದ ಪವಿತ್ರವಾದ ಪುಣ್ಯಲೋಕಗಳೂ ನನಗೆ ಲಭಿಸುವುವು' ಎಂದು ಕೋರಿಕೊಂಡ. ಅದಕ್ಕೆ ಕೋಪದಿಂದ ಅಶ್ವತ್ಥಾಮರು – "ಬ್ರಹ್ಮಜ್ಞಾನಿಯನ್ನು ಕೊಂದವರಿಗೆ ಅದರಲ್ಲೂ ವಿಶೇಷವಾಗಿ ಗುರುಗಳಿಗೆ ದ್ರೋಹ ಎಸಗಿದವರಿಗೆ ಪುಣ್ಯಲೋಕಗಳೆಂತು ದೊರೆತಾವು? ಎಲವೋ ಪಾಪಿ ! ನಿನ್ನಂತಹ ಪಾಪಿಗಳನ್ನು ಧರ್ಮಯುದ್ಧದಿಂದ ಕೊಲ್ಲುವುದು ನ್ಯಾಯವಲ್ಲ[೧]" ಎಂದರು. ಇನ್ನು ಸಾವು ತಪ್ಪಿದ್ದಲ್ಲವೆಂದು ತಿಳಿದು ಧೃಷ್ಟದ್ಯುಮ್ನನು ಸುಮ್ಮನಾದ. ಅವನು ದ್ರೋಣರ ಹತ್ಯೆಯ ನಂತರ ಪ್ರತಿರಾತ್ರಿಯೂ ಸ್ವಪ್ನದಲ್ಲಿ ಅಂತಹ ಸಾವನ್ನು, ಮೇಲೆ ಬಿದ್ದು ಸೆಳೆಯುವ ಕಾಳ-ರಾತ್ರಿಯನ್ನು ಕಾಣುತ್ತಿದ್ದ. ಅನಂತರ ಅಶ್ವತ್ಥಾಮರು ಅವನ ಕತ್ತಿನಲ್ಲಿ ಧನುಸ್ಸಿನ ಹಗ್ಗವನ್ನು ಸುತ್ತಿ, ಎದೆಯ ಮೇಲೆ ಕುಳಿತು ಮಥಿಸಿದರು. ಶ್ರಮದಿಂದ ದೇಹವನ್ನು ಬಿಟ್ಟು ಧೃಷ್ಟದ್ಯುಮ್ನನು ತನ್ನ ಲೋಕಕ್ಕೆ ತೆರಳಿದ ; ಅವನು ವಹ್ನಿಯ ಅವತಾರನಲ್ಲವೇ?[೨]

ಅನಂತರ ಶಿಖಂಡಿಯನ್ನು ಯುಧಾಮನ್ಯು, ಉತ್ತಮೌಜಸರನ್ನು ಜನಮೇಜಯನನ್ನೂ ಕೊಂದು, ದ್ರೌಪದಿಯ ಮಕ್ಕಳ ಬಳಿಗೆ ಬಂದರು. ಅವರು ಮೇಲೆದ್ದು ಬಾಣಗಳಿಂದ ಎದುರಿಸಿ ಬರಲು, ಖಡ್ಗದಿಂದ ಆ ಎಲ್ಲರನ್ನೂ [೩]ಸವ್ಯಾಪಸವ್ಯದಿಂದ ಸಂಹರಿಸಿದರು. ಅದೇ ರೀತಿ ಉಳಿದ

---

೧. ತನ್ನ ತಂದೆ ದ್ರೋಣರನ್ನು ಧೃಷ್ಟದ್ಯುಮ್ನ ಕೊಂದದ್ದು ಧರ್ಮವಲ್ಲವೆಂದು ಭಾವಿಸಿ ಅಶ್ವತ್ಥಾಮ ಅವನನ್ನು ಅಧರ್ಮದಿಂದ ಕೊಲ್ಲುವುದು ಗಮನಾರ್ಹ. ಆದರೆ, ಈ ಅಶ್ವತ್ಥಾಮರೇ ಮಹಾ ಅಧಾರ್ಮಿಕನಾದ ದುರ್ಯೋಧನನನ್ನು ಭೀಮ ಸಂಹರಿಸಿದ್ದು ಮಾತ್ರ 'ಅಧರ್ಮ' ಎಂದು ವಾದಿಸಿದ್ದು ಎಂತಹ ವಿಪರ್ಯಾಸ!

೨. ಈ ಬಾರಿ ಅಶ್ವತ್ಥಾಮರು ಸಮಯ ಹಾಳುಮಾಡದೇ ಧೃಷ್ಟದ್ಯುಮ್ನನೊಂದಿಗಿನ ತಮ್ಮ ಹಿಂದಿನ ಅನುಭವವನ್ನು ಉಪಯೋಗಿಸಿಕೊಂಡಿರುವರು.

೩. ಸವ್ಯಾಪಸವ್ಯ ಎಂದರೆ ಎಡಭುಜದಿಂದ ಬಲಪಕ್ಕ, ಬಲಭುಜದಿಂದ ಎಡಪಕ್ಕದವರೆಗೆ ಸೀಳುವ ಕ್ರಮ ಎಂದರ್ಥ.

ಪಾಂಡವರ ಮಕ್ಕಳನ್ನೂ ಕೊಂದರು. ಭೀಮಸೇನನ ಮಗನೂ, ಕಾಶಿರಾಜನ ಮಗಳ ಮಗನೂ ಆದ 'ಶರ್ವತ್ರಾತ' ಎಂಬ ಒಬ್ಬನ ಹೊರತು ಉಳಿದೆಲ್ಲರೂ ಅಶ್ವತ್ಥಾಮರಿಗೆ ಆಹುತಿಯಾದರು. ತನ್ನ ಮಗಳ ಮಗನು ಅಮರನಾಗಬೇಕು ಎಂದು ಕಾಶೀರಾಜನಿಂದ ಪ್ರಾರ್ಥಿಸಲ್ಪಟ್ಟಿದ್ದ ಶಿವನು, ತಾನು ಅಂತರ್ಧಾನನಾಗುವ ಕ್ಷಣದಲ್ಲಿಯೇ ಅವನನ್ನು ಕೈಲಾಸಕ್ಕೆ ಕರೆದೊಯ್ದಿದ್ದ. ಆದ್ದರಿಂದ ಅವನು ಉಳಿದುಕೊಂಡ. ಕೃಷ್ಣನು ಪರೀಕ್ಷಿತನನ್ನು ರಾಜನನ್ನಾಗಿ ಮಾಡಲು ಸಂಕಲ್ಪಿಸಿರುವುದನ್ನು ತಿಳಿದು, ಶಿವನು ಆ ಶರ್ವತ್ರಾತನನ್ನು ಮತ್ತೆ ಭೂಲೋಕಕ್ಕೆ ತೆರಳದಂತೆ ತಡೆದು ಅಲ್ಲಿಯೇ ಉಳಿಸಿಕೊಂಡ. ಸಾಮಾನ್ಯತಃ 'ಪಾಂಡವರೆಲ್ಲರನ್ನೂ' ಕೊಲ್ಲುವುದಾಗಿ ಅಶ್ವತ್ಥಾಮರು ಸಂಕಲ್ಪಿಸಿದ್ದರೂ, ಅವರದೇ ರೂಪವಾದ ಶಿವನಿಂದ 'ಶರ್ವತ್ರಾತನನ್ನು ಬಿಟ್ಟು' ಎಂಬುದಾಗಿ ಚಿಂತಿಸಲ್ಪಟ್ಟಿದ್ದಿತು. ಆದ್ದರಿಂದಲೇ ಬ್ರಹ್ಮಶಿರೋಸ್ತ್ರವು, ಅವರಿಬ್ಬರೂ ಶಿವನ ಅವತಾರರೇ ಆಗಿ ಒಬ್ಬರೇ ಆದ್ದರಿಂದ, ಶರ್ವತ್ರಾತನನ್ನು ಕೊಲ್ಲಲಿಲ್ಲ.

## ದುರ್ಯೋಧನನ ಮರಣ

ಚೇದಿ, ಪಾಂಚಾಲ,ಕರೂಶ, ಕಾಶಿ, ಮೊದಲಾದವರಿಗೆ ಸೇರಿದ ಎಲ್ಲರನ್ನೂ ಕೊಂದು, ಆ ಬಳಿಕ [೧]ಶಿಶುಗಳನ್ನೂ, ಸ್ತ್ರೀಯರನ್ನೂ ಕೊಲ್ಲ ಬಯಸಿ, ಆಗ ಪ್ರಳಯರುದ್ರನ ಅವತಾರರಾದ ಅಶ್ವತ್ಥಾಮರು ಶಿಬಿರಕ್ಕೆ ಎಲ್ಲ ಕಡೆಗಳಿಂದಲೂ ಬೆಂಕಿ ಇಟ್ಟರು. ಬದುಕಲೆಂದು ತಪ್ಪಿಸಿಕೊಂಡು ಹೊರಗೆ ಓಡಿದವರನ್ನೆಲ್ಲ ಬಾಗಿಲಲ್ಲಿದ್ದ ಕೃಪ ಕೃತವರ್ಮರು ಕೊಂದು ಹಾಕಿದರು. ಧೃಷ್ಟದ್ಯುಮ್ನನ ಸೂತನೊಬ್ಬನು ಮಾತ್ರ ದೈವೇಚ್ಛೆಯಿಂದ ಉಳಿದುಕೊಂಡ. ಕೃತವರ್ಮನು ಖಡ್ಗದಿಂದ ಹೊಡೆಯುತ್ತಿದ್ದುದನ್ನು ನೋಡಿ, ಏಟು ಬೀಳುವ ಮುನ್ನವೇ ಭೂಮಿಗೆ ಬಿದ್ದ ಅವನು, ಕವಿದಿದ್ದ ಕತ್ತಲೆಯಿಂದಾಗಿ ಅವರ ಗಮನಕ್ಕೆ ಬೀಳಲಿಲ್ಲ. ಅವರು ಬೇರೆಯವನನ್ನು ಕೊಲ್ಲಲು ಹೊರಟಾಗ, ಮೇಲೆದ್ದ ಇವನು ದ್ರೌಪದಿಯ ಬಳಿಗೆ ಓಡಿ, ಅವಳಿಗೆ ಎಲ್ಲವನ್ನೂ ತಿಳಿಸಿದ. ದುಃಖಿತಳಾದ ದ್ರೌಪದಿಯು ಭೀಮನಿಗೆ ಅದನ್ನು ತಿಳಿಸಲು, ಭೀಮನು ಧನುರ್ಧಾರಿಯಾಗಿ ರಥವನ್ನೇರಿ ಅಶ್ವತ್ಥಾಮರನ್ನು ಬೆನ್ನಟ್ಟಿ ಹೊರಟ.

ಈ ಮಧ್ಯೆ ಸಂತೋಷದಿಂದ ಅಶ್ವತ್ಥಾಮರು ದ್ರೌಪದಿಯ ಮಕ್ಕಳ ತಲೆಗಳನ್ನು ತೆಗೆದು-ಕೊಂಡು, ಕೃಪ ಕೃತವರ್ಮರೊಂದಿಗೆ ಹೊರಟು, ಸಾಯಲು ಸಿದ್ಧನಾಗಿದ್ದ ದುರ್ಯೋಧನನ ಬಳಿಗೆ ಹೋದರು. ಆ ತಲೆಗಳನ್ನು ನೋಡಿ, ಎಲ್ಲ ವಾರ್ತೆಯನ್ನು ಕೇಳಿ, ಸಂತೋಷಗೊಂಡ ಆ ಪಾಪಿಯು ಕೂಡಲೇ ದೇಹವನ್ನು ಬಿಟ್ಟ.

ಕೃಷ್ಣ ಹಾಗೂ ಭೀಮಾರ್ಜುನರಿಗೆ ಹೆದರಿ ಅಶ್ವತ್ಥಾಮಾದಿ ಆ ಮೂವರೂ ಅಲ್ಲಿಂದ ದೂರಕ್ಕೆ ಪಲಾಯನ ಮಾಡಿದರು.

---

೧. ಶಿಶುಹತ್ಯೆ ಸ್ತ್ರೀಹತ್ಯೆಗಳನ್ನು ಮಾಡಿದ್ದು ಅಶ್ವತ್ಥಾಮರಾದರೂ, ಅದನ್ನು ಮಾಡಿಸಿದ್ದು ದುರ್ಯೋಧನನಾದ್ದರಿಂದ ಆ ಪಾಪಕ್ಕೆ ಮುಖ್ಯವಾಗಿ ಭಾಗಿ ಎನ್ನಿಸುವವನು ಅವನೇ ಎಂದಾಗುವುದು.

# ಬ್ರಹ್ಮಶಿರೋಸ್ತ್ರಪ್ರಸಂಗ

ಒಬ್ಬಂಟಿಗರಾಗಿ ರಥಾರೂಢರಾಗಿ ಹೊರಟಿದ್ದ ಅಶ್ವತ್ಥಾಮರನ್ನು ರಥವನ್ನೇರಿ ಭೀಮನು ಬೆನ್ನಟ್ಟಿ ಹೊರಟ. ಭೀಮನು ನುಗ್ಗಿ ಬರುತ್ತಿರುವುದನ್ನು ನೋಡಿ ಅಶ್ವತ್ಥಾಮರು ಬಹಳ ಭಯಪಟ್ಟು ಕುದುರೆಗಳನ್ನು ಬಹಳ ವೇಗವಾಗಿ ಓಡಿಸಿದರು. ಆದರೂ ಭೀಮನು ತಮ್ಮನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಅಶ್ವತ್ಥಾಮರು ಅನಿವಾರ್ಯವಾಗಿ ಕೋಪದಿಂದ ಹಿಂದಿರುಗಿ ಯುದ್ಧಕ್ಕೆ ತೊಡಗಿ, ಭೀಮನಿಂದ ಪರಾಜಿತರಾದರು ; ಬ್ರಹ್ಮಶಿರೋಸ್ತ್ರವನ್ನು ಕೈಗೆತ್ತಿಕೊಂಡರು. ಈ ಮಧ್ಯೆ ಕೃಷ್ಣನು, ಅರ್ಜುನ ಹಾಗೂ ಧರ್ಮರಾಜರೊಂದಿಗೆ ಅಲ್ಲಿಗೆ ಧಾವಿಸಿದ. ಆ ಅಸ್ತ್ರ ಹಾಗೂ ಭೀಮ ಇಬ್ಬರನ್ನೂ ಅಮೋಘವೆಂದು ಸಾರಲೆಂದೇ ಕೃಷ್ಣನು ಅಲ್ಲಿಗೆ ಬಂದ. ಭೀಮನೂ ಅವಧ್ಯ ; ಅಂತೆಯೇ ಆ ಅಸ್ತ್ರವೂ ಅಮೋಘ. ಹಾಗೆಂದು ಕೃಷ್ಣ ಮಾಡಿದ ನಿಯಮ ; ಭೀಮನಂತೂ ಆ ಅಸ್ತ್ರವೇ[೧] ; ಆ ಅಸ್ತ್ರಕ್ಕೆ ಗಾಯತ್ರಿಯೇ ಮಂತ್ರ ; ಬ್ರಹ್ಮದೇವರೇ ಧ್ಯಾನದೇವತೆ ; ಜಗತ್ಸೃಷ್ಟಿಕರ್ತನಾದ ಸ್ವಯಂ ನಾರಾಯಣನೇ ಧ್ಯೇಯದೇವತೆ.

ಅಲ್ಲಿಗೆ ಬಂದ ಕೃಷ್ಣನು ಯುಧಿಷ್ಠಿರ ಪಾರ್ಥರಿಬ್ಬರಿಗೂ ಹಿಂದೆ ಅಶ್ವತ್ಥಾಮರು ಮಾಡಿದ ಕಾರ್ಯವನ್ನು ತಿಳಿಸಿದ. ಹಿಂದೊಮ್ಮೆ ಸಮುದ್ರತೀರದಲ್ಲಿ ಧ್ಯಾನದ ಭಂಗಿಯಲ್ಲಿ ಕುಳಿತಿದ್ದ ಕೃಷ್ಣನ ಬಳಿಗೆ ಬಂದು ಅಶ್ವತ್ಥಾಮರು ಅವನ ಆಯುಧಗಳನ್ನು ಕೇಳಿದ್ದರು. ಆದರೆ ಅವುಗಳನ್ನು ಎತ್ತಲೂ ಸಹ ಅವರ ಕೈಲಿ ಸಾಧ್ಯವಾಗದೇ ಹೋಯಿತು. ಆಯುಧಗಳನ್ನು ಪಡೆಯುವ ಉದ್ದೇಶವನ್ನು ಕೇಳಿದ್ದಕ್ಕೆ ಅವರು 'ಭೂಮಿಯಲ್ಲಿ ನಿನ್ನನ್ನು ಇಲ್ಲವಾಗಿಸಿ, ಭೂಮಿಯನ್ನು ದುರ್ಯೋಧನನಿಗೆ ಕೊಡಬೇಕೆಂದಿದ್ದ' ತಮ್ಮ ಅಭಿಪ್ರಾಯವನ್ನು ತಿಳಿಸಿದರು. 'ಇನ್ನೊಮ್ಮೆ ಹೀಗೆ ಮಾಡಬೇಡ' ಎಂದು ಕೃಷ್ಣ ಹೇಳಿದ್ದ.

ಭೂಮಿಯಲ್ಲಿ ಪಾಂಡವರನ್ನು ಇಲ್ಲವಾಗಿಸುವ ಉದ್ದೇಶದಿಂದ ಅಶ್ವತ್ಥಾಮರು ಪ್ರಯೋಗಿಸಿದ ಅಸ್ತ್ರವು ಜ್ವಲಿಸುತ್ತಾ ಬರುವುದನ್ನು ನೋಡಿ, ಕೃಷ್ಣನಿಂದ ಪ್ರೇರಿತನಾದ ಅರ್ಜುನನು – 'ದ್ರೋಣಪುತ್ರನಿಗೂ, ಎಲ್ಲ ಪ್ರಾಣಿಗಳಿಗೂ, ನನಗೂ ಒಳಿತಾಗಲಿ' ಎಂದು ಹೇಳಿ, ತಾನೂ ಸಹ ಬ್ರಹ್ಮಶಿರೋಸ್ತ್ರವನ್ನೇ ಅದರ ಉಪಶಾಂತಿಗಾಗಿ ಪ್ರಯೋಗಿಸಿದ. ಅಸ್ತ್ರ ತಿಳಿಯದವರ ಮೇಲೆ ಬಿಡಲ್ಪಟ್ಟ ಆ ಅಸ್ತ್ರವು ಅಸ್ತ್ರ ಬಿಟ್ಟವನನ್ನೇ ಕೊಲ್ಲುವುದರಿಂದ, ಗುರುಭಕ್ತಿಯಿಂದಾಗಿ ಅರ್ಜುನನು, ಅಶ್ವತ್ಥಾಮರಿಗೂ ಶುಭವನ್ನು ಹಾರೈಸಿದ. ಆ ಎರಡು ಅಸ್ತ್ರಗಳೂ ಸೇರಿದಾಗ ಪ್ರಾಣಿಗಳ ನಾಶವು ಖಚಿತವಾದ್ದರಿಂದ, ಕರುಣಾಳುವಾದ ಅರ್ಜುನನು, ಹಾಗಾಗದಿರಲೆಂದು ಪ್ರಾಣಿಗಳಿಗೂ ಶುಭವನ್ನು ಹಾರೈಸಿದ. ಹಾಗಿದ್ದರೂ ಆ ಅಸ್ತ್ರಗಳ ಸಂಯೋಗವು ಪ್ರಾಣನಾಶವನ್ನು ತಪ್ಪದೇ ಉಂಟು ಮಾಡುತ್ತಿದ್ದುದರಿಂದ, ಅವುಗಳು ಒಂದನ್ನೊಂದು ಸೇರದಂತೆ ಅವುಗಳ ಮಧ್ಯದಲ್ಲಿ ಕೂಡಲೇ ಎಣೆಯಿರದ ಶಕ್ತಿಯ ವೇದವ್ಯಾಸರು ನಿಂತರು. ಆ ಎರಡೂ ಅಸ್ತ್ರಗಳನ್ನು ದೂರದಲ್ಲಿಯೇ ತಡೆದು,

---

೧. ಭೀಮನು ಆ ಅಸ್ತ್ರವೇ ಎಂದರೆ ಅಸ್ತ್ರಾಭಿಮಾನಿದೇವತೆ ಎಂದರ್ಥ. ಆದ್ದರಿಂದಲೇ ಆ ಅಸ್ತ್ರದ ಭಯ ಭೀಮನಿಗೆ ಸರ್ವಥಾ ಇರಲಿಲ್ಲ ಎಂಬ ವಿಶೇಷಾಂಶ ಸೂಚಿತ.

ಆ ಪುರುಷೋತ್ತಮರಾದ ವ್ಯಾಸರು ಅವರಿಗೆ ಹೇಳಿದರು – "ಈ ಅಸ್ತ್ರವನ್ನು ತಿಳಿದವರು ಈಗಲೂ ಇರುವರು ; ಹಿಂದೆಯೂ ಇದ್ದರು ; ಆದರೆ ಇಂತಹುದನ್ನು ಅವರು ಎಂದೂ ಮಾಡಲಿಲ್ಲ. ಲೋಕಕ್ಕೆ ಕೇಡೆಸಗುವ ಇಂತಹ ಕೆಲಸವನ್ನು ಸಜ್ಜನರು ಹೇಗೆ ತಾನೇ ಮಾಡಿಯಾರು ?" ಅದಕ್ಕೆ ಅರ್ಜುನನು, "ನಾನು ಮಹಾಪತ್ತಿನಲ್ಲಿ ಶಾಂತಿಗೋಸುಗವಾಗಿಯೇ ಅಸ್ತ್ರವನ್ನು ಪ್ರಯೋಗಿಸ-ಬೇಕಾಯಿತು. ಆದ್ದರಿಂದ ದಯವಿಟ್ಟು ಮನ್ನಿಸಬೇಕು" ಎಂದು ವಿಜ್ಞಾಪಿಸಿದ. ಅಶ್ವತ್ಥಾಮರು ಸಹ ಹಾಗೆಯೇ ನುಡಿಯಲು, ವೇದವ್ಯಾಸರು ಅವರಿಬ್ಬರಿಗೂ ಅಸ್ತ್ರಗಳನ್ನು ಕೂಡಲೇ ಹಿಂದಕ್ಕೆ ತೆಗೆದುಕೊಳ್ಳಲು ಹೇಳಿದರು.

ಅರ್ಜುನನು ಕೂಡಲೇ ಅಸ್ತ್ರವನ್ನು ಹಿಂತೆಗೆದುಕೊಂಡ. ಆದರೆ ಹಾಗೆ ಹಿಂತೆಗೆದು-ಕೊಳ್ಳುವುದರಲ್ಲಿ ವಿಫಲರಾದ ಅಶ್ವತ್ಥಾಮರನ್ನು ನೋಡಿ ಕೃಷ್ಣನು – "ಅರ್ಜುನನು ಬಾಲ್ಯ-ದಿಂದಲೂ ಕ್ಷಾತ್ರತೇಜಸ್ಸಿನವನು ಹಾಗೂ ಬ್ರಹ್ಮಚಾರಿ. ಆದ್ದರಿಂದ ಅವನಿಗೆ ಆ ಅಸ್ತ್ರವನ್ನು ಹಿಂದಕ್ಕೆ ತೆಗೆದುಕೊಳ್ಳಲು ಸಾಧ್ಯವಾಯಿತು. ದ್ರೋಣಪುತ್ರನೇ ಆಗಿದ್ದರೂ ಅಶ್ವತ್ಥಾಮರಿಗೆ [1]ಬ್ರಹ್ಮ-ಚರ್ಯವಿಲ್ಲದ್ದರಿಂದಾಗಿ ಅದು ಸಾಧ್ಯವಾಗುತ್ತಿಲ್ಲ " ಎಂದು ವಿವರಿಸಿದ. ಅದಕ್ಕೆ ವ್ಯಾಸರು ಅಶ್ವತ್ಥಾಮರಿಗೆ – "ಉಪಸಂಹಾರ ಮಾಡುವ ಸಾಮರ್ಥ್ಯವಿಲ್ಲದ ನೀನು ನೈಸರ್ಗಿಕವಾಗಿ ನಿನ್ನಲ್ಲಿರುವ ಮಣಿಯನ್ನು ಕೊಡು. ನೀನು ಮೊದಲೇ ಭೀಮನಿಂದ ಸೋತಿರುವುದರಿಂದ, ಅವನಿಗೇ ಆ ಮಹಾಕಾಂತಿಯ ಮಣಿಯನ್ನು ಒಪ್ಪಿಸು. ಅಲ್ಲದೆ ಮಾತಿನಿಂದಾದರೂ ಪಾಂಡವರಿಗೆ ಹಾನಿಯಾಗದಿರುವಂತೆ ಆ ಅಸ್ತ್ರವನ್ನು ಹಿಂತೆಗೆದುಕೋ" ಎಂದು ಅಪ್ಪಣೆ ಮಾಡಿದರು. ಅದರಂತೆ ಅಶ್ವತ್ಥಾಮರು ತಲೆಯ ಮೇಲಿದ್ದ ಆ ಮಣಿಯನ್ನು ಕಿತ್ತಿ ಭೀಮನಿಗೆ ಒಪ್ಪಿಸಿದರು. ಅದು ಮುಪ್ಪುಸಾವುಗಳನ್ನೂ, ಹಸಿವು ನೀರಡಿಕೆಗಳನ್ನೂ, ದೈಹಿಕಶ್ರಮವನ್ನೂ ಇಲ್ಲವಾಗಿಸುವ ಸಾಮರ್ಥ್ಯವನ್ನೂ, ದುರ್ಗಂಧ ಹಾಗೂ ಕತ್ತಲೆಗಳನ್ನೂ ತೆಗೆದುಹಾಕುವ ಸಾಮರ್ಥ್ಯವನ್ನೂ ಹೊಂದಿದ್ದ ದಿವ್ಯಮಣಿಯಾಗಿತ್ತು ; 'ಐದುಜನ ಪಾಂಡವರನ್ನು ಮಾತ್ರವೇ ಅಸ್ತ್ರವು ಸಂಹರಿಸದಿರಲಿ' ಎಂದು ನುಡಿದರು. ಅದಕ್ಕೆ ವ್ಯಾಸರು ಅರ್ಜುನನಿಗೆ – "ವತ್ಸ ! ಅಶ್ವತ್ಥಾಮರು ಬಿಟ್ಟಿರುವ ಅಸ್ತ್ರವನ್ನೂ ಸಹ ನೀನೇ ಉಪಸಂಹರಿಸು" ಎನ್ನಲು, ಅರ್ಜುನನು ಅವರಿಗೆ ನಮಸ್ಕರಿಸಿ ಹಾಗೆಯೇ ಮಾಡಿದ.

## ಕೃಷ್ಣನ ಶಾಪಕ್ಕೆ ಗುರಿಯಾದ ಅಶ್ವತ್ಥಾಮ

ಕೃಷ್ಣನು ಅಶ್ವತ್ಥಾಮರಿಗೆ – "ಉತ್ತರೆಯ ಗರ್ಭದಲ್ಲಿನ ಪಾಂಡವರ ಒಂದು ಸಂತತಿಯ ಮಟ್ಟಿಗೆ ಈ ಅಸ್ತ್ರದ ಬಾಧೆ ತಟ್ಟದಿರುವಂತೆ ಮಾತಿನಿಂದ ಈ ಅಸ್ತ್ರವನ್ನು ಹಿಂತೆಗೆದುಕೋ"

---

೧. ದುರ್ಯೋಧನನು ಸಾಯುವ ಮುನ್ನ ಅಶ್ವತ್ಥಾಮರಿಗೆ ಪಟ್ಟಾಭಿಷೇಕ ಮಾಡಿ ಪಾಂಡವರ ಸಂತತಿಯನ್ನು ವಿನಾಶ ಮಾಡಿ ತನ್ನ ಸಂತತಿಯನ್ನು ಬೆಳೆಸಲು ಕೇಳಿಕೊಂಡ ಮಾತನ್ನು ಅಶ್ವತ್ಥಾಮರು ಅಂಗೀಕರಿಸಿದ್ದೇ ಅವರ ಬ್ರಹ್ಮಚರ್ಯದ ಲೋಪಕ್ಕೆ ಕಾರಣವಾಯಿತು ಎಂಬುದು ಇಲ್ಲಿಯ ಭಾವ ; ಇಂತಹ ಬ್ರಹ್ಮಚರ್ಯದ ಲೋಪವೂ ಸಹ ಬ್ರಹ್ಮಶಿರೋಸ್ತ್ರದಂತಹ ಮಹಾಸ್ತ್ರವನ್ನು ಉಪಸಂಹರಿಸುವ ಸಾಮರ್ಥ್ಯಕ್ಕೆ ಲೋಪ ತಂದಿತು.

ಎನ್ನಲು 'ತಂಗಿಯ ಮಗನ ಸಂತತಿಯೆಂಬ ಪಕ್ಷಪಾತದಿಂದ ನೀನು ಹಾಗೆ ಹೇಳುತ್ತಿರುವಿ. ಉತ್ತರೆಯ ಗರ್ಭವನ್ನು ನಾಶಮಾಡುವ ಸಲುವಾಗಿ ಅಲ್ಲಿಯೇ ಈ ಅಸ್ತ್ರವನ್ನು ಬೀಳಿಸುವೆನು' ಎಂದು ಅಶ್ವತ್ಥಾಮರು ಉತ್ತರಿಸಿದರು. ಮತ್ತೆ ಕೃಷ್ಣನು ''ಗರ್ಭವನ್ನು ನಾಶ ಮಾಡಬೇಕೆಂಬುದೇ ನಿನ್ನ ನಿಶ್ಚಯವಾಗಿದ್ದಲ್ಲಿ ಅದರ ಮೇಲೆ ಬೀಳಿಸಬೇಡ. ಬೇಕಾದರೆ ಅಭಿಮನ್ಯುವಿನ ಮೃತದೇಹದಲ್ಲಿ ಬೀಳಿಸು. ಆಗಲೂ ನಿನ್ನ ಅಸ್ತ್ರದಿಂದ ಕೊಲ್ಲಲ್ಪಡುವ ಗರ್ಭವನ್ನು ನಾನೇ ಮರಳಿ ಬದುಕಿಸುವೆನು'' ಎಂದು ಹೇಳಿದ, ಅದಕ್ಕೆ ಅಶ್ವತ್ಥಾಮರು, ''ನಾನು ಅವಳ ಗರ್ಭದಲ್ಲಿಯೇ ಅದನ್ನು ಬೀಳಿಸುವೆನು'' ಎಂದೇ ನುಡಿಯಲು, ಸ್ವಲ್ಪ ಕೋಪಗೊಂಡವನಂತೆ ಕೃಷ್ಣನು ಅವರಿಗೆ ಹೇಳಿದ – ''ಕೇಡುಬುದ್ಧಿಯವನೇ ! ನನ್ನ ಶಕ್ತಿಯನ್ನು ನೋಡು. ನಿನಗೆ ಸಾಧ್ಯವಾದದ್ದನ್ನೆಲ್ಲ ಮಾಡಿಕೋ. ನೀನು ಎಷ್ಟೇ ಪ್ರಯತ್ನಪಟ್ಟರೂ ಆ ಗರ್ಭವನ್ನು ನಾನು ಖಂಡಿತ ಬದುಕಿಸುವೆನು. ಒಂದು ಸಾವಿರ ವರ್ಷಗಳ ಕಾಲ ಭೂಮಿಯ ಮೇಲೆ ಪಾಂಡವರ ಸಂತತಿ ಉಳಿಯುವುದು. ಅಲ್ಲಿಯವರೆಗೂ ನನ್ನಿಂದ ರಕ್ಷಿತವಾದ ಅದನ್ನು ನಾಶಮಾಡಲು ಯಾರಿಂದಲೂ ಸಾಧ್ಯವಿಲ್ಲ. ಪಾಂಡವರ ಸಂತತಿಯನ್ನು ಸಂಹರಿಸಿ, ದುರ್ಯೋಧನನ ಸಂತತಿಯನ್ನು ಮತ್ತೆ ಬೆಳೆಸಬೇಕೆಂಬ ನಿನ್ನ ಕೇಡುಬುದ್ಧಿ ನನಗೆ ತಿಳಿದಿದೆ. ವಿಷ್ಣುವಿನಿಂದ ವಿಮುಖನಾಗಿ ಮುಕ್ತಿ ಬಯಸುವವನ ಇಚ್ಛೆಯಂತೆ, ಆ ನಿನ್ನ ಅಭಿಲಾಷೆಯು ವ್ಯರ್ಥವಾಗುವುದು. ನೀನು ನರಾಧಿರೂಢನಾಗಿಯೇ ಓಡಾಡುವಂತಾಗಲಿ, ಭೂಪ್ರದೇಶವನ್ನು ಸೇರುವುದು ನಿನಗೆ ಸಾಧ್ಯವಾಗದಿರಲಿ. ಎಲೈ ತಿಳಿಗೇಡಿಯೇ ! ಮೈಯೆಲ್ಲಾ ಹುಣ್ಣಾಗಿ, ದುರ್ಗಂಧದಿಂದ ಕೂಡಿದವನಾಗಿ , ಪಾಂಡವರ ಸಂತತಿ ಭೂಮಿಯ ಮೇಲೆ ಇರುವವರೆಗೂ ನೀನು ಕಾಡುಗಳಲ್ಲೇ ಸದಾ ಅಲೆಯುತ್ತಿರು.'' ಕೃಷ್ಣನ ಮಾತುಗಳನ್ನು ವ್ಯಾಸರೂ ಅನುಮೋದಿಸಿದರು. ಶ್ರೀಹರಿಯ ಎರಡು ರೂಪಗಳಿಂದಲೂ ಹಾಗೆ ಹೇಳಲ್ಪಟ್ಟ ಅಶ್ವತ್ಥಾಮರು ವೇದವ್ಯಾಸರನ್ನು ಬೇಡಿಕೊಂಡರು – ''ಪ್ರಭು ! ನಿಮ್ಮ ಸಮಾಗಮವು ಮಾತ್ರ ನಾನು ಬಯಸಿದಾಗಲೆಲ್ಲ ನನಗೆ ದೊರೆಯಲಿ ; ಇದಕ್ಕೆ ಮಾತ್ರ ವಿಘ್ನ ಉಂಟಾಗದಿರಲಿ.'' ವ್ಯಾಸರು ಅದಕ್ಕೆ ಸಮ್ಮತಿಸಿದರು.

## ಅಶ್ವತ್ಥಾಮರ ನಿರ್ಗಮನ

ವೇದವ್ಯಾಸರಿಗೆ ನಮಸ್ಕರಿಸಿ, ಅಶ್ವತ್ಥಾಮರು, ತಾವು ಸ್ವಪ್ನದಲ್ಲಿ ಕಂಡದ್ದನ್ನು ನೆನೆಸಿಕೊಳ್ಳುತ್ತಾ ಅಲ್ಲಿಂದ ಹೊರಟರು. [೧]ಸ್ವಪ್ನದಲ್ಲಿ ಅವರಿಗೆ ತಮ್ಮಿಂದ ದ್ರೌಪದೀಪುತ್ರರ ವಧೆಯೂ, ತಮ್ಮನ್ನು ಕೊಲ್ಲುವುದಾಗಿ ದ್ರೌಪದಿಯ ಮುಂದೆ ಅರ್ಜುನನು ಪ್ರತಿಜ್ಞೆ ಮಾಡುವುದೂ, ತನ್ನನ್ನು ಬಂಧಿಸಿ ಅವನು ಶಿಬಿರಕ್ಕೆ ಕರೆದೊಯ್ಯುವುದೂ, 'ಓ ! ಇವನನ್ನು ಬಿಟ್ಟುಬಿಡು' ಎಂಬುದಾಗಿ

---

೧. ಶ್ರೀಮದ್ಭಾಗವತಪುರಾಣದಲ್ಲಿ ಬಂದಿರುವ ನಿರೂಪಣೆಯು ಅಶ್ವತ್ಥಾಮರು ಹಾಗೆ ಕಂಡ ಸ್ವಪ್ನಕ್ಕೆ ಸಂಬಂಧಿಸಿದ್ದು ಎಂಬ ವಿವರಣೆಯು ಶ್ರೀಮದ್ಭಾಗವತತಾತ್ಪರ್ಯನಿರ್ಣಯದಲ್ಲಿದೆ : ಸ್ವಪ್ನೋಽಯಮ್ – 'ಪಾರ್ಥಾನುಯಾತಮಾತ್ಮಾನಂ ದ್ರೌಣಿಃ ಸ್ವಪ್ನೇ ದದರ್ಶ ಹ। ಬಂಧನಂ ಚಾತ್ಮನಸ್ತತ್ರ ದ್ರೌಪದ್ಯಾ ಚೈವ ಮೋಕ್ಷಣಮ್' ಇತಿ ಸ್ಕಾಂದೇ। –ಭಾಗವತತಾತ್ಪರ್ಯ (೧/೭)

ದ್ರೌಪದಿಯು ನುಡಿಯುವುದೂ, 'ಇಲ್ಲ' ಎನ್ನುವ ಭೀಮನ ಮಾತೂ, ಕೃಷ್ಣನ ಮಾತಿನಂತೆ ಮಣಿಯನ್ನು ಕಿತ್ತುಕೊಂಡು, ದೇಶಾಂತರಕ್ಕೆ ಕಳುಹಿಸುವುದೂ ಇವೆಲ್ಲ ಕಂಡಿದ್ದಿತು. ಅದೆಲ್ಲ ಪ್ರಾಯಃ ನಿಜವೇ ಆಯಿತು ಎಂದುಕೊಳ್ಳುತ್ತಾ ಅವರು ಹೊರಟರು.

ಕೃಷ್ಣನು ಹೇಳಿದ್ದನ್ನೆಲ್ಲ ಅನುಭವಿಸಿದ ಅವರು, ವೇದವ್ಯಾಸರ ಶಿಷ್ಯರಾಗಿ, ಮುಂಬರುವ ದ್ವಾಪರದಲ್ಲಿ ವೇದಗಳ ವಿಭಾಗವನ್ನು ಮಾಡುವರು. ಆ ಬಳಿಕ ಸಪ್ತರ್ಷಿಗಳಲ್ಲಿ ಒಬ್ಬರಾಗಿ ವೇದವ್ಯಾಸರ ಅನುಗ್ರಹದಿಂದ, ಕೃಷ್ಣಭಕ್ತಿಯಿಂದಾಗಿ ಸ್ವರೂಪದಲ್ಲಿ ಐಕ್ಯವನ್ನು ಹೊಂದುವರು.

ಕೃಪಾಚಾರ್ಯರು ಪಾಂಡವರ ಬಳಿಗೆ ಹೋಗಿ ಅವರಿಂದ ಆದರದಿಂದ ಪೂಜಿತರಾಗಿ, ಅವರ ಸಂತತಿಯವರಿಗೆ ಆಚಾರ್ಯರಾದರು. ಅನಂತರ ವೇದವ್ಯಾಸರ ಶಿಷ್ಯತ್ವವನ್ನು ಮತ್ತೆ ಹೊಂದಿ, ಅವರನ್ನು ಸೇವಿಸುತ್ತಾ , ಅಶ್ವತ್ಥಾಮರೊಂದಿಗೆ ಸಪ್ತರ್ಷಿಗಳಲ್ಲಿ ಒಬ್ಬರಾಗುವರು. ಕೃತವರ್ಮನು ಕೃಷ್ಣನ ಅಪ್ಪಣೆಯನ್ನು ಪಡೆದುಕೊಂಡು ದ್ವಾರಕೆಗೆ ತೆರಳಿದ. ದ್ರೌಪದಿಗೆ ಆ ಮಣಿಯನ್ನು ಕೊಟ್ಟು ಭೀಮನು ಅವಳನ್ನು ಸಮಾಧಾನಪಡಿಸಿದ. ಭೀಮನ ವಾಕ್ಯದಿಂದ ಕೋಪ ತೊರೆದ ಅವಳು ಆ ಮಣಿಯನ್ನು ಧರ್ಮರಾಜನಿಗೆ ಕೊಟ್ಟಳು. ರಾಜಯೋಗ್ಯವಾದ ಮಣಿಯನ್ನು ಭೀಮನು ತನಗೆ ಕೊಟ್ಟಿದ್ದರಿಂದ, ಅವನನ್ನು ಸ್ತ್ರೀಪಕ್ಷಪಾತಿಯೆಂದು ಲೋಕದ ಜನರು ತಪ್ಪು ತಿಳಿಯಕೂಡದೆಂದೇ ಪತಿಯ ಹಿತಕ್ಕಾಗಿ ಅವಳು ಹಾಗೆ [೧]ಮಾಡಿದಳು[೨]. ಧರ್ಮರಾಜನೂ ಆ ಮಣಿಯನ್ನು ತನ್ನ ತಲೆಯ ಮೇಲೆ ಧರಿಸಿಕೊಂಡು ಚಂದ್ರನಂತೆ ಶೋಭಿಸಿದ.



೧. ಶಂಖಚೂಡ ಎಂಬ ಯಕ್ಷನನ್ನು ಸಂಹರಿಸಿ ಅವನ ತಲೆಯ ಮೇಲಿದ್ದ ಮಣಿಯನ್ನು ಶ್ರೀಕೃಷ್ಣ ತನ್ನ ಅಣ್ಣನಾದ ಬಲರಾಮನಿಗೆ ಕೊಟ್ಟ ವಿವರ ಶ್ರೀಮದ್ಭಾಗವತದಲ್ಲಿದೆ. ಅದರಂತೆ ಭೀಮಸೇನನೂ ಸಹ ಅಶ್ವತ್ಥಾಮರಿಂದ ಪಡೆದುಕೊಂಡ ಮಣಿಯನ್ನು ಅಣ್ಣನಾದ ಧರ್ಮರಾಜನಿಗೆ ತಲುಪಿಸಿ ಕೃಷ್ಣನ ಕಾರ್ಯವನ್ನು ಅನುಸರಿಸಿದ. ಹೀಗೆ ಕೃಷ್ಣಭೀಮರ ವರ್ತನೆಯಲ್ಲಿನ ಸಾಮ್ಯ ಅತ್ಯಂತ ಗಮನಾರ್ಹವಾದುದು.

೨. ದ್ರೌಪದಿಯ ಈ ಮಣಿತ್ಯಾಗದ ಪ್ರಸಂಗ ಸೌಗಂಧಿಕಪುಷ್ಪದ ಪ್ರಸಂಗದಲ್ಲೂ ಅವರಿಗೆ ಪುಷ್ಪಗಳ ಮೇಲೆ ಆಸೆ ಇರಲಿಲ್ಲ ಎಂಬುದನ್ನು ಸ್ಫುಟಪಡಿಸುವುದು. ನಿಜಕ್ಕೂ ದ್ರೌಪದಿಗೆ ಬೇಕಿದ್ದುದು ಭೀಮಸೇನನ ಅಪಾರ ಪರಾಕ್ರಮದ ಪರಿಚಯವನ್ನು ಲೋಕಕ್ಕೆ ಮಾಡಿಕೊಡುವುದು ಮಾತ್ರ ಎಂಬ ಅಲ್ಲಿಯ ವಿವರವನ್ನು ಇದು ಸ್ಪಷ್ಟಪಡಿಸುವುದು.

# ಸ್ತ್ರೀ ಪರ್ವ

## ಅಭೇದ್ಯ ಭೀಮ

ವೇದವ್ಯಾಸರಿಂದಲೂ, ಕೃಷ್ಣನಿಂದಲೂ ಕೂಡಿಕೊಂಡು, ಪಾಂಡವರು ಸಪತ್ನೀಕರಾಗಿ ತಮ್ಮ ರಾಜಧಾನಿಯಾದ ಹಸ್ತಿನಾಪುರಕ್ಕೆ ಹೊರಟರು ; ಸಜ್ಜನರು ಅಂತಃಶತ್ರುಗಳನ್ನು ಸಂಹರಿಸಿ ಮುಕ್ತಿಯನ್ನು ಪಡೆಯುವಂತೆ. ಧರ್ಮರಾಜನ ಅನಂತರ ಧೃತರಾಷ್ಟ್ರನ ಪಾದಗಳಿಗೆ ನಮಸ್ಕರಿಸಲು ಹೊರಟ ಭೀಮನನ್ನು ಕೃಷ್ಣನು ಪಕ್ಕಕ್ಕೆ ಎಳೆದುಕೊಂಡು, ಭೀಮನ ಉಕ್ಕಿನ ಆಕೃತಿಯನ್ನು ರಾಜನ ಮುಂದೆ ಇರಿಸಿದ ; ಗದಾಭ್ಯಾಸಕ್ಕಾಗಿ ದುರ್ಯೋಧನನು ಮಾಡಿಸಿಟ್ಟುಕೊಂಡಿದ್ದ ಪ್ರತಿಮೆ ಅದು. ಧೃತರಾಷ್ಟ್ರನು ಅದನ್ನು ಭೀಮನೆಂದೇ ತಿಳಿದು ಗಟ್ಟಿಯಾಗಿ ಆಲಿಂಗಿಸಿಕೊಳ್ಳುತ್ತಾ ಪುಡಿಪುಡಿಮಾಡಿ, ರಕ್ತವನ್ನು ಕಾರುತ್ತಾ, 'ಅಯ್ಯೋ ಮಗು ! ಭೀಮ'' ಎಂಬುದಾಗಿ ಹೇಳುತ್ತಾ ಕೆಳಕ್ಕೆ ಬಿದ್ದ. ಆಗ ಕೃಷ್ಣನು ''ಈಗ ಭೀಮನೇನೂ ನಿನ್ನಿಂದ ಸತ್ತಿಲ್ಲ. ಯಾರಿಂದಲೂ ಅವನನ್ನು ಕೊಲ್ಲಲು ಸಾಧ್ಯವೂ ಇಲ್ಲ. ನಿನ್ನ ಬುದ್ಧಿ ಈಗ ಜನಗಳಿಗೆಲ್ಲ ತಿಳಿಯಿತು. ರಾಜ ! ನಿನ್ನ ಬುದ್ಧಿಯು ಇನ್ನೂ ಕಲುಷಿತವಾಗಿಯೇ ಇದೆ. ನಿನ್ನ ಬುದ್ಧಿಯ ದೋಷದಿಂದ ನಿನ್ನ ದುಷ್ಟಮಕ್ಕಳ ಪಾಪಗಳನ್ನೂ ಸಹ ವೃದ್ಧಿಗೊಳಿಸಿ, ಅವರ ವಶನಾಗಿ, ಅದರ ಫಲವನ್ನೀಗ ನೀನು ಅನುಭವಿಸುತ್ತಿರುವೆ. ಭೀಮಸೇನನ ಮೇಲೆ ಕೋಪಗೊಳ್ಳುವುದು ತರವಲ್ಲ.'' ಕೃಷ್ಣನ ಮಾತುಗಳಿಂದ ಶಾಂತನಾದ ಧೃತರಾಷ್ಟ್ರ ಕರೆದಾಗ, ಭೀಮನೂ, ಅವನ ತಮ್ಮಂದಿರೂ ಅವನಿಗೆ ನಮಸ್ಕರಿಸಿದರು. ವಜ್ರಕ್ಕಿಂತಲೂ ಕಠಿಣವಾದ ವೃಕೋದರನನ್ನೇ ಮೊದಲು ಕಳಿಸಿದ್ದಲ್ಲಿ ಅವನಿಗೆ ಯಾವ ವಿಕಾರವೂ ಉಂಟಾಗುತ್ತಿರಲಿಲ್ಲ ; ಅದರಿಂದಾಗಿ ಧೃತರಾಷ್ಟ್ರನ ಕೆಟ್ಟಬುದ್ಧಿ ಜನರಿಗೆ ತಿಳಿಯುತ್ತಿರಲಿಲ್ಲ ಎಂಬ ಕಾರಣದಿಂದ ಕೃಷ್ಣನು ಆ ರೀತಿ ಆಕೃತಿಯನ್ನು ಮುಂದೆ ಮಾಡಿ ವಂಚಿಸಿದ್ದ. ಬಳಿಕ ಎಲ್ಲರನ್ನೂ ಪ್ರೇಮದಿಂದ ಆಲಿಂಗಿಸಿಕೊಂಡು ಧೃತರಾಷ್ಟ್ರನು ಆಶೀರ್ವದಿಸಿದ.

## ಗಾಂಧಾರಿಯ ಕ್ರೋಧ

'ಕುಲ ನಾಶ ಮಾಡಿದ ಪಾಪಿಯಾದ ನಾನು ನಿನ್ನ ಶಾಪಕ್ಕೆ ಯೋಗ್ಯ' ಎನ್ನುತ್ತಲೇ ತನ್ನ ಪಾದಕ್ಕೆರಗಿದ ಧರ್ಮರಾಜನ ಕೋಮಲವಾದ ಪಾದದ ಅಂಗುಲಿಗಳನ್ನು ಗಾಂಧಾರಿಯು ತನ್ನ ಕಣ್ಣಿಗೆ ಕಟ್ಟಿದ್ದ ಬಟ್ಟೆಯ ತುದಿಯಿಂದ ಕೋಪದಿಂದ ನೋಡಿದಳು. ಅವಳ ಕೋಪದ ಬೆಂಕಿಯಿಂದ ಸುಟ್ಟು ಅವನ ಉಗುರುಗಳೆಲ್ಲ ಕಪ್ಪಾದವು. ಅನಂತರ ನಮಸ್ಕರಿಸಿದ ಭೀಮನನ್ನು ಕುರಿತು ಕ್ರೋಧವಿಹ್ವಲೆಯಾದ ಅವಳು – ''ಭೀಮ ! ಅದು ಹೇಗೆ ನೀನು ನನ್ನ ಮಗನನ್ನು ಅಧರ್ಮದಿಂದ ಕೊಂದೆ ?''ಎಂದು ಪ್ರಶ್ನಿಸಲು, ಅದಕ್ಕೆ ಭೀಮನು ಮೊದಲು ಅವಳ ಕೋಪವನ್ನು ಇಳಿಸುವ ಕಾರಣದಿಂದ – ''ಪ್ರಾಣಾಪಾಯದ ಕಾಲದಲ್ಲಿ ಪಾಪಿಯನ್ನು ಅಧರ್ಮದಿಂದ ಕೊಲ್ಲುವುದು ಪಾಪವಾಗಲಾರದು'' ಎಂದು ಹೇಳಿದ, ತನಗೆ ಪ್ರಾಣಸಂದೇಹವಿಲ್ಲವೆಂಬುದನ್ನು ತಿಳಿದಿದ್ದ ಭೀಮನು ''ಇಲ್ಲದಿದ್ದಲ್ಲಿ ನನ್ನ ಪ್ರತಿಜ್ಞೆಗೆ ಭಂಗ ಉಂಟಾಗುತ್ತಿತ್ತು'' ಎಂದು ನುಡಿದು ಮತ್ತೆ ಮುಂದುವರೆಸಿದ – ''ಪ್ರತಿಜ್ಞೆಯಂತೆ ಅವರನ್ನು

ಕೊಂದ ಕ್ಷತ್ರಿಯನಾದ ನನಗೆ ಅಧರ್ಮವೆಲ್ಲಿಯದು ; ಪ್ರತಿಜ್ಞೆಗೆ ತಪ್ಪಿದಲ್ಲಿ ಕ್ಷತ್ರಿಯನು ಬದುಕಲಾದೀತೇ? ಪಾಪಿಗಳನ್ನು ಶುದ್ಧ ಧರ್ಮದಿಂದ ಕೊಲ್ಲಕೂಡದು ಎಂದು ಶ್ರುತಿಯು ಹೇಳುವುದು. ಉಳಿದವರಂತೆ ಪಾಪಿಗಳನ್ನು ಕೊಲ್ಲುವುದು ಪಾಪಕ್ಕೇ ಕಾರಣವೆಂದು ಶ್ರುತಿ ಇದೆ. ಆದ್ದರಿಂದಲೇ ಕಪಟಿಗಳಾದ ಅಸುರರನ್ನು ದೇವತೆಗಳು ಕಪಟದಿಂದಲೇ ಕೊಂದಿರುವರು. ಪೈಂಗಿಶ್ರುತಿಯು 'ವಂಚಕರನ್ನು ವಂಚನೆಯಿಂದಲೇ ಕೊಲ್ಲಬೇಕು. ಧಾರ್ಮಿಕರನ್ನು ಮಾತ್ರ ವಂಚನೆಯಿಂದ ಕೊಲ್ಲಕೂಡದು' ಎಂದೇ ಹೇಳುವುದು.''

ಗಾಂಧಾರಿಯು ಮತ್ತೆ ಕೇಳಿದಳು - ''ಮನುಷ್ಯನಾದ ನೀನು ಅದು ಹೇಗೆ ಮನುಷ್ಯನಾದ ದುಃಶಾಸನನ ರಕ್ತವನ್ನು ಕುಡಿದೆ?'' ಭೀಮನು ಉತ್ತರಿಸಿದ - ''ಅದನ್ನು ನಾನು ಕುಡಿಯಲಿಲ್ಲ. ನಿನ್ನ ಮಗನ ಆ ರಕ್ತ ನನ್ನ ಹಲ್ಲಿನೊಳಕ್ಕೂ ಪ್ರವೇಶಿಸಲಿಲ್ಲ. ಪ್ರತಿಜ್ಞಾಪಾಲನೆಗಾಗಿಯೂ, ಸೇಡಿಗಾಗಿಯೂ ನಾನು ಹಾಗೆ ಮಾಡಿದೆ ; ಶತ್ರುಗಳನ್ನು ಭಯಪಡಿಸಲೋಸ್ಕರ ಹಾಗೆ ತೋರಿಸಿದೆ. ಕೆಟ್ಟವರಿಗೆ ಈ ರೀತಿ ಮಾಡಬೇಕೆಂಬುದು ವೇದ ಒಪ್ಪಿರುವ ಧರ್ಮ.'' ಗಾಂಧಾರಿಯ ಪ್ರಶ್ನೆ ಇನ್ನೂ ಉಳಿದಿತ್ತು - ''ಈ ಕುರುಡರಿಬ್ಬರಿಗೆ ಒಂದು ಊರುಗೋಲೆಂದಾದರೂ ನೂರರಲ್ಲಿ ಒಬ್ಬ ಮಗನನ್ನಾದರೂ ಉಳಿಸಬಾರದಿತ್ತೇ ?'' ಭೀಮ ಸ್ಪಷ್ಟೀಕರಿಸಿದ - ''ಎಲ್ಲರೂ ವಧಾರ್ಹವಾದ ಅಪರಾಧವನ್ನೇ ಮಾಡಿದ್ದರಿಂದ, ಅವರನ್ನೆಲ್ಲ ಕೊಲ್ಲಬೇಕಾಯಿತು.'' ಗಾಂಧಾರಿಯು ಮುಂದುವರೆಸಿದಳು - ''ನಿರಪರಾಧಿಯಾದವನು ಒಬ್ಬನೂ ಇರಲಿಲ್ಲವೆ ?'' ಭೀಮನು, ''ಎಲ್ಲರೂ ಸೇರಿಯೇ ಕೃಷ್ಣನನ್ನು ಬಂಧಿಸಲು ಹೊರಟಿದ್ದು, ಆ ಮೊದಲೇ ಅವರೆಲ್ಲ ಸಾಕಷ್ಟು ಕೆಟ್ಟ ಅಪರಾಧಗಳನ್ನು ಮಾಡಿದ್ದು, ಸಭೆಯಲ್ಲಿ ಧರ್ಮಸಂಹಿತೆಯನ್ನು ಹೇಳುತ್ತಿದ್ದ ಕೃಷ್ಣನನ್ನು ಅವಮಾನಿಸುತ್ತಾ ಮತ್ತೆ ಮತ್ತೆ ಸಭೆಯಿಂದ ಹೊರಗೆ ಹೊರಟ ದುರ್ಯೋಧನನನ್ನು ಆ ಎಲ್ಲರೂ ಹಿಂಬಾಲಿಸಿದ್ದು ಮೊದಲಾದ ಅನೇಕ ತಪ್ಪುಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ''ಒಬ್ಬ ನಿರಪರಾಧಿಯೂ ಅವರಲ್ಲಿರಲಿಲ್ಲ. ಅವರಿಗೆ ಬುದ್ಧಿ ಹೇಳುವ ಶಕ್ತಿ ಸಾಲದ ನೀನು ನನ್ನ ಮೇಲೇಕೆ ವ್ಯರ್ಥವಾಗಿ ಕೋಪಿಸಿಕೊಳ್ಳುತ್ತಿರುವೆ?'' ಎಂದು ಪ್ರಶ್ನಿಸಿದ. ಅಲ್ಲಿಗೆ ಗಾಂಧಾರಿ ಸುಮ್ಮನಾದಳು. ಉಳಿದೆಲ್ಲ ಪಾಂಡವರೂ ಅವಳಿಗೆ ಕ್ರಮವಾಗಿ ನಮಸ್ಕರಿಸಿದರು. ವ್ಯಾಸರ ವಾಕ್ಯದಿಂದಾಗಿ ಸಹ ಅವಳು ಸ್ವಲ್ಪ ಶಾಂತಳಾದಳು.

## ಕೃಷ್ಣನಿಗೆ ಗಾಂಧಾರಿಯ ಶಾಪ

ಎಲ್ಲ ಸೊಸೆಯಂದಿರನ್ನು ಮುಂದಿಟ್ಟುಕೊಂಡು ಹೊರಟಂತಹ ಅವಳನ್ನೂ, ಧೃತರಾಷ್ಟ್ರನನ್ನೂ ವಿದುರ ಮೊದಲಾದವರನ್ನೂ ಕೂಡಿಕೊಂಡು ಕುಂತಿ ಹಾಗೂ ಪತ್ನೀಸಮೇತರಾಗಿ ಪಾಂಡವರು ಯುದ್ಧಭೂಮಿಗೆ ಹೊರಟರು. ಅಲ್ಲಿ ಗಾಂಧಾರಿಯ ತಪಸ್ಸಾಮರ್ಥ್ಯವನ್ನು ತಿಳಿದ ವೇದವ್ಯಾಸರು, ಪಾಂಡವರ ರಕ್ಷಣೆಗಾಗಿ ಅವಳ ತಪಸ್ಸಿನ ವ್ಯಯವನ್ನು ಮಾಡಬಯಸಿಯೇ ಅವಳಿಗೆ ದಿವ್ಯದೃಷ್ಟಿಯನ್ನಿತ್ತರು. ಅಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದ ಮೃತದೇಹಗಳ ರಾಶಿಯನ್ನು ಕಂಡ ಗಾಂಧಾರಿಯು ಕೃಷ್ಣನನ್ನು - ''ನಿನ್ನಿಂದ ನಮ್ಮ ಕುಲವು ನಾಶವಾಯಿತು ; ಅದರಿಂದ ನಿನ್ನ ಕುಲವು ಸಹ ಅನ್ಯೋನ್ಯ-

ಸಂಘರ್ಷದಿಂದ ನಾಶವಾಗುವಂತಾಗಲಿ'' ಎಂದು [೧]ಶಪಿಸಿದಳು. ತಾನು ಮಾಡಬಯಸಿದ್ದನ್ನೇ ಗಾಂಧಾರಿ ನುಡಿದದ್ದನ್ನು ಕಂಡು ಕೃಷ್ಣನು ಅದನ್ನು ಸುಳ್ಳಾಗಿಸುವ ಸಾಮರ್ಥ್ಯವನ್ನು ಹೊಂದಿದ್ದರೂ 'ಹಾಗೆಯೇ ಆಗಲಿ' ಎಂದ. ಇದರಿಂದ ಅವಳ ತಪಸ್ಸು ನಷ್ಟವಾಗಿ ಅವಳು ತನ್ನ ಪತಿಗಿಂತ ಕಡಿಮೆ ಎನ್ನಿಸಿದಳು. ಈ ರೀತಿಯಾಗಿ ಕೃಷ್ಣನು ಅವರವರ ಯೋಗ್ಯತೆಗೆ ಮೀರಿದ ಗುಣಗಳನ್ನು ನಾಶಪಡಿಸುವನು. ಅಲ್ಲಿ ತಮ್ಮ ತಮ್ಮ ಪತಿಗಳ ಮೃತದೇಹವನ್ನು ಆಲಿಂಗಿಸಿಕೊಂಡು ಗೋಳಾಡುತ್ತಿದ್ದ ದುರ್ಯೋಧನಾದಿಗಳ ಪತ್ನಿಯರನ್ನೆಲ್ಲ ಕೃಷ್ಣನು ದ್ರೌಪದಿಗೆ ತೋರಿಸಿದ. ದ್ರೌಪದಿಯು ಪೂರ್ಣಷಡ್ಗುಣನಾದ ಆ ಭಗವಂತನನ್ನು ಸ್ತುತಿಸಿದಳು.

ಅನಂತರ ಪಾಂಡವರು ಪ್ರಸಿದ್ಧರಾದ ಸಜ್ಜನರ ದೇಹಗಳನ್ನು ಸುಟ್ಟರು. ಉಳಿದ ಕೆಲವರನ್ನು ಧೃತರಾಷ್ಟ್ರಾದಿಗಳನ್ನು ಮುಂದಿರಿಸಿಕೊಂಡು ಸುಡಿಸಿದರು. ತಮ್ಮ ಐದು ಜನ ಸೂತರ ಮೂಲಕ ತಮಗೆ ಬೇಕಾದವರ ಶವಗಳನ್ನು ಸರಸ್ವತೀನದಿಯಲ್ಲಿ ಹಾಕಿಸಿದರು. [೨]ತಮ್ಮ ಸೂತರನ್ನು ಅವರ ಮೇಲಿನ ಸ್ನೇಹದಿಂದಾಗಿ ಪಾಂಡವರು ಯುದ್ಧದಲ್ಲಿ ತೊಡಗಿಸಿರಲಿಲ್ಲ. ಅಪಾರ ಸಂಖ್ಯೆಯಲ್ಲಿದ್ದ ಕಾರಣದಿಂದಾಗಿ ಶವಗಳೆಲ್ಲ ಸಾಮಾನ್ಯವಾಗಿ ಅಲ್ಲಲ್ಲಿಯೇ ಉಳಿದು ಬಿಟ್ಟವು.

## ಯುಧಿಷ್ಠಿರನಿಂದ ಸ್ತ್ರೀಯರಿಗೆ ಶಾಪ

ಗಂಗಾನದಿಯಲ್ಲಿ ಸ್ವಜನರಿಗೆಲ್ಲ ಪಾಂಡವರು ಪಾನೀಯವನ್ನು ಕೊಡುತ್ತಿರುವಾಗ, ಕುಂತಿಯು ಪಾಂಡವರಿಗೆ, ಕರ್ಣನು ಅವರ ಅಣ್ಣನೆಂಬುದನ್ನು ತಿಳಿಸಿ, ಅವನಿಗೂ ಉದಕ ನೀಡಲು ತಿಳಿಸಿದಳು. ಆಗ 'ಅಯ್ಯೋ ! ಅಯ್ಯೋ' ಎಂದು ಬಹಳವಾಗಿ ದುಃಖಿಸುತ್ತಾ ಧರ್ಮರಾಜನು – ''ಸ್ತ್ರೀಯರ ಮನಸ್ಸಿನಲ್ಲಿ ರಹಸ್ಯ ವಿಷಯ ಉಳಿಯದಿರಲಿ'' ಎಂದು ಶಪಿಸಿದ. ''ಅಯ್ಯೋ ಅಮ್ಮ ! ನಿನ್ನಿಂದ ನಾವೆಲ್ಲ ಹತರಾದೆವು. ತಂದೆಗೆ ಸಮನಾದ ಹಿರಿಯಣ್ಣನನ್ನು ಕೊಂದು ಯಾವ ಗತಿಯನ್ನು ಹೊಂದೋಣ?'' ಹೀಗೆ ಹೇಳುತಿದ್ದ ಧರ್ಮರಾಜನನ್ನು ಕೃಷ್ಣನೂ ನಾರದರೂ ಸೂಕ್ತ ಮಾತುಗಳಿಂದ ಸಮಾಧಾನಪಡಿಸಿದರು. ಕರ್ಣನ ಗುಣಗಳನ್ನು ಕೃಷ್ಣನು ತಿಳಿಸಿದ. ಅನಂತರ ಎಲ್ಲರೂ ಪ್ರೇತಕಾರ್ಯವನ್ನು ನಡೆಸಿದರು. ಧರ್ಮರಾಜನು ಎಲ್ಲರ ಸಾರ್ವಭೌಮನಾದ.



೧. ಮುಂದೆ ಆಶ್ವಮೇಧಿಕ ಪರ್ವದಲ್ಲಿ ಉದಂಕ ತನ್ನನ್ನು ಶಪಿಸಲು ಹೊರಟಾಗ ವಿಶ್ವರೂಪವನ್ನು ತೋರಿಸಿ, ಆವನನ್ನು ಸಾಂತ್ವನಪಡಿಸಿದ ಶ್ರೀಕೃಷ್ಣ ಇಲ್ಲಿ ಗಾಂಧಾರಿಯ ಶಾಪವನ್ನು ಮಾತ್ರ ತಡೆಯಲಿಲ್ಲ; ಇದಕ್ಕೆ ಯಾದವ ನಾಶ ಅವನ ಸಂಕಲ್ಪವೇ ಆಗಿದ್ದಿದು ಒಂದು ಕಾರಣವಾದರೆ, ಗಾಂಧಾರಿಯ ಅಧಿಕಪುಣ್ಯದ ನಾಶ ಮತ್ತೊಂದು ಕಾರಣವಾಗಿತ್ತು. ಉದಂಕನ ಪ್ರಸಂಗದಲ್ಲಿ ಇದಾವುದೂ ಇರಲಿಲ್ಲವಾದ್ದರಿಂದ ಕೃಷ್ಣ ಅವನನ್ನು ಸಾಂತ್ವನಪಡಿಸಿದ ಎಂದು ತಿಳಿಯಬೇಕು.

೨. ತನಗೆ ಶ್ರೀಕೃಷ್ಣ ಸಾರಥಿಯಾದ್ದರಿಂದ ಅರ್ಜುನ ತನ್ನ ಸೂತನನ್ನು ಯುದ್ಧಕ್ಕೆ ತೊಡಗಿಸಿರಲಿಲ್ಲ. ತನಗೆ ಸಾರಥಿಯಾದ ವಿಶೋಕನನ್ನು ಭೀಮಸೇನ ಯುದ್ಧದಲ್ಲಿ ಅಳಿಯದಂತೆ ನೋಡಿಕೊಂಡಿದ್ದ. ಉಳಿದ ಮೂವರು ಪಾಂಡವರು ಕೇವಲ ಪ್ರೀತಿಯಿಂದಾಗಿ ತಮ್ಮ ಸೂತರನ್ನು ಯುದ್ಧದಲ್ಲಿ ತೊಡಗಿಸಿರಲಿಲ್ಲ. ಇದರಿಂದಾಗಿ ಪಾಂಡವರ ಐವರು ಸೂತರು ಸಹ ಉಳಿದುಕೊಂಡಿದ್ದರು.

# ಶಾಂತಿ ಪರ್ವ - ಅನುಶಾಸನ ಪರ್ವ

## ಚಾರ್ವಾಕನ ವಧೆ

ಶ್ರೀವೇದವ್ಯಾಸರು ಹಾಗೂ ಶ್ರೀಕೃಷ್ಣ ಇಬ್ಬರೂ ಮಹಾರಾಜನನ್ನಾಗಿ ಧರ್ಮರಾಜನನ್ನು , ಯುವರಾಜನನ್ನಾಗಿ ಭೀಮನನ್ನು ವಿಪ್ರರೊಂದಿಗೆ ಕೂಡಿಕೊಂಡು ಅಭಿಷೇಕಿಸಿ, ಆನಂದಿಸಿದರು. ಆಗ ಚಾರ್ವಾಕ ಎಂಬ ಒಬ್ಬ ಮಹಾಪಾಪಿಯಾದ ರಾಕ್ಷಸನು ತ್ರಿದಂಡಿ ಯತಿಯ ವೇಷದಲ್ಲಿ ಬಂದು ಯುಧಿಷ್ಠಿರನನ್ನು 'ವಿಪ್ರರು ನಿನ್ನನ್ನು ನಿಂದಿಸುತ್ತಿರುವರು' ಎಂಬುದಾಗಿ ತೆಗಳಿದ. ಅದನ್ನು ಕೇಳುತ್ತಲೇ ಧರ್ಮರಾಜನು ದುಃಖಿಸತೊಡಗಿದ್ದನ್ನು ನೋಡಿ, ಕೋಪಗೊಂಡ ವಿಪ್ರರು ಅವನಿಗೆ – "ಎಲವೋ ಪಾಪಿ! ನಾವು ಅವನನ್ನು ಹಾಗೆ ನಿಂದಿಸದಿದ್ದರೂ, ನಿಂದಿಸಿರುವುದಾಗಿ ಸುಳ್ಳು ನುಡಿದಿರುವ ನೀನು ಕೂಡಲೇ ಬೂದಿಯಾಗು" ಎಂದು ಶಪಿಸಿದರು. ಕೂಡಲೇ ಆ ಪಾಪಿಯು ಬೂದಿಯಾದ. ಹಾಗೆ ಆ ಯತಿವೇಷಧಾರಿಯ ಮರಣದಿಂದಾಗಿ ಮತ್ತಷ್ಟು ದುಃಖಿತನಾದ ಧರ್ಮರಾಜನಿಗೆ ಶ್ರೀಕೃಷ್ಣನು ವಿವರಿಸಿದ – "ಇವನು ಮಹಾಪಾಪಿ ; ನಿಜವಾದ ಯತಿಯಲ್ಲ ; ಸುಯೋಧನನ ಸ್ನೇಹಿತನಾದ ರಾಕ್ಷಸಾಧಮ ; ವಿಪ್ರರಿಂದ ಹೀಗೆ ಹತನಾದ. ಆದ್ದರಿಂದ ಕೃತಕೃತ್ಯ-ನಾಗಿರುವ ನೀನು ಶೋಕಿಸಬೇಡ." ಸಮಾಧಾನ ಹೊಂದಿದ ಧರ್ಮರಾಜನು ವಿಪ್ರರಿಗೆ ಭಕ್ತಿ-ಯಿಂದ ಧನವನ್ನು ಅರ್ಜಿಸಿ ಸಂತೃಪ್ತಿಪಡಿಸಿದ. ತನ್ನ ಬಂಧುಗಳಿಗೂ, ಪುರಜನರಿಗೂ ಧರ್ಮರಾಜ ಯಥೇಷ್ಟವಾಗಿ ಧನವನ್ನು ನೀಡಿ ಸಂತೋಷಪಡಿಸಿದ. ಎಲ್ಲರನ್ನೂ ಮಕ್ಕಳಂತೆ ಪಾಲಿಸತೊಡಗಿದ.

## ಯುಧಿಷ್ಠಿರನ ವೈರಾಗ್ಯ

ಭೀಷ್ಮ, ದ್ರೋಣ, ಕರ್ಣ ಹಾಗೂ ದುರ್ಯೋಧನರನ್ನು ಕೊಂದಿದ್ದರಿಂದ ಪಾಪ ಒದಗಿತೆಂಬ ಶಂಕೆಯಿಂದ ಹಗಲಿರುಳೂ ತಪಿಸುತ್ತಾ, ಧರ್ಮರಾಜನು, ರಾಜ್ಯತ್ಯಾಗಕ್ಕೆ ಮನಸ್ಸು ಮಾಡಿದ. ತಮ್ಮಂದಿರು, ದ್ರೌಪದಿ ಹಾಗೂ ಬ್ರಾಹ್ಮಣರೆಲ್ಲ ಧರ್ಮರಾಜನಿಗೆ ಧರ್ಮವನ್ನು ವಿವರಿಸಿ ಹೇಳಿದರು. ಅವನು ಭೀಮನನ್ನು ತನಗೆ ಅಡ್ಡಿ ಮಾಡದಿರಲು ಕೇಳಿಕೊಂಡ. ಅರ್ಜುನನಿಗಂತೂ 'ನಿನಗೆ ಧರ್ಮ ತಿಳಿಯದು' ಎಂದೇ ಹೇಳಿ ಅವನ ಮೇಲೆ ಕೋಪಿಸಿಕೊಂಡ. ವಿಪ್ರರೆಲ್ಲರೂ 'ಇಂದ್ರಾವತಾರನಾಗಿರುವ ಅರ್ಜುನನು ನಿನಗಿಂತ ಹೆಚ್ಚು ಚೆನ್ನಾಗಿ ಧರ್ಮವನ್ನು ಬಲ್ಲವನು' ಎಂದು ತಿಳಿಸಿದರು. ಆದರೂ ನೀವೆಲ್ಲರು 'ನನ್ನ ಮೇಲಿನ ಪ್ರೀತಿಯಿಂದ ನಾನು ಮಾಡಿದ್ದು ತಪ್ಪಲ್ಲ ಎಂದು ಹೇಳುತ್ತಿರುವಿರಿ' ಎಂದು ನುಡಿದು, ಅವರ ಮಾತನ್ನು ಅವನು ಕೇಳದಾದ. ಕೃಷ್ಣ ಹಾಗೂ ವೇದವ್ಯಾಸರು ಶಾಸ್ತ್ರಮೂಲವಾದ ಯುಕ್ತಿಗಳಿಂದ 'ಅದನ್ನು ಧರ್ಮವೆಂದೇ' ಪ್ರತಿಪಾದಿಸಿದರೂ, ಅವನ ಸಂಶಯವನ್ನು ಪೂರ್ಣವಾಗಿ ತಾವೇ ಪರಿಹರಿಸಲಿಲ್ಲ. ಅನಂತರ 'ಹತರಾದವರ ಪಕ್ಷದಲ್ಲಿ ಭೀಷ್ಮರು ಸೇರಿರುವರು; ಆದ್ದರಿಂದ ಅವರು ನಿನ್ನ ಮೇಲಿನ ವಿಶ್ವಾಸದಿಂದ ಹಾಗೆ ಹೇಳುವರು ಎಂದು ಶಂಕಿಸಬೇಕಿಲ್ಲ ; ಅವರ ಬಳಿಗೆ ತೆರಳಿ ನೀನೀಗ ಈ ಬಗ್ಗೆ ಕೇಳಿ, ಸಂದೇಹವನ್ನು ಪರಿಹರಿಸಿಕೊ' ಎಂದು ತಿಳಿಸಿದರು.

## ಭೀಷ್ಮರ ಬಳಿ ಪಾಂಡವರು

ಶ್ರೀಕೃಷ್ಣ, ವೇದವ್ಯಾಸರು, ತಮ್ಮಂದಿರು ಹಾಗೂ ಮುನಿಗಳೊಂದಿಗೆ ಕೂಡಿಕೊಂಡು ಭೀಷ್ಮರ ಬಳಿಗೆ ಧರ್ಮರಾಜನು ಹೊರಟ. ಆಗ ಧರ್ಮರಾಜನು ಅವರನ್ನು ಕೇಳಲು ನಾಚಿ ಸುಮ್ಮನಿರಲು, ಕೃಷ್ಣನು ಭೀಷ್ಮರಿಗೆ ತಿಳಿಸಲು ಹೇಳಿದ. ಭೀಷ್ಮರು, 'ಕೇಳು' ಎಂದು ಹೇಳಿದ ಮೇಲೆ ಧರ್ಮರಾಜನು ಎಲ್ಲವನ್ನೂ ಭೀಷ್ಮರಿಂದ ಕೇಳಿ ತಿಳಿದುಕೊಂಡ. ಸ್ವಯಂ ಕೃಷ್ಣನೇ ಹಾಗೆ ಭೀಷ್ಮರ ಶರೀರದಲ್ಲಿ ನಿಂತು ಎಲ್ಲ ಧರ್ಮಗಳನ್ನು ಧರ್ಮಜನಿಗೆ ಉಪದೇಶಿಸಿದ. ಭೀಷ್ಮರೂ ಸಹ ಕೃಷ್ಣನಿಗೆ 'ನೀನೇ ಪಾಂಡವರಿಗೆ ಉಪದೇಶ ನೀಡಬೇಕು. ಅವರಿಗೆ ಹೇಳುವ ಶಕ್ತಿ ನನಗೆ ಎಲ್ಲಿದೆ ಪ್ರಭು !' ಎಂದೇ ವಿಜ್ಞಾಪಿಸಿದರು. ಅವರ ಮಾತಿಗೆ ಕೃಷ್ಣನು 'ನಿಮಗೆ ಕೀರ್ತಿಯನ್ನು ಕೊಡಲೆಂದು ನಿಮ್ಮಲ್ಲಿದ್ದು ನಾನೇ ಸಕಲಧರ್ಮಗಳನ್ನೂ, ಸೂಕ್ಷ್ಮತತ್ತ್ವಗಳನ್ನೂ ಅವರಿಗೆ ತಿಳಿಸುವೆ' ಎಂದು ಅನುಗ್ರಹಿಸಿದ.

## ಭೀಷ್ಮೋಪದೇಶ

ಭಗವದ್ಧರ್ಮಪಾಲನೆ ರಾಜನ ಪ್ರಥಮ ಕರ್ತವ್ಯ ; ಅದಕ್ಕೆ ಒದಗುವ ಕಂಟಕಗಳನ್ನು ಪರಿ-ಹರಿಸುವುದೂ ಅವನ ಕರ್ತವ್ಯವೇ. ಮನಸ್ಸು ಮಾತು ಹಾಗೂ ಕೃತಿಗಳಿಂದ ವಿಷ್ಣುವನ್ನೇ ಅಚ್ಛಿನ್ನವಾಗಿ ಅರ್ಚಿಸುವುದು, ಹರಿಯು ಅನಂತಗುಣಪೂರ್ಣನು ; ಸ್ವತಂತ್ರನು; ಅದ್ವಿತೀಯನು. ಉಳಿದೆಲ್ಲವೂ ಸದಾ ಅವನ ವಶ ಎಂಬ ನಿರ್ಣಯ. ದೇವತಾತಾರತಮ್ಯಜ್ಞಾನ, ಇತರ ದೇವತೆಗಳನ್ನು ಸರ್ವೋತ್ತಮತ್ವ ಭಾವನೆಯಿಂದ ಪೂಜಿಸದಿರುವುದು, ದೇವತೆಗಳನ್ನೆಲ್ಲ ಭಗವದ್ಭಕ್ತರೆಂಬುದಾಗಿ ಪೂಜಿಸುವುದು, ವ್ಯರ್ಥಕಾರ್ಯಗಳಲ್ಲಿ ಆಸಕ್ತನಾಗದಿರುವುದು, ಪ್ರತಿಫಲವನ್ನು ಅಪೇಕ್ಷಿಸದಿರುವುದು, ವಿಷ್ಣು ಹಾಗೂ ವಿಷ್ಣುಭಕ್ತರಿಗೆ ವಿರೋಧವನ್ನು ಸರ್ವಥಾ ಮಾಡದಿರುವುದು, ವೈಷ್ಣವರಲ್ಲಿ ಭಿನ್ನಾಭಿಪ್ರಾಯ ಬಂದಾಗ ಶ್ರೇಷ್ಠರಾದವರನ್ನು ಅನು-ಸರಿಸುವುದು, ವಿಷ್ಣು ಹಾಗೂ ವೈಷ್ಣವರ ಪ್ರೀತಿಸಂಪಾದಕವಾದ ಎಲ್ಲ ಧರ್ಮವನ್ನೂ ಆಚರಿಸುವುದು, ಅವರಿಗೆ ಅಪ್ರಿಯವಾದ ಕಾರ್ಯವನ್ನು ಆಚರಿಸದಿರುವುದು, ಸಾಮ್ಯ ಹಾಗೂ ವಿರೋಧ ಪ್ರಸಂಗಗಳಲ್ಲಿ ಬಹುವೈಷ್ಣವರನ್ನು ಅನುಸರಿಸುವುದು, ಇವೆಲ್ಲವೂ ಸರ್ವ-ಸಾಧಾರಣವಾದ ಭಾಗವತಧರ್ಮಗಳು.

ತತ್ತ್ವವನ್ನು ತಿಳಿಸಿಕೊಡುವುದು ವಿಪ್ರನಿಗೆ ವಿಶೇಷ ಕರ್ತವ್ಯ. ಹೆಂಡತಿ, ಮಕ್ಕಳ ಹೊರತು ಉಳಿದವರಲ್ಲಿ ಶರೀರದಂಡನೆಯನ್ನು ಅವನು ಮಾಡಕೂಡದು ; ಅವರ ವಿಷಯದಲ್ಲೂ ಅಂಗಹಾನಿಯಾಗಲೀ, ಚಿರವೇದನೆಯಾಗಲೀ ಉಂಟಾಗದಂತೆ ಎಚ್ಚರವಹಿಸಬೇಕು. ಧನ-ರೂಪದ ದಂಡನೆಯನ್ನು ವಿಪ್ರ, ವೈಶ್ಯ ಮೊದಲಾದವರು ಎಂದೂ ವಿಧಿಸಕೂಡದು. ಶರೀರ-ದಂಡನೆಯ ವಿಷಯದಲ್ಲಿ ವೈಶ್ಯಾದಿಗಳು ವಿಪ್ರನಂತೆಯೇ ವರ್ತಿಸತಕ್ಕದ್ದು. ಬ್ರಾಹ್ಮಣಶ್ರೇಷ್ಠ ಎನ್ನಿಸಿಕೊಳ್ಳುವವನು ಯದೃಚ್ಛಾಲಾಭಸಂತುಷ್ಟನಾಗಿರಬೇಕು ; ಭಿಕ್ಷೆಯಿಂದಲೂ ಸಹ ಜೀವನ-

ವನ್ನು ನಿರ್ವಹಿಸಬಹುದು. ಶಿಷ್ಯರಿಗೆ ಯಾಗ ಮಾಡಿಸಿ ಬರುವ ಕಾಣಿಕೆಯಿಂದಲೂ ಬ್ರಾಹ್ಮಣ ಬದುಕಬಹುದು. ಆಪತ್ಕಾಲದಲ್ಲಿ ಕ್ಷತ್ರಿಯರ ಧರ್ಮದಿಂದಲೂ, ಮಹಾಪತ್ತಿನಲ್ಲಿ ವೈಶ್ಯ-ಧರ್ಮದಿಂದಲೂ ಬ್ರಾಹ್ಮಣನು ಜೀವಿಸಬಹುದು.

ಕ್ಷತ್ರಿಯನು ದೇವಸ್ವ ಹಾಗೂ ವಿಪ್ರಸ್ವಗಳನ್ನು ಬಿಟ್ಟು ಇತರರಿಂದ ಕಪ್ಪವನ್ನು ಪಡೆದು ರಾಜ್ಯಪಾಲನೆಯನ್ನು ಮಾಡಬೇಕು. ಕ್ಷತ್ರಿಯನು ತನ್ನೆಲ್ಲ ಸಂಪತ್ತನ್ನು ನೀಡಿಯಾದರೂ ಇವರನ್ನೆಲ್ಲ ಪಾಲಿಸತಕ್ಕದ್ದು. ವಿರೋಧಿ ಕ್ಷತ್ರಿಯರಿಂದ ಬಲಾತ್ಕಾರವಾಗಿ ಧನವನ್ನು ಕಿತ್ತುಕೊಳ್ಳಬಹುದು. ಸಾಮ, ದಾನ, ಭೇದಗಳನ್ನು ಕ್ರಮವಾಗಿ ಅನುಸರಿಸಿ, ಕೊನೆಗೆ ದಂಡೋಪಾಯವನ್ನು ಪ್ರಯೋಗಿಸಬೇಕು. ಸಜ್ಜನರ ಉಪಕಾರದ ಹೊರತು ಬೇರಾವ ಸಂದರ್ಭದಲ್ಲೂ ಕ್ಷತ್ರಿಯನು ಯುದ್ಧದಲ್ಲಿ ಹಿಮ್ಮೆಟ್ಟಕೂಡದು.

ಕೃಷಿ, ವಾಣಿಜ್ಯ, ಗೋರಕ್ಷಣೆ, ಬಡ್ಡಿವ್ಯಾಪಾರ ಇವೆಲ್ಲ ವೈಶ್ಯನ ಧರ್ಮಗಳು. ಪರಿ-ಚರ್ಯೆಯೇ ಶೂದ್ರನ ಮುಖ್ಯ ವೃತ್ತಿ. ಬ್ರಾಹ್ಮಣರು ಮೊದಲಾದವರು ತಮ್ಮ ಹಿಂದಿನವರ ಹಾದಿಯಲ್ಲಿ ಜೀವನ ಸಾಗಿಸಬೇಕು. ಹರಿಭಕ್ತರನ್ನು ತಾರತಮ್ಯಕ್ರಮದಲ್ಲಿ ಗೌರವಿಸಬೇಕು. ಹರಿಭಕ್ತಿಯಲ್ಲಿ ದೊಡ್ಡವನಲ್ಲದ ಉಚ್ಚವರ್ಣದವನನ್ನು ಬಹಳವಾಗಿ ಗೌರವಿಸಬೇಕಿಲ್ಲ. ವರ್ಣ-ಹೀನನಾದವನು ಹರಿಭಕ್ತನಾಗಿದ್ದಲ್ಲಿ ಪ್ರಣಾಮದ ಹೊರತು ಉಳಿದ ಎಲ್ಲ ರೀತಿಯಿಂದಲೂ ಗೌರವಕ್ಕೆ ಪಾತ್ರನೆನ್ನಿಸುವನು. ನಿರ್ಮಲವಾದ ಹರಿಭಕ್ತಿಯಿರುವವರನ್ನೆಲ್ಲ ಆದರಿಸಬೇಕಾದ್ದು ಪ್ರತಿಯೊಬ್ಬರ ಪಾಲಿನ ಕರ್ತವ್ಯ. ಬ್ರಾಹ್ಮಣರ ಅನುಮತಿಯಿಂದ ಕ್ಷತ್ರಿಯನೂ ಸಹ ಉಪದೇಶವನ್ನು ನೀಡಬಹುದು. ಅವರಿಬ್ಬರೂ ಇಲ್ಲವಾದಾಗ ವೈಶ್ಯರಿಗೂ ಉಪದೇಶಕ್ಕೆ ಅರ್ಹತೆ ಇರುವುದು. ಯಾರೂ ಲಭಿಸದ ಮಹಾಪತ್ತಿನ ಪ್ರಸಂಗದಲ್ಲಿ ಶೂದ್ರನೂ ಉಪದೇಶ ಮಾಡಬಹುದು. ನಾಲ್ಕುವರ್ಣದವರೂ ಜ್ಞಾನಹೀನರಾಗಿದ್ದಾಗ ವರ್ಣೇತರನು ಜ್ಞಾನಿಯಾಗಿ-ರಲು ಸರ್ವಥಾ ಸಾಧ್ಯವಿಲ್ಲ. ಆದ್ದರಿಂದ ವರ್ಣೇತರನಾದವನು ತತ್ತ್ವೋಪದೇಶ ಮಾಡುವ ಪ್ರಸಂಗ ಎಂದೂ ಒದಗದು.

ಮೂರೂ ವರ್ಣದ ಸ್ತ್ರೀಯರು ವೇದಗಳನ್ನು ಹೊರತು ಉಳಿದೆಲ್ಲವನ್ನೂ ಸಹ ತಿಳಿದುಕೊಳ್ಳಬಹುದು. ತನ್ನ ಪತಿಯನ್ನು ಹೊರತು ಉಳಿದವರನ್ನು ಬಯಸದಿರುವುದೂ ಸ್ತ್ರೀಗೂ, ಅದೇ ರೀತಿ ತನ್ನ ಪತ್ನಿಯನ್ನು ಹೊರತು ಉಳಿದವರನ್ನು ಬಯಸದಿರುವುದು ಪುರುಷನಿಗೂ ಧರ್ಮ. ಸ್ವೋತ್ತಮಸ್ತ್ರೀಯನ್ನು ಕಾಮಿಸುವ ಮಾತ್ರದಿಂದಲೇ ಪುರುಷನು ಅಂಧಂತಮಸ್ಸನ್ನು ಹೊಂದುವನು. ಸ್ವೋತ್ತಮಸ್ತ್ರೀಯರು ಗುಣದಲ್ಲಿ ಶ್ರೇಷ್ಠರಾದಂತೆ ಅವರ ಸಂಗ ಬಯಸುವ ಪುರುಷನ ಗುಣಗಳೆಲ್ಲಾ ಕ್ಷಯಿಸತೊಡಗುವವು. ಅದರಂತೆ ಅಧಮ-ಸ್ತ್ರೀಯರ ಸಂಗದಿಂದಲೂ ಹೆಚ್ಚಿನ ಪಾತಕ ಉಂಟಾಗುವುದು. ಉಳಿದಂತೆಯೂ ಪರಸ್ತ್ರೀಯರ ಸಂಗ ದೋಷವೆನ್ನಿಸುವುದು ನಿಶ್ಚಿತ. ಸ್ತ್ರೀಯರಿಗೆ ನೀಚಪುರುಷನ ಸಂಸರ್ಗವಾದಂತೆಲ್ಲ ಕ್ರಮವಾಗಿ ದೋಷ ಹೆಚ್ಚುತ್ತಾ ಹೋಗುವುದು.

ಉತ್ತಮಸ್ತ್ರೀಯರು, ದ್ರೌಪದೀ ಮೊದಲಾದವರು ಹೇಗೋ ಹಾಗೆ, ವೇದಗಳನ್ನೂ ಸಹ ತಿಳಿಯಬೇಕು. ದೇವತಾಸ್ತ್ರೀಯರು, ಮುನಿಸ್ತ್ರೀಯರು, ಮನುಷ್ಯ ಮೊದಲಾದ ಯೋನಿಗಳಲ್ಲಿ ಜನಿಸಿದ್ದಾಗಲೂ ಉತ್ತಮರೆಂದೇ ಪರಿಗಣಿಸಲ್ಪಡುವರು. ಸಚ್ಛೂದ್ರರೂ ಸಹ ವೇದದ ಹೊರತು ಇತರ ಶಾಸ್ತ್ರಗಳಿಂದ ಜ್ಞಾನವನ್ನು ಪಡೆಯಬೇಕು ; ಇತರರಿಗೂ ಸಹ ಶ್ರೀಹರಿಯ ನಾಮೋಚ್ಚಾರಣೆಯು ಮುಖ್ಯ ಕರ್ತವ್ಯವೇ ಆಗಿದೆ.

ಕೆಲವು ಗುಣಗಳಲ್ಲೂ ಸಹ ಬ್ರಹ್ಮರುದ್ರಾದಿ ಇತರರನ್ನು ವಿಷ್ಣುವಿಗೆ ಸಮರೆಂದಾಗಲೀ, ಶ್ರೇಷ್ಠರೆಂದಾಗಲೀ ತಿಳಿಯುವವನು ಸರ್ವಥಾ ಅಂಧಂತಮಸ್ಸನ್ನೇ ಹೊಂದುವನು. ಬ್ರಹ್ಮ ರುದ್ರ ಮೊದಲಾದವರಿಂದ ವಿಷ್ಣುವಿಗೆ ಭೇದವನ್ನು ತಿಳಿಯದವನೂ, ವಿಷ್ಣುವಿನ ಗುಣಗಳಲ್ಲೂ , ಅವನ ಪ್ರಾದುರ್ಭಾವಗಳಲ್ಲೂ ಭೇದವನ್ನು ತಿಳಿಯುವವನೂ, ವಿಷ್ಣುವಿಗೆ ಪ್ರಾಕೃತದೇಹವನ್ನೂ ದುಃಖ, ಅಜ್ಞಾನ, ಶ್ರಮ ಮೊದಲಾದವುಗಳನ್ನು ತಿಳಿಯುವವನೂ, ಅವರ ಭಕ್ತರಲ್ಲಿ ತಾರತಮ್ಯ-ವನ್ನು ತಪ್ಪಾಗಿ ತಿಳಿಯುವವನೂ, ಮನಸ್ಸು, ಮಾತು, ಕೃತಿಗಳಲ್ಲಿ ವಿಷ್ಣುವಿಗಾಗಲೀ, ಅವನ ಭಕ್ತರಿಗಾಗಲೀ ದ್ರೋಹ ಬಗೆಯುವವನೂ, ವಿಷ್ಣುವಿಗೆ ಅಧೀನವಲ್ಲದ ವಸ್ತುಗಳೂ ಇವೆ ಎಂದು ಸ್ಮರಿಸುವವನೂ, ವಿಷ್ಣುವನ್ನು ಬಿಟ್ಟು ಇತರರ ಅಧೀನತ್ವವನ್ನು ವಸ್ತುಗಳಿಗೆ ತಿಳಿಯು-ವವನೂ, ವಿಷ್ಣುವಿನ ಗುಣಪೂರ್ಣತ್ವವನ್ನು ತಿಳಿಯದವನೂ, ಅವನಲ್ಲಿ ಭಕ್ತಿಹೀನನಾದವನು ಮೊದಲಾಗಿ ಎಲ್ಲರೂ ಅಂಧಂತಮಸ್ಸನ್ನೇ ಹೊಂದುವರು.

ತತ್ತ್ವದಲ್ಲಿ ಸದಾ ಸಂಶಯ ಪಡುವ ಸ್ವಭಾವದವರೆಲ್ಲರೂ ಆ ತಪ್ಪಿನಿಂದಾಗಿ ನರಕವನ್ನು ಹೊಂದುವರು ; ಗುಣಗಳು ಹೆಚ್ಚಿದ್ದಾಗ ಅಧಮಗತಿಯನ್ನು ಹೊಂದಲಾರರು. ಗುಣ-ದೋಷಗಳು ಸಮವಿದ್ದಾಗ ಮತ್ತೆ ಮತ್ತೆ ಮನುಷ್ಯರಾಗಿ ಹುಟ್ಟುವರು, ದೋಷವು ಪೂರ್ಣವಾಗಿ ಕ್ಷಯಿಸುವವರೆಗೂ ಕ್ರಮವಾಗಿ ಉತ್ತಮಗತಿಯು ಹೆಚ್ಚುತ್ತಾ ಹೋಗುವುದು ; ಎಲ್ಲ ದೋಷಗಳೂ ಕ್ಷಯಿಸಿದ ಮೇಲೆಯೇ ಮುಕ್ತಿಯು ದೊರೆಯುವುದು. ಆ ವೇಳೆಗೆ ತನ್ನ ಯೋಗ್ಯತೆಗನುಗುಣವಾಗಿ ಭಕ್ತಿಜ್ಞಾನಗಳೂ ಹೆಚ್ಚಿರುವವು. ಪುಣ್ಯಕಾರ್ಯಗಳಿಂದ ಸ್ವರ್ಗ ದೊರೆಯುವುದು; ಪಾಪಕರ್ಮವು ನಾಶವಾಗುವುದು. ವಿಷ್ಣು ಹಾಗೂ ವೈಷ್ಣವರ ಮಾತಿನಿಂದ ಪಾಪಕರ್ಮ ಪರಿಹಾರವಾಗುವುದು.

ಈ ರೀತಿಯಾಗಿ ಎಲ್ಲ ಧರ್ಮಗಳ ಸಾರವೂ ಭೀಷ್ಮರಲ್ಲಿ ನೆಲೆಸಿದ್ದ ವಿಷ್ಣುವಿನಿಂದ ಪಾಂಡವರಿಗೆ ತಿಳಿಸಲ್ಪಟ್ಟಿತು.

## ಪುರುಷಾರ್ಥಗಳ ತಾರತಮ್ಯ

ಇದನ್ನು ಕೇಳಿದ ಧರ್ಮರಾಜನು ತಮ್ಮಂದಿರನ್ನೂ, ವಿದುರನನ್ನೂ ಕುರಿತು ಧರ್ಮ ಮೊದಲಾದ ಮೂರು ಪುರುಷಾರ್ಥಗಳಲ್ಲಿ ಶ್ರೇಷ್ಠವಾದುದು ಯಾವುದು? ಎಂದು ಪ್ರಶ್ನೆ ಮಾಡಿದ. ವಿದುರನು ಧರ್ಮವನ್ನೇ ಮುಖ್ಯವೆಂದೂ ಅರ್ಥ, ಕಾಮಗಳು ಕ್ರಮವಾಗಿ ಮಧ್ಯಮ ಹಾಗೂ ಅಧಮವೆಂದೂ ಹೇಳಿದ. ಉಳಿದದ್ದು ನಿಷ್ಫಲವಾದ್ದರಿಂದ ಅರ್ಥವನ್ನೇ

ಸಾರವೆಂದು ಅರ್ಜುನನು ಹೇಳಿದ : "ದೈವ,'ಮಾನುಷ ಎಂಬುದಾಗಿ ಅರ್ಥ(ಸಂಪತ್ತು) ಎರಡು ವಿಧ ; ವಿದ್ಯೆ, ದೈವೀಸಂಪತ್ತು ; ಹಿರಣ್ಯ ಮೊದಲಾದವುಗಳು ಮಾನುಷಸಂಪತ್ತು. ಧರ್ಮ ಮಧ್ಯಮ, ಅದು ಸಾಧ್ಯ ಹಾಗೂ ಸಾಧನ ಎರಡೂ ಆಗಿದೆ. ವಿದ್ಯೆ ಎಂಬ ಪ್ರಯೋಜನ ಧರ್ಮಕ್ಕೆ ಇದೆ. ವಿದ್ಯೆಯಿಂದಲೇ ಮುಕ್ತಿಯು ಲಭಿಸುವುದು. ಸರಿಯಾಗಿ ವಿನಿಯೋಗಿಸಿದ ಮಾನುಷ ಸಂಪತ್ತೂ ಸಹ ವಿದ್ಯೆಗೆ ಕಾರಣವಾಗುವುದು. ಧನದಿಂದ ತುಷ್ಟನಾಗುವ ಗುರುವು ಕೈವಲ್ಯವನ್ನೂ ಸಹ ಕೊಡಿಸಲು ಸಮರ್ಥನಾಗುವನು ; ಅಲ್ಲವೇ? ಧರ್ಮದ ಉದ್ದೇಶವಿಲ್ಲವಾದಾಗಲೂ ಧನದಿಂದ ಗುರುಗಳು ದೇವತೆಗಳು ತೃಪ್ತರಾಗುವರು. ಅನುದ್ದೇಶಿತವಾದ ಧರ್ಮವೂ ಸಹ ಅರ್ಥವನ್ನೇ ಅನುಸರಿಸಿಕೊಂಡಿರುವುದು. ಹೀಗೆ ಹಿರಿಮೆಯು ಅರ್ಥವನ್ನೇ ಅವಲಂಬಿಸಿರುವುದು. ಕಾಮ ನಿಷ್ಫಲವಾದ್ದರಿಂದ ನಿಕೃಷ್ಟವಾದುದು." ಶ್ರೇಷ್ಠ ಜ್ಞಾನಿಗಳಾದ ನಕುಲಸಹದೇವರು ಅರ್ಜುನನ ಹೇಳಿಕೆಯನ್ನೇ ಅನುಮೋದಿಸಿದರು.

## ಭೀಮ ತಿಳಿಸಿದ ಕಾಮದ ಹಿರಿಮೆ

ಅನಂತರ ಮಹಾತತ್ತ್ವಜ್ಞಾನಿಗಳಲ್ಲಿ ಶ್ರೇಷ್ಠನಾದ ಭೀಮನು ಹರ್ಷದಿಂದ ಅವರೆಲ್ಲರನ್ನೂ ಸಂಬೋಧಿಸಿ ಮಂದಹಾಸದಿಂದ ನುಡಿದ - "ಕಾಮಕ್ಕಿಂತಲೂ ಹಿರಿದಾದ ಬೇರಾವ ಒಳಿತೂ ಇಲ್ಲ ; ಎಂದ ಮೇಲೆ ಅದು ಹೇಗೆ ತಾನೆ ನೀಚವೆನ್ನಿಸೀತು ? 'ಕಾಮ್ಯ'ವಾದುದನ್ನೇ 'ಕಾಮ' ಎಂಬ ಹೆಸರಿನಿಂದ ಜ್ಞಾನಿಗಳು ವ್ಯವಹರಿಸಿರುವರು. ಪುರುಷಾರ್ಥಗಳೆಲ್ಲ ಕಾಮ್ಯಗಳೇ ಅಲ್ಲವೇ? "ಕಾಮಿಸದಿದ್ದಲ್ಲಿ ಪುರುಷಾರ್ಥ ಎಂತಾದೀತು?" ಪುರುಷರು ಬಯಸುವುದರಿಂದಲೇ 'ಪುರುಷಾರ್ಥ' ಎಂಬ ಹೆಸರು ಅದಕ್ಕೆ ಬಂದಿದೆ. ಪುರುಷಾರ್ಥವಲ್ಲದ್ದು ಅಕಾಮ್ಯವೆಂದೇ ಎನ್ನಿಸುವುದು. ವಿಜ್ಞಾನ, ಭಕ್ತಿ, ಮೊದಲಾದವುಗಳೆಲ್ಲ ಅದಕ್ಕೆ ಸಾಧನವಾಗಿ ಕಾಮ್ಯವಾಗದೇ ಹೋದಾಗ ಸಾಧನವೆನ್ನಿಸಲಾರವು. ಶ್ರೇಷ್ಠವೇ ಆದ ಮೋಕ್ಷವೂ ಕೂಡ ಕಾಮವಿಲ್ಲದೆ ಹೋದಾಗ 'ಸಾಧ್ಯ' ಎನ್ನಿಸುವುದೇ ಇಲ್ಲ. ಪರಾತ್ಪರನಾದ, ಆದಿಪುರುಷನಾದ ಶ್ರೀಹರಿಯೂ ಕೂಡ ತನಗೂ ಇತರರಿಗೂ ಕೂಡ 'ಕಾಮ್ಯ'ನೇ ಎನ್ನಿಸುವನು. ಕಾಮಿಸಲ್ಪಡದೇ ಹೋದಲ್ಲಿ ಅವನು 'ಅಧೋಗತಿ'ಯನ್ನೇ ನೀಡುವನು. ಆದ್ದರಿಂದ 'ಕಾಮ'ವೇ ಹಿರಿದಾದ ಪುರುಷಾರ್ಥ. 'ಕಾಮ' ಎಂಬುದನ್ನು 'ಇಚ್ಛೆ' ಎಂಬ ಅರ್ಥದಲ್ಲಿ ಪರಿಗ್ರಹಿಸಿದಾಗಲೂ, ಅದಕ್ಕೇ ಹಿರಿಮೆ. ಅದಿಲ್ಲದಿದ್ದರೆ ಚೈತನ್ಯವು ಘಟಪಟದಂತೆ ಜಡವೆನ್ನಿಸಿಬಿಡುವುದು. ಆದ್ದರಿಂದ ಅದೇ ಸಾರ. ಚಿದಾತ್ಮಕವಾದ ಅದೂ ಸಹ ಯಾವಾಗಲೂ ಗುಪ್ತವಾಗಿ ದೇಹದಲ್ಲಿ ಅಡಗಿರುವುದು. ಆದ್ದರಿಂದ ಅದನ್ನು ಪ್ರತ್ಯೇಕವಾಗಿ ಪ್ರಶ್ನಿಸಲೇಕೂಡದು. ಅದರಲ್ಲೇ ನೀನು ತಾರತಮ್ಯವನ್ನು ತಿಳಿಯಬಯಸು-ವುದಾದಲ್ಲಿ ಅದರಲ್ಲಿ ಮೂರುವಿಧ. ಧರ್ಮ ಅರ್ಥದಿಂದ ಕೂಡಿದ ಕಾಮವೇ ಶ್ರೇಷ್ಠವಾದದ್ದು ಎಂದು ಪರಿಗಣಿಸಲ್ಪಟ್ಟಿದೆ. ಒಂದಕ್ಕೆ ವಿರೋಧವಾಗಿದ್ದಲ್ಲಿ ಅದು ಮಧ್ಯಮ. ಎರಡಕ್ಕೂ ವಿರೋಧವಾಗಿದ್ದಲ್ಲಿ ಅದು ಅಧಮ. ಆದ್ದರಿಂದ ಅನುರೂಪಕಾಮನಾಗಿ ಪುರುಷನು ಸ್ವಬುದ್ಧಿ-ಯೆಂಬ ಸ್ತ್ರೀಯನ್ನು ಕೂಡಿಕೊಂಡು ಸ್ವೇಚ್ಛೆಯಾಗಿ ವಿಹರಿಸತಕ್ಕದ್ದು. ರಾಜ ! ಕಾಮಕ್ಕಿಂತ

ಶುಭವಾದ ಮತ್ತೊಂದು ಪುರುಷಾರ್ಥ ಇಲ್ಲವೇ ಇಲ್ಲ, ಶ್ರೀಹರಿಯೇ 'ಮುಖ್ಯ ಕಾಮ' ಎನ್ನಿಸುವನಲ್ಲವೇ? ಪ್ರಾಜ್ಞನೂ, ಉತ್ತಮ ಮನಸ್ಕನೂ ಆದವನು, ಶ್ರೀಗಂಧದ ಲೇಪದಿಂದಲೂ, ವಿಚಿತ್ರ ಮಾಲ್ಯಾಭರಣಗಳಿಂದಲೂ ಕೂಡಿದವನಾಗಿ ನಲಿಯಬೇಕು''. ಸಂಕ್ಷೇಪ ವಿಸ್ತಾರದಿಂದ ಕೂಡಿದ ಈ ಮಾತನ್ನು ನುಡಿದು ವೀರನಾದ ಭೀಮನು ವಿರಮಿಸಿದ.

ಭೀಮನನ್ನೂ, ಇತರರನ್ನೂ ಪ್ರಶಂಸಿಸಿ, ಧರ್ಮರಾಜನು [೧]ಮೋಕ್ಷವನ್ನು ಶ್ರೇಷ್ಠಪುರುಷಾರ್ಥ ಎಂದು ಹೊಗಳಿದ. ತನ್ನ ಯುಕ್ತಿಗೆ [೨]ವಿರುದ್ಧವಲ್ಲ ಎಂಬ ಕಾರಣದಿಂದ ಭೀಮನು ಅದನ್ನು ನಿರಾಕರಿಸಲಿಲ್ಲ.



೧. ಧರ್ಮರಾಜನು ಮೋಕ್ಷವನ್ನು ಬಿಟ್ಟು ಇತರ ಮೂರುಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಪುರುಷಾರ್ಥ ಯಾವುದು? ಎಂಬುದಾಗಿಯೇ ಪ್ರಶ್ನಿಸಿದ್ದರಿಂದ ಇತರರು ಮುಖ್ಯವಾಗಿ ಭೀಮನು ಆ ರೀತಿ ತಿಳಿಸಬೇಕಾಯಿತು ಎಂಬುದು ಗಮನಿಸಬೇಕಾದ ಅಂಶ. ಉತ್ತರ ನೀಡುವಾಗ ಧರ್ಮರಾಜನು ಮೋಕ್ಷ ಎಂದು ಹೇಳುವ ಮೂಲಕ ತನ್ನ ನಿಲುವನ್ನು ಕಾದಿರಿಸಿಕೊಂಡಿದ್ದು ಸ್ಪಷ್ಟಪಡುವುದು.

೨. ಭೀಮನು ಧರ್ಮರಾಜನ ಉತ್ತರವನ್ನು ಮೇಲಿನ ಕಾರಣದಿಂದ ಪ್ರಶ್ನಿಸುವ ಅವಕಾಶವಿದ್ದರೂ, ಒಟ್ಟಾಗಿ ತಾನು ಕಾಮವನ್ನೇ ಶ್ರೇಷ್ಠಪುರುಷಾರ್ಥ ಎಂದು ಪ್ರತಿಪಾದಿಸಿದ ವಿವರಕ್ಕೆ ಅದು ಸಂವಾದಿಯಾಗಿದ್ದರಿಂದ ಮಾತು ಬೆಳೆಸದೆ ಸುಮ್ಮನಾದ ಎಂಬುದು ಗಮನಿಸಬೇಕಾದ ಸಂಗತಿ. ಇದರಿಂದ ಭೀಮನ ನಿಲುವು ಮಾತಿಗೆ ಮಾತು, ವಾದಕ್ಕಾಗಿ ವಾದ ಎಂಬ ಸಾಮಾನ್ಯರ ರೀತಿಯಾಗಿರದೆ, ತಾತ್ಪರ್ಯವನ್ನು ಗಮನಿಸುವ ಉದಾತ್ತವಾದ ನಿಲುವಾಗಿದ್ದಿತು ಎಂದು ತಿಳಿಯುವುದು. ಇದು ವಾದಕಥೆಗೆ ಅತ್ಯಂತ ಅಗತ್ಯವಾದ ಗುಣ. ಚರ್ಚೆಗೆ ಇಳಿಯುವವರು ಈ ಅಂಶವನ್ನು ಗಮನಿಸಿದಲ್ಲಿ ಅನೇಕ ವಿವಾದಗಳು ಅರ್ಥಯುತವಾದ ಮುಕ್ತಾಯವನ್ನು ಕಾಣಲು ಸಾಧ್ಯವಿದೆ.

# ಆಶ್ವಮೇಧಿಕ ಪರ್ವ

## ಪಾಂಡವರ ರಾಜ್ಯಭಾರ

ಉಪದೇಶದ ಕಾರ್ಯವನ್ನು ಪೂರೈಸಿದ ಮೇಲೆ ಕೃಷ್ಣನನ್ನು ಸ್ಮರಿಸಿ ಭೀಷ್ಮರು ತಮ್ಮ ವಸುರೂಪವನ್ನು ಸೇರಿದರು. ದುಃಖಿತಳಾದ ಗಂಗೆಯನ್ನು ಸಮಾಧಾನಪಡಿಸಿ ಎಲ್ಲ ಕಾರ್ಯಗಳನ್ನೂ ಮಾಡಿದ ಧರ್ಮರಾಜನನ್ನು ಕೃಷ್ಣವೇದವ್ಯಾಸರು ಸಮಾಧಾನಪಡಿಸಿದರು. ಆದರೂ ಅವನು ಮತ್ತೆ ದುಃಖಿಸತೊಡಗಿದ. ವೇದವ್ಯಾಸರು ಅವನನ್ನು ಕುರಿತು - ''ಪಾಪವಿಲ್ಲದಾಗಲೂ ಪಾಪವನ್ನು ಶಂಕಿಸುವ ನೀನು ಅಶ್ವಮೇಧಗಳಿಂದ ಅಚ್ಯುತನನ್ನು ಆರಾಧಿಸು. ಧರ್ಮದಿಂದ ರಾಜ್ಯವನ್ನು ಪಾಲಿಸು ; ಪಾಲಕರಿಲ್ಲದ ಪ್ರಜೆಗಳನ್ನು ರಕ್ಷಿಸು'' ಎಂದು ಉಪದೇಶಿಸಿದರು. ಆದರಂತೆ ಅವನು ನಡೆದುಕೊಳ್ಳತೊಡಗಿದ ; ಭೋಗಗಳನ್ನೆಲ್ಲ ಸಂಪೂರ್ಣ-ವಾಗಿ ವರ್ಜಿಸಿ, ಗೋವ್ರತ ಮೊದಲಾದ ವ್ರತಗಳನ್ನು ಆಚರಿಸುತ್ತಾ ಭೂಮಿಯನ್ನು ಪಾಲಿಸತೊಡಗಿದ. ಮುಖ್ಯವಾಗಿ ದಾನ ಮಾಡಬೇಕಾದ ಸಕಲ ವಸ್ತುಗಳನ್ನೂ ಸ್ವೇಚ್ಛೆಯಿಂದ ತಡೆಯಿಲ್ಲದೆ ದಾನನೀಡಿದ. ಆ ಸಮಯದಲ್ಲಿ ಬೇಡಲೆಂದು ಬಂದ ಯೋಗ್ಯನಾದ ಯಾವನೂ ಧರ್ಮರಾಜನಿಂದ ಬರಿಗೈಯ್ಯಲ್ಲಿ ತೆರಳುತ್ತಿರಲಿಲ್ಲ. ಕೇಳುವವನೂ, ಕೊಡುವವನೂ ಆದ ಧರ್ಮರಾಜ ಎಲ್ಲ ರಾಜರಿಂದ ವಂದ್ಯನಾಗಿ ಯಾಗಗಳನ್ನೂ ಮಾಡುತ್ತಿದ್ದ. ರಾಜಾಧಿರಾಜನಾದ ಅವನು ಪಾಂಡುರಾಜನ ಮನೆಯಲ್ಲಿ ವಾಸಿಸುತ್ತಾ, ಸ್ತ್ರೀಸಂಗವನ್ನು ತೊರೆದು ಇರತೊಡಗಿದ.

ಭೀಮನು ತನ್ನ ಅತುಲವಿಕ್ರಮದಿಂದ ಪಡೆದ ದುರ್ಯೋಧನನ ಮನೆಯಲ್ಲಿಯೇ ವಾಸಿಸುತ್ತಾ , ದ್ರೌಪದೀಸಮೇತನಾಗಿ ದೇವೇಂದ್ರನಿಗೆ ಯೋಗ್ಯವಾದ ಭೋಗಗಳನ್ನು ಯುವ-ರಾಜನಾಗಿ ಭೋಗಿಸತೊಡಗಿದ. ದ್ರೌಪದಿಯು ಭಾರತೀಸ್ವರೂಪವನ್ನೇ ಪೂರ್ಣವಾಗಿ ಹೊಂದಿದವಳಾಗಿ, ಉಳಿದ ನಾಲ್ವರು ಪಾಂಡವರನ್ನು ಬಿಟ್ಟು ಭೀಮನೊಂದಿಗೆ, ಜ್ವಾಲೆಯು ಅಗ್ನಿಯೊಂದಿಗೆ ರಮಿಸುವಂತೆ, ಎಂದೂ ಅಗಲದೆ ಶೋಭಿಸಿದಳು. ಉಳಿದ ಪಾಂಡವರೊಂದಿಗೆ, ಅವರ ಒಪ್ಪಿಗೆಯಿಂದಲೇ, ಆ ಮೊದಲೇ ದೂರವಾಗಿದ್ದ ಮಹಾಜ್ಞಾನಿಯಾದ ದ್ರೌಪದಿಯು ಪ್ರೀತಿಯಿಂದ ತನ್ನ ಪತಿಯಾದ ಭೀಮನನ್ನು ಸೇವಿಸಿದಳು. ಪಾಂಚಾಲಪುತ್ರಿಯಾದ ದ್ರೌಪದೀ ಹಾಗೂ ಕಾಶೀರಾಜಪುತ್ರಿಯಾದ ಕಾಳೀ ಎಂಬ ಎರಡು ರೂಪಗಳಿಂದ ಕೂಡಿದ ಭಾರತಿ-ಯೊಂದಿಗೆ ಭೀಮನು, ದೈತ್ಯರನ್ನು ಸಂಹರಿಸಿದ ಶ್ರೀಹರಿಯು ಪಯೋಬ್ಧಿಯಲ್ಲಿ ಶ್ರೀದೇವಿ - ಭೂದೇವಿಯರೊಂದಿಗೆ ಕ್ರೀಡಿಸುವಂತೆ ವಿಹರಿಸಿದ. ರಾಕಾ ಎಂಬ ಹುಣ್ಣಿಮೆಯ ಅಭಿಮಾನಿ-ದೇವತೆಯು, ರೋಹಿಣಿಯ ಮಗಳಾಗಿ ದೇವಿ ಎಂಬ ಹೆಸರಿನಿಂದ ಜನಿಸಿ ಭೀಮನ ಕೈಹಿಡಿದಿದ್ದಳು. ಪ್ರಾಣವಾಯುವಿನ ಅಂಶನಾದ ಸರ್ವೋತ್ತುಂಗ ಎಂಬ ಅವಳ ಮಗನು ಅಶ್ವತ್ಥಾಮರಿಂದ ರಾತ್ರಿಯಲ್ಲಿ ಹತನಾಗಿದ್ದ. ವಸುದೇವನ ಮಕ್ಕಳಾಗಿ ಜನಿಸಿದ್ದ ದಿಕ್ಕು ಹತ್ತು ಹಾಗೂ ನೀರಿನ ಅಭಿಮಾನಿಗಳಾಗಿದ್ದ ಹತ್ತು ಜನ ಪರಮಸುಂದರಿಯರೂ ಸಹ ಭೀಮನ

ಪತ್ನಿಯರೇ ಆಗಿದ್ದರು. ಅವರೆಲ್ಲರಿಂದ ಕೂಡಿದ ಭೀಮನು ದೇವತೆಗಳಿಗೂ ದೊರಕದಂತಹ ಭೋಗಗಳನ್ನು ದೇವಾನುಯಾಯಿಗಳಿಂದ ಪೂಜಿತನಾಗಿ ಭೋಗಿಸಿದ.

ಭೀಮನು ಸದ್ವೈಷ್ಣವರಾದ, ಐದುಜನ ಬ್ರಾಹ್ಮಣರನ್ನು ಪ್ರತಿಗ್ರಾಮದಲ್ಲೂ ವೇತನ ಕೊಟ್ಟು ಇರಿಸಿ, ಅವರ ಮೂಲಕ ವೈಷ್ಣವಧರ್ಮವನ್ನು ಜನರಿಗೆ ತಿಳಿಸಿ ಸಂರಕ್ಷಿಸಿದ. ಅದನ್ನು ಅನುಸರಿಸುವವರನ್ನು ಸಂತೋಷದಿಂದ ಕಾಣುತಿದ್ದ ; ಅದನ್ನು ನಡೆಸದ ಜನಗಳ ಮೇಲೆ ತಾನೇ ದಂಡವನ್ನು ಕೈಗೆತ್ತಿಕೊಂಡು ಶಿಕ್ಷಿಸುತ್ತಿದ್ದ. ತಾನು ನೇಮಿಸಿದ ಬ್ರಾಹ್ಮಣರ ವಿಷಯವನ್ನೂ ಸಹ ಬೇರೆ ವಿಪ್ರಶ್ರೇಷ್ಠರ ಮೂಲಕ ತಿಳಿಯುತ್ತಾ, ಭೀಮನು ಎಲ್ಲವೂ ಸಮರ್ಪಕವಾಗಿ ನಡೆಯು–ವಂತೆ ನೋಡಿಕೊಂಡ. ಆ ರಾಜ್ಯದಲ್ಲಿ ಅವೈಷ್ಣವನಾಗಲೀ, ಇತರ ದೇವತೆಗಳನ್ನು ಸರ್ವೋತ್ತಮನೆಂದು ಆರಾಧಿಸುವವನಾಗಲೀ, ಧರ್ಮವನ್ನು ಬಿಟ್ಟವನಾಗಲೀ, ವಿಧಿಯನ್ನು ಮೀರಿದವನಾಗಲೀ, ದುಃಖಿತನಾಗಲೀ, ದರಿದ್ರನಾಗಲೀ ಒಬ್ಬನೂ ಇರಲೇ ಇಲ್ಲ. ವೇದವ್ಯಾಸ ಕೃಷ್ಣರನ್ನು ನೋಡುತ್ತಾ, ಅವರಿಬ್ಬರಿಂದಲೂ, ಭೀಮನಿಂದಲೂ ಮುನಿಶ್ರೇಷ್ಠರಿಂದಲೂ ಧರ್ಮವನ್ನು ತಿಳಿಯುತ್ತಿದ್ದಂತಹ ಪ್ರಜೆಗಳಿಗೆ ಕಲಿಯುಗವು ಕೃತಯುಗಕ್ಕಿಂತ ಮಿಗಿಲೆನ್ನಿಸಿತು. ಕೃತಯುಗದಲ್ಲಿ ಹೆಚ್ಚು ಪುಣ್ಯವು ಕಡಿಮೆ ಫಲವನ್ನೂ, ಕಡಿಮೆ ಪಾಪವು ಹೆಚ್ಚು ದೋಷವನ್ನೂ ಉಂಟುಮಾಡುತ್ತಿತ್ತು. ಅದಕ್ಕೆ ವಿರುದ್ಧವಾಗಿ ಹೆಚ್ಚು ಪುಣ್ಯವೇ ಲಭಿಸುವಂತೆ ಈಗ ಈ ಯುಗದಲ್ಲಿ ಮಾಡಿದ್ದು ಶ್ರೀಕೃಷ್ಣನನ್ನು ಆಶ್ರಯಿಸಿದ ಭೀಮನ ಹಿರಿಮೆಯಾಗಿತ್ತು.

ಅಣ್ಣಂದಿರ ಆದೇಶದಂತೆ ಅರ್ಜುನನು ಇತರ ರಾಜರ ಮೇಲೆ ಯಾವಾಗಲೂ ದಂಡೆತ್ತಿ ತೆರಳುತ್ತಿದ್ದ. ಉಳಿದ ರಾಜರನ್ನು ಬೆದರಿಸಿ ಅರ್ಜುನನು ರತ್ನಗಳನ್ನು ತಂದು ಧರ್ಮರಾಜನ ಪಾದಗಳಲ್ಲಿ ಸಮರ್ಪಿಸುತ್ತಿದ್ದ. ಆ ಸಮಯದಲ್ಲಿ ಕೃಷ್ಣನ ಮುಖದಿಂದ ಹೊರಬಂದ ತತ್ತ್ವ–ನಿರ್ಣಯಾಮೃತವನ್ನು ಸವಿಯುತ್ತಾ , ಮಗನ ಸಾವಿನ ವ್ಯಥೆಯನ್ನು ಕ್ರಮೇಣ ಮರೆಯುತ್ತಾ , ಹೆಚ್ಚು ಭೋಗಗಳನ್ನು ಅನುಭವಿಸುತ್ತಲೇ ಸುಖಿಸಿದ. ಅವನು ದುಃಶಾಸನನ ಮನೆಯಲ್ಲಿ ಸುಭದ್ರೆ ಚಿತ್ರಾಂಗದೆಯರೊಂದಿಗೆ ನೆಲೆಸಿದ. ಚಂದ್ರಿಕಾ ಹಾಗೂ ಕಾಂತಿಯರಿಂದ ಕೂಡಿದ ಪೂರ್ಣಬಿಂಬದ ಹುಣ್ಣಿಮೆಯ ಚಂದ್ರನಂತೆ ಅರ್ಜುನನು ಕಂಗೊಳಿಸಿದ.

ನಕುಲನು ಶಲ್ಯಪುತ್ರಿಯೊಂದಿಗೆ ಕೂಡಿಕೊಂಡು ದುರ್ಮುಖನ ಮನೆಯಲ್ಲಿ ವಾಸಿಸಿದ. ಭೃತ್ಯರು ಹಾಗೂ ಆಶ್ರಿತರಿಗೆಲ್ಲ ವೇತನವನ್ನು ವಿತರಿಸುವ ಮುಖ್ಯ ಹೊಣೆ ಅವನದಾಗಿತ್ತು. ಸಂಧಾನ, ಭೇದ ಮೊದಲಾದ ಕಾರ್ಯಗಳಲ್ಲಿ ಮಗ್ನನಾಗಿ ಸಹದೇವನು, ಧರ್ಮರಾಜನ ಅಂಗರಕ್ಷಕನಾಗಿ, ಖಡ್ಗಧಾರಿಯಾಗಿ ಇರುತ್ತಿದ್ದ. ಜರಾಸಂಧಪುತ್ರಿಯೊಂದಿಗೆ ಅವನು ದುರ್ಮರ್ಷಣನ ಶುಭ್ರಗೃಹದಲ್ಲಿ ವಾಸ ಮಾಡುತ್ತಿದ್ದ. ಕೃಪಾಚಾರ್ಯರು ಸೇನಾಪತಿಯಾದರು. ಪಾಂಡವರು ಹೇಳಿದಂತೆ ಯುಯುತ್ಸು ಸಂಜಯ ಮತ್ತು ವಿದುರ ಈ ಮೂವರು ಧೃತರಾಷ್ಟ್ರನ ಸೇವೆಯಲ್ಲಿ ಮಗ್ನರಾದರು. ಸ್ವಯಂ ಧರ್ಮರಾಜನೂ ಧೃತರಾಷ್ಟ್ರನನ್ನು ದೇವತೆಯನ್ನೆಂಬಂತೆ ಆದರದಿಂದ ಸೇವಿಸಿದ.

## ಪಾಂಡವರ ರಾಜ್ಯದ ವರ್ಣನೆ

ಎರಡು ರೂಪಗಳ ಕೃಷ್ಣನಿಂದ ಅನುಗ್ರಹೀತರಾದ ಪಾಂಡವರು ಭೂಮಿಯನ್ನು ಪಾಲಿಸುತ್ತಿದ್ದಾಗ, ಒಬ್ಬ ರೋಗಿಯೂ ಇರಲಿಲ್ಲ ; ಯಾರಿಗೂ ಅಪಮೃತ್ಯು ಉಂಟಾಗುತ್ತಿರಲಿಲ್ಲ; ಸ್ತ್ರೀಯರು ವಿಧವೆಯರಾಗುತ್ತಿರಲಿಲ್ಲ ; ಪುರುಷರು ವಿಧುರರಾಗುತ್ತಿರಲಿಲ್ಲ. ಮನಸ್ಸಿಗೆ ಪ್ರಿಯ-ವೆನ್ನಿಸುವ ಶಬ್ದ ಮೊದಲಾದ ವಿಷಯಗಳೇ ಎಲ್ಲಡೆಯೂ ತುಂಬಿದ್ದವು. ಇಂದ್ರನು ಯಥೇಚ್ಛವಾಗಿ ಮಳೆಯನ್ನು ಸುರಿಸುತ್ತಿದ್ದ. ಪ್ರಜೆಗಳೆಲ್ಲ ಯಾವುದೇ ವಿಧವಾದ ತಾಪದ ಪೀಡೆಗಳಿಗೂ ಸಿಲುಕದೇ, ಅನನ್ಯಭಕ್ತಿಯಿಂದ ಕೃಷ್ಣನನ್ನು ಪೂಜಿಸುತ್ತಿದ್ದರು. [೧]ಭೂಮಿ, ಗೋವು, ವೇದಗಳು ಯಾವಾಗಲೂ ಯಥೇಚ್ಛವಾಗಿ ಫಲಗಳನ್ನು ನೀಡುತ್ತಿದ್ದವು. ಸಮುದ್ರ, ನದಿಗಳು, ಗಿರಿ, ವೃಕ್ಷ, ಜಂಗಮಗಳೆಲ್ಲವೂ ರತ್ನಗಳನ್ನು ನೀಡುತ್ತಿದ್ದವು. ಕೃಷ್ಣನ ಆಶ್ರಯದಿಂದಾಗಿ ಎಲ್ಲವನ್ನೂ ತಮ್ಮ ವಶದಲ್ಲಿರಿಸಿಕೊಂಡು, ಅವರು ಪರಿಪಾಲಿಸಿದರು. ಮುನಿಶ್ರೇಷ್ಠರು, ಗಂಧರ್ವರು, ರಾಜರು ಮೊದಲಾದವರಿಂದ ಕೂಡಿಕೊಂಡು ಅವರು ಸ್ವರ್ಗದಲ್ಲಿನ ದೇವತೆಗಳಂತೆ ಸಂತೋಷಿಸಿದರು. ಕೃಷ್ಣನಿಂದ ಜನಿಸಿದ ಪಾಂಡವಕೀರ್ತಿ ಎಂಬ ನಾರಿಯು ಕಂಗೊಳಿಸುತ್ತಾ, ಅಸುರಪಕ್ಷದವರ ತಲೆಯ ಮೇಲೆ ಕಾಲನ್ನಿಟ್ಟು, ಸಜ್ಜನರ ತಲೆಯ ಮೇಲೆ ವರದಹಸ್ತ, ಅಭಯಹಸ್ತಗಳನ್ನಿಟ್ಟು ಬ್ರಹ್ಮಾಂಡವನ್ನು ಆವರಿಸಿದಳು. ಪಾತಾಲವೇ ಅವಳ ಪಾದ ; ಪೃಥಿವಿಯೇ ನಿತಂಬ ; ಆಕಾಶವೇ ಮಧ್ಯಭಾಗ ; ಹರಡಿದ ದಿಕ್ಕುಗಳೇ ಕೈಗಳು ; ಗ್ರಹ, ನಕ್ಷತ್ರ, ತಾರೆಗಳೇ ಆಭರಣಗಳು ; ದ್ಯುಲೋಕವೇ ವಕ್ಷಸ್ಥಲ; ಸತ್ಯಲೋಕದ ಸ್ಥಳವೇ ಮುಖಕಮಲ; ತಲೆಯ ಮೇಲೆ ವೈಕುಂಠನಾಥನ ಅಭಯಹಸ್ತವನ್ನು ಧರಿಸಿದ್ದಳು. ಭಾರತ ಎಂಬುದೇ ಅವಳ ಹೆಸರು. ಮತ್ತೊಬ್ಬ ದ್ರೌಪದಿಯಂತಿದ್ದ ಅವಳನ್ನು ನೋಡಿ ಎಲ್ಲ ಲೋಕಗಳೂ ಪಾವನವಾದವು.

## ಭೀಮನಿಂದ ಕಲಿಯ ನಿಗ್ರಹ

ಹೀಗೆ ಪಾಂಡವರು ಕೃಷ್ಣಸಮೇತರಾಗಿ ಭೂಮಿಯನ್ನು ಪಾಲಿಸುತ್ತಿರುವಾಗ, ಮಹಾ-ದೈತ್ಯರಾದ ಕಲಿ ಮತ್ತು [೨]ಬಲಿ ಇಬ್ಬರೂ ಒಂದು ಕಡೆ ರಾಷ್ಟ್ರವಿಪ್ಲವವನ್ನು ನಡೆಸಿದರು. ಅದು ಕೂಡಲೇ ಪಾಂಡವರ ಕಿವಿಗೆ ಬಿದ್ದಿತು. ಧರ್ಮರಾಜ ಹಾಗೂ ಕೃಷ್ಣರಿಂದ ಕಳುಹಿಸಲ್ಪಟ್ಟ ಭೀಮನು ಅವರಿಬ್ಬರನ್ನೂ ಅವರ ಗುಂಪಿನೊಂದಿಗೆ ಸೋಲಿಸಿ, ಬಲಿಯನ್ನು ಓಡಿಸಿ, ಕಲಿಯನ್ನು ಸೆರೆಹಿಡಿದು, ಧರ್ಮರಾಜ ಹಾಗೂ ಕೃಷ್ಣರ ಬಳಿಗೆ ಕರೆತಂದ.

---

೧. ಭೂಮಿ ಫಲ ಕೊಡುವುದು ಎಂದರೆ ಉತ್ತಮವಾದ ಬೆಳೆಯನ್ನು ಕೊಡುವುದು ಎಂದೂ, ಗೋವುಗಳು ಫಲ ಕೊಡುವುದು ಎಂದರೆ ಯಥೇಚ್ಛವಾಗಿ ಹಾಲು ನೀಡುವುದೆಂದೂ, ವೇದಗಳು ಫಲ ಕೊಡುವುದು ಎಂದರೆ ವೇದಮಂತ್ರಗಳನ್ನು ಉಚ್ಚರಿಸಿ ನಡೆಸುವ ಯಜ್ಞಯಾಗಾದಿಗಳು ವಿಹಿತವಾದ ಫಲವನ್ನು ತಪ್ಪದೆ ನೀಡುವುದು ಎಂದು ಅರ್ಥ.

೨. ಈ ಬಲಿಯು ವಾಮನರೂಪಿ ಶ್ರೀಹರಿಗೆ ಸರ್ವಸ್ವ ದಾನಮಾಡಿದ ಬಲಿಚಕ್ರವರ್ತಿಯಲ್ಲ ; ಅವನೊಳಗೆ ಆವೇಶ ಮಾಡಿ, ಅವನ ಬುದ್ಧಿಯನ್ನು ಮರುಳುಗೊಳಿಸಿದ್ದ ಒಬ್ಬ ದೈತ್ಯ ; ಸಾಲ್ವನಾಗಿ ಹುಟ್ಟಿ ಶ್ರೀಕೃಷ್ಣನಿಂದ ಹತನಾದವನು ಈ ದೈತ್ಯನೇ.

ಕೃಷ್ಣನ ಮುಂದೆ ಉದಾರಬುದ್ಧಿಯ ಧರ್ಮರಾಜನು ಕಲಿಯನ್ನು ಪ್ರಶ್ನಿಸಿದ – ''ಎಲೋ ದುರ್ಮತಿಯಾದ ಕಲಿಯೇ ! ನೀನೇಕೆ ನಮ್ಮ ರಾಷ್ಟ್ರಕ್ಕೆ ಉಪಟಳ ಕೊಡುತ್ತಿರುವೆ?'' ಅದಕ್ಕೆ ಕಲಿಯು – ''ದುರ್ಯೋಧನ ಬಿದ್ದ ಅನಂತರದ ಈ ಕಾಲವೆಲ್ಲ ನನ್ನದು. ಬಲಾತ್ಕಾರವಾಗಿ ಆಕ್ರಮಿಸಿ ನಿಂತಿರುವುದು ನೀನೇ ; ಆದ್ದರಿಂದಲೇ, ಮಹಾರಾಜ ! ನಾನು ರಾಷ್ಟ್ರವಿಪ್ಲವವನ್ನು ಮಾಡಿದೆ'' ಎಂದು ನುಡಿಯಲು, ಅದಕ್ಕೆ ಧರ್ಮರಾಜನು – ''ರಾಜ್ಯವು ನಡೆಯುವುದು ರಾಜರ ಬಲದಿಂದ ; ಕಾಲಬಲದಿಂದ ನಿನಗೆ ದೊರೆಯುವ ರಾಷ್ಟ್ರವೂ ಸಹ ನನ್ನಂತಹ ಬಲಾಢ್ಯರಾದ ರಾಜರಿಂದ ಕಿತ್ತುಕೊಳ್ಳಲ್ಪಡುವುದು. ಆದ್ದರಿಂದ ನಿನಗೆಲ್ಲಿಯ ರಾಜ್ಯದ ಆಸೆ. ಕಾಲವು ರಾಜನಿಗೆ ಕಾರಣವೋ, ರಾಜನು ಕಾಲಕ್ಕೆ ಕಾರಣವೋ ಎಂಬ ಸಂದೇಹ ನಿನಗೆ ಬೇಡ ! ಎಂದೂ ರಾಜನೇ ಕಾಲಕ್ಕೆ ಕಾರಣ'' ಎಂದು ಉತ್ತರಿಸಿದ. ಆಗ ಕಲಿಯು – ''ನನ್ನ ಕಾಲದಲ್ಲಿ ನಿನ್ನಂತಹ ರಾಜ ಎಲ್ಲಿಂದ ಬಂದಾನು? ನಾನು ಮೊದಲಿಗೆ ರಾಜನನ್ನೂ, ಅನಂತರ ವಿಪ್ರರನ್ನೂ ಪ್ರವೇಶಿಸುವೆ. ಶ್ರೀಕೃಷ್ಣನ ರಕ್ಷಣೆಯನ್ನು ಹೊಂದಿರುವ ನಿಮ್ಮ ವಿಷಯದಲ್ಲಿ ಮಾತ್ರ ನನ್ನ ಆಟ ಸಾಗದಾಗಿದೆ ! ವಿಪ್ರರನ್ನು ಹಾಗೂ ದೇವತೆಗಳನ್ನು ವಿರೋಧಿಸುವ ನನ್ನ ಕಾಲದಲ್ಲಿ ನಿಮ್ಮ ಹೊರತು ನನಗೆ ವಶನಾಗದ ಯಾವ ರಾಜ ತಾನೇ ಇದ್ದಾನು? ನನ್ನ ಕಣ್ಣಿಗೆ ಬಿದ್ದಮೇಲೆ ಗುಣಗಳಾಗಲೀ, ವೇದಗಳಾಗಲೀ, ಒಳ್ಳೆಯ ಯುಕ್ತಿಗಳಾಗಲೀ ಎಲ್ಲಿ ಉಳಿದಾವು?'' ಎಂದು ನುಡಿದ.

ಧರ್ಮರಾಜನು – ''ಕಲಿಯೇ ! ನೀನು ಸುಳ್ಳುಗಾರನೇ ಆದರೂ ಈಗ ಹೇಳುತ್ತಿರುವುದು ಮಾತ್ರ ನಿಜವಾದ ಮಾತು. ಅದರಿಂದ ನಿನ್ನನ್ನೀಗ ನಾನು ಬಿಡುಗಡೆ ಮಾಡುವೆನು. ನಮ್ಮ ಸಂತತಿ ಕಳೆದ ಮೇಲೆ ಮಾತ್ರ ಎಲ್ಲ ಧರ್ಮಗಳನ್ನು ನಾಶ ಮಾಡುವ ನಿನ್ನ ಕಾರ್ಯ ಪ್ರಾರಂಭವಾಗಲಿ. ಆಗಲೂ ನೀನು ನನಗೆ ಕಪ್ಪವನ್ನು ನೀಡತಕ್ಕದ್ದು. ಗ್ರಾಮದ ಗಡಿ, ಬಹುಜನರ ಸಾಕ್ಷಿ , ತೂಕ ಹಾಗೂ ಅಳತೆಗಳಲ್ಲಿ ಹಾಗೆ ನೀನು [೧]ಕಪ್ಪವನ್ನು ಸಲ್ಲಿಸತಕ್ಕದ್ದು. ಇವುಗಳನ್ನು ಎಂದೂ ಸಹ ನೀನು ಅತಿಕ್ರಮಿಸಕೂಡದು'' ಎಂದು ಕಟ್ಟಳೆ ಮಾಡಿದ. ಕೃಷ್ಣನೂ ''ಭೂಮಿಯಲ್ಲಿ ಕಾಲಿಡುವ ನಿನಗೆ ಪಾಂಡವರ ಸಂತತಿ ಇರುವವರೆಗೂ, ಶಕ್ತಿಯುಂಟಾಗದು. ಪಾಂಡವರ ಅನಂತರ ಕ್ಷೇಮಕನವರೆಗೆ ಕ್ರಮವಾಗಿ ಬೆಳೆದು ನಿನ್ನ ಶಕ್ತಿಯು ಕ್ಷೇಮಕನ ಅನಂತರ ಪೂರ್ತಿಯಾಗಿ ವ್ಯಾಪಿಸಲಿ. ನಾನು ಮತ್ತು ಪಾಂಡವರು ಇರುವವರೆಗೂ ನೀನು ಭೂಮಿಯನ್ನು ಕಣ್ಣೆತ್ತಿ ನೋಡಲೂ ಕೂಡದು. ಮುಟ್ಟುವುದಂತೂ ದೂರದ ಮಾತೇ ಸರಿ ! ಅನಂತರ ನೀನು ಭೂಮಿಯ ಮೇಲೆ ಕಾಲಿರಿಸು'' ಎಂದು ಹೇಳಿ ಅವನನ್ನು ಬಿಡುಗಡೆ ಮಾಡಿಸಿದ.

೧. ಎಂದರೆ, ಗ್ರಾಮದ ಗಡಿಯನ್ನು ಗುರುತಿಸುವ ವ್ಯವಸ್ಥೆ, ಬಹುಜನರ ಸಾಕ್ಷಿಯ ಬಗ್ಗೆ ಪ್ರಾಮಾಣ್ಯ, ತೂಕ ಅಳತೆಗಳ ಮೂಲಕವೇ ವ್ಯಾಪಾರ-ವ್ಯವಹಾರ ಎಂಬ ವ್ಯವಸ್ಥೆಯನ್ನು ಮಾತ್ರ ಕಲಿಯು ಪಾಲಿಸಲೇಬೇಕು ಎಂದರ್ಥ. ಇದು ಭಗವಂತನಿಗೆ ಕಲಿ ಸಲ್ಲಿಸಬೇಕಾದ ಕಪ್ಪವಿದ್ದಂತೆ ಎಂದು ತಿಳಿಯಬೇಕು. ಇವುಗಳಲ್ಲೂ ಇಂದು ಮೋಸ ನಡೆಯುವುದು ಎಲ್ಲರಿಗೂ ತಿಳಿದಿರುವ ವಿಚಾರ. ಆದರೆ ಈ ವ್ಯವಸ್ಥೆಯ ಪರಿಕಲ್ಪನೆ ಮಾತ್ರ ಕಲಿಯುಗದಲ್ಲೂ ಅಬಾಧಿತ ಎಂಬುದು ವಿಶೇಷ.

ಅವರಿಬ್ಬರನ್ನೂ ನಮಸ್ಕರಿಸಿ, ಅವನು ಸಮುದ್ರವನ್ನು ದಾಟಿ ಅಲ್ಲಿಯ ಗುಹೆಯೊಂದರಲ್ಲಿ ನೆಲೆಸಿದ. ಕೃಷ್ಣಸಮೇತರಾಗಿ ಪಾಂಡವರು ಭೂಮಿಯನ್ನು ಪಾಲಿಸುತ್ತಾ ಸುಖಿಸಿದರು.

## ಅನುಗೀತೆ

ಪಾಂಡವರನ್ನು ಹೀಗೆ ರಾಜ್ಯದಲ್ಲಿ ಪ್ರತಿಷ್ಠಾಪಿಸಿ, ಶಕ್ರಪ್ರಸ್ಥದಲ್ಲಿ ಅರ್ಜುನಸಮೇತನಾಗಿ ಕ್ರೀಡಿಸುತ್ತಾ ಕೃಷ್ಣನು ಅವನ ಪುತ್ರಶೋಕವನ್ನು ಕಡಿಮೆ ಮಾಡುವ ಸಲುವಾಗಿ ಅನೇಕ ದಿವ್ಯ ಕಥೆಗಳನ್ನು ಹೇಳಿದ. ಅರ್ಜುನನು ಮರೆತಿದ್ದ, ಗೀತೆಯಲ್ಲಿ ಹೇಳಿದ್ದ ವಿಷಯವನ್ನು ಕೃಷ್ಣನು ಮತ್ತೆ ವಿಸ್ತಾರವಾಗಿ ತಿಳಿಸಿದ - ''ವಾಣೀ, ಪ್ರಾಣ, ವಾಸುದೇವ ಈ ಮೂವರಿಂದ ಎಲ್ಲವೂ ವ್ಯಾಪ್ತವಾಗಿದೆ. ಇವರು ಉಳಿದೆಲ್ಲರಿಗಿಂತಲೂ ಉತ್ತಮರು. ಎಲ್ಲ ಜಗತ್ತೂ ಇವರ ಅಧೀನ-ದಲ್ಲಿದೆ. ಈ ಮೂವರಲ್ಲಿ ವಾಣೀ, ಪ್ರಾಣ, ವಾಸುದೇವ ಇವರು ಕ್ರಮವಾಗಿ ಗುಣದಲ್ಲಿ ಶ್ರೇಷ್ಠರು. ಉಳಿದಿಬ್ಬರು ವಾಸುದೇವನ ಅಧೀನರು. ಒಟ್ಟಾಗಿ ಎಲ್ಲರೂ ಶ್ರೀಹರಿಯ ವಶವೇ. ಆ ಪ್ರಭುವಾದ ಶ್ರೀಹರಿಯಾದರೋ ಗುಣಪೂರ್ಣನಾದವನು. ಅವನ ಹೊರತು ಬೇರಾರೂ ಆ ರೀತಿ ಗುಣಪೂರ್ಣರಾಗಿಲ್ಲ. ಲಕ್ಷ್ಮಿಯು ಪ್ರಾಣನಿಗಿಂತ ಶ್ರೇಷ್ಠಳು ; ವಿಷ್ಣುವಿಗಿಂತ ಕಡಿಮೆ. ಹೋಮಿಸಿದ ಎಲ್ಲವನ್ನೂ ಮುಖ್ಯವಾಗಿ ಸ್ವೀಕರಿಸುವ ಕಾರಣದಿಂದ ವಿಷ್ಣುವಿಗೆ 'ಹುತಾಶ' ಎಂದು ಹೆಸರು. ವಾಕ್ ಪ್ರಾಣರಲ್ಲಿದ್ದು ಅವನು ಎಲ್ಲ ಜಗತ್ತನ್ನು ಧರಿಸಿರುವನು. ಅವನೇ ಈಶನು ; ಬ್ರಹ್ಮರುದ್ರಾದಿ ಉಳಿದೆಲ್ಲರೂ 'ಜೀವ'ರೆಂದೇ ಹೇಳಲ್ಪಟ್ಟಿರುವರು. ಕೃಷ್ಣನಲ್ಲಿ ಅನಾದಿಕಾಲದಿಂದ ಸಚ್ಛಕ್ತರಾಗಿರುವವರೆಲ್ಲಾ ಮುಕ್ತಿಯೋಗ್ಯರು. ಅನಾದಿದ್ವೇಷಿಗಳಾದ ಮಹಾಪಾಪಿಗಳೆಲ್ಲರೂ ಅಂಧಂತಮಸ್ಸಿಗೆ ಯೋಗ್ಯರು. ಮಿಶ್ರಸ್ವಭಾವದವರು ಮಧ್ಯಮರು. ಇವರು ಯಾವಾಗಲೂ ಸಂಸಾರದಲ್ಲಿಯೇ ಸುತ್ತುವವರು. ಈ ರೀತಿಯಾಗಿ ಜೀವರು ಮೂರು ವಿಧ. ದೈಹಿಕ ಹಾಗೂ ಮಾನಸಲಕ್ಷಣಗಳಿಂದ ಇವರಲ್ಲಿ ತಾರತಮ್ಯವನ್ನು ತಿಳಿಯಬೇಕು. ಭಗವಂತನಿಗೆ ಹಾಗೂ ಅವನ ಭಕ್ತರಿಗೆ ಪ್ರೀತಿಯನ್ನುಂಟುಮಾಡುವ ಕಾರ್ಯವೇ ಧರ್ಮ ಎನ್ನಿಸುವುದು. ಉಳಿದದ್ದೆಲ್ಲವೂ ಅಧರ್ಮ. ನಿಷ್ಠೆ ಎಂದರೆ ಇದೇ. ವ್ಯರ್ಥ ಮಾತಿನಿಂದೇ-ನಾದೀತು?'' ಇದೇ ಮೊದಲಾಗಿ ಅರ್ಜುನನಿಗೆ ಉಪದೇಶಿಸಿ, ಪಾಂಡವರಿಂದ ಬಹಳವಾಗಿ ಸತ್ಕೃತನಾಗಿ, ಬಹಳ ದೂರ ಹಿಂಬಾಲಿಸಿ ಬಂದಿದ್ದ ಅವರನ್ನು ಬಹಳ ಪ್ರಯಾಸದಿಂದ ಅಲ್ಲಿಯೇ ನಿಲ್ಲಿಸಿ, ಸುಭದ್ರಾ ಸಮೇತನಾಗಿ ಕೃಷ್ಣನು ದ್ವಾರಕಾಪಟ್ಟಣಕ್ಕೆ ಹೊರಟ.

## ಕೃಷ್ಣನಿಂದ ಉದಂಕನಿಗೆ ವಿಶ್ವರೂಪದರ್ಶನ

ಹಾದಿಯಲ್ಲಿ ಸಮಾಧಿ ಮುಗಿಸಿ ಮೇಲೆದ್ದ ಉದಂಕ ಕೇಳಿದಾಗ, ಕೃಷ್ಣನು ಅವನಿಗೆ ದುರ್ಯೋಧನನು ಸೋದರರು, ಪುತ್ರರು ಹಾಗೂ ಸೈನಿಕರ ಸಮೇತನಾಗಿ ಸತ್ತ ವಿಷಯವನ್ನು ತಿಳಿಸಿದ. ತನ್ನ ಶಿಷ್ಯನಾದ ದುರ್ಯೋಧನನನ್ನು ಆ ರೀತಿ ಕೊಲ್ಲಿಸಿದ್ದಕ್ಕಾಗಿ ತನ್ನನ್ನು ಶಪಿಸಲೆಂದು ಹೊರಟ ಉದಂಕನನ್ನು ಕೃಷ್ಣನು ಸೂಕ್ತಿಗಳಿಂದಲೂ, ವಿಶ್ವರೂಪಪ್ರದರ್ಶನದಿಂದಲೂ

ಸಮಾಧಾನಪಡಿಸಿದ. ತನ್ನಲ್ಲಿ ಬಹಳ ಭಕ್ತನಾದ, ತನ್ನ ಆರಾಧನೆಯಲ್ಲಿ ನಿರತನೂ ಆದ ಅವನು ಹಾಗೆ ತಪ್ಪು ಮಾಡಿ, ಮರಳಿ ಬಾರದ ನರಕಕ್ಕೆ ಹೋಗದಿರಲೆಂಬುದೇ ಕೃಷ್ಣನ ಆ ಕಾರ್ಯದ ಉದ್ದೇಶವಾಗಿತ್ತು. ಹೀಗೆ ಕೃಪೆಯಿಂದ ಕೃಷ್ಣನಿಂದ ಬೋಧಿಸಲ್ಪಟ್ಟ ಉದಂಕನು ಶಾಂತಮನಸ್ಕನಾಗಿ, ಪಶ್ಚಾತ್ತಾಪದಿಂದ ಕುದಿಯುತ್ತಾ ಕೃಷ್ಣನನ್ನೇ ಶರಣು ಹೊಂದಿದ. ಅವನಿಗೆ ಅಭಯವನ್ನಿತ್ತು ಕೃಷ್ಣನು 'ನಿನಗೆ ಅಮೃತವನ್ನು ಕೊಡಲು ಇಂದ್ರನನ್ನು ಕಳುಹಿಸಿಕೊಡುವೆನು' ಎಂದು ಹೇಳಿ ದ್ವಾರಾವತಿಗೆ ತೆರಳಿದ. ಅಲ್ಲದೆ ಇಂದ್ರನಿಗೆ 'ಆ ಮುನಿಗೆ ಅಮೃತವನ್ನು ಕೊಡು' ಎಂದು ಹೇಳಿದ. ಅದಕ್ಕೆ ಇಂದ್ರನು 'ಅವನನ್ನು ವಂಚಿಸುವೆ' ಎಂದು ವಿಜ್ಞಾಪಿಸಿಕೊಳ್ಳಲು, ಅದಕ್ಕೆ ಕೃಷ್ಣನು ಅವನ ಮೇಲಿನ ವಾತ್ಸಲ್ಯದಿಂದಾಗಿ ಒಪ್ಪಿದ. ಇಂದ್ರನು ಅತ್ಯಂತ ಜಿಗುಪ್ಸೆ ಹುಟ್ಟಿಸುವ ಮಾತಂಗನ ವೇಷದಲ್ಲಿ ಆ ಮುನಿಯ ಬಳಿಗೆ ಹೊರಟು ಅಮೃತದ ಕಲಶವನ್ನು ಮೂತ್ರದ್ವಾರದ ಬಳಿ ಇರಿಸಿಕೊಂಡು ಮೂತ್ರಮಾಡುವವನಂತೆ ನಟಿಸುತ್ತಾ ಅವನಿಗೆ ಹೇಳಿದ – "ಓ ಮಹರ್ಷಿಯೇ! ವಾಸುದೇವನು ಈ ಸುಧೆಯನ್ನು ನಿನಗೋಸ್ಕರ ಕಳುಹಿಸಿಕೊಟ್ಟಿರುವನು. ಇದನ್ನು ಕುಡಿ." ಆ ಋಷಿಯು ಅದನ್ನು ಮೂತ್ರವೆಂದೇ ತಿಳಿದು – "ನೀನು ಇಲ್ಲಿಂದ ನಡೆ" ಎಂಬುದಾಗಿ ಧಿಕ್ಕರಿಸಿದ. ಹೀಗೆ ಅವನನ್ನು ವಂಚಿಸಿದ ಇಂದ್ರನು ತನ್ನ ಮನೆಗೆ ತೆರಳಿದ. ಅಮೃತವು ದೇವತೆಗಳಿಗೆ ಯಾವಾಗಲೂ ಅಸಾಧಾರಣವಾದ ಅನ್ನ. ಆದ್ದರಿಂದಲೇ ಅದನ್ನು ಇನ್ನೊಬ್ಬರು ಕುಡಿಯುವುದು ಅವರಿಗೆ ತುಂಬಾ ಅಪ್ರಿಯವಾದ ವಿಷಯ. ಕೃಷ್ಣ ಮಾಡಿದ ಅನುಗ್ರಹವನ್ನು ಹೀಗೆ ತನ್ನದೇ ತಪ್ಪಿನಿಂದಾಗಿ ಉದಂಕ ಕಳೆದುಕೊಂಡ ; ಕೃಷ್ಣ ಅದನ್ನು ಯೋಗ್ಯವೆಂದೇ ತಿಳಿದ.

ತನ್ನ ಪಟ್ಟಣವನ್ನು ಸೇರಿದ ಕೃಷ್ಣನು ಯಾದವರಿಂದ ಪೂಜಿತನಾಗಿ ವಸುದೇವನಿಗೆ ಯಾದವರ ಸಭೆಯಲ್ಲಿ ಯುದ್ಧದ ವೃತ್ತಾಂತವನ್ನು ತಿಳಿಸಿದ. ಕೃಷ್ಣನು ತನ್ನ ಮಗ ಅಭಿಮನ್ಯುವಿನ ವಧೆಯ ವಿಷಯವನ್ನು ಮರೆಮಾಚಿದ್ದನ್ನು ನೋಡಿ, ಸುಭದ್ರೆಯು 'ಅದನ್ನು ತಿಳಿಸು' ಎಂದು ಪ್ರಾರ್ಥಿಸಲು, ಕೃಷ್ಣನು ಅದನ್ನೂ ತಿಳಿಸಿದ. ಅದನ್ನು ಕೇಳಿ ಬಹಳವಾಗಿ ದುಃಖಿಸಿದ ವಸುದೇವನೇ ಮೊದಲಾದವರು ಕೃಷ್ಣನೊಂದಿಗೆ ಕೂಡಿಕೊಂಡು ಅಭಿಮನ್ಯುವಿಗೆ ಶ್ರಾದ್ಧದಾನ ಮೊದಲಾದವು-ಗಳನ್ನು ವಿಶೇಷರೀತಿಯಲ್ಲಿ ಮಾಡಿದರು.

## ಪಾಂಡವರಿಗೆ ಲಭಿಸಿದ ಅಕ್ಷಯಧನ

ಹೀಗೆ ಕೃಷ್ಣನು ದ್ವಾರಾವತಿಯಲ್ಲಿ ವಾಸಿಸುತ್ತಿರಲು, ಅತ್ತ ಧರ್ಮರಾಜನು ಅಶ್ವಮೇಧವನ್ನು ಮಾಡಲು ಅದಕ್ಕೆ ಅಗತ್ಯವಾದ ಹಣವನ್ನು ಕಾಣದಾದ. ಅಳಿದುಳಿದ ಕ್ಷತ್ರಿಯರಿಂದ ಕರವನ್ನು ಪಡೆಯಲು ದಯಾಳುವಾದ ಅವನು ಇಚ್ಛಿಸಲಿಲ್ಲ. ಮಧ್ಯಮಕಲ್ಪದಿಂದ ಯಾಗವನ್ನು ಮಾಡಲೂ ಅವನ ಮನಸ್ಸು ಒಪ್ಪಲಿಲ್ಲ. ಅದನ್ನು ತಿಳಿದು ಸದಾ ಸರ್ವಜ್ಞರಾದ ವೇದ-ವ್ಯಾಸರು – "ಹಿಮಾಲಯಪರ್ವತದ ಶಿಖರವು ಮೇರುಪರ್ವತದ ಶಿಖರದೊಂದಿಗೆ ಸೇರುವ ಸ್ಥಳದಲ್ಲಿ ವಿಷ್ಣುವು ತನ್ನನ್ನೇ ಕುರಿತು, ಸ್ವಯಂ ಕರ್ಮಬಂಧರಹಿತನಾಗಿದ್ದರೂ, ಲೋಕಸಂಗ್ರಹ-

ಕ್ಕಾಗಿ ಯಾಗ ಮಾಡಿದ್ದ. ಅಲ್ಲಿಯೇ ಶಂಕರ ಮೊದಲಾದ ದೇವತೆಗಳೂ, ಮರುತ್ತರಾಜನೂ ಶ್ರೀಹರಿಯನ್ನು ಕುರಿತು ಯಜ್ಞ ಮಾಡಿದರು. ದಾನವನಾದ ವೃಷಪರ್ವನೂ ಅಲ್ಲಿಯೇ ಯಾಗಮಾಡಿದ. ಅಲ್ಲಿ ಅಕ್ಷಯವಾದ ಸಂಪತ್ತಿದೆ. ಆದ್ದರಿಂದ ಶಂಕರಾಂತರ್ಯಾಮಿಯಾದ ಪರಶುರಾಮರೂಪಿಯಾದ ಶ್ರೀಹರಿಯನ್ನು ಆರಾಧಿಸಿ, ಅವನ ಅಪ್ಪಣೆಯಿಂದ ಅದನ್ನು ಪಡೆದು ಆ ಧನದಿಂದ ಯಜ್ಞ ಮಾಡು'' ಎಂಬುದಾಗಿ ಉಪದೇಶಿಸಿದರು.

ವ್ಯಾಸರ ಮಾತಿನಂತೆ ಭೀಮಸೇನನೂ ಧರ್ಮರಾಜನಿಗೆ ಹೇಳಿದ - ''ಪರಶುರಾಮ-ರೂಪಿಯಾದ ಶ್ರೀಹರಿಯೇ ಧನದ ಅಧಿದೇವತೆ ; ಶಂಕರ ಶರೀರಸ್ಥನಾದ ಅವನು ಯಜ್ಞದಲ್ಲಿ ಉಳಿದ ಧನಕ್ಕೆ ಒಡೆಯ. ಅರ್ಜುನನಿಗೆ ಉತ್ತಮವಾದ ಅಸ್ತ್ರ ಆ ವಿಷ್ಣುವಿನಿಂದಲೇ ನೀಡಲ್ಪಟ್ಟದ್ದು. ನಮ್ಮ ಉಳಿದೆಲ್ಲ ಕಾರ್ಯಗಳೂ ವಿಷ್ಣುವಿನಿಂದಲೇ ನಡೆದಿವೆ. ಆ ವಿಷ್ಣುವೇ ಬ್ರಹ್ಮ, ರುದ್ರ, ಇಂದ್ರ ಮೊದಲಾದ ಪದವಿಗಳನ್ನು ಕೊಡುವವನು. ಸ್ವತಂತ್ರನಾದ ಅವನು ಪರತಂತ್ರರಾದ ಇತರರನ್ನೆಲ್ಲ ತನ್ನ ಇಚ್ಛೆಯಂತೆ ಆಡಿಸುವನು. ಅವನು ನಮಗೆ ಪ್ರಿಯ. ಅವನಿಗೆ ನಾವೆಲ್ಲ ಸದಾ ಪ್ರಿಯರು. ಆದ್ದರಿಂದ ಅವರ ಸಮ್ಮತಿಯಿಂದ ದೊರೆಯುವ ಧನದಿಂದಲೇ ನಾವೀಗ ಯಜ್ಞ ಮಾಡೋಣ. ನಮ್ಮ ಪಿತಾಮಹನಾದ ವ್ಯಾಸರೂಪಿಯಾದ ಅವನೇ ನಮಗೆ ಅದನ್ನು ನೀಡುವನು.'' ವ್ಯಾಸರನ್ನು ಮುಂದಿಟ್ಟುಕೊಂಡೇ ಪಾಂಡವರು ಹೊರಟರು. ಶತಯೋಜನದಷ್ಟು ವಿಸ್ತಾರವಾದ ಧನವನ್ನು ವ್ಯಾಸರು ಅವರಿಗೆ ದಯಪಾಲಿಸಿದರು. ಅವರೆಲ್ಲ ಆನೆ, ಕುದುರೆ ಹಾಗೂ ಒಂಟೆಗಳ ಹಾಗೂ ಮನುಷ್ಯರ ಮೇಲೆ ಆ ಧನವನ್ನು ಹೇರಿಕೊಂಡು ತಂದರು. ಧರ್ಮರಾಜನನ್ನು ಬಿಟ್ಟು ಭೀಮಸೇನ ಮೊದಲಾದ ಎಲ್ಲರೂ ಹಾಗೆ ಯಜ್ಞಕ್ಕೋಸ್ಕರ ಉದಿಸುವ ಸೂರ್ಯನ ಕಾಂತಿಯಂತೆ ಹೊಳೆಯುವ ಬಂಗಾರವನ್ನು ಹೊತ್ತು ತಂದರು.

## ಉದಕ ಪಡೆದ ಉದಂಕ – ಪರೀಕ್ಷಿತನ ಜನನ

ಆ ವೇಳೆಗೆ ಶ್ರೀಕೃಷ್ಣನು ತನ್ನ ಪತ್ನಿಯರು ಹಾಗೂ ಸುಭದ್ರೆಯೊಂದಿಗೆ ಹಸ್ತಿನಾಪುರಕ್ಕೆ ಬರುತ್ತಾ, ಮಾರ್ಗದಲ್ಲಿ ಉದಂಕನಿಂದ ಪೂಜಿತನಾದ. ಉದಕವನ್ನು ಬಯಸಿದ ಅವನಿಗೆ ಅವನ ಇಚ್ಛೆಯಂತೆ ಬಯಸಿದಾಗಲೆಲ್ಲ ಮಳೆ ಸುರಿಸುವ ಮೇಘಗಳನ್ನು ಕೊಡುವುದರ ಮೂಲಕ ತನ್ನ ವರವನ್ನು ಸಫಲವನ್ನಾಗಿ ಮಾಡಿ ಹಸ್ತಿನಾಪುರಕ್ಕೆ ಹೊರಟ. ಪಾಂಡವರು ಹಾಗೂ ವೇದವ್ಯಾಸರು ಅಲ್ಲಿ ಇಲ್ಲದ ವೇಳೆಯಲ್ಲಿ ಪಟ್ಟಣವನ್ನು ಕೃಷ್ಣನು ಪ್ರವೇಶಿಸಿದ. ಅದೇ ವೇಳೆಗೆ ಉತ್ತರೆಯು ಮೃತಶಿಶುವನ್ನು ಪ್ರಸವಿಸಿದಳು. ಅಶ್ವತ್ಥಾಮರ ಅಸ್ತ್ರದ ಪೆಟ್ಟಿಗೆ ತುತ್ತಾಗಿದ್ದ ಮಗುವನ್ನು ನೋಡಿ, ಕುಂತಿ ಮೊದಲಾದ ಸ್ತ್ರೀಯರು ಶರಣ್ಯನೂ, ಜಗತ್ಪತಿಯೂ ಆದ ಕೃಷ್ಣನನ್ನು ಶರಣು ಹೊಕ್ಕರು. ಗರ್ಭದಲ್ಲಿ ತನ್ನಿಂದಲೇ ಪ್ರತ್ಯಕ್ಷವಾಗಿ ರಕ್ಷಿತವಾಗಿ, ಪ್ರಸವಕಾಲದಲ್ಲಿ ಹತವಾಗಿದ್ದ ಆ ಮಗುವನ್ನು ಕೃಷ್ಣನು ಪಾಂಡವಸಂತತಿಗೋಸ್ಕರ ಮತ್ತೆ ಬದುಕಿಸಿದ. ಆ ವೇಳೆಗೆ ಅಪಾರ ಧನಸಮೇತರಾಗಿ, ವೇದವ್ಯಾಸರೊಂದಿಗೆ ಪಾಂಡವರು ಪಟ್ಟಣವನ್ನು ಪ್ರವೇಶಿಸಿದರು. ಮೊಮ್ಮಗನು ಕೃಷ್ಣನಿಂದ ರಕ್ಷಿತನಾದದ್ದನ್ನು ನೋಡಿ ಅವರೆಲ್ಲ ಅಪಾರವಾಗಿ ಹರ್ಷಿಸಿದರು.

ಮೊಮ್ಮಗನ ಜನನದಿಂದ ಸಂತೋಷ ಹೊಂದಿದ ಧರ್ಮರಾಜನು ಬಹಳವಾಗಿ ದಾನಗಳನ್ನು ಮಾಡಿ, ಕೃಷ್ಣನಿಗೆ ನಮಸ್ಕರಿಸಿದ. ಕುಂತಿ, ದ್ರೌಪದೀ, ಸುಭದ್ರೆ, ಉತ್ತರೆ ಮೊದಲಾದವರು, ಪಾಂಡವರು ಹಾಗೂ ಇತರ ಜನರು ಕೃಷ್ಣನನ್ನು ಸ್ತುತಿಸಿ ನಮಸ್ಕರಿಸಿದರು.

## ಯಜ್ಞದ ಸನ್ನಾಹ

ಅನಂತರ ಕೃಷ್ಣನ ಅನುಮತಿಯನ್ನು ಪಡೆದು, ವೇದವ್ಯಾಸರ ನೇತೃತ್ವದಲ್ಲಿ ಬ್ರಹ್ಮವಾದಿಗಳಾದ ಮುನಿಗಳೊಂದಿಗೆ ಕೂಡಿಕೊಂಡು ಆ ಪಾಂಡವರು ಅಶ್ವಮೇಧವನ್ನು ಆರಂಭಿಸಿದರು. ಅವರಿಂದ ಸರ್ವಯಜ್ಞಾತ್ಮಕವಾದ ಅಶ್ವಮೇಧವನ್ನು ಜಗದೊಡೆಯರಾದ ಕೃಷ್ಣದ್ವೈಪಾಯನರು ಸ್ವತಃ ಮಾಡಿಸಿದರು. ಕೃಷ್ಣದ್ವೈಪಾಯನರ ಅಪ್ಪಣೆಯಂತೆ ಭೀಮಸೇನನು ಯಜ್ಞಶಾಲೆಯನ್ನೂ ಎಲ್ಲ ಸಾಮಗ್ರಿಗಳನ್ನೂ ಬಂಗಾರದಿಂದಲೇ ಮಾಡಿಸಿದ. ಪುರೋಹಿತರಾದ ಧೌಮ್ಯರು ಅಭಿಮಂತ್ರಿಸಿ ಕಳುಹಿಸಿದ, ಕೃಷ್ಣಸಾರಂಗದಂತಹ ಯಜ್ಞಕುದುರೆಯನ್ನು ಅರ್ಜುನನು ಹಿಂಬಾಲಿಸಿ ಹೊರಟ. ಅವನು ಅದನ್ನು ತಡೆದ ಎಲ್ಲ ರಾಜರನ್ನೂ ಅಸ್ತ್ರಸಾಮರ್ಥ್ಯದಿಂದ ಸೋಲಿಸಿ, ಎಲ್ಲ ರಾಷ್ಟ್ರಗಳಲ್ಲೂ ಅಜೇಯನಾಗುತ್ತಲೇ ಆ ಕುದುರೆಯನ್ನು ಹಿಂಬಾಲಿಸಿದ. ಧರ್ಮರಾಜನ ಅಪ್ಪಣೆಯಂತೆ ಒಬ್ಬನನ್ನೂ[೧] ಸಹ ಆ ಸಮಯದಲ್ಲಿ ಅರ್ಜುನನು ಕೊಲ್ಲಲಿಲ್ಲ; ಅವನು ಅಣ್ಣನ ಅಪ್ಪಣೆಯಂತೆ ಎಲ್ಲ ರಾಜರನ್ನೂ ಸಹ ಯಜ್ಞಕ್ಕೆ ಆಹ್ವಾನಿಸಿದ.

## ಬಭ್ರುವಾಹನ ಪ್ರಸಂಗ

ಕ್ರಮವಾಗಿ ಮಳಲೂರನ್ನು ತಲುಪಿದ ಅರ್ಜುನನನ್ನು ಅವನ ಮಗ ಬಭ್ರುವಾಹನನು ಅರ್ಘ್ಯಪಾದ್ಯಾದಿಗಳಿಂದ ಇದಿರುಗೊಂಡ. ಅವನಿಗೆ ಅರ್ಜುನನು - "ಯುದ್ಧಮಾಡಬಯಸಿ ಬಂದ ನನ್ನನ್ನು ನೀನು ಅರ್ಘ್ಯಾದಿಗಳಿಂದ ಎದುರುಗೊಂಡೆ. ಇದಕ್ಕಾಗಿ ನಿನ್ನ ವಿಷಯದಲ್ಲಿ ನನಗೆ ಸಂತೋಷವೆನ್ನಿಸಲಿಲ್ಲ. ಯಜ್ಞಾಶ್ವವನ್ನು ಕಟ್ಟದ ನಿನ್ನ ಪೌರುಷಕ್ಕೆ ಧಿಕ್ಕಾರ" ಎಂದುಬಿಟ್ಟ. ಆದರೂ ಪಿತೃಭಕ್ತಿಯಿಂದಾಗಿ ಯುದ್ಧಕ್ಕೆ ತೊಡಗದಿದ್ದ ಅವನಿಗೆ ಉಲೂಪಿಯು 'ನೀನು ತಂದೆಯನ್ನು ಸಂತೋಷಪಡಿಸಲೆಂದು, ನಿನ್ನ ಬಲವನ್ನು ತೋರಿಸುತ್ತಾ ಯುದ್ಧ ಮಾಡು' ಎಂದು ಪ್ರೇರಿಸಿದಳು. ಆಗ ಅವನು ತನ್ನ ಸಮಸ್ತ ಬಲವನ್ನೂ ತಂದೆಗೆ ತೋರಿಸುತ್ತಾ ಯುದ್ಧಕ್ಕೆ ತೊಡಗಿದ. ಅರ್ಜುನನು ಪುತ್ರವಾತ್ಸಲ್ಯದಿಂದಾಗಿ ಮೃದುವಾಗಿ ಕಾದುತ್ತಿದ್ದ. ತನ್ನೆಲ್ಲ ಆಯುಧಗಳನ್ನು ಬಿಟ್ಟಾಗಲೂ ಧನಂಜಯ ನಿರ್ವಿಕಾರನಾಗಿರುವುದನ್ನು ನೋಡಿ, ಬಭ್ರುವಾಹನ ಹುಡುಗಾಟದಿಂದಾಗಿ ಪರೀಕ್ಷಿಸಲೆಂದು ಮಂತ್ರಪೂರಿತವಾದ ಮಹಾಶರವೊಂದನ್ನು ಪ್ರಯೋಗಿಸಿ–

---

೧. ಇದನ್ನು ಗಮನಿಸಿದಾಗ ಸುಧನ್ವ, ಸುರಥ ಮೊದಲಾದ ಅನೇಕ ಮಹಾವೀರರನ್ನು ಅರ್ಜುನ ಸಂಹರಿಸಿದಂತೆ ನಿರೂಪಿಸುವ ಜೈಮಿನಿಭಾರತದ ಕಥೆ ಮೂಲಮಹಾಭಾರತಕ್ಕೆ ಅನುಗುಣವಾದುದಲ್ಲ ಎಂದಾಗುವುದು. ಅದರಲ್ಲಿನ ಇತಿಹಾಸವನ್ನು ಕೈಬಿಟ್ಟು, ವಿಷ್ಣುಭಕ್ತಿಯ ಹಿರಿಮೆಯನ್ನು ನಿರೂಪಿಸುವ ಮುಖ್ಯಾಂಶಕ್ಕೆ ಮಾತ್ರ ಗಮನ ಕೊಡುವುದು ವಿಹಿತ ಎಂದು ತಿಳಿಯುವುದು.

ಬಿಟ್ಟ. ದೈವಸಂಕಲ್ಪದಿಂದಾಗಿ ಅರ್ಜುನ ಅದರ ಪೆಟ್ಟಿಗೆ ಮೂರ್ಛಿತನಾದ. ತನ್ನ ತಂದೆ ಮೂರ್ಛೆ ಹೋದದ್ದನ್ನು ನೋಡಿ, ಅವನ ಮೇಲಿನ ಭಕ್ತಿಯಿಂದ ತುಂಬಾ ದುಃಖಪಡುತ್ತಾ, ಬಭ್ರು-ವಾಹನನು ಪ್ರಾಯೋಪವೇಶಕ್ಕೆ ಸಿದ್ಧನಾದ. ಅವನ ತಾಯಿ ಚಿತ್ರಾಂಗದೆಯೂ ತುಂಬಾ ದುಃಖದಿಂದ ಅಳತೊಡಗಿದಳು. ಉಲೂಪಿಯನ್ನು – "ಮೂರುಲೋಕ ಪೂಜಿತನಾದ ನನ್ನ ಪತಿಯನ್ನು ಅರಿಯದ ಮಗನ ಕೈಯಿಂದಲೇ ಕೊಲ್ಲಿಸಿದ ನಿನಗೆ ಧಿಕ್ಕಾರ. ಲೋಕವೀರನಾದ ಪತಿ ಇಲ್ಲವಾದ ಮೇಲೆ ನನಗೆ ಮಗನಿಂದ ಆಗಬೇಕಾದದ್ದೇನಿದೆ? ನಾನಿನ್ನು ಪರಲೋಕಕ್ಕೆ ತೆರಳುವೆನು. ಕಲಹಪ್ರಿಯಳೇ ! ನೀನು ಸುಖದಿಂದಿರು" ಎಂದು ತೆಗಳಿ, ಮರಣಕ್ಕೆ ಸಿದ್ಧಳಾಗಿ ಭೂಮಿಯ ಮೇಲೆ ಹೊರಳ ತೊಡಗಿದಳು.

ಆಗ ಉಲೂಪಿಯು ನಾಗಲೋಕದಿಂದ ವಿಶಲ್ಯಕರಣಿಯನ್ನು ಕ್ಷಣಾರ್ಧದಲ್ಲಿ ತಂದು ಮೂರುಲೋಕದ ಮಹಾವೀರನಾದ ಪತಿಯನ್ನು ಮೇಲೆಬ್ಬಿಸಿದಳು. ಅನಂತರ ನಗುತ್ತಾ ತಿಳಿಸಿದಳು – "ಹಿಂದೆ ದೇವಲೋಕದಲ್ಲಿ ದೇವತೆಗಳು 'ಭೀಷ್ಮಾದಿಗಳನ್ನು ತುಂಬಾ ನ್ಯಾಯವಾದ ರೀತಿಯಲ್ಲಿ ಅರ್ಜುನ ಕೊಂದಿಲ್ಲ ಎಂಬ ಕಾರಣದಿಂದಾಗಿ ಅವನು ಯುದ್ಧದಲ್ಲಿ ಅತ್ಯಂತ ವೇದನೆಯನ್ನು ಹೊಂದುವಂತಾಗಲಿ' ಎಂದು ಹೇಳಿದ ಮಾತನ್ನು ಕೇಳಿದ್ದೆ. ಅದು ಬೇರೆಯವರಿಂದ ಆಗದಿರಲಿ ಎಂಬ ಕಾರಣದಿಂದ ನಾನು ದೇವತೆಗಳ ಅಪ್ಪಣೆಯಂತೆ 'ಯುದ್ಧ ಮಾಡು' ಎಂಬುದಾಗಿ ಬಭ್ರುವಾಹನನಿಗೆ ಹೇಳಿದೆ. ದೇವತೆಗಳ ಸಂಕಲ್ಪದಿಂದಲೇ ಅರ್ಜುನನು ಮೂರ್ಛಿತನಾದ. ಅದರ ಫಲವನ್ನು ಅನುಭವಿಸಿ ಪೂರೈಸಿದ್ದರಿಂದ ಇದನ್ನು ಮತ್ತೆ ಅರ್ಜುನನು ಇತರರಿಂದ ಅನುಭವಿಸಲಾರ. ಬೇರೆಯವರಿಗೆ ಇವನು ಸೋತಲ್ಲಿ ಮೂರುಲೋಕಗಳಲ್ಲಿ ಹರಡಿರುವ ಇವನ ಕೀರ್ತಿಗೆ ಕಳಂಕ ತಟ್ಟುವುದು. ಹಾಗೆ ಅರ್ಜುನನ ಕೀರ್ತಿ ಹಾಳಾಗ-ಕೂಡದೆಂಬ ಕಾರಣದಿಂದ ದೇವತೆಗಳು ಹೀಗೆ ಮಾಡಿದರು." ಉಲೂಪಿಯ ಮಾತನ್ನು ಕೇಳಿ ಪುತ್ರ ಭಾರ್ಯೆಯರೊಂದಿಗೆ ಅರ್ಜುನನು ಪ್ರೀತನಾದ. ಯಜ್ಞಕ್ಕೆ ಅವರಿಬ್ಬರನ್ನೂ ಆಹ್ವಾನಿಸಿ, ಅವರಿಂದ ಪೂಜಿತನಾಗಿ ಅರ್ಜುನನು ಮುಂದಕ್ಕೆ ತೆರಳಿದ.

ದ್ವಾರಕೆಯನ್ನು ಸಮೀಪಿಸಿದ ಕುದುರೆಯನ್ನು ಪ್ರದ್ಯುಮ್ನ ಮೊದಲಾದ ಕೃಷ್ಣನ ಮಕ್ಕಳು ಬಲಾತ್ಕಾರವಾಗಿ ಕಟ್ಟಿ, ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸಿದರು. ಸುಭದ್ರಾಹರಣದ ಸೇಡನ್ನು ತೀರಿಸಿಕೊಳ್ಳುವುದು ಅವರ ಆ ಕಾರ್ಯದ ಉದ್ದೇಶವಾಗಿತ್ತು. ಆಗ ಅರ್ಜುನನು ಕೃಷ್ಣ ಹಾಗೂ ವಸುದೇವರ ಮೇಲಿನ ಗೌರವದಿಂದಾಗಿಯೇ, ವಸುದೇವನಿಗೆ 'ನಿನ್ನ ಮೊಮ್ಮಕ್ಕಳು ಶತ್ರುಗಳಂತೆ ಅಶ್ವವನ್ನು ಕಟ್ಟಿಹಾಕಿರುವರು' ಎಂದು ಹೇಳಲು, [೧] ಅವನು ಕುಮಾರರನ್ನೆಲ್ಲ ಕರೆಸಿ, ಯಜ್ಞಾಶ್ವ-ವನ್ನು ಬಿಡಿಸಿದ. ವಸುದೇವನಿಗೆ ನಮಸ್ಕರಿಸಿ, ಅವರನ್ನೆಲ್ಲ ಯಜ್ಞಕ್ಕೆ ಆಹ್ವಾನಿಸಿ, ಹಸ್ತಿನಾವತಿಯನ್ನು ತಲುಪಿ, ತನ್ನ ಬರುವನ್ನು ತಿಳಿಸಲೆಂದು ದೂತರನ್ನು ಮುಂದಾಗಿ ಕಳುಹಿಸಿದ.

---

೧. ಇಲ್ಲಿ ವಸುದೇವ ತೋರಿಸಿದ ವಿವೇಕವನ್ನು ಧೃತರಾಷ್ಟ್ರ ತೋರಿಸದಿದ್ದದ್ದು ಅವನ ದುರಂತಕ್ಕೆ ಕಾರಣ-ವಾಯಿತು.

## ಲಕ್ಷಣ ವಿವೇಚನೆ

ಅರ್ಜುನನು ಹಿಂದಿರುಗಿ ಬಂದದ್ದನ್ನು ಕೇಳಿ ಧರ್ಮರಾಜನು, ಕೃಷ್ಣ ಹಾಗೂ ಸೋದರರೊಂದಿಗೆ ಹರ್ಷಿಸಿ, ಆನಂದಬಾಷ್ಪದಿಂದ ಕಣ್ಣು ತುಂಬಿಬಂದವನಾಗಿ, ಭ್ರಾತೃವಾತ್ಸಲ್ಯದಿಂದ, ಹೇಳಿದ - ''ಕೃಷ್ಣ! ಯಾವ ದುರ್ಲಕ್ಷಣಗಳೂ ಅರ್ಜುನನಲ್ಲಿ ಕಾಣುತ್ತಿಲ್ಲ. ಹಾಗಿದ್ದರೂ ಯಾವ ದುರ್ಲಕ್ಷಣದಿಂದಾಗಿ ಇವನು ಸದಾ ಸಂಚಾರ ಮಾಡುತ್ತಾ ಹೆಚ್ಚು ಕ್ಷೋಭೆಗೆ ತುತ್ತಾಗುತ್ತಿರುವನು ?'' ಅದಕ್ಕೆ ಕೃಷ್ಣನು - ''ನಿನ್ನ ತಮ್ಮನ ದೇಹ ಸ್ವಲ್ಪ ಉದ್ದ. ಅದಕ್ಕೆಂದೇ ಹೀಗೆ ಹೆಚ್ಚು ಕಷ್ಟಕ್ಕೆ ತುತ್ತಾಗುವನು'' ಎಂದು ಹೇಳಿ, ಇನ್ನೂ ಮುಂದುವರೆಸುವುದರಲ್ಲಿದ್ದಾಗ, ದ್ರೌಪದಿಯು ಕಣ್ಸನ್ನೆಯಿಂದ ಅವನನ್ನು ತಡೆದಳು. ಎಲ್ಲ ಲಕ್ಷಣಗಳನ್ನೂ ತಿಳಿದವರು ಕೃಷ್ಣ ಸತ್ಯಭಾಮೆ, ಭೀಮಸೇನ ಹಾಗೂ ದ್ರೌಪದೀ - ಈ ನಾಲ್ವರು ಮಾತ್ರ. ಐದನೆಯ ವ್ಯಕ್ತಿ ಇಲ್ಲವೇ ಇಲ್ಲ. ಈ ವಿದ್ಯೆ ಅತ್ಯಂತ ಶುದ್ಧವಾದದ್ದು. ''ವಿದ್ಯಾಶೀಲನಾದ ಯುಧಿಷ್ಠಿರನು ಈ ಪ್ರಸಂಗದಿಂದಾಗಿ ಅದನ್ನು ತಾನು ತಿಳಿಯಲು ಬಯಸಿಯಾನು'' ಎಂಬ ಕಾರಣದಿಂದಾಗಿ ದ್ರೌಪದಿಯು ಕೃಷ್ಣನನ್ನು ತಡೆದಳು. ಅವಳ ಮೇಲಿನ ಪ್ರೀತಿಯಿಂದಾಗಿ ಕೃಷ್ಣನು ಉತ್ತರವನ್ನು ಮುಂದುವರೆಸಲಿಲ್ಲ. ಬೇರೊಂದು ವಿಷಯವನ್ನು ತೆಗೆದು ಯುಧಿಷ್ಠಿರನಿಗೆ ಆ ವಿಷಯವನ್ನು ಮರೆಸಿದ.

ಉದರವು ಸ್ವಲ್ಪ ಅಧಿಕವಾಗಿದ್ದುದು ; ವೃಷಣಾಧಿಕ್ಯ ; ಎಡಗೈ ಸ್ವಲ್ಪ ಅಧಿಕವಾಗಿದ್ದುದು ; ಅರ್ಜುನನ ಇತರ ದೋಷಗಳು. ಅವು ಸ್ಪಷ್ಟವಾಗಿಯೇ ಕಂಡು ಬರುತ್ತಿದ್ದರೂ, ಕೃಷ್ಣನು ಅವನ್ನೆಲ್ಲ ಹೇಳಲಿಲ್ಲ. ಈ ರೀತಿಯಾದ ದೋಷಗಳೆಲ್ಲ ಯಾವಾಗಲೂ ಜ್ಞಾನ, ಆನಂದಗಳಿಗೆ ಹ್ರಾಸವನ್ನುಂಟುಮಾಡುವವು. ಸಮಸ್ತಜೀವರಾಶಿಗಳಲ್ಲೂ ದುರ್ಲಕ್ಷಣರಹಿತರಾಗಿ ಪೂರ್ಣವಾದ ಜ್ಞಾನ, ಸುಖ, ಶಕ್ತಿ ಮೊದಲಾದವುಗಳಿಗೆ ಯೋಗ್ಯರಾದವರು ದ್ರೌಪದಿ ಮತ್ತು ಭೀಮ ಇಬ್ಬರೇ. ಅನಾದಿಕಾಲದಿಂದ ದುಃಖವಿಲ್ಲವಿರುವುದಕ್ಕೂ ಹಾಗೂ ಆನಂದದಿಂದ ತುಂಬಿರುವುದಕ್ಕೂ ಕಾರಣವೆನ್ನಿಸುವ ಮುಖ್ಯವಾದ ಲಕ್ಷಣ ರುಗ್ಮಿಣೀ ಸತ್ಯಭಾಮೆ ಮೊದಲಾದ ರೂಪದ ಮಹಾಲಕ್ಷ್ಮಿಗೆ ಮಾತ್ರ ಪ್ರಧಾನವಾಗಿ ಉಂಟು. ಸ್ವಾತಂತ್ರ್ಯಾದಿಗಳೆಲ್ಲ ಸಂಪೂರ್ಣ ಕಾರಣವಾದ ಗುಣರಾಶಿಗೆ ಮುಖ್ಯಹೇತುವಾದ ಅತಿಮುಖ್ಯಲಕ್ಷಣವು ವೇದವ್ಯಾಸಾದಿರೂಪಿಯಾದ ಶ್ರೀಹರಿಗೆ ಮಾತ್ರವೇ ಇರುವುದು ; ಅವನೊಬ್ಬನೇ ಪೂರ್ಣಸದ್ಗುಣನಾದವನು.

## ಅಶ್ವಮೇಧಯಾಗದ ವೈಭವ

ಅರ್ಜುನನು ಅಶ್ವಸಮೇತನಾಗಿ ಯಜ್ಞಶಾಲೆಯನ್ನು ಪ್ರವೇಶಿಸಲು, ಅವನಿಂದ ಪೂಜಿತರಾದ ಅವನ ಸೋದರರೆಲ್ಲರೂ, ಕೃಷ್ಣಸಮೇತರಾಗಿ ಅವನನ್ನು ಆದರಿಸಿದರು.

ಬಳಿಕ ಕೃಷ್ಣನಿಂದ ರಕ್ಷಿತವಾದ, ವೇದವ್ಯಾಸರಿಂದ ಉಪದಿಷ್ಟವಾದ, ಮುನಿಗಳಿಂದ ನಡೆಸಲ್ಪಟ್ಟ ಆ ಯಜ್ಞವು, ಆಗಮಿಸಿದ್ದ ಎಲ್ಲ ರಾಜರಿಂದಾಗಿಯೂ, ವಿಪ್ರವರರಿಂದಾಗಿಯೂ ತುಂಬಿ ಚೆನ್ನಾಗಿ ಶೋಭಿಸಿತು. ಇಬ್ಬರು ಕೃಷ್ಣರು ಹಾಗೂ ಪರಶುರಾಮ ಎಂಬ ಹರಿಯ ಮೂರು

ರೂಪಗಳಿಂದ ಅಲಂಕೃತವಾದ ಆ ಯಜ್ಞವು ವಿಶ್ವಾದಿರೂಪದ ಶ್ರೀಹರಿಯಿಂದೆಂಬಂತೆ ಶೋಭಿಸಿತು. ಹಿಂದೆ ನಡೆದ ಬ್ರಹ್ಮದೇವರ ಯಜ್ಞದಂತೆಯೂ, ಶತಕ್ರತುವಾಗುವ ಕಾಲದಲ್ಲಿನ ಇಂದ್ರನ ಯಜ್ಞದಂತೆಯೂ ಬ್ರಹ್ಮರುದ್ರಾದಿದೇವತೆಗಳಿಂದ ಅಲಂಕೃತವಾದ ಅದು ಶೋಭಿಸಿತು. ಅಲ್ಲಿಗೆ ಬರದಿದ್ದ ಯಾವ ವ್ಯಕ್ತಿಯೂ ದೇವತೆಗಳಲ್ಲಾಗಲಿ, ಗಂಧರ್ವರಲ್ಲಾಗಲಿ, ಸ್ವಧರ್ಮದಲ್ಲಿ ನಿರತರಾದ ಮನುಷ್ಯರಲ್ಲಾಗಿರಲಿ, ಒಬ್ಬನೂ ಇರಲಿಲ್ಲ. ಪತ್ನೀಸಮೇತರಾಗಿ ಅಲಂಕೃತರಾಗಿ ಆಗಮಿಸಿದ್ದ ದೇವತೆಗಳಿಂದಾಗಿ ಅದು ಸ್ವರ್ಗಲೋಕದಂತೆಯೇ ಕಂಗೊಳಿಸುತ್ತಿತ್ತು.

ಅಲ್ಲಿ ಕೆಲವರ ಪಾಲಿಗೆ ಸಂದೇಹಗ್ರಸ್ತವಾಗಿದ್ದ ತತ್ತ್ವಗಳೆಲ್ಲ ಸಂದೇಹಕ್ಕೆ ಎಡೆಯಿಲ್ಲದಂತೆ ಪರಿಹರಿಸಲ್ಪಟ್ಟವು. ಚರ್ಚೆಗಳಲ್ಲಿ ಶ್ರೀಹರಿಯ ಮೂರುರೂಪಗಳಿಂದ ಆ ಸಂಶಯಗಳು ನಿವಾರಣೆಗೊಂಡವು. ಗಂಧರ್ವರ ಗಾನದಿಂದ, ಅಪ್ಸರೆಯರ ನರ್ತನದಿಂದ ಕೂಡಿ, ವಿಪ್ರರ ವಾದಕಥೆಗಳಿಂದಾಗಿ ಆ ಯಜ್ಞ ಬಹುವಾಗಿ ಶೋಭಿಸಿತು. ಕೃಷ್ಣಪತ್ನಿಯರು ಮೊದಲಾಗಿ ಸಕಲ ಸ್ತ್ರೀಯರು ಬಗೆಬಗೆಯ ಭೂಷಣಗಳಿಂದ ಶೋಭಿಸುತ್ತಿದ್ದರು. ಅರಳಿದ ಮುಖಕಮಲದ ಅವರು ಅಪ್ಸರೆಯರಿಂದೊಡಗೂಡಿ ಅಚ್ಯುತನ ಶ್ರೇಷ್ಠವಾದ ಕಥೆಗಳಲ್ಲಿ ತಲ್ಲೀನರಾಗಿ ಆನಂದ ಹೊಂದಿದವರಾಗಿ ಅಲ್ಲಿ ಸುಖಿಸಿದರು. ಮುಮುಕ್ಷುಗಳು, ತತ್ತ್ವಜಿಜ್ಞಾಸುಗಳು, ಧನಾರ್ಥಿಗಳು, ಅನ್ನಾರ್ಥಿಗಳು ಹೀಗೆ ಸಕಲಜನರ ಯಾವ ಆಸೆಯೂ ಅಲ್ಲಿ ಈಡೇರದೇ ಉಳಿಯಲಿಲ್ಲ ; ಇನ್ನು ಹಸಿವೆಯ ಮಾತು ಎಲ್ಲಿಂದ ತಾನೇ ಬಂದೀತು? ಶ್ರೇಷ್ಠ ಅನ್ನದ ಪರ್ವತಗಳೂ, ರಸದಿಂದ ತುಂಬಿದ ಭಕ್ಷ್ಯಭೋಜ್ಯದ ರಾಶಿಗಳೂ, ಹಾಲು, ತುಪ್ಪಗಳಿಂದ ತುಂಬಿ ಹರಿಯುವ ನದಿಗಳೂ, ಜೇನಿನ ಹಾಗೂ ಪಾಯಸದ ಕೊಳಗಳೂ ದಿನನಿತ್ಯದಲ್ಲೂ ಅಲ್ಲಿದ್ದವು. ದೇವತೆಗಳಿಗೆ ಯೋಗ್ಯ-ವೆನ್ನಿಸುವ ಶ್ರೀಗಂಧ ಮೊದಲಾದವುಗಳಿಂದ ತುಂಬಿದ ದೊಡ್ಡ ಕೊಳಗಳೂ ಅಲ್ಲಿದ್ದವು. ಅದೇ ರೀತಿ ಅಂಜನ, ಅಂಗರಾಗ ಮೊದಲಾದ ಅಲಂಕಾರದ್ರವ್ಯಗಳ ಉತ್ತಮ ರತ್ನಸುವರ್ಣಗಳ ಕೊಳಗಳೂ ಇದ್ದವು. ಬಯಸಿದ ಅನ್ನ ಪಾನ ಮೊದಲಾದ ಭೋಗಗಳಿಂದ ತುಂಬಿದ್ದ ಸಾವಿರಗಟ್ಟಲೆ ಕೊಳಗಳು ಜ್ಞಾನಿವರೇಣ್ಯನಾದ ಭೀಮಸೇನನಿಂದ ಅಣಿಗೊಳಿಸಲ್ಪಟ್ಟಿದ್ದವು.

ಶ್ರೀರಾಮ, ಬ್ರಹ್ಮದೇವರು ಹಾಗೂ ದೇವೇಂದ್ರ ಈ ಮೂವರ ಯಜ್ಞಗಳ ಹೊರತು ಬೇರಾರ ಯಜ್ಞವೂ ಇಷ್ಟು ಅದ್ಭುತವಾಗಿರಲಿಲ್ಲ ಎಂಬುದಾಗಿ ಎಲ್ಲ ಲೋಕದ ಜನರೂ ಕೃಷ್ಣಶೋಭಿತವಾದ ಆ ಯಜ್ಞವನ್ನು ಹೊಗಳಿದರು. ಪಂಚಾಶ್ವಮೇಧಾತ್ಮಕವಾದ ಆ ಯಾಗವು ಪ್ರತಿದಿನವೂ ಇನ್ನೂ ಅತಿಶಯ ಎನ್ನುವ ರೀತಿಯಲ್ಲಿ ಎಲ್ಲರ ಸಂತೋಷಕ್ಕೂ ಕಾರಣವಾಗಿ ಒಟ್ಟು ಹದಿನೈದು ವರ್ಷಗಳ ಕಾಲ ನಡೆಯಿತು.

## ಪಾಂಡವರು ಮಾಡಿದ ಸರ್ವಸಮರ್ಪಣೆ

ಯಜ್ಞದ ಕೊನೆಯಲ್ಲಿ ಎಲ್ಲ ಪಾಂಡವರು, ದ್ರೌಪದೀ ಹಾಗೂ ತಮ್ಮ ಇತರ ಪತ್ನಿಯರ ಕೊರಳಲ್ಲಿ ಮಾಂಗಲ್ಯಗಳ ಹೊರತು ಉಳಿದೆಲ್ಲ ಆಭರಣಗಳ ಸಮೇತವಾಗಿ ಐಶ್ವರ್ಯದಿಂದ ತುಂಬಿದ ಎಲ್ಲ ಭೂಮಿಯನ್ನೂ ವೇದವ್ಯಾಸರಿಗೆ ಒಪ್ಪಿಸಿ, ಋತ್ವಿಜರಿಗೆಲ್ಲ ಅವರವರ ಯೋಗ್ಯತೆಗೆ

ತಕ್ಕಂತೆ ಹಂಚಲು ಕೇಳಿಕೊಂಡರು. ವೇದವ್ಯಾಸರೂಪದ ವಿಷ್ಣುವಿಗೆ ಆ ರೀತಿ ವಿಭಾಗಮಾಡುವ ಕಾರ್ಯ ಪ್ರಿಯವಾದುದೇ ಅಲ್ಲವೇ? ಬ್ರಾಹ್ಮಣರಲ್ಲೂ ಕೃಷ್ಣನೇ ಅಂತರ್ಯಾಮಿಯಾಗಿ ನೆಲೆಸಿದ್ದರಿಂದ ಎಲ್ಲವನ್ನೂ ಆ ಶ್ರೀಹರಿಗೆ ಸಮರ್ಪಿಸಿದರು. ದೇಹ, ಇಂದ್ರಿಯ, ಪ್ರಾಣ ಹಾಗೂ ಮನಸ್ಸುಗಳನ್ನು ಜೀವನಸಮೇತವಾಗಿ ಶ್ರೀ ಹರಿಗೆ ಸಮರ್ಪಿಸಿದರು. ''ಈ ಎಲ್ಲವೂ, ನಾವೂ ಸಹ ನಿನಗೇ ಸೇರಿದವರು. ಸ್ವಾಮಿ ! ನಮ್ಮದೆಂಬುದಾಗಿ ನಮ್ಮಲ್ಲಿ ಯಾವುದೂ ಇಲ್ಲ, ನಿನ್ನ ಹೊರತು ಬೇರಾರೂ ಸ್ವತಂತ್ರರಿಲ್ಲ ; ನೀನು ಎಲ್ಲೆಡೆಯೂ ಪರಿಪೂರ್ಣನೇ ಸರಿ!'' ಹೀಗೆ ಸರ್ವಸ್ವವನ್ನೂ ಮುನಿಗಳಿಗೆ ಹಂಚಿಯಾದ ಮೇಲೆ, ಆ ಮುನಿಗಳು ಹೇಳಿದರು – ''ಈ ರಾಜ್ಯವನ್ನೆಲ್ಲ ನಿಮಗೇ ನಾವೀಗ ಮರಳಿ ಸಮರ್ಪಿಸುತ್ತಿರುವೆವು. ಭೂಮಿಯನ್ನು ಪರಿಪಾಲಿಸಲು ನೀವೇ ಅತ್ಯಂತ ಯೋಗ್ಯರು, ಅಲ್ಲವೇ !'' ಮುನಿಗಳ ಈ ಮಾತನ್ನು ಕೇಳಿ ಪಾಂಡವರು ಪತ್ನೀಸಮೇತರಾಗಿ ವೇದವ್ಯಾಸರಿಗೆ ವಿಜ್ಞಾಪಿಸಿದರು – ''ಧರ್ಮಲಬ್ಧವಾದ ಈ ರಾಜ್ಯವನ್ನು ಯಜ್ಞದ ಕೊನೆಯಲ್ಲಿ ನಾವೀಗ ಅರ್ಪಿಸಿರುವೆವು. ನಮಗೆ ತಪಸ್ಸು ಮಾಡುವುದೇ ಹೆಚ್ಚು ಪ್ರಿಯ.'' ಹಾಗೆ ಮುನಿಗಳಿಂದ ಪ್ರಾರ್ಥಿತರಾದ ಬಾದರಾಯಣರು ಉತ್ತರಿಸಿದರು – ''ಹಿರಣ್ಯವೇ ಈ ಮುನಿಗಳ ಸ್ವತ್ತು ; ನೀವು ನನ್ನ ಅಪ್ಪಣೆಯಂತೆ ಎಲ್ಲ ರಾಜ್ಯವನ್ನು ಅನುಭವಿಸಿರಿ. ಇದನ್ನು ನಾನು ಫಲರೂಪವಾಗಿ ನಿಮಗೆ ನೀಡುತ್ತಿರುವೆನು. ಆದ್ದರಿಂದ ಈ ರೀತಿ ನೀವು ರಾಜ್ಯವನ್ನು ಮತ್ತೆ ಪಡೆಯುವುದರಲ್ಲಿ ಯಾವ ದೋಷವೂ ಇಲ್ಲ, ನಾನು ನಿಮಗೆ ತಾತ, ವಿಶೇಷವಾಗಿ ಗುರು, ಹಾಗೂ ಸ್ವಾಮಿ. ಆದ್ದರಿಂದ ನನ್ನಿಂದ ನೀವು ಇದನ್ನು ಸ್ವೀಕರಿಸಿ.'' ಹೀಗೆ ಹೇಳಲ್ಪಟ್ಟ ಅವರು ರಾಜ್ಯವನ್ನು ತೆಗೆದುಕೊಂಡು ಎಲ್ಲ ಹಿರಣ್ಯವನ್ನು ಅವರಿಗೆ ಸಮರ್ಪಿಸಿದರು. ಅವರು ಅದನ್ನೆಲ್ಲ ವಿಪ್ರರಿಗೆ ಹಂಚಿಕೊಟ್ಟು, ತಮ್ಮ ಭಾಗವನ್ನು ಕುಂತಿಗೆ ಅನುಗ್ರಹಿಸಿದರು. ಶ್ರೇಷ್ಠವಾದ ರತ್ನಾಭರಣಗಳನ್ನೆಲ್ಲ ಪತ್ನೀಸಮೇತರಾದ ಪಾಂಡವರಿಗೆ ಕೊಟ್ಟು, ಎಲ್ಲರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ವರಗಳನ್ನು ನೀಡಿದರು. ಅವರೆಲ್ಲ ಸಂತೋಷದಿಂದ ಅವರನ್ನು ನಮಸ್ಕರಿಸಿದರು.

ಹದಿನೈದು ವರ್ಷಗಳ ಕಾಲ ನಡೆದ ಆ ಐದು ಅಶ್ವಮೇಧಗಳನ್ನು ತಾನು ಸ್ವೀಕರಿಸುವ ಮೂಲಕ ಯಜ್ಞಪತಿಯಾದ ಶ್ರೀಕೃಷ್ಣನು ಒಂದೊಂದು ಯಾಗವನ್ನೂ ಮೂರುಪಟ್ಟು ಫಲ ಕೊಡುವಂತೆ ಮಾಡಿ, ಅದನ್ನು 'ಬಹುಸುವರ್ಣಕ' ಎಂಬ ಯಜ್ಞವನ್ನಾಗಿಸಿದನು.

ಕೃಷ್ಣಸಮೇತರಾಗಿ ಪಾಂಡವರು ಯಜ್ಞದ ಅವಭೃಥಸ್ನಾನವನ್ನು ಮುಗಿಸಿದರು. ಪಂಚೇಂದ್ರರಂತೆ ಶೋಭಿಸುತ್ತಿದ್ದ ಅವರನ್ನೂ , ಅವರ ಯಜ್ಞವನ್ನೂ ದೇವತೆಗಳೂ, ರಾಜಮಹಾರಾಜರೂ ಕೊಂಡಾಡಿದರು.

## ಮುಂಗುಸಿಯ ಪ್ರಸಂಗ

ಆಗ ಕ್ರೋಧಾಭಿಮಾನಿಯಾದ ದೈತ್ಯನು ಮುಂಗುಸಿಯ ರೂಪದಲ್ಲಿ ದೊಡ್ಡದಾಗಿ ಗರ್ಜಿಸುತ್ತಾ ಅಲ್ಲಿಗೆ ಬಂದು ಯಜ್ಞವನ್ನೂ, ಅವರನ್ನೂ, ಯಜ್ಞಮಾಡಿದ ಎಲ್ಲರನ್ನೂ ಹಳಿಯುತ್ತಾ ಹೀಗೆಂದನು – ''ಪತ್ನೀ, ಪುತ್ರ ಹಾಗೂ ಸೊಸೆಯೊಂದಿಗೆ ಉಂಛವೃತ್ತಿಯಲ್ಲಿದ್ದ ಒಬ್ಬ ಬ್ರಾಹ್ಮಣನು

ಅತಿಥಿರೂಪದ ಯಮಧರ್ಮನಿಗೆ 'ಸಕ್ತುಪ್ರಸ್ಥ'(ಒಬ್ಬರಿಗಾಗುವಷ್ಟು ಹುರಿದಹಿಟ್ಟು)ವನ್ನು ಅರ್ಪಿಸಿದ. ಅದರ ಹದಿನಾರನೆಯ ಒಂದಂಶಕ್ಕೂ ಈ ಯಜ್ಞ ಸಾಟಿ ಎನ್ನಿಸದು.'' ವಿಪ್ರರು ಅದಕ್ಕೆ ಕಾರಣವನ್ನು ಕೇಳಿದಾಗ ಅವನು ಮುಂದುವರೆಸಿ - ''ಆ ಅತಿಥಿಯ ಪಾದೋದಕದಲ್ಲಿ ಹೊರಳಿದ ನನ್ನ ಒಂದು ಪಾರ್ಶ್ವವು ಚಿನ್ನದ್ದಾಯಿತು. ಉಳಿದ ಪಾರ್ಶ್ವವು ಎಲ್ಲ ತೀರ್ಥೋದಕ-ಗಳಲ್ಲೂ, ಎಲ್ಲ ಯಜ್ಞಗಳ ಅವಭೃಥಗಳಲ್ಲೂ ಸ್ನಾನ ಮಾಡಿದರೂ ಚಿನ್ನದ್ದಾಗಲಿಲ್ಲ'' ಎಂದು ಉತ್ತರಿಸಿದ. ಅದರ ವಿಷಯವನ್ನು ಸರಿಯಾಗಿ ತಿಳಿದಿದ್ದ ಮುನಿಗಳೂ, ಕೃಷ್ಣನೂ ಮುಗುಳ್ನಗೆ ಬೀರಲು ಆ ಮುಂಗುಸಿ ಅಲ್ಲಿಂದ ಹೊರಟು ಹೋಯಿತು. ಕಾಲಾಂತರದಲ್ಲಿ ತಮಸ್ಸನ್ನೂ ಹೊಂದಿತು. ಅದಕ್ಕೆಂದೇ ದೇವತೆಗಳಿಂದ ಅದರ ದೇಹದ ಒಂದು ಭಾಗ ಬಂಗಾರದ್ದಾಗಿ ಮಾಡಲ್ಪಟ್ಟಿತ್ತು. ಅದನ್ನು ತಿಳಿದಿದ್ದ, ಬ್ರಾಹ್ಮಣರು ಯುಧಿಷ್ಠಿರಾದಿಗಳ ಯಜ್ಞದ ಗುಣಗಳನ್ನು ವರ್ಣಿಸಿ, ಆ ಅಸುರನನ್ನು ನಿಂದಿಸಿದರು. ಹಿಂದೆ ಆ ದೈತ್ಯನು ಮುಂಗುಸಿಯ ರೂಪದಲ್ಲಿ ಜಮದಗ್ನಿಮುನಿಯು ಶ್ರಾದ್ಧಕ್ಕೆಂದು ಸಿದ್ಧಪಡಿಸಿಕೊಂಡಿದ್ದ ಹಾಲನ್ನು ಎಂಜಲು ಮಾಡಿ ಕೆಡಿಸಿದ್ದ. ಆಗ ಪಿತೃದೇವತೆಗಳು ಅವನನ್ನು ಶಪಿಸಿದ್ದರು - ''ನೀನು ಯಮಧರ್ಮ ಮೊದಲಾದ ದೇವತೆಗಳನ್ನು ನಿಂದಿಸುವವರೆಗೂ ಇದೇ ಮುಂಗುಸಿಯ ರೂಪದಲ್ಲಿದ್ದು, ಬಳಿಕ ತಮಸ್ಸನ್ನು ಹೊಂದುವೆ.'' ಅದರಿಂದಾಗಿಯೇ ಮುಂಗುಸಿಯಾಗಿದ್ದ ಆ ಅಸುರ ಪಾಂಡವರ ಯಜ್ಞವನ್ನು ಹಳಿಯುವ ಮೂಲಕ ಮಹಾಪಾತಕವನ್ನು ಗಳಿಸಿಕೊಂಡು ತಮಸ್ಸಿಗೆ ತೆರಳಿದ.

## ಕರ್ಮಫಲ ವಿವೇಕ

ಬಡವನು ಮಾಡುವ ದಾನವು ಹೆಚ್ಚು ಫಲವನ್ನು ಕೊಡುವುದು ಎಂಬ ಮಾತು ನಿಜ. ಆದರೂ ಅನಂತಫಲವನ್ನು ಕೊಡುವುದು ಕರ್ತೃವಿನ ಮಹಾಗುಣಗಳೇ. ಸಜ್ಜನರ ಪ್ರೀತಿಯೂ ಅದಕ್ಕೆ ಮುಖ್ಯ ಕಾರಣ. ಅಂತಹ ಸಜ್ಜನರಲ್ಲಿ ಶ್ರೇಷ್ಠನು ಶ್ರೀಹರಿಯೇ ಅಲ್ಲವೇ? ಗುಣಗಳಲ್ಲಿ ಪಾಂಡವರಿಗಿಂತ ಮಿಗಿಲಾದ ಅಥವಾ ಸಮರಾದ ಬೇರಾವ ಕರ್ತೃ ತಾನೇ ದೊರೆತಾನು ? ಸರ್ವಶ್ರೇಷ್ಠನಾದ ವಿಷ್ಣುವು ಮುನಿಶ್ರೇಷ್ಠರಿಂದ ಕೂಡಿಕೊಂಡು ಪ್ರತ್ಯಕ್ಷವಾಗಿಯೇ ಇದ್ದು ಪ್ರಿಯತಮರಾದ ಪಾಂಡವರಿಂದ ಯಜ್ಞವನ್ನು ಮಾಡಿಸಿರುವಾಗ, ಅದಕ್ಕಿಂತ ಮಂಗಳಕರವಾದ ಯಜ್ಞವು ಇನ್ನಾವುದಿದ್ದೀತು?

ಇದಕ್ಕೆ ಸಂಬಂಧಿಸಿದಂತೆ ಪೈಂಗಿಶ್ರುತಿಯ ಮಾತುಗಳು ಹೀಗಿವೆ : ''ಅವೈಷ್ಣವರಿಂದ ಮಾಡಲ್ಪಟ್ಟ ಕಾರ್ಯವೆಲ್ಲ 'ಅಂತವತ್'(ನಶ್ವರ) ಎನ್ನಿಸುವುದು. ವೈಷ್ಣವರು ಮಾಡಿದ ಕರ್ಮ ಮಾತ್ರವೇ ಅನಂತವಾಗುವುದು. ಅದೂ ಸಹ ವರ್ಣಕ್ರಮದಿಂದ ಹೆಚ್ಚುತ್ತಾ ಹೋಗುವುದು. ವೈಷ್ಣವಮನುಷ್ಯರಿಂದ ಮಾಡಲ್ಪಟ್ಟ ಕಾರ್ಯಕ್ಕಿಂತ ಗಂಧರ್ವರು ಮಾಡುವ ಕಾರ್ಯ ನೂರು-ಪಟ್ಟು ದೊಡ್ಡದು. ಅದಕ್ಕಿಂತಲೂ ಪಿತೃಗಳು, ಮುನಿಗಳು, ದೇವತೆಗಳು, ಇಂದ್ರ, ಶಿವ, ಬ್ರಹ್ಮ ಇವರು ಮಾಡುವ ಕಾರ್ಯಗಳು ಕ್ರಮವಾಗಿ ನೂರರಷ್ಟು ಮಿಗಿಲೆನ್ನಿಸುವವು. ಬ್ರಹ್ಮಕೃತವಾದ ಕಾರ್ಯಕ್ಕೆ ಸದೃಶವಾದ ಮತ್ತೊಂದು ಕರ್ಮ ಯಾವುದೂ ಇಲ್ಲ. ಜೀವರಾಶಿಗಳಲ್ಲಿ ವೈಷ್ಣವತ್ವವು

ಬ್ರಹ್ಮದೇವರವರೆಗೆ ಕ್ರಮವಾಗಿ ಹೆಚ್ಚುತ್ತಾ ಹೋಗುವುದು. ಕರ್ಮಗಳ ಅಧಿಕಫಲಕ್ಕೆ ಮುಖ್ಯಕಾರಣ [೧] "ವಿಷ್ಣುಪ್ರೀತಿಯೇ ಹೊರತು ಬೇರಾವುದೂ ಅಲ್ಲ".

ಆದ್ದರಿಂದ ಜ್ಞಾನಾದಿಗುಣಗಳಿಂದ ಪಾಂಡವರ ಕರ್ಮಕ್ಕೆ ಸದೃಶವಾದ ಮತ್ತೊಂದು ಕಾರ್ಯ ಎಲ್ಲೂ ಇಲ್ಲ. ಇದನ್ನು ನಿಂದಿಸಿದ ಆ ಕ್ರೋಧಾಭಿಮಾನಿಯಾದ ದೈತ್ಯ ತಾಮಸನೇ ಹೌದು. ಅವರನ್ನು ನಿಂದಿಸಿದ ಅವನಿಗೆ ತಮಸ್ಸೇ ದೊರೆಯಿತು.

ಅನಂತರ ದೇವತೆಗಳು ವಿಪ್ರರು ನೆಲೆಸಿದ್ದ ಸಭೆಯಲ್ಲಿ ಧರ್ಮರಾಜನು ಕೋರಿಕೊಂಡಾಗ ಕೃಷ್ಣನು ಎಲ್ಲ ಧರ್ಮಗಳನ್ನೂ [೨] ಸಮಗ್ರವಾಗಿ ತಿಳಿಸಿದ. ಅವರೆಲ್ಲ ಭಗವಂತನ ಮುಖದಿಂದ ಎಲ್ಲ ಧರ್ಮಗಳನ್ನೂ ಭಕ್ತಿಯಿಂದ ಕೇಳಿ ಜಗನ್ನಾಥನಾದ ಅವನನ್ನು ಸ್ತುತಿಸುತ್ತಾ ಹಿರಿದಾದ ಆನಂದವನ್ನು ಪಡೆದರು.

★★★★★

---

೧. ಬ್ರಹ್ಮಜ್ಞಾನಿಯು ಮಾಡುವ ಕರ್ಮಗಳು ಅನಂತಫಲಕ ; ಇತರರು ಮಾಡುವ ಕರ್ಮಗಳು ನಶ್ವರವಾದ ಫಲಗಳಲ್ಲಿ ಪರ್ಯವಸಾನ ಹೊಂದುವುದು ಎಂಬ ವಿಷಯವು ಭಗವದ್ಗೀತೆಯಲ್ಲೂ ನಿರೂಪಿತವಾಗಿದೆ : ಅಂತವತ್ ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ । ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥ (೭/೨೩). ಆ ಬ್ರಾಹ್ಮಣಕುಟುಂಬ ಜ್ಞಾನಿವರ್ಗಕ್ಕೆ ಸೇರಿದ್ದರೂ, ಪಾಂಡವರು ಬ್ರಹ್ಮಜ್ಞಾನಿಗಳಲ್ಲೂ ಶ್ರೇಷ್ಠರೆನ್ನಿಸಿದ್ದ ದೇವವರ್ಗದವರು ; ಈ ಕಾರಣದಿಂದಲೂ ಪಾಂಡವರ ಯಾಗ ಅತ್ಯಂತ ಅಪೂರ್ವವಾದುದು. ಆ ಬ್ರಾಹ್ಮಣನ ಪ್ರಸಂಗದಲ್ಲಿ ಅತಿಥಿಯಾಗಿ ಬಂದು ಪೂಜಿತನಾದವನು ಯಮ ; ಆದರೆ, ಇಲ್ಲಿ ಯಜಮಾನನಾದ ಯುಧಿಷ್ಠಿರ ಸ್ವತಃ ಯಮನ ಅವತಾರವಾಗಿದ್ದರೆ, ಯಜ್ಞದಿಂದ ಪೂಜಿತನಾದವನು ಸಾಕ್ಷಾತ್ ಯಜ್ಞೇಶ್ವರನಾದ ರೂಪತ್ರಯದ ಶ್ರೀಹರಿ. ಅದರೊಂದಿಗೆ, ಅದು ಕೇವಲ ಸಕ್ತುಪ್ರಸ್ಥದ ಸಮರ್ಪಣೆಯಾದರೆ, ಪಾಂಡವರದು ಸರ್ವಸಮರ್ಪಣೆಯ ಪ್ರಸಂಗ ಎಂಬುದೂ ಸಹ ಅದರ ಅಪಾರಹಿರಿಮೆಗೆ ದ್ಯೋತಕ. ಸಕಲರ ಕರ್ಮಗಳನ್ನು ಭಗವಂತನಿಗೆ ಅರ್ಪಿಸುವ ವಾಯುದೇವರೇ ಇಲ್ಲಿ ಭೀಮಸೇನನಾಗಿ ಕರ್ತೃಗಳ ಸಾಲಿಗೆ ಸೇರಿರುವ ಪಾಂಡವರಲ್ಲಿ ಒಬ್ಬನಾಗಿರುವನು ಎಂಬುದು ಗಮನಿಸಬೇಕಾದ ಅತ್ಯಂತ ಮುಖ್ಯವಾದ ಇನ್ನೊಂದು ವಿವರ. ಇದನ್ನೆಲ್ಲ ಗಮನಿಸದೆ ಅದನ್ನು ನಿಂದಿಸಿದ ಆ ನಕುಲರೂಪದ ಅಸುರನಿಗೆ ದುರ್ಗತಿಯಾದುದು ಸಹಜ ಎಂದು ತಿಳಿಯುವುದು.

೨. ಶ್ರೀಕೃಷ್ಣನು ಹಾಗೆ ಧರ್ಮರಾಜನ ಪ್ರಾರ್ಥನೆಯಂತೆ ಉಪದೇಶಿಸಿದ ಆ ಭಾಗ ಆಶ್ವಮೇಧಿಕಪರ್ವದಲ್ಲಿ 'ವೈಷ್ಣವಧರ್ಮಪರ್ವ' ಎಂಬ ಉಪಪರ್ವವಾಗಿ ಪ್ರಸಿದ್ಧವಾಗಿದೆ. ಭಗವದಾರಾಧನೆಗೆ ಉಪಯುಕ್ತವಾದ ಅನೇಕಧರ್ಮಗಳ ನಿರೂಪಣೆಯನ್ನು ಅಲ್ಲಿ ಕಾಣಬಹುದು. ಶ್ರೀಹರಿಯ ಪಾರಮ್ಯಕ್ಕೆ ಸಾಧಕವಾಗಿ ಶ್ರೀಮದಾಚಾರ್ಯರು ಉದಾಹರಿಸಿರುವ ಈ ಕೆಳಗಿನ ಶ್ಲೋಕವು ಇದರ ಕೊನೆಯ ಭಾಗದಲ್ಲಿ ಕಂಡು-ಬರುವುದು :

ವಚನಂ ಚೈವ ಕೃಷ್ಣಸ್ಯ ಜ್ಯೇಷ್ಠಂ ಕುಂತೀಸುತಂ ಪ್ರತಿ ।
ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ॥ -ಮ.ಭಾ.ತಾ.ನಿ.(೨/೧೧೭)

# ಆಶ್ರಮವಾಸಿಕ ಪರ್ವ

## ಭೀಮನಿಂದ ವರ್ಧಿಸಿದ ಧರ್ಮರಾಜನ ಧರ್ಮಶ್ರದ್ಧೆ

ಯಜ್ಞೇಶ್ವರನಾದ ಶ್ರೀಕೃಷ್ಣನಿಂದ ಕೂಡಿಕೊಂಡು ಅವನಲ್ಲಿ ಭಕ್ತಿಯಿರಿಸಿ ಪಾಂಡವರು ಭೂಮಿಯನ್ನು ಪಾಲಿಸುತ್ತಿದ್ದಾಗ, ಒಂದು ರಾತ್ರಿ ಒಬ್ಬ ಬ್ರಾಹ್ಮಣೋತ್ತಮನು, ಯಜ್ಞ ಮಾಡುವ ಬಯಕೆಯಿಂದ, ಹಣವನ್ನು ಪಡೆಯಲೆಂದು ಧರ್ಮರಾಜನ ಬಳಿಗೆ ಬಂದ. 'ಬೆಳಿಗ್ಗೆ ಕೊಡುವೆನು' ಎಂಬ ಧರ್ಮರಾಜನ ಮಾತನ್ನು ಕೇಳಿ, ಯಜ್ಞಕ್ಕಾಗಿ ಕೂಡಲೇ ಹಣದ ಅಗತ್ಯವಿದ್ದ ಆ ವಿಪ್ರನು ಭೀಮನ ಬಳಿಗೆ ಬಂದು, ಧರ್ಮರಾಜನು ಹೇಳಿದ್ದನ್ನು ತಿಳಿಸಿ, ಧನ ನೀಡಲು ಬೇಡಿಕೊಂಡ. ಭೀಮನು ಅನರ್ಘ್ಯ ರತ್ನಗಳಿಂದ ಕೂಡಿ, ಅಗ್ನಿಯಂತೆ ಹೊಳೆಯುತ್ತಿದ್ದ ತನ್ನ ಶ್ರೇಷ್ಠಕಂಕಣವನ್ನು ಆ ಬ್ರಾಹ್ಮಣನಿಗೆ ನೀಡಿದ. ಅದನ್ನು ಪಡೆದುಕೊಂಡು ಕೃತಾರ್ಥನಾದ ಬ್ರಾಹ್ಮಣೋತ್ತಮನು ಅಲ್ಲಿಂದ ಹೊರಟುಹೋದ. ಇತ್ತ ಭೀಮನು ಆಗಲೇ ನಂದಿಘೋಷವನ್ನು ಮಾಡಿಸಿದ. ಅಕಾಲದಲ್ಲಿ ಕೇಳಿಬಂದ ನಂದಿಘೋಷವನ್ನು ಕೇಳಿ ಧರ್ಮರಾಜನು, ದೂತರ ಮೂಲಕ ಕಾರಣವನ್ನು ಕೇಳಿದ. ಭೀಮಸೇನ - ''ಮನುಷ್ಯದೇಹದಲ್ಲಿದ್ದಾಗಲೂ, ನಮ್ಮ ರಾಜನು ತನ್ನ ಆಯುಷ್ಯದ ಬಗ್ಗೆ ನಿಶ್ಚಯ ಹೊಂದಿರುವುದನ್ನು ತಿಳಿದು ನನಗೆ ಹರ್ಷವಾಯಿತು'' ಎಂದು ವಿವರಣೆಯಿತ್ತ. ಇದನ್ನು ಕೇಳಿ ಧರ್ಮರಾಜನು, 'ಧರ್ಮಕಾರ್ಯಕ್ಕೆ ವಿಳಂಬ ಸಲ್ಲದು' ಎಂಬ ಭೀಮನ ಅಭಿಪ್ರಾಯವನ್ನು ಅರ್ಥಮಾಡಿಕೊಂಡು 'ಭಲೆ' ಎಂಬುದಾಗಿ ಹೊಗಳಿ, ಧರ್ಮವಿಷಯದಲ್ಲಿ ಹೆಚ್ಚು ತ್ವರೆಯಿಂದ ವರ್ತಿಸತೊಡಗಿದ.

## ಧೃತರಾಷ್ಟ್ರನಿಗೆ ಭೀಮನಿಂದ ವೈರಾಗ್ಯಪ್ರಾಪ್ತಿ

ಧೃತರಾಷ್ಟ್ರನು ಇನ್ನೂ ವಿಷಯಸುಖಗಳಲ್ಲಿ ಆಸಕ್ತನಾಗಿಯೇ ಇರುವುದನ್ನು ಕಂಡು ಭೀಮನು, ದುಸ್ಸಂಗದಿಂದ ದುಷ್ಟನೂ, ಹೆಚ್ಚು ಅಪಚಾರವೆಸಗಿದವನೂ, ಸಮಸ್ತರಾಜರ ನಾಶಕ್ಕೆ ಕಾರಣ-ವಾದವನೂ ಆದ ಅವನ ಬಗ್ಗೆ ಅನುಕಂಪವನ್ನು ಹೊಂದಿದ - ''ಉಗ್ರತಪಸ್ಸನ್ನು ಮಾಡದಿದ್ದಲ್ಲಿ ತನ್ನ ಲೋಕವನ್ನು ಪಡೆಯುವುದು ಇವನಿಗೆ ಸಾಧ್ಯವಾಗಲಾರದು. ಈಗಲೂ ಅತಿ ಆಸೆಯಿಂದ ಕೂಡಿರುವ ಇವನು ತಪಸ್ಸನ್ನೂ ಮಾಡಲಾರ '' ಎಂದು ಯೋಚಿಸಿ, ಅವನಿಗೆ ವೈರಾಗ್ಯ ಹುಟ್ಟಿಸು-ವಂತಹ ಕಾರ್ಯಗಳನ್ನು ಮಾಡಲು ಆರಂಭಿಸಿದ. ಇತರರು ಅವನ ಅಪ್ಪಣೆಯನ್ನು ಕೇಳದಂತೆ ಮಾಡುವುದು ; ಸೋದರರೂ ಸ್ತ್ರೀಜನರೂ ಅವನ ಮಾತನ್ನು ಪಾಲಿಸಲು ಅಡ್ಡಿ ಮಾಡುವುದು ಮೊದಲಾದ ಕಾರ್ಯಗಳನ್ನು ಮಾಡತೊಡಗಿದ ; ಆದರೂ ಅರ್ಜುನಾದಿಗಳು ಅವನ ಮಾತನ್ನು ನಡೆಸುತ್ತಿದ್ದದ್ದರಿಂದ ಧೃತರಾಷ್ಟ್ರನಿಗೆ ವೈರಾಗ್ಯ ಹುಟ್ಟಲಿಲ್ಲ. ಭೀಮನನ್ನು ಬಿಟ್ಟು ಉಳಿದೆಲ್ಲ ಪಾಂಡವರೂ ಪತ್ನೀಸಮೇತರಾಗಿ, ಹೆಚ್ಚಿನ ಆದರದಿಂದಲೇ ಧೃತರಾಷ್ಟ್ರನನ್ನು ಉಪಚರಿಸುತ್ತಿದ್ದರು. ದ್ರೌಪದಿಯು ಸಹ ಅವನು ಪುತ್ರಶೋಕದಿಂದ ಪರಿತಪಿಸದಿರಲೆಂದು ಅವನನ್ನು ಉಪಚರಿಸು-ತ್ತಿದ್ದಳು. ಅವರೆಲ್ಲರ ಬಗ್ಗೆ ಬಹಳ ಪ್ರೀತನಾಗಿದ್ದ ಧೃತರಾಷ್ಟ್ರನು, ಭೀಮನ ವಿಷಯದಲ್ಲಿ ಮಾತ್ರ

ಸಂತುಷ್ಟನಾಗಲಿಲ್ಲ; ತನ್ನ ಮಕ್ಕಳೆಲ್ಲ ಅವನಿಂದಲೇ ಸತ್ತರೆಂಬ ಕಾರಣದಿಂದ, ಅವನ ಹಿರಿಮೆಯನ್ನು ಅರಿತಿದ್ದರೂ, ಧೃತರಾಷ್ಟ್ರ ಅವನ ವಿಷಯದಲ್ಲಿ ಅಪ್ರೀತಿಯಿಂದಲೇ ವರ್ತಿಸುತ್ತಿದ್ದ.

## ತಪಸ್ಸಿಗೆ ತೆರಳಲು ಧೃತರಾಷ್ಟ್ರನ ನಿಶ್ಚಯ

ಧೃತರಾಷ್ಟ್ರನ ವಿಷಯಾಸಕ್ತಿಯನ್ನೂ, ಅವನಿಗೆ ತನ್ನ ಬಗ್ಗೆ ಇದ್ದ ಕೋಪವನ್ನೂ ಪರಿಹರಿಸಲೆಂದು ಭೀಮನು, ನಕುಲಸಹದೇವರೆದುರಿಗೆ ತನ್ನ ತೋಳುಗಳನ್ನು ತಟ್ಟಿಕೊಳ್ಳುತ್ತಾ , ಅವನಿಗೆ ಕೇಳಿಸುವಂತೆ ಹೀಗೆಂದ – ''ಈ ಮುದುಕನ ಮಕ್ಕಳನ್ನು ಕೊಂದು ಹಾಕಿದ ದುಂಡಾದ, ಉಬ್ಬಿದ, ಶ್ರೀಗಂಧ-ಲೇಪಿತವಾಗಿರುವ ನನ್ನ ತೋಳುಗಳಿವು'' ಎಂದು ನುಡಿಯತೊಡಗಿದ. ನಕುಲಸಹದೇವರು ಅವನ ಮೇಲಿನ ಗೌರವ ಹಾಗೂ ಸ್ನೇಹಗಳಿಂದಾಗಿ ಅದನ್ನು ಅನುಮೋದಿಸಿದರು. ಈ ವಿಷಯ ದ್ರೌಪದಿಗಾಗಲೀ, ಕುಂತಿಗಾಗಲೀ, ಇತರ ಪಾಂಡವರಿಗಾಗಲೀ ತಿಳಿಯಲಿಲ್ಲ. ಅದನ್ನು ಕೇಳಿ ವಿರಕ್ತಿ ಹೊಂದಿದ ಧೃತರಾಷ್ಟ್ರನ ವೈರಾಗ್ಯಭಾವವನ್ನು ಹೆಚ್ಚಿಸಲೆಂದು, ವಿದುರನು – ''ರಾಜ ! ನಿನಗೆ ಬದುಕಿನ ಮೇಲಿರುವ ಆಸೆ ಅದೆಷ್ಟು ದೊಡ್ಡದು ! ಪ್ರಾಣಿಗಳಿಗೆ ಜೀವನದ ಮೇಲೆ ಅದೆಷ್ಟು ಆಸೆ ಎನ್ನಲು ನೀನು ಭೀಮನು ಕೊಡುವ ಅನ್ನವನ್ನು ನಾಯಿಯಂತೆ ತಿನ್ನುತ್ತಿರುವುದೇ ಸಾಕ್ಷಿ. ಇಂತಹ ಮಾತುಗಳನ್ನು ಆಡುವಲ್ಲಿ ಭೀಮನ ತಪ್ಪೇನೂ ಇಲ್ಲ. ಬೆಂಕಿ ಹೊತ್ತಿಸಿದಿರಿ ; ವಿಷ ನೀಡಿ- ದಿರಿ ; ಪತ್ನಿಯನ್ನು ಕೆಣಕಿದಿರಿ ; ಅವರ ರಾಜ್ಯವನ್ನೂ ಧನವನ್ನೂ ಕಿತ್ತುಕೊಂಡಿರಿ ; ಅಂದ ಮೇಲೆ ಭೀಮನು ನಿನಗೆ ಯಾವ ಅನ್ಯಾಯ ಮಾಡಿದಂತಾಯಿತು. ಅತಿಯಾಗಿ ಆಸಕ್ತನಾಗಿರುವ ನಿನಗೆ ವೈರಾಗ್ಯ ಹುಟ್ಟಿಸಲೆಂದೇ ಅವನು ಈ ರೀತಿ ನುಡಿಯುತ್ತಿರುವನು. ಇದು ನಿನಗೆ ನಿಜಕ್ಕೂ ಉಪಕಾರವೆಂದೇ ತಿಳಿ; ಇನ್ನಾದರೂ ಭೀಮನ ಮೇಲೆ ದ್ವೇಷವನ್ನು ತೊರೆ. ಕಾಮಕ್ರೋಧಗಳನ್ನು ಬಿಟ್ಟು ನೀನು ಕಾಡಿನಲ್ಲಿ ತೀರ್ಥವನ್ನು ಸೇವಿಸುತ್ತಾ , ತಪಸ್ಸಿನಿಂದ ಹರಿಯನ್ನು ಆರಾಧಿಸಿ, ಪುನೀತನಾಗು'' ಎಂದು ಹಿತವನ್ನು ಉಪದೇಶಿಸಲು, ಧೃತರಾಷ್ಟ್ರನು ಭೀಮನಲ್ಲಿ ದ್ವೇಷಭಾವವನ್ನು ತೊರೆದನು.

ಕಾಡಿಗೆ ಹೋಗಲು ಧರ್ಮರಾಜನ ಅಪ್ಪಣೆಯನ್ನು ಪಡೆಯುವ ಸಲುವಾಗಿ ಉಪವಾಸವನ್ನು ಕೈಗೊಂಡ. ನಾಲ್ಕನೆಯ ದಿನ ಅವನ ಉಪವಾಸದ ವಿಷಯವನ್ನು ತಿಳಿದ ಧರ್ಮರಾಜನು ಭೋಜನವನ್ನು ಸ್ವೀಕರಿಸಲು ಮತ್ತೆ ಮತ್ತೆ ಪ್ರಾರ್ಥಿಸಲು, ಅವನು ''ನೀನು ಕಾಡಿಗೆ ಹೊರಡಲು ನನಗೆ ಸಮ್ಮತಿಯಿತ್ತಲ್ಲಿ ಮಾತ್ರ ಭೋಜನ ಮಾಡುವೆ'' ಎಂದು ಹೇಳಿದ ; ಉಪವಾಸದಿಂದ ಸೊರಗಿದ್ದ ಅವನು ಬಳಲಿಕೆಯಿಂದ ಮೂರ್ಛಿತನಾಗಿ ಹಾಗೆಯೇ ಗಾಂಧಾರಿಯ ಮೇಲೆ ಒರಗಿದ. ಸುಖ ನೀಡುವ ತನ್ನ ಕೈಯಿಂದ ಧರ್ಮರಾಜನು ಅವನನ್ನು ಮೃದುವಾಗಿ ಸ್ಪರ್ಶಿಸಲು, ಅವನಿಗೆ ಪ್ರಜ್ಞೆ ಮರಳಿತು. ತುಂಬಾ ದುಃಖದಿಂದ ಧರ್ಮರಾಜನು – ''[೧]ನಾವೆಲ್ಲ ನಿನಗಾಗಿ

---

೧. ಧೃತರಾಷ್ಟ್ರನ ಪರವಾಗಿ ತಾವೇ ಕಾಡಿನಲ್ಲಿ ತಪಸ್ಸು ಮಾಡುವ ಯುಧಿಷ್ಠಿರನ ಈ ಮಾತು ಶ್ರೀರಾಮ ಕೈಗೊಂಡಿದ್ದ ವನವಾಸವನ್ನು ಅವನ ಪರವಾಗಿ ತಾನು ಮಾಡುವುದಾಗಿ ನುಡಿದ ರಾಮಾಯಣದ ಭರತನ ಮಾತನ್ನು ಜ್ಞಾಪಿಸುತ್ತದೆ. ಕಾಮನ ಅವತಾರನಾಗಿ ಭರತ ಆ ಮಾತನ್ನಾಡಿದ್ದ ; ಯಮನ ಅವತಾರನಾಗಿ ಯುಧಿಷ್ಠಿರ ಈ ಮಾತನ್ನಾಡಿರುವನು ಎಂಬುದು ವಿಶೇಷ.

ಕಾಡಿನಲ್ಲಿ ತಪಸ್ಸನ್ನು ಆಚರಿಸುವೆವು. `ಯುಯುತ್ಸುವನ್ನು ಮುಂದಿಟ್ಟುಕೊಂಡು ನೀನೇ ರಾಜ್ಯವನ್ನು ಪಾಲಿಸು'' ಎಂದ. ಅದಕ್ಕೊಪ್ಪದೆ ಧೃತರಾಷ್ಟ್ರನು ''ಕೊನೆಗಾಲದಲ್ಲಿ ಕಾಡಿನಲ್ಲಿ ದೇಹ ಬಿಡುವುದು ನಮ್ಮ ಕುಲದ ಧರ್ಮ. ಆದ್ದರಿಂದ ನೀನು ಅದಕ್ಕೆ ಒಪ್ಪಿಗೆ ಕೊಡು'' ಎಂದು ಹಠ ಹಿಡಿದ. ಅವರಿಬ್ಬರೂ ಹಾಗೆ ವಾದಿಸುತ್ತಿದ್ದಾಗ, ಸರ್ವಜ್ಞರೂ, ಸರ್ವಕರ್ತರೂ, ಸರ್ವೇಶ್ವರರೂ ಆದ ಕೃಷ್ಣದ್ವೈಪಾಯನರು ಅಲ್ಲಿಗೆ ಆಗಮಿಸಿ, ಧರ್ಮರಾಜನಿಗೆ ಹೇಳಿದರು – ''ತಪಸ್ಸಿನಿಂದ ತನ್ನೆಲ್ಲ ದೋಷವನ್ನು ಕಳೆದುಕೊಳ್ಳಬಯಸಿರುವ ಇವನಿಗೆ ನೀನೀಗ ಅನುಮತಿಯನ್ನು ಕೊಡು. ಇವನ ಧರ್ಮಕಾರ್ಯಕ್ಕೆ ವಿಘ್ನ ಮಾಡಬೇಡ. ಅಂತ್ಯಕಾಲದಲ್ಲಿ ವೈರಾಗ್ಯವನ್ನು ಹೊಂದಿರುವ ಇವನು ತಪಸ್ಸಿನಿಂದ ಪಾಪವನ್ನು ಕಳೆದುಕೊಂಡಲ್ಲಿ ಮಾತ್ರ ಸದ್ಗತಿಯನ್ನು ಹೊಂದಿಯಾನು ! ಇಲ್ಲವಾದಲ್ಲಿ ಖಂಡಿತ ಇಲ್ಲ.[೧]'' ಅದನ್ನು ಕೇಳಿ ಧರ್ಮರಾಜನು ಸಮ್ಮತಿಸಿದ. ಬಳಿಕ ಭೋಜನ ಮಾಡಿದ ಧೃತರಾಷ್ಟ್ರನು, ಜ್ಞಾನಿಯೇ ಆದ ಧರ್ಮರಾಜನಿಗೆ ಸದ್ಧರ್ಮಗಳನ್ನು ಉಪದೇಶಿಸಿದ[೨]. ರಾಜನ ಮೇಲಿನ ವಿಶ್ವಾಸ ಹಾಗೂ ವಿನಯದ ಕಾರಣದಿಂದಾಗಿ ಧರ್ಮರಾಜನು ಅದನ್ನು ಕೇಳಿ, ಅವನ ಸಮ್ಮತಿ ಪಡೆದುಕೊಂಡು ತನ್ನ ಮನೆಗೆ ಹಿಂದಿರುಗಿದ.

## ಭೀಮನ ಅದ್ಭುತಧರ್ಮನಿಷ್ಠೆ

ಧೃತರಾಷ್ಟ್ರನು ವಿದುರನನ್ನು 'ಶ್ರಾದ್ಧಕ್ಕಾಗಿ ಹಣವನ್ನು ಪಡೆದು ಬರಲೆಂದು' ಕಳುಹಿಸಿಕೊಟ್ಟ. ಅದನ್ನು ಕೇಳಿ ಧರ್ಮರಾಜನು 'ಪುತ್ರಪೌತ್ರಬಂಧುಗಳೆಲ್ಲರ ಶ್ರಾದ್ಧಕ್ಕಾಗಿ ನಾವೀಗ ಹಣ ನೀಡುವುದು ಉಚಿತ' ಎಂದು ಭೀಮನಿಗೆ ಹೇಳಲು, ಅವನು – ''ಭಗವದ್ವೇಷಿಗಳಾದ ಪಾಪಿಷ್ಠರಿಗೆ ಪಾರಲೌಕಿಕ ಸಹಾಯವನ್ನು ಸರ್ವಥಾ ಮಾಡಕೂಡದು. ಭೀಷ್ಮಾದಿಗಳಿಗೆಂದು ನಾವು ಧನ ನೀಡಿದರೂ ಅವನು ಅದರಿಂದ ದುರ್ಯೋಧನಾದಿಗಳ ಶ್ರಾದ್ಧವನ್ನು ಸಹ ಮಾಡಿಬಿಡುವನು. ಇದನ್ನೆಲ್ಲ ತಿಳಿದೂ ನಾವು ಹಣಕೊಟ್ಟಲ್ಲಿ, ಅದು ಧರ್ಮವಿರುದ್ಧವೇ ಸರಿ'' ಎಂದು ವಿಚಾರ ಮಾಡಿ – ''ದುರ್ಯೋಧನಾದಿಗಳೆಲ್ಲ ಕಷ್ಟಕ್ಕಿಂತಲೂ ಕಷ್ಟಕರವಾದ ಗತಿಯನ್ನು ಹೊಂದಲಿ ; ಭೀಷ್ಮಾದಿಗಳಿಗೆಲ್ಲ ನಾವೇ ಶ್ರಾದ್ಧವನ್ನು ಮಾಡುವೆವು. ಅದರಂತೆ ಕರ್ಣ ಕಾನೀನನಾಗಿರುವುದರಿಂದ, ಅದಕ್ಕೆ ನಾವೂ ಕುಂತಿಯೂ ಅಧಿಕಾರಿಗಳು. ಅಂದ ಮೇಲೆ ಅವನಿಗೇಕೆ ಹಣವನ್ನು ಕೊಡಬೇಕು'' ಎಂದು ನಿರಾಕರಿಸಿಬಿಟ್ಟ. ಅದಕ್ಕೆ ಧರ್ಮರಾಜ ಹಾಗೂ ಅರ್ಜುನ ಇಬ್ಬರೂ 'ಹಣವನ್ನು ಬೇಡುತ್ತಿರುವ ಇವನಿಗೆ ನಮ್ಮ ಸ್ವಂತ ಹಣವನ್ನು ಕೊಡು' ಎನ್ನಲು, ಅದಕ್ಕೂ ಒಪ್ಪದ ಶುದ್ಧಧಾರ್ಮಿಕನಾದ ಭೀಮನನ್ನು ನೋಡಿ 'ನೀನು ಸುಮ್ಮನಿರು'

---

೧. ಹೀಗೆ ಹೇಳುವ ಮೂಲಕ ಶ್ರೀವೇದವ್ಯಾಸರು ಭೀಮನ ಕಾರ್ಯವನ್ನು ಅನುಮೋದಿಸಿದರು ಎಂದಾಗುವುದು. ಹೀಗೆ ಪ್ರತಿಹಂತದಲ್ಲೂ ಪರಿವಾಯುಗಳಲ್ಲಿ ಅಭಿಪ್ರಾಯದ ಏಕತೆ ಇರುವುದು ಗಮನಾರ್ಹ. 'ಹನುಮನ ಮತವೇ ಹರಿಯ ಮತವು' ಎಂಬ ದಾಸವಾಣಿ ಇದರ ಸಾರದಂತಿದೆ.

೨. ಸ್ವತಃ ಧರ್ಮತಪ್ಪಿ ನಡೆದವನು ಧೃತರಾಷ್ಟ್ರ ; ಅವನಿಂದ ಕಲಿಯುವಂತಹ ಅಗತ್ಯವೇನೂ ಯುಧಿಷ್ಠಿರನಿಗೆ ಇರಲಿಲ್ಲ. ಆದರೂ ಧೃತರಾಷ್ಟ್ರನ ಮನಸ್ಸಿಗೆ ನೋವಾಗದಿರಲೆಂದು ಅವನು ನೀಡಿದ ರಾಜನೀತಿಯ ವಿವರಗಳನ್ನು ಕೇಳುವ ಸೌಜನ್ಯವನ್ನು ತೋರಿದ. ಹೀಗೆ ನಡೆಯುವ ಮೂಲಕ ಯುಧಿಷ್ಠಿರ ತನ್ನ ಘನತೆಯನ್ನು ಮೆರೆದ.

ಎಂದು ಹೇಳಿ "ಕೋಶಕ್ಕೆ ಸೇರದ ಪಾನಭೋಗಾದಿಗಳಿಗೆಂದು ನಮ್ಮ ಪಾಲಿಗೆ ಬಂದಿರುವ ಹಣವನ್ನು ಅವನಿಗೆ ನೀಡು" ಎಂದು ಧರ್ಮರಾಜ ಹೇಳಿದ. ಅರ್ಜುನನೂ ಹಾಗೆಯೇ ಹೇಳಿದ[೧]. ಆಗ ಅವರಿಬ್ಬರೂ ವಿದುರನಿಗೆ - "ಮುಖ್ಯಧರ್ಮದಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಭೀಮನ ವಿಷಯದಲ್ಲಿ ಧೃತರಾಷ್ಟ್ರನು ಕೋಪಗೊಳ್ಳುವುದು ತರವಲ್ಲ" ಎಂದು ಹೇಳಿದರು. ಹಣವನ್ನು ತೆಗೆದುಕೊಂಡು ಹೋಗಿ ವಿದುರನು ಧೃತರಾಷ್ಟ್ರನಿಗೆ, "ಧರ್ಮಾರ್ಜುನರು ನಿನ್ನಲ್ಲಿ ಬಹಳ ಗೌರವವನ್ನು ತೋರಿದರು. ಭೀಮನಿಗೆ ಮಾತ್ರ ನಿನ್ನ ಆಜ್ಞೆ ಹಿಡಿಸಲಿಲ್ಲ. ಆದರೆ ಅವನ ಬಗ್ಗೆ ನೀನು ಕೋಪ ಮಾಡಿಕೊಳ್ಳಬೇಡ. ಅವನು ಶುದ್ಧಕ್ಷತ್ರಿಯಧರ್ಮದಲ್ಲಿಯೇ ಯಾವಾಗಲೂ ನಿರತನಾಗಿರುವವನು, ಅಲ್ಲವೇ? ಯುಧಿಷ್ಠಿರ ಅರ್ಜುನರೂ ಸಹ ಧರ್ಮಿಷ್ಠರೇ ಆಗಿದ್ದರೂ ಲೋಕದ ಬಗ್ಗೆ ಕೃಪೆ ತೋರುವ ಸ್ವಭಾವದವರು ; ಭೀಮ ಹಾಗಲ್ಲ[೨]" ಎಂದು ತಿಳಿಸಿದ. ಅದನ್ನು ಕೇಳಿ, ಭೀಮನ ಬಗ್ಗೆ ಕೋಪಗೊಳ್ಳದೆ ಧೃತರಾಷ್ಟ್ರನು, ಪ್ರಶಾಂತಮನಸ್ಸಿನಿಂದ ಎಲ್ಲರಿಗೂ ಶ್ರಾದ್ಧಗಳನ್ನು ಮಾಡಿದ. ಹತ್ತು ದಿನಗಳ ಕಾಲ ತಡೆಯಿಲ್ಲದೆ ಋಣಪರಿಹಾರಕ್ಕೆಂದು ಮಹಾದಾನಗಳನ್ನು ಸಹ ಶುದ್ಧಮನಸ್ಸಿನಿಂದ ನೀಡಿದ.

## ಧೃತರಾಷ್ಟ್ರನಿಂದ ಕ್ಷಮಾಯಾಚನೆ

ಕೃಷ್ಣನಲ್ಲಿ ಎಲ್ಲವನ್ನೂ ಸಮರ್ಪಿಸಿ, ಕಣ್ಣೀರು ಸುರಿಸುತ್ತಿದ್ದ ಪಾಂಡವರು ಹಾಗೂ ಉಳಿದೆಲ್ಲ ಸಜ್ಜನರಿಂದ ಅನುಜ್ಞೆಯನ್ನು ಪಡೆದುಕೊಂಡು, ಊರಿನಿಂದ ಹೊರಹೊರಟ ಧೃತರಾಷ್ಟ್ರ, ಪೌರ ಹಾಗೂ ಜಾನಪದರನ್ನು ಕುರಿತು ಹೇಳಿದ - "ನಮ್ಮ ಹಿಂದಿನ ಮಹಾತ್ಮರು ನಿಮ್ಮನ್ನು ಚೆನ್ನಾಗಿ ಪರಿಪಾಲಿಸಿದರು. ಆದರೆ ನನ್ನಿಂದ ಅದು ಸಾಧ್ಯವಾಗಲಿಲ್ಲ. ನೀವೆಲ್ಲರೂ ಕೇವಲ ನನ್ನ ಮೇಲಿನ ಸ್ನೇಹದಿಂದಾಗಿ 'ನಾನು ಚೆನ್ನಾಗಿ ರಕ್ಷಿಸಲಿಲ್ಲ' ಎಂದು ತಪ್ಪಿಯೂ ಹೇಳಿಲ್ಲ. ನಿಮ್ಮ ಬೆಂಬಲದಿಂದ ನಾನು ಯಜ್ಞಗಳನ್ನು ಮಾಡಿದೆ. ನನ್ನ ಮಗನಾದರೋ ಪಾಪಿಷ್ಠನೂ, ಸರ್ವಕ್ಷತ್ರವಿನಾಶಕನೂ, ಎಲ್ಲವನ್ನೂ ಸಂದೇಹಿಸುವವನೂ, ಮೂಢನೂ, ವೃದ್ಧರ ಮಾತನ್ನು ಮೀರಿ ನಡೆಯುವವನೂ ಆಗಿದ್ದ. ಅವನು ಪಾಂಡವರಲ್ಲಿ ಸೋದರಸ್ನೇಹವನ್ನು ಬಿಟ್ಟು, ಶತ್ರುಗಳೂ ಎಸಗದಷ್ಟು ಅನ್ಯಾಯವನ್ನು ಅವರಿಗೆ ಮಾಡಿದ. ಕೃಷ್ಣನಿಗೂ ಬಹಳ ಅಪ್ರಿಯವಾದ ಕಾರ್ಯಗಳನ್ನು ಎಸಗಿದ. ಆ ಮೂಢನು ನಿಮಗೂ ಸಾಕಷ್ಟು ತೊಂದರೆಯನ್ನು ಕೊಟ್ಟ. ಅವನ ತಮ್ಮಂದಿರೆಲ್ಲರೂ ಅವನ ಪ್ರತಿರೂಪಗಳೇ ಆಗಿದ್ದರು. ತಮ್ಮ ಪಾಪದಿಂದಲೇ ಅವರೆಲ್ಲರು ಮಕ್ಕಳು ಹಾಗೂ

---

೧. ಭೀಮಸೇನ ತನ್ನ ಸ್ವಂತ ಹಣವನ್ನು ಬ್ರಾಹ್ಮಣನಿಗೆ ಆಗತ್ಯವಾಗಿದ್ದ ಯಜ್ಞದಂತಹ ಪವಿತ್ರಕಾರ್ಯಕ್ಕೆ ವಿನಿಯೋಗಿಸಿದ ಧರ್ಮಿಷ್ಠನಾದರೆ, ಧರ್ಮಿಷ್ಠನೆಂದೇ ಖ್ಯಾತನಾದ ಯುಧಿಷ್ಠಿರ ದುರ್ಯೋಧನಾದಿಗಳ ಶ್ರಾದ್ಧದಂತಹ ಅಕಾರ್ಯಕ್ಕೆ ತನ್ನ ಸ್ವಂತ ಹಣವನ್ನು ನೀಡಿದ. ಅರ್ಜುನನೂ ಯುಧಿಷ್ಠಿರನಂತೆಯೇ ಮಾಡಿದ. ಈ ಪ್ರಸಂಗದಲ್ಲಿ ಭೀಮಸೇನನಿಗೂ ಇತರರಿಗೂ ಇರುವ ಧರ್ಮಶ್ರದ್ಧೆಯಲ್ಲಿನ ಅಂತರವು ಸ್ಫುಟವಾಗಿ ಗೋಚರಿಸುವುದು.

೨. ಎಂದರೆ ಧರ್ಮದ ಪರಿಜ್ಞಾನವಿದ್ದರೂ ಬಂಧುತ್ವದ ವ್ಯಾಮೋಹಕ್ಕೊಳಗಾಗಿ ಉಚಿತವಲ್ಲದ ಕೃಪೆ ತೋರುವ ದೌರ್ಬಲ್ಯ ಯುಧಿಷ್ಠಿರ ಅರ್ಜುನರದ್ದು ; ಭೀಮನು ಮಾತ್ರ ಯಾವ ಕಾರಣಕ್ಕೂ ಧರ್ಮ ತೊರೆಯದ ಪರಮಧಾರ್ಮಿಕ ಎಂದರ್ಥ.

ಬಾಂಧವರೊಂದಿಗೆ ಮಡಿದು ಹೋದರು. ವಯಸ್ಸಾಗಿರುವ ನಾನು ಪುತ್ರರ ವಶನಾಗಿ ಅವರ ಸಂಬಂಧದಿಂದಾಗಿ ಪಾಂಡವರು ಹಾಗೂ ಕೃಷ್ಣನ ಬಗ್ಗೆ ಮಾಡಿದ ಪಾಪಗಳನ್ನು ತೊಳೆದು-ಕೊಳ್ಳಲೆಂದು ಹೊರಟಿರುವೆನು. ಮಿತ್ರವತ್ಸಲರಾದ ತಾವೆಲ್ಲ ಇದಕ್ಕೆ ಅನುಮತಿಯನ್ನು ಕೊಡಬೇಕು ; ನನ್ನ ಮೇಲಿನ ಪ್ರೀತಿಗೋಸ್ಕರವಾಗಿಯೂ ಕೂಡ, ನೀವು ಪಾಂಡವರಲ್ಲಿ ಮಾಡುತ್ತಿರುವ ಸ್ನೇಹವನ್ನು ಇನ್ನೂ ಹೆಚ್ಚಾಗಿ ಮಾಡಬೇಕು ; ಅದು ಅಚಲವಾಗಿರಬೇಕು. ಇವರೇ ನನಗೆ ಇಲ್ಲೂ, ಅಲ್ಲೂ ಸುಖವನ್ನು ಕೊಡುವ ಸತ್ಪುತ್ರರು.'' ಅವನ ಮಾತುಗಳನ್ನು ಕೇಳಿ, ಅವನ ಗುಣಗಳನ್ನು ಬಹಳವಾಗಿ ಹೊಗಳುತ್ತಾ , ದುಃಖದಿಂದ ಕಣ್ಣೀರು ಸುರಿಸುತ್ತಾ ಪುರಜನರು ಬಹಳ ಪ್ರಯಾಸದಿಂದ ಬಹುಹೊತ್ತಿನ ಮೇಲೆ ಸಮ್ಮತಿ ನೀಡಿದರು.

ಧೃತರಾಷ್ಟ್ರನು ಹೊರಟ. ಬಹಳ ದೂರದವರೆಗೆ ಅವನನ್ನು ಕಳುಹಿಸಲು ಪಾಂಡವರೂ ಹಿಂಬಾಲಿಸಿದರು. ಗಾಂಧಾರಿಯೊಂದಿಗೆ ಹೊರಟಿದ್ದ ಧೃತರಾಷ್ಟ್ರನನ್ನು ಸಂಜಯನೂ, ವಿದುರನೂ ಹಿಂಬಾಲಿಸಿದರು. ಮಕ್ಕಳು, ಸೊಸೆಯರು ಎಷ್ಟೇ ಬೇಡವೆಂದು ತಡೆದರೂ, ಕುಂತಿಯೂ ಸಹ ಅವರೊಂದಿಗೆ ಕಾಡಿಗೆ ಹೊರಟುಬಿಟ್ಟಳು. ಮಕ್ಕಳನ್ನು ಸೊಸೆಯರನ್ನು ಒಪ್ಪಿಸುವುದು ಅವಳಿಗೆ ಪ್ರಯಾಸದ ಕೆಲಸವೇ ಆಯಿತು. ಕುಂತಿ, ವಿದುರ, ಹಾಗೂ ಸಂಜಯರಿಂದ ಹಾದಿ ತೋರ-ಲ್ಪಟ್ಟವನಾಗಿ, ಗಾಂಧಾರೀಸಮೇತನಾದ ಧೃತರಾಷ್ಟ್ರನು ಕುರುಕ್ಷೇತ್ರವನ್ನು ತಲುಪಿ, ಕ್ರಮವಾಗಿ ಜಗದ್ಗುರುವಾದ ವೇದವ್ಯಾಸರ ಆಶ್ರಮವನ್ನೂ ಸೇರಿದ. ಅನಂತರ ಮೂರುವರ್ಷಗಳ ಮೇಲೆ ಪತ್ನೀಸಮೇತನಾಗಿ ಅವನು ತನ್ನ ಲೋಕವನ್ನು ಪಡೆದುಕೊಳ್ಳುವುದಾಗಿ ನಾರದರು ತಿಳಿಸಿದರು. ಅವರೆಲ್ಲ ವ್ಯಾಸರು ಉಪದೇಶಿಸಿದ ರೀತಿಯಲ್ಲಿ ಶ್ರೇಷ್ಠವಾದ ತಪಸ್ಸನ್ನು ಆಚರಿಸಿದರು.

## ವೇದವ್ಯಾಸರ ಅದ್ಭುತಮಹಿಮೆ

ಧೃತರಾಷ್ಟ್ರ ಮೊದಲಾದ ಅವರೆಲ್ಲರು ಅಲ್ಲಿ ತಪಸ್ಸುಗಳಿಂದ ಶ್ರೀಹರಿಯನ್ನು ಆರಾಧಿಸು-ತ್ತಿರುವಾಗ, ಅವರನ್ನು ನೋಡಲೆಂದು ಪತ್ನಿಯರು, ಬಂಧುಗಳು ಹಾಗೂ ಭೃತ್ಯರ ಸಮೇತರಾಗಿ ಅಲ್ಲಿಗೆ ಪಾಂಡವರು ಆಗಮಿಸಿದರು. ಆಗ ವಿದುರನು ಧರ್ಮರಾಜನಲ್ಲಿ ಐಕ್ಯ ಹೊಂದಿದ. ಪಾಂಡವರೆಲ್ಲ ಉಳಿದೆಲ್ಲರನ್ನೂ ಸೇವಿಸುತ್ತಿರುವಾಗ, ಅಲ್ಲಿಗೆ ಭಗವಾನ್ ವ್ಯಾಸರು ದಯ-ಮಾಡಿಸಿದರು. ಎಲ್ಲರೂ ಭಕ್ತಿಯಿಂದ ಅವರನ್ನು ಪೂಜಿಸಿದರು. ಅವರೆಲ್ಲರಿಂದ ಪೂಜಿತರಾಗಿ ಕುಳಿತ ವೇದವ್ಯಾಸರು – ''ಎಲ್ಲರೂ ತಮಗೆ ಬೇಕಾದ್ದನ್ನು ಕೇಳಿಕೊಳ್ಳಬಹುದು. ಅದನ್ನೆಲ್ಲಾ ನೀಡುವೆ'' ಎಂದು ತಿಳಿಸಿದರು. ಪಾಂಡವರೂ ಅವರ ಪತ್ನಿಯರೂ ''ಭಕ್ತಿಯು ಮತ್ತಷ್ಟು ಹೆಚ್ಚಲಿ'' ಎಂದು ಕೇಳಿಕೊಂಡರು ; ವ್ಯಾಸರು ಅದನ್ನು ಅನುಗ್ರಹಿಸಿದರು. ಕುಂತಿಯು ಕರ್ಣನ ಜನ್ಮ ಹಾಗೂ ಮೃತಿಗಳಿಗೆ ಸಂಬಂಧಿಸಿದ ಪಾಪವನ್ನು ನಿವಾರಿಸಲು ಕೇಳಿಕೊಂಡಳು. ಅದನ್ನೂ ವ್ಯಾಸರು ಅನುಗ್ರಹಿಸಿದರು. ಧೃತರಾಷ್ಟ್ರನು ಗಾಂಧಾರಿಯೊಂದಿಗೆ ಸಮಾಲೋಚಿಸಿ, ಯುದ್ಧ-ದಲ್ಲಿ ಮೃತರಾದವರನ್ನೆಲ್ಲಾ ಕಾಣುವ ಹಂಬಲವನ್ನು ವ್ಯಕ್ತಪಡಿಸಿದ. ಅನಂತರ ಸರ್ವೇಶ್ವರರಾದ ವೇದವ್ಯಾಸರ ಆಜ್ಞೆಯಂತೆ ಯುದ್ಧದಲ್ಲಿ ಮಡಿದವರೆಲ್ಲ ಸ್ವರ್ಗದಿಂದ ಅಲ್ಲಿಗೆ ಬಂದರು. ಆಗ

ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ವ್ಯಾಸರು ಅನುಗ್ರಹಿಸಿದರು. ಆ ರಾತ್ರಿ ಅವರೆಲ್ಲರೂ ವ್ಯಾಸರ ಅಪ್ಪಣೆಯಂತೆ, ಮುಂಚಿನಂತೆ ತಮ್ಮ ತಮ್ಮ ಪತ್ನಿಯರೊಂದಿಗೆ, ಕಳೆದರು. ಪತ್ನೀಸಮೇತನಾದ ಧೃತರಾಷ್ಟ್ರ ಸಂತೃಪ್ತನಾದ. ಆ ಪರಮಾದ್ಭುತವನ್ನು ಕಂಡು ಎಲ್ಲರಿಗೂ ಆಶ್ಚರ್ಯವುಂಟಾಯಿತು. ಆಗ ಎಲ್ಲ [೧] ಸ್ತ್ರೀಯರೂ ವೇದವ್ಯಾಸರ ಅಪ್ಪಣೆಯಂತೆ ತಮ್ಮ ಪತಿಯರೊಂದಿಗೆ ಸ್ವರ್ಗಕ್ಕೆ ತೆರಳಿದರು. ಉತ್ತರೆಯು ಮಾತ್ರ ಆಗ ಅಭಿಮನ್ಯುವಿನ ಜೊತೆ ತೆರಳಲಿಲ್ಲ[೨].

ಈ ಕಥೆಯನ್ನು ಕೇಳಿದ ಜನಮೇಜಯನು ಅದರಂತೆ ತನ್ನ ತಂದೆಯಾದ ಪರೀಕ್ಷಿದ್ರಾಜನನ್ನು ಕಾಣಲು ಬಯಸಿದ[೩]. ಆಗ ವೇದವ್ಯಾಸರು ವೈಕುಂಠಲೋಕದಿಂದ ಅವನನ್ನು ಅಲ್ಲಿಗೆ ಕರೆಸಿದರು. ಅದನ್ನು ಕಂಡು ಬಹಳವಾಗಿ ಸಂತೋಷಿಸಿದ ಜನಮೇಜಯನು ತನ್ನ ಜನರೊಂದಿಗೆ, ಭಾರತದ ಕಥೆಯಲ್ಲಿ ಮತ್ತಷ್ಟು ಹೆಚ್ಚಿನ ನಂಬಿಕೆಯನ್ನು ಹೊಂದಿದ[೪].

ಮತ್ತೆ ಹಸ್ತಿನಾಪುರಕ್ಕೆ ಮರಳಿದ ಪಾಂಡವರು ಧರ್ಮದಿಂದ ಪೃಥ್ವಿಯನ್ನು ಪಾಲಿಸುತ್ತಾ , ತಮಗೆ ಉಚಿತವಾದ ಭೋಗಗಳನ್ನು ಭುಂಜಿಸುತ್ತಾ , ಕೃಷ್ಣನನ್ನು ಭಜಿಸುತ್ತಾ ಸುಖಿಸಿದರು.

## ಧೃತರಾಷ್ಟ್ರಾದಿಗಳ ನಿರ್ಯಾಣ

ಮೂರುವರ್ಷಗಳು ಕಳೆದ ಮೇಲೆ, ಧೃತರಾಷ್ಟ್ರ, ಗಾಂಧಾರಿ ಹಾಗೂ ಕುಂತಿಯರು ಕಾಡ್ಗಿಚ್ಚಿನಲ್ಲಿ ದೇಹತ್ಯಾಗ ಮಾಡಿದ ವಾರ್ತೆ ಪಾಂಡವರ ಕಿವಿಗೆ ಬಿತ್ತು. ಧೃತರಾಷ್ಟ್ರನು ಆ

---

೧. ಕುರುಕ್ಷೇತ್ರ ಯುದ್ಧದಲ್ಲಿ ಪುರುಷರು ಮಾತ್ರ ಮಡಿದು, ಅವರ ಪತ್ನಿಯರೆಲ್ಲ ಉಳಿದುಕೊಂಡಿದ್ದರು. ಅವರೆಲ್ಲ ಈಗ ಹೀಗೆ ದೇಹ ತೊರೆದು ತಮ್ಮ ಪತಿಗಳ ಲೋಕವನ್ನು ಸೇರಿದರು. ಈ ಪ್ರಸಂಗವು ಪುರುಷರು ಅಳಿದ ಮೇಲೆ ಉಳಿದುಕೊಳ್ಳುವ ಸ್ತ್ರೀಯರಿಂದ ವರ್ಣಸಾಂಕರ್ಯಕ್ಕೆ ಎಡೆಯಾದೀತು ಎಂಬ ಅರ್ಜುನನ ಶಂಕೆಗೆ ಉತ್ತರವಾಗಿದೆ ಎಂದು ತಿಳಿಯಬಹುದು.

೨. ಹಾಗೆ ಬಂದವರಲ್ಲಿ ಅಭಿಮನ್ಯುವೂ ಸೇರಿದ್ದ. ಉಳಿದ ಸ್ತ್ರೀಯರಂತೆ ಉತ್ತರೆ ಮಾತ್ರ ಅವನನ್ನು ಹಿಂಬಾಲಿಸಿ ತೆರಳಲಿಲ್ಲ. ಅದಕ್ಕೆ ಪರೀಕ್ಷಿದ್ರಾಜನು ಇನ್ನೂ ಚಿಕ್ಕವನಾಗಿದ್ದುದೇ ಕಾರಣ ಎಂದು ತಿಳಿಯಬೇಕು. ಮಕ್ಕಳು ಇನ್ನೂ ಪ್ರೌಢರಾಗುವ ಮುನ್ನ ದೇಹ ತೊರೆದು ಪತಿಯನ್ನು ಹಿಂಬಾಲಿಸುವುದು ಶಾಸ್ತ್ರಕ್ಕೆ ಸಮ್ಮತವಲ್ಲದ ಕಾರ್ಯ ಎಂಬ ವಿವರ ಈಗಾಗಲೇ ಬಂದಿದೆ.

೩. ಈ ಪ್ರಸಂಗವನ್ನು ಕೇಳುತ್ತಲೇ ಜನಮೇಜಯರಾಜ ಅಲ್ಲಿಯೇ ಉಪಸ್ಥಿತರಿದ್ದ ಶ್ರೀವೇದವ್ಯಾಸರನ್ನು ತನ್ನ ತಂದೆ ಪರೀಕ್ಷಿತ್ ರಾಜನನ್ನು ಅಲ್ಲಿಗೆ ಕರೆತಂದು ತೋರಿಸಲು ಪ್ರಾರ್ಥಿಸಿಕೊಂಡ. ಶ್ರೀವೇದವ್ಯಾಸರು ಅವನ ಅಪೇಕ್ಷೆಯನ್ನು ಪೂರೈಸಿದರು. ಇದರಿಂದ ತಾನು ಕೇಳಿದ ಶ್ರೀವೇದವ್ಯಾಸರ ಆ ಸಾಮರ್ಥ್ಯದ ಬಗ್ಗೆ ಜನಮೇಜಯನಿಗೆ ನಂಬಿಕೆ ಹೆಚ್ಚಿತು. ಅದರೊಂದಿಗೆ ಅವನಿಗೆ ಭಾರತದ ಸಕಲವಿವರಗಳ ಬಗ್ಗೆಯೂ ಸಹ ನಂಬಿಕೆಯು ವಿಶೇಷವಾಗಿ ಹೆಚ್ಚಿತು ಎಂದು ಭಾವ.

೪. ಶ್ರೀವೇದವ್ಯಾಸರ ಈ ಹಿರಿಮೆಯು ಶ್ರೀಕೃಷ್ಣನು ಗುರುಗಳ ಮೃತಪುತ್ರನನ್ನು ಹಾಗೂ ದೇವಕಿಯ ಮೊದಲ ಆರು ಮಕ್ಕಳನ್ನೂ ಮರಳಿ ತಂದುಕೊಟ್ಟ ಪ್ರಸಂಗಗಳನ್ನು ಹೋಲುವುದು. ರಾಮಾಯಣದಲ್ಲಿ ಯುದ್ಧದ ಬಳಿಕ ಆ ಮುನ್ನ ಮೃತರಾಗಿದ್ದ ಸಮಸ್ತಕಪಿಗಳನ್ನು ಶ್ರೀರಾಮದೇವರು ಯಮಲೋಕದಿಂದ ಮರಳಿ ಕರೆಸಿಕೊಂಡ ವಿವರವೂ ಇಂತಹುದೇ ಆಗಿದೆ. ಶ್ರೀವೇದವ್ಯಾಸರು, ಶ್ರೀಕೃಷ್ಣ ಹಾಗೂ ಶ್ರೀರಾಮ – ಈ ಮೂವರೂ ಭಗವಂತನಾದ ಶ್ರೀಹರಿಯ ರೂಪಗಳೇ ಆಗಿವೆ ಎಂಬುದು ಗಮನಾರ್ಹ. ಪರೀಕ್ಷಿದ್ರಾಜನನ್ನು ಮರಳಿ ಬದುಕಿಸಿದ ಶ್ರೀಕೃಷ್ಣನ ಮಹಿಮೆಯೂ ಇಂತಹುದೇ. ಇದು ಭಗವಂತನ ಅಚಿಂತ್ಯಾದ್ಭುತಶಕ್ತಿಗೆ ನಿದರ್ಶನ.

ವೇಳೆಯಲ್ಲಿ ನಾಚಿಕೆಯಿಂದ ತುಂಬಿದ್ದ ಮುಖದಿಂದ ಧ್ಯಾನಮಗ್ನನಾಗಿದ್ದನಂತೆ. ಅವರ ಅಗಲುವಿಕೆಗಾಗಿ ದುಃಖಿಸಿದ ಪಾಂಡವರು ಅವರ ಅಂತ್ಯಕ್ರಿಯೆಗಳನ್ನು ನಡೆಸಿದರು.

ಅವರೆಲ್ಲಾ ವಿಷ್ಣುಭಕ್ತಿಯಿಂದ ನಡೆಸಿದ ಪವಿತ್ರಕಾರ್ಯಗಳಿಂದಾಗಿಯೂ, ತತ್ತ್ವಜ್ಞಾನ-ದಿಂದಾಗಿಯೂ, ಅಂತ್ಯಕಾಲದಲ್ಲಿ ಶ್ರೀಹರಿಯನ್ನು ಸ್ಮರಿಸಿದ್ದರಿಂದಾಗಿಯೂ, ಪಾಂಡವರಂತಹ ಸತ್ಪುತ್ರರಿಂದ ಮಾಡಿದ ಔರ್ಧ್ವದೈಹಿಕಕ್ರಿಯೆಗಳಿಂದಾಗಿಯೂ [೧]ಪರಲೋಕದಲ್ಲಿ ಎಂದೂ ಅಳಿಯದ ವಿಶೇಷವಾದ ಸುಖವನ್ನು ಹೊಂದಿದರು.

ಸಂಜಯನು ವ್ಯಾಸರ ಬಳಿಗೆ ಬಂದು, ಅವರನ್ನು ಸೇವಿಸುತ್ತಾ ತನ್ನ ನಿಜಗತಿಯನ್ನು ಪಡೆದ. ಪಾಂಡವರು ಕೃಷ್ಣನ ಆದೇಶವನ್ನು ನಿರೀಕ್ಷಿಸುತ್ತಾ ಪೃಥ್ವಿಯನ್ನು ಪಾಲಿಸಿದರು. ಹೀಗೆ ಭೂಮಿಯನ್ನು ಪಾಲಿಸುತ್ತಾ ಆ ಮಹಾತ್ಮರು ಹದಿನೆಂಟು ವರ್ಷಗಳನ್ನು ಕಳೆದರು. ಅವರು ಮಹಾತ್ಮರು ; ಧರ್ಮಕಾರ್ಯವನ್ನು ಎಂದೂ ತೊರೆಯದವರು ; ಸದಾ ಉತ್ತಮ ನಲಿವಿನಿಂದ ಕೂಡಿದ್ದವರು ; ಅನಂತನಾದ ಶ್ರೀಹರಿಯ ಪಾದದ ಸ್ಮರಣೆಯನ್ನು ಎಂದೂ ತಪ್ಪದವರು.

★★★★★

---

೧. ಧೃತರಾಷ್ಟ್ರ ತನ್ನ ಪುತ್ರವ್ಯಾಮೋಹದಿಂದಾಗಿ ಮಾಡಿದ್ದ ಪಾಪಕಾರ್ಯಗಳು ಇದರಿಂದಾಗಿ ಪರಿಹಾರವಾಗಿ ಅವನು ಸದ್ಗತಿ ಪಡೆಯುವಂತಾಯಿತು ಎಂದು ಭಾವ. ಇಲ್ಲವಾದಲ್ಲಿ ಸುಗ್ರೀವನ ಸಂಗದಿಂದ ತಾರೆ ಸ್ವರ್ಗಕ್ಕೆ ಹೋಗದೆ ಅಂತರಿಕ್ಷದಲ್ಲಿಯೇ ಉಳಿದು ಬಳಿಕ ಚಿತ್ರಾಂಗದೆಯಾಗಿ ಪರಿಶುದ್ಧಳಾಗುವ ಪ್ರಸಂಗದಲ್ಲಿ ಹೇಗೋ ಹಾಗೆ ಧೃತರಾಷ್ಟ್ರನಿಗೆ ತನ್ನ ಮೂಲರೂಪವನ್ನು ಸೇರಿಕೊಳ್ಳಲು ಅಡ್ಡಿಯಾಗುತ್ತಿತ್ತು. ಮಾದ್ರಿಯೂ ಸಹ ತಾನು ವಿಹಿತರೀತಿಯಲ್ಲಿ ಸಂತತಿಯನ್ನು ಪಡೆಯದ ಕಾರಣದಿಂದ ಅಗ್ನಿಪ್ರವೇಶವನ್ನು ಮಾಡಿ ಪರಿಶುದ್ಧಳಾಗುವ ಪ್ರಸಂಗವೂ ಸಹ ಇಲ್ಲಿಗಮನಾರ್ಹವೆನ್ನಿಸುವುದು. ಭೀಮಸೇನನು ಧೃತರಾಷ್ಟ್ರನ ಮೇಲಿನ ಅನುಕಂಪದಿಂದಾಗಿ ಅವನಿಗೆ ವೈರಾಗ್ಯ ಬರುವಂತಹ ಕಾರ್ಯಗಳನ್ನು ಮಾಡಿ ಉದ್ಧರಿಸಿದ್ದು ಇದರಿಂದ ಸ್ಫುಟಪಡುವುದು. ದೇವತೆಗಳಿಗೆ ನರಕಪ್ರಾಪ್ತಿ ಇಲ್ಲವಾದ್ದರಿಂದ ಅವರಿಗೆ ಇಂತಹ ತೀವ್ರತಪಸ್ಸು ಮೊದಲಾದವುಗಳಿಂದಲೇ ಪಾತಕಗಳ ಪರಿಹಾರ ಎಂಬ ಪ್ರಮೇಯಕ್ಕೂ ಇದು ನಿದರ್ಶನವಾಗಿದೆ ಎನ್ನಬಹುದು.

# ಮೌಸಲ ಪರ್ವ

## ಕೃಷ್ಣ ಮಾಡಿದ ಅಪೂರ್ವಯಾಗ

ಆಗೊಮ್ಮೆ ಕೃಷ್ಣನು ಕುರುಕ್ಷೇತ್ರಕ್ಕೆ ತೆರಳಿ, ಹನ್ನೆರಡು ವರ್ಷಗಳ ಒಂದು ಸತ್ರದಲ್ಲಿ ದೀಕ್ಷೆಯನ್ನು ಕೈಕೊಂಡ. ಅವನೇ ತನ್ನ ವೇದವ್ಯಾಸ ಹಾಗೂ ಪರಶುರಾಮರ ರೂಪಗಳಿಂದ ಅಲ್ಲಿಯ ಸಭೆಯನ್ನಲಂಕರಿಸಿದ. ಅಲ್ಲಿ ದಕ್ಷ, ಭೃಗು ಮೊದಲಾದವರು ಋತ್ವಿಜರಾದರು. ಪಾಂಡವರೂ, ಯಾದವರೂ, ಅಲ್ಲಿಗೆ ಆಗಮಿಸಿದ ಬ್ರಹ್ಮ ಶಿವ, ಇಂದ್ರ ಮೊದಲಾದ ದೇವತೆಗಳೆಲ್ಲ ಸೇವಕರಾಗಿ ಅಲ್ಲಿ ಓಡಾಡಿದರು. ಭೂಮಿ, ಅಂತರಿಕ್ಷ ಮೊದಲಾದ ಎಲ್ಲ ಸ್ಥಳಗಳಲ್ಲೂ ವಾಸಿಸುವ ನಾರಾಯಣನ ಪಾದಕಮಲಗಳನ್ನು ಆಶ್ರಯಿಸಿದ ಎಲ್ಲ ಜೀವರು ಆ ಪ್ರಸಂಗದಲ್ಲಿ ಆನಂದವನ್ನು ಹೊಂದಿದರು. ತತ್ತ್ವನಿರ್ಣಯದ ಕಥೆಗಳೂ ನಡೆದು ತತ್ತ್ವಗಳ ಬಗ್ಗೆ ಖಚಿತವಾದ ನಿರ್ಣಯ ಎಲ್ಲರಿಗೂ ತಿಳಿಯುವಂತಾಯಿತು. ಧರ್ಮ ಅರ್ಥ ಹಾಗೂ ಕಾಮಗಳ ಬಯಕೆಯಿದ್ದವರಿಗೆ ಅವುಗಳು ಸಹ ದೊರೆತವು. ಮುಕ್ತಿಯನ್ನಂತೂ ಎಲ್ಲರೂ ಕೃಷ್ಣನಿಂದ ಪಡೆದರು. ಬಯಸಿದ ಪಾನೀಯಗಳು, ಆಹಾರ ಹಾಗೂ ವಸ್ತ್ರಗಳು ಜನರಿಗೆ ಯಥೇಚ್ಛವಾಗಿ ದೊರಕಿದವು. ಹೀಗೆ ಸುರರು, ಮಾನವರು ಮೊದಲಾಗಿ ಸಕಲಜನರೂ ಅಲ್ಲಿ ನಲಿದಾಡಿದರು. ಸಕಲಸಜ್ಜನರೂ ಅಲ್ಲಿ ನೆರೆದದ್ದರಿಂದ ಆ ಸ್ಥಳ ಶ್ರೀಹರಿಯ ಲೋಕವಾದ ವೈಕುಂಠದಂತಾಯಿತು. ಬಯಕೆ ಈಡೇರದವರಾರೂ ಅಲ್ಲಿರಲಿಲ್ಲ. ಅಲ್ಲಿ ಶ್ರೀಕೃಷ್ಣನ ದರ್ಶನವು ಅನಾಯಾಸವಾಗಿ ಸಕಲರಿಗೂ ಲಭಿಸುತ್ತಿದ್ದಿತು. ಹೀಗೆ ಹನ್ನೆರಡು ವರ್ಷಗಳ ಕಾಲದ ಇಂತಹ ಮಹಾಸತ್ರವನ್ನು ಪೂರೈಸಿ ಕೃಷ್ಣನು ಅವಭೃಥಸ್ನಾನವನ್ನು ಮಾಡಿ, ಎಲ್ಲ ಜನರನ್ನೂ ಆದರಿಸಿ ಕಳುಹಿಸಿದ. ಅವರೆಲ್ಲ ಅಲ್ಲಿಂದ ಹೊರಡಲು ಒಂದು ವರ್ಷಕಾಲವೇ ಹಿಡಿಯಿತು.

ತನ್ನ ಕುಲವನ್ನು ಉಪಸಂಹರಿಸುವ ದೃಷ್ಟಿಯಿಂದ ಕೃಷ್ಣನು ವಿಪ್ರಶಾಪವೊಂದನ್ನು ಸೃಷ್ಟಿಸಿದ. ಉದ್ಧವನಿಗೆ ಶ್ರೇಷ್ಠಜ್ಞಾನವನ್ನು ಉಪದೇಶಿಸಿ, ಅವನನ್ನು ಬದರಿಕಾಶ್ರಮಕ್ಕೆ ಕಳುಹಿಸಿದ. ತನ್ನ ಅವತಾರದ [1]೧೦೭ನೇ ವರ್ಷವನ್ನು ನಿರೀಕ್ಷಿಸುತ್ತಾ, ಪಾಂಡವರೊಂದಿಗೆ ಭೂಮಿಯನ್ನು ಪಾಲಿಸಿದ. ದುರ್ಯೋಧನನ ಪತನದೊಂದಿಗೇ ಕಲಿಯುಗ ಆರಂಭವಾಗಿದ್ದರೂ, ಅಂದಿನಿಂದ ಮತ್ತೆ ಮೂವತ್ತಾರುವರ್ಷಗಳವರೆಗೆ ಕೃಷ್ಣನು ಅದನ್ನು ಕೃತಯುಗವನ್ನಾಗಿಯೇ ಮಾಡಿದ. ಪುಣ್ಯಕ್ಕೆ ಅಧಿಕಫಲವೂ, ಪಾಪಕ್ಕೆ ಅಲ್ಪಫಲವೂ ಇದ್ದ ಆ ಕಾಲವು ಕೃತಯುಗಕ್ಕಿಂತಲೂ ಮಿಗಿಲೆನ್ನಿಸಿತು.

## ಯಾದವರ ನಿರ್ಯಾಣ

ಲೋಕವೆಲ್ಲ ಧರ್ಮದಿಂದ ತುಂಬಿ ಹರಿಭಕ್ತಿಪರಾಯಣವಾಗಿ, ಕಲಿಚಿಹ್ನೆಗಳೆಲ್ಲ ಮಾಯವಾಗಲು, ಕಲಿಯುಗದ ವೃತ್ತಿಯನ್ನು ರಕ್ಷಿಸುವ ದೃಷ್ಟಿಯಿಂದ ಬ್ರಹ್ಮಾದಿದೇವತೆಗಳು

೧. ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ್ದು ಅವತಾರಕಾಲದಿಂದ ಸರಿಯಾಗಿ ೧೦೬ ವರ್ಷಗಳು ಹಾಗೂ ೬ ತಿಂಗಳುಗಳ ಬಳಿಕ. ಆದ್ದರಿಂದ ೧೦೭ನೆಯ ವರ್ಷದ ನಿರೀಕ್ಷೆ ಎಂಬುದು ಸಂಗತವಾಗುವುದು.

ನಾಶರಹಿತನಾದ ಕೇಶವನನ್ನು ಸ್ತುತಿಸಿ, ಅವನನ್ನು 'ತನ್ನ ಲೋಕಕ್ಕೆ ಹಿಂದಿರುಗಲು' ಪ್ರಾರ್ಥಿಸಿ-ಕೊಂಡರು ; ಕೃಷ್ಣನು ಅದಕ್ಕೆ ಸಮ್ಮತಿಸಿದ ; ಸಜ್ಜನರು ಹೆಚ್ಚಿನ ಸಂಖ್ಯೆಯಲ್ಲಿ ಉಳಿದುಕೊಂಡಲ್ಲಿ ಕಲಿಯುಗಕ್ಕೆ ಅವಕಾಶವು ಲಭಿಸಲಾರದೆಂಬ ಕಾರಣದಿಂದ, ತನ್ನ ಕುಲವನ್ನು ಸಂಹರಿಸಲು ಸಂಕಲ್ಪಿಸಿ, ಯಾದವರನ್ನೆಲ್ಲ ಪ್ರಭಾಸಕ್ಷೇತ್ರಕ್ಕೆ ಕರೆದೊಯ್ದ. ತನ್ನ ವಾಸಸ್ಥಾನವು ಪುಣ್ಯಕ್ಷೇತ್ರವೇ ಆಗಿದ್ದರೂ ಅದನ್ನು ಬಿಟ್ಟು ಬೇರೊಂದು ಚಿಕ್ಕಕ್ಷೇತ್ರಕ್ಕಾದರೂ ಹೋಗಿ ಅಲ್ಲಿ ದೇಹ ಬಿಡುವುದು ಮಹಾಪುಣ್ಯಕರ ಎಂಬುದನ್ನು ಲೋಕಕ್ಕೆ ತೋರಿಸಿಕೊಡಲೆಂದು ಕೃಷ್ಣನು ಹಾಗೆ ಮಾಡಿದ. ಕುಶಸ್ಥಲಿದಿಂದ ಪ್ರಭಾಸಕ್ಕೆ ಕರೆದೊಯ್ದು ಅವರಿಂದ ಉತ್ತಮಧರ್ಮಕಾರ್ಯಗಳನ್ನು ಮಾಡಿಸಿ, ದಾನಗಳನ್ನು ಕೊಡಿಸಿದ. ಅವರೆಲ್ಲ ಶಾಪದ ಕಾರಣದಿಂದಾಗಿ ಕೃಷ್ಣನಿಂದಲೇ ವಿಮೋಹಿತರಾಗಿ, ಮೈರೇಯದಿಂದ ಮದಿಸಿ ಪರಸ್ಪರದಲ್ಲಿ ಹೊಡೆದಾಡಿಕೊಂಡು ದೇಹತೊರೆದು ತಮ್ಮ ಮೂಲ-ರೂಪವನ್ನು ಸೇರಿಕೊಂಡರು. ಅದನ್ನು ನೋಡಿ ಬಲರಾಮನೂ ಸಹ ಯೋಗದಿಂದ ದೇಹವನ್ನು ಬಿಟ್ಟು ತನ್ನ ಮೂಲರೂಪವನ್ನು ಸೇರಿಕೊಂಡ.

## ಶ್ರೀಕೃಷ್ಣನ ಪರಂಧಾಮಗಮನ

ಅನಂತರ ಪರೇಶನಾದ ಶ್ರೀಕೃಷ್ಣನು, ತಾನು ತನ್ನ ಲೋಕಕ್ಕೆ ಹೊರಟಿರುವುದನ್ನು ತಿಳಿಸಲು, ತನ್ನ ಸಾರಥಿಯನ್ನು ಪಾಂಡವರ ಬಳಿಗೆ ಕಳುಹಿಸಿ, ಅವರೂ ಸಹ ತ್ವರೆಯಿಂದ ಹೊರಡ-ತಕ್ಕದ್ದೆಂದು ತಿಳಿಸಿದ ; ಅನಂತರ ಅಶ್ವತ್ಥವೃಕ್ಷದ ಬುಡದಲ್ಲಿ ಕುಳಿತಿದ್ದ ತನ್ನ ತೊಡೆಯ ಮೇಲಿರಿಸಿಕೊಂಡಿದ್ದ ಈಶನಾದ ಶ್ರೀಕೃಷ್ಣನ ಕೆಂಪಾದ ಅಂಗಾಲನ್ನು ನೋಡಿ, ಜರಾ ಎಂಬ ಬೇಡನು, ಕೃಷ್ಣಭಕ್ತನೇ ಆಗಿದ್ದರೂ, ರೋಹಿತಮೃಗವೆಂದು ಶಂಕಿಸಿ, ಬಾಣವನ್ನು ಪ್ರಯೋಗಿಸಿದ. ಅಚ್ಛೇದ್ಯ ಹಾಗೂ ಅಭೇದ್ಯವಾದ ದೇಹದ ಶ್ರೀಕೃಷ್ಣನ ಅಂಗಾಲಿಗೆ [೧]ಬಾಣವು ತಗುಲಲು, ಸಮೀಪಕ್ಕೆ ಬಂದ ಜರಾ ವ್ಯಾಧನು ಅದನ್ನು ನೋಡಿ ಭಯದಿಂದ ಭೂಮಿಯ ಮೇಲೆ ಬಿದ್ದು ಹೊರಳಾಡಿದ. ವಿಪ್ರವಾಕ್ಯವನ್ನು ಗೌರವಿಸಲು ಕೃಷ್ಣನು ಅವನಿಂದ ಆ ರೀತಿ ಮಾಡಿಸಿದ. 'ಪಾಪಿಯಾದ ನನ್ನನ್ನು ಕೊಲ್ಲು' ಎಂದು ಪ್ರಾರ್ಥಿಸಿದ. ಪಾದಪ್ರಹಾರ ಮಾಡಿದ ದೋಷ-ದಿಂದಾಗಿ ಬೇಡನಾಗಿ ಜನಿಸಿದ್ದ [೨]ಭೃಗುಮುನಿಯೇ ಆ ಬೇಡ ; ಅವನ ಪಶ್ಚಾತ್ತಾಪ ಹಾಗೂ ಭಕ್ತಿಯಿಂದ ಪ್ರೀತನಾಗಿ ಕೃಷ್ಣನು, ತನ್ನ ಆಜ್ಞೆಯಂತೆ ಬಂದ ವಿಮಾನದ ಮೂಲಕ ಅವನನ್ನು ಸ್ವರ್ಗಕ್ಕೆ ಕಳುಹಿಸಿಕೊಟ್ಟ. ತಾನು ಮಾಡಿದ ಅತಿನೀಚಕರ್ಮದಿಂದಾಗಿ ನೀಚಯೋನಿಯನ್ನು ಹೊಂದಿ, ನೀಚಕಾರ್ಯವನ್ನು ಮಾಡಿದರೂ, ಮನಸ್ಸು ದುಷ್ಟವಾಗಿಲ್ಲದ್ದರಿಂದ ಅವನಿಗೆ ಭಕ್ತಿಲೋಪ ಉಂಟಾಗಿರಲಿಲ್ಲ. ಬುದ್ಧಿಪೂರ್ವಕ ನಡೆದ ಅಪರಾಧವಾಗಿರಲಿಲ್ಲವಾದ್ದರಿಂದ ಭೃಗುಮುನಿಗೆ ಅದು ಮಹಾದೋಷಕ್ಕೆ ಕಾರಣವೇನೂ ಆಗಲಿಲ್ಲ.

---

೧. ಈ ಸ್ಥಳವು ಇಂದು ಪ್ರಭಾಸಕ್ಷೇತ್ರದಲ್ಲಿ ಬಾಣಗಂಗಾ ಎಂದು ಪ್ರಸಿದ್ಧವಾಗಿದೆ.

೨. ಈ ಪಾದಪ್ರಹಾರದ ಪ್ರಸಂಗ ಶ್ರೀಮದ್ಭಾಗವತ, ಪದ್ಮಪುರಾಣ, ಭವಿಷ್ಯೋತ್ತರಪುರಾಣ ಮೊದಲಾದ ಆಕರಗ್ರಂಥಗಳಲ್ಲಿ ಸುಪ್ರಸಿದ್ಧವಾದುದು.

ಅನಂತರ ಬ್ರಹ್ಮ, ರುದ್ರ ಮೊದಲಾದ ದೇವತೆಗಳೆಲ್ಲರೂ ಕೃಷ್ಣನನ್ನು ಸ್ತುತಿಸುತ್ತಾ ನಮಸ್ಕರಿಸಿ ಅವನನ್ನು ಎದುರುಗೊಂಡರು. ಕೃಷ್ಣನು ಆಗ ತನ್ನ ತೇಜಸ್ಸಿನಿಂದ ಎಲ್ಲವನ್ನೂ ಬೆಳಗಿಸುತ್ತಾ ತನ್ನ ಲೋಕಕ್ಕೆ ಹೊರಟ. ಕೃಷ್ಣಮಂತ್ರವನ್ನು ಭಜಿಸುವ ಜನರಿಗೆ ಫಲನೀಡಲೆಂದು ಒಂದು ರೂಪದಿಂದ ಅದೃಶ್ಯನಾಗಿ ಭೂಮಿಯಲ್ಲೇ ನೆಲೆಸಿದ. ಎರಡನೆಯ ರೂಪದಿಂದ ಸೂರ್ಯಮಂಡಲದಲ್ಲೂ, ಮೂರನೆಯ ರೂಪದಿಂದ ಶಿವಪೂಜಿತನಾಗಿ ಕೈಲಾಸದಲ್ಲೂ ನೆಲೆಸಿದ. ನಾಲ್ಕನೆಯ ರೂಪದಿಂದ ಬ್ರಹ್ಮಲೋಕದಲ್ಲಿ ಬ್ರಹ್ಮದೇವರಿಂದ ಪೂಜಿತವಾಗಿ ನೆಲೆಸಿದ. ಐದನೆಯ ರೂಪದಿಂದ ಮೂಲರೂಪಕ್ಕೆ ಹೊರಟ ಕೃಷ್ಣನನ್ನು ಎಲ್ಲ ದೇವತೆಗಳೂ ಹಿಂಬಾಲಿಸಿ ಹೊರಟರು. ಆ ಕೃಷ್ಣನ ಪ್ರಕಾಶಕ್ಕೆ ಕಣ್ಣು ಕೋರೈಸಿದ ಅವರು ಮುಂದೆ ಹೋಗಲಾರದೆ, ತಮ್ಮ ಯೋಗ್ಯತೆಗೆ ಎಟುಕುವಷ್ಟು ದೂರ ಹಿಂಬಾಲಿಸಿ, ಧ್ಯಾನಿಸುತ್ತಾ ನಿಂತುಕೊಂಡರು. ಗರುಡಶೇಷರುದ್ರರಿಂದ ಹಿಂಬಾಲಿಸಲ್ಪಟ್ಟು ಕೃಷ್ಣನ ಹಿಂದೆ ಸಾಗಿದ ಶ್ರೀಬ್ರಹ್ಮದೇವರು ತನ್ನ ಧಾಮವನ್ನು ಪ್ರವೇಶಿಸಿದ ಕೃಷ್ಣನನ್ನು ನಮಸ್ಕರಿಸಿದರು. ಗರುಡಶೇಷರುದ್ರರನ್ನು ಬಿಟ್ಟು ಒಬ್ಬರೇ ಅವನ ಬಳಿಗೆ ತೆರಳಿ ಅವನಿಂದ ಆಲಿಂಗಿಸಲ್ಪಟ್ಟರು ; ಏಕಾಂತದಲ್ಲಿ ಸ್ತುತಿಸಿ ಮಾತನಾಡಿದರು.

ತನ್ನ ಮೂಲರೂಪದೊಂದಿಗೆ ಐಕ್ಯವನ್ನು ಹೊಂದಿದ ಕೃಷ್ಣನು ಸ್ವೇಚ್ಛೆಯಿಂದ ಕ್ರೀಡಿಸಿದ. ಲಕ್ಷ್ಮೀ ಬ್ರಹ್ಮ ಮೊದಲಾದ ಮುಕ್ತರಿಂದ ಪೂಜಿತನಾಗಿ ವಿಹರಿಸಿದ. ಗರುಡಶೇಷರುದ್ರರೊಂದಿಗೆ ಸೇರಿ ತನ್ನ ಲೋಕಕ್ಕೆ ಮರಳಿದ ಬ್ರಹ್ಮದೇವರು, ಅಲ್ಲಿದ್ದ ಕೃಷ್ಣನ ರೂಪವನ್ನು ಕಾಣುತ್ತಾ, ಪೂಜಿಸಿದರು. ಉಳಿದ ದೇವತೆಗಳು ಸೂರ್ಯಬಿಂಬದಲ್ಲಿನ ಕೃಷ್ಣರೂಪವನ್ನು ಕಾಣುತ್ತಾ ಸ್ತುತಿಸಿದರು. ಪ್ರಾದುರ್ಭಾವಗಳಲ್ಲಿ ಆ ಮೊದಲು ಎಂದೂ ಭ್ರಾಂತಿಯನ್ನು ದೇಹತ್ಯಾಗದ ಸಮಯದಲ್ಲಿ ತೋರಿಸಿರಲಿಲ್ಲವಾದ್ದರಿಂದ ಕೃಷ್ಣನು, ಈಗ ಅಸುರರನ್ನು ಮೋಹಿಸಿ ಅಂಧಂತಮಸ್ಸಿಗೆ ಕಳುಹಿಸುವ ಉದ್ದೇಶದಿಂದ, ಚಿದಾನಂದೈಕದೇಹನಾದರೂ, ತನ್ನ ದೇಹದಂತಹ [೧]ಮತ್ತೊಂದು ದೇಹವನ್ನು ಹಾಗೆ ಸೃಷ್ಟಿಮಾಡಿ ಮಲಗಿಸಿ ಗಗನಕ್ಕೆ ತೆರಳಿದ.

## ಅರ್ಜುನನ ಆಗಮನ

ಹಾಗೆ ಸೃಷ್ಟಿಸಿದ್ದ ದೇಹವನ್ನು ದಾರುಕನ ಮಾತಿನಿಂದ ಅಲ್ಲಿಗೆ ಬಂದ ಅರ್ಜುನನು ದಹನ ಮಾಡಿದ[೨]; ಬಲರಾಮ ಮೊದಲಾದ ಪ್ರಧಾನರ ದೇಹಗಳನ್ನೂ ದಹನ ಮಾಡಿದ. ದಾರುಕನು

---

೧. ತನ್ನರೂಪವನ್ನುಹೋಲುವ ದೇಹವೊಂದನ್ನು ಕೃಷ್ಣಸೃಷ್ಟಿಸಿದ ಈ ಪ್ರಸಂಗ, ರಾಮಾಯಣದಲ್ಲಿನ ಸೀತಾದೇವಿಯು ತನ್ನ ಆಕೃತಿಯನ್ನು ರಾವಣನ ಅಪಹಾರಕ್ಕೆಂದು ಸೃಷ್ಟಿಸಿದ ಪ್ರಸಂಗವನ್ನು ಹೋಲುವುದು. ಅದನ್ನೇ ನಿಜವಾದ ಸೀತೆ ಎಂದು ರಾವಣಾದಿಗಳು ನಂಬಿದಂತೆ, ಕೃಷ್ಣನು ಸೃಷ್ಟಿ ಮಾಡಿದ ಕೃತಕದೇಹವನ್ನೇ ಜನ ನಿಜದೇಹವೆಂದು ಭಾವಿಸಿ, ಅವನು ನಾಶ ಹೊಂದಿದ ಎಂದು ಭ್ರಾಂತರಾದರು. ಇದು ಶ್ರೀಹರಿ ಹಾಗೂ ಅವನ ಪತ್ನಿಯಾದ ಮಹಾಲಕ್ಷ್ಮಿ – ಇಬ್ಬರೂ ಸಹ ಅಸುರಮೋಹನ ಮಾಡುವ ಪರಿಗೆ ಒಂದು ನಿದರ್ಶನ.

೨. ಈ ಸ್ಥಳವು ಇಂದು ಪ್ರಭಾಸಕ್ಷೇತ್ರದಲ್ಲಿ ಹಿರಣ್ಯಾನದಿಯ ತೀರದಲ್ಲಿ 'ದೇಹೋತ್ಸರ್ಗತೀರ್ಥ' ಎಂದು ಪ್ರಸಿದ್ಧವಾಗಿದೆ. ಅದನ್ನು ಕೃಷ್ಣನ ನಿಜವಾದ ದೇಹ ದಹನವಾದ ಸ್ಥಳ ಎಂದು ತಪ್ಪು ತಿಳಿಯದೆ, ಕೃತಕದೇಹ ದಹನವಾದ ಸ್ಥಳ ಎಂದು ಸರಿಯಾಗಿ ತಿಳಿಯುವುದು ತಾರಕ.

ಮೊದಲಿನಂತೆಯೇ ವಿಷ್ಣುಲೋಕವನ್ನು ಸೇರಿಕೊಂಡ. ಅಸುರಜನರ ಮೋಹನಕ್ಕೆಂದು ರುಗ್ಮಿಣಿಯು ಅಗ್ನಿಯಲ್ಲೂ, ಸತ್ಯಭಾಮೆಯು ತಪಸ್ಸಿನ ಮೂಲಕವೂ ಮರೆಯಾಗಿ ಶ್ರೀಹರಿಯ ಇಕ್ಕೆಲಗಳಲ್ಲಿ ಶೋಭಿಸಿದರು. [೧]ಅವರಿಬ್ಬರೂ ಚಿದಾನಂದೈಕದೇಹದ ಲಕ್ಷ್ಮಿಯ ರೂಪವೇ ಆದರೂ, ಕೃಷ್ಣನಂತೆಯೇ ಜನರನ್ನು ಮೋಹಿಸುವ ಸಲುವಾಗಿ ಹಾಗೆ ಮಾಡಿದರು. ಉಳಿದ ಆರು ಜನ ಮಹಾಮಹಿಷಿಯರಲ್ಲಿ ಕೆಲವರು ಅಗ್ನಿಯಲ್ಲೂ, ಮತ್ತೆ ಕೆಲವರು ತಪಸ್ಸಿನಿಂದಲೂ ದೇಹವನ್ನು ತ್ಯಜಿಸಿ, ಹರಿಯನ್ನು ಸೇರಿಕೊಂಡರು. ಪತಿವ್ರತೆಯರಾದ, ಬಲರಾಮ ಮೊದಲಾದವರ ಪತ್ನಿಯರು ಅಗ್ನಿಯಲ್ಲಿ ದೇಹವನ್ನು ತೊರೆದು, ತಮ್ಮ ತಮ್ಮ ಪತಿಗಳನ್ನೇ ಸೇರಿದರು. ವಸುದೇವನು ಅರ್ಜುನನ ಮುಖದಿಂದ ಈ ವಾರ್ತೆಯನ್ನು ಕೇಳಿ ಯೋಗಾರೂಢನಾಗಿ ದೇಹವನ್ನು ತ್ಯಜಿಸಿ, ಕೃಷ್ಣನ ಮೇಲಿನ ಅನುರಾಗದಿಂದಾಗಿ ಕಶ್ಯಪತ್ವವನ್ನು ಪಡೆದ. ಅರ್ಜುನನು ಅಶ್ವಮೇಧಾಗ್ನಿಯಲ್ಲಿ ಅವನ ಅಂತ್ಯಕರ್ಮವನ್ನು ನೆರವೇರಿಸಿದ. ವಸುದೇವನ ಪತ್ನಿಯರು ಬೆಂಕಿಯಲ್ಲಿ ತಮ್ಮ ದೇಹವನ್ನು ತ್ಯಜಿಸಿ ಅವನನ್ನೇ ಸೇರಿದರು. ಸ್ತ್ರೀಯರನ್ನೂ, ಬಾಲಕರನ್ನೂ ಕರೆದುಕೊಂಡು, ಧನವನ್ನೂ ತೆಗೆದುಕೊಂಡು ಅರ್ಜುನನು ದ್ವಾರಾವತಿಯಿಂದ ಹೊರಟ ; ದ್ವಾರಾವತಿಯನ್ನು ಸಾಗರ ನುಂಗಿತು.

## ಅರ್ಜುನನ ಪರಾಭವ

ಅರ್ಜುನನು ಸ್ತ್ರೀಯರು ಹಾಗೂ ಬಾಲಕರೊಂದಿಗೆ ಹೋಗುತ್ತಿದ್ದಾಗ ಹಾದಿಯಲ್ಲಿ ಪಾಪಿಗಳಾದ ಆಭೀರರು ಶಾಪಕ್ಕೊಳಗಾಗಿದ್ದ ಸ್ತ್ರೀಜನರನ್ನು ಅಪಹರಿಸಿದರು. ಹದಿನಾರುಸಾವಿರದ ನೂರು ಜನ ಕೃಷ್ಣಪತ್ನಿಯರು, ದರ್ಪದ ಕಾರಣದಿಂದಾಗಿ, ಕೃಷ್ಣನ ಶಾಪದಿಂದ ಮ್ಲೇಚ್ಛರ ವಶರಾದರು. ಧನ ಹಾಗೂ ಸ್ತ್ರೀಯರು ಮ್ಲೇಚ್ಛರಿಂದ ಅಪಹರಿಸಲ್ಪಡುತ್ತಿದ್ದಾಗ ಯುದ್ಧ ಮಾಡಲು ಹೊರಟ ಅರ್ಜುನನಿಗೆ ಗಾಂಡೀವದ ಹೆದೆ ಏರಿಸುವುದೂ ಸಹ ಕಷ್ಟವೇ ಆಯಿತು.

---

೧. ರುಗ್ಮಿಣೀ ಹಾಗೂ ಸತ್ಯಭಾಮೆ – ಇಬ್ಬರೂ ಸಹ ಸಾಕ್ಷಾತ್ ಮಹಾಲಕ್ಷ್ಮಿಯ ಶ್ರೀರೂಪ ಹಾಗೂ ಭೂರೂಪದ ಅವತಾರ. ನಾರಾಯಣನಂತೆ ಅವರಿಗೂ ಸಹ ಪ್ರಾಕೃತದೇಹ ಸರ್ವಥಾ ಇಲ್ಲ. ಆದ್ದರಿಂದಾಗಿ ಅವರಿಗೆ ದೇಹವಿಯೋಗದ ಪ್ರಸಕ್ತಿಯೇ ಉದ್ಭವಿಸದು. ರುಗ್ಮಿಣಿಯು ಅಗ್ನಿಯಲ್ಲಿ ಪ್ರವೇಶಿಸುವಂತೆ ಮಾಡಿ ಅಂತರ್ಧಾನಳಾದಳು ಎಂಬ ಪ್ರಸಂಗ ಋಷಭರೂಪದ ಶ್ರೀಹರಿಯು ಕಾಡ್ಗಿಚ್ಚಿನಲ್ಲಿ ಅಂತರ್ಧಾನನಾದ ಶ್ರೀಮದ್ಭಾಗವತದ ಪಂಚಮಸ್ಕಂಧದ ಪ್ರಸಂಗವನ್ನು ಹೋಲುವುದು. ಸೀತಾರೂಪದಲ್ಲೂ ಸಹ ಮಹಾಲಕ್ಷ್ಮಿಯು ಭೂಮಿಯನ್ನು ಪ್ರವೇಶ ಮಾಡಿ ಅಂತರ್ಧಾನಳಾದ ವಿವರ ರಾಮಾಯಣದಲ್ಲಿ ಬಂದಿದೆ. ಶ್ರೀಕೃಷ್ಣನು ಕೃತಕದೇಹವನ್ನು ಸೃಷ್ಟಿಸಿ ದೇಹತ್ಯಾಗದ ನಟನೆಯನ್ನು ಮಾಡಿ ಅಸುರಮೋಹನವನ್ನು ಮಾಡಿದಂತೆ, ರುಗ್ಮಿಣೀ ಸತ್ಯಭಾಮೆಯರು ಅಗ್ನಿಪ್ರವೇಶ ಹಾಗೂ ವನಪ್ರವೇಶಗಳ ಮೂಲಕ ಅಸುರಮೋಹನ ಮಾಡಿದರು ಎಂದು ತಿಳಿಯಬೇಕು :

'ಅಗ್ನಾವಂತರ್ದಧೇ ಭೈಷ್ಮೀ ಸತ್ಯಭಾಮಾ ವನೇ ತಥಾ ।
ನ ತು ದೇಹವಿಯೋಗೋಽಸ್ತಿ ತಯೋಃ ಶುದ್ಧಚಿದಾತ್ಮನೋಃ' ಇತಿ ಚ ॥

–ಭಾಗವತತಾತ್ಪರ್ಯ(೧೧/೩೧/೧೯-೨೦)

ಅವನ ಬಾಣಗಳೆಲ್ಲ ಕ್ಷಯಿಸಿ ಹೋದವು. ದೈವಪ್ರಭಾವದಿಂದಾಗಿ ಅಸ್ತ್ರಗಳು ನೆನಪಿಗೆ ಬಾರದಾದವು[೧]. ಅದೆಲ್ಲ ದೈವಕೃತವೆಂದು ತಿಳಿದ ಅರ್ಜುನನು ಕೃಷ್ಣನನ್ನು ಸ್ಮರಿಸುತ್ತಾ ಶತ್ರುಗಳನ್ನು ಗಾಂಡೀವದಿಂದಲೇ ಹೊಡೆಯುತ್ತಾ ಉಳಿದವರೊಂದಿಗೆ ಕುರುಕ್ಷೇತ್ರಕ್ಕೆ ಹೊರಟ. ಆಗ ಕುರುಕ್ಷೇತ್ರದಲ್ಲಿದ್ದ ಜಗದ್ಗುರುವೂ, ಸುಪೂರ್ಣ ಬಲಸಾಗರನೂ, ಮಹಾನಂದಪರಿಪೂರ್ಣನೂ ಆದ ಆ ವ್ಯಾಸರೂಪಿಯಾದ ಹರಿಯನ್ನು ನೋಡಿ, ಅರ್ಜುನನು ದುಃಖದಿಂದ ಅವರ ಪಾದಗಳ ಮೇಲೆ ಬಿದ್ದ. ಜ್ಞಾನಸೂರ್ಯರಾದ ಅವರಿಂದ ಯುಕ್ತಿಗಳಿಂದ ತಿಳಿಹೇಳಲ್ಪಟ್ಟ ಪಾರ್ಥನು, ಮತ್ತೆ ಸಮಾಧಾನ ಹೊಂದಿದವನಾಗಿ, ಶೋಕವನ್ನು ತೊರೆದ. ಮ್ಲೇಚ್ಛರಿಂದ ಅಪಹರಿಸಲ್ಪಟ್ಟ [೨]ಸ್ತ್ರೀಯರು ಕೃಷ್ಣನಿಂದ ಕಳುಹಿಸಲ್ಪಟ್ಟ ದಾಲ್ಭ್ಯಮುನಿಯಿಂದ ಗೋವಿಂದೈಕಾದಶಿಯನ್ನು ತಿಳಿದು ಅದನ್ನು ಆಚರಿಸಿ, ವಾಯುವಿನ ಮಾತಿನಂತೆ, ಸರಸ್ವತೀನದಿಯ ನೀರಿನಲ್ಲಿ ಮುಳುಗಿ, ದೇಹವನ್ನು ಬಿಟ್ಟು ಸ್ವರ್ಗವನ್ನು ಸೇರಿದರು.

ಅರ್ಜುನನು ಕುರುಕ್ಷೇತ್ರ ಹಾಗೂ ಸಾರಸ್ವತರಾಜ್ಯಗಳಲ್ಲಿ ಕೃತವರ್ಮ ಸಾತ್ಯಕಿಯರ ಮಕ್ಕಳನ್ನು ರಾಜರನ್ನಾಗಿ ಅಭಿಷೇಕ ಮಾಡಿದ ; ಅನಿರುದ್ಧನ ಮಗನೂ ಕೃಷ್ಣಪ್ರಿಯನೂ ಆದ ಗುಣವಂತನಾದ ವಜ್ರನನ್ನು ಶೂರಸೇನದೇಶ ಹಾಗೂ ಇಂದ್ರಪ್ರಸ್ಥಗಳ ರಾಜನನ್ನಾಗಿ ಅಭಿಷೇಕಿಸಿದ. ಸ್ತ್ರೀಯರನ್ನೂ, ಬಾಲರನ್ನೂ, ಧನವನ್ನೂ ವಜ್ರನಿಗೆ ಒಪ್ಪಿಸಿ, ಸೋದರರ ಬಳಿಗೆ ತೆರಳಿ, ಅವರಿಗೆ ಎಲ್ಲ ವಿಷಯವನ್ನು ವಿವರವಾಗಿ ತಿಳಿಸಿದ.

★★★★★

---

೧. ಇದು ಅಂತ್ಯಕಾಲದಲ್ಲಿ ಕರ್ಣನಿಗೆ ಪರಶುರಾಮರ ಶಾಪದಿಂದ ಅಸ್ತ್ರಗಳು ಮರೆತುಹೋದ ಪ್ರಸಂಗವನ್ನು ಜ್ಞಾಪಿಸುವಂತಿದೆ. ಕರ್ಣನಿಗೆ ಹಾಗಾಗಲು ಪರಶುರಾಮರ ಶಾಪ ಕಾರಣವಾಗಿದ್ದರೆ, ಮತ್ತೊಂದೆಡೆ ಅರ್ಜುನನಿಗೆ ಶ್ರೀಕೃಷ್ಣನ ರಕ್ಷಣೆ ಇಲ್ಲದ್ದು ಕಾರಣವಾಯಿತು. ಅದರೊಂದಿಗೆ ಕೃಷ್ಣಪತ್ನಿಯರಿಗಿದ್ದ ಕೃಷ್ಣನ ಶಾಪವು ಸಹ ಕಾರಣವಾಗಿದ್ದಿತು ಎಂಬುದು ವಿಶೇಷ; ತಾನು ಭೂಮಿಯಲ್ಲಿ ನೆಲೆಸಿರುವವರೆಗೆ ಅರ್ಜುನನಿಗೆ ಸೋಲುಂಟಾಗದು ಎಂದು ಶ್ರೀಕೃಷ್ಣನು ಇಂದ್ರನಿಗೆ ನೀಡಿದ್ದ ಮಾತಿನ(ಪು.೧೩೮) ಮರ್ಮವೂ ಸಹ ಇದರಿಂದ ತಿಳಿಯುವುದು.

೨. ಹೀಗೆ ಆಭೀರರ ವಶರಾದ ಹದಿನಾರುಸಾವಿರದ ನೂರು ಜನ ಕೃಷ್ಣಪತ್ನಿಯರು ಅಗ್ನಿಯ ಪುತ್ರರು ; ಎಂದರೆ ಸ್ವರೂಪತಃ ಸ್ತ್ರೀಯರೇ ಅಲ್ಲ ಎಂಬುದು ಗಮನಿಸಬೇಕಾದ ಅಂಶ.

# ಮಹಾಪ್ರಸ್ಥಾನ ಪರ್ವ

## ಪಾಂಡವರ ಮಹಾಪ್ರಸ್ಥಾನ

ಕೃಷ್ಣನೊಂದಿಗೆ ಮಾಡಿಕೊಂಡಿದ್ದ [೧]ನಿಯಮವನ್ನು ಸ್ಮರಿಸಿಕೊಂಡ ಅವರು ಭಾಗವತನಾದ ಪರೀಕ್ಷಿತ್ತನನ್ನು ಮಹಾರಾಜ್ಯದಲ್ಲಿ ಅಭಿಷೇಕಿಸಿ, ಸ್ತ್ರೀಯರನ್ನು ಅಪಹರಿಸಿದ ಮ್ಲೇಚ್ಛರನ್ನು ಸಂಹರಿಸುವ ಕಾರ್ಯವನ್ನು ಅವನಿಗೆ ಒಪ್ಪಿಸಿದರು. ತಾತಂದಿರು ವಹಿಸಿದ ಆ ಕಾರ್ಯಭಾರವನ್ನು ಅವನು ಮುಂದೆ ಪೂರೈಸಿದ. ಕಾಲವನ್ನು ಇದಿರು ನೋಡುತ್ತಿದ್ದುದರಿಂದ ಪಾಂಡವರೇ ಆ ಕೆಲಸವನ್ನು ಮಾಡಲಿಲ್ಲ. ವಾಸುದೇವನ ಪಾದಸ್ಪರ್ಶದಿಂದ ಕೂಡಿದ್ದ ಭೂಮಿಯ ಕಂಟಕವನ್ನು ಪರಿಹರಿಸುವುದು ಮಾತ್ರವೇ ಪಾಂಡವರ ಪಾಲಿನ ಕರ್ತವ್ಯವಾಗಿತ್ತು. ಅದನ್ನು ನಡೆಸುವುದೇ ಅವರ ಶ್ರೇಷ್ಠ ಧರ್ಮವಾಗಿತ್ತು. ವಿಶ್ವೇಶನನ್ನು ಅನುಸರಿಸುತ್ತಿರುವ ತಮ್ಮಿಂದ ಅವನಿಲ್ಲದ ಭೂಮಿಯು ಭೋಗ್ಯವೂ ಅಲ್ಲ, ರಕ್ಷಣೀಯವೂ ಅಲ್ಲ ಎಂಬುದಾಗಿ ಅವರು ಆ ಹಿಂದೆ ನಿಯಮವನ್ನು ಮಾಡಿಕೊಂಡಿದ್ದರು. ಆಗ ಭೀಮಪತ್ನಿಯಾದ ಕಾಳಿಯು ವೈಷ್ಣವಯೋಗದಿಂದ, ಮಾನುಷ-ದೇಹವನ್ನು ತ್ಯಜಿಸಿದ, ದ್ರೌಪದಿಯಲ್ಲಿ ಐಕ್ಯಹೊಂದಿದಳು[೨]. ಸುಭದ್ರೆ ಮೊದಲಾದ ಪಾಂಡವರ ಪತ್ನಿಯರು ಅವರ ಅಪ್ಪಣೆಯಂತೆ, ಮೊಮ್ಮಗನಾದ ಪರೀಕ್ಷಿದ್ರಾಜನಿಗೆ ಮಾರ್ಗದರ್ಶನ ಮಾಡಲೆಂದು ಹಸ್ತಿನಾಪುರದಲ್ಲೇ ನೆಲೆಸಿದರು. ಯುಯುತ್ಸುವೂ ಅವರೊಂದಿಗೇ ಉಳಿದ.

ರಾಜಚಿಹ್ನೆಗಳನ್ನು ತೆಗೆದಿರಿಸಿ, ವೈಷ್ಣವಯೋಗವನ್ನು ಆಶ್ರಯಿಸಿ, ಪಾಂಡವರು ದ್ರೌಪದಿ-ಯೊಂದಿಗೆ [೩]ಮಹಾಪ್ರಸ್ಥಾನವನ್ನು ಕೈಗೊಂಡರು. ಮೊದಲಿಗೆ ಉತ್ತರದಿಕ್ಕಿಗೂ, ಅಲ್ಲಿಂದ ಪೂರ್ವ-ದಿಕ್ಕಿಗೂ ಹೊರಟರು. ಅರ್ಜುನನು ಲೋಭದಿಂದಾಗಿ ಗಾಂಡೀವಧನುಸ್ಸನ್ನು ಹಿಂದಿರುಗಿಸಿರಲಿಲ್ಲ. ಅದನ್ನು ನೋಡಿ ಸಮುದ್ರದ ಬಳಿ ಅಗ್ನಿಯು ಧರ್ಮರಾಜನನ್ನು ಬೇಡಿಕೊಳ್ಳಲು, ಅವನ ಅಪ್ಪಣೆ-ಯಂತೆ ಅರ್ಜುನನು ಅದನ್ನು ಸಾಗರದಲ್ಲಿ ಹಾಕಿದ. ವರುಣನಿಂದ ಎರವಲು ತಂದಿದ್ದ ಧನುಸ್ಸನ್ನು ಹೀಗೆ ಮರಳಿ ಸಮುದ್ರದ ಮೂಲಕ ಅವನಿಗೇ ಹಿಂದಿರುಗಿಸಿ ಅಗ್ನಿಯು ತನ್ನ ಋಣವನ್ನು ಪರಿಹರಿಸಿಕೊಂಡು ಅದೃಶ್ಯನಾದ. ಅವರು ಬೇಗನೇ ಸಪ್ತಸಾಗರಗಳನ್ನು ದಾಟಿ ತೆರಳಿದರು.

★★★★★

---

೧. ಕೃಷ್ಣನು ಪರಂಧಾಮಕ್ಕೆ ತೆರಳಿದೊಡನೆಯೇ ತಾವೂ ಸಹ ಇಹಲೋಕದ ವ್ಯಾಪಾರವನ್ನು ತೊರೆಯುವುದಾಗಿ ಪಾಂಡವರು ಮಾಡಿಕೊಂಡಿದ್ದ ನಿಯಮ ಎಂದರ್ಥ.

೨. ಇದು ವಿದುರನು ಯುಧಿಷ್ಠಿರನಲ್ಲಿ ಐಕ್ಯಹೊಂದಿದ ಪ್ರಸಂಗದಂತಿದೆ. ಭೂಮಿಯಲ್ಲಿ ಒಂದಕ್ಕಿಂತ ಹೆಚ್ಚಿನ ರೂಪದಲ್ಲಿ ಅವತರಿಸಿದ ದೇವತೆಗಳು ಹೀಗೆ ತಾವು ಮೊದಲು ತೊರೆಯುವ ದೇಹದಿಂದ ನೆಲೆಸಿರುವ ಮತ್ತೊಂದು ರೂಪದಲ್ಲಿ ಐಕ್ಯ ಹೊಂದುವುದು ಶಾಸ್ತ್ರವಿಹಿತ ಕ್ರಮ. ಶ್ರೀಕೃಷ್ಣನಿಂದ ವೃಂದಾವನದಲ್ಲಿಯೇ ವಿವಾಹಿತಳಾಗಿದ್ದ ನೀಲಾದೇವಿ, ಮುಂದೊಮ್ಮೆ ತನ್ನ ಮತ್ತೊಂದು ನೀಲಾರೂಪದೊಂದಿಗೆ ಕೃಷ್ಣನನ್ನು ವಿವಾಹವಾದ ಬಳಿಕ ತನ್ನ ಮೊದಲ ರೂಪವನ್ನು ಆ ರೂಪದಲ್ಲಿ ಐಕ್ಯಗೊಳಿಸಿದ ವಿವರವೂ ಇಂತಹುದೇ ಆಗಿದೆ.

೩. ಮಹಾಪ್ರಸ್ಥಾನ ಎಂದರೆ ದೇಹ ತೊರೆಯಲೆಂದು ಅನ್ನ ನೀರುಗಳನ್ನು ತೊರೆದು ದೇಹ ಬೀಳುವವರೆಗೂ ಸಹ ಸತತವಾಗಿ ಸಂಚರಿಸುವುದು ಎಂದರ್ಥ ; ವೀರಾಧ್ವಾನ ಎಂದೂ ಇದಕ್ಕೆ ಹೆಸರು.

# ಸ್ವರ್ಗಾರೋಹಣ ಪರ್ವ

## ಪಾಂಡವರ ಸ್ವರ್ಗಾರೋಹಣ

ಯೋಗಬಲದಿಂದ ಏಳುದಿನಗಳಲ್ಲಿ ಅವರು ಭೂಪ್ರದಕ್ಷಿಣೆಯನ್ನು ಮಾಡಿ, ಗಂದಮಾಧನ-ವನ್ನು ತಲುಪಿದರು. ಅಲ್ಲಿ ನಾರಾಯಣಕ್ಷೇತ್ರದಲ್ಲಿ ದ್ರೌಪದೀ ಸಹದೇವಾದಿ ಐವರ ಶರೀರಗಳು ಕ್ರಮವಾಗಿ [೧]ಬಿದ್ದವು[೨]. ಆಗ ಭೀಮನು - 'ಸಶರೀರರಾಗಿ ಸ್ವರ್ಗಸ್ಥರಾಗಬಯಸದೆ ಅವರು ಸ್ವೇಚ್ಛೆಯಿಂದ ದೇಹಬಿಟ್ಟರು' ಎಂಬ ವಿಷಯವನ್ನು ಸರಿಯಾಗಿ ತಿಳಿದಿದ್ದರೂ, ಧರ್ಮರಾಜನನ್ನು ಕುರಿತು - "ಅವರೆಲ್ಲರ ದೇಹಗಳು ಯಾವ ದೋಷದಿಂದಾಗಿ ಬಿದ್ದವು ?" ಎಂದು ಕೇಳಿದ. 'ಮೃತಿಕಾಲದಲ್ಲಿ ಯಾರು ಯಾರ ದೋಷಗಳನ್ನು ಹೇಳುವರೋ ಅವರಿಗೆ ಅವರಿಂದ ಋಣ-ಮುಕ್ತಿಯಾಗುವುದು' ಎಂಬುದಾಗಿ ಶ್ರುತಿಯೇ ಇದೆ. ಎಲ್ಲರ ಋಣವನ್ನೂ ಮೋಚನ ಮಾಡಿಸುವ ಉದ್ದೇಶದಿಂದ ಭೀಮನು ದೋಷಗಳನ್ನು ಧರ್ಮರಾಜನಿಂದಲೇ ಹೇಳಿಸಿದ. ಪರಿಶುದ್ಧಕಾರ್ಯವನ್ನೆಸಗುವ ಅವರು ಸ್ವ ಇಚ್ಛೆಯಿಂದಲೇ ದೇಹತೊರೆದರೆಂಬ ಅಂಶವನ್ನು ತಿಳಿಯದೆ, ಬೇರಾವ ಕಾರಣವನ್ನೂ ಕಾಣದೆ, ಕಾರಣವಿಲ್ಲದೆ ಕಾರ್ಯವಿರಲಾರದು ಎಂಬ ಕೇವಲ ಊಹೆಯಿಂದ ಯುಧಿಷ್ಠಿರ ದೋಷಗಳನ್ನು ಹೇಳುತ್ತಾ ಹೋದ. "ಪಾಂಡವರು [೩]ಸ್ವಚ್ಛಂದಮೃತ್ಯುಗಳು ; ಅವರು ಯೋಗದಿಂದ ದೇಹವನ್ನು ಬಿಟ್ಟು ಹೊರಟರು. ದ್ರೌಪದಿಯೂ ಸಹ ಆ ರೀತಿ ಸ್ವೇಚ್ಛೆಯಿಂದಲೇ ದೇಹವನ್ನು ತೊರೆದಳು. ಅವರೆಲ್ಲರು ದೇವತೆಗಳೂ ಸಹ ಹೊಂದಲಾಗದ ಉತ್ತಮ ಸ್ಥಾನವನ್ನು ಹೊಂದಿದರು" ಎಂಬ ಶ್ರುತಿ ಇದೆ; ಆದ್ದರಿಂದ ಶ್ರೇಷ್ಠರಾದ ಪಾಂಡವರು ಪಾಪದಿಂದಾಗಿ ದೇಹಗಳನ್ನು ಬಿಟ್ಟರೆಂಬುದು ಸರಿಯಲ್ಲ. ಹೀಗೆ ತನ್ನವರ ಋಣಗಳನ್ನು ದೋಷೋಕ್ತಿಯಿಂದ ಪರಿಹರಿಸಿದ ಭೀಮನು, ತನ್ನ ದೇಹವನ್ನು ತ್ಯಜಿಸಿ, ಕೃಷ್ಣನನ್ನು ಧ್ಯಾನಿಸುತ್ತಾ ಉತ್ತಮಸ್ಥಾನವನ್ನು ಹೊಂದಿದ ಎಂಬುದಾಗಿ ಋಷಿಗಳಿಗೆ ವ್ಯಾಸರು ಹೇಳಿದ ಮಾತು ಸ್ಕಂದಪುರಾಣದಲ್ಲಿದೆ.

---

೧. ದ್ರೌಪದಿಯು ದೇಹತೊರೆದ ಸ್ಥಳವು ಕೇಶವಪ್ರಯಾಗದ ಬಳಿ ಮಾತಾಮಂದಿರ ಎಂಬುದಾಗಿಯೂ, ಸಹದೇವನು ದೇಹತೊರೆದ ಸ್ಥಳವು ಸಹಸ್ರಧಾರಾ, ನಕುಲನು ದೇಹತೊರೆದ ಸ್ಥಳವು ಲಕ್ಷ್ಮೀವನ, ಅರ್ಜುನನು ದೇಹತೊರೆದ ಸ್ಥಳವು ಚಕ್ರತೀರ್ಥ, ಭೀಮನು ದೇಹತೊರೆದ ಸ್ಥಳವು ಸತೋಪಂಥ್ ಎಂದೂ ಬದರೀಕ್ಷೇತ್ರದಲ್ಲಿ ಇಂದಿಗೂ ಪ್ರಸಿದ್ಧವಾಗಿವೆ.

೨. ದ್ರೌಪದಿ ಮೊದಲಾದವರು ದೇಹವನ್ನು ತೊರೆದದ್ದು ಸ್ವೇಚ್ಛೆಯಿಂದ ; ಯುಧಿಷ್ಠಿರ ಅದನ್ನು ಗಮನಿಸದೆ ಯಾವುದೋ ದೋಷದಿಂದ ಅವರು ಮರಣಿಸಿದರು ಎಂದು ಭಾವಿಸಿ ತನಗೆ ತೋಚಿದ ಕಾರಣಗಳನ್ನು ಮುಂದಿಟ್ಟ ಎಂಬುದು ಇಲ್ಲಿಯ ಭಾವ.

೩. ಪಾಂಡವರಂತಹ ಮಹಾತ್ಮರಿರಲಿ, ಶಂತನು ಮೊದಲಾದ ಮಹನೀಯರು ಸಹ ಇಚ್ಛಾಮರಣಿಗಳಾಗಿದ್ದ ವಿವರ ಈಗಾಗಲೇ ಬಂದಿದೆ(ಪುಟ ೯). ಅಲ್ಲದೆ ಆ ಕಾಲಕ್ಕೆ ಧರ್ಮಿಷ್ಠರಾದ ಹೆಚ್ಚಿನ ಜನರು ಸಾಮಾನ್ಯವಾಗಿ ಸ್ವೇಚ್ಛಯಿಂದಲೇ ದೇಹತೊರೆಯುತ್ತಿದ್ದರು ಎಂಬುದು ಹಿಂದೆಯೇ ನಿರೂಪಿತವಾಗಿದೆ(ಪುಟ ೯).

# ಪಾಂಡವರದು ಇಚ್ಛಾಮರಣ

ಭೀಮನನ್ನು ಬಿಟ್ಟು ಉಳಿದ ನಾಲ್ವರಲ್ಲಿ ಅರ್ಜುನನ ಮೇಲೆ ದ್ರೌಪದಿಗೆ ಪಕ್ಷಪಾತವಿದ್ದುದು ಯೋಗ್ಯವೇ ; ಆದ್ದರಿಂದ ಅದು ಆವಳ ದೋಷವಲ್ಲ. ಆ ನಾಲ್ವರು ಪಾಂಡವರಲ್ಲಿ ಕ್ರಮವಾಗಿ ನೀತಿ, ರೂಪ, ವೀರ್ಯ, ಬಲಗಳು ಕ್ರಮವಾಗಿ ಪ್ರಾಕೃತಪ್ರಪಂಚದ ದೃಷ್ಟಿಯಿಂದ ಅಧಿಕವೇ ಆಗಿದ್ದರಿಂದ, ಅದೂ ದೋಷವಲ್ಲ. ಪ್ರಾಣರೂಪಿಯಾದ ಭೀಮನಿಗೆ ಅಪಾರ ಭೋಗಶಕ್ತಿಯೂ ಸಹ ದೋಷವಾಗಿರಲಿಲ್ಲ. 'ತನ್ನ ಸ್ವರೂಪದ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಹೊಂದಿರುವುದು ದೋಷವಲ್ಲ' ಎಂಬ ವ್ಯಾಸಸ್ಮೃತಿಯ ಮಾತಿನಿಂದ ಅವರೆಲ್ಲರಲ್ಲಿ ಧರ್ಮರಾಜ ಹೇಳಿದ ಯಾವ ದೋಷಗಳೂ ಇರಲಿಲ್ಲ. ಒಮ್ಮೊಮ್ಮೆ ಆ ಮೂವರಿಗೂ ಮಿತಿ ಮೀರಿದ ಅಹಂಕಾರ ಉಂಟಾಗು- ತ್ತಿದ್ದುದು ನಿಜವಾದರೂ, ಈ ರೀತಿಯ ದೇಹತ್ಯಾಗ ಅದರ ಫಲಶ್ರುತಿಯಾಗಿರಲಿಲ್ಲ. ಮುಕ್ತಿ- ಯಲ್ಲಿರತಕ್ಕಂತಹ ತಾರತಮ್ಯವು ಇಲ್ಲಿಯೂ ಸಹ ಗುಣಾಧಿಕ್ಯ ಹಾಗೂ ಅಲ್ಪದೋಷಗಳಿಗೆ ಸೂಚಕವಾಗಿ ಗೋಚರಿಸುವುದು. ಪ್ರಾರಬ್ಧಕರ್ಮವು ನಾಶವಾದ ಮೇಲೆ ಪಾಪವಿಲ್ಲದವನ ದೇಹವೂ ಸಹ ಬಿದ್ದು ಹೋಗುವುದು. ಮುಂದೆ ಯುಧಿಷ್ಠಿರನೂ ಕೂಡ ಅದೇ ಶರೀರದಿಂದಲೇ ಸ್ವರ್ಗವನ್ನು ಅನುಭವಿಸಲಿಲ್ಲ. ಅಹಂಕಾರ ಮೊದಲಾದ ದೋಷಗಳು ಭೀಮನಿಗೆ ಬರುವ ಸಾಧ್ಯತೆಯಾದರೂ ಎಲ್ಲಿದೆ ? ಅನಾದಿಕಾಲದಿಂದಲೂ ಉಳಿದೆಲ್ಲ ದೇವತೆಗಳಿಗಿಂತಲೂ ಸರ್ವ- ದೋಷದೂರರೂ, ಗುಣಾಧಿಕರೂ ಆದವರು ಮಾತ್ರವೇ ವಾಯುಪದವಿಯನ್ನು ಹೊಂದುವರು. 'ಋಜು' ಎಂಬ ಹೆಸರಿನ ಆ ದೇವತೆಗಳು ದೇವತೆಗಳಿಗೂ ದೇವತೆಗಳು. ಅಹಂಕಾರ ಮೊದಲಾದವುಗಳೂ ಭೀಮನಲ್ಲಿಲ್ಲ ಎಂಬುದನ್ನು ಕೃಷ್ಣನೇ ಹೇಳಿರುವನು, "[೧]ಯತ್ಕಿಂಚಾತ್ಮನಿ..." ಇತ್ಯಾದಿಗಳ ಮೂಲಕ. ಯುದ್ಧ ಮಾಡಿದಾಗ ಧರ್ಮಕ್ಕೆ ಅಪಚಾರವಾಯಿತು ಎಂದು ಭಾವಿಸಿದಂತೆಯೇ ಧರ್ಮರಾಜನು ಇಲ್ಲೂ ಸಹ ಅಧರ್ಮದಿಂದ ಅವರ ದೇಹಪಾತವಾಯಿತೆಂದು ತಪ್ಪಾಗಿಯೇ ತಿಳಿದ. ಪೂಜ್ಯರಿಗಿಂತಲೂ ಪೂರ್ವದಲ್ಲಿಯೇ ತಮ್ಮ ದೇಹವನ್ನು ಬಿಡಲು ಬಯಸಿದ ಅವರೆಲ್ಲರು ಸ್ವ ಇಚ್ಛೆಯಿಂದಾಗಿಯೇ ಕ್ರಮವಾಗಿ ದೇಹಗಳನ್ನು ತೊರೆದರೇ ಹೊರತು, ಪಾಪದಿಂದಲ್ಲ ; ಮುಕ್ತಿ ಪಡೆಯುವವರು ಹೇಗೋ, ಹಾಗೆ. ಮುಕ್ತಿ ದೊರೆಯಲು ಆಗುವ ದೇಹಪಾತಕ್ಕೆ ಕಾರಣವಾಗುವುದು ಕರ್ಮಕ್ಷಯವೇ ಹೊರತು ಪಾಪವಲ್ಲ. ಹಾಗೆಂದೇ ಸಕಲಶಾಸ್ತ್ರಗಳಲ್ಲಿ ನಿರ್ಣಯವಾಗಿದೆ.

ಅವರೆಲ್ಲ ತಮ್ಮ ತಮ್ಮ ಲೋಕಗಳನ್ನು ಸೇರಿದ ಮೇಲೆ ಧರ್ಮರಾಜ ಒಬ್ಬನೇ ಮುಂದೆ ಹೊರಟ. ಅವನ ಮುಂದೆ ಒಂದು ದೇವರಥ ಇಳಿಯಿತು. 'ರಥವನ್ನು ಏರು' ಎಂಬುದಾಗಿ ಆ ರಥದಲ್ಲಿ ಕುಳಿತಿದ್ದವನು ಹೇಳಲು, ಅದಕ್ಕೆ ಧರ್ಮರಾಜನು ತನ್ನ ಜೊತೆ ಬಂದಿದ್ದ ನಾಯಿ-

---

೧. ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।
ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥ –ಮ.ಭಾತಾ.ನಿ. (೩೨/೭೫,೭೬)
–ಶ್ರೀಕೃಷ್ಣನು ರಾಯಭಾರಕ್ಕಾಗಿ ಹಸ್ತಿನಾಪುರಕ್ಕೆ ತೆರಳುವ ಮುನ್ನ ಬಂದಿರುವ ಮಾತು ಇದಾಗಿದೆ(ಪುಟ.೨೩೪).

ಯನ್ನೂ ತನ್ನೊಂದಿಗೆ ಕರೆತರಲು ಬಯಸಿದ. ಎಷ್ಟು ರೀತಿಯಲ್ಲಿ ಹೇಳಿದರೂ ಧರ್ಮರಾಜನು ಕೇಳದಿರುವುದನ್ನು ನೋಡಿ, ನಾಯಿಯ ರೂಪದಲ್ಲಿ ಬಂದಿದ್ದ ಯಮಧರ್ಮನು ತನ್ನ ನಿಜರೂಪವನ್ನು ಪ್ರಕಟಪಡಿಸಿದ. ಹೀಗೆ ಧರ್ಮರಾಜನ ಮೂಲಕ ಯಮನು ತನ್ನ ಕೀರ್ತಿಯನ್ನೇ ಬೆಳಗಿಸಿಕೊಂಡ.

## ಮೂಲರೂಪ ಪ್ರಾಪ್ತಿ

ಅನಂತರ [೧]ರಥವನ್ನು ಏರಿದ ಶ್ರೀಹರಿಗೆ ಪ್ರಿಯನಾದ ಧರ್ಮರಾಜನು ಲೋಕಗಳನ್ನು ದಾಟಿ ಮುಂದೆ ಸಾಗುತ್ತಾ , ಎಲ್ಲ ರಾಜರನ್ನೂ ದಾಟಿ, ಮೇಲೆ ಹೊರಟ. ಎಲ್ಲಕ್ಕೂ ಮೇಲೆ ಹೊರಟು, ಇಂದ್ರನ ಲೋಕವನ್ನು ಸೇರಿದ ಮೇಲೆ, 'ಇದೇ ನಿನ್ನ ಸ್ಥಾನ' ಎಂಬುದಾಗಿ ದೇವತೆಗಳು ಅವನಿಗೆ ತಿಳಿಸಿದರು. ಅಲ್ಲಿ ಎಲ್ಲರ ಮೇಲೆ ಸೋದರಸಮೇತನಾಗಿ ಮೆರೆಯುತ್ತಿದ್ದ ದುರ್ಯೋಧನನನ್ನು ಕಂಡ. ಅವನನ್ನು ಕಾಣುತ್ತಲೇ ತನ್ನೆರಡೂ ಕಣ್ಣುಗಳನ್ನು ಮುಚ್ಚಿಕೊಂಡು ಧರ್ಮರಾಜನು ಬಹಳ ಕೋಪದಿಂದ – ''ನನ್ನ ಸೋದರರೆಲ್ಲ ಎಲ್ಲಿರುವರು? ದ್ರೌಪದಿ ಎಲ್ಲಿರುವಳು? ಕರ್ಣಾದಿಗಳೂ ಧೃಷ್ಟದ್ಯುಮ್ನಾದಿ ಬಾಂಧವರೂ ಎಲ್ಲಿರುವರು? ಘಟೋತ್ಕಚ ಮೊದಲಾದ ಪುತ್ರರು, ಯಾದವರೂ ಇಲ್ಲೇಕೆ ಕಾಣುತ್ತಿಲ್ಲ?'' ಎಂದು ಪ್ರಶ್ನಿಸಿದ. ಅದಕ್ಕೆ ದೇವತೆಗಳು 'ಅವರೆಲ್ಲ ತಮ್ಮ ತಮ್ಮ ಕರ್ಮವನ್ನು ಅನುಭವಿಸುತ್ತಿರುವರು, ಅವರಿಂದ ನಿನಗೇನು?' ಎನ್ನಲು, ಧರ್ಮರಾಜನು, ''ಇವನು ಪಾಪಿ ; ಪೃಥ್ವಿಯನ್ನೇ ಹಾಳುಮಾಡಿದವನು. ಎಲ್ಲವನ್ನೂ ತಪ್ಪಾಗಿ ತಿಳಿಯುವವನು, ಮಿತ್ರದ್ರೋಹಿ, ಹರಿವಿಮುಖ, ನಾಸ್ತಿಕ, ಮಹಾವಂಚಕ , ವಿಷ್ಣು ಹಾಗೂ ಅವನ ಭಕ್ತರನ್ನೂ ದ್ವೇಷಿಸುವವನು. ಅಂತಹ ಈ ದುರ್ಯೋಧನನು ಅದು ಹೇಗೆ ಸರ್ವೋತ್ಕೃಷ್ಟ ಸ್ಥಾನವನ್ನು ಗಳಿಸಿದ? ಸರ್ವಧರ್ಮಜ್ಞರು, ನಾರಾಯಣಪರಾಯಣರೂ, ಪರಮಧರ್ಮದಲ್ಲಿ ರತರಾದವರೂ ಆದ ನನ್ನ ಪ್ರೀತಿಪಾತ್ರರೆಲ್ಲ ಏಕೆ ಇಲ್ಲಿ ಕಾಣುತ್ತಿಲ್ಲ ? ಆ ಎಲ್ಲ ಸತ್ಪುರುಷರು ಇರುವ ಸ್ಥಳ ನರಕವಾದರೂ ಸರಿಯೇ, ನಾನು ಅಲ್ಲಿಗೇ ಹೋಗಲು ಬಯಸುವೆನು. ಈ ಪಾಪಿಯೊಂದಿಗೆ ಇರಲಾರೆ'' ಎನ್ನಲು, ದೇವತೆಗಳು – ''ಮಹಾವೀರನಾದ [೨]ದುರ್ಯೋಧನನಿಗೆ ಉಚಿತವಾದ ಸ್ಥಾನವಿದು'' ಎಂದು ಹೇಳಿ, ತನ್ನ ಜನಗಳನ್ನು ಕಾಣಬಯಸಿದ ಧರ್ಮರಾಜನೊಂದಿಗೆ ದೂತನನ್ನು ಕಳುಹಿಸಿದರು.

ದೂತನು ತೋರಿಸಿದ ಹಾದಿಯಲ್ಲೇ ಧರ್ಮರಾಜನು ಹೊರಟ. ಆ ದಾರಿಯಲ್ಲಿ ಅತ್ಯಂತ ಅಸಹ್ಯವಾದ ಕೆಟ್ಟ ವಾಸನೆಯೂ, ಅಪಾರ ಕತ್ತಲೆಯೂ ತುಂಬಿತ್ತು. ಸ್ವಲ್ಪದೂರ ಅಂತಹ

---

೧. ಧರ್ಮರಾಜನು ರಥ ಏರಿ ಸ್ವರ್ಗಕ್ಕೆ ತೆರಳಿದ ಆ ಸ್ಥಳ ಇಂದು ಬದರಿಯಲ್ಲಿ ಸ್ವರ್ಗಾರೋಹಣ ಎಂಬುದಾಗಿಯೇ ಪ್ರಸಿದ್ಧ.

೨. ದುರ್ಯೋಧನನು ಹಾಗೆ ಆ ಸ್ವರ್ಗದಲ್ಲಿ ನೆಲೆಸಿದ್ದು , ಕೇವಲ ಸ್ವಲ್ಪಕಾಲ ಮಾತ್ರ; ದುಷ್ಟರಿಗೂ ಆ ರೀತಿ ಸ್ವರ್ಗಲಭಿಸಲು ಅವರ ಪ್ರಾರಬ್ಧಪುಣ್ಯದ ಶೇಷವೇ ಕಾರಣ ಎಂಬ ವಿವರ ಮುಂದೆ ಬಂದಿದೆ. ಅದೂ ಸಹ ಪಾಂಡವರಿಗೆ ದೊರೆತಂತಹ ಸ್ವರ್ಗವಾಗಿರಲಿಲ್ಲ ಎಂಬುದು ಅವರೆಲ್ಲಾ ದುರ್ಯೋಧನಾಗಿಗಳಿದ್ದ ಸ್ಥಳದಲ್ಲಿರದೇ ಬೇರೆಡೆ ಇದ್ದರು ಎಂಬುದು ಇಲ್ಲಿಯ ವಿವರಣೆಯಿಂದಲೇ ಸ್ಫುಟಪಡುವುದು.

ದಾರಿಯಲ್ಲಿ ಸಾಗಿದ ಧರ್ಮರಾಜನು, ಆ ವಾಸನೆಯನ್ನು ಸಹಿಸಲಾಗದೆ ಹಿಂದಿರುಗಲು ಸಿದ್ಧನಾದ. ಕೂಡಲೇ ಅವನಿಗೆ ತನ್ನವರ ಧ್ವನಿಗಳಂತೆ ಇದ್ದ ಧ್ವನಿಗಳು ಕೇಳಿಸಿದವು – "ಮಹಾರಾಜ ! ಕ್ಷಣಕಾಲ ಇಲ್ಲಿ ನಿಲ್ಲು ; ನಿನ್ನ ಸನ್ನಿಧಾನದ ಬಲದಿಂದಾಗಿ ನಮಗೆ ವೇದನೆ ಸಹ್ಯವೆನಿಸತೊಡಗಿದೆ." ಅದನ್ನು ಕೇಳಿ ದೀನಧ್ವನಿಗಳನ್ನು ಶಂಕಿಸಿದ ಅವನು, "ನೀವೆಲ್ಲ ಯಾರು?" ಎಂದು ಪ್ರಶ್ನಿಸಲು, 'ನಾನು ಭೀಮ', 'ನಾನು ಕರ್ಣ', 'ನಾನು ಅರ್ಜುನ' ಎಂಬ ಮಾತುಗಳು ಕೇಳಿಸಿದವು. ಅದನ್ನು ಕೇಳಿ ಕೃಪಾಳುವಾದ ಧರ್ಮರಾಜನು, ದುಃಖ ಕೋಪಗಳಿಂದ ಕೂಡಿದವನಾಗಿ ದೂತನನ್ನು ಕುರಿತು, 'ನೀನು ಬೇಕಾದಲ್ಲಿಗೆ ಹೋಗು. ನಾನಂತೂ ಇಲ್ಲಿಂದ ಬರಲಾರೆ' ಎಂದ. ಅದರಂತೆ ದೂತನು ಹೊರಟುಹೋದ. ಯುಧಿಷ್ಠಿರನು ಮಾತ್ರ ಅಲ್ಲಿಯೇ ನಿಂತ.

ಆಗ ಅಲ್ಲಿಗೆ ಯುಧಿಷ್ಠಿರನ ಮೇಲಿನ ಸ್ನೇಹದಿಂದ ಇಂದ್ರಾದಿದೇವತೆಗಳೆಲ್ಲ ಕಾಣಿಸಿಕೊಂಡರು. ಅವರು ಬರುತ್ತಿದ್ದಂತೆಯೇ ಆ ದೀನಧ್ವನಿಗಳು ಕೇಳದಾದವು. ದುರ್ಗಂಧ ಕತ್ತಲೆ ಇಲ್ಲವಾದವು. ಅಲ್ಲಿ ಸ್ವರ್ಗಕ್ಕಿಂತ ಉತ್ತಮವಾದ ಸ್ಥಳವೇ ಧರ್ಮರಾಜನ ದೃಷ್ಟಿಗೆ ಗೋಚರಿಸಿತು. ಯಮ-ಧರ್ಮನು ತನ್ನ ಕೀರ್ತಿಯನ್ನು ಮತ್ತೊಮ್ಮೆ ಹೀಗೆ ಪ್ರಕಟಿಸಿ, ಹೇಳಿದ – "ಧರ್ಮಕ್ಕಿಂತಲೂ ಕರುಣೆ ಹೆಚ್ಚು ದೊಡ್ಡ ಗುಣ. ಅದನ್ನು ನಿನ್ನಲ್ಲಿ[೧] ಮೂರು ಪ್ರಸಂಗಗಳಲ್ಲಿ ಬಹಳವಾಗಿ ನಾವು ಕಂಡಿರುವೆವು" ಎಂದ. ಇಂದ್ರನು, "ನೀನು ಈವರೆಗೆ ಕಂಡ ಕೆಟ್ಟದ್ದೆಲ್ಲ ಸುಳ್ಳು ; ದ್ರೋಣರಿಗಾಗಿ ಸುಳ್ಳನ್ನಾಡಲು ನೀನು ಸಂದೇಹಿಸಿದ ಕಾರಣದಿಂದ ಇಂತಹ ದೃಶ್ಯವನ್ನು ನೀನು ನೋಡಬೇಕಾಯಿತು. ಕೃಷ್ಣನ ವಾಕ್ಯದಲ್ಲಿ ನಿನಗೆ ನಂಬಿಕೆ ಬಾರದೇ[೨] ಹೋಯಿತು. ಕೃಷ್ಣನ ಮಾತನ್ನು ಕೇಳಿ ಎಲ್ಲ ಪಾಪಕಾರ್ಯ-ಗಳನ್ನು ಮಾಡಿದರೂ ಅದರಿಂದ ಸ್ವಲ್ಪವೂ ಕೆಟ್ಟದಾಗದು. ಬ್ರಹ್ಮಾಪರೋಕ್ಷವು ಉಂಟಾದ ಮೇಲೆ ಜ್ಞಾನಿಯು ಮಾಡುವ ಪಾಪಕರ್ಮವು ಪ್ರಾರಬ್ಧಪಾಪಕ್ಕೆ ವಿಷಾನ್ನಭೋಜನದಂತೆ ಸೂಚಕ. ಇಲ್ಲಿ ಭೀಮನೇ ಮೊದಲಾದ ಎಲ್ಲ ಪ್ರಮುಖರೂ ಸುಖವಾಗಿಯೇ ಇರುವುದನ್ನು ನೋಡು ; ಅವರೆಲ್ಲ ಪರಮಾತ್ಮನನ್ನು ಕಂಡವರು, ಪರಿಶುದ್ಧವಾದ ಸತ್ಕರ್ಮವನ್ನು ಆಚರಿಸಿದವರು. ವಿಷ್ಣುಪರಾಯಣರು, ಶ್ರೇಷ್ಠಯೋಗದಿಂದ ದೇಹವನ್ನು ತೊರೆದವರು. ಅಂತಹವರಿಗೆ ದುಃಖ ಹೇಗೆ ತಾನೇ ಉಂಟಾದೀತು? ಇವರೆಲ್ಲ ಭೂಭಾರಹರಣಕ್ಕಾಗಿ, ಕೃಷ್ಣನ ಸೇವೆಗಾಗಿ ಭೂಮಿಯಲ್ಲಿ ಅವತರಿಸಿದ ಶ್ರೇಷ್ಠದೇವತೆಗಳು. ತಮ್ಮ ತಮ್ಮ ಬುದ್ಧಿ ಹಾಗೂ ಕಾರ್ಯಗಳಿಂದ ಅಲ್ಲಿ ಕೃಷ್ಣನನ್ನು ಸಂತೋಷಪಡಿಸಿದ ಅವರು ಮತ್ತೆ ಅವನೊಂದಿಗೆ ತಮ್ಮ ಲೋಕಗಳನ್ನು ಸೇರಿರುವರು. ನಿನಗೆ ಈಗಲೂ ಮಾನುಷಭಾವ

---

೧. ಯಕ್ಷಪ್ರಶ್ನೆಯ ಕಾಲದಲ್ಲಿ ನಕುಲನು ಬದುಕಲಿ ಎಂದು ಕೇಳಿಕೊಂಡದ್ದು, ಸ್ವರ್ಗಾರೋಹಣ ಕಾಲದಲ್ಲಿ ತನ್ನನ್ನು ಅನುಸರಿಸಿ ಬಂದ ನಾಯಿಯನ್ನು ಬಿಟ್ಟು ಬರಲಾರೆ ಎಂದದ್ದು ಹಾಗೂ ನರಕವಾದರೂ ಸರಿಯೆ ತನ್ನವರೊಂದಿಗೆ ಇರಲು ನಿಶ್ಚಯಿಸಿದ್ದು – ಇವು ಆ ಮೂರು ಪ್ರಸಂಗಗಳು.

೨. ಶ್ರೀಕೃಷ್ಣನ ಮಾತನ್ನು ಶಂಕಿಸಿದ್ದೇ ಧರ್ಮರಾಜನಿಗೆ ಹೀಗೆ ನರಕದರ್ಶನಕ್ಕೆ ಕಾರಣವಾಯಿತು; ನಿಶ್ಶಂಕೆಯಿಂದ ಹೇಳಿದ ಭೀಮಸೇನನಿಗೆ ಈ ಪ್ರಸಂಗ ಒದಗಲಿಲ್ಲ ಎಂಬುದು ಗಮನಾರ್ಹ. ಇದರಿಂದ ಕೆಲವರು 'ಅಶ್ವತ್ಥಾಮ ಹತಃ' ಸುಳ್ಳು ಹೇಳಿದ ಕಾರಣದಿಂದ ಯುಧಿಷ್ಠಿರನಿಗೆ ನರಕ ದರ್ಶನವಾಯಿತು ಎಂದು ಹೇಳುವುದು ಸರಿಯಲ್ಲ ಎಂದಾಗುವುದು.

ಹೋಗಿಲ್ಲ. ಅದಕ್ಕೆಂದೇ ಇನ್ನೂ ನೀನು ದುರ್ಯೋಧನಾದಿಗಳನ್ನು [೧]ದ್ವೇಷಿಸುತ್ತಿದ್ದೀಯೇ ! ಆದ್ದರಿಂದ ಈ ಗಂಗಾಜಲದಲ್ಲಿ ದೇಹವನ್ನು ಬಿಟ್ಟು ದೇವತ್ವವನ್ನು ಹೊಂದು. ಅತ್ಯಂತ ಪಾಪಿಗಳಾದ ಈ ಸುಯೋಧನಾದಿಗಳೆಲ್ಲ ಪ್ರಾರಬ್ಧಪುಣ್ಯದ ಕ್ಷಯವನ್ನು ಹೊಂದಿ, ನಿತ್ಯವೂ ಸುಖಲೇಶವೂ ಇರದ ದುಃಖದಿಂದ ತುಂಬಿದ ತಮಸ್ಸಿನಲ್ಲಿಯೇ ಬೀಳುವರು. ದೇವಾಂಶರಾದವರೆಲ್ಲರೂ ತಮ್ಮ ತಮ್ಮ ಮೂಲರೂಪವನ್ನು ಸೇರಿ ಅಲ್ಲಿ ವಿಮುಕ್ತಿಯನ್ನು ಹೊಂದುವರು. ಇದರಲ್ಲಿ ಸಂದೇಹ ಬೇಡ'' ಎಂದು ವಿವರಿಸಿದ. ಅದರಂತೆ ಕೂಡಲೇ ಗಂಗೆಯಲ್ಲಿ ಮುಳುಗಿ ಧರ್ಮರಾಜನು ದೇಹವನ್ನು ತೊರೆದು ದೇವಶರೀರವನ್ನು ಹೊಂದಿ ರೋಷ ಮೊದಲಾದ ಎಲ್ಲ ದೋಷಗಳನ್ನು ಕಳೆದುಕೊಂಡ.

ಅನಂತರ ಅವನು ತಮ್ಮ ತಮ್ಮ ಮೂಲರೂಪದ ಅತ್ಯಂತ ಸಮೀಪದಲ್ಲಿ ಕುಳಿತಿದ್ದ ತನ್ನ ಜನರೆಲ್ಲರನ್ನು ಕಂಡ. ಭೀಮನು ವಾಯುವಿನ ಸಮೀಪದಲ್ಲಿ ಕುಳಿತು ಮರುದ್ಗಣಗಳ ಮಧ್ಯದಲ್ಲಿ ಹೊಳೆಯುತ್ತಿದ್ದ. ಭೀಮಸೇನನ ಪಕ್ಕದಲ್ಲಿ ಉಳಿದೆಲ್ಲರನ್ನೂ ಮೀರಿಸಿ ಕಂಗೊಳಿಸುತ್ತಿದ್ದ ದ್ರೌಪದಿಯನ್ನು ಕಂಡು, ಸಂಸ್ಕಾರದ ಪ್ರಭಾವದಿಂದಾಗಿ ಸ್ಪರ್ಶಿಸಲು ಹೊರಟ ಆ ಧರ್ಮರಾಜನನ್ನು ಇಂದ್ರನು ತಡೆದು – ''ಇವಳು ಸಮಸ್ತಜೀವೋತ್ತಮನಾದ ವಾಯುವಿನ ಪತ್ನಿ ; ಇವಳಿಗೆ ಶ್ರೀ ಎಂದೂ ಹೆಸರು. ನಿಮ್ಮ ಪತ್ನಿಯರಿಂದ ಕೂಡಿದ್ದ ಇವಳು ಪುರುಷೋತ್ತಮನಿಂದ ದೇವಕಾರ್ಯಕ್ಕಾಗಿ ಸೃಷ್ಟಳಾಗಿ, ನಿಮ್ಮೆಲ್ಲರಲ್ಲಿ ಹಾಗೂ ಭೀಮರೂಪದಲ್ಲಿ ವಾಯುವಿಗೋಸ್ಕರ ಇದ್ದಳು. ಆದ್ದರಿಂದಲೇ ಅವಳಿಗೆ ಭೀಮನಲ್ಲಿ ಅತ್ಯಂತ ಪ್ರೀತಿ ಇತ್ತು. ಅನಂತರ ಪಾರ್ಥನಲ್ಲೂ ಉಳಿದ ನಿಮ್ಮೆಲ್ಲರಲ್ಲಿ ಕ್ರಮ-ವಾಗಿಯೂ ಇತ್ತು. ಅದು ನಿಮ್ಮೆಲ್ಲರಲ್ಲಿ ವ್ಯಕ್ತವಾದ ವಾಯುವಿನ ಆವೇಶವನ್ನು ಅವಲಂಬಿಸಿತ್ತು. ಈಗ ಉಳಿದೆಲ್ಲ ದೇವಿಯರ ಸಂಪರ್ಕವಿಲ್ಲದೆ ಶುದ್ಧರೂಪದಲ್ಲಿರುವಳು. ನಿಮ್ಮೆಲ್ಲರಲ್ಲಿಯೂ ಇರಲು ಆಗಿನಂತೆ ವಾಯುದೇವರ ವಿಶೇಷ ಆವೇಶ ಇಲ್ಲ. ಆದ್ದರಿಂದ ನಿನಗೆ ಈಗ ಇವಳನ್ನು ಸ್ಪರ್ಶಿಸುವ ಅಧಿಕಾರವೂ, ಯೋಗ್ಯತೆಯೂ ಇಲ್ಲ'' ಎಂದು ತಿಳಿಸಿದ. ಹಿಂದಿರುಗಿದ ಧರ್ಮಜನ ಮಾನುಷವಾಸನೆಯನ್ನೆಲ್ಲ ತೆಗೆದುಹಾಕಲೆಂದು ಯಮನು ಅವನನ್ನು ಆಲಿಂಗಿಸಿಕೊಂಡ. ಕೂಡಲೇ ಧರ್ಮರಾಜನು ಯಮನಿಗೆ ಸಮನಾದ.

ಅನಂತರ ಪಾಂಡವರೆಲ್ಲರೂ ತಮ್ಮ ತಮ್ಮ ಮೂಲರೂಪಗಳಲ್ಲಿ ಪ್ರವೇಶಿಸಿ ಆನಂದಿಸಿದರು. ತಮ್ಮ ಲೋಕಗಳಲ್ಲಿ ಪತ್ನೀಸಮೇತರಾಗಿ ಕ್ರೀಡಿಸಿದರು. ಅಲ್ಲಿಯೂ ಅವರಿಗೆಲ್ಲ ಕೃಷ್ಣನ ಸಮಾಗಮ ಮುಂಚಿನಂತೆಯೇ ಲಭಿಸಿತು. ಕೃಷ್ಣನೂ ಮತ್ತೆ ಅವರೆಲ್ಲರೊಂದಿಗೂ ರಥದಲ್ಲಿ ಅರ್ಜುನ-ನೊಂದಿಗೂ ರಮಿಸಿದ. ಉಳಿದ ದೇವಾಂಶಸಂಭೂತರೆಲ್ಲರೂ ಬೇಗನೇ ತಮ್ಮ ಮೂಲರೂಪ-ಗಳೊಂದಿಗೆ ಐಕ್ಯವನ್ನು ಹೊಂದಿದರು.

---

೧. ವನಪರ್ವದ ಕೊನೆಯಲ್ಲಿ ಬಂದಿರುವ ವಿವರಣೆಯಂತೆ ಧರ್ಮರಾಜನು ಇಲ್ಲಿ ದುರ್ಯೋಧನಾದಿಗಳನ್ನು ತೆಗಳಿದ್ದು ವೈಯಕ್ತಿಕ ಕಾರಣದಿಂದ; ಅದು ಸರಿಯಲ್ಲ ಎಂಬುದು ಈ ಮಾತಿನ ಅಭಿಪ್ರಾಯ. ಆದರೆ ಭೀಮಸೇನನ ದುರ್ಯೋಧನಾದಿಗಳ ಮೇಲಿನ ದ್ವೇಷ ತಾತ್ತ್ವಿಕ ಹಿನ್ನೆಲೆಯದು. ಕಂಸಾದಿಗಳ ಮೇಲೆ ಶ್ರೀಕೃಷ್ಣನ ದ್ವೇಷ ಹೇಗೋ ಹಾಗೆ. ಈ ಸೂಕ್ಷ್ಮ ವಿಚಾರವನ್ನು ಈ ಪ್ರಸಂಗದಿಂದ ತಿಳಿಯಬಹುದು.

## ಮತ್ತೊಮ್ಮೆ ಅಸುರರ ಹುಟ್ಟು

ಅಸುರರೆಲ್ಲರೂ [೧]ಪುಣ್ಯ ಕ್ಷಯಿಸಿದ ಮೇಲೆ ಭೂಮಿಯ ಮೇಲೆ ಹುಟ್ಟಿದರು. ಅವರು ಒಟ್ಟು ನಾಲ್ಕುಸಾವಿರದ ಮುನ್ನೂರು ವರ್ಷಗಳ ಕಾಲ ದಿವ್ಯಭೋಗಗಳನ್ನು ಅನುಭವಿಸಿ, ಮನುಷ್ಯರಾಗಿ ಹುಟ್ಟಿದಾಗಲೂ, ಯಾವಾಗಲೂ ನಾನೇ ದೇವರು, ಜಗತ್ತು ಸುಳ್ಳು ಎಂಬ ಬುದ್ಧಿಯನ್ನು ಹೊಂದಿ ತಮಸ್ಸನ್ನೇ ಹೊಂದಿದರು. ದುಃಖದಲ್ಲೂ ಅವರಲ್ಲಿ ತಾರತಮ್ಯವಿದೆ. ಕಲಿಯೇ ಎಲ್ಲರಿಗಿಂತಲೂ ಹೆಚ್ಚು ದುಃಖಕ್ಕೆ ಭಾಗಿ ; ಬ್ರಹ್ಮದೇವರು ದೇವತೆಗಳಲ್ಲಿ ಅತ್ಯಂತ ಸುಖಿಗಳು ಹೇಗೋ ಹಾಗೆ. ಅವರಿಗೆ ಲಭಿಸುವ ದುಃಖವು ಅವರು ಮಾಡಿದ ಹರಿದ್ವೇಷಕ್ಕನು ಗುಣವಾಗಿರುವುದು. ಕೆಲವರು ಪಿಶಾಚಿಗಳಾಗಿ, ಅಸುರರಾಗಿ, ರಾಕ್ಷಸರಾಗಿ ಜನಿಸಿ ವಿಷ್ಣು ಹಾಗೂ ವಿಷ್ಣುಭಕ್ತರನ್ನು ದ್ವೇಷಿಸುತ್ತಾ ತ್ವರೆಯಿಂದಲೇ ಅಂಧಂತಮಸ್ಸನ್ನು ಹೊಂದುವರು.

## ಮಧ್ವರಾಗಿ ಭೀಮಸೇನ

ಕಲಿಯುಗದಲ್ಲಿ ನಾಲ್ಕುಸಾವಿರದ ಮುನ್ನೂರು ವರ್ಷಗಳು ಕಳೆದ ಮೇಲೆ ಭೂಮಿಯಲ್ಲಿ ಆ ಭೀಮನು ಬ್ರಾಹ್ಮಣರೂಪದಿಂದ [೨]ಅವತರಿಸಿ, ದೈತ್ಯರಿಂದ ಮರೆಯಾಗಿದ್ದ ಹರಿತತ್ತ್ವವನ್ನು ತಿಳಿಸಿದ. ಆಗಲೇ ದ್ರೌಪದಿಯು ಭೂಮಿಯಲ್ಲಿ ಹುಟ್ಟಿ ಹರಿಪ್ರೀತಿಗಾಗಿ, ಮಹಾಸುರರನ್ನು ಅಂಧಂತಮಸ್ಸಿನಲ್ಲಿ ಬೀಳಿಸಿದಳು. ಅರ್ಜುನ ಮೊದಲಾದವರೂ ಹರಿಪ್ರೀತಿಗಾಗಿ ಅವತರಿಸಿದರು ; ಅವರೆಲ್ಲ ಮತ್ತೆ ತಮ್ಮ ಸ್ಥಾನಗಳಿಗೆ ಹಿಂದಿರುಗಿ ಪರಕಾಲದ ಕೊನೆಯಲ್ಲಿ ವಿಮುಕ್ತಿಯನ್ನು ಹೊಂದುವರು. ಹನೂಮದಂಶನಾದ ವೃಕೋದರನು ಬ್ರಹ್ಮಪದವಿಯನ್ನು ಹೊಂದಿ, ಸರಸ್ವತೀಪದವಿಗೆ ಬರುವ ದ್ರೌಪದಿಯೊಂದಿಗೆ ಜೀವರಾಶಿಗಳಲ್ಲಿ ಅತ್ಯಂತ ಹಿರಿದಾದ ಮುಕ್ತಿಯನ್ನು ಹೊಂದುವನು. ಎಲ್ಲ ಸ್ಥಿತಿಯಲ್ಲೂ ಶ್ರೀಹರಿಯು ಇವರಿಬ್ಬರಿಂದ ಅತಿಹೆಚ್ಚು ಸಂತೋಷವನ್ನು ಹೊಂದಿದವನು. 'ಭೂಷನ್ನಯೋಧಿ ಬಭ್ರುಷು ನಮ್ರತೇ', 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ', 'ತಾಂ ಸು ತೇ ಕೀರ್ತಿಂ ಮಘವನ್ ಮಹಿತ್ವಾ' ಇತ್ಯಾದಿ ಶ್ರುತಿಗಳೆಲ್ಲ ಇದಕ್ಕೆ ಆಧಾರ. ಇನ್ನೂ ಅನೇಕ ವೇದದ ಮಾತುಗಳೂ, ಪಂಚರಾತ್ರ, ಪುರಾಣದ ವಾಕ್ಯಗಳೂ ಇರುವವು. ಧರ್ಮರಾಜನಿಂದ ಕೇಳಲ್ಪಟ್ಟ ಭೀಷ್ಮರೂ ಸಹ ಮೋಕ್ಷಧರ್ಮಗಳಲ್ಲಿ ಇದನ್ನು ಸ್ವಲ್ಪಮಟ್ಟಿಗೆ [೩]ತಿಳಿಸಿದರು.

---

೧. ಮುಕ್ತಿಯೋಗ್ಯರಿಗೆ ಪಾಪ ಕ್ಷಯಿಸಿದ ಮೇಲೆ ಸದ್ಗತಿಯಾದರೆ, ಅಸುರರಿಗೆ ಪುಣ್ಯ ಕ್ಷಯಿಸಿದ ಮೇಲೆ ದುರ್ಗತಿ ಎಂಬುದು ವಿಶೇಷ. ಪ್ರಸ್ತುತ ಈ ಪ್ರಸಂಗದಲ್ಲಿ ಕುರುಕ್ಷೇತ್ರಯುದ್ಧದಲ್ಲಿ ಮಡಿದಿದ್ದ ಅಸುರರಿಗೆ ಕಾರಣಾಂತರದಿಂದ ಒದಗಿದ್ದ ಸ್ವರ್ಗಾನುಭವಕ್ಕೆ ಕಾರಣವಾದ ಪುಣ್ಯವು ಕ್ಷಯಿಸಿದ ಮೇಲೆ ಅವರು ಮತ್ತಷ್ಟು ಪಾಪಸಾಧನೆಗಾಗಿ ಭೂಮಿಯಲ್ಲಿ ಜನಿಸಿದರು ಎಂದರ್ಥ.

೨. ಇದು ಕ್ರಿ.ಶ. ೧೧೯೯/೧೨೦೦ಕ್ಕೆ ಸರಿಹೊಂದುತ್ತದೆ; ವಿವರಗಳಿಗೆ ನಮ್ಮ ಪ್ರಕಾಶನದ 'ಶ್ರೀಮಧ್ವಾಚಾರ್ಯರ ಕಾಲನಿರ್ಣಯ' ಕೃತಿಯನ್ನು ನೋಡಬಹುದು.

೩. ಭೀಮಾದಿ ಪಾಂಡವರು ಮರಳಿ ಭೂಮಿಯಲ್ಲಿ ಅವತರಿಸುವ ಉಲ್ಲೇಖವನ್ನು ಹೊಂದಿರುವ ಮೋಕ್ಷಧರ್ಮ-ಪರ್ವದಲ್ಲಿ ಬಂದಿರುವ ಭೀಷ್ಮರ ವಚನಗಳು ಹೀಗಿವೆ :

ಹೀಗೆ ಕೃಷ್ಣ ಹಾಗೂ ಪಾಂಡವರು, ಯಾದವರು ತಮ್ಮ ತಮ್ಮ ಲೋಕಗಳನ್ನು ಸೇರಲು, ಪರೀಕ್ಷಿದ್ರಾಜ ಮೊದಲಾದವರು ಹಾಗೂ ಅವರ ವಂಶಜರು ವ್ಯಾಸರ ಉಪದೇಶವನ್ನು ಪಡೆಯುತ್ತಾ, ಪೃಥ್ವಿಯನ್ನು ಪಾಲಿಸಿದರು.

ಹೀಗೆ ಶ್ರೀಕೃಷ್ಣನ ಸಮೇತರಾಗಿ ಯಾದವರು, ಪಾಂಡವರು, ಪರೀಕ್ಷಿದ್ರಾಜ ಮೊದಲಾದವರು ತಮ್ಮ ಲೋಕಗಳಿಗೆ ತೆರಳಿದ ಮೇಲೆ ಅವನ ವಂಶದಲ್ಲಿ ಜನಿಸಿದ ರಾಜರು ಶ್ರೀವೇದವ್ಯಾಸರಿಂದ ಶಿಕ್ಷಿತರಾಗಿ ಭೂಮಿಯನ್ನು ಪಾಲಿಸಿದರು. ಕ್ಷೇಮಕನೇ ಕೊನೆಯಾದ ಆ ರಾಜರು ಶ್ರೀವೇದವ್ಯಾಸರ ಅನುಗ್ರಹದಿಂದ ಮಹಾಭಾರತಾದಿ ಶಾಸ್ತ್ರಗಳನ್ನು ಸಕಲವನ್ನೂ ಬಲ್ಲಂತಹ ಜ್ಞಾನಿಗಳಿಂದ ಕೇಳುತ್ತಾ ಆಳುತ್ತಿದ್ದಾಗ ಕಲಿಯುಗದಲ್ಲೂ ಧರ್ಮ ಮತ್ತು ಜ್ಞಾನಗಳು ಸುರಕ್ಷಿತ-ವಾಗಿ ಉಳಿದವು; ನಾಶವನ್ನು ಹೊಂದಲಿಲ್ಲ. ಕಲಿಯುಗದಲ್ಲಿ ಒಂದು ಸಾವಿರ ವರ್ಷಗಳು ಕಳೆದ ಮೇಲೆ ಸಕಲ ಸಜ್ಜನರೂ ಜ್ಞಾನವನ್ನು ಪಡೆದು ಲೋಕವೇ ನಲಿಯುವಂತಾಯಿತು[೧].

---

ಶುದ್ಧಾಭಿಜನಸಂಪನ್ನಾಃ ಪಾಂಡವಾಃ ಸಂಶಿತವ್ರತಾಃ।
ವಿಹೃತ್ಯ ದೇವಲೋಕೇಷು ಪುನರ್ಮಾನುಷ್ಯಮೇಷ್ಯಥ॥
ಪ್ರಜಾವಿಸರ್ಗಂ ಚ ಸುಖೇನ ಕಾಲೇ ಪ್ರತ್ಯೇತ್ಯ ದೇವೇಷು ಸುಖಾನಿ ಭುಕ್ತ್ವಾ।
ಸುಖೇನ ಸಂಯಾಸ್ಯಥ ಸಿದ್ಧಸಂಸ್ಥಾಂ ಮಾ ವೋ ಭಯಂ ಭೂದ್ ವಿಮಲಾಃ ಸ್ಥ ಸರ್ವೇ॥
-ಮಹಾಭಾರತ (ಶಾಂತಿ. ೨೮೦/೬೯,೭೦)

೧. ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಈ ಹಂತದಲ್ಲಿ ಅಸುರಮೋಹನಕ್ಕಾಗಿ ಶ್ರೀಹರಿಯು ಬುದ್ಧರೂಪ-ದಿಂದ ಅವತರಿಸಿದ ವಿವರಗಳು ಬಂದಿವೆ ; ಅಲ್ಲಿ ಜಗತ್ತು ಕ್ಷಣಿಕ, ಜ್ಞಾನಾತ್ಮಕ, ಅಸತ್ ಎಂಬ ಬೌದ್ಧದರ್ಶನದ ಅಂತರ್ಯವೂ ಹೀಗೆ ನಿರೂಪಿತವಾಗಿದೆ : ನಾರಾಯಣನನು ದೇವಶ್ರೇಷ್ಠರ ಗುಂಪಿನ ಬಳಿ ನಡೆದು ಅವರಿಗೆ ನಡೆದ ವೃತ್ತಾಂತವನ್ನು ತಿಳಿಸಿದ ; ಅವರು ಕೇಳಿಕೊಳ್ಳಲು ತನಗೆ ಅಭಿಪ್ರೇತವಾದ ಸಂಸಾರಬಂಧನವನ್ನು ಬಿಡುಗಡೆಮಾಡುವಂತಹ ಬೌದ್ಧಾಗಮದ ಅರ್ಥವನ್ನು ತಿಳಿಸಿದ : ಕ್ಷಣಾದಿಗಳು, ಅವುಗಳ ವಿಶೇಷಗಳು ಎಲ್ಲವೂ ನೈಸರ್ಗಿಕವಾಗಿ ಸ್ವಲ್ಪ ಕಾಲದಲ್ಲೇ ನಾಶ ಹೊಂದುವುದರಿಂದ ಮೂಲತಃ ಅವು ಸ್ಥಿರವಾಗಿದ್ದರೂ ಕ್ಷಣಿಕವೆನ್ನಿಸುವವು. ಹೀಗೆ ವಿಶೇಷವನ್ನು ಗಮನದಲ್ಲಿಟ್ಟುಕೊಂಡು ನಾನು ಸಕಲವೂ ಕ್ಷಣಿಕ ಎಂದು ತಿಳಿಸಿದೆ. ವಿಶೇಷವನ್ನು ಹೊಂದಿರುವ ಪದಾರ್ಥ ಮತ್ತು ಆ ವಿಶೇಷವು ಬೇರೆಯಲ್ಲವಾದ್ದರಿಂದ ಅವು ಸ್ವನಿರ್ವಾಹಕ-ಶಕ್ತಿಯನ್ನು ಹೊಂದಿರುವವು. ಆದ್ದರಿಂದ ಈ ಸಮಸ್ತಪ್ರಪಂಚ ಕ್ಷಣಸ್ಥಾಯಿ ಹಾಗೂ ಸ್ಥಿರ ಎಂದು ಹೇಳಿದಾಗ ವಿರೋಧವಿರದು. ಸ್ವತಂತ್ರನಾದ ನಾನು ಸರ್ವೋತ್ತಮನಾಗಿದ್ದು 'ಜ್ಞ' ಎನಿಸಿರುವೆನು. ನನ್ನಿಂದ ಸದಾ ಈ ವಿಶ್ವ ಅನನೀಯವಾಗಿದೆ (ಪ್ರವೃತ್ತಿ ಹೊಂದುತ್ತಿದೆ) ; ಅದು ಅಸ್ವತಂತ್ರವಾಗಿರುವುದೇ ಅದಕ್ಕೆ ಕಾರಣ. ಆದ್ದರಿಂದ ಜಡರೂಪವಾದ ವಿಶ್ವ ಜ್ಞಾನಾತ್ಮಕವಾದುದು ಎಂದು ನಾನು ಹೇಳಿದೆ, ಇನ್ನು ಚೇತನವು ಜ್ಞಾನಾತ್ಮಕವೆಂಬುದು ಕೈಮುತ್ಯಸಿದ್ಧ. ನಾನು ಅತ್ಯಂತಸುಖಸ್ವರೂಪನಾದವನು, ಆದ್ದರಿಂದಲೇ ಉತ್ತಮ-ನಾಗಿರುವೆನು. ಆದ್ದರಿಂದ ನನಗೆ 'ಶೂ' ಎಂದು ಹೆಸರು. 'ಶೂ' ನಾಮಕನಾದ ನನ್ನಿಂದ ಈ ವಿಶ್ವ ಪ್ರತಿ-ಹಂತದಲ್ಲೂ ನಿಯಮಿಸಲ್ಪಡುವುದು; ಅದರಿಂದ ಇದಕ್ಕೆ ಶೂನ್ಯ ಎಂದು ಹೆಸರು. ದೋಷ ವಿರುದ್ಧ ಸ್ವರೂಪನೂ, ದೋಷರಹಿತನೂ, ಸರ್ವವಿಲಕ್ಷಣನೂ ಆದ್ದರಿಂದ ನನಗೆ ಅ ಎಂದು ಹೆಸರು. 'ಅ' ನಾಮಕನಾದ ನನ್ನಿಂದ ಜನಿಸುವುದರಿಂದ ಇದಕ್ಕೆ ಅಭಾವ ಎಂದು, ನಾಶಹೊಂದುವುದರಿಂದ ಅಸತ್ ಎಂದು ಹೆಸರು. ಇವೇ ಮೊದಲಾಗಿ ನಾನು ಹೇಳಿದ ಎಲ್ಲವನ್ನೂ ತಿಳಿಯಬೇಕು. ಇದರಲ್ಲಿ ಅಗ್ರಾಹ್ಯವಾದದ್ದು ಯಾವುದೂ ಇಲ್ಲ. ಬಳಿಕ ಬುದ್ಧ ಹೇಳಿದ ಪಕ್ಷವನ್ನು ಅವಲಂಬಿಸಿ ಜನ ಬೇರೊಂದು ಮತವನ್ನೇ ಸ್ಥಾಪಿಸಿದ.

ಅದನ್ನು ಕ್ರೋಧವಶರು ಮೊದಲಾದ ದೈತ್ಯರು ಸಹಿಸದಾದರು. ಆ ಕ್ರೋಧವಶರು ಬಹಳವಾಗಿ ಶಿವನನ್ನು ಕುರಿತು ತಪಸ್ಸು ಮಾಡಿ ಲೋಕವನ್ನು ಮರುಳುಗೊಳಿಸುವ ಮಹಾ ಶಕ್ತಿಯನ್ನು ಅವನಿಂದ ಪಡೆದುಕೊಂಡು ಭೂಮಿಯಲ್ಲಿ ಜನಿಸಿದರು. ಮತ್ತು ಕುತರ್ಕಗಳಿಂದ ಜೀವ ಪರಮಾತ್ಮರ ಅಭೇದವನ್ನು ಹೇಳುತ್ತಾ ಮೋಹ ಉಂಟುಮಾಡಿದರು. ಅವರ ಅಧಃಪತನಕ್ಕಾಗಿಯೂ, ಸಜ್ಜನರ ಮುಕ್ತಿಗಾಗಿಯೂ ಇಲ್ಲಿ ಹಿಂದೆ ಹೇಳಿದಂತೆ ಭೀಮನ ಅವತಾರವಾಯಿತು. ದುರ್ಗೆಯು ಮರಳಿ ಬ್ರಾಹ್ಮಣಕುಲದಲ್ಲಿ ಅವತರಿಸಿ ಅಸುರರ ಸಮುದಾಯವನ್ನು ಸಂಹರಿಸುವಳು. ದುರ್ಗಾವತಾರದ ಬಳಿಕ ಕಲಿಯುಗದ ಕೊನೆಯಲ್ಲಿ ಲೋಕದಲ್ಲಿ ಧರ್ಮ ಜ್ಞಾನ ಮೊದಲಾದ ಸದ್ಗುಣಗಳು ಪೂರ್ಣ ಮರೆಯಾದಾಗ ಬ್ರಹ್ಮ ರುದ್ರ, ಇಂದ್ರ ಮೊದಲಾದ ದೇವತೆಗಳು ಕ್ಷೀರಸಾಗರಕ್ಕೆ ತೆರಳಿದರು. ಕಲಿಯನ್ನು ನಾಶಮಾಡುವುದರಿಂದಾಗಿ ಶ್ರೀಹರಿ ಕಲ್ಕಿ ಎನ್ನಿಸುವನು. 'ಕಲ' ಎಂದರೆ ಜ್ಞಾನ, 'ಕ' ಎಂದರೆ ಸುಖ, ಜ್ಞಾನಸುಖಗಳನ್ನು ಹೊಂದಿರುವುದರಿಂದಲೂ ಅವನಿಗೆ ಕಲ್ಕಿ ಎಂದು ಹೆಸರು. ಅವನು ಒಂದೇ ದಿನದಲ್ಲಿ ಸಮಸ್ತ ಅಸುರರನ್ನೂ ನಾಶಪಡಿಸುವನು. ಹರಿಗೆ ವಿಮುಖರಾದ ಅಧರ್ಮಪ್ರವೃತ್ತಿಯ ಸಕಲಜನರನ್ನೂ ನಿಃಶೇಷವಾಗಿ ಸಂಹರಿಸಿ, ಧರ್ಮಸೇತುವನ್ನು, ಜ್ಞಾನ, ಹರಿಭಕ್ತಿಗಳನ್ನು ತನ್ನ ಜನರಲ್ಲಿ ತುರಗಾರೂಢನಾದ ಕಲ್ಕಿರೂಪದ ಶ್ರೀಹರಿ ನೆಲೆಗೊಳಿಸುವನು. ಇದೇ ಮೊದಲಾದವುಗಳು ಕೊನೆಯಿಲ್ಲದ ಶ್ರೀಹರಿಯ ಉತ್ತಮಕಾರ್ಯಗಳು, ರೂಪಗಳು ಹಾಗೂ ಸದ್ಗುಣಗಳು. ಸದಾ ಸಕಲದೋಷದೂರನಾದ ಅವನಿಗೆ ಇದರಿಂದಾಗಿಯೇ ಬ್ರಹ್ಮ ಎಂದೂ, ಅನಂತ ಎಂದೂ ಹೆಸರು. ಉತ್ತಮವಾದ ಪೂರ್ಣಪ್ರಜ್ಞ ಎಂಬ ಹೆಸರಿನ 'ಆನಂದತೀರ್ಥ' ಎಂಬ ಮುನಿ ಬದರಿಯಲ್ಲಿ ನಾರಾಯಣನಿಂದ ಆದೇಶಿಸಲ್ಪಟ್ಟವರಾಗಿ ಈ ಗ್ರಂಥವನ್ನು ರಚಿಸಿದರು. ಅವರು ಜಗತ್ತಿನ ಮುಖ್ಯ ಸ್ವಾಮಿಯಾದ ಆ ವೇದವ್ಯಾಸರ ಶಿಷ್ಯರೇ ಆದವರು. ಆನಂದ-ತೀರ್ಥರಾದ ಅವರು ಶ್ರೀಹರಿಯ ಅನುಗ್ರಹದಿಂದ ಸಕಲ ವೇದಗಳನ್ನೂ, ಪಂಚರಾತ್ರಗಳನ್ನೂ, ಉಪನಿಷತ್ತುಗಳನ್ನೂ, ವೇದಗಳನ್ನೂ, ಇತಿಹಾಸಗಳನ್ನೂ, ಪುರಾಣಗಳನ್ನೂ, ಇತರ ಸಕಲ ಶಾಸ್ತ್ರಗಳನ್ನೂ ಪರಿಪೂರ್ಣವಾಗಿ ಬಲ್ಲವರು. ಈ ಗ್ರಂಥ ಸಕಲಶಾಸ್ತ್ರಾರ್ಥಗಳಿಗೆ ನಿರ್ಣಾಯಕವಾದುದು. ವಿಶೇಷವಾಗಿ ಭಾರತವನ್ನು ನಿರ್ಣಯಿಸುವಂತಹುದು. ಜಗತ್ತಿನ ಜನಕನೂ, ಗುರುವೂ ಆದ ಶ್ರೀಹರಿಯನ್ನು ಸಂತೋಷಪಡಿಸಲೆಂದು ಅವರು ಈ ಗ್ರಂಥವನ್ನು ರಚಿಸಿದರು. ಮೇಲ್ನೋಟಕ್ಕೆ

---

ಬೌದ್ಧಮತದಿಂದಲೂ ಹಾಗೆಯೇ ಜೈನಮತದಿಂದಲೂ ಅಸುರ ಸ್ವರೂಪದವರಾದ ಸಕಲರೂ ಸುಪ್ರೀತರಾದರು. ಬುದ್ಧ ಹೇಳಿದ ಪ್ರಶಾಂತ ವಿದ್ಯೆಯೆಂಬ ಬೇರೊಂದು ಹೆಸರಿನ ಶಾಸ್ತ್ರವನ್ನು ದೇವತೆಗಳು ಪಡೆದು ಸಂತೋಷ ಹೊಂದಿದರು. ಅದು ಸಕಲವೇದಗಳ ಸಾರಸರ್ವಸ್ವವಾದುದು. ಅದನ್ನು ಅವಲಂಬಿಸಿದವರಿಗೆ ಬೇಗನೆ ಮುಕ್ತಿ ಲಭಿಸುವುದು. ಇತರ ಮನುಷ್ಯರಾದರೋ ಸತ್ಸಂಪ್ರದಾಯದಿಂದ ಕೂಡಿದ ಭಾರತ ಮೊದಲಾದ ಶಾಸ್ತ್ರಗಳನ್ನು ಸ್ವೀಕರಿಸಿ ವಿಷ್ಣುವನ್ನು ಆರಾಧಿಸುತ್ತಾ ಪರಮಗತಿಯನ್ನು ಪಡೆದುಕೊಂಡರು.

ಬುದ್ಧಾವತಾರವು ಮೋಹಕ ಎಂಬ ಮಾತು ಶ್ರೀಮದ್ಭಾಗವತ(೧/೩/೨೪)ದಲ್ಲಿ ಬಂದಿದೆ :

ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್ ।
ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥

ಪರಸ್ಪರ ವಿರುದ್ಧವೆಂಬಂತೆ ಕಾಣುವ ಸಕಲ ಶಾಸ್ತ್ರ ವಚನಗಳಿಗೂ ಇದಕ್ಕಿಂತ ಬೇರೆಯಾದ ಮತ್ತೊಂದು ನಿರ್ಣಯ ಇಲ್ಲ. ಸಕಲಶಾಸ್ತ್ರಗಳ ನಿರ್ಣಯಕ್ಕಾಗಿ ಶ್ರೀವೇದವ್ಯಾಸರು ಬ್ರಹ್ಮ-ಸೂತ್ರಗಳನ್ನು ರಚಿಸಿದರು. ಆದರೆ ಅವುಗಳಿಗೆ ಬೇರೆಯವರಿಂದ ತಪ್ಪಾದ ವ್ಯಾಖ್ಯೆಗಳು ರಚಿತವಾದವು. ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾಗಿದ್ದ ಶ್ರೀಹರಿಯ ಪುರುಷೋತ್ತಮತ್ವವು ಜೀವೇಶ್ವರೈಕ್ಯವನ್ನು ಹೇಳತೊಡಗಿದ ಮಹಾ ಅಸುರಮುಖ್ಯರಿಂದ ಮರೆಮಾಚಲ್ಪಟ್ಟಿತು. ಅದಕ್ಕಾಗಿ ಆನಂದತೀರ್ಥರಾದ ಇವರು ಅವುಗಳಿಗೆ ಭಾಷ್ಯ ರಚಿಸಿ ಅರ್ಥವನ್ನು ತಿಳಿಸಿದರು. ಶ್ರೀವೇದವ್ಯಾಸರ ಆಜ್ಞೆಯಿಂದ ಶ್ರೇಷ್ಠವಾದ ಭಾಷ್ಯವನ್ನು ಬ್ರಹ್ಮಸೂತ್ರಗಳಿಗೆ ರಚಿಸಿ ಉಪನಿಷತ್ತುಗಳಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಉತ್ತಮಭಾಷ್ಯಗಳನ್ನು ರಚಿಸಿದರು. ಅವೆಲ್ಲವೂ ಶ್ರೀಹರಿಯನ್ನು ಸರ್ವೋತ್ತಮನೆಂದು, ಸರ್ವವಿಲಕ್ಷಣನೆಂದು ಪ್ರತಿಪಾದಿಸುವವು ಎಂದು ಸಮರ್ಥಿಸಿದರು. ಶ್ರೀವಾಯುದೇವರ ಈ ಮೂರನೆಯ ರೂಪವಾದ ಶ್ರೀಮದಾನಂದತೀರ್ಥರು ಉತ್ತಮವಾದ ಮಹಾಭಾರತದ ಅರ್ಥ-ವನ್ನು ಪ್ರತಿಪಾದಿಸಲೆಂದು ಈ ಗ್ರಂಥವನ್ನು ರಚಿಸಿದರು. ಇದನ್ನು ಉತ್ತಮಜ್ಞಾನಿಗಳಾದ ಹರಿಪಾದ-ಗಳ ಭಕ್ತರು ಅಧ್ಯಯನ ಮಾಡಿ ಸಂತೋಷಿಸುವರು. 'ತೃತೀಯಮಸ್ಯ ವೃಷಭಸ್ಯ ದೋಹಸೇ', 'ದಶಪ್ರಮತಿಂ ಜನಯಂತ ಯೋಷಣಃ', 'ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸಃ', 'ಈಶಾನಾಸಃ ಶವಸಾ ಕ್ರಂತ ಸೂರಯಃ', 'ಯದೀಮನು ಪ್ರದಿವೋ ಮಧ್ವ ಆಧವೇ', 'ಗುಹಾಸಂತಂ ಮಾತರಿಶ್ವಾ ಮಥಾಯತಿ' – ಇವೇ ಮೊದಲಾದ ವಚನಗಳಿಂದ ಇದೆಲ್ಲವೂ ನಿರೂಪಿತವಾಗಿದೆ. ಪುರಾಣಗಳಲ್ಲೂ, ಪಂಚರಾತ್ರಗಳಲ್ಲೂ ಬಂದಿದೆ. ಇಲ್ಲಿ ಹೇಳಲ್ಪಟ್ಟಿರುವ ಸಕಲ ಕಥೆಗಳು ವೇದ, ಇತಿಹಾಸ ಮೊದಲಾದವುಗಳ ಅರ್ಥ ನಿರ್ಣಯವನ್ನು ಒಳಗೊಂಡಿವೆ. ಆದ್ದರಿಂದ ಇದು ಗ್ರಂಥರಾಜ ; ಸಕಲಶ್ರೇಷ್ಠವಾದ ಧರ್ಮ ಮೊದಲಾದ ಮೋಕ್ಷದವರೆಗಿನ ಸಕಲಪುರುಷಾರ್ಥಗಳಿಗೂ ಸಾಧನ. ಇದರ ಬೇರೆ ಮಹಿಮೆಗಳನ್ನು ಹೇಳುವುದೇನಿದೆ ! ಇದರಿಂದ ನಾರಾಯಣನು ಬಹಳವಾಗಿ ಪ್ರೀತನಾಗುವನು ಎಂದರಾಯಿತು.

ಯಾವ ವಾಯುದೇವರ ದಿವ್ಯವಾದ ಮೂರುರೂಪಗಳು ವೇದವಚನದಲ್ಲಿ ಉಕ್ತ-ವಾಗಿವೆಯೋ ಆ ವಾಯುದೇವರು ಬಲಸ್ವರೂಪರು, ಜ್ಞಾನಪೂರ್ಣರು, ಸಕಲಜೀವರನ್ನು ಭರಣ ಮಾಡುವಂತಹವರು, ಜಗತ್ಪೂಜ್ಯರಾದವರು. ಅವರ ಅವತಾರರೂಪಗಳು ಮೂಲರೂಪದಂತೆಯೇ ಇರುವವು. ಶ್ರೀರಾಮದೇವರ ಮಾತುಗಳನ್ನು ಒಯ್ದದ್ದು ಮೊದಲನೆಯದು (ಹನುಮದ್ರೂಪ); ಅಪಾರವಾದ ಶತ್ರುಸೇನೆಯನ್ನು ಸದೆ ಬಡೆದದ್ದು ಎರಡನೆಯದು (ಭೀಮರೂಪ); ಮಧ್ವ ಎಂಬ ಇದು ಮೂರನೆಯದು; ಇದರಿಂದ ವಿಷ್ಣುಪ್ರೀತ್ಯರ್ಥವಾಗಿ ಈ ಗ್ರಂಥ ರಚಿತವಾಯಿತು.

ಸಕಲಗುಣಗಳಿಂದ ಪರಿಪೂರ್ಣನೂ, ಸಕಲದೋಷಗಳಿಂದ ರಹಿತನೂ ಆದ ಮಹಾವಿಷ್ಣುವು ನನಗೆ ಪರಮಸಖ; ನನಗೆ ಸದಾ ಪ್ರಸನ್ನನಾಗಿರುವ ಅವನು ಇನ್ನೂ ಹೆಚ್ಚಾಗಿ ಪ್ರಸನ್ನನಾಗಲಿ.

**॥ ಶ್ರೀಕೃಷ್ಣಾರ್ಪಣಮಸ್ತು ॥**

**ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।**
**ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥**

★★★★★

# ಅಂಶಾವೇಶಾವತಾರಾದಿ ವಿವರ

## (ಅಕಾರಾದಿ)

| ಅವತಾರ | ಮೂಲರೂಪ | ಆವೇಶ |
|---|---|---|
| ಅಂಗದ (ವಾಲಿಪುತ್ರ) | ಚಂದ್ರ | ಇಂದ್ರ |
| ಅಂಜನವರ್ಮ (ನಿಷ್ಯ) | ನಿಷ್ಯ(ಅಂಜನವರ್ಮ) | |
| ಅಂಜನಾ (ಹನುಮನ್ಮಾತಾ) | ಪುಂಜಕಸ್ಥಳೀ(ಒಬ್ಬ ಅಪ್ಸರೆ) | |
| ಅಂಬಾ | ವರಾಂಗೀ (ದ್ಯು ವಸುವಿನ ಪತ್ನಿ) | ತುಂಬುರುವಿನ ಸನ್ನಿಧಾನ |
| ಅಕ್ರೂರ (ಕೃಷ್ಣಭಕ್ತ) | ಕಿಶೋರ ಎಂಬ ಬ್ರಹ್ಮ ಗಾಯಕ ಮತ್ತು ಸ್ವಾಯಂಭುವ ಮನು | ಬ್ರಹ್ಮ |
| ಅಜಗರ (ಭೀಮನನ್ನು ಹಿಡಿದವನು) | ನಹುಷ | |
| ಅಜಗರ (ನಂದನನ್ನು ಹಿಡಿದವನು) | ಸುದರ್ಶನ (ವಿದ್ಯಾಧರ) | |
| ಅನಿರುದ್ಧ (ಪ್ರದ್ಯುಮ್ನಪುತ್ರ) | ಅನಿರುದ್ಧ (ಕಾಮಪುತ್ರ) | ಅನಿರುದ್ಧ (ವಿಷ್ಣು) |
| ಅಭಿಮನ್ಯು (ಅರ್ಜುನಪುತ್ರ) | ಬುಧ(ಚಂದ್ರಾಂಶ) | ಹರಿ, ವಾಯು, ಇಂದ್ರ, ಯಮ,ಅಶ್ವಿನೀದೇವತೆಗಳು |
| ಅರಿಷ್ಟಾಸುರ (ಕಂಸಭೃತ್ಯ) | ವೃಷಭಾಸುರ | |
| ಅರ್ಜುನ | ಇಂದ್ರ | ಹರಿ, ವಾಯು ಮತ್ತು ನರ |
| ಅರ್ಜುನವೃಕ್ಷಗಳು | ನಳಕೂಬರ, ಮಣಿಗ್ರೀವ | ಧುನಿ, ಚಮು |
| ಅಶ್ವತ್ಥಾಮಾ (ದ್ರೋಣಪುತ್ರ) | ಶಿವ | |
| ಆರುಣೀ (ವಿದುರಪತ್ನೀ) | ಶ್ಯಾಮಲಾ | |
| ಇಂದ್ರಸೇನಾ (ನಳನಂದಿನೀ) | ಭಾರತೀ | ಪಾರ್ವತೀ, ಶಚೀ, ಶ್ಯಾಮಲಾ, ಉಷಾ |
| ಇರಾವಾನ್ (ಅರ್ಜುನಪುತ್ರ) | ಮಂಗಳ | ವರುಣ |
| ಉಗ್ರಸೇನ (ಕಂಸನ ತಂದೆ) | ಉಗ್ರಸೇನ (ಗಂಧರ್ವ) | |
| ಉತ್ತಮೌಜಸ್ (ದ್ರುಪದಪುತ್ರ) | ಪರಾವಸು | ಅರ್ಯಮಾ |
| ಉದ್ಧವ (ಕೃಷ್ಣಭಕ್ತ) | ಬೃಹಸ್ಪತಿ | ವಾಯು |

| | | |
|---|---|---|
| ಉಲ್ಮುಕ (ಬಲರಾಮಪುತ್ರ) | ಅರ್ಯಮಾ | |
| ಉಷಾ (ಬಾಣಾಸುರನ ಮಗಳು) | ಉಷಾ (ಅನಿರುದ್ಧಪತ್ನೀ) | |
| ಏಕಲವ್ಯ (ನಿಷಾದ) | ಮಣಿಮಾನ್ (ಕ್ರೋಧವಶರ ನಾಯಕ) | |
| ಕಂಸ (ಕೃಷ್ಣದ್ವೇಷೀ) | ಕಾಲನೇಮಿ | ಭೃಗು, ವಾಯು |
| ಕತ್ಥನ (ಒಬ್ಬ ಕಪಿ) | ಕುಬೇರ | |
| ಕಬಂಧ (ರಾಕ್ಷಸ) | ದನು (ಒಬ್ಬ ಗಂಧರ್ವ) | |
| ಕರ್ಣ | ಸೂರ್ಯ | ಶ್ರೀಹರಿ (ಸಹಸ್ರವರ್ಮ, ನರಕಾಸುರ) |
| ಕಾಕ (ವಾಯಸ) | ಜಯಂತ (ಇಂದ್ರಪುತ್ರ) | ಕುರಂಗ ಎಂಬ ಅಸುರ |
| ಕಾರ್ತವೀರ್ಯಾರ್ಜುನ | ಕಾರ್ತವೀರ್ಯ | |
| ಕಾಳಿಂದೀ (ಕೃಷ್ಣಪತ್ನೀ) | ಕಾಳಿಂದೀ | |
| ಕಾಳೀ (ಭೀಮಪತ್ನೀ) | ಭಾರತೀ | |
| ಕೀಚಕ (ವಿರಾಟನ ಸೇನಾಪತಿ) | ಬಾಣಾಸುರ | |
| ಕೀಟ (ಕರ್ಣನನ್ನು ಕಚ್ಚಿದವ) | ಹೇತಿ | ಇಂದ್ರ |
| ಕುಂತಿಭೋಜ | ಕೂರ್ಮ(ಒಬ್ಬ ಮರುತ್) | |
| ಕುಂತೀ (ಪಾಂಡವರ ತಾಯಿ) | ಪರಾವಹಪತ್ನೀ | |
| ಕುಂಭಕರ್ಣ (ರಾವಣನ ತಮ್ಮ) | ಹಿರಣ್ಯಾಕ್ಷ | ವಿಜಯ |
| ಕುಮುದ (ಒಬ್ಬ ಕಪಿ) | ಜಯಂತ (ಇಂದ್ರಪುತ್ರ) | |
| ಕುವಲಯಾಪೀಡ (ಕಂಸನ ಆನೆ) | ರಿಷ್ಟ ಎಂಬ ರಾಕ್ಷಸ | |
| ಕುಶ (ರಾಮಪುತ್ರ) | ಇಂದ್ರ | |
| ಕೃತವರ್ಮಾ (ಒಬ್ಬ ಯಾದವ) | ಶುಕ್ಲಪಕ್ಷಾಭಿಮಾನಿದೇವತಾ | ಪಾಂಚಜನ್ಯ,ಪ್ರವಹ |
| ಕೃಪಾಚಾರ್ಯ | ವಿಷ್ಕಂಭ (ಏಕಾದಶರುದ್ರರಲ್ಲಿ ಒಬ್ಬ) | |
| ಕೃಪೀ (ದ್ರೋಣಪತ್ನೀ) | ತಾರಾ (ಗುರುಪತ್ನೀ) | |
| ಕೃಷ್ಣಪತ್ನಿಯರು (ಹದಿನಾರುಸಾವಿರ) | ಅಗ್ನಿಪುತ್ರರು | ರಮಾ |
| ಕೇಕಯರು (ಪಂಚ) | ಪಂಚ ವಿಶ್ವೇದೇವತೆಗಳು | |
| ಕೇಶೀ (ಕಂಸ ಭೃತ್ಯ) | ಹಯಗ್ರೀವಾಸುರ | |
| ಕೇಸರೀ (ಹನುಮತ್ಪಿತಾ) | ಧ್ರುವ (ಒಬ್ಬ ಮರುತ್) | |
| ಕೈಕಯೀ | ದಶರಥನ ಪತ್ನಿ | ನಿಕೃತಿ |
| ಕೈಶಿಕ (ಭೀಷ್ಮಕಾನುಜ) | ಶುಂಧ್ಯು (ಅಗ್ನಿಪುತ್ರ) | |
| ಕೌರವಪಕ್ಷದವರು | ಪಾಪದ ಅಭಿಮಾನಿದೈತ್ಯರು | |

| | | |
|---|---|---|
| ಕ್ರಥ (ಭೀಷ್ಮಕಾನುಜ) | ಪವಮಾನ(ಅಗ್ನಿಪುತ್ರ) | |
| ಗಂಧಮಾದ (ಕಪಿ) | ಸಮಾನ (ಒಬ್ಬ ಪ್ರಾಣ) | |
| ಗಜ (ಕಪಿ) | ಪ್ರಾಣ | |
| ಗಜೇಂದ್ರ | ಹಾಹಾ ಗಂಧರ್ವ | |
| ಗದ (ಒಬ್ಬ ಕಪಿ) | ಚಂಡ (ಹರಿಪಾರ್ಷದ) | |
| ಗದ (ಕೃಷ್ಣಾನುಜ) | ಚಂಡದೇವತೆ | |
| ಗವಯ (ಕಪಿ) | ವ್ಯಾನ | |
| ಗವಾಕ್ಷ (ಕಪಿ) | ಅಪಾನ | |
| ಗಾಧೀ (ವಿಶ್ವಾಮಿತ್ರರ ತಂದೆ) | ಇಂದ್ರ | |
| ಗಾಂಧಾರೀ(ಧೃತರಾಷ್ಟ್ರನ ಪತ್ನಿ) | ಮತಿ | |
| ಗೋಪರು | ದೇವತೆಗಳು | |
| ಗೋಪಿಯರು | ಅಪ್ಸರೆಯರು | |
| ಘಟೋತ್ಕಚ (ಭೀಮಪುತ್ರ) | ನಿರ್ಋತಿ | ಶಿವ |
| ಚಂದ್ರ | ಚಂದ್ರ | ಬ್ರಹ್ಮ |
| ಚಂದ್ರಾ | ಭಾರತೀ | ಪಾರ್ವತೀ, ಶಚೀ, ಶ್ಯಾಮಲಾ, ಉಷಾ |
| ಚಂದ್ರಿಕಾ (ಭೀಮಪತ್ನೀ) | ಭಾರತೀ | |
| ಚಾಣೂರ (ಕಂಸನ ಮಲ್ಲ) | ವರಾಹ (ಒಬ್ಬ ರಾಕ್ಷಸ) | |
| ಚಾರುದೇಷ್ಣ(ಕೃಷ್ಣಪುತ್ರ) | ವಿನಾಯಕ | |
| ಚಿತ್ರಸೇನ (ಒಬ್ಬ ಕೌರವ) | ಖರ | |
| ಚಿತ್ರಾಂಗದಾ (ಅರ್ಜುನಪತ್ನೀ) | ಶಚೀ | |
| ಚೇಕಿತಾನ (ಒಬ್ಬ ಯಾದವ) | ಪ್ರತಿಭ (ಒಬ್ಬ ಮರುತ್) | |
| ಜಟಾಯು (ರಾಮಭಕ್ತ-ಹದ್ದು) | ಅರುಣಪುತ್ರ | |
| ಜನಮೇಜಯ(ಪರೀಕ್ಷಿತ್ಪುತ್ರ) | ಚಿತ್ರರಥ, ತ್ವಷ್ಟ್ರ | |
| ಜಯದ್ರಥ | ಕಾಲಕೇಯಗಣದ ದಾನವ | |
| ಜರಾ (ವ್ಯಾಧ) | ಭೃಗುಮುನಿ | |
| ಜರಾಸಂಧ | ವಿಪ್ರಚಿತ್ತಿ | |
| ಜರಾಸಂಧನ ಪುತ್ರಿ(ಸಹದೇವನ ಪತ್ನಿ) | ಉಷಾ | |
| ಜಾಂಬವತೀ (ಕೃಷ್ಣಪತ್ನೀ) | ಜಾಂಬವತೀ | ರಮಾ |
| ಜಾಂಬವಾನ್ | ಯಮ | ಬ್ರಹ್ಮ |
| ಡಿಬಿಕ (ಸಾಲ್ವಪುತ್ರ) | ಕೈಟಭ (ದೈತ್ಯ) | |

| | | |
|---|---|---|
| ತಾರ (ಒಬ್ಬ ಕಪಿ) | ಬೃಹಸ್ಪತಿ | |
| ತಾರಾ (ವಾಲಿಪತ್ನೀ) | ಶಚೀ | |
| ತೃಣಾವರ್ತ | ಪಾರ್ವತಿಯ ವರವಿದ್ದ ದೈತ್ಯ | |
| ತ್ರಿವಕ್ರೆ | ಪಿಂಗಲಾ (ಒಬ್ಬ ಅಪ್ಸರೆ) | ರಮಾ |
| ತ್ರಿಶಿಖ, ವಿಭು (ನಾಲ್ಕು ಮತ್ತು ಐದನೆಯ ಇಂದ್ರರು) | ಅಶ್ವಿನೀ ದೇವತೆಗಳು | |
| ದಂತವಕ್ರ | ಹಿರಣ್ಯಾಕ್ಷ | ವಿಜಯ |
| ದುಃಶಲಾ (ಕೌರವರ ತಂಗಿ) | ಮೃಷಾ (ಸುಳ್ಳಿನ ಅಭಿಮಾನಿನೀ – ರಾಕ್ಷಸಿ) | ಕುಹೂ |
| ದಮಘೋಷ (ಶಿಶುಪಾಲನ ತಂದೆ) | ದನು ಗಂಧರ್ವ | |
| ದಶರಥ | ಸ್ವಾಯಂಭುವ ಮನು | ವೈವಸ್ವತಮನು |
| ದುಃಶಾಸನ | ಇಂದ್ರಜಿತ್ | |
| ದುರ್ಮುಖ (ಒಬ್ಬ ಕಪಿ) | ನಿರ್ಋತಿ | |
| ದುರ್ಯೋಧನ | ಕಲಿ | ಬ್ರಹ್ಮವಾಯುಗಳ ಸನ್ನಿಧಾನ |
| ದುರ್ವಾಸರು | ಶಿವ | |
| ದೇವಕ (ದೇವಕಿಯ ತಂದೆ) | ಗಂಧರ್ವಮುನಿ | |
| ದೇವಕಿಯ ಮೊದಲ ಆರು ಪುತ್ರರು | ಮರೀಚಿಯ ಪುತ್ರರು | |
| ದೇವಕೀ (ಕೃಷ್ಣಮಾತಾ) | ಅದಿತಿ | |
| ದೇವಕೀ (ಯುಧಿಷ್ಠಿರಪತ್ನೀ) | ಶ್ಯಾಮಲಾ | |
| ದೌಃಶಾಸನಿ(ದುಃಶಾಸನನ ಪುತ್ರ) | ಸುರಾಂತಕ (ರಾವಣಪುತ್ರ) | |
| ದ್ರುಪದ (ದ್ರೌಪದಿಯ ತಂದೆ) | ಹುಹೂ ಗಂಧರ್ವ, ಆವಹ ಮರುತ್ | |
| ದ್ರೋಣಾಚಾರ್ಯರು | ಬೃಹಸ್ಪತಿ | ಬ್ರಹ್ಮ |
| ದ್ರೌಪದೀ (ಪಾಂಡವರ ಪತ್ನೀ) | ಭಾರತೀ (ಉಮಾಂಶ) | ಪಾರ್ವತೀ, ಶಚೀ, ಶ್ಯಾಮಲಾ, ಉಷಾ |
| ದ್ರೌಪದೀಪುತ್ರರು (ಉಪಪಾಂಡವರು) | ವಿಶ್ವೇದೇವತೆಗಳು | |
| ಧೃತರಾಷ್ಟ್ರ (ಕೌರವರ ತಂದೆ) | ಧೃತರಾಷ್ಟ್ರ (ಹಂಸ) ಗಂಧರ್ವರಾಜ | ವಾಯು |
| ಧೃಷ್ಟಕೇತು (ಶಿಶುಪಾಲನ ಮಗ) | ಅನುಹ್ಲಾದ | ಸವಿತಾ |
| ಧೃಷ್ಟದ್ಯುಮ್ನ (ದ್ರುಪದನ ಮಗ) | ಅಗ್ನಿ | |

| | | |
|---|---|---|
| ನಂದಗೋಪ | ದ್ರೋಣ(ವಸು) | |
| ನಕುಲ (ಮುಂಗುಸಿ) | ಕ್ರೋಧ ಎಂಬ ರಾಕ್ಷಸ | |
| ನಕುಲ | ಅಶ್ವಿನೀದೇವತೆ | ಶೃಂಗಾರರೂಪದ ವಾಯು |
| ನಕ್ರ (ಅರ್ಜುನನ್ನು ಹಿಡಿದ ಐದು ಹೆಣ್ಣು ಮೊಸಳೆಗಳು) | ವರ್ಗಾ ಮೊದಲಾದ ಐವರು ಅಪ್ಸರೆಯರು | |
| ನಕ್ರ (ಗಜೇಂದ್ರನನ್ನು ಹಿಡಿದ ಮೊಸಳೆ) | ಹಾಹಾ ಗಂಧರ್ವ | |
| ನರ (ಯಮಪುತ್ರ) | ಶೇಷ | ವಿಷ್ಣು |
| ನಳ (ಒಬ್ಬ ಕಪಿ) | ವಿಶ್ವಕರ್ಮಾ (ದೇವಶಿಲ್ಪಿ) | |
| ನೀಲ (ಒಬ್ಬ ಕಪಿ) | ಅಗ್ನಿ | |
| ನೀಲಾ (ಕುಂಭಕಪುತ್ರೀ) | ನೀಲಾ | ರಮಾ |
| ನೀಲಾ (ನಗ್ನಜಿತ್ಪುತ್ರೀ) | ನೀಲಾ | ರಮಾ |
| ಪನಸ (ಒಬ್ಬ ಕಪಿ) | ಒಬ್ಬ ವಸು | |
| ಪರೀಕ್ಷಿತ್ (ಅಭಿಮನ್ಯುಪುತ್ರ) | ಪರೀಕ್ಷಿತ್ | |
| ಪಾಂಡುರಾಜ | ಪರಾವಹ ಮರುತ್ | ವಾಯು |
| ಪಾಂಡವಪಕ್ಷದವರು | ಪುಣ್ಯದ ಅಭಿಮಾನಿದೇವತೆಗಳು | |
| ಪಾರ್ವತೀ(ನಕುಲಪತ್ನೀ) | ತಿಲೋತ್ತಮಾ (ಅಪ್ಸರೆ) | |
| ಪುರೋಚನ (ದುರ್ಯೋಧನನ ಮಂತ್ರಿ) | ಪ್ರಹಸ್ತ (ರಾವಣನ ಮಂತ್ರಿ) | |
| ಪೂತನಾ (ಕಂಸನ ದಾದಿ) | ತಾಟಕಾ | ಊರ್ವಶೀ |
| ಪೌಂಡ್ರಕವಾಸುದೇವನ ತಾಯಿ | ದಿತಿ (ಕಶ್ಯಪಪತ್ನೀ) | |
| ಪೌಂಡ್ರಕವಾಸುದೇವ | ವೇನ | |
| ಪ್ರತಿವಿಂಧ್ಯ (ಯುಧಿಷ್ಠಿರಪುತ್ರ) | ಪುರೂರವ (ವಸು) | ಅಭಿತಾಮ್ರಗಂಧರ್ವ |
| ಪ್ರದ್ಯುಮ್ನ | ಕಾಮ | ಪ್ರದ್ಯುಮ್ನ(ವಿಷ್ಣು) |
| ಬಭ್ರುವಾಹನ | ಜಯಂತ | ಕಾಮ |
| ಬಲರಾಮ | ಶೇಷ | ಶುಕ್ಲಕೇಶ |
| ಬಾಣ | ಬಾಣ (ಸುರ) | ಬಾಣ(ಅಸುರ) |
| ಬಾಹ್ಲೀಕರಾಜ | ಪ್ರಹ್ಲಾದ | ವಾಯು |
| ಭಗದತ್ತ (ನರಕಾಸುರನ ಪುತ್ರ) | ಕುಬೇರ | ಶಿವ |
| ಭದ್ರಾ (ಕೃಷ್ಣಪತ್ನೀ) | ಭದ್ರಾ | ರಮಾ |

| | | |
|---|---|---|
| ಭರತ (ರಾಮನ ತಮ್ಮ) | ಕಾಮ | ಪ್ರದ್ಯುಮ್ನ |
| ಭಾನು (ಸತ್ಯಭಾಮಾಪುತ್ರ) | ಸವಿತೃನಾಮಕ ಸೂರ್ಯ | |
| ಭಾನುಮತಿ (ದುರ್ಯೋಧನನ ಪತ್ನಿ) | ಅಲಕ್ಷ್ಮೀ | |
| ಭೀಮಸೇನ | ವಾಯುದೇವರು | |
| ಭೀಮಸೇನನ ೨೦ ಪತ್ನಿಯರು | ದಿಕ್ ಹಾಗೂ ಜಲದ ಅಭಿಮಾನಿದೇವತೆಗಳು | |
| ಭೀಷ್ಮ (ಕುರುಪಿತಾಮಹ) | ದ್ಯುನಾಮಕ ವಸು | ಭೀಷ್ಮ |
| ಭೀಷ್ಮಕ(ರುಕ್ಮಿಣಿಯ ತಂದೆ) | ಮಿತ್ರ, ರಾಹು | |
| ಭೂರಿ (ಸೋಮದತ್ತನ ಮಗ) | ಅಜೈಕಪಾತ್‌ನಾಮಕ ರುದ್ರ | |
| ಭೂರಿಶ್ರವಸ್ | ಅಹಿರ್ಬುಧ್ನ ಎಂಬ ರುದ್ರ | ಶಿವಾದಿ ಏಕಾದಶರುದ್ರರು |
| ಮಂಡೂಕ (ಮಾಂಡೂಕೋಪನಿಷತ್ತಿನ ಋಷಿ) | ವರುಣ | |
| ಮಂಥರಾ (ಕೈಕೇಯಿಯ ದಾಸಿ) | ಅಲಕ್ಷ್ಮೀ | |
| ಮಂದ್ರದ್ಯುಮ್ನ (ಆರನೆಯ ಇಂದ್ರ) | ಪುರಂದರ | |
| ಮಧ್ವಾಚಾರ್ಯರು | ವಾಯುದೇವರು | |
| ಮಹಾಭಿಷಕ್ | ವರುಣ | |
| ಮಾದ್ರೀ | ಧೃತಿ (ಪರಾವಹಪತ್ನೀ) | |
| ಮಿತ್ರವಿಂದಾ (ಕೃಷ್ಣಪತ್ನೀ) | ಮಿತ್ರವಿಂದಾ | ರಮಾ |
| ಮುಷ್ಟಿಕ (ಕಂಸನ ಮಲ್ಲ) | ಕಿಶೋರ ಎಂಬ ರಾಕ್ಷಸ | |
| ಮೈಂದ (ಕಪಿ) | ಅಶ್ವಿನೀದೇವತೆ | |
| ಯಶೋದಾ (ನಂದಪತ್ನೀ) | ಧರಾ (ದ್ರೋಣನಾಮಕ ವಸುವಿನ ಪತ್ನೀ) | |
| ಯಾದವರು | ಸುರರು | |
| ಯುಧಾಮನ್ಯು (ದ್ರುಪದಪುತ್ರ) | ವಿಶ್ವಾವಸು | ಬ್ರಹ್ಮ |
| ಯುಧಿಷ್ಠಿರ | ಯಮ | ಸೌಮ್ಯನಾಮಕ ವಾಯು |
| ಯುಯುತ್ಸು (ಧೃತರಾಷ್ಟ್ರಪುತ್ರ) | ನಿರ್ಋತ(ನಿರ್ಋತಿಯ ತಮ್ಮ) | ನಾಸಿಕ್ಯವಾಯು |
| ರಾವಣ | ಹಿರಣ್ಯಕಶಿಪು | ಜಯ |
| ರುಗ್ಮವತೀ (ಪ್ರದ್ಯುಮ್ನಪತ್ನೀ) | ರತಿ | |
| ರುಗ್ಮಿಣೀ | ಮಹಾಲಕ್ಷ್ಮೀ(ಶ್ರೀರೂಪ) | |
| ರುಗ್ಮೀ (ರುಗ್ಮಿಣಿಯ ಅಣ್ಣ) | ಇಲ್ವಲ ಎಂಬ ರಾಕ್ಷಸ | ಶುಚಿ (ಅಗ್ನಿಪುತ್ರ) |
| ರೇವತೀ (ಬಲರಾಮನ ಪತ್ನೀ) | ವಾರುಣೀ | |
| ರೋಚನ (ಒಬ್ಬ ಇಂದ್ರ) | ವಾಯು | |

| | | |
|---|---|---|
| ರೋಹಿಣೀ(ಬಲರಾಮನ ತಾಯಿ) | ಸುರಭಿ (ಕಶ್ಯಪಪತ್ನೀ) | |
| ಲಕ್ಷ್ಮಣ | ಶೇಷ | ಸಂಕರ್ಷಣ |
| ಲಕ್ಷಣಾ (ಕೃಷ್ಣಪತ್ನೀ) | ಲಕ್ಷಣಾ | ರಮಾ |
| ಲಕ್ಷಣ(ದುರ್ಯೋಧನಪುತ್ರ) | ಅಕ್ಷ (ರಾವಣಪುತ್ರ) | |
| ಲಕ್ಷಣಾ (ದುರ್ಯೋಧನಪುತ್ರೀ) | ರತಿ | |
| ಲವ (ರಾಮಪುತ್ರ) | ಅಗ್ನಿ | |
| ವಸುದೇವ | ಕಶ್ಯಪ | ಸ್ವಾಯಂಭುವ ಮನು |
| ವಾಲೀ | ಇಂದ್ರ | ಶ್ರೀಹರಿ |
| ವಿಕರ್ಣ (ದುರ್ಯೋಧನನ ತಮ್ಮ) | ಅತಿಕಾಯ | |
| ವಿಕುಕ್ಷಿ (ಒಬ್ಬ ರಾಜ) | ಇಂದ್ರ | |
| ವಿದುರ | ಯಮ | |
| ವಿಪ್ರಪುತ್ರರು | ನಂದ ಸುನಂದಾದಿ ಹರಿಪಾರ್ಷದರು | |
| ವಿಪೃಥು (ಯಾದವಸೇನಾನಿ) | ಸೌಮ್ಯ (ಮರುತ್) | |
| ವಿಭೀಷಣ (ರಾಮಭಕ್ತ) | ಕಣ್ವಮುನಿ | |
| ವಿರಾಟ | ಹಾಹಾ ನಾಮಕ ಗಂಧರ್ವ, ವಿವಹ ಮರುತ್ | |
| ವಿರಾಧ | ತುಂಬುರು ಗಂಧರ್ವ | |
| ವಿವಿದ (ಕಪಿ) | ಅಶ್ವಿನೀದೇವತೆ | |
| ವಿಶೋಕ (ತ್ರಿವಕ್ರೆಯ ಪುತ್ರ) (ಕೃಷ್ಣಭಕ್ತ-ಭೀಮಸೇನನ ಸಾರಥಿ) | ನಾರದರ ಶಿಷ್ಯ | |
| ವೀರಸೇನ(ಚಿತ್ರಾಂಗದೆಯ ತಂದೆ) | ತ್ವಷ್ಟೃ, ವರುಣ | |
| ವೃತ್ರಾಸುರ | ಚಿತ್ರಕೇತು | ವೃತ್ರಾಸುರ |
| ವೃಷ (ಒಬ್ಬ ಕಪಿ) | ಉದಾನ (ಒಬ್ಬ ಪ್ರಾಣ) | |
| ಶಂತನು (ಭೀಷ್ಮನ ತಂದೆ) | ವರುಣ | |
| ಶಂಬೂಕ (ಶೂದ್ರತಪಸ್ವೀ) | ಜಂಘ(ಅಸುರ) | |
| ಶಕಟಾಸುರ | ಒಬ್ಬ ಅಸುರ | |
| ಶಕುನಿ | ದ್ವಾಪರ | |
| ಶಕ್ರದೇವ (ಶೃಗಾಲವಾಸುದೇವನ ಮಗ) | ಮಣಿಭದ್ರ | |
| ಶಠ (ಬಲರಾಮ ಪುತ್ರ) | ಅರ್ಯಮಾ | |
| ಶತಧನ್ವಾ (ಒಬ್ಬ ಯಾದವ) | ಶತಧನ್ವಾ (ಸುರ) | ಶತಧನ್ವಾ (ಅಸುರ) |
| ಶತಬಲಿ (ಒಬ್ಬ ಕಪಿ) | ಒಬ್ಬ ವಸು | |

| | | |
|---|---|---|
| ಶತಾನೀಕ (ನಕುಲಪುತ್ರ) | ಲೋಚನ (ವಸು) | ಕಿಶೋರ ಗಂಧರ್ವ |
| ಶತ್ರುಘ್ನ | ಅನಿರುದ್ಧ (ಕಾಮಪುತ್ರ) | ಅನಿರುದ್ಧ (ಶ್ರೀಹರಿ) |
| ಶಬರೀ | ಒಬ್ಬ ಅಪ್ಸರೆ | |
| ಶರಭ (ಒಬ್ಬ ಕಪಿ) | ಪರ್ಜನ್ಯ | |
| ಶರ್ವತ್ರಾತ (ಭೀಮಪುತ್ರ) | ಸಮಾನ (ಒಬ್ಬ ಪ್ರಾಣ) | ವಾಯು |
| ಶಲ (ಭೂರಿಶ್ರವಸ್ಸಿನ ಸೋದರ) | ವಿರೂಪಾಕ್ಷ (ರುದ್ರ) | |
| ಶಲ್ಯ | ಸಹ್ಲಾದ | ವಾಯು |
| ಶಲ್ಯಪುತ್ರಿ (ನಕುಲನ ಪತ್ನಿ) | ತಿಲೋತ್ತಮೆ | |
| ಶಿಖಂಡೀ | ಅಂಬಾ (ವರಾಂಗೀ) | |
| ಶಿವಕನ್ಯಾ (ವಿಪ್ರಕನ್ಯಾ) | ಭಾರತೀ | ಪಾರ್ವತೀ, ಶಚೀ, ಶ್ಯಾಮಲಾ, ಉಷಾ |
| ಶಿಶುಪಾಲ | ಹಿರಣ್ಯಕಶಿಪು | ಜಯ |
| ಶುಕಾಚಾರ್ಯರು | ಶಿವ | ವಾಯು |
| ಶುಕೀ | ಘೃತಾಚೀ | |
| ಶೃಗಾಲವಾಸುದೇವ | ಧುಂಧು (ಅಸುರ) | |
| ಶೃಗಾಲವಾಸುದೇವನ ತಾಯಿ | ದನು(ಕಶ್ಯಪಪತ್ನೀ) | |
| ಶೈಬ್ಯ (ಒಬ್ಬ ರಾಜ) | ಋಭು | |
| ಶ್ರುತಕರ್ಮಾ (ಸಹದೇವಪುತ್ರ) | ಕ್ರತು (ವಸು) | ಬಲಗಂಧರ್ವ |
| ಶ್ರುತಕೀರ್ತಿ (ಅರ್ಜುನಪುತ್ರ) | ಧ್ರೂ (ವಸು) | ಗೋಪ ಗಂಧರ್ವ |
| ಶ್ರುತಸೋಮ (ಭೀಮಪುತ್ರ) | ಆರ್ದ್ರವ (ವಸು) | ಚಿತ್ರರಥ ಗಂಧರ್ವ |
| ಶ್ರುತಾಯುಧ | ವರುಣಪುತ್ರ | |
| ಶ್ವೇತ (ಒಬ್ಬ ಕಪಿ) | ಒಬ್ಬ ಮರುತ್ | |
| ಷಣ್ಮುಖ | ಕಾಮ | |
| ಸಂಜಯ (ಧೃತರಾಷ್ಟ್ರನ ಸೂತಪುತ್ರ) | ತುಂಬುರು ಗಂಧರ್ವ | ಉದ್ವಹ (ಮರುತ್) |
| ಸಂಪಾತಿ (ಕಪಿ) | ಒಬ್ಬ ಮರುತ್ | |
| ಸಂಪಾತಿ (ಹದ್ದು) | ಅರುಣಪುತ್ರ | |
| ಸತ್ಯಜಿತ್ (ಎರಡನೆಯ ಇಂದ್ರ) | ಯಮ | |
| ಸತ್ಯಜಿತ್ (ದ್ರುಪದಪುತ್ರ) | ಚಿತ್ರಸೇನ (ಮಿತ್ರನಾಮಕ ಸೂರ್ಯ) | |
| ಸತ್ಯಭಾಮಾ | ಮಹಾಲಕ್ಷ್ಮೀ (ಭೂ ರೂಪ) | |
| ಸತ್ಯವತೀ (ವ್ಯಾಸಮಾತಾ) | ಅಚ್ಛೋದಾ (ಪಿತೃಪುತ್ರಿಕಾ) | |
| ಸನತ್ಕುಮಾರ (ಬ್ರಹ್ಮಪುತ್ರ) | ಕಾಮ | |

| | | |
|---|---|---|
| ಸಪ್ತತಾಲಗಳು | ಬ್ರಹ್ಮವರವಿದ್ದ ದೈತ್ಯರು | |
| ಸಪ್ತಗೂಳಿಗಳು | ಶಿವನ ವರವಿದ್ದ ದೈತ್ಯರು | |
| ಸರ್ಪೋತ್ತುಂಗ (ಭೀಮಪುತ್ರ) | ಅಹಂಕಾರಿಕಪ್ರಾಣ | |
| ಸಹದೇವ | ಅಶ್ವಿನೀದೇವತೆ | ಸುನೀತಿರೂಪದ ವಾಯು |
| ಸಾಂಬ | ಕಾಮ | ಬ್ರಹ್ಮ |
| ಸಾತ್ಯಕಿ (ಕೃಷ್ಣಭಕ್ತ-ಯಾದವ) | ಕೃಷ್ಣಪಕ್ಷಾಭಿಮಾನಿದೇವತೆ ಸಂವಹ, ಸುದರ್ಶನಚಕ್ರ, ಗರುಡ | |
| ಸಾಲ್ವ | ಬಲಿನಾಮಕ ಅಸುರ | |
| ಸೀತಾಕೃತಿ | ಇಂದ್ರ ವೇದವತೀ (ಮಹಾಲಕ್ಷ್ಮೀ) | |
| ಸೀತಾ | ಮಹಾಲಕ್ಷ್ಮೀ | |
| ಸುಗ್ರೀವ | ಸೂರ್ಯ | ಬ್ರಹ್ಮ |
| ಸುದಾಮ (ಪುಷ್ಪಕಾರ) | ಸುದಾಮ (ವಿಷ್ಣುಪಾರ್ಷದ) | |
| ಸುನೀಥ (ಕಂಸಾನುಜ) | ವೃಕಾಸುರ | |
| ಸುಭದ್ರಾ(ಕೃಷ್ಣನ ಸೋದರಿ) | ತ್ರಿಜಟಾ | ಪಾರ್ವತೀ |
| ಸುಷೇಣ (ಒಬ್ಬ ಕಪಿ - ವೈದ್ಯ) | ವರುಣ | |
| ಸುಹೋತ್ರ (ಯುಧಿಷ್ಠಿರಪುತ್ರ) | ಚಿತ್ರಗುಪ್ತ | |
| ಸೈಂಧವ (ಜಯದ್ರಥ) | ಕಾಲಕೇಯಗಣದ ರಾಕ್ಷಸ | |
| ಸೋಮದತ್ತ (ಬಾಹ್ಲೀಕಪುತ್ರ) | ಪತ್ರತಾಪ (ರುದ್ರ) | |
| ಹಂಸ(ಸಾಲ್ವಪುತ್ರ) | ಮಧು (ದೈತ್ಯ) | |
| ಹನೂಮಾನ್ | ವಾಯುದೇವರು | |
| ಹರಿವ್ರತ (ವಿಷ್ಣುಯಶಸ್, ಕಲ್ಕಿಯ ತಂದೆ) | ಸ್ವಾಯಂಭುವ ಮನು | |
| ಹಿಡಿಂಬಾ (ಭೀಮಪತ್ನೀ) | ಶ್ರೀ (ಅಮರಾವತಿಯ ಸಂಪದಭಿಮಾನಿನೀ ಅಪ್ಸರೆ) | ಭಾರತೀ |
| ಹಿರಣ್ಯಕಶಿಪು | ಹಿರಣ್ಯಕಶಿಪು | ಜಯ (ವಿಷ್ಣುಪಾರ್ಷದ) |
| ಹಿರಣ್ಯಾಕ್ಷ | ಹಿರಣ್ಯಾಕ್ಷ | ವಿಜಯ (ವಿಷ್ಣುಪಾರ್ಷದ) |

★★★★★

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)

## ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ ಸಂಪಾದಿತ/ಅನುವಾದಿತ/ರಚಿತ ಕೆಲವು ಕೃತಿಗಳು

## ಕೆಲವು ಸಂಸ್ಕೃತ ಕೃತಿಗಳು

| | | |
|---|---|---|
| ೧. | ಶ್ರೀಮದಾನಂದತೀರ್ಥ ಭಗವತ್ಪಾದಪ್ರಣೀತ ಸರ್ವಮೂಲಗ್ರಂಥಗಳು (ಸಂಸ್ಕೃತ, ಕನ್ನಡ ಹಾಗೂ ತೆಲುಗು ಲಿಪಿಗಳಲ್ಲಿ) | (ಕನ್ನಡ ಲಿಪಿ ರೂ. ೨೦೦೦.೦೦) |
| ೨. | ಮಹಾಭಾರತತಾತ್ಪರ್ಯನಿರ್ಣಯಃ (ಭಾವಪ್ರಕಾಶಿಕಾಸಮೇತಃ) | ೮೦೦.೦೦ |
| ೩. | ದ್ವಾದಶಸ್ತೋತ್ರಮ್ (ಎರಡು ವ್ಯಾಖ್ಯಾನಗಳ ಸಮೇತ) | ೧೦೦.೦೦ |
| ೪. | ಶ್ರೀಮದ್ಭಗವದ್ಗೀತಾ (ಶ್ರೀಮದಾನಂದತೀರ್ಥಕೃತ ಗೀತಾಭಾಷ್ಯ, ಶ್ರೀಪದ್ಮನಾಭತೀರ್ಥರ ಗೀತಾಭಾಷ್ಯಟೀಕಾ ಹಾಗೂ ಶ್ರೀವಾದಿರಾಜರ ಭಗವದ್ಗೀತಾ ಲಕ್ಷಾಲಂಕಾರ ಸಮೇತ) | ೫೫೦.೦೦ |
| ೫. | ಶ್ರೀನರಹರಿತೀರ್ಥಕೃತ ಗೀತಾಭಾಷ್ಯಟೀಕಾ | ೩೦೦.೦೦ |
| ೬. | ಶ್ರೀಮದ್ಭಗವದ್ಗೀತಾ (ಶ್ರೀವಿದ್ಯಾಧಿರಾಜತೀರ್ಥರು ಹಾಗೂ ಶ್ರೀರಾಘವೇಂದ್ರಸ್ವಾಮಿಗಳ ವ್ಯಾಖ್ಯಾನಸಮೇತ) | ೩೦೦.೦೦ |
| ೭. | ಶ್ರೀಸುಮತೀಂದ್ರತೀರ್ಥಕೃತಃ ಮಂತ್ರರತ್ನಕೋಶಃ (ಶ್ರೀಸುಮತೀಂದ್ರತೀರ್ಥರ ಇತರ ಕೆಲವು ಕೃತಿಗಳ ಸಮೇತ) | ೨೫.೦೦ |
| ೮. | ಶ್ರೀಸತ್ಯಾಭಿನವತೀರ್ಥಕೃತ ರಾಮಾಮೃತಮಹಾರ್ಣವಃ | ೨೦೦.೦೦ |
| ೯. | ಸುಮಧ್ವವಿಜಯಃ (ಮೂಲಮಾತ್ರ) | ೫೦.೦೦ |
| ೧೦. | ಸ್ತೋತ್ರಮಾಲಿಕಾ (ವೈಷ್ಣವಸ್ತೋತ್ರಸಂಗ್ರಹ) | ೫೦.೦೦ |

## ಕೆಲವು ಕನ್ನಡ ಕೃತಿಗಳು

ಸ್ತೋತ್ರಮಾಲಿಕಾ(೮ ಸಂಪುಟಗಳಲ್ಲಿ), ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ, ಸಂಗ್ರಹರಾಮಾಯಣ, ಶ್ರೀಹರಿಕಥಾಮೃತಸಾರ, ಏಕಾದಶೀವ್ರತ, ಸುಂದರಕಾಂಡನಿರ್ಣಯ, ಸುಮಧ್ವವಿಜಯ, ಕೃಷ್ಣಾಮೃತಮಹಾರ್ಣವ, ಶ್ರೀಮಧ್ವಾಚಾರ್ಯರ ಕಾಲನಿರ್ಣಯ, ವೇಂಕಟೇಶಪಾರಿಜಾತ, ಶ್ರೀಹರಿದಾಸರ ಉಗಾಭೋಗಗಳು, ಶ್ರೀಮದ್ಭಗವದ್ಗೀತಾ, ಗೀತಾಮಧು, ಗೀತಾಮಾಹಾತ್ಮ್ಯ, ಮಹಾಭಾರತದ ಬೆಳಕು, ಭಾಗವತದ ಬೆಳಕು, ಶ್ರೀವೇದವ್ಯಾಸದರ್ಶನ, ಶ್ರೀಪೂರ್ಣಪ್ರಜ್ಞದರ್ಶನ, ಶ್ರೀಜಯತೀರ್ಥದರ್ಶನ, ಶ್ರೀಬ್ರಹ್ಮಣ್ಯತೀರ್ಥರು, ಶ್ರೀವ್ಯಾಸರಾಜದರ್ಶನ, ಶ್ರೀರಘೂತ್ತಮತೀರ್ಥರು, ಶ್ರೀವಿಜಯೀಂದ್ರದರ್ಶನ, ಶ್ರೀರಾಘವೇಂದ್ರದರ್ಶನ, ಶ್ರೀವಾದಿರಾಜತೀರ್ಥಕೃತ ತೀರ್ಥಪ್ರಬಂಧ, ಶ್ರೀಜಯತೀರ್ಥರ ಪದ್ಯಮಾಲಾ, ಬಳಿತ್ಥಾಸೂಕ್ತಮ್, ಹರಿಭಜನಕಲ್ಪದ್ರುಮ, ರಾಮಾಮೃತಮಹಾರ್ಣವ, ತಪ್ತಮುದ್ರಾಧಾರಣೆ, ಸದಾಚಾರವಿನೋದ, ಶ್ರೀಹೃಷೀಕೇಶತೀರ್ಥಕೃತ ಸಂಪ್ರದಾಯಪದ್ಧತಿ, ಉಡುಪಿ ಅಷ್ಟಮಠಗಳ ಗುರುಪರಂಪರೆ, ಅಂಭೃಣೀಸೂಕ್ತ, ಬ್ರಹ್ಮಸೂತ್ರನಾಮಾವಳಿ, ಶ್ರೀವೇದವ್ಯಾಸಪೂಜಾವಿಧಿ, ಮಧ್ವಸಿದ್ಧಾಂತ, ಇತ್ಯಾದಿ.



# ಮಧ್ವ ಭಾರತ

ಶ್ರೀ ವ್ಯಾಸಮಧ್ವಸಂಶೋಧನ ಪ್ರತಿಷ್ಠಾನ ಬೆಂಗಳೂರು